

ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಬ್ರಹ್ಮವೈವರ್ತ ಮಹಾಪುರಾಣ

## ದ್ವಿತೀಯ ಭಾಗ

(ಒಟ್ಟು ಎರಡು ಭಾಗಗಳು)


ಅನುವಾದ-ಲೇಖಕರು

ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತ



-: ಪ್ರಕಾಶಕರು :-

**ಖೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 26320014  ಫ್ಯಾಕ್ಸ್ : 0091-80-26321416

BRAMHAVYVARTHA MAHAPURANA Part - 2 of
Bhagavan Sri Vedavyasa Maharshi, edited and translated into Kannada by Rajyaprashasti, Rastraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathacharya Galagali, Vishveswara Nagar, Shanti Colony, Hubli-580032 Ph : (0836) 2250250

First Edition : 2005

No. of Pages : xii + 479

No. of Copies : 1,000



Price : Rs. 180 = 00

Printed at : SRI VENKATESHWARA PRINTERS
No. 3, Yellappa Road, Susheela Road Cross
Chick Mavalli, Lalbagh Crumbigal Road Cross
BANGALORE-560 004
Phone : 26573001

# ಬ್ರಹ್ಮವೈವರ್ತ ಮಹಾಪುರಾಣ-ದ್ವಿತೀಯ ಭಾಗ ಪ್ರಸ್ತಾವನೆ

ಬ್ರಹ್ಮವೈವರ್ತಪುರಾಣವು ಮುಖ್ಯವಾಗಿ ವಿಷ್ಣುಪಾರಮ್ಯ ಪ್ರತಿಪಾದಕವಾದ ಮಹಾಪುರಾಣ. ಇದರಲ್ಲಿ ಭಗವಾನ್ ಶ್ರೀವೇದವ್ಯಾಸರು ಪರಬ್ರಹ್ಮನಾದ ಶ್ರೀಹರಿಯ ಮಹಿಮೆಯನ್ನು ವಿಶದವಾಗಿ ವಿವರಿಸಿದ್ದರಿಂದ 'ಬ್ರಹ್ಮವೈವರ್ತಮಹಾಪುರಾಣ' ಎಂದು ಇದಕ್ಕೆ ಹೆಸರು ಬಂದಿದೆ.

**ವಿವೃತಂ ಬ್ರಹ್ಮ ಕಾರ್ತ್ಸ್ನ್ಯೇಂ ಚ ಕೃಷ್ಣೇನ ಯತ್ರ ಶೌನಕಂ ।**
**ಬ್ರಹ್ಮ ವೈವರ್ತಕಂ ತೇನ ಪ್ರವದಂತಿ ಪುರಾವಿದಃ ॥ ೧/೨/೫೮**

ಈ ಮಹಾಪುರಾಣದಲ್ಲಿ ಹದಿನೆಂಟು ಸಾವಿರ ಶ್ಲೋಕಗಳು ಇರುತ್ತವೆ. ನಾಲ್ಕು ಖಂಡಗಳಲ್ಲಿ ಇದು ವಿಭಕ್ತವಾಗಿರುತ್ತದೆ. ಬ್ರಹ್ಮಖಂಡ, ಪ್ರಕೃತಿಖಂಡ, ಗಣೇಶಖಂಡ, ಕೃಷ್ಣಜನ್ಮಖಂಡ. ಮೊದಲಿನ ಬ್ರಹ್ಮಖಂಡದಲ್ಲಿ (೩೦) ಮೂವತ್ತು ಅಧ್ಯಾಯಗಳಿವೆ. ಎರಡನೆಯ ಪ್ರಕೃತಿಖಂಡದಲ್ಲಿ (೬೭) ಅರವತ್ತೇಳು ಅಧ್ಯಾಯಗಳು ಇರುತ್ತವೆ. ಮೂರನೆಯದಾದ ಗಣಪತಿಖಂಡದಲ್ಲಿ (೪೬) ನಲವತ್ತಾರು ಅಧ್ಯಾಯಗಳು. ಕೊನೆಯದಾದ ಕೃಷ್ಣಜನ್ಮಖಂಡದಲ್ಲಿ (೧೩೩) ಒಂದುನೂರ ಮೂವತ್ತಮೂರು ಅಧ್ಯಾಯಗಳಿವೆ. ಒಟ್ಟು ಈ ಬ್ರಹ್ಮವೈವರ್ತದಲಿ (೨೭೬) ಎರಡುನೂರ ಎಪ್ಪತ್ತಾರು ಅಧ್ಯಾಯಗಳು ಇರುತ್ತವೆ.

**ಅಷ್ಟಾದಶಸಹಸ್ರಂ ತತ್ ಪುರಾಣಂ ಪರಿಕೀರ್ತಿತಮ್ ।**
**ಬ್ರಹ್ಮ-ಪ್ರಕೃತಿ-ವಿಘ್ನೇಶ-ಕೃಷ್ಣಖಂಡೈಃ ಸಮಾಚಿತಮ್ ॥**

ನಾಲ್ಕು ಖಂಡಗಳಲ್ಲಿ ಹದಿನೆಂಟು ಸಾವಿರ ಪದ್ಯಗಳುಳ್ಳದ್ದು ಬ್ರಹ್ಮವೈವರ್ತ ಪುರಾಣ ಎಂದು ನಾರದ ಪುರಾಣದಲ್ಲಿ ಹೇಳಲಾಗಿದೆ. ಆದರೆ ನಾರದಪುರಾಣ, ಮತ್ಸ್ಯಪುರಾಣ, ಶಿವಪುರಾಣಾದಿಗಳಲ್ಲಿ ಹೇಳಿದ ಬ್ರಹ್ಮವೈವರ್ತಪುರಾಣದ ಕೆಲವು ವಿಷಯಗಳು ಈಗ ಉಪಲಬ್ಧವಿದ್ದ ಬ್ರಹ್ಮವೈವರ್ತದಲ್ಲಿ ಗೋಚರಿಸುವುದಿಲ್ಲ. ನಾರದಾದಿ ಪುರಾಣಗಳಲ್ಲಿ ಹೇಳಿದ ರಥಂತರ ಕಲ್ಪವೃತ್ತಾಂತ, ಸಾವರ್ಣಿ ನಾರದ ಸಂವಾದ, ಬ್ರಹ್ಮವರಾಹವೃತ್ತಾಂತ, ಬ್ರಹ್ಮನ ವಿವರ್ತ ವಿಚಾರ ಇದಾವುದೂ ಪ್ರಕೃತ ಬ್ರಹ್ಮವೈವರ್ತದಲ್ಲಿ ಬರುವುದಿಲ್ಲ.

**ತತಃ ಸಾವರ್ಣಿ ಸಂವಾದೋ ನಾರದಸ್ಯ ಸಮೀರಿತಃ ।**
**ಕೃಷ್ಣಮಾಹಾತ್ಮ್ಯ ಸಂಯುಕ್ತೋ ನಾನಾಖ್ಯಾನ ಕಥೋತ್ತರಃ ॥**

ಎಂದು ನಾರದ ಪುರಾಣದಲ್ಲಿ ಹೇಳಿದ ಸಾವರ್ಣಿಯಿಂದ ನಾರದರಿಗೆ ನಿರೂಪಿಸಲ್ಪಟ್ಟ ಬಗೆಬಗೆಯ ಆಖ್ಯಾನ ಕಥಾಚರಿತ್ರಗಳಿಂದ ಒಡಗೂಡಿದ ಶ್ರೀಕೃಷ್ಣನ ಮಾಹಾತ್ಮ್ಯವು ಪ್ರಕೃತ ಬ್ರಹ್ಮವೈವರ್ತದಲ್ಲಿ ಬಿಟ್ಟುಹೋಗಿದೆ.

ಮತ್ಸ್ಯಪುರಾಣ ಶಿವಪುರಾಣಗಳಲ್ಲಿ ಬ್ರಹ್ಮವೈವರ್ತವು ಬ್ರಹ್ಮದೇವರ ಮಹಿಮಾ ಪ್ರತಿಪಾದಕವೆಂದು ಹೇಳಲಾಗಿದೆ. ಸ್ಕಂದಪುರಾಣದಲ್ಲಿ ಸವಿತೃದೇವನ ಅರ್ಥಾತ್ ಸೂರ್ಯನ ಮಾಹಾತ್ಮ್ಯ ಪ್ರತಿಪಾದನೆಯೇ ಇದರಲ್ಲಿ ಪ್ರಧಾನವಾಗಿ ಬಂದಿದೆ ಎಂದು ಹೇಳಲಾಗಿದೆ. ಆದರೆ ವಸ್ತುಸ್ಥಿತಿಯೆಂದರೆ ಆಚೂಲಮೂಲವಾಗಿ ಈ ಪುರಾಣವನ್ನು

ಪರಿಶೀಲಿಸಿದರೆ ಮಹಾವಿಷ್ಣುವಿನ ಮಹಿಮೆ-ಗರಿಮೆಗಳೇ ಈ ಪುರಾಣದುದ್ದಕ್ಕೂ ಕಥಿತ ಪ್ರಥಿತವಾಗಿವೆ. ಆದುದರಿಂದ ಇದೊಂದು ಶ್ರೀಮದ್ ಭಾಗವತದಂತೆ ಮುಖ್ಯವಾದ ವೈಷ್ಣವಪುರಾಣವೆಂದು ಪರಿಗಣಿತವಾಗಿದೆ. ಆದಿ ಶ್ರೀ ಶಂಕರಾಚಾರ್ಯರು, ಶ್ರೀಮನ್‌ಮಧ್ವಾಚಾರ್ಯರೂ ತಮ್ಮ ಗ್ರಂಥಗಳಲ್ಲಿ ಈ ಪುರಾಣವನ್ನು ಪ್ರಮಾಣತ್ವೇನ ಉಲ್ಲೇಖಿಸಿದ್ದಾರೆ.

ಇದರಲ್ಲಿ ಮೊಟ್ಟಮೊದಲನೆಯದಾದ ಬ್ರಹ್ಮಖಂಡದಲ್ಲಿ ಪರಬ್ರಹ್ಮನಾದ ಪರಮಾತ್ಮನ ಮಹಾಮಹಿಮೆ ಪ್ರತಿಪಾದಿತವಾಗಿದೆ. ಶ್ರೀಹರಿಯ ದಿವ್ಯಲೀಲೆಗಳನ್ನು ವೈಷ್ಣವರು ಸದಾಧ್ಯಾನ ಮಾಡುತ್ತಾರೆ.

**ಬ್ರಹ್ಮಖಂಡೇ ಸರ್ವಬೀಜಂ ಪರಂ ಬ್ರಹ್ಮನಿರೂಪಣಂ ।**
**ಧ್ಯಾಯಂತೇ ಯೋಗಿನಃ ಸಂತೋ ವೈಷ್ಣವಾ ಯತ್ ಪರಾತ್ ಪರಮ್ ॥**

ಎರಡನೆಯದಾದ ಪ್ರಕೃತಿಖಂಡದಲ್ಲಿ ಪ್ರಕೃತಿಯ ಮಹಿಮೆಯ ಬಣ್ಣನೆ ಬರುತ್ತದೆ. ಚಿತ್‌ಪ್ರಕೃತಿ ಅಚಿತ್ ಪ್ರಕೃತಿ ಎರಡಕ್ಕೂ ಅಭಿಮಾನಿಯಾದ ಮಹಾಲಕ್ಷ್ಮಿಯು ಶ್ರೀಕೃಷ್ಣನ ಆದೇಶಕ್ಕೆ ಅನುಸಾರವಾಗಿ ಕಾಲಕಾಲಕ್ಕೆ ದುರ್ಗಾ ಲಕ್ಷ್ಮೀ ಸಾವಿತ್ರೀ ಸರಸ್ವತೀ ರಾಧಾದಿ ರೂಪಗಳನ್ನು ಧರಿಸಿ ಕಾಲಕಾಲಕ್ಕೆ ಭಗವಂತನ ಸೃಷ್ಟಿ ಸ್ಥಿತಿ ಸಂಹಾರ ಸಂರಕ್ಷಣಾದಿಕಾರ್ಯಗಳಲ್ಲಿ ವ್ಯಾಪೃತಳಾಗಿ ಭಗವತ್ ಕಾರ್ಯಸಾಧಕಳಾಗುತ್ತಾಳೆ.

ಇದಲ್ಲದೆ ಪ್ರಕೃತಿಖಂಡದಲ್ಲಿ ಸಾವಿತ್ರಿ ತುಳಸಿ ಮೊದಲಾದ ದೇವಿಯರ ಪವಿತ್ರವೂ ವಿಚಿತ್ರವೂ ಆದ ಚಾರು-ಚರಿತ್ರೆಗಳು ಮಾರ್ಮಿಕವಾಗಿಯೂ ಮನೋಹರ ವಾಗಿಯೂ ನಿರೂಪಿಸಲ್ಪಟ್ಟಿವೆ.

ಇವಲ್ಲದೆ ಶಾಲಿಗ್ರಾಮ ಶಿಲಾವರ್ಣನೆ, ಕರ್ಮವಿಪಾಕ, ಮಂತ್ರ, ಸ್ತೋತ್ರ, ಕವಚ, ವಿದ್ಯಾ, ಪ್ರಕೃತಿ ಲಕ್ಷಣ, ಪುಣ್ಯಾತ್ಮ ಪಾಪಾತ್ಮರ ಸ್ಥಾನನಿರ್ದೇಶನ, ಶುಭಾಶುಭ ನರಕ ವ್ಯಾವರ್ಣನಾದಿಗಳೂ ಪ್ರಸಂಗಾನುಸಾರವಾಗಿ ಹೇಳಲ್ಪಟ್ಟಿವೆ.

ಮೂರನೆಯದಾದ ಗಣೇಶ ಖಂಡದಲ್ಲಿ ಗಣಪತಿಯ ಜನ್ಮ ಹಾಗೂ ಚಿತ್ರವಿಚಿತ್ರ ವಾದ ಚಾರುಚರಿತ್ರವು ಕೃಷ್ಣಾವತಾರರೂಪದಿಂದ ಬಣ್ಣಿಸಲ್ಪಟ್ಟಿವೆ. ಇದರಲ್ಲಿ ಗಣೇಶ ಭೃಗುಸಂವಾದ-ಗುಪ್ತಸ್ತೋತ್ರ-ಮಂತ್ರ-ತಂತ್ರ-ಕವಚಾದಿಗಳ ದಿಗ್ದರ್ಶನವಿರುತ್ತದೆ.

ಇದರಲ್ಲಿ 'ಅತಿಥಿದೇವೋಭವ' ಎಂದು ಉಪನಿಷತ್ತಿನಲ್ಲಿ ಹೇಳಿದುದ್ದನ್ನು ವಿಸ್ತಾರವಾಗಿ ಹೇಳಲಾಗಿದೆ.

**ಅಪೂಜಿತೋಽತಿಥಿರ್ಯಸ್ಯ ಭವನಾದ್ವಿನಿವರ್ತತೆ**
**ಪಿತೃದೇವಾಸ್ತತಃ ಪಶ್ಚಾತ್ ಗುರುವೋ ಯಾಂತ್ಯಪೂಜಿತಾಃ ॥**

ಯಾರ ಮನೆಯಿಂದ ಅತಿಥಿಯು ಅಪೂಜಿತನಾಗಿ ತಿರುಗಿ ಹೋಗುವನೋ ಆ ಮನೆಯಿಂದ ಪಿತೃಗಳೂ ದೇವತೆಗಳೂ ಅಗ್ನಿಗಳೂ ಗುರುಗಳೂ ಅಲ್ಲಿ ನಿಲ್ಲದೆ ಹೊರಟು ಹೋಗುತ್ತಾರೆ.

ಇದೇ ತೃತೀಯ ಖಂಡದಲ್ಲಿ ಸ್ವಧರ್ಮರಕ್ಷಣೆಯ ಆದರ್ಶ ಉಪದೇಶವು ಇರುತ್ತದೆ.

ನಾಲ್ಕನೆಯದಾದ ಈ ಶ್ರೀಕೃಷ್ಣಜನ್ಮಖಂಡದಲ್ಲಿ ಶ್ರೀಕೃಷ್ಣಪರಮಾತ್ಮನ ವಿವಿಧ ಲೀಲಾವಿಲಾಸಗಳ ವಿಸ್ತಾರವರ್ಣನೆಯು ಮನೋಜ್ಞವಾಗಿ ಚಿತ್ರಿಸಲ್ಪಟ್ಟಿದೆ. ಭಗವಂತನ ಜನ್ಮ, ಲೋಕೋದ್ಧಾರಕವಾದ ಕುಶಲಕರ್ಮ, ದುಷ್ಟಶಿಕ್ಷಣ, ಸಾಧುರಕ್ಷಣಾದಿ ಅವತಾರಕಾರ್ಯಗಳ ವಿಶದವರ್ಣನೆ ಇರುತ್ತದೆ. ಅದರಲ್ಲಿಯೂ ಭಗವತ್‌ಪ್ರಿಯಳೂ ಸಾಕ್ಷಾತ್ ಲಕ್ಷ್ಮಿಯ ಅವತಾರಭೂತಳೂ ಆದ ರಾಧೆಯ ಸ್ವರೂಪ ಸ್ವಭಾವ ದೈವೀ ಮಹಿಮೆಗಳ ಚೇತೋಹಾರಿ ನಿರೂಪಣೆ ಉದ್ಬೋಧಕವಾಗಿ ಬಂದಿದೆ.

ಶ್ರೀಕೃಷ್ಣ ರಾಧಾರಮಣಿಯರ ಇಂಥ ಹೃದಯಂಗಮವಾದ ರಸಭರಿತವರ್ಣನೆಯು ಬ್ರಹ್ಮವೈವರ್ತಪುರಾಣದ ಹೊರತಾಗಿ ಬೇರಾವ ಪುರಾಣದಲ್ಲಿ ಬರುವುದಿಲ್ಲ. ಭಾಗವತದಲ್ಲಿ ರಾಧೆಯ ಉಲ್ಲೇಖವೇ ಬರುವುದಿಲ್ಲ. ಶ್ರೀರಾಧಾಕೃಷ್ಣ ಯುಗಲದ ದಿವ್ಯಭವ್ಯಮಹಿಮೆಯ ಉದಾತ್ತ ಹಾಗೂ ಉತ್ಕೃಷ್ಟ ಅವಿಷ್ಕಾರ ಹಾಗೂ ಪ್ರಭಾವ ಪರಿಷ್ಕಾರಗಳು ಇಲ್ಲಿಯ ಚತುರ್ಥಖಂಡದಲ್ಲಿ ಬಂದದ್ದು ಪರಮಪುರುಷಾರ್ಥಪ್ರದ. ಉತ್ತರಭಾರತದ ಭಾವುಕಭಕ್ತಜನರು ಇದರ ಪಠಣ ಪಾಠನ ಪಾರಾಯಣ ಪ್ರವಚಾದಿಗಳ್ನು ಆದರಾತಿಶಯದಿಂದ ಮಾಡುತ್ತಲೇ ಇರುತ್ತಾರೆ.

ಅದರಲ್ಲಿಯೂ ಚೈತನ್ಯಮತಾನುಯಾಯಿಗಳಾದ ಗೌಡೀಯ ವೈಷ್ಣವರಿಗೆಲ್ಲ ಈ ಪುರಾಣದಲ್ಲಿ ಪರಮಪ್ರಮಾಣವೂ ಪರಮಮಾನನೀಯವೂ ಪ್ರತಿನಿತ್ಯಪೂಜನೀಯವೂ ಮನನೀಯವೂ ಆಗಿದೆ. ಸ್ಕಂದ ಪುರಾಣದ ಶಿವರಹಸ್ಯಖಂಡದಲ್ಲಿ ಬ್ರಹ್ಮವೈವರ್ತವು ಸೂರ್ಯಮಾಹಾತ್ಮ್ಯ ಪ್ರಶಂಸನ ಪರವೆಂದು ಹೇಳಲಾಗಿದೆ. ಆದರೆ ಈಗ ಉಪಲಬ್ಧವಿದ್ದ ಬ್ರಹ್ಮವೈವರ್ತದಲ್ಲಿ ಪ್ರಾಮುಖ್ಯವಾಗಿ ರಾಧಾಕೃಷ್ಣರ ಚೇತಶ್ಚಮತ್ಕಾರವಾದ ಪವಿತ್ರಚರಿತ್ರದ ಸುಚಾರು ಚಿತ್ರಣವಿದ್ದುದು ಸುಜ್ಞವಾಚಕರಿಗೆ ಗೋಚರವಾಗುತ್ತದೆ.

ಕೃಷ್ಣನಿಗಿಂತ ಇಲ್ಲಿ ರಾಧಾದೇವಿಯ ಮಹಾಮಹಿಮೆ ಅಧಿಕಾಧಿಕವಾಗಿ ಬಣ್ಣಿಸಲ್ಪಟ್ಟಿದೆ. ಈ ಬ್ರಹ್ಮವೈವರ್ತದಲ್ಲಿ ಶ್ರೀಕೃಷ್ಣ ಪರಾತ್ಪರನಾದ ಪರಬ್ರಹ್ಮ ಎಂದು ನಿಷ್ಕೃಷ್ಟವಾಗಿ ಹೇಳಲ್ಪಟ್ಟಿದೆ. ಈ ರಾಧಾಕೃಷ್ಣರ ನಿತ್ಯನಿರಂತರ ವಾಸಸ್ಥಳ ಎಂದರೆ ಅತ್ಯುತ್ತಮವಾದ ಗೋಲೋಕ ಎಂದು ಪ್ರತಿಪಾದಿತವಾಗಿದೆ.

ಈ ಬ್ರಹ್ಮವೈವರ್ತ ಪ್ರಕೃತಿಖಂಡ ಹಾಗೂ ಗಣೇಶಖಂಡದಲ್ಲಿ ತಾಂತ್ರಿಕ ಸಾಮಗ್ರಿಯು ಅಧಿಕಾಧಿಕವಾಗಿ ನಿರ್ದಿಷ್ಟವಾಗಿದೆ. ಈ ತಾಂತ್ರಿಕಭಾಗವು ಒಂಬತ್ತು ಹತ್ತನೆಯ ಶತಮಾನದ ಮಧ್ಯಭಾಗದಲ್ಲಿ ತಾಂತ್ರಿಕರಿಂದ ಸೇರಿಸಲ್ಪಟ್ಟಿರಬಹುದು ಎಂದು ವಾರಾಣಸಿಯ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದ ಪುರಾಣ ಇತಿಹಾಸ ವಿಭಾಗದ ಅಧ್ಯಕ್ಷರಾದ ಶ್ರೀಕೃಷ್ಣಮಣಿ ತ್ರಿಪಾಠಿಗಳು ಅಭಿಪ್ರಾಯ ಪಟ್ಟಿದ್ದಾರೆ.

ರಾಧಾವಲ್ಲಭೀಯ ಸಂಪ್ರದಾಯಾನುಸಾರಿಯಾದ ಶ್ರೀರಾಧಾ ಉಪಾಸನೆಯ ನಿರ್ದೇಶನವು ಇದರಲ್ಲಿ ಇರುವುದರಿಂದ ಇದರಲ್ಲಿಯ ಕೆಲವು ಭಾಗವು ೯-೧೦ನೇ ಶತಮಾನದಲ್ಲಿ ಈ ಪುರಾಣ ಶರೀರಾಂತಃಪ್ರವೇಶಿತವಾಗಿರಬಹುದೆಂದು ಕೆಲವು ವಿದ್ವಾಂಸರು ವಾದಿಸುತ್ತಾರೆ. ಆದರೆ ಆದಿಶಂಕರಾಚಾರ್ಯರಲ್ಲದೇ ಅನೇಕ ಪ್ರಾಚೀನ ನಿಬಂಧಕಾರರೂ ಸ್ಮೃತಿಕಾರರೂ ಈ ಬ್ರಹ್ಮವೈವರ್ತದ ಪದ್ಯಗಳನ್ನು ಹೇರಳವಾಗಿ ತಮ್ಮ

ನಿಬಂಧಗ್ರಂಥಗಳಲ್ಲಿ ಉದ್ಧರಿಸಿದ್ದರಿಂದ ಇದು ಉಳಿದ ಪ್ರಾಚೀನ ಪುರಾಣಗಳಂತೆ ವ್ಯಾಸ ರಚಿತವಾದುದರಿಂದ ಅವುಗಳಷ್ಟೇ ಎಂದರೆ ಕ್ರಿಸ್ತಪೂರ್ವ ಮೂರುಸಾವಿರ ವರ್ಷದಷ್ಟು ಮೂಲಬ್ರಹ್ಮಪುರಾಣವು ಪ್ರಾಚೀನವೂ ಸಮೀಚೀನವೂ ಆಗಿದೆ. ಇದೇ ವೈದಿಕ ವಿಮರ್ಶಕ ವಿದ್ವಾಂಸರ ಖಚಿತೋಚಿತ ಅಭಿಪ್ರಾಯವಾಗಿದೆ. ಅನಂತರ ಕ್ರಿಸ್ತಶಕದ ಆರು ಏಳನೆಯ ಶತಮಾನಗಳಿಂದ ಹದಿನಾರನೆಯ ಶತಮಾನದವರೆಗೂ ಎಲ್ಲ ಪುರಾಣಗಳಲ್ಲಿ ಆದಂತೆ ಬಗೆ ಬಗೆಯ ಆವಾಪ ಉದ್ವಾಪ ಉಪದ್ವಾಪಗಳು ಇದರಲ್ಲಿಯೂ ನಡೆದಿದ್ದರೆ ಆಶ್ಚರ್ಯವಿಲ್ಲ.

ಸ್ಮೃತಿ ಚಂದ್ರಿಕಾಗ್ರಂಥದಲ್ಲಿ ಬ್ರಹ್ಮವೈವರ್ತಪುರಾಣದ (೧೫೦೦) ಹದಿನೈದು ನೂರು ಸಾಲುಗಳನ್ನು ಎತ್ತಿಕೊಳ್ಳಲಾಗಿದೆ. ಮತ್ತು ಹೇಮಾದ್ರಿಯ ಚತುರ್ವರ್ಗ-ಚಿಂತಾಮಣಿ, ಮಾಧವಾಚಾರ್ಯರ ಕಾಲನಿರ್ಣಯ ಗ್ರಂಥಗಳಲ್ಲಿ ಬ್ರಹ್ಮವೈವರ್ತದ ಅವತರಣಿಕೆಗಳನ್ನು ಹೇರಳವಾಗಿ ಉದಾಹರಿಸಿದ್ದು ಕಂಡುಬರುತ್ತದೆ. ಇವಲ್ಲದೆ ವ್ರತಕಾಲ ವಿವೇಕ, ರಾಸಯಾತ್ರಾವಿವೇಕ, ಸ್ಮೃತಿತತ್ತ್ವ, ಕಾಲಸಾರ, ವರ್ಷಕ್ರಿಯಾ ಕಾಮುದೀ, ಹರಿಭಕ್ತಿವಿಲಾಸ ಮುಂತಾದ ಅನೇಕ ಪರವರ್ತಿಧರ್ಮಶಾಸ್ತ್ರಗ್ರಂಥಕಾರರು ಬ್ರಹ್ಮವೈವರ್ತಪುರಾಣದ ಅನೇಕ ಪದ್ಯಗಳನ್ನು ತಮ್ಮ ವಿವಕ್ಷಿತಾರ್ಥ ಸಾಧನೆಗೆ ಪರಮಪ್ರಮಾಣಭೂತವಾಗಿ ಉದಾಹರಿಸುತ್ತಾರೆ. ಇದರ ಮೇಲಿಂದ ಈ ಪುರಾಣವು ಪ್ರಾಚೀನವೂ ಸಕಲ ವಿದ್ವನ್ಮಾನ್ಯವೂ ಪ್ರಮಾಣ ಮೂರ್ಧನ್ಯವೂ ಆಗಿತ್ತೆಂಬುದು ನಿಚ್ಚಳವಾಗಿ ತಿಳಿದುಬರುತ್ತದೆ.

ಶ್ರೀರಾಧಾಕೃಷ್ಣರ ದಿವ್ಯಾನುಭಾವವನ್ನೂ ಮಹಾಲಕ್ಷ್ಮಿದೇವಿಯಿಂದ ಅಭಿಮನ್ಯವಾಗಿ ತತ್‌ಸ್ವರೂಪಿಣಿ ಎಂದು ಬಣ್ಣಿಸಲ್ಪಟ್ಟ ಪ್ರಕೃತಿಯ ಪ್ರಭಾವ ಪ್ರಾಧ್ಯಾನ್ಯ ಪ್ರಾಶಸ್ತ್ಯಗಳನ್ನು ಇಲ್ಲಿ ಬಿಂಬಿಸಿ ಬಿತ್ತರಿಸಲಾಗಿದೆ. ಈ ಪುರಾಣದಲ್ಲಿ ಗಣೇಶನೂ ವಿಷ್ಣುವಿನ ಅವತಾರ ವೆಂದು ಹೇಳಿ **'ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾ ಹರಂತಿ' 'ಯದ್ಯದ್ವಿಭೂತಿ ಮತ್ಸತ್ವಂ, ತತ್ರತತ್ರಸ್ಥಿತೋ ವಿಷ್ಣುಃ ತತ್‌ಚ್ಛಕ್ತಿ ಪ್ರಬೋದಕಃ'** ಎಂಬ ನಿಗಮಾಗಮೋಕ್ತಿಗಳಿಗೆ ನಿದರ್ಶನವನ್ನು ಒದಗಿಸುತ್ತದೆ ಈ ಪುರಾಣ.

ಒಟ್ಟಾರೆ ಈ ಬ್ರಹ್ಮವೈವರ್ತ ಪುರಾಣವು ಮಾನವನ ಸರ್ವಾಂಗೀಣ ಅಭ್ಯುದಯ ಸರ್ವತೋಮುಖ ವಿಕಾಸ ಹಾಗೂ ಅಧ್ಯಾತ್ಮಿಕ ಉನ್ನತಿ ಆಗಬೇಕೆಂಬ ಘನೋದ್ದೇಶದಿಂದ ಶ್ರೀನಾರಾಯಣವತಾರಿಗಳಾದ ಭಗವಾನ್ ಶ್ರೀಬಾದರಾಯಾಣರಿಂದ ಬರೆಯಲ್ಪಟ್ಟಿದೆ.

ಮುಖ್ಯವಾಗಿ ಈ ಬ್ರಹ್ಮವೈವರ್ತ ಮಹಾಪುರಾಣದ ಅಭಿಲೇಖನ, ಸಂಶೋಧನ, ಪರಿವರ್ತನ, ಪರಿಷ್ಕರಣ ಶುದ್ಧೀಕರಣ ಮೊದಲಾದ ಎಲ್ಲಾ ಕಾರ್ಯಗಳನ್ನೂ ಪರಿಶ್ರಮದಿಂದ ಮಾಡಿದ ಪುರ್ಣಪ್ರಜ್ಞ ವಿದ್ಯಾಪೀಠದ ನಿವೃತ್ತ ಪ್ರಾಚಾರ್ಯರಾದ **ಪಂಡಿತ ಸಾರ್ವಭೌಮ ಹಯವದನ ಪುರಾಣಿಕರಿಗೆ** ನಾನು ಅತ್ಯಂತ ಕೃತಜ್ಞತೆಯಿಂದ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಹುಬ್ಬಳ್ಳಿ — ಮಹಾಮಹೋಪಾಧ್ಯಾಯ

ದಿನಾಂಕ 9 – 10 – 2005 — **ಪಂ. ಪಂಢರೀನಾಥಾಚಾರ್ಯಗಲಗಲಿ**

ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**
**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ನೂರು ಜನರಲ್ಲಿ ಒಬ್ಬನು ಶೂರನಿರುತ್ತಾನೆ. ಸಾವಿರ ಜನರಲ್ಲಿ ಒಬ್ಬನು ಪಂಡಿತನಿರುತ್ತಾನೆ. ಹತ್ತುಸಾವಿರ ಜನರಲ್ಲಿ ಒಬ್ಬನು ವಾಕ್ ಚತುರನಿರುತ್ತಾನೆ. ಆದರೆ ಕೊಡುಗೈ ದಾನಿಯು ಎಲ್ಲಿಯಾದರೂ ಇರುವನೋ ಅಥವಾ ಇಲ್ಲವೋ!

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಶ್ರೀಹರಿಖೋಡೆಯವರು. ಮುಖ್ಯವಾಗಿ ವಿಷ್ಣು, ವರಾಹ, ಕೂರ್ಮ ಪುರಾಣವೇ ಮೊದಲಾದ ಶ್ರೀ ವೇದವ್ಯಾಸ ರಚಿತ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದಾರಪರ್ವತವನ್ನು ಹೊತ್ತಂತೆ, ಶ್ರೀಹರಿಖೋಡೆಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನೆ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಒದಗಿಸಿಕೊಡುತ್ತಿದ್ದಾರೆ.

ಈ ಲಿಂಗಮಹಾಪುರಾಣ ಮತ್ತು ಗಣೇಶಪುರಾಣವನ್ನೊಳಗೊಂಡ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ ಶ್ರೀ ವೆಂಕಟೇಶ್ವರ ಪ್ರಿಂಟರ್ಸ್, ನಂ.3, ಯಲ್ಲಪ್ಪರಸ್ತೆ, ಚಿಕ್ಕಮಾವಳ್ಳಿ (ಸುಶೀಲರಸ್ತೆ ಕ್ರಾಸ್) ಬೆಂಗಳೂರು-560 004 ಮಾಲೀಕರಾದ ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮೂವತ್ತೇಳು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಹಾಗೂ ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜ ನಗರ, ಬೆಂಗಳೂರು ಇವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಬರೆದಿದ್ದಾರೆ. ಶ್ರೀಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಹುಬ್ಬಳ್ಳಿ
ದಿನಾಂಕ 9 – 10 – 2005

ಮಹಾಮಹೋಪಾಧ್ಯಾಯ
**ಪಂ. ಪಂಢರೀನಾಥಾಚಾರ್ಯಗಲಗಲಿ**
**ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ – 580 032**

# ಪುರಾಣ ಪ್ರಜ್ಞೆ

ಭಾರತೀಯ ಸಂಸ್ಕೃತಿಯ ಸಂಕೇತವಾಗಿ ಇಂದಿಗೂ ಅಳಿಯದೆ ಉಳಿದಿರುವ ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಪುರಾಣಗಳಿಗೆ ಪ್ರಧಾನ್ಯವಿದೆ. ಭಾರತೀಯ ಸಂಸ್ಕೃತಿ ಬೆಳೆದು ಮಹಾವಟವೃಕ್ಷವಾಗಿ ನೆರಳು ನೀಡುತ್ತಿರುವ ಕಥೆ ಈ ಪುರಾಣಗಳಿಂದ ಚೆನ್ನಾಗಿ ತಿಳಿದುಬರುತ್ತದೆ. ಭಾರತೀಯರ ಜನಜೀವನದ ಪ್ರತಿಬಿಂಬವೇ ಈ ಪುರಾಣಗಳು.

ವೇದಗಳನ್ನು ಬಿಟ್ಟರೆ ಪುರಾಣಗಳಿಗೆ ಹೆಚ್ಚುಮಹತ್ವ. ಇದಕ್ಕೆ 'ಪಂಚಮವೇದ' ಎಂದೂ ಕರೆಯುತ್ತಾರೆ. ಶ್ರುತಿ, ಸ್ಮೃತಿ ಮತ್ತು ಇತಿಹಾಸಗಳಿಗೆ ಧರ್ಮಾದಿ ವಿಷಯಗಳ ವರ್ಣನೆ ಮತ್ತು ನಿರೂಪಣೆಯಲ್ಲಿ ಸಮಸಮವಾಗಿ ತೂಗುವ, ಸತ್ಯ, ತತ್ವ ಮತ್ತು ಮಹತ್ವವೇನೆ ಇದ್ದರೂ ಆರು ಪುರಾಣಗಳಿಂದ ಬರುತ್ತದೆ.

ಅಮರಸಿಂಹನ ನಾಮಲಿಂಗನುಶಾಸನದಲ್ಲಿ ಪುರಾಣದಲ್ಲಿರುವುದನ್ನು ಈ ರೀತಿ ಹೇಳುತ್ತಾರೆ.

**''ಆಖ್ಯಾಯಿಕೋಪಲಬ್ಧಾರ್ಥಾಪುರಾಣ ಪಂಚಲಕ್ಷಣಂ,**
**ಸ್ವರ್ಗಶ್ಚ ಪ್ರತಿಸ್ವರ್ಗಶ್ಚ ವಂಶೋಮನ್ವಂತರಾಶಿ ಚ**
**ವಂಶಾನುಚರಿತಂ ಚೈವ ಪುರಾಣಂ ಪ್ರಂಚಲಿಪುಣಂ''**

ಒಟ್ಟು ಹದಿನೆಂಟು ಪುರಾಣಗಳು, ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ವರಾಹ, ಲಿಂಗ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ ಇವುಗಳು ನಾಲ್ಕು ಲಿಪಿ ಶ್ಲೋಕಗಳಲ್ಲಿ ಬಂದಿವೆ.

ಪ್ರಸ್ತುತ ಪಂಡಿತ ಪಂಢರೀನಾಥಾಚಾರ್ಯ ಗಲಗಲಿಯವರು ಬಹುಶ್ರಮದಿಂದ ಈ ಪುರಾಣಗಳನ್ನು ಲೇಖಾನುವಾದ ಮಾಡಿದ್ದಾರೆ. ಭಾರತದೇಶದ, ವಿಶೇಷವಾಗಿ ಕರ್ನಾಟಕದ ಜನತೆಯ ಮನೆ-ಮನದಲ್ಲಿ ಅವರು ಪ್ರಾಥಸ್ಮರಣೀಯರು.

ಆದ್ದರಿಂದ ಈ ಎಲ್ಲಾ ಹದಿನೆಂಟುಪುರಾಣಗಳನ್ನು ಪಠಿಸಿ, ಕೇಳಿ, ಮನನ ಮಾಡಿಕೊಂಡು ಬಾಳನ್ನು ಸಾರ್ಥಕಗೊಳಿಸಿಕೊಳ್ಳೋಣ. ಹಾಗೆಯೇ. ''ಅಬ್ಧಿಗೆ ಅತಿ ಮಿತಿಯುಂಟು, ಆದರೆ ಬುದ್ಧಿಗೆ ಮಿತಿಯಿಲ್ಲ.'' ಆದ್ದರಿಂದ ಪ್ರಜ್ಞರು, ಬಲ್ಲವರು ಈ ಪುರಾಣಗಳಲ್ಲಿ ಬರುವ, ವಸ್ತು, ಪಾತ್ರ, ಶೈಲಿ, ನಿರೂಪಣೆ ಮತ್ತು ಭಾಷೆಯ ಬಗ್ಗೆ ತಮ್ಮ ಅಭಿಪ್ರಾಯ ಮತ್ತು ಲೋಪದೋಷ, ಜಿಜ್ಞಾಸೆಗಳೇನಾದರೂ ಕಂಡು ಬಂದಲ್ಲಿ ಅದನ್ನು ತಮ್ಮ ಪ್ರತಿಯಲ್ಲಿ ತಿದ್ದಿ ತಿಳಿಸಿದರೆ ಅದರಬದಲು ತಮ್ಮಗೆ ಮತ್ತೊಂದು ಶುದ್ಧಪ್ರತಿಯನ್ನು ನೀಡಲಾಗುವುದು. ಹಾಗೂ ತಾವು ತೋರಿಸಿದ ಲೋಪ-ದೋಷಗಳನ್ನು ಪರಿಷ್ಕರಿಸಿ ದ್ವಿತೀಯ ಮುದ್ರಣದಲ್ಲಿ ಅಳವಡಿಸಿಕೊಳ್ಳಲು ಸಂಪಾದಕ ವರ್ಗವು ಸದಾ ಸಿದ್ಧವಿದೆ. ದ್ವಿತೀಯಮುದ್ರಣದ ನಂತರ ತಮಗೆ ಉಡುಗೊರೆಯ ಜೊತೆ ನೂತನ ಪರಿಷ್ಕರಿಸಿದ ಪ್ರತಿಯನ್ನೂ ಸಹ ನೀಡಲಾಗುವುದು. ತಮ್ಮ ಅಭಿಪ್ರಾಯವನ್ನು ಅತ್ಯಂತ ಆದರದಿಂದ ಸ್ವಾಗತಿಸುತ್ತೇವೆ. ದಯವಿಟ್ಟು ಈ ಅನಂತಸಾಗರ ಪುರಾಣಪ್ರಜ್ಞಾ ಕೈಂಕರ್ಯದಲ್ಲಿ ತಮ್ಮ ಪಾಂಡಿತ್ಯವನ್ನು ವಿನಿಯೋಗಿಸಿ. ಹಾಗೂ ದ್ವಿತೀಯ ಮುದ್ರಣವು ಇನ್ನೂ ಉತ್ತಮವಾಗಿ ಹೊರತರಲು ತಮ್ಮೆಲ್ಲರ ಸಹಕಾರ ಅಗತ್ಯ.

# ಬ್ರಹ್ಮವೈವರ್ತ ಮಹಾಪುರಾಣ-ದ್ವಿತೀಯಭಾಗ

## ವಿಷಯಾನುಕ್ರಮಣಿಕೆ


| ಅಧ್ಯಾಯ | ಶ್ರೀಕೃಷ್ಣಜನ್ಮಖಂಡ ಪೂರ್ವಾರ್ಧ | ಪುಟಸಂಖ್ಯೆ |
|---|---|---|
| 1 | ವಿಷ್ಣುವೈಷ್ಣವ ಗುಣಪ್ರಶಂಸೆ | 1 |
| 2 | ವಿರಜಾನದೀ ಉದ್ಭವ | 4 |
| 3 | ಸಪ್ತಸಮುದ್ರ ಜನ್ಮ, ರಾಧಾಶ್ರೀದಾಮ ಶಾಪವೃತ್ತಾಂತ | 7 |
| 4 | ಗೋಲೋಕವರ್ಣನ | 11 |
| 5 | ಶ್ರೀಕೃಷ್ಣಸ್ತೋತ್ರ | 15 |
| 6 | ಶ್ರೀಕೃಷ್ಣಾವತಾರ ಸಂಕಲ್ಪ | 18 |
| 7 | ಶ್ರೀಕೃಷ್ಣಾವತಾರ | 27 |
| 8 | ಜನ್ಮಾಷ್ಟಮೀ ವ್ರತ | 33 |
| 9 | ಗೋಕುಲದಲ್ಲಿ ಪುತ್ರೋತ್ಸವ | 37 |
| 10 | ಪೂತನಾಮೋಕ್ಷ | 40 |
| 11 | ತೃಣಾವರ್ತವಧ | 43 |
| 12 | ಶಕಟ ಭಂಜನ | 44 |
| 13 | ಕೃಷ್ಣರಾಮ ನಾಮಕರಣ | 46 |
| 14 | ನಳಕೂಬರ ಮೋಕ್ಷ | 57 |
| 15 | ರಾಧಾಕೃಷ್ಣರ ವಿವಾಹ | 59 |
| 16 | ಬಕ ಪ್ರಲಂಬ ಕೇಶಿ ವಧ | 66 |
| 17 | ವೃಂದಾವನ ವರ್ಣನೆ | 72 |
| 18 | ವಿಪ್ರಪತ್ನೀಮೋಕ್ಷ | 80 |
| 19 | ಕಾಳಿಯ ದಮನ ಮತ್ತು ದಾವಾಗ್ನಿ ಪರಿಹಾರ | 85 |
| 20 | ಗೋವತ್ಸಬಾಲಕಹರಣ | 91 |
| 21 | ಇಂದ್ರಯಾಗಭಂಜನ | 93 |
| 22 | ಧೇನುಕ ವಧ | 103 |
| 23 | ಧೇನುಕಾಸುರನ ವೃತ್ತಾಂತ ದುರ್ವಾಸ ಮಹರ್ಷಿ ಶಾಪ | 107 |
| 24 | ದುರ್ವಾಸ ಕಂದಲಿ ವಿವಾಹ | 114 |
| 25 | ದುರ್ವಾಸಮುನಿ ಮೋಕ್ಷ | 118 |
| 26 | ಏಕಾದಶೀ ವ್ರತ | 127 |

| ಅಧ್ಯಾಯ | | ಪುಟಸಂಖ್ಯೆ |
|---|---|---|
| 27 | ಗೋಪಿಕಾವಸ್ತ್ರಾಪಹರಣ | 131 |
| 28 | ರಾಸಕ್ರೀಡೆ | 141 |
| 29 | ಅಷ್ಟಾವಕ್ರಮುನಿ ಮೋಕ್ಷ | 145 |
| 30 | ಅಷ್ಟಾವಕ್ರನಿಗೆ ರಂಭಾಶಾಪ | 147 |
| 31 | ಮನ್ಮಥ ಸ್ತೋತ್ರ | 152 |
| 32 | ಬ್ರಹ್ಮ ಮೋಹಿನೀ ಸಂವಾದ | 156 |
| 33 | ಮೋಹಿನೀ ಶಾಪ, ಬ್ರಹ್ಮನ ದರ್ಪಭಂಗ | 160 |
| 34 | ಜಾಹ್ನವೀ ಜನ್ಮ | 164 |
| 35 | ರತಿ ಮನ್ಮಥರ ಜನ್ಮ | 166 |
| 36 | ಶ್ರೀಕೃಷ್ಣನಿಂದ ಶಂಕರನ ಪ್ರಶಂಸೆ | 170 |
| 37 | ಹರನಿರ್ಮಾಲ್ಯನಿಷೇಧ | 175 |
| 38 | ಪಾರ್ವತಿಯ ಜನ್ಮ | 178 |
| 39 | ಪಾರ್ವತಿಯ ದರ್ಪಭಂಗ | 182 |
| 40 | ಪಾರ್ವತಿಯ ತಪಸ್ಸಿನ ಫಲ | 185 |
| 41 | ಅನರಣ್ಯ ರಾಜನ ವೃತ್ತಾಂತ | 191 |
| 42 | ಧರ್ಮನಿಗೆ ಪತಿವ್ರತೆಯ ಶಾಪ | 198 |
| 43 | ಶಂಕರ ಶೋಕಾಪನೋದನ | 203 |
| 44 | ಪಾರ್ವತೀಪ್ರದಾನ | 208 |
| 45 | ಶಂಕರವಿವಾಹ | 211 |
| 46 | ಶಿವಪಾರ್ವತಿಯರ ಶೃಂಗಾರಕ್ರೀಡೆ | 215 |
| 47 | ಶಕ್ರನ ದರ್ಪಭಂಗ | 218 |
| 48 | ಸೂರ್ಯನ ದರ್ಪಭಂಗ | 225 |
| 49 | ಅಗ್ನಿಯ ದರ್ಪಭಂಗ | 226 |
| 50 | ದುರ್ವಾಸನ ದರ್ಪಭಂಗ | 227 |
| 51 | ಧನ್ವಂತರಿ ದರ್ಪಭಂಗ | 229 |
| 52 | ಗೋಪಿಯರೊಡನೆ ರಾಸಕ್ರೀಡೆ | 232 |
| 53 | ರಾಧೆಯೊಡನೆ ವಿಹಾರ | 234 |
| 54 | ಶ್ರೀಕೃಷ್ಣನ ಚರಿತೆ | 236 |

ಅಧ್ಯಾಯ ಶ್ರೀಕೃಷ್ಣಜನ್ಮಖಂಡ ಉತ್ತರಾರ್ಧ ಪುಟಸಂಖ್ಯೆ


55 ಶ್ರೀಕೃಷ್ಣನ ಪ್ರಭಾವ ........ 238
56 ಮಹಾವಿಷ್ಣು ಮುಂತಾದವರ ದರ್ಪಭಂಗ ........ 239
57 ಲಕ್ಷ್ಮೀ ವೈರಾಗ್ಯಮೋಚನ ........ 243
58 ರಾಧೆಯ ದರ್ಪಭಂಗ ........ 245
59 ಮಹೇಂದ್ರದರ್ಪಭಂಗ ........ 246
60 ಶಚಿಯ ಪಾತಿವ್ರತ್ಯರಕ್ಷಣೆ ........ 255
61 ಮಹೇಂದ್ರನ ದರ್ಪಭಂಗ ಇನ್ನೊಮ್ಮೆ ........ 258
62 ಶ್ರೀರಾಮನ ಚರಿತ್ರೆ ........ 260
63 ಕಂಸನ ದುಃಸ್ವಪ್ನ ........ 265
64 ಕಂಸನ ಧನುರ್ಯಾಗ ........ 266
65 ಅಕ್ರೂರನ ಹರ್ಷ ........ 269
66 ರಾಧೆಯ ಸ್ವಪ್ನ ........ 271
67 ರಾಧೆಗೆ ಕೃಷ್ಣನ ಅಧ್ಯಾತ್ಮೋಪದೇಶ ........ 272
68 ರಾಧಾಶೋಕವಿಮೋಚನ ........ 275
69 ನಂದನ ಮನೆಗೆ ಶ್ರೀಕೃಷ್ಣಾಗಮನ ........ 277
70 ಅಕ್ರೂರಾಗಮನ ........ 281
71 ಶ್ರೀಕೃಷ್ಣನ ಮಧುರಾ ಪ್ರಯಾಣ ........ 284
72 ಕಂಸವಧೆ, ದೇವಕೀ ವಸುದೇವ ಮೋಕ್ಷಣ ........ 285
73 ನಂದಶೋಕ ವಿಮೋಚನ ........ 289
74 ಆದ್ಯಾತ್ಮಿಕೋಪದೇಶ ........ 293
75 ಸದಾಚಾರನಿಯಮ ........ 294
76 ಪುಣ್ಯಕರ ದರ್ಶನ ........ 298
77 ಸುಸ್ವಪ್ನಫಲ ........ 301
78 ಪಾಪಕರ ದರ್ಶನ ........ 304
79 ಸೂರ್ಯನಿಗೆ ಮುನಿಶಾಪ ........ 307
80 ಗುರುಪತ್ನೀಗಮನ ........ 310
81 ಚಂದ್ರನಲ್ಲಿ ಕಲಂಕ ........ 311

ಅಧ್ಯಾಯ ಪುಟಸಂಖ್ಯೆ
82 ದುಃಸ್ವಪ್ನ-ಪರಿಹಾರ .......... 313
83 ವರ್ಣಾಶ್ರಮಧರ್ಮ, ಸ್ತ್ರೀಧರ್ಮ .......... 316
84 ಬ್ರಹ್ಮಾಂಡಸೃಷ್ಟಿ .......... 321
85 ಕರ್ಮವಿಪಾಕ .......... 326
86 ವೃಂದೆಯ ಚರಿತ್ರೆ .......... 330
87 ಧನ್ಯೋಪಾಖ್ಯಾನ .......... 337
88 ದುರ್ಗಾಸ್ತೋತ್ರ .......... 339
89 ಶ್ರೀಕೃಷ್ಣ ಮತ್ತು ನಂದನ ಸಂವಾದ .......... 342
90 ಚತುರ್ಯುಗಧರ್ಮ .......... 343
91 ಗೋಕುಲಕ್ಕೆ ಉದ್ಧವನ ನಿರ್ಗಮನ .......... 346
92 ಉದ್ಧವನಿಂದ ರಾಧಾಸ್ತೋತ್ರ .......... 347
93 ರಾಧಾ ಉದ್ಧವರ ಸಂವಾದ .......... 349
94 ರಾಧೆಯ ಸಖಿಯರಿಂದ ಕೃಷ್ಣನ ಗುಣಗಾನ .......... 352
95 ರಾಧೆಯಿಂದ ಕೃಷ್ಣನ ಗುಣಗಾನ .......... 358
96 ಕಾಲನಿರೂಪಣೆ .......... 360
97 ರಾಧಾಉದ್ಧವ ಸಂವಾದ .......... 365
98 ಶ್ರೀಕೃಷ್ಣ ಉದ್ಧವರ ಸಂವಾದ .......... 368
99 ಕೃಷ್ಣ ರಾಮರ ಉಪನಯನಕ್ಕೆ ಆಹ್ವಾನ .......... 371
100 ದೇವತೆಗಳ, ಮುನಿಗಳ ಶ್ರೀಕೃಷ್ಣಸ್ತೋತ್ರ .......... 373
101 ಶ್ರೀಕೃಷ್ಣರಾಮರ ಉಪನಯನ .......... 375
102 ಸಾಂದೀಪನಿಮುನಿಯಲ್ಲಿ ಶ್ರೀಕೃಷ್ಣನ ವೇದಾಧ್ಯಯನ .......... 377
103 ದ್ವಾರಕಾ ನಿರ್ಮಾಣ .......... 379
104 ದ್ವಾರಕಾಪ್ರವೇಶ, ಉಗ್ರಸೇನಪಟ್ಟಾಭಿಷೇಕ .......... 383
105 ರುಕ್ಮಿಣೀ ಸ್ವಯಂವರಾಹ್ವಾನ .......... 387
106 ರುಕ್ಮಿಣೀವಿವಾಹಕ್ಕೆ ವಿರೋಧ .......... 391
107 ಭೀಷ್ಮಕ ಕೃಷ್ಣನನ್ನು ಸ್ತುತಿಸಿದ್ದು .......... 392
108 ಭೀಷ್ಮಕನಿಂದ ಕನ್ಯಾದಾನ .......... 397

ಅಧ್ಯಾಯ ಪುಟಸಂಖ್ಯೆ
109 ರುಕ್ಮಿಣೀ ಕೃಷ್ಣರ ದ್ವಾರಕಾಪ್ರವೇಶ........................ 398
110 ರಾಧಾ ಯಶೋದಾ ಸಂವಾದ........................ 401
111 ಯಶೋದೆಗೆ ರಾಧೆಯ ಉಪದೇಶ........................ 403
112 ದುರ್ವಾಸಮುನಿ ಕೃಷ್ಣ ಸಂವಾದ ........................ 407
113 ದುರ್ವಾಸ ಪಾರ್ವತಿ ಸಂವಾದ, ಯುಧಿಷ್ಠಿರನ
ರಾಜಸೂಯಯಾಗ, ಗಣೇಶಪೂಜೆ ........................ 410
114 ಉಷೆ ಅನಿರುದ್ಧರ ಗಾಂಧರ್ವವಿವಾಹ........................ 413
115 ಬಾಣ ಅನಿರುದ್ಧರ ಸಂವಾದ........................ 418
116 ಬಾಣಾಸುರ ಅನಿರುದ್ಧರ ಯುದ್ಧ ........................ 424
117 ಶಿವ ಗಣೇಶರ ಸಂವಾದ ........................ 426
118 ದುರ್ಗೆ ಶಿವರ ಸಂವಾದ ........................ 427
119 ಬಲಿ ಪಠಿಸಿದ ಶ್ರೀಕೃಷ್ಣನ ಸ್ತೋತ್ರ ........................ 429
120 ಬಾಣಾಸುರ ಕೃಷ್ಣರ ಯುದ್ಧ ........................ 433
121 ಶೃಗಾಲ ವಾಸುದೇವನ ಮೋಕ್ಷ........................ 436
122 ಸ್ಯಮಂತಕಮಣಿ ಹರಣ ........................ 439
123 ಗಣೇಶಪೂಜೆ ........................ 441
124 ಬ್ರಹ್ಮ ಶಿವ ಶೇಷರು ಮಾಡಿದ ರಾಧಾಸ್ತೋತ್ರ........................ 444
125 ವಸುದೇವನ ರಾಜಸೂಯಯಾಗ........................ 449
126 ರಾಧಾ ಮಾಧವರ ಪುನರ್ಮಿಲನ ........................ 452
127 ವೃಂದಾವನಕ್ಕೆ ಶ್ರೀಕೃಷ್ಣನ ಆಗಮನ........................ 457
128 ರಾಧೆಯ ಗೋಲೋಕಾರೋಹಣ........................ 459
129 ಶ್ರೀಕೃಷ್ಣನ ಗೋಲೋಕಾರೋಹಣ........................ 462
130 ನಾರದ ವಿವಾಹ........................ 468
131 ವಹ್ನಿಯ ಮತ್ತು ಸುವರ್ಣದ ಉತ್ಪತ್ತಿ ........................ 471
132 ಅನುಕ್ರಮಣಿಕೆ ........................ 473
133 ಪುರಾಣಶ್ರವಣದ ಫಲ ........................ 476

—೦—

# ಬ್ರಹ್ಮವೈವರ್ತ ಮಹಾಪುರಾಣ
## (ದ್ವಿತೀಯಭಾಗ)

# ಶ್ರೀಕೃಷ್ಣಜನ್ಮಖಂಡ
## ಪೂರ್ವಾರ್ಧ

ವಿಷ್ಣು ವೈಷ್ಣವ ಗುಣಪ್ರಶಂಸೆ | ಅಧ್ಯಾಯ - ೧

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥**

**ನಾರದ:-** ಮುನಿಯೆ, ನಾನು ಮೊದಲಿಗೆ ಪೂಜ್ಯ ತಂದೆಯಾದ ಬ್ರಹ್ಮನ ಮುಖದಿಂದ ಅದ್ಭುತವಾದ ಬ್ರಹ್ಮಖಂಡವನ್ನು ಕೇಳಿದೆ. ಬಳಿಕ ಅವರಾಜ್ಞೆಯಂತೆ ನಿಮ್ಮ ಬಳಿಗೆ ಬಂದು ಅಮೃತದಂತಿರುವ ಪ್ರಕೃತಿಖಂಡವನ್ನೂ ಗಣಪತಿಖಂಡವನ್ನೂ ಕೇಳಿದ್ದೇನೆ. ಇನ್ನೂ ನನ್ನ ಮನಸ್ಸಿಗೆ ತೃಪ್ತಿ ಇಲ್ಲ. ಶ್ರೀಕೃಷ್ಣಜನ್ಮಖಂಡವನ್ನೂ ವಿಸ್ತಾರವಾಗಿ ನನಗೆ ಉಪದೇಶಿಸು. ಅದು ಮಾನವರಿಗೆ ಜನನಮರಣರೂಪ ಸಂಸಾರವನ್ನು ಕಳೆಯುವಂಥಹುದು, ಸಮಸ್ತ ತತ್ವಗಳ ಮೇಲೆ ಬೆಳಕು ಚೆಲ್ಲುವುದು. ಕರ್ಮಬಂಧ ನಾಶಮಾಡುವುದು, ಹರಿಭಕ್ತಿ ನೀಡುವುದು. ವೈರಾಗ್ಯ ನೀಡುವುದು, ಸಂಸಾರದ ಮೇಲಿನ ಆಸಕ್ತಿಯನ್ನು ದೂರಮಾಡುವುದು. ಮುಕ್ತಿಬೀಜಗಳಿಗೆ ಕಾರಣ. ಸಂಸಾರಸಾಗರವನ್ನು ದಾಟಿಸುವ ಉತ್ತಮ ಸಾಧನ. ಕರ್ಮಭೋಗರೂಪದ ರೋಗಕ್ಕೆ ನಾಶಕವಾದ ರಸಾಯನ. ಶ್ರೀಕೃಷ್ಣ ಚರಣಕಮಲಪ್ರಾಪ್ತಿಗೆ ಸೋಪಾನ. ವೈಷ್ಣವರಿಗಿದುವೇ ಜೀವನ. ಮೂಲೋಕಕ್ಕೆ ಪಾವನ. ನಾನು ನಿಮ್ಮನ್ನು ಶರಣು ಬಂದಿರುವ ಭಕ್ತ, ಶಿಷ್ಯ. ಆದರಿಂದ ನನಗೆ ಶ್ರೀಕೃಷ್ಣ ಜನ್ಮಖಂಡದ ಕಥೆಯನ್ನು ವಿಸ್ತಾರವಾಗಿ ಹೇಳಿರಿ.

ಪರಿಪೂರ್ಣ ಪರಮಾತ್ಮ ಶ್ರೀಕೃಷ್ಣ ಯಾರ ಪ್ರಾರ್ಥನೆಯಂತೆ ಪೂರ್ಣಾಂಶದಿಂದ ಭೂಮಿಯಲ್ಲಿ ಅವತರಿಸಿದ? ಯಾವ ಯುಗದಲ್ಲಿ ಯಾವ ನಿಮಿತ್ತದಿಂದ ಎಲ್ಲಿ ಅವನ ಆವಿರ್ಭಾವವಾಯಿತು? ಅವನ ತಂದೆ ವಸುದೇವ ಹಿಂದೆ ಯಾರು? ಮಾತೆ ದೇವಕಿ ಹಿಂದೆ ಯಾರು? ಯಾವ ಕುಲದಲ್ಲಿ ಭಗವಂತ ಅವತಾರಲೀಲೆಯನ್ನು ಕೈಗೊಂಡ? ಯಾವ ರೂಪದಿಂದ ಏನು ಲೀಲೆ ಮಾಡಿದ? ಶ್ರೀಕೃಷ್ಣ ಕಂಸನ ಭಯದಿಂದ ಮಧುರೆಯಿಂದ ಗೋಕುಲಕ್ಕೆ ಹೋದನೆಂದು ಕೇಳಿದ್ದೇನೆ. ಭಯಕ್ಕೆ ಸ್ವಾಮಿಯಾದ ಶ್ರೀಕೃಷ್ಣನಿಗೆ ಕೀಟಸಮಾನನಾದ ಕಂಸನಿಂದ ಭಯವೆ? ಅವನು ಗೋಪಾಲಕ ವೇಷ ಧರಿಸಿ ಗೋಕುಲದಲ್ಲಿ ಏನು ಲೀಲೆ ಮಾಡಿದ್ದಾನೆ? ಜಗದೀಶ್ವರನಾದರೂ ಗೊಲ್ಲರ ಹೆಣ್ಣುಗಳೊಂದಿಗೆ ಏಕೆ ವಿಹಾರ ಮಾಡಿದ? ಈ ಗೊಲ್ಲರ ಹೆಣ್ಣುಗಳು ಯಾರು?

ಗೋಪಾಲಬಾಲರು ಯಾರು? ಯಶೋದೆ ಯಾರು? ನಂದ ಯಾರು? ಅವರೇನು ಪುಣ್ಯ ಮಾಡಿದ್ದರು? ಶ್ರೀಕೃಷ್ಣನ ಪ್ರೇಯಸಿ ಗೋಲೋಕವಾಸಿನಿ ಪುಣ್ಯವತಿ ದೇವಿ ಶ್ರೀರಾಧೆ ಏಕೆ ಗೋಕುಲದಲ್ಲಿ ಹುಟ್ಟಿದಳು? ಗೋಪಿಯರು ದುರ್ಲಭನಾದ ಶ್ರೀಕೃಷ್ಣನನ್ನು ಹೇಗೆ ಹೊಂದಿದರು? ಅವರೆಲ್ಲರನ್ನೂ ಮುಂದೆ ಶ್ರೀಕೃಷ್ಣ ತೊರೆದು ಮಥುರೆಗೆ ಏಕೆ ತೆರಳಿದ? ಭೂಭಾರಹರಣ ಮಾಡಿ ಏನೆಲ್ಲ ಲೀಲೆಗಳನ್ನು ನಡೆಸಿ ಶ್ರೀಕೃಷ್ಣ ಪರಂಧಾಮಕ್ಕೆ ತೆರಳಿದ? ಮುನಿಯೆ, ನೀವು ನನಗೆ ಶ್ರೀಕೃಷ್ಣನ ಈ ಅವತಾರ ಲೀಲೆಗಳನ್ನು ಹೇಳಿರಿ. ಅವುಗಳ ಶ್ರವಣ ಕೀರ್ತನಗಳು ಪುಣ್ಯಕರವಾಗಿವೆ. ಶ್ರೀಹರಿಯ ಕಥೆ ಅತ್ಯಂತ ದುರ್ಲಭ. ಸಂಸಾರಸಾಗರ ದಾಟಲು ನೌಕೆಯಂತಿದೆ. ಪ್ರಾರಬ್ಧ ಭೋಗದ ಬಂಧನ ಕ್ಲೇಶಗಳನ್ನು ಹರಿದೊಗೆಯುತ್ತದೆ. ಪಾಪರೂಪದ ಉರುವಲುಗಳನ್ನು ದಹಿಸುವ ಅಗ್ನಿಜ್ವಾಲೆಯಂತಿದೆ. ಕೋಟಿ ಜನ್ಮಗಳ ಪಾಪರಾಶಿಯನ್ನು ನಾಶಮಾಡಬಲ್ಲುದು. ಶೋಕಸಾಗರವನ್ನು ಬತ್ತಿಸುವ ಕರ್ಣಾಮೃತ. ನಾನು ನಿಮ್ಮ ಭಕ್ತ, ಶಿಷ್ಯ. ನನಗೆ ಹರಿಕಥಾ ಜ್ಞಾನ ಪ್ರದಾನ ಮಾಡಿರಿ. ತಪ ಜಪ ದಾನ ತೀರ್ಥಯಾತ್ರೆ ವೇದಾಧ್ಯಯನ ಉಪವಾಸ ವ್ರತ ದೇವಪೂಜೆ ಯಾಗಾನುಷ್ಠಾನಗಳಿಂದ ಮಾನವನಿಗೆ ಬರುವ ಎಲ್ಲ ಫಲವೂ ಜ್ಞಾನದಾನದ ಹದಿನಾರನೆ ಒಂದಂಶಕ್ಕೆ ಸಮಾನವಾಗದು. ತಂದೆ ಬ್ರಹ್ಮದೇವ ನನ್ನನ್ನು ಜ್ಞಾನಸಂಪಾದನೆಗಾಗಿ ನಿಮ್ಮ ಬಳಿ ಕಳಿಸಿದ್ದಾನೆ. ಅಮೃತ ಸಮುದ್ರದ ಬಳಿಗೆ ಬಂದು ಬೇರೆ ನೀರು ಕುಡಿಯಲು ಯಾರು ಬಯಸುತ್ತಾನೆ?

**ಶ್ರೀನಾರಾಯಣ ಮುನಿ:-** ನಾರದ, ನಾನು ನಿನ್ನನ್ನು ಚೆನ್ನಾಗಿ ಬಲ್ಲೆ. ನೀನು ಧನ್ಯ, ಮೂರ್ತಿಮತ್ತಾದ ಪುಣ್ಯರಾಶಿ ನೀನು. ಕುಲಪಾವನ. ಲೋಕವನ್ನು ಪಾವನಗೊಳಿಸಲು ನೀನು ಎಲ್ಲೆಡೆ ಸಂಚರಿಸುವಿ. ಒಬ್ಬನ ಶಿಷ್ಯ, ಪತ್ನಿ, ಮಗಳು, ಬಂಧು ಬಾಂಧವರು, ಮಕ್ಕಳು ಮೊಮ್ಮಕ್ಕಳು, ಮಾತು, ಪ್ರತಾಪ, ಯಶಸ್ಸು, ಸಂಪತ್ತು, ಬುದ್ಧಿ ಶತ್ರು ವಿದ್ಯೆ ಇವುಗಳಿಂದ ಆವ್ಯಕ್ತಿಯ ಹೃದಯವನ್ನು ಅರಿಯಬಹುದು. ನೀನು ಜೀವನ್ಮುಕ್ತ, ಹರಿಭಕ್ತ, ಚರಣಧೂಲಿಯಿಂದ ಭೂಮಿಯನ್ನು ಪವಿತ್ರಗೊಳಿಸುವವ. ಎಲ್ಲ ಜನರಿಗೂ ಅವರ ಸ್ವರೂಪ ದರ್ಶನ ಮಾಡಿಸಿ ಪವಿತ್ರರನ್ನಾಗಿಸುತ್ತಿ. ಭಗವಾನ್ ಶ್ರೀಹರಿಯ ಚರಿತ್ರೆ ಪರಮ ಮಂಗಳಕರ. ಆದರಿಂದ ಅದನ್ನು ನೀನು ಕೇಳಲು ಬಯಸಿರುವಿ. ಹರಿಕಥೆ ನಡೆಯುವಲ್ಲಿ ಎಲ್ಲ ದೇವತೆಗಳು ನೆಲೆಸುತ್ತಾರೆ. ಋಷಿಮುನಿಗಳೂ ಸಕಲ ತೀರ್ಥಗಳೂ ನೆಲೆಸುತ್ತಾರೆ. ಆಸ್ಥಳವೂ ಪವಿತ್ರ ತೀರ್ಥವಾಗುತ್ತದೆ. ಆದರಿಂದ ಕೋಟಿಜನ್ಮಗಳಲ್ಲಿ ತಪಸ್ಸು ಮಾಡಿ ಪವಿತ್ರರಾದವರೇ ಭಾರತದಲ್ಲಿ ಜನ್ಮತಳೆಯುತ್ತಾರೆ. ಹರಿಕಥಾಮೃತ ಪಾನಮಾಡಿ ಜನ್ಮ ಸಾಫಲ್ಯ ಪಡೆಯುತ್ತಾರೆ.

ಅರ್ಚನಂ ವಂದನಂ ಮಂತ್ರಜಪಂ ಸೇವನಮೇವ ಚ ।
ಸ್ಮರಣಂ ಕೀರ್ತನಂ ಶಶ್ವದ್‌ಗುಣಶ್ರವಣಮೀಪ್ಸಿತಂ
ನಿವೇದನಂ ಸ್ವಸ್ಯ ದಾಸ್ಯಂ ನವಧಾ ಭಕ್ತಿಲಕ್ಷಣಂ ॥

ಅರ್ಚನ, ವಂದನ, ಮಂತ್ರಜಪ, ಸೇವೆ, ಸ್ಮರಣ, ಕೀರ್ತನ, ನಿರಂತರಗುಣಶ್ರವಣ, ಆತ್ಮನಿವೇದನ, ಮತ್ತು ದಾಸ್ಯ ಇವು ಒಂಬತ್ತು ಹರಿಭಕ್ತಿಯ ಲಕ್ಷಣಗಳು. ಇವೆಲ್ಲವನ್ನೂ

ಅನುಷ್ಠಾನಮಾಡಿದಾಗ ಮಾನವನ ಜನ್ಮ ಸಫಲವಾಗುವುದು. ಅವನಿಗೆ ಯಾವ ಕಾರ್ಯದಲ್ಲಿಯೂ ವಿಘ್ನಬರುವುದಿಲ್ಲ. ಪೂರ್ಣ ಆಯುಷ್ಯಕ್ಕೆ ಕುಂದು ಬರುವುದಿಲ್ಲ. ಅವನ ಮುಂದೆ ಮೃತ್ಯು ಗರುಡನ ಮುಂದೆ ಹಾವಿನಂತೆ ಸುಳಿಯಲು ಭಯಪಡುತ್ತದೆ. ಶ್ರೀಹರಿ ಅಂಥ ಭಕ್ತನನ್ನು ಅರಗಳಿಗೆ ಬಿಟ್ಟಗಲನು. ಅಣಿಮಾ ಮುಂತಾದ ಸಿದ್ಧಿಗಳು ಅವನ ಸೇವೆಗೆ ಸದಾ ಸಿದ್ಧವಿರುತ್ತವೆ. ಹರಿಯಾಜ್ಞೆಯಿಂದ ಅವನ ರಕ್ಷಣೆಗೆ ಸುದರ್ಶನ ಚಕ್ರ ಹಗಲು ರಾತ್ರಿ ತಿರುಗುತ್ತದೆ ಎಂದಮೇಲೆ ಅವನಿಗೆ ಯಾರೇನು ಅಪಾಯ ಮಾಡಬಲ್ಲರು? ಉರಿವ ಬೆಂಕಿಯ ಬಳಿಗೆ ಪತಂಗಗಳಂತೆ ಅವನ ಬಳಿಗೆ ಯಮದೂತರೂ ಬರಲು ಅಂಜುವರು. ಅವನಲ್ಲಿ ಋಷಿಮುನಿಗಳು, ಸಿದ್ಧರು, ದೇವತೆಗಳು ಎಲ್ಲರೂ ಪ್ರಸನ್ನರಾಗಿರುತ್ತಾರೆ. ಶ್ರೀಕೃಷ್ಣನ ಕೃಪೆಯಿಂದ ಅವನು ಎಲ್ಲಕಡೆ ಸುಖಿ, ನಿರ್ಭೀತನಾಗಿರುತ್ತಾನೆ. ನಿನಗೆ ಹರಿಕಥೆಯಲ್ಲಿ ಬಹಳ ಆಸಕ್ತಿ. ಇದು ಸಹಜವೆ. ತಂದೆಯ ಗುಣ ಮಗನಲ್ಲಿ ಕಾಣುತ್ತದೆ ತಾನೆ? ನೀನು ಬ್ರಹ್ಮನ ಮಾನಸಪುತ್ರ. ಒಂದು ಕುಲದಲ್ಲಿ ಹುಟ್ಟಿದವರಲ್ಲಿ ಆ ಕುಲಾನುಸಾರವೇ ಬುದ್ಧಿ ಬರುತ್ತದೆ. ನಿನ್ನ ತಂದೆ ಶ್ರೀಕೃಷ್ಣನ ಚರಣಾರವಿಂದಗಳ ಸೇವೆಯಿಂದ ಬ್ರಹ್ಮಪದವಿ ಪಡೆದಿದ್ದಾನೆ. ಅವನು ನಿರಂತರ ನವವಿಧಭಕ್ತಿ ಮಾಡುತ್ತಾನೆ.

ಯಾರಿಗೆ ಶ್ರೀಕೃಷ್ಣನ ಕಥೆಯಲ್ಲಿ ಅನುರಾಗವಿದೆಯೋ ಕಥೆ ಕೇಳಿದಾಗ ಕಣ್ಣಲ್ಲಿ ನೀರು ಸುರಿಯುವುದೋ ಮೈನವಿರೇಳುವುದೋ ಮನಸ್ಸು ತನ್ಮಯವಾಗುವುದೋ ಅವನನ್ನೇ ನಿಜವಾದ ಭಕ್ತನೆನ್ನುತ್ತಾರೆ ಬಲ್ಲವರು. ಯಾರು ಮನೋವಾಕ್ ಕಾಯಗಳಿಂದ ಹೆಂಡತಿ ಮಕ್ಕಳು ಮುಂತಾದವೆಲ್ಲವನ್ನೂ ಹರಿಯ ಸ್ವರೂಪವೆಂದು ತಿಳಿಯುವನೋ ಅವನನ್ನೇ ನಿಜವಾದ ಭಕ್ತನೆನ್ನುತ್ತಾರೆ. ಯಾರಿಗೆ ಎಲ್ಲ ಪ್ರಾಣಿಗಳಲ್ಲಿ ದಯೆ ಇದೆಯೋ ಸಮಸ್ತ ಪ್ರಪಂಚದಲ್ಲಿ ಕೃಷ್ಣನೆಂಬ ಭಾವನೆಯಿದೆಯೋ ಅವನನ್ನೇ ನಿಜವಾದ ಭಕ್ತನೆನ್ನುತ್ತಾರೆ. ಯಾರು ನಿರ್ಜನಪ್ರದೇಶದಲ್ಲಿ ತೀರ್ಥಸಂಪರ್ಕದಲ್ಲಿ ವಿಷಯಾಸಕ್ತಿ ತೊರೆದು ಆನಂದದಿಂದ ಹರಿಯ ಪಾದಕಮಲಗಳನ್ನು ನೆನೆಯುವನೋ ಅವನನ್ನೇ ನಿಜವಾದ ಭಕ್ತನೆನ್ನುತ್ತಾರೆ. ಯಾರು ಭಗವಂತನ ನಾಮಸಂಕೀರ್ತನ ಗುಣಗಾನ ಮಂತ್ರಜಪ ಕಥಾಶ್ರವಣ ಕಥನಗಳಲ್ಲಿ ನಿರತನಾಗುವನೋ ಅವನನ್ನೇ ನಿಜವಾದ ಭಕ್ತನೆನ್ನುತ್ತಾರೆ. ಇಷ್ಟವಾದ ವಸ್ತುಗಳು ಸಿಕ್ಕಾಗ ಒಡನೆ ಅವನ್ನು ಹರಿಗೆ ಅರ್ಪಿಸಲು ಯಾರು ತವಕಗೊಳ್ಳುವನೋ ಅವನನ್ನೇ ನಿಜವಾದ ಭಕ್ತನೆನ್ನುತ್ತಾರೆ. ಹಗಲು ರಾತ್ರಿ ಜಾಗರಸ್ವಪ್ನಗಳಲ್ಲಿ ಯಾರು ಹರಿಯ ಚರಣಕಮಲಗಳನ್ನೇ ಚಿಂತಿಸುತ್ತ ಬಾಹ್ಯಶರೀರದಿಂದ ಕರ್ಮಫಲ ಉಣ್ಣುತ್ತಾನೋ ಅವನನ್ನೇ ನಿಜವಾದ ಭಕ್ತನೆನ್ನುತ್ತಾರೆ. ತೀರ್ಥಗಳು ಇಂಥ ವೈಷ್ಣವರ ದರ್ಶನ ಸ್ಪರ್ಶಗಳನ್ನೇ ಬಯಸುತ್ತವೆ. ಏಕೆಂದರೆ ಅವರಿಗೆ ಪಾಪಿಗಳ ಸಂಪರ್ಕದಿಂದ ತಗುಲಿದ ಪಾಪವೆಲ್ಲ ವೈಷ್ಣವಸಂಗದಿಂದ ಪರಿಹಾರವಾಗಬೇಕು. ಹಸು ಹಾಲು ಕರೆವಷ್ಟು ಹೊತ್ತಾದರೂ ವೈಷ್ಣವರು ನಿಂತ ನೆಲದಲ್ಲಿ ಎಲ್ಲ ತೀರ್ಥಗಳು ನೆಲೆಸುತ್ತವೆ. ಅಲ್ಲಿ ಮರಣ ಹೊಂದುವ ಪಾಪಿಮಾನವ ಜ್ಞಾನಗಂಗೆಯಲ್ಲಿ ಮಿಂದು ಅಂತ್ಯಕಾಲದಲ್ಲಿ ಹರಿಸ್ಮರಣೆ ಗೈದ ಮಾನವನಂತೆಯೇ ವಿಷ್ಣುಲೋಕವನ್ನು ಹೊಂದುತ್ತಾನೆ. ತುಲಸಿಯ ವನದಲ್ಲಿ ಗೋಶಾಲೆಯಲ್ಲಿ

ಕೃಷ್ಣಮಂದಿರದಲ್ಲಿ ವೃಂದಾವನದಲ್ಲಿ ಹರಿದ್ವಾರದಲ್ಲಿ ಅಥವಾ ಬೇರೆ ತೀರ್ಥಗಳಲ್ಲಿ ಮರಣ ಹೊಂದುವ ಮಾನವನಂತೆಯೇ ವಿಷ್ಣುಲೋಕ ಪಡೆಯುತ್ತಾನೆ. ತೀರ್ಥಗಳಲ್ಲಿ ಸ್ನಾನ ಮಾಡಿದಾಗ ಪಾಪಿಯ ಪಾಪಗಳು ನೀರಲ್ಲಿ ತೊಳೆದು ಹೋಗುತ್ತವೆ. ಆದರೆ ಆಪಾಪಗಳನ್ನು ತೀರ್ಥಗಳು ವಿಷ್ಣುಭಕ್ತರ ಮೈ ಸೋಕಿದ ಗಾಳಿಯ ಸಂಪರ್ಕದಿಂದಲೇ ಕಳೆದುಕೊಳ್ಳಬೇಕಾಗುತ್ತದೆ.

ಯಾರು ವಿಷ್ಣು ವೈಷ್ಣವರ ನಿಂದೆ ಮಾಡುವನೋ ಅವನಿಗೆ ಅವನ ನೂರು ಜನ್ಮಗಳ ಪುಣ್ಯರಾಶಿ ನಷ್ಟವಾಗುತ್ತದೆ. ಆ ಪಾಪಿಮಾನವ ವಿಷ್ಣುಭಕ್ತರ ಸಂಪರ್ಕದಿಂದಲೇ ಪಾಪಮುಕ್ತನಾಗಬೇಕು. ಪಾಪಿಯ ಸಂಪರ್ಕದಿಂದ ವಿಷ್ಣುಭಕ್ತರಲ್ಲಿ ಬಂದು ಸೇರಿದ ಪಾಪವನ್ನು ಅವರ ಅಂತಃಕರಣದಲ್ಲಿ ನೆಲೆಸಿದ ಭಗವಾನ್ ಹರಿಯೇ ನಾಶಮಾಡುತ್ತಾನೆ. ಇದು ವಿಷ್ಣು ವೈಷ್ಣವರ ಮಹಿಮೆ. ಇನ್ನು ಹರಿಯ ಅವತಾರ ಪ್ರಸಂಗವನ್ನು ಹೇಳುತ್ತೇನೆ ಕೇಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ವಿಷ್ಣುವೈಷ್ಣವರ ಗುಣಪ್ರಶಂಸಾ ಪ್ರಸ್ತಾವ ವರ್ಣನವೆಂಬ ಮೊದಲನೆಯ ಅಧ್ಯಾಯ ಮುಗಿಯಿತು*

—o—

## ವಿರಜಾನದೀ ಉದ್ಭವ

ಅಧ್ಯಾಯ - ೨

**ಶ್ರೀನಾರಾಯಣಮುನಿ:-** ಶ್ರೀಕೃಷ್ಣ ಯಾರ ಪ್ರಾರ್ಥನೆಯಂತೆ ಭೂಮಿಯಲ್ಲಿ ಅವತರಿಸಿದ? ಏನೇನು ಕಾರ್ಯಮಾಡಿ ಪರಂಧಾಮಕ್ಕೆ ತೆರಳಿದ? ಭೂಭಾರಹರಣಕ್ಕೆ ದುಷ್ಟರ ನಾಶಕ್ಕೆ ಅವನು ಮಾಡಿದ ಉಪಾಯ ಎಲ್ಲವನ್ನೂ ಹೇಳುತ್ತೇನೆ, ಕೇಳು. ಅವನು ಗೋಪವೇಷ ತೊಟ್ಟು ಗೋಕುಲಕ್ಕೆ ಬಂದುದೇಕೆ? ರಾಧೆ ಗೋಪಿಯಾದಳೇಕೆ? ಎಂಬುದನ್ನೂ ಹೇಳುತ್ತೇನೆ. ಶಂಖಚೂಡವಧವನ್ನು ಹಿಂದೆ ಸಂಕ್ಷೇಪವಾಗಿ ಹೇಳಿದ್ದನ್ನು ನೀನು ಕೇಳಿರುವಿ. ಈಗ ಅದನ್ನೂ ವಿಸ್ತಾರವಾಗಿ ಹೇಳುತ್ತೇನೆ ಕೇಳು.

ಶ್ರೀದಾಮನಿಗೆ ರಾಧೆಯೊಡನೆ ಜಗಳವಾಯಿತು. ಅವಳ ಶಾಪದಿಂದ ಶ್ರೀದಾಮ ಶಂಖಚೂಡನಾಗಿ ಹುಟ್ಟಿದ. ಶ್ರೀದಾಮನೂ ರಾಧೆಯನ್ನು ಗೋಕುಲದಲ್ಲಿ ಗೋಪಿಯಾಗಿ ಜನಿಸೆಂದು ಶಪಿಸಿದ. ರಾಧೆ ಕೃಷ್ಣನ ವಿರಹಭಯದಿಂದ ಕೃಷ್ಣನಲ್ಲಿ ಕೇಳಿಕೊಂಡಳು. 'ನಿನ್ನನ್ನು ಬಿಟ್ಟು ನಾನು ಹೇಗೆ ಬದುಕಲಿ? ಒಂದು ಕ್ಷಣವೂ ಯುಗವಾದೀತು. ನಾನೀಗ ಕಣ್ಣು ಎವೆಯಿಕ್ಕದೆ ಶರತ್ಕಾಲದ ಚಂದ್ರನಂಥ ನಿನ್ನ ಮುಖವನ್ನು ಚಕೋರಪಕ್ಷಿಯಂತೆ ಕಣ್ಣುಗಳಿಂದ ಹಗಲು ರಾತ್ರಿ ಎನ್ನದೆ ಸದಾ ಪಾನಮಾಡುತ್ತಿದ್ದೇನೆ. ನೀನೇ ನನ್ನ ಆತ್ಮ ಮನಸ್ಸು ಪ್ರಾಣ ಎಲ್ಲವೂ. ದೇಹಮಾತ್ರ ನನ್ನದು. ನನ್ನ ಕಣ್ಣಿನ ದೃಷ್ಟಿಶಕ್ತಿಯೂ ನೀನೆ. ಬಾಳೂ ನೀನೆ, ಸಂಪತ್ತೂ ನೀನೆ.

ಕನಸಿನಲ್ಲೂ ನಾ ನಿನ್ನನ್ನೇ ಧ್ಯಾನಿಸುವೆ. ನಿನ್ನ ಪಾದಕಮಲವನ್ನೇ ನೆನೆವೆ. ನಾಥ, ನೀನಿಲ್ಲದೆ ಒಂದು ಕ್ಷಣವೂ ಬದುಕಲಾರೆ'.

ಶ್ರೀಕೃಷ್ಣ ರಾಧೆಯನ್ನು ಬಿಗಿದಪ್ಪಿ ಸಮಾಧಾನ ಹೇಳಿದ, ಅವಳ ಭಯವನ್ನು ಕಳೆದ. 'ನಾನೂ ನಿನ್ನೊಂದಿಗೇ ಭೂಮಿಗೆ ಹೋಗುತ್ತೇನೆ. ಗೋಕುಲದಲ್ಲಿ ನಿನ್ನೊಂದಿಗೇ ವಿಹರಿಸುತ್ತೇನೆ. ನನಗೆ ಪ್ರಾಣಕ್ಕಿಂತ ಮಿಗಿಲು ನೀನು. ನಾನಿರುವಾಗ ನಿನಗೇತರ ಭಯ?. ಹೀಗೆ ಶ್ರೀಕೃಷ್ಣ ಭೂಮಿಯಲ್ಲಿ ಅವತರಿಸಬೇಕಾಯಿತು. ನಂದಗೋಕುಲಕ್ಕೆ ಹೋಗಬೇಕಾಯಿತು, ಹೊರತು, ಎಲ್ಲರ ಭಯವನ್ನು ಕಳೆವ ಅವನಿಗೆ ಕಂಸನಿಂದ ಏತರ ಭಯ? ಭಯದ ಸೋಗಿನಿಂದ ಆತ ರಾಧೆಯ ಬಳಿಸಾರಿದ್ದ. ಗೋಪಾಲಕ ವೇಷ ತೊಟ್ಟು ಅವಳೊಡನೆ ವಿಹರಿಸಿದ್ದ. ಗೊಲ್ಲರ ಹೆಣ್ಣುಗಳೊಡನೆಯೂ ವಿಹರಿಸಿದ. ಬ್ರಹ್ಮನ ಪ್ರಾರ್ಥನೆಯಿಂದ ಭೂಮಿಯಲ್ಲಿ ಅವತರಿಸಿ ಭೂಭಾರವನ್ನು ಕಳೆದು ಪರಂಧಾಮಕ್ಕೆ ತೆರಳಿದ.

**ನಾರದ:-** ಶ್ರೀದಾಮನಿಗೆ ರಾಧೆಯೊಡನೆ ಜಗಳ ಹೇಗಾಯಿತು? ಹಿಂದೆ ಸಂಕ್ಷೇಪವಾಗಿ ಹೇಳಿರುವಿರಿ. ಅದನ್ನೇ ವಿಸ್ತಾರವಾಗಿ ಹೇಳಿರಿ.

**ನಾರಾಯಣಮುನಿ:-** ಒಮ್ಮೆ ರಾಧೆಯೊಡನೆ ಗೋಲೋಕದಲ್ಲಿ ಶ್ರೀಹರಿ ರಾಸಮಂಡಲದಲ್ಲಿ ಏಕಾಂತದಲ್ಲಿ ವಿಹರಿಸಿದ. ರಾಧೆ ಸುಖಾನುಭವದಲ್ಲಿ ಮೈ ಮರೆತಳು. ಆಗ ಶ್ರೀಹರಿ ಅವಳಿಗೆ ಹೇಳದೆ ಅಲ್ಲಿಂದ ಹೊರಟು ವಿರಜಾ ಎಂಬ ಇನ್ನೊಬ್ಬಳು ಗೋಪಿಯನ್ನು ಸೇರಿದ. ಅವಳು ರಾಧೆಗೆ ಸಮಾನಳು. ಅವಳಿಗೆ ನೂರು ಕೋಟಿ ಗೋಪಿಯರು ಸಖಿಯರು. ರತ್ನಸಿಂಹಾಸನದಲ್ಲಿ ಅವಳು ಬಳಿಯಲ್ಲಿ ಹರಿಯನ್ನು ಕಂಡಳು. ಹರಿಯೂ ಶರತ್ಕಾಲದ ಚಂದ್ರನಂಥ ಅವಳ ಮುಖವನ್ನು ಕಂಡ. ಹರಿಗೆ ಪ್ರಾಣಕ್ಕಿಂತ ಮಿಗಿಲು ಅವಳು. ಸ್ತ್ರೀಯರಲ್ಲೆಲ್ಲ ಅಗ್ರಮಾನ್ಯಳು. ಓರೆನೋಟದಿಂದ ಹರಿಯನ್ನು ಕಂಡಳು. ಸದಾ ಹದಿನಾರರ ಹರೆಯದವಳು. ನವಯೌವನವತಿ, ರತ್ನಾಲಂಕಾರ ಶೋಭಾಢ್ಯಳು. ಬಿಳಿಸೀರೆಯುಟ್ಟಿದ್ದಳು. ಕಾಮಬಾಣ ಪೀಡಿತಳಾಗಿ ಮೈ ರೋಮಾಂಚನಗೊಂಡಿದ್ದಳು. ಅವಳನ್ನು ಸೇರಿ ಹರಿ ನಿರ್ಜನವಾದ ರತ್ನಮಂಟಪದಲ್ಲಿ ಹೂವಿನ ಹಾಸಿಗೆಯಲ್ಲಿ ವಿಹಾರಮಾಡಿದ. ಅವಳು ಶೃಂಗಾರಸುಖದಲ್ಲಿ ಮೈ ಮರೆತಳು. ಕೋಟಿಮನ್ಮಥರ ಲಾವಣ್ಯದಿಂದ ಬೆಳಗುವ ಪ್ರಾಣೇಶ್ವರನನ್ನು ಎದೆಗೊತ್ತಿಕೊಂಡಳು. ರಾಧೆಯ ಸಖಿಯರು ಈ ಸಂಗತಿಯನ್ನು ರಾಧೆಗೆ ಹೇಳಿದರು. ಅದನ್ನು ಕೇಳಿ ರಾಧೆಗೆ ಪ್ರಣಯಕೋಪದಿಂದ ಕಣ್ಣು ಕೆಂಪಾದುವು ನೀರು ಸುರಿಸಿದುವು. 'ಸಖಿಯರೆ, ನೀವು ಹೇಳುವುದು ನಿಜವಾದರೆ ನನಗೆ ತೋರಿಸಿರಿ, ನನ್ನೊಂದಿಗೆ ನಡೆಯಿರಿ. ಆಗೋಪಿಗೂ ಕೃಷ್ಣನಿಗೂ ತಕ್ಕ ಶಾಸ್ತಿ ಮಾಡುತ್ತೇನೆ. ಯಾರು ನನ್ನನ್ನು ತಡೆಯುತ್ತಾರೆ ನೋಡೋಣ. ಹೊರಗೆ ನಗುಮೊಗ ತೋರಿ ಒಳಗೆ ವಂಚನೆ ಮಾಡುತ್ತಾನೆ ಹರಿ. ಮೇಲೆ ಅಮೃತ, ಒಳಗೆ ವಿಷ ತುಂಬಿದ ಮಡಿಕೆಯಂತೆ. ನೀವು ಎಲ್ಲರೂ ನನ್ನೊಂದಿಗೆ ಬರಬೇಕಾಗಿಲ್ಲ. ಕೆಲವರು ಹರಿಯ ಬಳಿಗೇ ಹೋಗಿರಿ. ಅವನು ಅಲ್ಲಿಂದ ತಪ್ಪಿಸಿಕೊಳ್ಳದಂತೆ ನೋಡಿಕೊಳ್ಳಿರಿ. ನಾನು ಅಲ್ಲಿಗೇ ಬರುವೆ' ಎಂದಳು.

ರಾಧೆಯ ಮಾತನ್ನು ಕೇಳಿ ಸಖಿಯರು ಕೈ ಮುಗಿದು ಭಕ್ತಿನಮ್ರರಾಗಿ ಹೇಳಿದರು. "ಹರಿ ವಿರಜೆಯೊಂದಿಗೆ ವಿಹರಿಸುತ್ತಿರುವುದನ್ನು ನಿನಗೆ ತೋರುವೆವು." ರಾಧೆ ರಥವನ್ನೇರಿದಳು, ಜೊತೆಗೆ ಅರವತ್ತಮೂರು ನೂರು ಕೋಟಿ ಸಖಿಯರೂ ರಥವೇರಿದರು. ಲಕ್ಷ ಚಕ್ರಗಳಿಂದ ಕೂಡಿ ಮನೋವೇಗದಿಂದ ಚಲಿಸುವ ರಥ, ಮಣಿಮಯವಾದ ನಾನಾ ಚಿತ್ರವಿಚಿತ್ರ ಮನೋಹರವಾದ ಕೋಟಿ ಸ್ತಂಭಗಳಿಂದ ಯುಕ್ತವಾದ ರಥ. ರತ್ನಮಯ ಸಿಂಹಗಳಿಂದ, ನಾಲ್ಕು ಲಕ್ಷ ಗಂಟೆಗಳಿಂದ ಲಕ್ಷ ರತಿಮಂದಿರಗಳಿಂದ ಕೂಡಿತ್ತು. ಸಕಲಭೋಗದ್ರವ್ಯಗಳಿಂದ ತುಂಬಿತ್ತು. ರತ್ನಶಯ್ಯೆಗಳಿಂದ ಪಚ್ಚೆಕಲ್ಲಿನ ವೇದಿಕೆಗಳಿಂದ ಕೆಂಪು ಮಣಿಗಳ ಸೋಪಾನಗಳಿಂದ, ಸುಂದರ ಉದ್ಯಾನ, ಕೊಳಗಳಿಂದ ಕೂಡಿದ್ದು ಲಕ್ಷಯೋಜನ ಎತ್ತರ ಹತ್ತುಯೋಜನ ಅಗಲವಾಗಿತ್ತು. ಪಾರಿಜಾತ, ಕುಂದ, ಕರವೀರ, ಸಂಪಿಗೆ ಮಲ್ಲಿಗೆ ಜಾಜಿ ಮುಂತಾದ ಸುಗಂಧ ಪುಷ್ಪಹಾರಗಳಿಂದ ಅಲಂಕೃತವಾಗಿತ್ತು. ಬಿಳಿಚಾಮರಗಳು ಚಂದನ ಅಗುರು ಕಸ್ತೂರಿ ಕುಂಕುಮಗಳಿಂದ ಯುಕ್ತವಾದ ಪಾರಿಜಾತದ ಶಯ್ಯೆಗಳು ಕೋಟಿಗಟ್ಟಲೆ ಆರಥದಲ್ಲಿದ್ದುವು. ಅಂಥ ರಥದಲ್ಲಿ ಪ್ರಯಾಣ ಮಾಡಿ ರಾಧೆ ಹರಿಯ ಬಳಿಗೆ ಬಂದಿಳಿದಳು. ವೇಗವಾಗಿ ರತ್ನಮಂಡಪಕ್ಕೆ ಧಾವಿಸಿದಳು. ಅಲ್ಲಿ ದ್ವಾರದಲ್ಲಿ ಶ್ರೀದಾಮ ನಿಂತಿದ್ದ. ಜೊತೆಗೆ ಲಕ್ಷ ಗೋಪಾಲಕರೂ ನಿಂತಿದ್ದರು. ಶ್ರೀಕೃಷ್ಣನ ಪ್ರೀತಿಯ ಸೇವಕ ಆತ. ದೇವಿ ಕೋಪದಿಂದ ಕಣ್ಣುಕೆಂಪಗಾಗಿಸಿ 'ದೂರ ಸರಿ, ದೂರ ಸರಿ, ಅಸ್ತ್ರೀಲಂಪಟನಾದ ಹರಿಗೆ ನನ್ನನ್ನೂ ಮೀರಿಸಿದ ಪ್ರೇಯಸಿ ಯಾರು ಎನ್ನುವುದನ್ನು ಕಾಣುವೆ'. ರಾಧೆಯ ಮಾತನ್ನು ಕೇಳಿಯೂ ಏನು ಭಯವಿಲ್ಲದೆ ಹಾಗೇ ನಿಂತ ಶ್ರೀದಾಮ ಅವಳಿಗೆ ಪ್ರವೇಶ ನೀಡಲಿಲ್ಲ. ಬೆತ್ತದಿಂದ ತಡೆದು ನಿಲ್ಲಿಸಿದ. ರಾಧೆಯ ಸಖಿಯರು ಆತನನ್ನೂ ಅವನ ಜೊತೆಗಾರರನ್ನೂ ಬಲವಾಗಿ ತಳ್ಳಿದರು. ಗೋಪಿಯರ ಈ ಕೋಲಾಹಲ ಶಬ್ದವನ್ನು ಕೇಳಿದೊಡನೆ ಹರಿ ಅಂತರ್ಧಾನನಾದ. ಹರಿ ರಾಧೆಯ ಶಬ್ದ ಕೇಳಿ ಅಂತರ್ಧಾನನಾದುದನ್ನು ಕಂಡು ವಿರಜೆ ತಾನೂ ಭಯಭೀತಳಾಗಿ ಯೋಗಬಲದಿಂದ ಪ್ರಾಣತ್ಯಾಗಮಾಡಿದಳು. ಅವಳ ಶರೀರ ನದೀರೂಪದಿಂದ ಗೋಲೋಕದ ಸುತ್ತ ವರ್ತುಲಾಕಾರವಾಗಿ ಕೋಟಿ ಯೋಜನ ವಿಸ್ತೀರ್ಣವಾಗಿ ನಾನಾರತ್ನಗಳಿಂದ ಕೂಡಿ ಪ್ರವಹಿಸಿತು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ವಿರಜಾನದೀ ಪ್ರಸ್ತಾವ ವರ್ಣನವೆಂಬ ಎರಡನೆಯ ಅಧ್ಯಾಯ ಮುಗಿದುದು*

—o—

## ಸಪ್ತಸಮುದ್ರ ಜನ್ಮ, ರಾಧಾಶ್ರೀದಾಮ ಶಾಪವೃತ್ತಾಂತ | ಅಧ್ಯಾಯ - ೩

**ನಾರಾಯಣ:-** ರಾಧೆ ರತಿಗೃಹಕ್ಕೆ ಹೋದಳು. ಅಲ್ಲಿ ಹರಿ ಕಾಣಲಿಲ್ಲ. ವಿರಜೆ ಮಾತ್ರ ನದಿಯಾಗಿ ಹರಿಯುತ್ತಿದ್ದುದನ್ನು ಕಂಡು ತನ್ನ ಮನೆಗೇ ಹಿಂತಿರುಗಿದಳು. ಬಳಿಕ ಶ್ರೀಕೃಷ್ಣ ವಿರಜೆ, ತನ್ನ ಪ್ರೀತಿಯ ಸಖಿ, ನದಿಯ ರೂಪ ತಳೆದುದನ್ನು ಕಂಡು ಗಟ್ಟಿಯಾಗಿ ಅತ್ತುಬಿಟ್ಟ. 'ಪ್ರೇಯಸಿ, ನನ್ನ ಬಳಿಗೆ ಬಾ. ನೀನಿಲ್ಲದೆ ನಾನೆಂತು ಬದುಕಿರಲಿ? ಸುಂದರಿ, ನೀನು ನಿನ್ನ ನಿಜರೂಪದಲ್ಲಿ ಬಾ, ಹಿಂದಿನ ರೂಪಕ್ಕಿಂತ ಮಿಗಿಲಾದ ಸುಂದರ ರೂಪದಿಂದ ಬಾ, ಇಗೊ, ನಿನಗೆ ಅಷ್ಟಸಿದ್ಧಿಗಳನ್ನು ನೀಡುತ್ತಿದ್ದೇನೆ.'

ಕೃಷ್ಣನಾಜ್ಞೆಯಿಂದ ವಿರಜೆ ಉತ್ತಮರೂಪದಿಂದ ಸಾಕ್ಷಾದ್ ರಾಧೆಯಂತೆಯೇ ಸುಂದರಿಯಾಗಿ ಹರಿಯ ಮುಂದೆ ಬಂದು ನಿಂತಳು. ಪೀತಾಂಬರದುಡುಗೆ, ಅರಳಿದ ಮುಖಕಮಲ, ಜಘನ ನಿತಂಬಗಳ ಭಾರ, ಪುಷ್ಟವಾದ ಉನ್ನತಸ್ತನಗಳು, ಮದ್ದಾನೆಯ ಮೆಲ್ನಡಿಗೆ, ಮಾನಿನಿಯರಿಗೆ ಮಾನಿನಿ, ಸುಂದರಿಯರಿಗೆ ಸುಂದರಿ ವಿರಜೆ, ತನ್ನನ್ನೇ ದಿಟ್ಟಿಸಿ ನೋಡುವ ಕೃಷ್ಣನನ್ನು ಓರೆ ನೋಟದಿಂದ ನೋಡುತ್ತಿದ್ದಾಳೆ. ಸಂಪಿಗೆ ಮೈ ಬಣ್ಣದವಳು. ತೊಂಡೆ ಹಣ್ಣಿನಂಥ ತುಟಿಯವಳು. ದಾಳಿಂಬೆ ಬೀಜದಂಥ ಹಲ್ಲುಗಳಿಂದ ಮನೋಹರಳಾಗಿದ್ದಾಳೆ. ಶರತ್ಕಾಲದ ಹುಣ್ಣಿಮೆಚಂದ್ರನಂಥ ಮುಖದವಳು. ಅರಳಿದ ತಾವರೆಗಣ್ಣಿನವಳು. ಕಸ್ತೂರಿ ಸಿಂಧೂರಗಳ ಬೊಟ್ಟುಗಳಿಂದ ಕೆನ್ನೆಯಲ್ಲಿ ಬರೆದ ಪತ್ರಕಗಳಿಂದ ಸುಂದರ ಕೇಶವಿನ್ಯಾಸಗಳಿಂದ ರತ್ನಕುಂಡಲ ರತ್ನಮಾಲೆ ಮುತ್ತಿನ ಮೂಗುತಿ ಮುತ್ತಿನ ಹಾರ, ರತ್ನದ ಬಳೆ, ರತ್ನದ ಗೆಜ್ಜೆಗಳಿಂದ ಒಪ್ಪುವ ರೂಪಸಿಯನ್ನು ಕಂಡು ಜಗನ್ನಾಥ ಒಡನೆ ಬಿಗಿದಪ್ಪಿ ಮತ್ತೆ ಮತ್ತೆ ಮುದ್ದಿಕ್ಕಿದ. ನಾನಾ ಪ್ರಕಾರಗಳ ಶೃಂಗಾರ ಕ್ರೀಡೆಗಳನ್ನು ಏಕಾಂತದಲ್ಲಿ ನಡೆಸಿದ. ವಿರಜೆ ಅಮೋಘವಾದ ಗರ್ಭ ಧರಿಸಿದಳು. ದೇವಮಾನದ ನೂರು ವರ್ಷಗಳಾದ ಬಳಿಕ ಏಳು ಮಂದಿ ಮಕ್ಕಳಿಗೆ ಜನ್ಮವಿತ್ತಳು. ಒಂದು ದಿನ ಹರಿಯೊಡನೆ ಪುನಃ ರತಿಯನ್ನು ಬಯಸಿ ಏಕಾಂತದಲ್ಲಿ ವೃಂದಾವನದಲ್ಲಿ ವಿಹರಿಸತೊಡಗಿದಳು. ಆಗ ಕೊನೆಯ ಮಗ ಅಣ್ಣಂದಿರೊಡನೆ ಜಗಳವಾಡಿ ತಾಯಿಯ ಬಳಿಗೆ ಬಂದುಬಿಟ್ಟ. ಅವನಿಗೆ ಅಸಮಾಧಾನವಾದೀತೆಂದು ಭಯದಿಂದ ಕೃಷ್ಣ ರತಿಕ್ರೀಡೆಯನ್ನು ಅರ್ಧದಲ್ಲಿಯೇ ನಿಲ್ಲಿಸಿ ರಾಧೆಯ ಮನೆಗೆ ಹೊರಟುಹೋದ. ವಿರಜೆ ಮಗನನ್ನು ಸಮಾಧಾನ ಮಾಡಿ ಕೃಷ್ಣನನ್ನು ಬಳಿಯಲ್ಲಿ ಕಾಣದೆ ಅಳತೊಡಗಿದಳು. ಅವಳಿಗೆ ರತಿಕ್ರೀಡೆಯಲ್ಲಿ ತೃಪ್ತಿಯಾಗಿರಲಿಲ್ಲ. ಮಗನಿಗೆ ನೀನು ಲವಣಸಮುದ್ರವಾಗೆಂದು ಶಪಿಸಿದಳು. ನಿನ್ನ ನೀರನ್ನು ಯಾರೂ ಕುಡಿಯದಿರಲಿ ಎಂದಳು. ನೀವು ಎಲ್ಲ ಮಕ್ಕಳೂ ಸಮುದ್ರಗಳಾಗಿ ಬೇರೆಬೇರೆ ದ್ವೀಪಗಳಲ್ಲಿ ವಾಸಮಾಡಿರಿ. ದ್ವೀಪಗಳಲ್ಲಿ ಹರಿವ ನದಿಗಳೊಂದಿಗೆ ಏಕಾಂತದಲ್ಲಿ ವಿಹರಿಸುತ್ತಿರಿ.

ಮಾತೆ ನೀಡಿದ ಈ ಶಾಪವನ್ನು ಮಗ ಅಣ್ಣಂದಿರಿಗೆ ತಿಳಿಸಿದ. ಅವರೆಲ್ಲರೂ ತಾಯಿಯ ಪಾದಗಳಿಗೆ ಭಕ್ತಿಯಿಂದ ನಮಿಸಿ ಏಳು ಸಮುದ್ರಗಳಾಗಿ ನಿಂತರು. ಲವಣ ಇಕ್ಷು ಸುರಾ ಸರ್ಪಿ ದಧಿ ದುಗ್ಧ ಶುದ್ಧೋದಕ ಸಮುದ್ರಗಳು ಒಂದಕ್ಕಿಂತ ಇನ್ನೊಂದು ಕ್ರಮವಾಗಿ ಎರಡು ಪಟ್ಟು ಹೆಚ್ಚು ವಿಸ್ತಾರ ಉಳ್ಳವುಗಳು. ತಾಯಿಗೆ ಮಕ್ಕಳ ಈವಿಯೋಗ ಬಲು ಅಸಹನೀಯವಾಗಿತ್ತು. ವಿರಜೆಗೆ ಈಗ ಬಳಿಯಲ್ಲಿ ಮಕ್ಕಳೂ ಇಲ್ಲ, ಕೃಷ್ಣನೂ ಇಲ್ಲ. ಶೋಕತಪ್ತಳಾಗಿ ಅತ್ತು ಮೂರ್ಛೆಹೊಂದಿದಳು. ಒಡನೆ ರಾಧಾರಮಣ ನಗುಮೊಗದಿಂದ ಬಂದು ಸಂತೈಸಿದ. ಅವಳು ಶೋಕವನ್ನು ತೊರೆದು ಆನಂದಸಾಗರದಲ್ಲಿ ಮುಳುಗಿದಳು. ಹರಿಯೊಡನೆ ವಿಹರಿಸಿದಳು. ಪ್ರಿಯೆ, ನಾನು ನಿತ್ಯ ನಿನ್ನ ಬಳಿಗೆ ಬರುತ್ತೇನೆ. ಇದು ನಿಶ್ಚಯ. ನನಗೆ ರಾಧೆ ಹೇಗೋ ಹಾಗೇ ನೀನು. ನೀನು ನನ್ನ ವರಬಲದಿಂದ ನಿನ್ನ ಮಕ್ಕಳನ್ನೂ ಸದಾ ಕಾಣುವಿ' ಎಂದು ಕೃಷ್ಣ ವರವಿತ್ತ.

ರಾಧೆಯ ಸಖಿಯರು ಈ ವೃತ್ತಾಂತವನ್ನು ರಾಧೆಗೆ ತಿಳಿಸಿದರು. ಅವಳು ಕೇಳಿ ಕುಪಿತಳಾಗಿ ಕೋಪಗೃಹದಲ್ಲಿ ಮಲಗಿದಳು. ಶ್ರೀಕೃಷ್ಣ ಒಡನೆ ಅವಳ ಬಳಿ ಬಂದ. ದೇವಿ ಕೋಪದಿಂದ ನುಡಿದಳು. 'ನನಗಿಂತ ಹೆಚ್ಚಿನ ಪ್ರೇಯಸಿಯರು ನಿನಗೆ ಗೋಲೋಕದಲ್ಲಿ ಬಹು ಮಂದಿ ಇದ್ದಾರೆ, ಹೋಗು, ಅವರ ಬಳಿಗೆ ಹೋಗು. ನಿನ್ನ ಪ್ರೀತಿಯ ವಿರಜೆ ನನ್ನ ಭಯದಿಂದ ನದಿಯಾಗಿ ಹರಿಯುತ್ತಿದ್ದಾಳೆ. ಆದರೂ ನೀನು ಅವಳ ಬಳಿಗೇ ಹೋಗುವಿ. ಹೋಗು, ಅಲ್ಲಿಯೇ ಮನೆ ಮಾಡಿಕೊಂಡಿರು. ಅವಳು ನದಿಯಾದಳು. ನೀನು ನದನಾಗು. ನದನಿಗೆ ನದಿಯೊಂದಿಗೇ ಪ್ರಣಯ ಶೋಭಿಸುತ್ತದೆ. ದೇವೋತ್ತಮನಿಗೆ ನದಿಯೊಡನೆ ರತಿವಿಹಾರವೆಂದು ಜನರು ನಗಲಿ, ಸರ್ವೇಶ್ವರನಿಗೆ ನದಿಯೊಡನೆ ರತಿಕ್ರೀಡೆಯಾಸೆ ಇದೆ ಎಂದು ಅವರಿಗೇನು ಗೊತ್ತು?' ಹೀಗೆ ಕೋಪದಿಂದ ನುಡಿಯುತ್ತ ಮಲಗಿಯೇ ಇದ್ದಳು ರಾಧೆ. ಗೋಪಿಯರು ಅವಳಿಗೆ ಚಾಮರ ಬೀಸಿದರು, ತೆಳುವಾದ ಸೀರೆಗಳನ್ನು ತಂದರು, ತಾಂಬೂಲ ನೀಡಿದರು, ಮಾಲೆಗಳನ್ನಿತ್ತರು, ಸುಗಂಧ ಪಾನೀಯವಿತ್ತರು, ಕಮಲದ ಹೂಗಳನ್ನು ನೀಡಿದರು, ರತ್ನಾಲಂಕಾರ ತೊಡಿಸಿದರು. ಕೊಳಲು ವೀಣೆಗಳನ್ನು ನುಡಿಸಿದರು. ಮೃದಂಗ ಬಾರಿಸಿದರು. ಹಾಡಿದರು, ಕುಣಿದರು, ಅಮೃತ ತಂದಿತ್ತರು, ಕೈ ಮುಗಿದರು, ಸ್ತೋತ್ರಗೈದರು. ಮನೆಯ ಹೊರಗೂ ಕೋಟಿಗಟ್ಟಲೆ ಗೋಪಿಯರು ನಿಂತರು. ದ್ವಾರಪಾಲಕರಾಗಿ ಕೈಯಲ್ಲಿ ಬೆತ್ತ ಹಿಡಿದು ಕೃಷ್ಣನನ್ನು ತಡೆದರು. ಕೃಷ್ಣ ಹೇಗೋ ಒಳಗೆ ಪ್ರವೇಶಿಸಿ ರಾಧೆಯ ಮುಂದೆ ಬಂದು ನಿಂತ. ರಾಧೆ ಕೋಪ ಪರವಶತೆಯಿಂದ ಬಲು ಒರಟಾಗಿ ನುಡಿದಳು.

**ರಾಧೆ:-** ಕೃಷ್ಣ, ವಿರಜಾಕಾಂತ, ಹೋಗು, ನನ್ನಿದಿರಿಂದಾಚೆ ತೊಲಗು. ಸ್ತ್ರೀ ಲಂಪಟ, ನಿನಗೆ ಆ ಪದ್ಮವತಿ, ರತ್ನಮಾಲೆ ವನಮಾಲೆಯರು ಪ್ರೇಯಸಿಯರಿದ್ದಾರೆ. ಅವರ ಬಳಿಗೇ ಹೋಗು. ಅವರೆಲ್ಲರೂ ನಿನಗೆ ಅಪ್ರತಿಮ ರೂಪಸಿಯರು ತಾನೆ? ನೀನು ನದಿಯೊಡನೆ ಕ್ರೀಡಿಸುವವನೆಂಬುದು ನನಗೆ ತಿಳಿದುಹೋಯಿತು. ಮನುಷ್ಯ ಸ್ತ್ರೀಯರನ್ನೂ ಬಯಸುವವನೆಂದೂ ತಿಳಿಯಿತು. ನೀನೀ ಗೋಲೋಕದಿಂದ ತೊಲಗು.

ಭಾರತಭೂಮಿಯಲ್ಲಿ ಮನುಷ್ಯನಾಗಿ ಹುಟ್ಟು. ಸುಶೀಲೆ, ಶಶಿಕಲೆ, ಪದ್ಮವತಿ, ಮಾಧವಿ, ಈತನನ್ನು ಹೊರಗೆ ಅಟ್ಟಿರಿ. ಇವನಿಗೆ ಇಲ್ಲೇನು ಕೆಲಸ?'

ರಾಧೆಯ ಮಾತನ್ನು ಕೇಳಿ ಗೋಪಿಯರು ಕೃಷ್ಣನಿಗೆ ವಿನಯದಿಂದ ಹಿತನುಡಿಯನ್ನು ಹೇಳಿದರು. ಒಬ್ಬಳು ಹೇಳಿದಳು, 'ಶ್ರೀಹರಿ, ನೀನಿಲ್ಲಿಂದ ಹೊರಡು, ಬೇರೆಕಡೆ ಹೋಗು. ರಾಧೆಯ ಕೋಪ ಆರಿದಾಗ ನಾವು ನಿನ್ನ ಬಳಿಗೆ ಬರುತ್ತೇವೆ. ಒಂದು ಕ್ಷಣ, ಬೇರೆ ಮನೆಗೆ ಹೋಗಿರು. ನೀನೇ ಅವಳಿಗೆ ದಿಕ್ಕು, ಇನ್ನಾರಿದ್ದಾರೆ?' ಇನ್ನೊಬ್ಬಳು ಗೋಪಿ ಹೇಳಿದಳು. 'ಹರಿ, ನೀನಿರು, ರಾಧೆಯ ಪ್ರಣಯ ಕೋಪವನ್ನು ತೊಲಗಿಸು.' 'ಬೇಡ, ನೀನಿಲ್ಲಿ ಇರಬೇಡ ಬೇರೆ ಹೆಣ್ಣಿನ ಸಹವಾಸ ಮಾಡು' ಎಂದಳು ಮತ್ತೊಬ್ಬಳು ಗೋಪಿ. 'ನೀನು ಇಲ್ಲಿಂದ ತೊಲಗದಿದ್ದರೆ ನಾವೇ ನಿನ್ನನ್ನು ದೂರ ಒಯ್ಯುವೆವು' ಎಂದಳು ಮತ್ತೊಬ್ಬಳು. ಹೀಗೆ ಗೋಪಿಯರು ಆಡಿದ ಮಾತುಗಳನ್ನು ಕೇಳಿ ಕೃಷ್ಣ ಅಲ್ಲಿಂದ ಹೊರಗೇ ನಡೆದ. ಶ್ರೀದಾಮನಿಗೆ ಕೋಪ ಬಂದಿತು. ಅವನು ರಾಧೆಯನ್ನು ಆಕ್ಷೇಪಿಸಿ ನುಡಿದ.

**ಶ್ರೀದಾಮ:-** ಮಾತೆ, ಏನೂ ವಿಚಾರ ಮಾಡದೆ ಏಕೆ ವ್ಯರ್ಥವಾಗಿ ನನ್ನೊಡೆಯನನ್ನು ಹೀಗೆ ಹಳಿಯುವೆ? ಬ್ರಹ್ಮ ಅನಂತ ಶಿವ ಧರ್ಮ ಮುಂತಾದ ದೇವತೆಗಳಿಗೊಡೆಯ, ಜಗತ್ತಿಗೆ ಮೂಲಕಾರಣ, ವಾಣಿ ಲಕ್ಷ್ಮಿ ಮಾಯೆ ಪ್ರಕೃತಿಗಳಿಗೆ ಪತಿ, ನಿರ್ಗುಣ, ಸ್ವಾತ್ಮಾರಾಮ, ಪೂರ್ಣಕಾಮ ಇಂಥ ಪ್ರಭುವಿಗೆ ಇದೇನು ವಿಡಂಬನೆ ಮಾಡುತ್ತಿರುವೆ? ನೀನು ದೇವಿಯರಲ್ಲೆಲ್ಲ ಮೊದಲಿಗಳು, ಸರ್ವೇಶ್ವರಿ ಎನಿಸಿದುದು ಕೃಷ್ಣನ ಪಾದಾರ್ಚನೆಯ ಮಹಿಮೆ ಎನ್ನುವುದನ್ನು ನೀನು ತಿಳಿದಿಲ್ಲ ಎಂದರೆ ಇದಕ್ಕೆ ನಾನೇನು ಹೇಳಲಿ? ಒಂದು ಹುಬ್ಬಿನ ಕುಣಿತದಿಂದ ನಿನ್ನಂಥ ಕೋಟಿಕೋಟಿ ದೇವಿಯರನ್ನು ಪ್ರಭು ಸೃಜಿಸಬಲ್ಲ. ಅವನನ್ನು ನೀನು ತಿಳಿದಿಲ್ಲ? ವೈಕುಂಠದಲ್ಲಿ ಅವನ ಪಾದಕಮಲಗಳನ್ನು ಲಕ್ಷ್ಮಿ ತನ್ನ ಕೇಶಪಾಶಗಳಿಂದ ಒರೆಸುತ್ತಾಳೆ. ಅವನನ್ನು ನೀನು ತಿಳಿದಿಲ್ಲ? ಸರಸ್ವತಿ ಕಿವಿಗಳಿಗೆ ಅಮೃತಧಾರೆಯಂತಿರುವ ಸ್ತುತಿಗಳಿಂದ ಅವನನ್ನು ಭಕ್ತಿಯಿಂದ ಸೇವಿಸುತ್ತಾಳೆ. ಅವನನ್ನು ನೀನು ತಿಳಿದಿಲ್ಲ? ಮಾಯೆ ಪ್ರಕೃತಿ ಪ್ರಪಂಚಕ್ಕೆ ಬೀಜರೂಪಳು, ಅವನಿಗೆ ಅಂಜಿ ನಡೆಯುತ್ತ ಭಕ್ತಿಯಿಂದ ಸ್ತುತಿಸುತ್ತಾಳೆ. ಅವನನ್ನು ನೀನು ತಿಳಿದಿಲ್ಲ? ವೇದಗಳು ಸತತ ಅವನ ಮಹಿಮೆಗಳನ್ನು ಕೊಂಡಾಡುತ್ತಿದ್ದರೂ ಅವುಗಳ ಹದಿನಾರನೆ ಒಂದಂಶವನ್ನೂ ತಿಳಿದಿಲ್ಲ. ಅವನನ್ನು ನೀನು ತಿಳಿದಿಲ್ಲ? ನಾಲ್ಕು ಮುಖಗಳಿಂದ ಬ್ರಹ್ಮ, ಐದು ಮುಖಗಳಿಂದ ರುದ್ರ, ಸಾವಿರ ಮುಖಗಳಿಂದ ಶೇಷ ಅವನನ್ನು ಹೊಗಳುತ್ತಿದ್ದಾರೆ. ಸರ್ವಪಾಲಕ ಸರ್ವಸಾಕ್ಷಿಯಾದ ಧರ್ಮ ಅವನ ಪಾದಕಮಲವನ್ನು ಪೂಜಿಸುತ್ತಿದ್ದಾನೆ. ಸುರರು ಅಸುರರು ಮುನಿಗಳು ಮನುಗಳು ಮಾನವರು ಸದಾ ಸೇವೆ ಮಾಡಿಯೂ ಸ್ವಪ್ನದಲ್ಲಿಯೂ ಅವನ ಪಾದಕಮಲಗಳನ್ನು ಕಾಣಲು ಸಮರ್ಥರಾಗುತ್ತಿಲ್ಲ. ಅವನ ಹುಬ್ಬಿನ ಕುಣಿತಕ್ಕೆ ಒಂದು ನಿಮಿಷದಲ್ಲಿ ಬ್ರಹ್ಮನ ಪತನವಾಗುತ್ತದೆ. ಆ ಬ್ರಹ್ಮನ ಒಂದು ದಿನದಲ್ಲಿ ಇಪ್ಪತ್ತೆಂಟು ಇಂದ್ರರ ಆಯುಷ್ಯ ಕಳೆಯುತ್ತದೆ. ಅಂಥ ಸರ್ವೇಶ್ವರನಾದ ಕೃಷ್ಣನ ಮುಂದೆ ನೀನೆಷ್ಟರವಳು, ಹೇಳು.'

ಶ್ರೀದಾಮನ ಮಾತನ್ನು ಕೇಳಿ ರಾಧೆ ಕುಪಿತಳಾದಳು. ಎದ್ದು ಹೊರಗೆ ಬಂದು ಶಪಿಸಿದಳು.

**ರಾಧೆ:-** ಮೂರ್ಖ, ಮಹಾಮೂರ್ಖ ನೀನು. ನೀನೇ ಎಲ್ಲವನ್ನೂ ತಿಳಿದಿರುವಿ. ನಾನು ಮಾತ್ರ ನಿನ್ನ ಆ ಪ್ರಭುವನ್ನು ತಿಳಿದಿಲ್ಲ. ಅಲ್ಲವೆ? ಅವನು ನಿನಗೆ ಪ್ರಭು. ನಮಗೆ ಅಲ್ಲ! ಎಲ್ಲರಿಗೂ ತಂದೆ ಎಂದು ಅವನನ್ನು ನೀನು ಹೊಗಳುವಿ. ತಾಯಿಯಾದ ನನ್ನನ್ನು ನಿಂದಿಸುವಿ. ಅಸುರರ ಸ್ವಭಾವವಿದು. ಅದರಿಂದ ನೀನು ಅಸುರನಾಗಿ ಹುಟ್ಟು, ಗೋಲೋಕದಲ್ಲಿ ಪತನ ಹೊಂದು ಎಂದು ಶಪಿಸುತ್ತಿದ್ದೇನೆ, ಯಾರು ನಿನ್ನನ್ನು ಕಾಪಾಡುತ್ತಾನೆ, ನೋಡೋಣ." ಹೀಗೆ ಹೇಳಿ ರಾಧೆ ಸುಮ್ಮನಾದಳು. ಶ್ರೀದಾಮನಿಗೂ ಕೋಪ ಬಂದಿತು. ಸಾಮಾನ್ಯ ಮಾನವಸ್ತ್ರೀಯಂತೆ ಕೋಪಮಾಡಿದ ನೀನೂ ಮಾನವ ಸ್ತ್ರೀಯಾಗಿ ಜನಿಸುವಿ. ಮಾತೆಯೆ, ನಿನಗೆ ಇದು ನನ್ನ ಶಾಪ. ಅಜ್ಞ ಮಾನವರು ನಿನ್ನಂತಿರುವ ನಿನ್ನ ಛಾಯೆಯನ್ನು ರಾಪಾಣನ ಪತ್ನಿ ಎಂದು ತಿಳಿಯುತ್ತಾರೆ. ರಾಪಾಣ ಹರಿಯ ಅಂಶಭೂತನಾದ ವೈಶ್ಯ. ಮಹಾಯೋಗಿ. ವೃಂದಾವನದಲ್ಲಿ ಹುಟ್ಟಿರುತ್ತಾನೆ. ನೀನು ಗೋಕುಲದಲ್ಲಿ ಕೃಷ್ಣನನ್ನು ಸೇರಿ ವನದಲ್ಲಿ ವಿಹಾರ ಮಾಡುವಿ. ಬಳಿಕ ಒಂದು ನೂರು ವರ್ಷಕಾಲ ನಿನಗೆ ಕೃಷ್ಣನ ವಿಯೋಗ ಉಂಟಾಗುವುದು. ಬಳಿಕ ಅವನನ್ನು ಹೊಂದಿ ಗೋಲೋಕಕ್ಕೆ ಹಿಂತಿರುಗುವಿ, ಹೀಗೆ ಹೇಳಿ ರಾಧೆಗೆ ಮಣಿದು ಶ್ರೀಕೃಷ್ಣನ ಬಳಿಗೆ ಬಂದು ಶಾಪವೃತ್ತಾಂತವನ್ನು ಹೇಳಿ ಅತ್ತುಬಿಟ್ಟ ಶ್ರೀದಾಮ. ಶ್ರೀಕೃಷ್ಣ ಅವನನ್ನು ಸಂತೈಸಿ ನುಡಿದ, 'ನೀನು ಭೂಮಿಗೆ ಹೋಗು, ಅಸುರರಾಜನಾಗು. ಮೂಲೋಕದಲ್ಲಿ ಯಾರೂ ನಿನ್ನನ್ನು ಗೆಲ್ಲಲಾರರು. ಐವತ್ತು ಯುಗಗಳ ಕಾಲ ಇದ್ದು ಕೊನೆಯಲ್ಲಿ ಶಿವನ ಶೂಲದಿಂದ ಹತನಾಗಿ ನನ್ನ ಬಳಿಗೆ ಬರುವಿ.' ಇತ್ತ ಶ್ರೀದಾಮನನ್ನು ಹುಡುಕಿಕೊಂಡು ರಾಧೆ ಬಂದು 'ಮಗು ಎಲ್ಲಿಗೆ ಹೋಗುವಿ?' ಎನ್ನುತ್ತ ಅಳತೊಡಗಿದಳು. ಶ್ರೀದಾಮ ಅವಳಿಗೆ ನಮಿಸಿ ಕಣ್ಣೀರಿಟ್ಟು ನಡೆದ. ಅವನೇ ಶಂಖಚೂಡನೆಂಬ ಅಸುರನಾಗಿ ಹುಟ್ಟಿ ತುಲಸಿಗೆ ಪತಿಯಾದ. ರಾಧೆ ಗೋಕುಲದಲ್ಲಿ ವೃಷಭಾನುವಿನ ಮಗಳಾಗಿ ಜನಿಸಿದಳು. ಇದು ಮಂಗಳಕರವಾದ ಕೃಷ್ಣಕಥೆ. ನಾರದ, ಇನ್ನೇನು ಕೇಳಬಯಸುವಿ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಸಪ್ತಸಮುದ್ರಜನ್ಮ ರಾಧಾಶ್ರೀದಾಮ ಶಾಪೋದ್ಭವವೆಂಬ ಮೂರನೆಯ ಅಧ್ಯಾಯ ಮುಗಿಯಿತು*

—o—

# ಗೋಲೋಕವರ್ಣನ

ಅಧ್ಯಾಯ - ೪

**ನಾರದ:-** ಜಗನ್ನಾಥ ಶ್ರೀಕೃಷ್ಣನೇಕೆ, ಯಾರಿಂದ ಪ್ರಾರ್ಥಿತನಾಗಿ ಭೂಮಿಯಲ್ಲಿ ಅವತರಿಸಿದ?

**ನಾರಾಯಣ:-** ಹಿಂದೆ ವರಾಹಕಲ್ಪದಲ್ಲಿ ಭೂಭಾರ ಹೆಚ್ಚಿದಾಗ ಭೂದೇವಿ ಶೋಕಾರ್ತಳಾಗಿ ಬ್ರಹ್ಮನನ್ನು ಶರಣು ಹೊಂದಿದಳು. ಜೊತೆಗೆ ಅಸುರರಿಂದ ಪೀಡೆಗಳೊಳಗಾಗಿದ್ದ ದೇವತೆಗಳೂ ಬಂದಿದ್ದರು. ಎಲ್ಲರೂ ಬ್ರಹ್ಮನ ಸಭೆಗೆ ಬಂದು ಅಲ್ಲಿ ಋಷಿಮುನಿಗಳಿಂದ ಸಿದ್ಧರಿಂದ ಸೇವಿತನಾಗಿ ಬ್ರಹ್ಮತೇಜದಿಂದ ಬೆಳಗುತ್ತಿದ್ದ ಬ್ರಹ್ಮನನ್ನು ಕಂಡರು. ಎದುರಿನಲ್ಲಿ ಅಪ್ಸರೆಯರ ನಾಟ್ಯ, ಗಂಧರ್ವರ ಗಾನ. ಆದರೂ ಬ್ರಹ್ಮ 'ಕೃಷ್ಣ' ಎಂದು ಎರಡಕ್ಷರದ ಮಂತ್ರ ಜಪಿಸುತ್ತ ಪರಬ್ರಹ್ಮನ ಧ್ಯಾನದಲ್ಲಿ ಮೈರೋಮಾಂಚನಗೊಂಡು ಕಣ್ಣುಗಳಿಂದ ಆನಂದಬಾಷ್ಪ ಸುರಿಸುತ್ತಿದ್ದ. ಭೂದೇವಿ ದೇವತೆಗಳೊಂದಿಗೆ ಬಂದು ಬ್ರಹ್ಮನಿಗೆ ಮಣಿದು ಸ್ತೋತ್ರ ಮಾಡಿ ಕಣ್ಣೀರು ಹರಿಸಿದಳು. ಬ್ರಹ್ಮನೆಂದ, 'ದೇವಿ, ಏಕೆ ಕಣ್ಣೀರು? ನೀನು ಬಂದ ಕಾರಣವೇನು? ಅಳಬೇಡ. ನಿನಗೆ ಒಳ್ಳೆಯದಾಗುವುದು. ನಾನಿರುವಾಗ ನಿನಗೇತರ ಭಯ?' ಭೂದೇವಿಯನ್ನು ಸಂತೈಸಿ ಬ್ರಹ್ಮ ದೇವತೆಗಳನ್ನು ಆದರದಿಂದ ಕೇಳಿದ, 'ಹೇಳಿ, ನೀವು ಬಂದ ಕಾರಣವೇನು?' ದೇವತೆಗಳು ಹೇಳಿದರು. 'ಪ್ರಭು, ಭೂಮಿ ಭಾರದಿಂದ ನಲುಗಿದ್ದಾಳೆ. ನಾವೆಲ್ಲ ಅಸುರರ ಪೀಡೆಗೊಳಗಾಗಿದ್ದೇವೆ. ಸೃಷ್ಟಿಕರ್ತನಾದ ನೀನೆ ನಮಗೆ ಗತಿ. ಬೇಗನೆ ಪರಿಹಾರ ನೀಡು.' ದೇವತೆಗಳ ಮಾತನ್ನು ಕೇಳಿ ಬ್ರಹ್ಮ ತಿರುಗಿ ಭೂದೇವಿಯನ್ನು ಪ್ರಶ್ನಿಸಿದ. 'ದೇವಿ, ನಿನಗೆ ಭಾರಭೂತರು ಯಾರು? ನಿರ್ಭಯವಾಗಿ ನನ್ನ ಮುಂದೆ ಹೇಳಿಕೊಳ್ಳು. ಯಾರ ಭಾರವನ್ನು ಹೊರಲು ನೀನು ಅಶಕ್ತಳಾಗಿರುವಿ?' ಭೂದೇವಿ ಹೇಳಿದಳು.

**ಭೂದೇವಿ:-** ತಾತ, ನಾನು ನನ್ನ ಮನಸ್ಸಿನ ದುಃಖವನ್ನು ಹೇಳಿಕೊಳ್ಳುತ್ತೇನೆ, ಕೇಳು. ಸ್ತ್ರೀಜಾತಿ ಎಂದಿಗೂ ಅಬಲೆ, ಅವಳನ್ನು ತಂದೆತಾಯಿಗಳು ಪತಿಪುತ್ರರು ಬಂಧುಗಳು ರಕ್ಷಿಸುತ್ತಿರಬೇಕು. ನಾನು ಯಾರ ಭಾರದಿಂದ ಪೀಡಿತಳಾಗಿದ್ದೇನೆ ಎಂಬುದನ್ನು ಹೇಳುತ್ತೇನೆ ಕೇಳು.

ಕೃಷ್ಣಭಕ್ತಿರಹಿತರು, ಭಕ್ತರನ್ನು ನಿಂದಿಸುವವರು, ಮಹಾಪಾಪಿಗಳು. ಅವರ ಭಾರವನ್ನು ನಾನು ಹೊರಲಾರೆ. ಸ್ವಧರ್ಮಾಚರಣೆ ಇಲ್ಲದವರು, ವೇದಗಳಲ್ಲಿ ಶ್ರದ್ಧೆ ಇಲ್ಲದವರು, ತಂದೆ ತಾಯಿ ಗುರುಗಳ ಹೆಂಡತಿ ಮಕ್ಕಳ ಪೋಷಣ ಮಾಡದವರು, ಮಿಥ್ಯಾವಾದಿಗಳು, ದಯೆ ಸತ್ಯ ಇಲ್ಲದವರು, ಗುರುದೇವತೆಗಳ ನಿಂದಕರು, ಮಿತ್ರದ್ರೋಹಿಗಳು, ಕೃತಘ್ನರು, ಸುಳ್ಳುಸಾಕ್ಷಿ ನೀಡುವವರು, ವಿಶ್ವಾಸದ್ರೋಹಿಗಳು, ವೇದವಿಕ್ರಯ ಮಾಡುವವರು, ಪ್ರಾಣಿಹಿಂಸೆ, ಗುರುದ್ರೋಹ ಮಾಡುವವರು, ಪೂಜೆ ಯಜ್ಞ ವ್ರತೋಪವಾಸಗಳಿಗೆ ವಿಘ್ನ ತರುವವರು, ಗೋಬ್ರಾಹ್ಮಣ ದೇವತಾ ವಿಷ್ಣುಭಕ್ತರನ್ನು ಹರಿಯನ್ನು ಹರಿಕಥೆಯನ್ನು ದ್ವೇಷಿಸುವವರು ಇವರು ಮಹಾ ಪಾಪಿಗಳು. ಅವರ ಭಾರವನ್ನು ನಾನು ಹೊರಲಾರೆ. ಶಂಖಚೂಡ ಮುಂತಾದ ದೈತ್ಯರ

ಭಾರವನ್ನು ಹೊರಲಾರೆ.'' ಹೀಗೆ ಹೇಳಿ ಭೂದೇವಿ ಕಣ್ಣೀರು ಸುರಿಸಿದಳು. ಕರುಣಾನಿಧಿಯಾದ ಬ್ರಹ್ಮ ಸಂತೈಸಿ ನುಡಿದ.

**ಬ್ರಹ್ಮ**:- ಭೂದೇವಿ, ನಿನ್ನ ಭಾರವನ್ನು ಕಳೆಯಲು, ಅಸುರರ ಪೀಡೆಯನ್ನು ನಿವಾರಿಸಲು ಉಪಾಯ ಮಾಡುತ್ತೇನೆ. ಉಪಾಯದಿಂದ ಕಾರ್ಯಸಿದ್ಧಿಯಾಗುತ್ತದೆ. ಜಗದೊಡೆಯ ನಿನ್ನ ಭಾರವನ್ನು ಕಳೆಯುತ್ತಾನೆ. ಹೀಗೆ ಹೇಳಿ ಬ್ರಹ್ಮ ಅವಳನ್ನು ಮುಂದೆ ಮಾಡಿಕೊಂಡು ಎಲ್ಲ ದೇವತೆಗಳೊಂದಿಗೆ ಕೈಲಾಸಕ್ಕೆ ನಡೆದ. ಅಲ್ಲಿ ಗಂಗಾತೀರದ ಅಕ್ಷಯ ವಟವೃಕ್ಷದ ಬುಡದಲ್ಲಿ ಶಿವನನ್ನು ಕಂಡ. ಹುಲಿದೊವಲನ್ನುಟ್ಟು ಸತೀದೇವಿಯ ಎಲುವಿನ ಆಭರಣ ತೊಟ್ಟು ಶೂಲ ಪಟ್ಟಿಕಗಳನ್ನು ಧರಿಸಿದ ಐದಲೆಯ ಮುಕ್ಕಣ್ಣ ಶಿವನನ್ನು ಸಿದ್ಧರು ಯೋಗೀಶ್ವರರು ಸುತ್ತುವರಿದಿದ್ದರು. ಎದುರಿಗೆ ಅಪ್ಸರೆಯರ ನೃತ್ಯ ಗಂಧರ್ವರ ಗಾನ ನಡೆದಿದ್ದುವು. ಶಿವ ಕಮಲಮಣಿಮಾಲೆ ಹಿಡಿದು ಐದು ಮುಖಗಳಿಂದ ಹರಿನಾಮ ಜಪಿಸುತ್ತ ಮೈಯೆಲ್ಲ ರೋಮಾಂಚಗೊಂಡಿದ್ದ. ಬ್ರಹ್ಮ ಬಂದೊಡನೆ ಆತನೆದ್ದು ಭಕ್ತಿಯಿಂದ ತಲೆಬಾಗಿ ಆಶೀರ್ವಾದ ಪಡೆದ. ದೇವತೆಗಳೆಲ್ಲರೂ ಅವನನ್ನು ನಮಿಸಿದರು. ಭೂದೇವಿ ನಮಿಸಿ ಆಶೀರ್ವಾದ ಪಡೆದಳು. ಬ್ರಹ್ಮನಿಂದ ಎಲ್ಲ ವೃತ್ತಾಂತವನ್ನು ಕೇಳಿ ಶಿವ ವಿಷಾದಗೊಂಡ. ಭೂದೇವಿಯನ್ನೂ ದೇವತೆಗಳನ್ನೂ ಸಮಾಧಾನಪಡಿಸಿ ಕಳಿಸಿಕೊಟ್ಟ. ಬಳಿಕ ಧರ್ಮನೊಡನೆ ಸಮಾಲೋಚನೆ ಮಾಡಿ ಅವನೊಂದಿಗೆ ಬ್ರಹ್ಮಶಿವರು ವೈಕುಂಠಲೋಕಕ್ಕೆ ತೆರಳಿದರು. ಆ ಲೋಕ ಬ್ರಹ್ಮಾಂಡಕ್ಕಿಂತ ಮೇಲೆ ವಾಯುವಿನ ಆಧಾರದಲ್ಲಿ ನಿಂತಿದೆ. ಸತ್ಯಲೋಕಕ್ಕಿಂತ ಕೋಟಿಯೋಜನ ಮೇಲೆ ಇದೆ. ಪದ್ಮರಾಗ ಇಂದ್ರನೀಲ ಮಣಿಗಳಿಂದ ನಿರ್ಮಿತವಾದ ರಾಜಮಾರ್ಗಗಳಿಂದ ಶೋಭಿಸುತ್ತಿದೆ. ಅಲ್ಲಿ ಶ್ರೀಹರಿಯ ಅಂತಃಪುರಕ್ಕೆ ಹೋಗಿ ರತ್ನಸಿಂಹಾಸನದಲ್ಲಿ ಕುಳಿತಿದ್ದ ಹರಿಯನ್ನು ಕಂಡರು. ಪೀತಾಂಬರ ಉಟ್ಟು ವನಮಾಲಾ ರತ್ನಾಭರಣಗಳಿಂದ ಭೂಷಿತನಾಗಿ ಸರಸ್ವತೀ ಲಕ್ಷ್ಮೀದೇವಿಯರಿಂದ ಸೇವಿಸಲ್ಪಡುವ ಕೋಟಿಮನ್ಮಥಲಾವಣ್ಯದಿಂದ ಬೆಳಗುವ ಹರಿಯನ್ನು ನಮಿಸಿ ಭಕ್ತಿಯಿಂದ ಸ್ತುತಿಸಿದರು ಬ್ರಹ್ಮಾದಿದೇವತೆಗಳು.

**ಬ್ರಹ್ಮ**:- ಸರ್ವೇಶನಾದ ಕಮಲಾಕಾಂತನಿಗೆ ನಮೋನಮಃ! ನಾವೆಲ್ಲರೂ ನಿನ್ನ ಅಂಶಭೂತರು. ಪ್ರಪಂಚದ ಎಲ್ಲ ಮನುಗಳು ಮುನಿಗಳು ಮನುಷ್ಯರು ಚರಾಚರ ಜಂತುಗಳೂ ನಿನ್ನ ಅಂಶಾಂಶಸಂಭೂತರೇ ಆಗಿರುವರು.

**ಶಿವ**:- ಹರಿ, ನೀನು ಅಕ್ಷಯ, ಅನಂತ, ಅವ್ಯಕ್ತ, ಈಶ್ವರ, ಆನಂದರೂಪಿ, ಸರ್ವರೂಪಿ, ಅಣಿಮಾದಿ ಸಿದ್ಧಿ ಕಾರಣ, ಸರ್ವಕಾರಣ, ಸಿದ್ಧಿಜ್ಞ, ಸಿದ್ಧಿದ, ಸಿದ್ಧಿರೂಪ. ನಿನ್ನನ್ನು ಸ್ತುತಿಸಲು ಯಾರು ಶಕ್ತರು?

**ಧರ್ಮ**:- ವೇದಗಳಲ್ಲಿ ಹೇಳಿದ್ದನ್ನೇ ಜ್ಞಾನಿಗಳು ವರ್ಣಿಸಬಲ್ಲರು. ವೇದಗಳಿಗೇ ನಿಲುಕದ ನಿನ್ನನ್ನು ಯಾರು ತಾನೆ ವರ್ಣಿಸಬಲ್ಲರು?

ಬ್ರಹ್ಮಾದಿಗಳು ಮಾಡಿದ ಈ ಹರಿಸ್ತುತಿಯನ್ನು ಪಠಿಸಿದರೆ ಸಕಲ ಅನಿಷ್ಟಪರಿಹಾರವಾಗಿ ಇಷ್ಟಾರ್ಥ ಸಿದ್ಧಿಸುವುದು. ಈ ಸ್ತುತಿಯನ್ನು ಕೇಳಿದ ಶ್ರೀಹರಿ

ಎಲ್ಲರಿಗೂ ಗೋಲೋಕಕ್ಕೆ ಹೋಗಲು ಆದೇಶಿಸಿದ. ''ನಾನೂ ಲಕ್ಷ್ಮಿಯೊಂದಿಗೆ ಬರುತ್ತೇನೆ. ಶ್ವೇತದ್ವೀಪದಲ್ಲಿರುವ ನರನಾರಾಯಣರು, ಸರಸ್ವತಿ, ಶೇಷ, ನನ್ನ ಮಾಯೆ, ಕಾರ್ತಿಕೇಯ, ಗಣೇಶ, ವೇದಮಾತೆ ಸಾವಿತ್ರಿ ಇವರೂ ಬರುತ್ತಾರೆ'' ಎಂದ. 'ಗೋಲೋಕದಲ್ಲಿ ರಾಧೆಯೊಡನಿರುವ ದ್ವಿಭುಜ ಕೃಷ್ಣನೂ ನಾನೇ. ಇಲ್ಲಿ ನಾನು ಲಕ್ಷ್ಮಿಯೊಂದಿಗಿರುತ್ತೇನೆ. ಶ್ವೇತದ್ವೀಪದಲ್ಲಿ ನಾರಾಯಣನಾಗಿಯೂ ಇರುತ್ತೇನೆ. ಎಲ್ಲ ದೇವತೆಗಳೂ ನನ್ನ ಅಂಶಭೂತರು. ಇಲ್ಲವೇ ಅಂಶಗಳ ಅಂಶಾಂಶಭೂತರು ಎಲ್ಲರೂ ಆಗಿದ್ದಾರೆ. ಎಲ್ಲರೂ ಗೋಲೋಕಕ್ಕೆ ನಡೆಯಿರಿ. ನಿಮ್ಮ ಕಾರ್ಯಸಿದ್ಧಿಯಾಗುವುದು.' ದೇವತೆಗಳೆಲ್ಲರೂ ವಿಷ್ಣುವಿನಾದೇಶದಂತೆ ಗೋಲೋಕವನ್ನು ಸೇರಿದರು.

ವೈಕುಂಠಕ್ಕಿಂತ ಮೇಲೆ ಐವತ್ತು ಕೋಟಿ ಯೋಜನ ಎತ್ತರದಲ್ಲಿ ವಿಚಿತ್ರವಾದ ಪರಂಧಾಮ ಗೋಲೋಕವಿದೆ. ಜರೆ ಮರಣಗಳಿಲ್ಲದ ಅನಿರ್ವಚನೀಯವಾದ ಆಲೋಕದ ಸುತ್ತಲೂ ವಿರಜಾನದಿ ಹರಿಯುತ್ತದೆ. ಸ್ಫಟಿಕದಂತೆ ನಿರ್ಮಲವಾದ ನೀರು, ಮುತ್ತು ಮಾಣಿಕ್ಯ ಮುಂತಾದ ಅಮೂಲ್ಯ ರತ್ನಗಳಿಗೆ ಆಕರವಾಗಿದೆ, ಕಪ್ಪು ಬಿಳಿ ಹಸುರು ಕೆಂಪು ಬಣ್ಣಗಳ ಮಣಿಗಳ ಆಶ್ಚರ್ಯಕರವಾದ ನಿಧಿ ಆ ನದಿ. ದೇವತೆಗಳು ಅದನ್ನು ದಾಟಿ ಶತಶೃಂಗ ಪರ್ವತವನ್ನು ಸೇರಿದರು. ಅಲ್ಲಿ ಪಾರಿಜಾತ ಮುಂತಾದ ಕಲ್ಪವೃಕ್ಷಗಳು ಬೆಳೆದಿವೆ. ಕಾಮಧೇನುಗಳು ಸಂಚರಿಸುತ್ತಿವೆ. ಒಂದು ಕೋಟಿ ಯೋಜನ ಎತ್ತರ ಹತ್ತು ಕೋಟಿ ಯೋಜನ ಉದ್ದವಾದ ಆ ಬೆಟ್ಟದ ತುದಿಯಲ್ಲಿ ಹತ್ತು ಯೋಜನ ವಿಸ್ತಾರ ವರ್ತುಲಾಕಾರದ ರಾಸಮಂಡಲವಿದೆ. ಸಾವಿರಾರು ಪುಷ್ಪೋದ್ಯಾನಗಳು, ಅವುಗಳಲ್ಲಿ ರತಿಮಂದಿರಗಳಲ್ಲಿ ರತ್ನಮಂಟಪಗಳು. ಅವುಗಳನ್ನು ಬಾಳೆಕಂಬಗಳಿಂದ ಬಿಳಿಧಾನ್ಯ ಫಲ ದೂರ್ವೆ ಚಂದನ ಅಗುರು ಕಸ್ತೂರಿ ಕುಂಕುಮಗಳಿಂದ ಅಲಂಕರಿಸಲಾಗಿದೆ. ಅಲ್ಲಿ ರಾಧೆಯ ಪರಿಚಾರಿಕೆಯರಾಗಿ ಕೋಟಿ ಗೋಪಕನ್ಯೆಯರಿದ್ದಾರೆ. ಅವರೆಲ್ಲರೂ ರತ್ನಾಭರಣಗಳಿಂದ ಅಲಂಕೃತರಾಗಿರುವವರು. ಸಂಪಿಗೆಯಂಥ ಮೈಬಣ್ಣದವರು, ಪೀತಾಂಬರ ಉಟ್ಟ ಚಂದ್ರಮುಖಿಯರು. ಮಾಲತೀ ಮಾಲೆ ಮುಡಿದು ಕನ್ನಡಿಗಳಲ್ಲಿ ತಮ್ಮ ಮುಖಚಂದ್ರ ದರ್ಶನ ಮಾಡುವವರು. ಡೊಂಕಾದ ಹುಬ್ಬುಗಳಿಂದ ಮೋಹಕವಾದ ನಗುವಿನಿಂದ ದಾಳಿಂಬೆ ಬೀಜದಂಥ ಹಲ್ಲುಗಳಿಂದ ಶೋಭಿಸುವ ಮುಖ. ಸ್ತನನಿತಂಬಭಾರಗಳಿಂದ ಆನೆಗಳಂತೆ ಮೆಲ್ಲನೆ ನಡೆಯುತ್ತಾರೆ. ಕಾಮಬಾಣದಿಂದ ಜರ್ಜರಿತವಾಗಿರುತ್ತದೆ ಅವರ ಹೃದಯ. ರಾಧೆಯ ಪಾದಕಮಲಸೇವೆಯನ್ನೇ ಸದಾ ಬಯಸುತ್ತದೆ. ರತ್ನದೀಪಗಳಿಂದ ಉಜ್ವಲವಾಗಿ ಬೆಳಗುತ್ತ ಬಿಳಿ ಚಾಮರ ದರ್ಪಣಗಳಿಂದ ವಿಚಿತ್ರ ಪುಷ್ಪಮಾಲೆಗಳಿಂದ ಶೋಭಿಸುವ ರಮ್ಯವಾದ ಸುಂದರವಾದ ರಾಧಾಮಾಧವರಿಗೆ ಪ್ರಿಯವಾದ ಆವೃಂದಾವನವನ್ನು ಕಂಡು ದೇವತೆಗಳು ಗೋಲೋಕವನ್ನು ಪ್ರವೇಶಿಸಿದರು. ಅದು ಕೋಟಿಯೋಜನ ವಿಸ್ತಾರದ ವರ್ತುಲಾಕಾರದ ಲೋಕ. ರತ್ನಪ್ರಾಕಾರಗಳಿಂದ ಕೂಡಿದೆ. ನಾಲ್ಕು ದ್ವಾರಗಳಿವೆ. ಅಲ್ಲಿ ದ್ವಾರಪಾಲಕರಾಗಿ ಗೋಪಾಲಕರು ನಿಂತಿದ್ದಾರೆ. ಒಳಗೆ ಗೋಪಾಲಕರ ನೂರು ಕೋಟಿ ಮನೆಗಳು. ಅಮೂಲ್ಯ ರತ್ನಗಳಿಂದ ನಿರ್ಮಿತವಾದವುಗಳು. ಇವನ್ನು ನೋಡಬೇಕಾದರೆ ಪುಣ್ಯಮಾಡಿರಬೇಕು. ಭಾರತ ಭೂಮಿಯಲ್ಲಿ ನೂರು ಜನ್ಮಗಳ ತಪಸ್ಸು ಮಾಡಿರಬೇಕು.

ವಿಷ್ಣುಭಕ್ತಿಪೂರ್ವಕ ಕನಸು ಮನಸುಗಳಲ್ಲಿ ಹರಿಧ್ಯಾನ, ರಾಧಾಕೃಷ್ಣ ಕೃಷ್ಣ ಎಂದು ಹಗಲು ರಾತ್ರಿ ಜಪ ಮಾಡಿರಬೇಕು.

ಅದ್ಭುತವಾದ ಆಮನೆಗಳನ್ನು ನೋಡುತ್ತ ದೇವತೆಗಳು ಮುಂದೆ ಅಕ್ಷಯ ವಟವೃಕ್ಷವನ್ನು ಕಂಡರು. ಅದು ಐದು ಯೋಜನ ವಿಸ್ತೀರ್ಣ ಹತ್ತು ಯೋಜನ ಎತ್ತರವಾಗಿದ್ದು ಸಾವಿರ ಕೊಂಬೆಗಳಿಂದ ಕೆಂಪಾದ ಹಣ್ಣುಗಳಿಂದ ಶೋಭಿಸುತ್ತದೆ. ಮರದಡಿಯಲ್ಲಿ ಆಟವಾಡುವ ಕೃಷ್ಣಸ್ವರೂಪರಾದ ಮಕ್ಕಳು ಪೀತಾಂಬರ ಉಟ್ಟಿದ್ದಾರೆ. ಸರ್ವಾಂಗಗಳಲ್ಲಿ ಶ್ರೀಗಂಧ ರತ್ನಾಭರಣಗಳು ಶೋಭಿಸುತ್ತಿವೆ. ಮುಂದೆ ಮನೋಹರವಾದ ರಾಜಮಾರ್ಗ. ಅದರ ಎರಡೂ ಪಾರ್ಶ್ವಗಳು ಸಿಂಧೂರಾಕಾರದ ಮಣಿಗಳಿಂದ ನಿರ್ಮಿತವಾಗಿವೆ. ಅಲ್ಲಲ್ಲಿ ಇಂದ್ರನೀಲ ಪದ್ಮರಾಗಗಳಿಂದ ನಿರ್ಮಿತವಾದ ವೇದಿಕೆಗಳು, ರತ್ನಮಂಡಪಗಳು. ಚಂದನ ಅಗುರು ಕಸ್ತೂರಿ ಕುಂಕುಮಗಳಿಂದ ಮೊಸರು ಅರಳು ಫಲಪುಷ್ಪ ದೂರ್ವೆ ಬಾಳೆಕಂಬಗಳಿಂದ ಅಲಂಕೃತವಾಗಿವೆ. ಆಟಗಳಲ್ಲಿ ನಿರತರಾದ ಗೋಪಬಾಲಿಕೆಯರು ಅಲ್ಲಿ ಕಾಣುತ್ತಾರೆ. ಹದಿನಾರು ದ್ವಾರಗಳಿಂದ ಕೂಡಿದ ಮಣಿಮಯವಾದ ಮನೆಗಳು ಎಲ್ಲೆಡೆ ಕಂಡುಬರುತ್ತವೆ. ಅವುಗಳಿಗೆ ಸುತ್ತಲೂ ಕಂದಕಗಳು ರತ್ನಮಯ ಪ್ರಾಕಾರಗಳು. ಇವೆಲ್ಲವನ್ನೂ ನೋಡುತ್ತ ದೇವತೆಗಳು ರಾಸೇಶ್ವರಿಯಾದ ರಾಧೆಯ ಮನೆ ಬಳಿಗೆ ಬಂದರು. ಆ ಮನೆಯ ಸೌಂದರ್ಯ ಅನಿರ್ವಚನೀಯ. ಪಂಡಿತರೂ ಬಣ್ಣಿಸಲಾರರು. ಅಲ್ಲಿ ರತ್ನಗಳಿಂದ ಬೆಳಗುವ ನೂರು ಮನೆಗಳಿವೆ. ಅವು ಸುತ್ತಲೂ ದಾಟಲಾಗದ ಆಳವಾದ ಕಂದಕಗಳಿಂದ ಕಲ್ಪವೃಕ್ಷಗಳಿಂದ ಹೂದೋಟಗಳಿಂದ ಸುತ್ತುವರಿದಿವೆ. ಏಳು ದ್ವಾರಗಳಿವೆ. ಅವನ್ನು ದಾಟಿ ಮುಂದೆ ಹೋದರೆ ತಿರುಗಿ ಹದಿನಾರು ದ್ವಾರಯುಕ್ತವಾದ ಸಾವಿರ ಧನುಃಪ್ರಮಾಣದಷ್ಟು ಎತ್ತರದ ಪ್ರಾಕಾರ ಉಳ್ಳ ರತ್ನಕಲಶಸಮೂಹಗಳಿಂದ ಶೋಭಿಸುವ ರಮ್ಯವಾದ ಅರಮನೆ. ಎಲ್ಲವನ್ನೂ ನೋಡಿ ಎಲ್ಲ ದೇವತೆಗಳಿಗೆ ಮೈರೋಮಾಂಚನಗೊಂಡಿತು. ಅಷ್ಟರಲ್ಲಿ ಅವರ ಕಣ್ಣಮುಂದೆ ಹಿಂದಿನಂತೆಯೆ ರಮ್ಯವಾದ ಇನ್ನೊಂದು ವೃಂದಾವನ, ಶತಶೃಂಗ ಪರ್ವತ ಅದರ ಸುತ್ತಲೂ ವಿರಜಾನದಿ, ಇನ್ನೊಂದು ಗೋಲೋಕ ಗಾಳಿಯಲ್ಲಿ ತೇಲುತ್ತಿದೆ. ರಾಧೆಯ ಬಯಕೆಯಂತೆ ಕೃಷ್ಣ ನಿರ್ಮಿಸಿದ ಅದ್ಭುತ ಲೋಕ ಅದು. ಅಲ್ಲಿ ಸಾವಿರಾರು ಸರೋವರಗಳು ಕಲ್ಯಾಣಮಂಟಪಗಳು. ಸುಂದರ ನೃತ್ಯಗಳು ನಡೆಯುತ್ತಿದ್ದುವು. ರಾಧಾಕೃಷ್ಣರ ಗುಣಗಾನದ ಸಂಗೀತ ಕೇಳಿಬರುತ್ತಿತ್ತು. ಆಗಾನಾಮೃತ ಸವಿದು ದೇವತೆಗಳು ಮೈಮರೆತರು. ಎಲ್ಲಿ ನೋಡಿದರೂ ಗೋಪಿಯರು. ನಾನಾ ವೇಷ ಧರಿಸಿರುವವರು. ಮೃದಂಗ ವೀಣೆ ನುಡಿಸುತ್ತಾರೆ. ಚಾಮರ ಬೀಸುತ್ತಾರೆ. ಕೈ ತಾಳ ಹಾಕುತ್ತಾರೆ. ಯಂತ್ರವಾದ್ಯ ನುಡಿಸುತ್ತಾರೆ. ರತ್ನದ ಗೆಜ್ಜೆ ಕಟ್ಟಿ ಕುಣಿಯುತ್ತಾರೆ. ತಲೆಯ ಮೇಲೆ ಬಿಂದಿಗೆ ಹೊತ್ತು ನಾಟ್ಯವಾಡುತ್ತಾರೆ. ಕೆಲವರು ಪುರುಷವೇಷ ಧರಿಸುತ್ತಾರೆ. ಕೆಲವರು ಅವರಿಗೆ ನಾಯಿಕೆಯರಾಗುತ್ತಾರೆ. ಕೆಲವರು ಕೃಷ್ಣವೇಷ ತೊಡುತ್ತಾರೆ, ಕೆಲವರು ರಾಧೆಯ ವೇಷ ತೊಡುತ್ತಾರೆ. ಆಲಿಂಗನ ಮಾಡುತ್ತಾರೆ, ಆಟವಾಡುತ್ತಾರೆ. ರಾಧೆಯ ಸಖಿಯರ ಇಂಥ ಅರಮನೆಗಳನ್ನು ಕಾಣುತ್ತ ದೇವತೆಗಳು ಮುಂದುವರಿಯುತ್ತಾರೆ. ರಾಧೆಯ ಮುಖ್ಯಸಖಿಯರಾದ

ಮೂವತ್ತಮೂರು ಮಂದಿ ಗೋಪಿಯರನ್ನು ಕಾಣುತ್ತಾರೆ. ಅವರ ಹೆಸರುಗಳು ಸುಶೀಲಾ ಶಶಿಕಲಾ ಯಮುನಾ ಮಾಧವೀ ರತೀ ಕದಂಬಮಾಲಾ ಕುಂತೀ ಜಾಹ್ನವೀ ಸ್ವಯಂಪ್ರಭಾ ಚಂದ್ರಮುಖೀ ಸಾವಿತ್ರೀ ಗಾಯತ್ರೀ ಸುಮುಖೀ ಸುಖಾ ಪದ್ಮಾಲಯಾ ಪಾರಿಜಾತಾ ಗೌರೀ ಸರ್ವಮಂಗಲಾ ಕಾಲಿಕಾ ಕಮಲಾ ದುರ್ಗಾ ಭಾರತೀ ಸರಸ್ವತೀ ಗಂಗಾ ಅಂಬಿಕಾ ಮಧುಮತೀ ಚಂಪಾ ಅಪರ್ಣಾ ಸುಂದರೀ ಕೃಷ್ಣಪ್ರಿಯಾ ಸತೀ ನಂದಿನೀ ಮತ್ತು ನಂದನಾ ಎಂದು. ಇವರ ಅರಮನೆಗಳನ್ನೂ ದೇವತೆಗಳು ಕಂಡರು. ಈ ಗೋಲೋಕಕ್ಕಿಂತ ಮೇಲೆ ಇನ್ನೇನೂ ಇಲ್ಲ ಬರೀ ಶೂನ್ಯ. ಏಳು ಪಾತಾಳಲೋಕಗಳಿಗಿಂತ ಕೆಳಗೂ ಏನು ಸೃಷ್ಟಿ ಇಲ್ಲ. ಬರಿ ನೀರು, ಕತ್ತಲು, ಹೋಗಲಾಗದ, ನೋಡಲಾಗದ ಪ್ರದೇಶ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಗೋಲೋಕವರ್ಣನವೆಂಬ ನಾಲ್ಕನೆಯ ಅಧ್ಯಾಯ ಮುಗಿದುದು*

—o—

## ಶ್ರೀಕೃಷ್ಣಸ್ತೋತ್ರ

**ಅಧ್ಯಾಯ - ೫**

**ನಾರಾಯಣ:-** ಗೋಲೋಕವನ್ನು ಪೂರ್ತಿಯಾಗಿ ನೋಡಿ ದೇವತೆಗಳು ರಾಧೆಯ ಅರಮನೆಯ ಮಹಾದ್ವಾರಕ್ಕೆ ಬಂದಿದ್ದಾರೆ. ರತ್ನಗಳಿಂದ ನಿರ್ಮಿತವಾದ ಎರಡು ವೇದಿಕೆಗಳಿಂದ ಶೋಭಿಸುತ್ತಿದೆ ಆ ದ್ವಾರ. ಅಲ್ಲಿ ವೀರಭಾನು ದ್ವಾರಪಾಲಕ. ಪೀತಾಂಬರ ಉಟ್ಟು ರತ್ನಕಿರೀಟ ರತ್ನಾಭರಣಗಳನ್ನು ಧರಿಸಿ ರತ್ನಸಿಂಹಾಸನದಲ್ಲಿ ಕುಳಿತಿದ್ದಾನೆ. ದೇವತೆಗಳು ತಾವು ಬಂದ ಕಾರ್ಯವನ್ನು ತಿಳಿಸಿದಾಗ ಅವನು ಸೇವಕರನ್ನು ಕೃಷ್ಣನ ಬಳಿಗೆ ಕಳಿಸಿ ಅವನ ಅನುಜ್ಞೆ ಪಡೆದು ದೇವತೆಗಳನ್ನು ಒಳಗೆ ಬಿಟ್ಟಿದ್ದಾನೆ.

ದೇವತೆಗಳು ಅಲ್ಲಿಂದ ಎರಡನೇ ದ್ವಾರಕ್ಕೆ ಬಂದಿದ್ದಾರೆ. ಅದು ಇನ್ನೂ ಹೆಚ್ಚು ಸುಂದರವಾಗಿದೆ. ಅಲ್ಲಿ ದ್ವಾರಪಾಲಕ ಚಂದ್ರಭಾನು. ಶ್ಯಾಮಲವರ್ಣದ ತರುಣ, ಕೈಯಲ್ಲಿ ಚಿನ್ನದ ಕೋಲು. ರತ್ನಾಭರಣಭೂಷಿತನಾಗಿ ರತ್ನಸಿಂಹಾಸನದಲ್ಲಿ ಕುಳಿತಿದ್ದಾನೆ. ಐದು ಲಕ್ಷ ಗೋಪಾಲಕರು ವನ ಅನುಚರರು. ಅವನ ಅನುಜ್ಞೆ ಪಡೆದು ದೇವತೆಗಳು ಮೂರನೇ ದ್ವಾರಕ್ಕೆ ಬಂದರು. ಅಲ್ಲಿ ಸೂರ್ಯಭಾನು ದ್ವಾರಪಾಲಕ. ರಾಧಾಕೃಷ್ಣರಿಗೆ ಬಹಳ ಪ್ರಿಯ. ರತ್ನದ ಕೋಲನ್ನೂ ಕೊಳಲನ್ನೂ ಹಿಡಿದಿದ್ದಾನೆ. ಒಂಬತ್ತು ಲಕ್ಷ ಗೋಪಾಲಕರು ಅವನಿಗೆ ಅನುಚರರು. ಮುಂದೆ ನಾಲ್ಕನೆ ದ್ವಾರ. ಅಲ್ಲಿ ವಸುಭಾನು ದ್ವಾರಪಾಲಕ. ರತ್ನಾಲಂಕಾರಭೂಷಿತನಾಗಿ ರತ್ನದ ಕೋಲನ್ನು ಹಿಡಿದು ರತ್ನಸಿಂಹಾಸನದಲ್ಲಿ ಕುಳಿತಿದ್ದಾನೆ. ಐದನೆಯ ದ್ವಾರದಲ್ಲಿ ದೇವಭಾನು ದ್ವಾರಪಾಲಕ. ಹತ್ತು ಲಕ್ಷ ಅನುಚರರೊಂದಿಗೆ ರತ್ನಸಿಂಹಾಸನಸ್ಥನಾದ ಆತನ ಅನುಜ್ಞೆ ಪಡೆದು ಆರನೇ ದ್ವಾರದಲ್ಲಿ ಶುಕ್ರಭಾನುವನ್ನು ಕಾಣುತ್ತಾರೆ. ಅಲ್ಲಿಂದ ಏಳನೇ ದ್ವಾರಕ್ಕೆ ಬರುತ್ತಾರೆ. ಅಲ್ಲಿ ರತ್ನಭಾನು ದ್ವಾರಪಾಲಕ. ಹನ್ನೆರಡು ಲಕ್ಷ ಗೋಪಾಲಕರು ಅವನಿಗೆ

ಅನುಚರರು. ಎಂಟನೇ ದ್ವಾರದಲ್ಲಿ ಸುಪಾರ್ಶ್ವಕನೂ ಹನ್ನೆರಡು ಲಕ್ಷ ಗೋಪಾಲಕ ಅನುಚರರಿಂದ ಯುಕ್ತನಾಗಿದ್ದಾನೆ. ಒಂಬತ್ತನೇ ದ್ವಾರದಲ್ಲಿ ಸುಬಲ. ಇವನಿಗೂ ಹನ್ನೆರಡು ಲಕ್ಷ ಅನುಚರರು. ಹತ್ತನೆ ದ್ವಾರದಲ್ಲಿ ಸುದಾಮ. ಇವನಿಗೆ ಇಪ್ಪತ್ತು ಲಕ್ಷ ಗೋಪಾಲಕರು ಅನುಚರರು. ಹನ್ನೊಂದನೆ ದ್ವಾರದಲ್ಲಿ ಶ್ರೀದಾಮ. ಈತ ರಾಧೆಗೆ ಮಗನಂತೆ ಪ್ರೀತಿಪಾತ್ರ. ಕೋಟಿ ಗೋಪಾಲಕರು ಇವನ ಅನುಚರರು.

ಮುಂದೆ ಹನ್ನೆರಡನೇ ದ್ವಾರದಲ್ಲಿ ನವಯೌವನ ಸಂಪನ್ನೆಯರಾದ ಪೀತಾಂಬರ ಉಟ್ಟು ರತ್ನಾಭರಣಗಳನ್ನು ತೊಟ್ಟ ಕೋಟಿ ಗೋಪಾಂಗನೆಯರು. ಮುಂದೆ ಮೂರು ದ್ವಾರಗಳಲ್ಲಿಯೂ ಹೀಗೇ ಸುಂದರ ಗೋಪಾಂಗನೆಯರನ್ನು ಕಂಡು ಸ್ವಪ್ನದಂತೆ ಅದ್ಭುತವಾಗಿದೆ ಎಂದುಕೊಂಡು ಹದಿನಾರನೆ ದ್ವಾರಕ್ಕೆ ಬರುತ್ತಾರೆ ದೇವತೆಗಳು. ಅಲ್ಲಿ ಗೋಪಿಯರಲ್ಲಿ ಮುಖ್ಯರಾದ ಮೂವತ್ತುಮೂರು ಮಂದಿ ಸಖಿಯರು. ಪರಮಾಶ್ಚರ್ಯಕರವಾದ ಆ ದ್ವಾರವನ್ನು ಬಿಟ್ಟಕಂಗಳಿಂದ ನೋಡುತ್ತ ಮೈ ರೋಮಾಂಚಗೊಂಡು ಭಕ್ತಿಯ ಉದ್ರೇಕದಿಂದ ಕಣ್ಣುಗಳಲ್ಲಿ ನೀರು ತುಂಬಿಕೊಂಡು ರಾಧೆಯ ಅಂತಃಪುರವನ್ನು ಕಂಡರು.

ಅದು ಅಮೂಲ್ಯ ರತ್ನಗಳಿಂದ ನಿರ್ಮಿತವಾಗಿದೆ. ಪಾರಿಜಾತದ ಮಾಲೆ ಚಂದನ ಅಗುರು ಕಸ್ತೂರಿ ಕುಂಕುಮ ಬಿಳಿಧಾನ್ಯ ಬಿಳಿ ಹೂ ಹವಳ ಫಲ ತಂಡುಲ ದೂರ್ವೆ ಅಕ್ಷತೆ ಅರಳು ರತ್ನಕಲಶಗಳಿಂದ ಬ್ರಹ್ಮಾಂಡದಲ್ಲಿಯೇ ದುರ್ಲಭವಾದ ವಸ್ತುಗಳಿಂದ ಶೋಭಿಸುತ್ತಿದೆ. ಅಲ್ಲಿ ನಾನಾ ಪ್ರಕಾರದ ವಾದ್ಯಗಳ ಮಧುರ ನಾದ, ರಾಧಾಕೃಷ್ಣರ ಗುಣಗಾನ ಗೈವ ಸಂಗೀತ, ಸುಂದರ ನೃತ್ಯಗಳ ನಡುವೆ ನೂರು ಧನುಃಪ್ರಮಾಣದ ವರ್ತುಲಾಕಾರ ರತ್ನಸಿಂಹಾಸನದಲ್ಲಿ, ಸಪ್ತತಾಲಪ್ರಮಾಣದ ಕೋಟಿಸೂರ್ಯರ ಪ್ರಭೆಯಿಂದ ಜ್ವಲಿಸುತ್ತ ಅದ್ಭುತ ತೇಜೋಮಯ ಸರ್ವಬೀಜ ಸ್ವರೂಪದಲ್ಲಿ ಪರಮಾತ್ಮ ಕುಳಿತಿದ್ದುದನ್ನು ದೇವತೆಗಳು ಕಂಡು ಪರಮಾನಂದದಿಂದ ಕಣ್ಣುಗಳಲ್ಲಿ ನೀರು ಸುರಿಸಿದರು. ಸರ್ವಾಂಗಗಳಲ್ಲಿ ಪುಲಕಿತರಾದರು. ಆತೇಜಃಸ್ವರೂಪಿಗೆ ನಮಿಸಿದರು, ಧ್ಯಾನಿಸಿದರು. ಸೃಷ್ಟಿಕರ್ತನಾದ ಬ್ರಹ್ಮ ತನ್ನ ಬಲದಲ್ಲಿ ಶಿವ, ಎಡದಲ್ಲಿ ಧರ್ಮರೊಡನೆ ನಿಂತು ಕೈಮುಗಿದು ಧ್ಯಾನ ಮಾಡುತ್ತ ಭಕ್ತ್ಯುದ್ರೇಕದಿಂದ ಗುಣಾತೀತನಾದ ಪರಾತ್ಪರ ಪರಮಾತ್ಮನನ್ನು ಸ್ತುತಿಸಿದ.

**ಬ್ರಹ್ಮ:-** ತೇಜೋರೂಪ ಪರಮಾತ್ಮ, ನಿನಗೆ ನಮಸ್ಕಾರ. ನೀನು ವರದಾಯಕರಿಗೆ ವರದಾನ ಮಾಡುವವ. ಸರ್ವಕಾರಣ, ಮಂಗಲಗಳಿಗೆ ಮಂಗಲ. ಮಂಗಲಪ್ರದ, ಮಂಗಲಾಧಾರ, ನಿರ್ಲಿಪ್ತ ಆತ್ಮರೂಪ, ಪರಾತ್ಪರ, ನಿರೀಹ, ಅವಿತರ್ಕ್ಯ, ಸಗುಣನೂ ಆಗಿರುವೆ, ನಿರ್ಗುಣನೂ ಆಗಿರುವೆ. ಸಾಕಾರನೂ ಹೌದು ನಿರಾಕಾರನೂ ಹೌದು. ವ್ಯಕ್ತ ಅವ್ಯಕ್ತನಾಗಿದ್ದು ಅನಿರ್ವಚನೀಯನೆನಿಸಿರುವೆ. ಗುಣತ್ರಯ ವಿಭಾಗಕ್ಕಾಗಿ ರೂಪತ್ರಯ ತಳೆದಿರುವೆ. ವೇದಕ್ಕೂ ನಿಲುಕದ ನಿನ್ನನ್ನು ಯಾರು ಏನು ಅರಿಯ ಬಲ್ಲರು? ಸರ್ವಾಧಾರ ಸರ್ವರೂಪ ಸರ್ವಬೀಜ, ಸರ್ವಾಂತಕ, ಅನಂತ, ಸಶರೀರ, ಅಶರೀರ, ಅಸಾಕ್ಷಿ ಸರ್ವಸಾಕ್ಷಿ ನೀನೆ ಆಗಿರುವೆ. ಕಾಲಿಲ್ಲ, ನಡೆಯುವೆ. ಕಣ್ಣಿಲ್ಲ, ನೋಡುವೆ. ಕೈ ಬಾಯಿಗಳಿಲ್ಲ, ಉಣ್ಣುವೆ. ನಿನಗಿದೋ ನಮಸ್ಕಾರ! ವೇದೋಕ್ತವಾದುದನ್ನು

ವರ್ಣಿಸಬಲ್ಲೆವು. ವೇದಕ್ಕೆ ನಿಲುಕದ ನಿನ್ನನ್ನು ಹೇಗೆ ಬಣ್ಣಿಸುವೆವು? ನೀನು ಸರ್ವೇಶ, ನಿನಗೆ ಈಶರಿಲ್ಲ. ಎಲ್ಲಕ್ಕೂ ಆದಿ, ನಿನಗಾದಿ ಇಲ್ಲ. ಸರ್ವಾತ್ಮ, ನಿನಗಾತ್ಮನಿಲ್ಲ. ನಾನು ಸೃಷ್ಟಿಕರ್ತ, ವೇದೋಪದೇಶಕ, ಧರ್ಮನು ಪಾಲಕ, ಹರನು ಸಂಹಾರಕ. ನಾವು ಯಾರೂ ನಿನ್ನನ್ನು ಸ್ತುತಿಸಲು ಶಕ್ತರಲ್ಲ.

ನಿನ್ನಾಜ್ಞೆಯಂತೆ ನಾವು ಸೃಷ್ಟಿ ಮಾಡುವೆವು, ಪಾಲನ ಮಾಡುವೆವು, ಸಂಹಾರ ಮಾಡುವೆವು, ಅದೆಲ್ಲ ನಿನ್ನ ಸೇವೆ. ನಾವು ನಿನ್ನ ಭಕ್ತರು, ಭಕ್ತರಿಗೆ ಫಲದಾಯಕ ನೀನು, ನಿನ್ನ ಸೇವೆಗೆ ನಮ್ಮಂಥ ಸೇವಕರು ಲೆಕ್ಕವಿಲ್ಲದಷ್ಟಿದ್ದಾರೆ. ನೆಲದ ಮೇಲಿನ ದೂಳಿನ ಕಣಗಳಂತೆ ಲೆಕ್ಕಕ್ಕೇ ಸಿಗಲಾರದಷ್ಟಿದ್ದಾರೆ. ಒಂದೊಂದು ರೋಮಕೂಪದಲ್ಲಿ ಒಂದೊಂದು ಬ್ರಹ್ಮಾಂಡವನ್ನು ಧರಿಸಿರುವ ಮಹಾವಿಷ್ಣು ನಿನ್ನ ಹದಿನಾರನೆ ಒಂದಂಶ ಎನಿಸಿದ್ದಾನೆ. ನಿನ್ನ ಭಕ್ತರ ದಾಸ್ಯವನ್ನು ಬಯಸಿ ಯೋಗಿಗಳು ನಿನ್ನನ್ನು ಧ್ಯಾನಿಸುತ್ತಾರೆ. ನಿನ್ನ ಸುಂದರ ಮನೋಹರ ಬಾಲರೂಪವನ್ನು ನಮಗೆ ತೋರು, ಪೀತಾಂಬರ ಉಟ್ಟು ನವಿಲ ಗರಿ ತೊಟ್ಟು ಜಾಜಿಹೂಮಾಲೆಯಿಂದ ಅಲಂಕೃತನಾದ ಹೊಸ ಮೋಡದಂತೆ ಕಪ್ಪಾದ ದ್ವಿಭುಜ ಮುರಳೀಧರ ಶ್ರೀಕೃಷ್ಣರೂಪವನ್ನು ನಮಗೆ ತೋರು. ಕದಂಬವೃಕ್ಷದ ನೆರಳಲ್ಲಿ ರಾಸಕ್ರೀಡೆಯಾಡುವ, ರಾಧೆಯ ವಕ್ಷಃಸ್ಥಲದಲ್ಲಿ ಮೆರೆಯುವ, ಭಕ್ತರಿಗೆ ಇಷ್ಟವಾದ ನಿನ್ನ ರೂಪವನ್ನು ಕಾಣಲು ಯಾರು ಉತ್ಸುರಾಗದಿದ್ದಾರು?'' ಹೀಗೆ ಹೇಳಿ ಬ್ರಹ್ಮ ನಮಿಸಿದ. ಹೀಗೇ ಧರ್ಮನೂ ಸ್ತುತಿಸಿದ, ಶಂಕರನೂ ಸ್ತುತಿಸಿದ. ಕಣ್ಣೀರು ಸುರಿಸುತ್ತ ನಮಿಸಿದ. ಮೂವರೂ ಪುನಃ ಪುನಃ ಸ್ತೋತ್ರ ಮಾಡಿದರು. ಶ್ರೀಕೃಷ್ಣನ ತೇಜಸ್ಸಿನಿಂದ ತಾವೂ ತುಂಬಿ ಜ್ವಲಿಸಿದರು.

ಬ್ರಹ್ಮ ಧರ್ಮ ಶಂಕರರು ಮಾಡಿದ ಈ ಸ್ತುತಿಯನ್ನು ಹರಿಪೂಜಾಕಾಲದಲ್ಲಿ ಭಕ್ತಿಯಿಂದ ಪಠಿಸುವವನಿಗೆ ದುರ್ಲಭವಾದ ದೃಢವಾದ ಹರಿಭಕ್ತಿ ಲಭಿಸುತ್ತದೆ. ಸುರ ಅಸುರ ಮುನೀಂದ್ರರಿಗೂ ದೊರಕದಂಥ ಹರಿದಾಸ್ಯ ಲಭಿಸುತ್ತದೆ. ಅಣಿಮಾದಿ ಅಷ್ಟಸಿದ್ಧಿಗಳು ಸಾಲೋಕ್ಯಾದಿ ಮುಕ್ತಿಗಳು ಲಭಿಸುತ್ತವೆ. ಇಹದಲ್ಲಿ ವಿಷ್ಣುತುಲ್ಯನಾಗಿ ಕೀರ್ತಿ ಗೌರವ ಸಂಪಾದಿಸುವನು. ವಾಕ್‌ಸಿದ್ಧಿ, ಮಂತ್ರಸಿದ್ಧಿ, ಸರ್ವಸೌಭಾಗ್ಯಸಿದ್ಧಿಗಳನ್ನು ಪಡೆಯುವನು. ಪುತ್ರಸಂಪತ್ತು, ವಿದ್ಯೆ, ಕವಿತ್ವ, ಸ್ಥಿರವಾದ ಐಶ್ವರ್ಯ, ಪತಿವ್ರತೆಯಾದ ಪತ್ನಿ, ಒಳ್ಳೆಯ ಮಕ್ಕಳನ್ನೂ ಪಡೆದು ಶಾಶ್ವತ ಕೀರ್ತಿಯನ್ನೂ ಕೊನೆಯಲ್ಲಿ ಕೃಷ್ಣನ ಸಾಮೀಪ್ಯವನ್ನೂ ಪಡೆಯುವನು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಗೋಲೋಕವರ್ಣನೆಯಲ್ಲಿ ಶ್ರೀಕೃಷ್ಣಸ್ತೋತ್ರರಾಜ ಪಠನವೆಂಬ ಐದನೆಯ ಅಧ್ಯಾಯ ಮುಗಿದುದು*

—o—

**ನಾರಾಯಣ:-** ಕಣ್ಣಿಗೆ ಕಾಣುತ್ತಿದ್ದ ತೇಜಃಪುಂಜ ಒಂದನ್ನು ದೇವತೆಗಳು ಕಂಡು ಹೀಗೆ ಧ್ಯಾನಿಸಿ ಸ್ತುತಿಸಿದಾಗ ಆ ತೇಜಸ್ಸಿನ ನಡುವೆ ಮಂದಹಾಸಯುಕ್ತವಾದ ಮೇಘವರ್ಣದ ಮನೋಹರ ಪರಮಾಹ್ಲಾದಕ ತ್ರಿಲೋಕಮೋಹಕ ಸುಂದರಶರೀರ ಗೋಚರವಾಯಿತು. ಪೀತಾಂಬರ ಉಟ್ಟು ರತ್ನಾಭರಣಗಳಿಂದ ಅಲಂಕೃತವಾದ ರೂಪ, ಕೌಸ್ತುಭರತ್ನಯುಕ್ತವಾಗಿ ಹೊಳೆಯುವ ರೂಪ. ಜೊತೆಗೆ ಪ್ರೇಯಸಿ ರಾಧೆ. ಓರೆನೋಟದಿಂದ ಪ್ರಿಯಕರನನ್ನು ಈಕ್ಷಿಸುತ್ತಿದ್ದಾಳೆ. ಅರಳಿದ ನಗುಮೊಗದವಳು. ತಾವರೆಗಣ್ಣಿನವಳು. ಅಮೂಲ್ಯ ರತ್ನಾಭರಣಗಳನ್ನು ಧರಿಸಿದ್ದಾಳೆ. ಜಾಜಿಯ ಹೂಗಳನ್ನು ಮುಡಿದಿದ್ದಾಳೆ. ಪುಟಕ್ಕಿಟ್ಟ ಚಿನ್ನದ ಮೈಬಣ್ಣದಿಂದೊಪ್ಪುವ ಚೆಲುವೆ ಜಗದೀಶ್ವರಿಯಾದ ರಾಧೆಯನ್ನೂ ದೇವತೆಗಳು ಕಂಡರು. ಅವರ ಮನೋರಥ ಪೂರ್ಣ ಈಡೇರಿತು. ಸ್ತುತಿಸತೊಡಗಿದರು.

**ಬ್ರಹ್ಮ:-** ಪ್ರಭು, ನಿನ್ನ ಪಾದಕಮಲದಲ್ಲಿ ದುಂಬಿಯಂತೆ ನನ್ನ ಮನಸ್ಸು ಪ್ರೇಮಭಕ್ತಿಯಿಂದ ಸದಾ ಆಸಕ್ತವಾಗಿರಲಿ. ಅದಕ್ಕೆ ಪರಿಪಕ್ವವಾದ ಭಕ್ತಿಯನ್ನೂ ದಾಸ್ಯವನ್ನೂ ನೀಡು. ಪ್ರಾಪಂಚಿಕ ಭೋಗಭಾಗ್ಯಗಳು ಉಂಟುಮಾಡುವ ತಾಪಕ್ಕೆ ನಿನ್ನ ಆ ಭಕ್ತಿದಾಸ್ಯಗಳೇ ಔಷಧವೆನಿಸಲಿ.

**ಶಂಕರ:-** ನನ್ನ ಮನಸ್ಸು ಸಮುದ್ರದಲ್ಲಿ ಮೀನಿನಂತೆ ಸಂಸಾರಸಾಗರದಲ್ಲಿ ಮುಳುಗಿದೆ. ಬಲು ಕೆಟ್ಟದಾದ ಜನನಮರಣಚಕ್ರದಿಂದ ನನ್ನನ್ನು ಪಾರುಮಾಡು. ಅದಕ್ಕೆ ನಿನ್ನ ಪಾದಕಮಲದಲ್ಲಿ ಭಕ್ತಿ ನೀಡು.

**ಧರ್ಮ:-** ನಿನ್ನ ಭಕ್ತರ ಸಂಗ ನೀಡು. ವಿಷಯಾಸೆಯ ಬಂಧನವನ್ನು ಹರಿಯಲು ಅದುವೇ ಹರಿತವಾದ ಕತ್ತಿಯಾಗುವುದು. ನಿನ್ನ ಪಾದಕಮಲದ ಬಳಿ ನನ್ನನ್ನು ಇರಿಸಬಲ್ಲ ನಿನ್ನ ಭಕ್ತಿಯನ್ನೇ ಜನ್ಮಜನ್ಮದಲ್ಲಿಯೂ ನನಗೆ ನೀಡು.

ಹೀಗೆ ಸ್ತೋತ್ರಮಾಡಿ ದೇವತೆಗಳು ತನ್ನ ಮುಂದೆ ನಿಂತಾಗ ಶ್ರೀಕೃಷ್ಣ ನಗುಮೊಗದಿಂದ ಅವರಿಗೆ ಹಿತನುಡಿ ನುಡಿದ.

**ಶ್ರೀಕೃಷ್ಣ:-** ದೇವತೆಗಳೇ, ನೀವು ನನ್ನವರು. ಸದಾ ಕುಶಲಿಗಳು. ಅದರಿಂದ ಕುಶಲಪ್ರಶ್ನೆ ಯುಕ್ತವಾಗುವುದಿಲ್ಲ. ಏಕೆ ಚಿಂತೆ? ನಿಶ್ಚಿಂತರಾಗಿರಿ. ನಾನಿರುವಾಗ ಏತರ ಚಿಂತೆ? ನಿಮ್ಮ ಅಭಿಪ್ರಾಯ ಏನೆಂಬುದು ನನಗೆ ತಿಳಿದಿದೆ. ಕಾಲಾನುಸಾರ ಶುಭ ಅಶುಭಗಳು ಆಗುತ್ತಲೆ ಇರುತ್ತವೆ. ಅಲ್ಪವಿರಲಿ, ಮಹತ್ತೇ ಇರಲಿ, ಎಲ್ಲವೂ ಕಾಲಾಧೀನ. ಆಯಾ ಕಾಲದಲ್ಲಿಯೆ ಮರಗಳು ಹೂ ಕಾಯಿ ಹಣ್ಣುಗಳನ್ನು ಕೊಡುತ್ತವೆ. ಸುಖ ದುಃಖ ಆಪತ್ತು ಸಂಪತ್ತು ಶೋಕ ಚಿಂತೆ ಶುಭ ಅಶುಭಗಳು ಕೇವಲ ಪ್ರಿಯವಾಗಲಿ, ಕೇವಲ ಅಪ್ರಿಯವಾಗಲಿ ಮೂಲೋಕದಲ್ಲಿ ಯಾರಿಗೆ ಬಂದೊದಗುತ್ತದೆ? ಪ್ರಿಯ ಅಪ್ರಿಯಗಳೆರಡೂ ಕಾಲಾನುಗುಣವಾಗಿ ಬರುತ್ತವೆ. ರಾಜರು ಮನುಗಳು ಭೂಮಿಯಲ್ಲಿ ಅನೇಕ ಮಂದಿ ಆಗಿಹೋದುದನ್ನು ನೀವೇ ಕಂಡಿರುವಿರಿ. ತಮ್ಮ ಕರ್ಮಾನುಸಾರ ಅವರು ಕಾಲವಶರಾಗಿದ್ದಾರೆ. ಈಗ ನೀವು

ಗೋಲೋಕದಲ್ಲಿ ಕಳೆದ ಒಂದು ಕ್ಷಣದಲ್ಲಿ, ಭೂಮಿಯಲ್ಲಿ ಏಳು ಮನ್ವಂತರಗಳೇ ಕಳೆದುಹೋಗಿವೆ. ಏಳು ಇಂದ್ರರು ಆಗಿಹೋಗಿದ್ದಾರೆ. ಈಗ ಎಂಟನೆಯ ದೇವೇಂದ್ರ ಆಳುತ್ತಿದ್ದಾನೆ. ನನ್ನ ಈ ಕಾಲಚಕ್ರ ಹಗಲು ರಾತ್ರಿ ಹೀಗೆ ಸುತ್ತುತ್ತಲೇ ಇರುತ್ತದೆ. ಇಂದ್ರರು ಮನುಗಳು ರಾಜರು ಎಲ್ಲರೂ ಕಾಲವಶರಾಗಿದ್ದಾರೆ. ಒಳ್ಳೆಯ ಕೀರ್ತಿ ಪುಣ್ಯ ಎಲ್ಲವೂ ಈಗ ಭೂಮಿಯಲ್ಲಿ ಕೇವಲ ಕಥೆಯಾಗಿ ಉಳಿದುಕೊಂಡಿವೆ. ಈಗಿನ ರಾಜರು ದುಷ್ಟರು, ವಿಷ್ಣುನಿಂದಕರು, ಮಹಾ ಬಲಪರಾಕ್ರಮಿಗಳು, ಅವರೂ ಮುಂದೆ ಒಂದು ಕಾಲದಲ್ಲಿ ಅಳಿದು ಹೋಗುವರು. ಗಾಳಿ ನಿರಂತರ ಬೀಸುತ್ತದೆ. ಬೆಂಕಿ ಸುಡುತ್ತದೆ. ಸೂರ್ಯ ಬೆಳಗುತ್ತಾನೆ. ದೇಹಗಳಲ್ಲಿ ವ್ಯಾಧಿಗಳು ಹರಡುತ್ತವೆ. ಮೃತ್ಯು ಜಂತುಗಳ ಮೇಲೆ ಸವಾರಿ ಮಾಡುತ್ತದೆ. ಮೋಡಗಳು ಮಳೆಗರೆಯುತ್ತವೆ. ಬ್ರಹ್ಮನಿಷ್ಠ ತಪೋನಿಷ್ಠರಾದ ಬ್ರಹ್ಮರ್ಷಿ ತಪಸ್ವಿಗಳು, ಯೋಗ ನಿಷ್ಠರಾದ ಯೋಗಿಗಳು ತಮ್ಮ ತಮ್ಮ ಕರ್ಮಧರ್ಮಗಳಲ್ಲಿ ತತ್ಪರರಾಗಿರುತ್ತಾರೆ. ನನ್ನ ಭಕ್ತರು ನಿಃಶಂಕೆಯಿಂದ ಕರ್ಮಬಂಧನವನ್ನು ತೊಡೆದುಕೊಳ್ಳುತ್ತಾರೆ. ಎಲ್ಲರೂ ನನ್ನಿಚ್ಛೆಯಂತೆ ನಡೆಯುತ್ತಾರೆ.

ಕಾಲಕ್ಕೆ ಕಾಲ ನಾನು, ಸೃಷ್ಟಿಕರ್ತನಿಗೆ ಸೃಷ್ಟಿಕರ್ತನಾನು, ಸಂಹಾರಕನಿಗೆ ಸಂಹಾರಕ ನಾನು, ಪಾಲಕನಿಗೆ ಪಾಲಕ ನಾನು, ನನ್ನಾಜ್ಞೆಯಂತೆ ಸಂಹಾರಮಾಡುವ ಹರ ಸಂಹಾರಕನೆನಿಸಿದ್ದಾನೆ. ನನ್ನಿಚ್ಛೆಯಂತೆ ಸೃಷ್ಟಿಮಾಡುವ ನೀನು ಸೃಷ್ಟಿಕರ್ತನೆನಿಸಿರುವೆ. ನನ್ನಿಚ್ಛೆಯಂತೆ ಪಾಲನ ಮಾಡುವ ಧರ್ಮ ಪಾಲಕನೆನಿಸಿದ್ದಾನೆ. ಬ್ರಹ್ಮಾದಿ ತೃಣಪರ್ಯಂತ ಎಲ್ಲವನ್ನೂ ಆಳುವವನು, ಎಲ್ಲರ ಕರ್ಮಗಳಿಗೆ ಫಲ ನೀಡುವವನು ಕರ್ಮಬಂಧನ ತೊಡೆಯುವವನು ನಾನು. ನಾನು ಯಾರನ್ನು ಸಂಹರಿಸುವೆನೋ ಅವನನ್ನು ಯಾರೂ ರಕ್ಷಿಸಲಾರ. ಯಾರನ್ನು ಕಾಯುವೆನೋ ಅವನನ್ನು ಯಾರೂ ಕೊಲ್ಲಲಾರ. ನಿತ್ಯಶರೀರಿಗಳಾದ ಭಕ್ತರನ್ನು ನಾನೂ ಕೊಲ್ಲಲಾರೆ. ಭಕ್ತರು ನನ್ನ ಪಾದಸೇವೆ ಮಾಡುತ್ತ ನನ್ನ ಬಳಿಯೆ ಇರುತ್ತಾರೆ.

ನಾನು ಅವರನ್ನು ರಕ್ಷಿಸುತ್ತ ಅವರ ಬಳಿಯೆ ಇರುತ್ತೇನೆ. ಬ್ರಹ್ಮಾಂಡದಲ್ಲಿ ಎಲ್ಲರೂ ಹುಟ್ಟುತ್ತಾರೆ ಸಾಯುತ್ತಾರೆ, ನನ್ನ ಭಕ್ತರು ಮಾತ್ರ ಸಾಯುವುದಿಲ್ಲ. ಅದರಿಂದ ತಿಳಿದವರು ನನ್ನ ದಾಸ್ಯವನ್ನು ಬಯಸುತ್ತಾರೆ ಹೊರತು ಬೇರೇನೂ ವರವನ್ನು ಕೇಳುವುದಿಲ್ಲ. ಯಾರು ನನ್ನ ದಾಸ್ಯವನ್ನು ಬಯಸುತ್ತಾರೆ ಅವರು ಧನ್ಯರು. ಬೇರೆ ಎಲ್ಲರೂ ವಂಚಿತರು. ಜನನ ಮರಣ ಮುಪ್ಪು ವ್ಯಾಧಿ ಭಯಗಳು ಯಮಯಾತನೆಗಳು ಕಾಮ್ಯಕರ್ಮಿಗಳಿಗೇ ಹೊರತು ಭಕ್ತರಿಗಲ್ಲ. ಕಾಮ್ಯಕರ್ಮಿಗಳಿಗೆ ಪಾಪಪುಣ್ಯ ಲೇಪವಿದೆ. ಭಕ್ತರಿಗಿಲ್ಲ.

**ಅಹಂ ಪ್ರಾಣಶ್ಚ ಭಕ್ತಾನಾಂ ಭಕ್ತಾಃ ಪ್ರಾಣ ಮಮಾಪಿ ಚ ।**
**ಧ್ಯಾಯಂತೇ ತೇ ಚ ಮಾಂ ನಿತ್ಯಂ ತಾನ್ ಸ್ಮರಾಮಿ ದಿವಾನಿಶಂ ॥**

ನಾನು ಭಕ್ತರಿಗೆ ಪ್ರಾಣ, ಭಕ್ತರು ನನಗೆ ಪ್ರಾಣ. ಅವರು ಸದಾ ನನ್ನನ್ನು ಸ್ಮರಿಸುತ್ತಾರೆ. ನಾನು ಸದಾ ಅವರನ್ನು ಸ್ಮರಿಸುತ್ತೇನೆ.

ನನ್ನ ಸುದರ್ಶನ ಚಕ್ರ ಹದಿನಾರು ಅರಗಳುಳ್ಳದ್ದು ಬಲು ತೀಕ್ಷ್ಣವಾದುದು. ಅದರ ಹದಿನಾರನೆ ಒಂದಂಶದಷ್ಟೂ ಬೇರೆಯವರಿಗೆ ಶಕ್ತಿ ಇಲ್ಲ. ಅಂಥ ಚಕ್ರವನ್ನು

ನಾನು ಭಕ್ತರ ಬಳಿ ಅವರ ರಕ್ಷಣೆಗಾಗಿ ಇರಿಸುತ್ತೇನೆ. ಆದರೂ ತೃಪ್ತಿ ಇಲ್ಲ, ನಾನೂ ಅವರ ಬಳಿ ಇರುತ್ತೇನೆ.

**ನ ಮೇ ಸ್ವಾಸ್ಥ್ಯಂ ಚ ವೈಕುಂಠೇ ಗೋಲೋಕೇ ರಾಧಿಕಾಂತಿಕೇ।**
**ಯತ್ರ ತಿಷ್ಠಂತಿ ಭಕ್ತಾಸ್ತೇ ತತ್ರ ತಿಷ್ಠಾಮ್ಯಹರ್ನಿಶಂ॥**

ನಾನು ವೈಕುಂಠದಲ್ಲಾಗಲಿ ಗೋಲೋಕದಲ್ಲಿ ರಾಧೆಯ ಬಳಿಯಲ್ಲಾಗಲಿ ನಿಶ್ಚಿಂತೆಯಿಂದ ಇರುವುದಿಲ್ಲ. ಎಲ್ಲಿ ನನ್ನ ಭಕ್ತರೋ ಅಲ್ಲಿ ನಾನು.

ಪ್ರಾಣಕ್ಕಿಂತ ಪ್ರಿಯೆಯಾದ ರಾಧೆ ನನ್ನೆದೆಯಲ್ಲಿ ಸದಾ ಇರುತ್ತಾಳೆ. ಆದರೂ ಅವಳಿಗಿಂತ ನನಗೆ ನೀವು ದೇವತೆಗಳು ಪ್ರಿಯರು. ಲಕ್ಷ್ಮಿಯೂ ಅಲ್ಲ, ಭಕ್ತರೇ ನನಗೆ ಹೆಚ್ಚು ಪ್ರಿಯರು. ಭಕ್ತರು ಭಕ್ತಿಯಿಂದ ನಿವೇದಿಸಿದ್ದನ್ನು ನಾನು ಪ್ರೀತಿಯಿಂದ ಉಣ್ಣುತ್ತೇನೆ. ಅಭಕ್ತರು ನೀಡಿದ್ದನ್ನು ಉಣಲಾರೆ. ಹೆಂಡತಿ ಮಕ್ಕಳನ್ನೂ ಬಂಧುಗಳನ್ನೂ ತೊರೆದು ನನ್ನನ್ನು ಧ್ಯಾನಿಸುವ ಭಕ್ತರಿಗಾಗಿ ನಾನು ನಿಮ್ಮನ್ನೂ ತೊರೆಯಬಲ್ಲೆ. ನನ್ನ ಭಕ್ತರಾದ ಬ್ರಾಹ್ಮಣರನ್ನೂ ಗೋವುಗಳನ್ನೂ ಯಜ್ಞಗಳನ್ನೂ ದೇವತೆಗಳನ್ನೂ ಪೀಡಿಸುವವರು ಬೆಂಕಿಯಲ್ಲಿ ಹಾಕಿದ ಹುಲ್ಲುಕಡ್ಡಿಗಳಂತೆ ಕ್ಷಣದಲ್ಲಿ ನಾಶವಾಗುವರು. ನಾನು ಅವರಿಗೆ ಹಂತಕನಾಗಿರುವಾಗ ಯಾರೂ ಅವರನ್ನು ರಕ್ಷಿಸಲಾರರು. ಆದರಿಂದ ಭಕ್ತರ ರಕ್ಷಣೆಗಾಗಿ ದುಷ್ಟರ ನಾಶಕ್ಕಾಗಿ ನಾನು ಭೂಮಿಯಲ್ಲಿ ಅವತರಿಸುತ್ತೇನೆ. ನೀವೂ ಕೂಡ ನಿಮ್ಮ ಲೋಕಗಳಿಗೆ ಹೋಗಿ ಅಂಶರೂಪದಿಂದ ಭೂಮಿಯಲ್ಲಿ ಅವತರಿಸಿರಿ.

ಶ್ರೀಕೃಷ್ಣ ಹೀಗೆ ದೇವತೆಗಳಿಗೆ ಆದೇಶಿಸಿ ಗೋಪಗೋಪಿಯರನ್ನೂ ಕರೆದು ಹೇಳಿದ, ''ನೀವು ನಂದಗೋಕುಲಕ್ಕೆ ಹೋಗಿರಿ. ರಾಧೆ, ನೀನೂ ವೃಷಭಾನುವಿನ ಮನೆಗೆ ಹೋಗು. ಅವನ ಪತ್ನಿ ಕಲಾವತಿ, ಲಕ್ಷ್ಮಿಯ ಅಂಶದಿಂದ ಜನಿಸಿದವಳು, ದುರ್ವಾಸಮುನಿಯ ಶಾಪದಿಂದ ಪಿತೃಗಳ ಮಾನಸಕನ್ಯೆಯಾಗಿ ಹುಟ್ಟಿ ಸ್ತ್ರೀಯರಲ್ಲೆಲ್ಲ ಧನ್ಯೆಯಾಗಿ ಮಾನ್ಯೆಯಾಗಿದ್ದಾಳೆ. ನೀನು ಅವಳ ಮನೆಯಲ್ಲಿ ಅವತರಿಸು, ನಾನು ಬಾಲರೂಪದಿಂದ ನಿನ್ನನ್ನು ಸ್ವೀಕರಿಸುವೆನು. ನೀನು ನನಗೆ, ನಾನು ನಿನಗೆ ಪ್ರಾಣಕ್ಕಿಂತ ಮಿಗಿಲು. ನಮ್ಮಿಬ್ಬರಲ್ಲಿ ಭೇದವಿಲ್ಲ.''

ಶ್ರೀಕೃಷ್ಣನು ಆಡಿದ ಮಾತುಗಳನ್ನು ಕೇಳಿ ರಾಧೆ ಪ್ರೇಮವಿಹ್ವಲತೆಯಿಂದ ಕಣ್ಣೀರು ಸುರಿಸಿದಳು. ಅವಳ ಕಣ್ಣುಗಳೆಂಬ ಚಕೋರಿ ಕೃಷ್ಣನ ಮುಖಚಂದ್ರನ ಬೆಳದಿಂಗಳನ್ನು ಪಾನ ಮಾಡಿತು. ಗೋಪ ಗೋಪಿಯರೆಲ್ಲರೂ ಭೂಮಿಯಲ್ಲಿ ಗೋಪಾಲಕರ ಮನೆಮನೆಗಳಲ್ಲಿ ಅವತರಿಸಿದರು.

ಇತ್ತ ಶ್ರೀಕೃಷ್ಣನ ಮುಂದೆ ಒಂದು ಮಣಿಮಯವಾದ ಬಂಗಾರದ ರಥ ಬಂದಿಳಿದುದನ್ನು ಎಲ್ಲರೂ ಕಂಡರು. ರತ್ನಾಲಂಕಾರ, ಬಿಳಿ ಚಾಮರ, ದರ್ಪಣ, ತೆಳುವಾದ ಕೆಂಪು ಬಟ್ಟೆ, ರತ್ನಕಲಶ ಪಾರಿಜಾತಮಾಲೆಗಳಿಂದ ಅಲಂಕೃತವಾಗಿದ್ದ ಬಂಗಾರದ ಆ ರಥದಲ್ಲಿ ನೂರು ಸೂರ್ಯರ ಪ್ರಭೆಯಿಂದ ಬೆಳಗುವ ಶ್ಯಾಮಸುಂದರ ತೇಜೋಮಯ ಶರೀರ, ಶಂಖಚಕ್ರಗದಾಪದ್ಮಧಾರಿ, ಪೀತಾಂಬರ ಉಟ್ಟು ಕಿರೀಟ

ಕುಂಡಲ ವನಮಾಲಾ ಭೂಷಿತನಾಗಿ ಚಂದನ ಅಗುರು ಕಸ್ತೂರಿ ಕುಂಕುಮ ಬಳಿದುಕೊಂಡು ಮಂದಹಾಸದಿಂದ ಭಕ್ತರ ಮೇಲೆ ಅನುಗ್ರಹದೃಷ್ಟಿ ಹರಿಸುವ ಚತುರ್ಭುಜನಾದ ನಾರಾಯಣ, ಅವನ ಎಡದಲ್ಲಿ ಶುಕ್ಲವರ್ಣದ ಮೈ, ಶರತ್ಕಾಲದ ಹುಣ್ಣಿಮೆ ಚಂದ್ರನಂಥ ಮುಖ, ತಾವರೆಗಣ್ಣುಗಳು, ತೊಂಡೆ ಹಣ್ಣಿನಂತ ತುಟಿ, ಕೈಗಳಲ್ಲಿ ಕೊಳಲು ವೀಣೆ ಪುಸ್ತಕಗಳಿಂದ ಕೂಡಿದ್ದು ಪೀತಾಂಬರ ಉಟ್ಟಿರುವ ವಿದ್ಯಾಧಿದೇವಿ ಜ್ಞಾನರೂಪಳಾದ ಸರಸ್ವತಿ. ಬಲಭಾಗದಲ್ಲಿ ಪುಟಕ್ಕಿಟ್ಟ ಚಿನ್ನದ ಬಣ್ಣದವಳು ನೂರು ಚಂದ್ರಮರ ಕಾಂತಿ ಬೀರುವವಳು ಅಮೂಲ್ಯ ರತ್ನ ಖಚಿತ ಅಮೂಲ್ಯ ವಸ್ತ್ರ ಭೂಷಣಗಳಿಂದ ಭೂಷಿತಳು ಪಾರಿಜಾತದ ಮಾಲೆ ತೊಟ್ಟು ಜಾಜಿಯ ಮಾಲೆಗಳನ್ನು ಮುಡಿದು ಕಸ್ತೂರಿ ಸಿಂಧೂರಗಳ ಬಿಂದು ತಿಲಕಗಳನ್ನು ಧರಿಸಿದ ತಾವರೆಗಣ್ಣಿನವಳು ಕೈಯಲ್ಲಿ ಲೀಲಾಕಮಲ ಹಿಡಿದು ಓರೆಗಣ್ಣಿಂದ ತನ್ನನ್ನು ಈಕ್ಷಿಸುವ ನಾರಾಯಣನನ್ನು ಈಕ್ಷಿಸುವವಳು ಮಹಾಲಕ್ಷ್ಮಿ. ಲಕ್ಷ್ಮಿ ಸರಸ್ವತಿಯರೊಂದಿಗೆ ಸಪರಿವಾರನಾದ ನಾರಾಯಣ ರಥದಿಂದಿಳಿದು ಗೋಪಗೋಪಿಯರಿಂದ ಕೂಡಿದ ಶ್ರೀಕೃಷ್ಣನ ಸಭಾಮಂಟಪವನ್ನು ಪ್ರವೇಶಿಸಿದ. ಗೋಪಗೋಪಿಯರೆಲ್ಲರೂ ಕೈಮುಗಿದು ಸಾಮವೇದೋಕ್ತ ಸ್ತೋತ್ರದಿಂದ ಸ್ತೋತ್ರ ಮಾಡುತ್ತಿದ್ದಂತೆಯೇ ನಾರಾಯಣನು ಕೃಷ್ಣನ ಶರೀರವನ್ನು ಸೇರಿ ಅದರಲ್ಲಿ ಲೀನನಾದ. ಈಪರಮಾಶ್ಚರ್ಯವನ್ನು ಎಲ್ಲರೂ ನೋಡುತ್ತಿದ್ದಂತೆಯೇ ಅತ್ತ ಬಂಗಾರದ ರಥದಿಂದಿಳಿದು ಬಂದ ಪಾಲಕನಾದ ವಿಷ್ಣುವೂ ಪೀತಾಂಬರಧಾರಿ ವನಮಾಲಾಭೂಷಿತ ಚತುರ್ಬಾಹು ಸರ್ವಾಲಂಕಾರಭೂಷಿತವಾದ ತನ್ನ ಮನೋಹರ ರೂಪವನ್ನು ಶ್ರೀಕೃಷ್ಣನ ಶರೀರದಲ್ಲಿ ವಿಲೀನಗೊಳಿಸಿದ. ಅಷ್ಟರಲ್ಲಿ ಶುದ್ಧ ಸ್ಫಟಿಕದಂತೆ ಹೊಳೆವ ಮೈ ಬಣ್ಣದ ಸಂಕರ್ಷಣ ನೂರು ಸೂರ್ಯರ ಕಾಂತಿ ಬೀರುತ್ತ ಬಂದು ಸಾವಿರ ತಲೆಗಳಿಂದ ಮಣಿದು ಭಕ್ತಿಯಿಂದ ಕೃಷ್ಣನನ್ನು ಸ್ತುತಿಸಿದ. ನಾರದ, ನಾನೂ ಈಸಂಕರ್ಷಣನೂ ಧರ್ಮನ ಪುತ್ರರು. ಈತ ನರ, ನಾನು ನಾರಾಯಣ. ನಾನು ಕೃಷ್ಣನ ಪಾದಕಮಲದಲ್ಲಿ ಲೀನನಾದೆ. ನರ ಅರ್ಜುನನಾಗಿ ಜನಿಸಿದ.

ಬ್ರಹ್ಮಾದಿ ದೇವತೆಗಳು ನೋಡುತ್ತಿದ್ದಂತೆಯೇ ಇನ್ನೊಂದು ಬಂಗಾರದ ರಥ ಬಂದಿತು. ಬಿಳಿ ಚಾಮರ ದರ್ಪಣ ರತ್ನಕಲಶ ಪಾರಿಜಾತಮಾಲೆಗಳಿಂದ ಅಲಂಕೃತವಾದ ರಥ. ಸಾವಿರ ಚಕ್ರಗಳಿಂದ ಮನೋವೇಗದಿಂದ ಚಲಿಸುವ ಗ್ರೀಷ್ಮಕಾಲದ ಮಧ್ಯಾಹ್ನ ಸೂರ್ಯ ಪ್ರಭೆಯನ್ನೂ ಧಿಕ್ಕರಿಸುವಂಥ ರಥ. ದೇವದಾನವರ ಎಲ್ಲ ರಥಗಳಿಗಿಂತ ಉತ್ತಮವಾಗಿದ್ದು ಶಿವನ ಪ್ರೀತ್ಯರ್ಥವಾಗಿ ವಿಶ್ವಕರ್ಮ ನಿರ್ಮಿಸಿದ ರಥ. ಐವತ್ತುಯೋಜನ ಎತ್ತರ ನಾಲ್ಕು ಯೋಜನ ವಿಸ್ತಾರ ಉಳ್ಳದ್ದು. ರತಿಯಂಥ ಸುಂದರ ಸ್ತ್ರೀಯರಿಂದ ತುಂಬಿದ ರತಿ ಮಂದಿರಗಳು ಆ ರಥದಲ್ಲಿ ತುಂಬಿವೆ. ಅದರಲ್ಲಿ ಪುಟಕ್ಕಿಟ್ಟ ಚಿನ್ನದ ಬಣ್ಣದಿಂದ ಹೊಳೆವ ತೇಜೋರೂಪಳಾದ ಮೂಲಪ್ರಕೃತಿ ಪಾರ್ವತಿ. ಸಾವಿರಭುಜ ಉಳ್ಳವಳು. ನಾನಾ ಆಯುಧ ಧರಿಸಿದವಳು. ಮಂದಹಾಸದಿಂದ ಭಕ್ತರನ್ನು ಅನುಗ್ರಹಿಸುತ್ತ ಗಣೇಶ ಕಾರ್ತಿಕೇಯರೆಂಬ ತನ್ನೆರಡು ಮಕ್ಕಳೊಂದಿಗೆ ರಥದಿಂದ ಇಳಿದು ಶ್ರೀಕೃಷ್ಣನನ್ನು ನಮಿಸಿದಳು. ನಂತರ ಅನಂತ ಧರ್ಮ ಬ್ರಹ್ಮರಿಗೂ ನಮಿಸಿದಳು. ಗೋಪಗೋಪಿಯರು ಎಲ್ಲ ದೇವತೆಗಳನ್ನೂ ಕಂಡು ವಿಸ್ಮಿತರಾದರು.

ಶ್ರೀಕೃಷ್ಣ ಲಕ್ಷ್ಮಿಗೆ ಭೀಷ್ಮಕನ ಅರಮನೆಯಲ್ಲಿ ವೈದರ್ಭಿಯ ಉದರದಲ್ಲಿ ಅವತರಿಸಲು ಆದೇಶಿಸಿದ. ಕುಂಡಿನಪುರಕ್ಕೆ ತಾನು ಬಂದು ಅವಳನ್ನು ಪಾಣಿಗ್ರಹಣ ಮಾಡುವೆನೆಂದ. ಪಾರ್ವತಿಗೂ 'ನೀನು ನಂದಗೋಕುಲದಲ್ಲಿ ನಂದಕುಮಾರಿಯಾಗಿ ಯಶೋದೆಯ ಗರ್ಭದಲ್ಲಿ ಅವತರಿಸು. ಭೂಮಿಯಲ್ಲಿ ಹಳ್ಳಿ ಹಳ್ಳಿಗಳಲ್ಲಿ ವನಗಳಲ್ಲಿ ನಗರಗಳಲ್ಲಿ ಎಲ್ಲಕಡೆ ಜನರು ಭಕ್ತಿಯಿಂದ ನಿನ್ನಾರಾಧನೆ ನಡೆಸುವಂತೆ ಮಾಡುತ್ತೇನೆ. ನೀನು ಅವತರಿಸಿದೊಡನೆ ವಸುದೇವ ನನ್ನನ್ನು ತಂದು ಪ್ರಸೂತಿ ಗೃಹದಲ್ಲಿರಿಸಿ ನಿನ್ನನ್ನು ಒಯ್ಯುತ್ತಾನೆ. ಕಂಸನ ದೃಷ್ಟಿಗೋಚರಳಾದೊಡನೆ ನೀನು ಶಿವನ ಬಳಿಗೆ ಹಾರಿ ಹೋಗುವಿ' ಎಂದ. ಕಾರ್ತಿಕೇಯನಿಗೂ ಶ್ರೀಕೃಷ್ಣ ಆದೇಶಿಸಿದ, 'ಮಗು, ನೀನೂ ಜಾಂಬವತಿಯ ಗರ್ಭದಲ್ಲಿ ಅವತರಿಸು ಹೋಗು' ಎಂದು. 'ದೇವತೆಗಳೆಲ್ಲರೂ ಕೂಡ ಅಂಶದಿಂದ ಭೂಮಿಯಲ್ಲಿ ಅವತರಿಸಿರಿ. ನಾನು ಭೂಭಾರಹರಣ ಮಾಡುತ್ತೇನೆ, ಇದು ನಿಶ್ಚಯ' ಎಂದು ಆಜ್ಞಾಪಿಸಿದ.

ಬ್ರಹ್ಮ ಕೈಮುಗಿದು ವಿನಯದಿಂದ ಕೇಳಿದ, 'ಪ್ರಭು, ಯಾರು ದೇವ ದೇವಿಯರು ಯಾವ ರೂಪಗಳಿಂದ ಎಲ್ಲಿ ಭೂಮಿಯಲ್ಲಿ ಅವತರಿಸಬೇಕೆಂಬುದನ್ನೂ ಆಜ್ಞಾಪಿಸು.'

ಜಗತ್ಪತಿ ಶ್ರೀಕೃಷ್ಣ ನುಡಿದ, 'ಮನ್ಮಥ ರುಕ್ಮಿಣಿಯ ಮಗ ಪ್ರದ್ಯುಮ್ನನಾಗಿ ಅವತರಿಸಲಿ. ರತಿ ಮಾಯಾವತಿಯಾಗಿ ಶಂಬರಾಸುರನ ಮನೆಯಲ್ಲಿ ಛಾಯಾರೂಪದಿಂದಿರಲಿ. ನೀನು ಪ್ರದ್ಯುಮ್ನಪುತ್ರ ಅನಿರುದ್ಧನಾಗಿ ಜನಿಸು. ಭಾರತಿ ಶೋಣಿತಪುರದಲ್ಲಿ ಬಾಣಾಸುರನ ಮಗಳಾಗಿ ಹುಟ್ಟಲಿ. ಅನಂತ ದೇವಕೀಗರ್ಭದಲ್ಲಿ ಬಲರಾಮನಾಗಿ ಅವತರಿಸಲಿ. ವಿಷ್ಣುಮಾಯೆ ಅವಳ ಗರ್ಭವನ್ನು ಸೆಳೆದು ರೋಹಿಣಿಯ ಗರ್ಭದಲ್ಲಿಡುವುದರಿಂದ ಅವನು ಸಂಕರ್ಷಣನೆನಿಸುತ್ತಾನೆ. ಸೂರ್ಯತನಯೆ ಯಮುನೆ ಗಂಗೆಯ ಅಂಶಯುಕ್ತಳಾಗಿ ಕಾಲಿಂದೀ ಎಂಬ ಹೆಸರಿನಿಂದ ನನ್ನ ಪಟ್ಟದರಾಣಿ ಎನಿಸಲಿ. ತುಲಸಿ ರಾಜಕುಮಾರಿ ಲಕ್ಷಣೆಯಾಗಿ ಜನಿಸಲಿ. ವೇದಮಾತೆ ಸಾವಿತ್ರಿ ನಗ್ನಜಿದ್ರಾಜನ ಮಗಳಾಗಿ ಸತ್ಯಾ ಎಂಬ ಹೆಸರಿನಿಂದ ನನ್ನ ಪಟ್ಟದ ರಾಣಿಯಾಗಲಿ. ಭೂದೇವಿ ಸತ್ಯಭಾಮೆಯಾಗಿ, ಸರಸ್ವತಿ ಶೈಬ್ಯೆಯಾಗಿ, ರೋಹಿಣಿ ರಾಜಕುಮಾರಿ ಮಿತ್ರವಿಂದೆಯಾಗಿ, ಸೂರ್ಯಪತ್ನಿ ಸಂಜ್ಞೆ ರತ್ನಮಾಲೆಯಾಗಿ, ಸ್ವಾಹೆ ಸುಶೀಲೆಯಾಗಿ, ಪಾರ್ವತಿ ಜಾಂಬವತಿಯಾಗಿ ಅವತರಿಸಿ ಎಲ್ಲರೂ ನನಗೆ ಪಟ್ಟದ ರಾಣಿಯರಾಗಲಿ. ಪಾರ್ವತಿಗೆ ಶಿವನ ಆಜ್ಞೆ ಒಂದಿದೆ. ಹಿಂದೊಮ್ಮೆ ಶ್ವೇತದ್ವೀಪವಾಸಿಯಾದ ವಿಷ್ಣು ಕೈಲಾಸಕ್ಕೆ ಹೋದಾಗ ಅಲ್ಲಿ ಪಾರ್ವತಿಗೆ 'ನೀನು ವಿಷ್ಣುವಿಗೆ ಆಲಿಂಗನ ನೀಡು. ಇದಕ್ಕೆ ನನ್ನ ಅನುಮತಿ ಇದೆ. ಅದರಿಂದ ದೋಷವಿಲ್ಲ' ಎಂದಿದ್ದ.

**ಬ್ರಹ್ಮ:-** ಕೃಷ್ಣ, ದೇವಿಗೆ ಶಿವ ಹಾಗೆ ಆಜ್ಞೆ ಮಾಡಲು ಏನು ಕಾರಣ?

**ಶ್ರೀಕೃಷ್ಣ:-** ಹಿಂದೆ ಗಣೇಶನನ್ನು ಕಾಣಲು ಕೈಲಾಸಕ್ಕೆ ಎಲ್ಲ ದೇವತೆಗಳೂ ಬಂದರು. ಆಗ ವಿಷ್ಣುವೂ ಶ್ವೇತದ್ವೀಪದಿಂದ ಬಂದು ಗಣೇಶನನ್ನು ಕಂಡು ಸಂತುಷ್ಟನಾಗಿ ಸುಖಾಸನದಲ್ಲಿ ಕುಳಿತ. ಆಗ ಎಲ್ಲ ದೇವತೆಗಳೂ ಮೂಲೋಕವನ್ನೆ ಮರುಳುಮಾಡುವ ಅವನ ಸುಂದರರೂಪವನ್ನು ಕಂಡು ಆನಂದಿಸಿದರು. ನವಯೌವನಭರಿತ ಶ್ಯಾಮವರ್ಣದ ಸುಂದರ ಶರೀರಕ್ಕೆ ಪೀತಾಂಬರದುಡುಗೆ. ಚಂದನ ಅಗುರು ಕಸ್ತೂರಿ ಕುಂಕುಮಗಳ ಲೇಪ.

ಕಿರೀಟ ಕುಂಡಲ ರತ್ನಹಾರಗಳ ಅಲಂಕಾರ. ಮುಖದಲ್ಲಿ ಮಂದಹಾಸ. ಪಾರ್ಷದರಿಂದ ಪರಿವೃತನಾಗಿ ಸಿಂಹಾಸನದಲ್ಲಿ ಮಂಡಿಸಿದ್ದ ವಿಷ್ಣುವನ್ನು ಎಲ್ಲ ದೇವತೆಗಳೂ ವಂದಿಸಿದರು. ಶಿವನೂ ಪೂಜಿಸಿ ಸ್ತೋತ್ರಗೈದ. ಆಗ ವಿಷ್ಣುವಿನ ಪ್ರಸನ್ನವಾದ ಮುಖಕಮಲ ಕಂಡು ಪಾರ್ವತಿ ನಾಚಿದಳು. ಮುಖವನ್ನು ಸೆರಗಿಂದ ಮುಚ್ಚಿಕೊಂಡಳು. ಅತಿಸುಂದರವಾದ ಆ ಮುಖವನ್ನು ಮತ್ತೆ ಮತ್ತೆ ನೋಡುತ್ತಾಳೆ, ಮುಖ ಮುಚ್ಚಿಕೊಳ್ಳುತ್ತಾಳೆ, ದೇವಿ. ಪರಮಾದ್ಭುತವಾದ ವಿಷ್ಣುಶರೀರವನ್ನು ಓರೆಗಣ್ಣಿಂದ ಎವೆಯಿಕ್ಕದೆ ಕಂಡು ಸುಖಸಾಗರದಲ್ಲಿ ಮುಳುಗಿ ಮೈ ರೋಮಾಂಚಗೊಳ್ಳುತ್ತಾಳೆ. ವಿಷ್ಣು ಅವಳ ಕಣ್ಣಿಗೆ ಒಮ್ಮೆ ತ್ರಿಶೂಲ ಹಿಡಿದ, ಧವಳವರ್ಣದ, ಪಂಚಮುಖಿಯಾದ ಮುಕ್ಕಣ್ಣನಾಗಿ ಕೋಟಿಮನ್ಮಥರ ಕಾಂತಿಯಿಂದ ಬೆಳಗುವಂತೆ ಕಾಣುತ್ತಾನೆ. ಮರುಕ್ಷಣದಲ್ಲಿ ಒಂದು ಮುಖ ಎರಡು ಕಣ್ಣು ಚತುರ್ಭುಜ ಪೀತಾಂಬರಧಾರಿ ವನಮಾಲಾ ಭೂಷಿತನಾಗಿ ಕಾಣುತ್ತಾನೆ. ಒಬ್ಬನೆ ಪರಮಾತ್ಮನ ಎರಡು ರೂಪಗಳು ತಾನೆ, ವಿಷ್ಣು ಶಿವರು? ಇದನ್ನು ಕಂಡು ವಿಷ್ಣುಮಾಯೆಯಿಂದ ಮೋಹಿತಳಾಗಿ ದೇವಿ ವಿಷ್ಣುವಿನಲ್ಲಿ ಅನುರಾಗ ಹೊಂದಿದಳು.

ಸರ್ವಾಂತರಾತ್ಮನಾದ ಶಿವ ಅವಳ ಅಂತರಂಗವನ್ನು ಅರಿತು ಅವಳನ್ನು ನಿರ್ಜನ ಪ್ರದೇಶಕ್ಕೆ ಕರೆದೊಯ್ದು ಹೇಳಿದ, 'ದೇವಿ, ನೀನು ವಿಷ್ಣುವಿಗೆ ಆಲಿಂಗನ ನೀಡು. ಇದರಲ್ಲಿ ದೋಷವೇನಿಲ್ಲ. ನಾನು ಬ್ರಹ್ಮ ವಿಷ್ಣು ಮೂವರೂ ಒಬ್ಬ ಪರಮಾತ್ಮನ ಮೂರು ಅಂಶಗಳು. ನೀನು ಪ್ರಕೃತಿ, ಬ್ರಹ್ಮನೆದೆಯಲ್ಲಿ ವಾಣಿ, ವಿಷ್ಣುವಿನೆದೆಯಲ್ಲಿ ಲಕ್ಷ್ಮಿ, ನನ್ನದೆಯಲ್ಲಿ ನೀನು. ಹೀಗೆ ಮೂರು ರೂಪದವಳು ನೀನು ತಾನೆ?' ಇದನ್ನು ಕೇಳಿ ಪಾರ್ವತಿ ನುಡಿದಳು. 'ನಾಥ, ಜಗದೊಡೆಯನಾದ ನಿನ್ನನ್ನು ನಾನು ತಪಸ್ಸಿನಿಂದ ಒಲಿಸಿ ಪಡೆದುಕೊಂಡಿದ್ದೇನೆ. ನಾ ನಿನ್ನ ದಾಸಿ. ಇಂಥ ಮಾತನ್ನು ಆಡಬೇಡ. ಆದರೂ ನಿನ್ನಾಜ್ಞೆಯಂತೆ ಭೂಮಿಯಲ್ಲಿ ಅವತರಿಸಿದಾಗ ಹರಿಯನ್ನು ಆಲಿಂಗಿಸುತ್ತೇನೆ.'

ಹೀಗೆ ಶಿವನ ಆಜ್ಞೆಗನುಸಾರವಾಗಿ ಭೂಮಿಯಲ್ಲಿ ಪಾರ್ವತಿ ಜಾಂಬವತಿಯಾಗಿ ಅವತರಿಸಿ ನನಗೆ ಪಟ್ಟದ ರಾಣಿಯಾಗಲಿ. ಲಕ್ಷ್ಮಿಯ ಅಂಶದಿಂದ ಹದಿನಾರು ಸಾವಿರ ರಾಜಕುಮಾರಿಯರು ನನಗೆ ರಾಣಿಯರಾಗಲಿ. ಧರ್ಮ ಪಾಂಡುಪುತ್ರ ಯುಧಿಷ್ಠಿರನಾಗಲಿ. ವಾಯು ಭೀಮಸೇನ, ಇಂದ್ರ ಅರ್ಜುನ, ಅಶ್ವಿನೀಕುಮಾರರು ನಕುಲ ಸಹದೇವರು, ಸೂರ್ಯ ಕರ್ಣ, ಯಮ ವಿದುರ, ಕಲಿ ದುರ್ಯೋಧನ, ವರುಣ ಶಂತನು. ಶಂಕರ ಅಶ್ವತ್ಥಾಮ, ಅಗ್ನಿ ದ್ರೋಣ, ಚಂದ್ರ ಅಭಿಮನ್ಯು. ವಸು ಭೀಷ್ಮ, ಕಶ್ಯಪ ವಸುದೇವ, ಅದಿತಿ ದೇವಕಿ, ದ್ರೋಣನೆಂಬ ವಸು ನಂದಗೋಪ, ಅವನ ಪತ್ನಿ ಧರೆ ಯಶೋದೆ, ಲಕ್ಷ್ಮಿ ಯಜ್ಞಕುಂಡೋದ್ಭವೆ ದ್ರೌಪದಿ. ಅಗ್ನಿ ಧೃಷ್ಟದ್ಯುಮ್ನ, ಶತರೂಪೆ ಸುಭದ್ರೆ. ಹೀಗೆ ದೇವ ದೇವಿಯರೆಲ್ಲರೂ ಅಂಶದಿಂದ ಭೂಮಿಯಲ್ಲಿ ಅವತರಿಸಿ ನನ್ನ ಭೂಭಾರಹರಣ ಕಾರ್ಯದಲ್ಲಿ ಸಹಾಯಕರಾಗಲಿ' ಎಂದು ಶ್ರೀಕೃಷ್ಣ ಆದೇಶ ನೀಡಿದ.

**ರಾಧೆ ಹೇಳಿದಳು:-** ನಾಥ, ನಾನೊಂದು ಮಾತನ್ನು ಹೇಳಲು ಬಯಸುತ್ತೇನೆ ಕೇಳು. ಒಂದು ಚಿಂತೆ ನನ್ನ ಪ್ರಾಣವನ್ನೇ ಹಿಂಡುತ್ತಿದೆ. ಅದೇನೆಂದರೆ, ನಾನು ನಿನ್ನನ್ನು ನೋಡುತ್ತಿದ್ದರೆ ಒಂದು ಕ್ಷಣ ಎವೆಯಿಕ್ಕಲೂ ನನ್ನಿಂದಾಗುತ್ತಿಲ್ಲ. ಹಾಗಿರುವಾಗ, ಪ್ರಾಣನಾಥ, ನಿನ್ನನ್ನು ಬಿಟ್ಟು ನಾನೊಬ್ಬಳೇ ಭೂಮಿಗೆ ಹೇಗೆ ಹೋಗಲಿ? ನಿಜ ಹೇಳು, ಅಲ್ಲಿ ಗೋಕುಲದಲ್ಲಿ ಎಷ್ಟು ಕಾಲ ಕಳೆದ ಬಳಿಕ ನಿನ್ನ ಸಮಾಗಮ ನನಗೆ

ಲಭ್ಯವಾಗುವುದು? ನಿನ್ನನ್ನು ಕಾಣದಿದ್ದರೆ ಒಂದು ನಿಮಿಷವೂ ನನಗೆ ಯುಗವಾಗುವುದು. ಭೂಮಿಯಲ್ಲಿ ನೀನಿಲ್ಲದೆ ನನಗಿನ್ನಾರು ರಕ್ಷಕರು? ನಾನು ಯಾರನ್ನು ಕಾಣಲಿ? ಎಲ್ಲಿಗೆ ಹೋಗಲಿ? ನಿನ್ನ ಹೊರತು ಯಾವ ತಂದೆ ತಾಯಿ ಸೋದರ ಸೋದರಿ ಬಂಧು ಪುತ್ರಾದಿಗಳನ್ನೂ ಕ್ಷಣವೂ ಚಿಂತಿಸಲಾರೆ. ನನ್ನನ್ನು ಮಾಯೆಯಿಂದ ಆವರಿಸಿ, ವಿಪುಲವಾದ ಧನಸಂಪತ್ತು ನೀಡಿ, ನಿನ್ನನ್ನು ನೀನು ಮರೆಸುವಿಯ? ಬೇಡ, ಹಾಗೆ ಸರ್ವಥಾ ಮಾಡಬೇಡ. ನನ್ನ ಮನಸ್ಸು ಸದಾ ದುಂಡಿಯಂತೆ ನಿನ್ನ ಪಾದಕಮಲದಲ್ಲಿ ಸುಖಿಸುವಂತೆ ಮಾಡು. ನಾನು ಯಾವುದೇ ಜನ್ಮ ಪಡೆಯಲಿ, ನಿನ್ನ ಸ್ಮರಣೆ, ನಿನ್ನ ದಾಸ್ಯ ನನಗೆ ತಪ್ಪದೆ ಲಭಿಸುತ್ತಿರಲಿ. ನೀನು ನನ್ನ ಪ್ರಿಯತಮ, ನಾನು ನಿನ್ನ ಪ್ರೇಯಸಿ. ನಮ್ಮಿಬ್ಬರ ಈ ಪ್ರೇಮಸಂಬಂಧ ಶಾಶ್ವತವೆಂಬ ಸತ್ಯವನ್ನು ನಾನೆಂದೂ ಮರೆಯದಂತೆ ಮಾಡು. ಹಾಗೆ ನನಗೆ ವರ ನೀಡು. ಶರೀರ ಪ್ರಾಣಗಳಂತೆ, ಶರೀರ ಛಾಯೆಗಳಂತೆ ನಾವು ಇಬ್ಬರೂ ಜೊತೆಗೇ ಅವತರಿಸಬೇಕು. ಜೊತೆಗೆ ಇರಬೇಕು. ಒಂದು ಕ್ಷಣವೂ ವಿಯೋಗವೆಂಬುದು ಬರಕೂಡದು. ನನ್ನ ಪ್ರಾಣದಿಂದ ನಿನ್ನ ಶರೀರವಾಗಿದೆ. ನನ್ನ ಶರೀರದಿಂದ ನಿನ್ನ ಕೊಳಲು. ನನ್ನ ಮನಸ್ಸಿನಿಂದ ನಿನ್ನ ಚರಣಗಳು, ನಿನ್ನ ಶರೀರದ ಅರ್ಧಭಾಗದಿಂದ ನನ್ನ ನಿರ್ಮಾಣವಾಗಿದೆ. ಎಂದಮೇಲೆ ನಮ್ಮಿಬ್ಬರಲ್ಲಿ ಭೇದವೆಲ್ಲಿಯದು? ನನ್ನ ಮನಸ್ಸು ನನ್ನ ಆತ್ಮ ನನ್ನ ಪ್ರಾಣ ನಿನ್ನಲ್ಲಿ, ನಿನ್ನ ಮನಸ್ಸು ನಿನ್ನ ಪ್ರಾಣ ನನ್ನಲ್ಲಿ ಇರುತ್ತದೆ. ಅದರಿಂದ ವಿರಹದ ಮಾತು ಕಿವಿಗೆ ಬಿದ್ದರೆ ಪ್ರಾಣಗಳು ಮನಸ್ಸನ್ನು ಸುಡುತ್ತವೆ.'' ಹೀಗೆ ಹೇಳಿ ರಾಧೆ ಕೃಷ್ಣನ ಪಾದಕಮಲಗಳನ್ನು ಹಿಡಿದು ಗಟ್ಟಿಯಾಗಿ ಅತ್ತುಬಿಟ್ಟಳು. ಕೃಷ್ಣ ಅವಳನ್ನೆಬ್ಬಿಸಿ ಕಣ್ಣೊರಸಿ ತತ್ವೋಪದೇಶ ಮಾಡಿ ಸಮಾಧಾನಪಡಿಸಿದ.

**ಶ್ರೀಕೃಷ್ಣ:-** ಬ್ರಹ್ಮಾಂಡದಲ್ಲಿ ಎಲ್ಲ ವಸ್ತುಗಳೂ ಒಂದು ಆಧಾರ ಇನ್ನೊಂದು ಆಧೇಯವಾಗಿರುತ್ತವೆ. ಉದಾಹರಣೆಗೆ ಫಲ ಆಧೇಯ. ಅದಕ್ಕೆ ಆಧಾರ ಪುಷ್ಪ. ಪುಷ್ಪಕ್ಕೆ ಚಿಗುರು, ಚಿಗುರಿಗೆ ಕೊಂಬೆ, ಕೊಂಬೆಗೆ ವೃಕ್ಷ, ವೃಕ್ಷಕ್ಕೆ ಅಂಕುರ, ಅಂಕುರಕ್ಕೆ ಬೀಜ, ಬೀಜಕ್ಕೆ ನೆಲ, ನೆಲಕ್ಕೆ ಶೇಷನಾಗ, ಶೇಷನಿಗೆ ಕೂರ್ಮ, ಕೂರ್ಮನಿಗೆ ವಾಯು, ವಾಯುವಿಗೆ ನಾನು, ನನಗೆ ಆಧಾರಸ್ವರೂಪಳಾಗಿ ನೀನಿರುವಿ. ನಿನ್ನಲ್ಲಿ ನಾನಿರುವೆ. ನೀನು ಶಕ್ತಿ ಸ್ವರೂಪಳು, ಮೂಲಪ್ರಕೃತಿ. ನೀನು ತ್ರಿಗುಣಾತ್ಮಕ ಶರೀರ ರೂಪಳು. ನಾನು ನಿನ್ನ ಆತ್ಮ. ಪುರುಷನಿಂದ ವೀರ್ಯ, ವೀರ್ಯದಿಂದ ಸಂತತಿ. ವೀರ್ಯ ಸಂತತಿಗಳಿಗೆ ಆಧಾರ ಸ್ತ್ರೀ. ಅವಳು ಪ್ರಕೃತಿಯ ಅಂಶ. ದೇಹವಿಲ್ಲದೆ ಆತ್ಮನಿರುವುದಿಲ್ಲ, ಆತ್ಮನಿಲ್ಲದೆ ದೇಹವಿರುವುದಿಲ್ಲ. ಪ್ರಪಂಚದ ಮೂಲಕಾರಣಭೂತರಾದ ನಮ್ಮಿಬ್ಬರಲ್ಲಿ ಭೇದವೆಲ್ಲಿಯದು, ಹೇಳು. ಹಾಲಲ್ಲಿ ಬಿಳುಪು, ಬೆಂಕಿಯಲ್ಲಿ ಶಾಖ, ಮಣ್ಣಲ್ಲಿ ಕಂಪು, ನೀರಲ್ಲಿ ತಂಪು, ಹಾಗೇ ನಿನ್ನಲ್ಲಿ ನಾನಿರುವೆ. ಹಾಲು ಬಿಳುಪುಗಳಿಗೆ, ಬೆಂಕಿ ಶಾಖಗಳಿಗೆ, ಮಣ್ಣು ಕಂಪುಗಳಿಗೆ, ನೀರು ತಂಪುಗಳಿಗೆ ಭೇದವಿಲ್ಲದಿರುವಂತೆ ನಮ್ಮಿಬ್ಬರಲ್ಲಿಯೂ ಭೇದವಿಲ್ಲ. ನಾನಿಲ್ಲದೆ ನೀನು ಬದುಕಿರಲಾರೆ, ನೀನಿಲ್ಲದೆ ನಾನು ಕಾಣಿಸಲಾರೆ. ನೀನಿಲ್ಲದೆ ನಾನು ಸೃಷ್ಟಿಮಾಡಲಾರೆ. ಮಣ್ಣಿಲ್ಲದೆ ಕುಂಬಾರ ಗಡಿಗೆ ಮಾಡುವನೆ? ಬಂಗಾರವಿಲ್ಲದೆ ಒಡವೆಯಾಗುವುದೆ? ಆತ್ಮನಾದ ನಾನು ಹೇಗೆ ನಿತ್ಯನೋ ಹಾಗೆ ಪ್ರಕೃತಿ ನೀನೂ ನಿತ್ಯಳು. ಸರ್ವಶಕ್ತಿಯುತಳು, ಸರ್ವಾಧಾರಳು

ಸನಾತನಿ ಲಕ್ಷ್ಮಿ ನನಗೆ ಪ್ರಾಣಸಮಾನಳು. ಸರ್ವಮಂಗಳೆ ವಾಣಿಯೂ ಬ್ರಹ್ಮ ಈಶ ಅನಂತ ಧರ್ಮರೂ ಪ್ರಾಣಸಮಾನರು. ನೀನು ಪ್ರಾಣಕ್ಕಿಂತ ಹೆಚ್ಚು. ಈದೇವತೆಗಳಾಗಲಿ ದೇವಿಯರಾಗಲಿ ನನಗೆ ಸಮೀಪದಲ್ಲಿರುವವರು. ನೀನು ನನ್ನೆದೆಯಲ್ಲಿಯೆ ಇರುತ್ತಿ. ನೀನು ಇವರಿಗಿಂತ ಹೆಚ್ಚಲ್ಲದಿದ್ದರೆ ಇದು ಶಕ್ಯವಿದ್ದಿತೆ? ರಾಧೆ, ಸಾಕು ಈ ಕಣ್ಣೀರು, ಸಾಕು ಈ ಭ್ರಮೆ. ಭಯವನ್ನು ತೊರೆ, ನಿರ್ಭಯಳಾಗಿ ವೃಷಭಾನುವಿನ ಮನೆಗೆ ಹೋಗು. ಕಲಾವತಿಯ ಗರ್ಭವನ್ನು ನವಮಾಸ ಪರ್ಯಂತ ಗಾಳಿಯಿಂದ ಉಬ್ಬಿಕೊಳ್ಳುವಂತೆ ಮಾಡಿ ಹತ್ತನೇ ತಿಂಗಳಲ್ಲಿ ಶಿಶುರೂಪದಿಂದ ನೀನು ಆವಿರ್ಭವಿಸು. ಮಾತೆಯ ಗರ್ಭದಿಂದ ಗಾಳಿ ಹೊರಡುವಾಗ ನೀನು ನಗ್ನ ಶಿಶುರೂಪದಿಂದ ಭೂಮಿಗೆ ಬಿದ್ದು ಅಳತೊಡಗುವೆ. ಹೀಗೆ ಅಯೋನಿಜೆಯಾಗಿ ಗೋಕುಲದಲ್ಲಿ ನೀನು ಅವತರಿಸುವಿ. ನಾನೂ ಅಯೋನಿಜನಾಗಿ ಆವಿರ್ಭವಿಸುವೆನು. ಭೂಸ್ಪರ್ಶ ಮಾಡುವೆನು. ಆಗಲೆ ವಸುದೇವ ನನ್ನನ್ನು ಗೋಕುಲಕ್ಕೆ ಒಯ್ಯುವನು. ಕಂಸನ ಭಯ ನನಗೊಂದು ನೆಪ ಮಾತ್ರ. ನಿನಗಾಗಿ ನಾನು ಗೋಕುಲಕ್ಕೆ ಬರುವೆನು. ಯಶೋದೆಯ ಮನೆಯಲ್ಲಿ ನಂದನಂದನನಾದ ನನ್ನನ್ನು ಆನಂದದಿಂದ ತಬ್ಬಿಕೊಂಡು ಸದಾ ಕಾಣುವಿ. ನನ್ನ ವರಬಲದಿಂದ ನಿನಗೆ ನಿನ್ನ ಪೂರ್ವರೂಪದ ಸ್ಮರಣೆ ಇರುತ್ತದೆ. ಸದಾ ನಿನ್ನೊಂದಿಗೆ ಸ್ವಚ್ಛಂದವಾಗಿ ವೃಂದಾವನದಲ್ಲಿ ನಾನು ವಿಹರಿಸುವೆನು. ಇಪ್ಪತ್ತೊಂದು ನೂರು ಕೋಟಿ ಗೋಪಿಯರೊಂದಿಗೆ ಸುಶೀಲೆ ಮುಂತಾದ ಮೂವತ್ತಮೂರು ಸಖಿಯರೊಂದಿಗೆ ಗೋಕುಲಕ್ಕೆ ಹೋಗಿರು. ನಾನು ಗೋಕುಲದಿಂದ ಮಧುರೆಗೆ ಹೋಗುವಾಗ ಎಲ್ಲ ಗೋಪಗೋಪಿಯರಿಗೂ ಸಮಾಧಾನ ಹೇಳಿ ಎಲ್ಲರನ್ನೂ ನಿನ್ನ ಬಳಿ ನಿಲ್ಲಿಸಿ ನಾನು ಮಥುರೆಗೆ ವಸುದೇವನ ಬಳಿಗೆ ಹೋಗುವೆನು. ಅದರಿಂದ ನನ್ನೊಡನೆ ಕ್ರೀಡಿಸುವ ಸಲುವಾಗಿ ಎಲ್ಲ ಗೋಪಗೋಪಿಯರು ಗೋಕುಲದಲ್ಲಿ ಅವತರಿಸಿರಿ.''

ಶ್ರೀಕೃಷ್ಣನ ಮಾತನ್ನು ಕೇಳಿ ಎಲ್ಲರೂ ನಮಿಸಿದರು. ರಾಧೆ ಇನ್ನೂ ಭಯಾರ್ತಳಾಗಿ ಕಣ್ಣಲ್ಲಿ ನೀರು ತುಂಬಿಕೊಂಡು ದೈನ್ಯದಿಂದ ನಿಂತಿದ್ದಳು. ಶ್ರೀಕೃಷ್ಣ ಪುನಃ ಸಂತೈಸಿ ನುಡಿದ. ''ದೇವಿ, ಧೈರ್ಯತಾಳು. ಭಯವನ್ನು ಬಿಡು. ನಿನ್ನಂತೆಯೇ ನಾನು. ನಾನಿರುವಾಗ ನಿನಗೇತರ ಭಯ? ಆದರೆ ಒಂದು ಅನಿಷ್ಟವನ್ನು ನಿನಗೆ ಹೇಳಲೇಬೇಕಾಗಿದೆ, ಹೇಳುತ್ತೇನೆ. ಶ್ರೀದಾಮನ ಶಾಪಪ್ರಯುಕ್ತ ಒಂದು ನೂರು ವರ್ಷಕಾಲ ಪೂರ್ತಿ ನಿನಗೆ ನನ್ನಿಂದ ವಿಯೋಗವಾಗಲಿದೆ. ಅದು ತಪ್ಪಿದ್ದಲ್ಲ. ಅದರಿಂದ ನಾನು ಮಧುರೆಗೆ ಹೋಗುತ್ತೇನೆ. ಅಲ್ಲಿ ಭೂಭಾರ ಹರಣ ಮಾಡುವೆನು. ವಸುದೇವ ದೇವಕಿಯರನ್ನು ಬಂಧನದಿಂದ ಬಿಡಿಸುವೆನು. ಹೂವಾಡಿಗ ನೇಕಾರ ಕುಬ್ಜೆಯರಿಗೆ ಮೋಕ್ಷ ನೀಡುವೆನು. ಕಾಲಯವನನನ್ನು ಸಂಹರಿಸಿ ಮುಚುಕುಂದನಿಗೆ ಮುಕ್ತಿ ನೀಡುವೆನು. ದ್ವಾರಕಾನಿರ್ಮಾಣ ಮಾಡುವೆನು. ಪಾಂಡವರ ರಾಜಸೂಯ ಯಾಗ ನಡೆಸಿಕೊಡುವೆನು. ಹದಿನಾರು ಸಾವಿರ ರಾಜಕುಮಾರಿಯರನ್ನು ವಿವಾಹವಾಗುವೆನು. ಶತ್ರುದಮನವನ್ನೂ ಮಿತ್ರಸಂರಕ್ಷಣವನ್ನೂ ಮಾಡುವೆನು. ವಾರಾಣಸಿಯನ್ನು ಸುಡುವೆನು. ಶಿವನನ್ನು ಸ್ತಂಭನಗೊಳಿಸುವೆನು. ಬಾಣನ ಬಾಹುಗಳನ್ನು ಕತ್ತರಿಸುವೆನು. ಪಾರಿಜಾತಹರಣಾದಿ ಕಾರ್ಯಗಳನ್ನು ಮಾಡುವೆನು. ಪ್ರಭಾಸ ತೀರ್ಥಯಾತ್ರೆ ಮಾಡಿ

ಮುನಿಗಳನ್ನು ಕಾಣುವೆನು. ಗೋಕುಲದಲ್ಲಿ ಬಂಧುಗಳನ್ನು ಕಂಡು ಸಂಭಾಷಣೆ ನಡೆಸುವೆನು. ವಸುದೇವನಿಂದ ಯಾಗ ಮಾಡಿಸುವೆನು. ಬಳಿಕ ಒಂದು ಶುಭಮುಹೂರ್ತದಲ್ಲಿ ನಿನ್ನ ಬಳಿಗೆ ಬರುವೆನು. ಗೋಪಿಯರನ್ನು ಕಾಣುವೆನು. ನಿನ್ನನ್ನು ಅಧ್ಯಾತ್ಮೋಪದೇಶದಿಂದ ಸಂತೈಸಿ ಮುಂದೆ ಎಂದೂ ನಿನ್ನನ್ನು ಅಗಲದೇ ಇರುವೆನು. ಹಗಲು ರಾತ್ರಿ ಎನ್ನದೆ ಸದಾ ನಿನ್ನೊಡನೆ ಇರುವೆನು.

ನಿನ್ನೊಂದಿಗೇ ತಿರುಗಿ ಗೋಕುಲಕ್ಕೆ ಹೋಗುವೆನು. ಪ್ರಿಯೆ, ನೂರು ವರ್ಷಗಳ ವಿಯೋಗಕಾಲದಲ್ಲಿಯೂ ಕೂಡ ಸ್ವಪ್ನದಲ್ಲಿ ನಿತ್ಯ ನಿನಗೆ ನನ್ನ ಸಮಾಗಮವಿದ್ದೇ ಇರುವುದು. ನೂರು ವರ್ಷಗಳ ಅನಂತರ ಪುನಃ ನಿನ್ನೊಡನೆ ವೃಂದಾವನದಲ್ಲಿ ರಾಸಕ್ರೀಡೆಯಾಡುವೆನು. ನಂದಗೋಪ ಯಶೋದೆಯರ ಮತ್ತು ಗೋಪಗೋಪಿಯರ ವಿರಹಶೋಕವನ್ನೂ ತೊಡೆಯುವೆನು. ಹೀಗೆ ಭೂಭಾರಹರಣ ಕಾರ್ಯವನ್ನು ಮುಗಿಸಿ ನಿನ್ನೊಂದಿಗೆ ಮತ್ತು ಗೋಪಗೋಪಿಯರೊಂದಿಗೆ ತಿರುಗಿ ಗೋಲೋಕಕ್ಕೆ ಬರುವೆನು. ನನ್ನ ಅಂಶನಾದ ನಾರಾಯಣನೂ ಸರಸ್ವತಿ ಲಕ್ಷ್ಮಿಯರೊಂದಿಗೆ ವೈಕುಂಠಕ್ಕೆ ತೆರಳುವನು. ದೇವ ದೇವಿಯರ ಅಂಶಗಳೆಲ್ಲವೂ ಮೂಲ ರೂಪಗಳನ್ನು ಸೇರುವುವು. ಮುಂದೆ ನಡೆಯಲಿರುವ ಈ ಶುಭ ಅಶುಭಗಳನ್ನೆಲ್ಲ ನಿನಗೆ ಹೇಳಿದ್ದೇನೆ. ಅವುಗಳಿಗೆ ಅಡ್ಡಿ ಮಾಡಬೇಡ" ಎನ್ನುತ್ತ ಶ್ರೀಕೃಷ್ಣ ರಾಧೆಯನ್ನು ಆಲಿಂಗಿಸಿದ. "ದೇವ ದೇವಿಯರೆಲ್ಲ ನನ್ನಾಜ್ಞೆಯಂತೆ ನಡೆಯಿರಿ, ನಿಮ್ಮ ಲೋಕಗಳಿಗೆ ಹೋಗಿರಿ. ಪಾರ್ವತಿ, ನೀನೂ ಮಕ್ಕಳೊಂದಿಗೆ ಕೈಲಾಸಕ್ಕೆ ಹೋಗು. ಗಣೇಶ ಒಬ್ಬ ಹೊರತು ಇನ್ನೆಲ್ಲ ದೇವದೇವಿಯರು ಭೂಮಿಯಲ್ಲಿ ಅಂಶದಿಂದ ಅವತರಿಸುವರು," ಎಂದು ನುಡಿದ.

ಬಳಿಕ ಎಲ್ಲ ದೇವದೇವಿಯರೂ ಲಕ್ಷ್ಮೀಸರಸ್ವತೀಸಹಿತನಾದ ಪುರುಷೋತ್ತಮನಿಗೆ ನಮಿಸಿ ಅವನು ವಹಿಸಿದ ಕಾರ್ಯಗಳನ್ನು ನಡೆಸಲು ಭೂಲೋಕಕ್ಕೆ ತೆರಳಿದರು. ರಾಧೆಯೂ ಹೊರಟು ಹೋಗುತ್ತ ಮತ್ತೆ ಮತ್ತೆ ತಿರುಗಿ ಹರಿಯ ಮುಖಚಂದ್ರನನ್ನು ಎವೆಯಿಕ್ಕದ ಕಣ್ಣುಗಳಿಂದ ನೋಡಿ ಚಕೋರ ಪಕ್ಷಿ ಬೆಳದಿಂಗಳನ್ನು ಕುಡಿಯುವಂತೆ ಕಣ್ಣಿಂದಲೆ ಮುಖಕಾಂತಿಯನ್ನು ಹೀರಿ ಸವಿದಳು. ಏಳು ಬಾರಿ ಪ್ರದಕ್ಷಿಣ ನಮಸ್ಕಾರಗಳನ್ನು ಅರ್ಪಿಸಿದಳು. ಅಷ್ಟರಲ್ಲಿ ಎಲ್ಲ ಗೋಪಗೋಪಿಯರೂ ರಾಧೆಯ ಬಳಿಗೆ ಬಂದು ಭೂಲೋಕಕ್ಕೆ ಹೊರಡಲು ಸನ್ನದ್ಧರಾದರು. ಬಳಿಕ ಕೃಷ್ಣನಿಗೆ ನಮಿಸಿ ರಾಧೆಯೊಂದಿಗೆ ಭೂಲೋಕಕ್ಕೆ ತೆರಳಿದರು. ಕೃಷ್ಣನೂ ಮಧುರೆಗೆ ತೆರಳಿದ. ಅಲ್ಲಿ ವಸುದೇವ ದೇವಕಿಯರಿಗೆ ಹುಟ್ಟಿದ ಮಕ್ಕಳನ್ನೆಲ್ಲ ಕಂಸ ಒಡನೆ ಕೊಲ್ಲುತ್ತ ಬಂದಿದ್ದ. ಆರು ಮಕ್ಕಳನ್ನು ಕೊಂದ ಬಳಿಕ ಏಳನೆ ಗರ್ಭವನ್ನು ವಿಷ್ಣುಮಾಯೆ ದೇವಕಿಯ ಉದರದಿಂದ ಸೆಳೆದು ರೋಹಿಣಿಯ ಉದರದಲ್ಲಿ ಇರಿಸಿದಳು.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಶ್ರೀಕೃಷ್ಣಾವತಾರ ಸಂಕಲ್ಪವರ್ಣನವೆಂಬ ಆರನೆಯ ಅಧ್ಯಾಯ ಮುಗಿದುದು*

—○—

**ನಾರದ:-** ಮುನಿಯೆ, ಜನನ ಮರಣ ಮುಪ್ಪುಗಳನ್ನು ಕಳೆಯಬಲ್ಲ ಶ್ರೀಕೃಷ್ಣನ ಚರಿತ್ರೆಯನ್ನು ಹೇಳು. ವಸುದೇವ ಯಾರ ಪುತ್ರ, ದೇವಕಿ ಯಾರ ಕುಮಾರಿ? ಪೂರ್ವಜನ್ಮದಲ್ಲಿ ಅವರು ಯಾರು? ಅವರ ವಿವಾಹ ಹೇಗಾಯಿತು? ಅವರ ಮಕ್ಕಳನ್ನು ಕಂಸ ಏಕೆ ಕೊಂದ? ಯಾವ ದಿನದಲ್ಲಿ ಕೃಷ್ಣಾವತಾರವಾಯಿತು? ಇದೆಲ್ಲವನ್ನೂ ಹೇಳು, ನಾನು ಕೇಳಬಯಸಿದ್ದೇನೆ.

**ನಾರಾಯಣ:-** ವಸುದೇವ ಹಿಂದೆ ಕಶ್ಯಪಮುನಿ. ದೇವಕಿ ಅದಿತಿ. ಪೂರ್ವಪುಣ್ಯದಿಂದ ಅವರು ಕೃಷ್ಣನ ತಂದೆತಾಯಿಗಳೆನಿಸಿದರು. ಮಾರಿಷೆಯಲ್ಲಿ ದೇವಮೀಢನಿಂದ ವಸುದೇವ ಜನಿಸಿದ. ಅವನು ಜನಿಸಿದಾಗ ದೇವತೆಗಳು ಸಂತೋಷದಿಂದ ಆನಕ ಮತ್ತು ದುಂದುಭಿ ಎಂಬ ವಾದ್ಯಗಳನ್ನು ಮೊಳಗಿಸಿದರು, ಈತ ಶ್ರೀಹರಿಗೆ ಜನಕನೆನಿಸುತ್ತಾನೆ ಎಂದು. ಆದರಿಂದ ಮಹಾತ್ಮರು ಅವನನ್ನು 'ಆನಕ ದುಂದುಭಿ' ಎಂದು ಕರೆದರು. ಯದುಕುಲದ ಆಹುಕನ ಪುತ್ರ ದೇವಕ. ಅವನ ಕುಮಾರಿ ದೇವಕಿ. ಯಾದವರ ಕುಲಪುರೋಹಿತ ಗರ್ಗಮುನಿ ವಸುದೇವನಿಗೆ ದೇವಕಿಯೊಡನೆ ವಿವಾಹ ನೆರವೇರಿಸಿದ. ವಿವಾಹದಲ್ಲಿ ಕನ್ಯೆಗೆ ಬಳುವಳಿಯಾಗಿ ಸಾವಿರ ಕುದುರೆಗಳು ಸಾವಿರ ಬಂಗಾರದ ಪಾತ್ರೆಗಳು ವಸ್ತ್ರಾಭರಣಭೂಷಿತರಾದ ನೂರಾರು ಸುಂದರ ದಾಸಿಯರು ನಾನಾ ಬಗೆಯ ರತ್ನಗಳು ಇವೆಲ್ಲವನ್ನೂ ದೇವಕ ನೀಡಿದ. ಕನ್ಯೆ ದೇವಕಿ ಶ್ರೇಷ್ಠ ರತ್ನಾಭರಣ ಭೂಷಿತೆ, ಮೂಲೋಕವನ್ನು ಮರುಳುಮಾಡಬಲ್ಲ ರೂಪಸಿ, ನೂರಾರು ಚಂದ್ರಮರ ಕಾಂತಿಯಿಂದ ಬೆಳಗುವ ನವಯುವತಿ. ರೂಪಗುಣಗಳ ನಿಧಿ. ಮುಖದಲ್ಲಿ ಸದಾ ಮಂದಹಾಸ ಕುಣಿಯುತ್ತಿತ್ತು. ಅವಳನ್ನು ರಥದಲ್ಲಿ ಕುಳ್ಳಿರಿಸಿ ವಸುದೇವ ಹೊರಟಾಗ ತಂಗಿಯ ಮದುವೆಯಿಂದ ಹರ್ಷಿತನಾದ ಕಂಸನೂ ಜೊತೆಗೆ ಹೊರಟ. ಅವನು ದೇವಕಿಯ ರಥದ ಬಳಿಗೆ ಬಂದಾಗ ಒಂದು ಅಶರೀರವಾಣಿ ನುಡಿಯಿತು, 'ರಾಜನೆ, ನೀನೇಕೆ ಹರ್ಷಿಸುವೆ? ನಿಜ ಹೇಳುತ್ತೇನೆ ಕೇಳು, ದೇವಕಿಯ ಎಂಟನೆಯ ಗರ್ಭ ನಿನಗೆ ಮೃತ್ಯುವಾಗಲಿದೆ!' ಇದನ್ನು ಕೇಳಿದೊಡನೆ ಪಾಪಿ ಕಂಸ ಕೋಪದಿಂದ ಮತ್ತು ಭಯದಿಂದ ಖಡ್ಗ ಝಳಪಿಸಿ ದೇವಕಿಯ ವಧೆಗೆ ಉದ್ಯುಕ್ತನಾದ. ವಸುದೇವ ಒಳ್ಳೆಯ ಶಾಸ್ತ್ರಜ್ಞ, ನೀತಿಶಾಸ್ತ್ರ ಬಲ್ಲವ, ನೀತಿ ನಿಪುಣ. ಅವನು ಕಂಸನಿಗೆ ಬೋಧಿಸಿದ.

**ವಸುದೇವ:-** ರಾಜನೆ, ನಿನಗೆ ರಾಜನೀತಿ ತಿಳಿಯದೆಂದು ಕಾಣುತ್ತದೆ. ನನ್ನ ಮಾತು ಕೇಳು. ಅದು ನಿನಗೆ ಹಿತಕರ, ಯಶಸ್ಸಿಗೂ ಕಾರಣವಾಗುವುದು. ಕಲಂಕವನ್ನು ದೂರಮಾಡುವುದು. ಶಾಸ್ತ್ರೋಕ್ತವಾಗಿದ್ದು ಕಾಲೋಚಿತವೂ ಆಗಿರುವುದು. ರಾಜನೆ, ಇವಳ ಎಂಟನೇ ಗರ್ಭದಿಂದಲೇ ಮೃತ್ಯು ಎನ್ನುವುದಾದರೆ ಇವಳನ್ನೇಕೆ ವಧಿಸಬೇಕು? ಸ್ತ್ರೀಹತ್ಯೆ ಮಾಡಿ ಅಪಕೀರ್ತಿಯನ್ನೇಕೆ ಗಳಿಸಬೇಕು? ಹಿಂಸಕವಾದ ಕ್ಷುದ್ರ ಜಂತುವಧಕ್ಕೂ ಸ್ವಲ್ಪ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾಗುತ್ತದೆ. ಹಿಂಸೆಮಾಡದ

ಜಂತುಗಳನ್ನು ವಧಿಸಿದರೆ ಅದಕ್ಕೆ ನೂರುಪಟ್ಟು ಹೆಚ್ಚು ಪ್ರಾಯಶ್ಚಿತ್ತ ವಿಹಿತವಾಗಿದೆ. ಅದಕ್ಕಿಂತ ಮ್ಲೇಚ್ಛರ ವಧ, ಅದಕ್ಕಿಂತ ಸಚ್ಛೂದ್ರವಧ, ಅದಕ್ಕಿಂತ ಗೋಹತ್ಯೆ, ಅದಕ್ಕಿಂತ ಬ್ರಹ್ಮಹತ್ಯೆ ಹೆಚ್ಚು ಪಾಪಕರ. ಬ್ರಹ್ಮಹತ್ಯೆಗೆ ಸಮಾನ ಸ್ತ್ರೀಹತ್ಯೆ. ಅದರಲ್ಲಿಯೂ ವಿಶೇಷವಾಗಿ ಇವಳು ನಿನ್ನ ತಂಗಿ, ಶರಣಾಗತಳು, ನಿನ್ನ ರಕ್ಷಣೆಯಲ್ಲಿರಬೇಕಾದವಳು ಎಂದ ಮೇಲೆ ಇವಳ ಹತ್ಯೆ ನೂರು ಸ್ತ್ರೀಹತ್ಯೆಗೆ ಸಮಾನವಾಗುವುದು. ತಪಸ್ಸು ಜಪ ದಾನ ಪೂಜೆ ತೀರ್ಥಯಾತ್ರೆ ಬ್ರಾಹ್ಮಣಭೋಜನ ಹೋಮಗಳನ್ನು ಮಾಡಿ ವಿವೇಕಿಗಳು ಸ್ವರ್ಗ ಪಡೆಯುತ್ತಾರೆ. ಸ್ವರ್ಗಾದಿ ಸುಖವನ್ನು ನೀರಮೇಲಿನ ಗುಳ್ಳೆಯಂತೆ ಸ್ವಪ್ನದಂತೆ ಕ್ಷಣಿಕವೆಂದು ತಿಳಿಯುವವರೂ ಕೂಡ ಪ್ರಯತ್ನಪೂರ್ವಕವಾಗಿ ಧರ್ಮಾಚರಣೆಯನ್ನೇ ಮಾಡುತ್ತಾರೆ, ಸ್ತ್ರೀಹತ್ಯೆಯಂಥ ಪಾಪಾಚರಣ ಮಾಡುವುದಿಲ್ಲ. ನಿನ್ನ ಆಸ್ಥಾನದಲ್ಲಿ ಶಾಸ್ತ್ರವೇತ್ತರಾದ ವಿದ್ವಾಂಸರು ಬಹು ಮಂದಿ ಇದ್ದಾರೆ, ಅವರನ್ನು ಕೇಳು.

ದೇವಕಿಯ ಎಂಟನೆಯ ಮಗು ನಿನಗೆ ಮೃತ್ಯುವಾಗುವುದಾದರೆ ಹುಟ್ಟಿದೊಡನೆ ಅದನ್ನು ನಿನ್ನ ಕೈಗೇ ಒಪ್ಪಿಸುತ್ತೇನೆ. ಅದರಿಂದ ನನಗೇನಾಗಬೇಕಾಗಿಲ್ಲ. ಅಥವಾ ಎಂಟನೇ ಮಗುವನ್ನು ಮಾತ್ರವಲ್ಲ, ಹುಟ್ಟುವ ಎಲ್ಲ ಮಕ್ಕಳನ್ನೂ ನಿನಗೆ ಒಪ್ಪಿಸುತ್ತೇನೆ. ನಿನಗಿಂತ ಹೆಚ್ಚು ಪ್ರೀತಿಪಾತ್ರ ನನಗೆ ಯಾರೂ ಇಲ್ಲ. ನಿನ್ನ ತಂಗಿಯನ್ನು ಮಾತ್ರ ಕೊಲ್ಲಬೇಡ. ಅವಳು ನಿನಗೆ ಮಗಳಿಗೆ ಸಮಾನ. ಪ್ರೀತಿಯಿಂದ ಮಿಷ್ಟಾನ್ನಪಾನಗಳನ್ನು ನೀಡಿ ಅವಳನ್ನು ನೀನೇ ಪೋಷಿಸಿರುವೆ.''

ವಸುದೇವನ ಈ ಮಾತನ್ನು ಕೇಳಿ ಕಂಸ ದೇವಕಿಯನ್ನು ಕೊಲ್ಲದೆ ಬಿಟ್ಟ. ವಸುದೇವ ಅವಳನ್ನು ತನ್ನ ಮನೆಗೆ ಕರೆದೊಯ್ದ. ತಾನು ಕೊಟ್ಟ ಮಾತಿನಂತೆ ಹುಟ್ಟಿದ ಮಕ್ಕಳನ್ನು ಕ್ರಮವಾಗಿ ಕಂಸನ ಕೈಗೊಪ್ಪಿಸಿದ. ಆತ ಆರು ಮಂದಿ ಮಕ್ಕಳನ್ನು ವಧಿಸಿದ. ಏಳನೇ ಗರ್ಭವನ್ನು ವಿಷ್ಣುಮಾಯೆ ಸೆಳೆದು ರೋಹಿಣಿಯ ಉದರದಲ್ಲಿ ಇರಿಸಿದಳು. ಸೆರೆಮನೆಯ ಕಾವಲುಗಾರರು ದೇವಕಿಗೆ ಗರ್ಭಸ್ರಾವವಾಯಿತೆಂದು ತಿಳಿದರು. ಹಾಗೇ ಕಂಸನಿಗೆ ಹೇಳಿದರು. ಹೀಗೆ ಏಳನೇ ಗರ್ಭ ಸುರಕ್ಷಿತವಾಗಿ ಬೆಳೆಯಿತು. ಅದರಲ್ಲಿ ಹುಟ್ಟಿದವನು ಭಗವಾನ್ ಸಂಕರ್ಷಣಮೂರ್ತಿ ಬಲರಾಮ. ಇನ್ನು ಎಂಟನೇ ಗರ್ಭ. ಅದು ವಾಯುವಿನಿಂದ ತುಂಬಿಕೊಂಡು ನವಮಾಸ ಪರ್ಯಂತ ಕ್ರಮವಾಗಿ ಬೆಳೆದಂತೆ ಕಂಡಿತು. ಹತ್ತನೇ ತಿಂಗಳಲ್ಲಿ ಪರಮಾತ್ಮ ಆ ಗರ್ಭದ ಮೇಲೆ ದೃಷ್ಟಿ ಹರಿಸಿದ. ಒಡನೆ ಸ್ವತಃ ರೂಪವತಿಸ್ತ್ರೀಯರಲ್ಲೆಲ್ಲ ಶ್ರೇಷ್ಠಳೆನಿಸಿದ್ದ ದೇವಕಿ ಈಗ ಹಿಂದಿಗಿಂತಲೂ ನಾಲ್ಕು ಪಾಲು ಅಧಿಕ ಸುಂದರಿಯಾದಳು. ಅರಳಿದ ಮುಖಕಣ್ಣುಗಳಿಂದ ಆಕರ್ಷಕಳಾಗಿ ಕಾಣುತ್ತ ಕಾಂತಿಯಿಂದ ಹತ್ತು ದಿಕ್ಕುಗಳನ್ನು ಬೆಳಗುತ್ತ ಮೂರ್ತಿಮತ್ತಾದ ಬೆಳಕಿನ ಪುಂಜದಂತಿದ್ದ ದೇವಕಿಯನ್ನು ಕಂಡು ಕಂಸ ಅಚ್ಚರಿಗೊಂಡ. ಈ ಗರ್ಭದಿಂದ ಹುಟ್ಟುವ ಶಿಶುವೇ ತನಗೆ ಮೃತ್ಯುವಾಗುವುದೆಂದು ಭಯದಿಂದ ವಸುದೇವದೇವಕಿಯರ ಕಾವಲಿಗೆ ಇನ್ನೂ ಹೆಚ್ಚಿನ ವ್ಯವಸ್ಥೆ ಮಾಡಿದ. ಅವರನ್ನು ಏಳು ದ್ವಾರಗಳಿಂದ ಕೂಡಿದ ಭದ್ರವಾದ ಸೆರೆಮನೆಯಲ್ಲಿರಿಸಿದ.

ಹತ್ತನೇ ತಿಂಗಳಿನಲ್ಲಿ ದೇವಕಿಯ ಗರ್ಭ ಪೂರ್ತಿಯಾಗಿ ವಾಯುವಿನಿಂದ ತುಂಬಿತು. ಅವಳ ಹೃದಯಕಮಲದಲ್ಲಿ ಪರಮಾತ್ಮ ಸನ್ನಿಹಿತನಾದ. ಅವಳು ಈಗ ವಿಶ್ವಂಭರನನ್ನು ಹೊತ್ತು ಮನೆಯೊಳಗೆ ವಾಸಮಾಡುತ್ತಿದ್ದಾಳೆ. ಮೈಯಲ್ಲಿ ಜಡತೆ ಕ್ಲೇಶಗಳು ಕಾಣಿಸಿಕೊಂಡಿವೆ. ಒಮ್ಮೆ ಎದ್ದುನಿಲ್ಲುತ್ತಾಳೆ, ಒಂದು ಹೆಜ್ಜೆ ನಡೆಯುತ್ತಾಳೆ. ಇನ್ನೊಮ್ಮೆ ಕ್ಷಣಕಾಲ ನಿದ್ದೆ ಮಾಡುತ್ತಾಳೆ. ಹೆರಿಗೆ ನೋವಿಂದ ಕ್ಲೇಶ ಪಡುತ್ತಾಳೆ. ಇನ್ನೇನು ಪ್ರಸವವಾಗಬೇಕು, ವಸುದೇವ ಅದನ್ನು ತಿಳಿದು ಹರಿಸ್ಮರಣೆ ಮಾಡಿದ. ರತ್ನದೀಪಗಳಿಂದ ಬೆಳಗುವ ಮನೆಯಲ್ಲಿ ಕತ್ತಿ, ಕಬ್ಬಿಣ, ನೀರು, ಬೆಂಕಿಗಳನ್ನು ಇರಿಸಿದ. ಮಂತ್ರಜ್ಞರಾದ ಜನರನ್ನೂ ಬಂಧುಸ್ತ್ರೀಯರನ್ನೂ ಕರೆಸಿಕೊಂಡ. ಭಯ ವಿಹ್ವಲತೆಯಿಂದ ಬ್ರಾಹ್ಮಣರನ್ನೂ ಬಂಧುಗಳನ್ನೂ ಕರೆಸಿಕೊಂಡ.

ರಾತ್ರಿಯ ಎರಡು ಪ್ರಹರಗಳು ಕಳೆದುವು. ಆಕಾಶದಲ್ಲಿ ಮೋಡಗಳು ತುಂಬಿದುವು. ಮಿಂಚುಗಳು ಹೊಳೆಯ ತೊಡಗಿದುವು. ಅನುಕೂಲಕರವಾಗಿ ಗಾಳಿ ಬೀಸಿತು. ಕಾವಲುಗಾರರನ್ನು ನಿದ್ದೆ ಆವರಿಸಿತು. ಎಲ್ಲರೂ ಗಾಢ ನಿದ್ರೆಯಲ್ಲಿ ಹೆಣಗಳಂತೆ ನಿಶ್ಚೇಷ್ಟರಾಗಿ ಮಲಗಿದರು. ಆಗ ಬ್ರಹ್ಮ ರುದ್ರಾದಿ ದೇವತೆಗಳು ಬಂದು ಗರ್ಭದಲ್ಲಿರುವ ಪರಮಾತ್ಮನನ್ನು ಸ್ತೋತ್ರ ಮಾಡುತ್ತಾರೆ.

**ದೇವತೆಗಳು:-** ''ಪ್ರಭು, ನೀನು ಜಗತ್ತಿಗೆ ಜನಕ, ನಿನಗೆ ಜನಕನಿಲ್ಲ. ನೀನು ಅನಂತ, ಅವಿನಾಶಿ, ಪಾಪರಹಿತ, ಸಗುಣ, ನಿರ್ಗುಣ, ಮಹಾನ್, ಜ್ಯೋತಿಃಸ್ವರೂಪ, ನಿರಾಕಾರನಾಗಿದ್ದೂ ಭಕ್ತರಿಗಾಗಿ ಸಾಕಾರನಾಗುವಿ. ಸ್ವತಂತ್ರ, ನಿನ್ನ ಮೇಲೆ ಯಾರ ನಿಯಂತ್ರಣವೂ ಇಲ್ಲ. ನೀನು ತರ್ಕಕ್ಕೆ ನಿಲುಕದವ, ನೀನೆ ಸರ್ವಾಧಾರ, ನಿರ್ಭಯ, ನಿರಪಾಯ, ಉಪಾಧಿರಹಿತ, ನಿರ್ಲಿಪ್ತ, ಪೂರ್ಣಕಾಮ, ಮೃತ್ಯುವಿಗೂ ಮೃತ್ಯುರೂಪ, ಸ್ವಾತ್ಮಾರಾಮ, ಅನಿಮಿಷ, ನಿತ್ಯ, ಸ್ವೇಚ್ಛಾಮಯ, ಸರ್ವಕಾರಣ, ಸರ್ವರೂಪ, ಸರ್ವಗುಣಪೂರ್ಣ, ಸುಖದಾಯಕ, ದುಃಖದಾಯಕ, ದುರ್ಲಭ, ದುರ್ಜನನಾಶಕ, ಸೌಭಾಗ್ಯಶಾಲಿ, ದುರ್ಭಾಗ್ಯರಹಿತ, ವಾಗ್ಮಿ, ಸುಲಭವಾಗಿ ಒಲಿಯುವವನಲ್ಲ. ನಿನ್ನಾಜ್ಞೆಯನ್ನು ಉಲ್ಲಂಘಿಸುವವರಿಲ್ಲ. ವೇದಗಳ ಅಭಿವ್ಯಕ್ತಿಕಾರಣ, ವೇದಸ್ವರೂಪ, ನೀನೇ. ವೇದವು ನಿನ್ನ ಅಂಗ. ವೇದ ಬಲ್ಲವನೂ ನೀನೆ. ಸರ್ವವ್ಯಾಪಕ ನೀನೆ.'' ಹೀಗೆ ದೇವತೆಗಳು ಶ್ರೀಕೃಷ್ಣನನ್ನು ಸ್ತುತಿಸಿ ಪುನಃ ಪುನಃ ನಮಸ್ಕಾರಗಳನ್ನು ಸಲ್ಲಿಸಿದರು, ಕಣ್ಣಿಂದ ಆನಂದಬಾಷ್ಪ ಸುರಿಸಿದರು, ಹೂಮಳೆಗರೆದರು. ದೇವತೆಗಳು ಹೇಳಿದ ಈ ನಲವತ್ತೆರಡು ನಾಮಗಳನ್ನು ಬೆಳಿಗ್ಗೆ ಎದ್ದು ಪಠಿಸುವವನು ದೃಢಭಕ್ತಿ, ಹರಿದಾಸ್ಯ, ಸರ್ವಾಭೀಷ್ಟಸಿದ್ಧಿಗಳನ್ನು ಪಡೆಯುತ್ತಾನೆ. ದೇವತೆಗಳು ತಮ್ಮ ತಮ್ಮ ಲೋಕಗಳಿಗೆ ತೆರಳಿದರು. ನಡು ರಾತ್ರಿಯ ದಟ್ಟವಾದ ಕತ್ತಲು, ಮಳೆಯಾಗುತ್ತಿದೆ, ಮಥುರೆ ಪೂರ್ಣ ನಿಶ್ಚೇಷ್ಟವಾಗಿದೆ. ರಾತ್ರಿಯ ಏಳು ಮುಹೂರ್ತಗಳು ಕಳೆದು ಎಂಟನೇ ಮುಹೂರ್ತದಲ್ಲಿ ವೇದಾತಿರಿಕ್ತ ಪ್ರಮಾಣದಿಂದ ತಿಳಿಯಲಾಗದ ಸರ್ವೋತ್ಕೃಷ್ಟವಾದ ಶುಭಗ್ರಹದೃಷ್ಟಿಯುಕ್ತವಾಗಿದ್ದು ಅಶುಭಗ್ರಹದೃಷ್ಟಿಶೂನ್ಯವಾದ ಶುಭಕ್ಷಣದಲ್ಲಿ, ಚಂದ್ರೋದಯವಾಗುತ್ತಿದೆ, ಅರ್ಧರಾತ್ರಿಯ ಅರ್ಧಚಂದ್ರೋದಯ ಕಾಲದಲ್ಲಿ

ರೋಹಿಣೀ ನಕ್ಷತ್ರ ಅಷ್ಟಮೀ ತಿಥಿಗಳು ಕೂಡಿವೆ. ಈ ಯೋಗಕ್ಕೆ ಜಯಂತೀ ಎಂದು ಹೆಸರು. ಸೂರ್ಯಾದಿ ಗ್ರಹಗಳೆಲ್ಲವೂ ಪರಮಾತ್ಮನಿಗೆ ಹೆದರಿ ಆಕಾಶದಲ್ಲಿ ಕ್ರಮವನ್ನು ಉಲ್ಲಂಘಿಸಿ ಒಂದು ಮುಹೂರ್ತಕಾಲ ಬೇರೆ ಲಗ್ನಗಳನ್ನು ಬಿಟ್ಟು ಮೀನ ಲಗ್ನವನ್ನು ಸೇರಿ ಪ್ರಸನ್ನರಾಗಿ ಕುಳಿತಿದ್ದಾರೆ. ಬ್ರಹ್ಮನಾಜ್ಞೆಯಂತೆ ಏಕಾದಶ ಸ್ಥಾನದಲ್ಲೇ ಎಲ್ಲ ಶುಭ ಅಶುಭಗ್ರಹಗಳು ಇದ್ದಾರೆ. ಮೋಡಗಳು ಮಳೆಗರೆಯುತ್ತಿವೆ. ತಣ್ಣನೆ ಗಾಳಿ ಬೀಸುತ್ತಿದೆ. ಪೃಥಿವಿ ಪ್ರಸನ್ನಳಾಗಿದ್ದಾಳೆ. ಹತ್ತು ದಿಕ್ಕುಗಳೂ ಪ್ರಸನ್ನವಾಗಿವೆ. ಋಷಿಗಳು ಮನುಗಳು ಯಕ್ಷಗಂಧರ್ವಕಿನ್ನರರು ದೇವದೇವಿಯರು ಹರ್ಷಿತರಾಗಿದ್ದಾರೆ. ಅಪ್ಸರೆಯರು ಕುಣಿಯುತ್ತಿದ್ದಾರೆ, ಗಂಧರ್ವ ವಿದ್ಯಾಧರರು ಹಾಡುತ್ತಿದ್ದಾರೆ, ನದಿಗಳು ಸುಖವಾಗಿ ಹರಿಯುತ್ತಿವೆ, ಯಾಗಾಗ್ನಿಗಳು ಪ್ರಸನ್ನವಾಗಿ ಉರಿಯುತ್ತಿವೆ. ಆಕಾಶದಲ್ಲಿ ಆನಕ ದುಂದುಭಿನಾದ ಕೇಳಿಬರುತ್ತಿದೆ. ದೇವಪಾರಿಜಾತದ ಹೂಮಳೆಯಾಗುತ್ತಿದೆ.

ಭೂದೇವಿ ದಾದಿಯ ರೂಪದಿಂದ ಹೆರಿಗೆ ಮನೆಯನ್ನು ಪ್ರವೇಶಿಸಿದ್ದಾಳೆ. 'ಜಯ' ಶಬ್ದ, ಶಂಖ ಶಬ್ದ, 'ಹರಿ' ಶಬ್ದಗಳು ಕೇಳಿಬರುತ್ತಿವೆ. ದೇವಕಿಯ ಗರ್ಭದಿಂದ ವಾಯು ಹೊರಗೆ ಹೊರಟಿತು. ಭಗವಾನ್ ಶ್ರೀಕೃಷ್ಣ ದಿವ್ಯ ಶಿಶುರೂಪ ತಾಳಿ ಅವಳ ಹೃದಯಕಮಲದಿಂದ ಹೊರಗೆ ಆವಿರ್ಭೂತನಾದ. ಅತ್ಯಂತ ಸುಂದರವಾದ ಮನೋಹರ ಶಿಶುರೂಪ. ಕಿರೀಟ ಕುಂಡಲಗಳಿಂದ ಶೋಭಿಸುತ್ತ ಕೊಳಲು ಹಿಡಿದ ದ್ವಿಭುಜರೂಪ. ಭಕ್ತರನ್ನು ಅನುಗ್ರಹಿಸುವ ಮಂದಹಾಸಯುಕ್ತ ಪ್ರಸನ್ನ ಮುಖಕಮಲ. ನೀಲಮೇಘಶ್ಯಾಮ, ಪೀತಾಂಬರಧಾರಿ, ಚಂದನ ಅಗುರು ಕಸ್ತೂರಿ ಕುಂಕುಮ ಬಳಿದುಕೊಂಡು ರತ್ನಾಭರಣ ಭೂಷಿತನಾಗಿ ವನಮಾಲಾಲಂಕೃತನಾಗಿ ನವಿಲಗರಿ ತೊಟ್ಟಿರುವ, ಶ್ರೀವತ್ಸ ಕೌಸ್ತುಭಗಳಿಂದ ಮೆರೆವ ಸುಂದರ ತ್ರಿಭಂಗಿ ರೂಪವನ್ನು ದೇವಕಿಯು ಎದುರಿನಲ್ಲಿ ವಸುದೇವ ಕಂಡು ಅಚ್ಚರಿಗೊಂಡು ಪರಮಭಕ್ತಿಯಿಂದ ಸ್ತೋತ್ರಗೈದ. ತಲೆಬಾಗಿ ಕೈಮುಗಿದ. ದಂಪತಿಗಳಿಬ್ಬರೂ ಮೈರೋಮಾಂಚಗೊಂಡರು. ಆನಂದಬಾಷ್ಪ ಸುರಿಸಿದರು.

**ವಸುದೇವ:-** ದೇವ, ನೀನು ಅತೀಂದ್ರಿಯ, ಅವ್ಯಕ್ತ, ಅಕ್ಷರ, ನಿರ್ಗುಣ, ವಿಭು, ಧ್ಯಾನಕ್ಕೆ ವಶನಾಗುವವ, ಎಲ್ಲರಿಗೂ ನಿಯಾಮಕನಾದ ಪರಮಾತ್ಮ. ಸ್ವೇಚ್ಛಾಮಯ, ಸರ್ವರೂಪಗಳುಳ್ಳವ, ಸ್ವೇಚ್ಛೆಯಂತೆ ರೂಪ ತಳೆವವ, ಸರ್ವೋತ್ತಮ ನಿರ್ಲಿಪ್ತ ಪರಬ್ರಹ್ಮ ಜಗತ್ಕಾರಣ ಸನಾತನ, ವ್ಯಾಪ್ತ, ಮಹತ್ತಿಗಿಂತ ಮಹತ್ತು, ಅಣುವಿಗಿಂತ ಅಣು, ಕಣ್ಣಿಗೆ ಕಾಣದವ, ಎಲ್ಲರ ಶರೀರಗಳಲ್ಲಿ ನಿಯಾಮಕನಾಗಿರುವವ, ಸಾಕ್ಷಿರೂಪ, ಸಗುಣ, ನಿರ್ಗುಣ, ಸಾಕಾರ ನಿರಾಕಾರ, ಪ್ರಕೃತಿರೂಪ, ಪ್ರಕೃತಿ ನಿಯಾಮಕ, ಪ್ರಾಕೃತದಲ್ಲಿರುವವ, ಪ್ರಕೃತಿ ಬಂಧವಿಲ್ಲದವ. ಸರ್ವೇಶ, ಸರ್ವರೂಪ, ಸರ್ವನಾಶಕರ, ಅವ್ಯಯ ಸರ್ವಾಧಾರ, ನಿರಾಧಾರ, ಅತರ್ಕ್ಯನಾದ ನಿನ್ನನ್ನು ನಾನೇನು ಸ್ತುತಿಸಲಿ? ಅನಂತನಾಗಲಿ ಸರಸ್ವತಿ ದೇವಿಯಾಗಲಿ ಶಿವ ಕಾರ್ತಿಕೇಯ ಬ್ರಹ್ಮರಾಗಲಿ ನಿನ್ನನ್ನು ಸ್ತುತಿಸಲು ಶಕ್ತರಲ್ಲ. ಯೋಗೀಂದ್ರರ ಗುರುಗಳಿಗೂ ಗುರುವಾದ ಗಣೇಶ ಸಮರ್ಥನಲ್ಲ. ಋಷಿಗಳು ದೇವತೆಗಳು

ಮುನಿಗಳು, ಮನುಗಳು, ಮಾನವರು ಯಾರೂ ಸ್ವಪ್ನದಲ್ಲಿಯೂ ನಿನ್ನನ್ನು ಕಾಣಲಾರರು. ಅವರು ನಿನ್ನನ್ನು ಹೇಗೆ ಸ್ತುತಿಸಬಲ್ಲರು? ವೇದಗಳೇ ಸ್ತುತಿಸಲಾರವು. ವೇದವನ್ನು ಬಲ್ಲವರು ಏನು ಸ್ತುತಿಸಬಲ್ಲರು? ಪ್ರಭು, ನೀನು ಈ ರೂಪವನ್ನು ಮರೆಮಾಡಿ ಮಾನವ ಶಿಶುರೂಪ ತಾಳು.''

ವಸುದೇವ ಮಾಡಿದ ಈ ಸ್ತೋತ್ರವನ್ನು ಮೂರು ಸಂಧ್ಯೆಗಳಲ್ಲಿ ಪಠಿಸುವ ನರನಿಗೆ ಶ್ರೀಕೃಷ್ಣನ ಪಾದಕಮಲಗಳಲ್ಲಿ ಭಕ್ತಿ ದಾಸ್ಯಗಳು ಲಭಿಸುವುವು. ಗುಣವಂತನೂ ಹರಿದಾಸನೂ ಆದ ಉತ್ತಮ ಪುತ್ರ ಲಭಿಸುತ್ತಾನೆ. ಸಂಕಟದಿಂದ ಮತ್ತು ಶತ್ರುಭೀತಿಯಿಂದ ಮುಕ್ತಿಯೂ ಲಭಿಸುತ್ತದೆ.

**ನಾರಾಯಣ:-** ವಸುದೇವನ ಮಾತನ್ನು ಕೇಳಿ, ಭಕ್ತರಲ್ಲಿ ಅನುಗ್ರಹಕಾತರನಾದ ಹರಿ ಪ್ರಸನ್ನಮುಖದಿಂದ ನುಡಿದ. ''ನಿನ್ನ ತಪಸ್ಸಿನ ಫಲವಾಗಿ ನಾನು ನಿನಗೆ ಈಗ ಮಗನಾಗಿದ್ದೇನೆ. ನಿನಗಿನ್ನೇನು ವರಬೇಕು? ಕೇಳು, ಕೊಡುತ್ತೇನೆ. ಹಿಂದಿನ ಜನ್ಮದಲ್ಲಿ ನೀನು ಸುತಪನೆಂಬ ಮಹಾತಪಸ್ವಿಯಾಗಿದ್ದಿ. ನಿನ್ನ ಪತ್ನಿಯೂ ಪೃಶ್ನಿಯಾಗಿದ್ದಳು. ನೀನು ತಪಸ್ಸಿನಿಂದ ನನ್ನನ್ನೊಲಿಸಿಕೊಂಡು 'ನಿನ್ನಂಥ ಮಗ ಬೇಕು' ಎಂದು ವರವನ್ನು ಬೇಡಿ ಪಡೆದಿದ್ದೆ. ನನ್ನಂಥ ಮಗನೆಂದರೆ ಇನ್ನಾರು? ನಾನೇ. ನನಗೆ ಸಮಾನ ಲೋಕದಲ್ಲೇ ಇನ್ನೊಬ್ಬನಿಲ್ಲ ಎಂದು ನಾನು ಆಲೋಚಿಸಿದೆ. ಮುಂದೆ ನೀನು ಕಶ್ಯಪನಾದೆ. ನಿನ್ನ ಪತ್ನಿ ದೇವಮಾತೆ ಅದಿತಿಯಾದಳು. ನಾನು ಅದಿತಿಯಲ್ಲಿ ವಾಮನನಾಗಿ ನಿನ್ನ ಪುತ್ರನೆನಿಸಿದೆ. ಈಗ ಕೃಷ್ಣನಾಗಿ ನಿನ್ನ ಮಗನಾಗಿದ್ದೇನೆ. ನೀನು ನನ್ನನ್ನು ಮಗನೆಂದು ಆರಾಧಿಸಬಹುದು ಅಥವಾ ಪರಮಾತ್ಮನೆಂದೂ ಆರಾಧಿಸಬಹುದು. ಅಂತೂ ನೀನು ಜೀವನ್ಮುಕ್ತ ನಿಶ್ಚಿತ. ನೀನು ನನ್ನನ್ನು ಬೇಗನೆ ನಂದಗೋಕುಲದಲ್ಲಿ ಯಶೋದೆಯ ಮಡಿಲಲ್ಲಿಟ್ಟು ವಿಷ್ಣುಮಾಯೆಯನ್ನು ತಂದು ಇಲ್ಲಿ ಇರಿಸು.'' ಹೀಗೆ ಹೇಳಿ ಹರಿ ಶಿಶುರೂಪ ತಾಳಿದ.

ಒಡನೆ ವಿಷ್ಣುಮಾಯೆಯಿಂದ ಮೋಹಿತನಾದ ವಸುದೇವ ದೇವಕಿಯೊಡನೆ ಸಮಾಲೋಚನೆ ಮಾಡಿ ಶಿಶುವನ್ನು ನಂದಗೋಕುಲಕ್ಕೆ ಒಯ್ದ. ಅಲ್ಲಿ ಯಶೋದೆಯೂ ನಂದನೂ ಮನೆಯಲ್ಲಿರುವ ಎಲ್ಲ ಜನರೂ ನಿದ್ದೆಯಲ್ಲಿ ಪರವಶವಾಗಿದ್ದರು. ಆಗತಾನೇ ಹುಟ್ಟಿದ ಹೆಣ್ಣು ಶಿಶು ಒಂದು ಮಾತ್ರ ಮಂದಹಾಸಯುಕ್ತವಾದ ಪ್ರಸನ್ನ ಮುಖದಿಂದ ಮನೆಯ ಸೂರನ್ನು ದಿಟ್ಟಿಸಿ ನೋಡುತ್ತಿತ್ತು. ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುವ ಮಗುವನ್ನು ಕಂಡು ವಸುದೇವ ಪರಮಾಶ್ಚರ್ಯ ಹೊಂದಿದ. ಪುಟ್ಟ ಕೃಷ್ಣನನ್ನು ಯಶೋದೆಯ ಹಾಸಿಗೆಯಲ್ಲಿ ಇಟ್ಟು ಪುಟ್ಟ ಮಾಯೆಯನ್ನು ಎತ್ತಿಕೊಂಡ. ಬೇಗನೆ ಮಥುರೆಗೆ ಬಂದು ದೇವಕಿಯ ಹಾಸಿಗೆಯಲ್ಲಿಟ್ಟ. ಮಗು ಒಂದೇ ಸವನೆ ಅಳತೊಡಗಿತು. ಕಾವಲುಗಾರರೆಲ್ಲರೂ ಎಚ್ಚರಗೊಂಡರು. ಮಗುವನ್ನು ಎತ್ತಿತಂದು ಕಂಸನ ಕೈಗೊಪ್ಪಿಸಿದರು. ಮಗುವಿನ ಹಿಂದೆ ವಸುದೇವ ದೇವಕಿಯರು ಓಡೋಡಿ ಬಂದರು. ಅಳುವ ಕಂದನನ್ನು ನಿರ್ದಯವಾಗಿ ಬಂಡೆಗಲ್ಲಿನ ಮೇಲೆ ಅಪ್ಪಳಿಸಲು ತೊಡಗಿದ ಕಂಸನನ್ನು ತಡೆದು ವಸುದೇವನೆಂದ, ''ಕಂಸ, ನೀತಿಶಾಸ್ತ್ರ ಬಲ್ಲವನು ನೀನು, ನೀತಿಯುಕ್ತವಾದ ನನ್ನ ಮಾತನ್ನು ಕೇಳು. ನಮ್ಮ ಆರು ಮಕ್ಕಳನ್ನು

ಕೊಂದಿರುವಿ. ನಿನಗೆ ದಯೆ ಎಂಬುದಿಲ್ಲ. ಈಗ ಎಂಟನೆ ಗರ್ಭಲ್ಲಿ ಜನಿಸಿದ್ದು ಹೆಣ್ಣು ಕೂಸು. ಅದನ್ನು ಕೊಂದು ನಿನಗೆ ಭೂಮಿಯಲ್ಲಿ ಏನು ಐಶ್ವರ್ಯ ಬರಬೇಕಾಗಿದೆ? ಶಿಶುವಾಗಿರುವ ಅಬಲೆಯೋರ್ವಳು ನಿನ್ನನ್ನು ರಣರಂಗದಲ್ಲಿ ವಧಿಸಲು ಸಮರ್ಥಳಾಗುವಳೆ?'' ಇದನ್ನು ಕೇಳಿ ಕಂಸ ಪ್ರತಿಯಾಗಿ ನುಡಿದ. ''ವಸುದೇವ, ನೀನೂ ನನ್ನ ಮಾತನ್ನು ಕೇಳು ಹೇಳುತ್ತೇನೆ. ಆ ವಿಧಾತ ಒಂದು ತೃಣದಿಂದ ಪರ್ವತವನ್ನೂ ನಾಶಪಡಿಸಬಲ್ಲ. ಒಂದು ಕೀಟದಿಂದ ಸಿಂಹವನ್ನೂ ನೊಣದಿಂದ ಆನೆಯನ್ನೂ ಶಿಶುವಿನಿಂದ ವೀರಯೋಧನನ್ನೂ ಕ್ಷುದ್ರಜಂತುವಿನಿಂದ ಮಹಾವೀರನನ್ನೂ ಇಲಿಯಿಂದ ಬೆಕ್ಕನ್ನೂ ಕಪ್ಪೆಯಿಂದ ಹಾವನ್ನೂ ಆ ವಿಧಾತ ಕೊಲ್ಲಿಸಬಲ್ಲ. ಅವನು ಬಯಸಿದರೆ ಕಾರ್ಯದಿಂದ ಕಾರಣವೂ ಭಕ್ಷ್ಯದಿಂದ ಭಕ್ಷಕ ಜಂತುವೂ ಬೆಂಕಿಯಿಂದ ನೀರೂ ಒಣಹುಲ್ಲುಕಡ್ಡಿಯಿಂದ ಬೆಂಕಿಯೂ ನಾಶವಾಗಬಹುದು. ಒಬ್ಬ ಬ್ರಾಹ್ಮಣ ಏಳು ಸಮುದ್ರವನ್ನು ಏಕಾಪೋಷಣ ಮಾಡಿಲ್ಲವೆ? ಮೂಲೋಕದಲ್ಲಿಯೆ ವಿಚಿತ್ರವಾದುದು, ತಿಳಿಯಲು ಅಸಾಧ್ಯವಾದುದು ವಿಧಾತನ ಸಂಕಲ್ಪ. ಅವನ ಸಂಕಲ್ಪವಿದ್ದರೆ ಈ ಹೆಣ್ಣು ಕೂಸೂ ನನ್ನನ್ನು ಕೊಲ್ಲಲು ಶಕ್ತವಾಗಬಹುದು. ಅದರಿಂದ ಈ ಕೂಸನ್ನು ನಾನು ಕೊಲ್ಲುವುದು ನಿಶ್ಚಯ, ಇದರಲ್ಲಿ ಸಂಶಯವಿಲ್ಲ.'' ಹೀಗೆ ಹೇಳಿ ಕಂಸ ಮಗುವನ್ನು ಕೊಲ್ಲಲು ಉದ್ಯುಕ್ತನಾದ. 'ರಾಜನೆ, ನೀನು ಆರು ಗಂಡು ಮಕ್ಕಳನ್ನು ವ್ಯರ್ಥವಾಗಿ ಕೊಂದಿರುವೆ.ಈಹೆಣ್ಣುಮಗುವನ್ನಾದರೂ ನನಗೆ ಕೊಡಲಾರೆಯ?' ಎಂದು ವಸುದೇವ ಬೇಡಿದ. ಆಗಲೆ ಅಶರೀರವಾಣಿ ನುಡಿಯಿತು, ''ಮೂರ್ಖಕಂಸ, ಪರಮಾತ್ಮನ ಸಂಕಲ್ಪವನ್ನು ಅರಿಯಲಾರದ ನೀನು ಯಾರನ್ನು ಕೊಲ್ಲುವಿ? ನಿನ್ನನ್ನು ಕೊಲ್ಲುವವನು ಬೇರೆ ಕಡೆ ಇದ್ದಾನೆ. ಕಾಲ ಬಂದಾಗ ಆತ ನಿನಗೆ ಕಾಣಿಸಿಕೊಳ್ಳುತ್ತಾನೆ.'' ಇದನ್ನು ಕೇಳಿದ ಕಂಸ ಹತಾಶನಾಗಿ ಮಗುವನ್ನು ವಸುದೇವನ ಕೈಗಿತ್ತ, ವಸುದೇವ ದೇವಕಿಯರು ಮಗುವನ್ನು ಎತ್ತಿಕೊಂಡು ಸಂತೋಷದಿಂದ ಮನೆಗೆ ನಡೆದರು. ಸತ್ತು ಪುನರ್ಜನ್ಮ ಪಡೆದಂತಿದ್ದ ಮಗುವನ್ನು ಎದೆಗೊತ್ತಿಕೊಂಡರು. ಬ್ರಾಹ್ಮಣರಿಗೆ ಧನದಾನ ನೀಡಿದರು. ಆ ಮಗು ಕೃಷ್ಣನ ತಂಗಿ ಏಕಾನಂಶೆ, ಪಾರ್ವತಿಯ ಅಂಶದಿಂದ ಜನಿಸಿದವಳು. ಮುಂದೆ ಕೃಷ್ಣ ರುಕ್ಮಿಣಿಯನ್ನು ವಿವಾಹವಾಗುವ ಸಂದರ್ಭದಲ್ಲಿ ಏಕಾನಂಶೆಯನ್ನು ದುರ್ವಾಸಮುನಿಗೆ ಕೊಟ್ಟು ವಿವಾಹ ಮಾಡುತ್ತಾನೆ ವಸುದೇವ. ಇದು ಶ್ರೀಕೃಷ್ಣನ ಜನ್ಮ ವೃತ್ತಾಂತ. ಪುಣ್ಯಕರ, ಜನ್ಮ ಮೃತ್ಯು ಜರೆಗಳನ್ನು ಜರಿದು ಸುಖ ನೀಡುವುದು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಶ್ರೀಕೃಷ್ಣಾವತಾರವೆಂಬ ಏಳನೆ ಅಧ್ಯಾಯ ಮುಗಿದುದು*

—o—

**ನಾರದ:-** ಮುನಿಯೆ, ಶ್ರೀಕೃಷ್ಣಜನ್ಮಾಷ್ಟಮೀವ್ರತ ಎಲ್ಲ ವ್ರತಗಳಿಗಿಂತ ಶ್ರೇಷ್ಠ ವೆನಿಸಿದೆ. ಅದನ್ನು ಹೇಳು. ಯಾವ ಜನ್ಮಾಷ್ಟಮಿಯಲ್ಲಿ ಜಯಂತೀಯೋಗ ಬರುತ್ತದೆ? ಅದರ ಫಲವೇನು? ಈ ವ್ರತದ ಅನುಷ್ಠಾನ ಹೇಗೆ? ಅನುಷ್ಠಾನ ಮಾಡದಿದ್ದರೆ, ಅಥವಾ ಅಂದು ಭೋಜನ ಮಾಡಿದರೆ ಏನು ದೋಷ? ಉಪವಾಸ ಮಾಡಿದರೆ ಏನು ಫಲ? ವ್ರತ ಪೂಜೆ ಉಪವಾಸ ಪಾರಣಗಳ ನಿಯಮ ಇವೆಲ್ಲವನ್ನೂ ಉಪದೇಶಿಸು.

**ನಾರಾಯಣ:-** ಸಪ್ತಮಿಯಂದು ಮತ್ತು ಪಾರಣದಂದು ಹವಿಷ್ಯಾನ್ನ ಉಣಬೇಕು. ಅಷ್ಟಮಿ ದಿನದಲ್ಲಿ ಬೆಳಿಗ್ಗೆ ಅರುಣೋದಯದಲ್ಲಿ ಎದ್ದು ಪ್ರಾತರಾಹ್ನಿಕ ಮುಗಿಸಿ ಸ್ನಾನಮಾಡಿ ಸಂಕಲ್ಪ ಮಾಡಬೇಕು, ಶ್ರೀಕೃಷ್ಣನ ಪ್ರೀತಿಗಾಗಿ ವ್ರತನ್ನೂ ಉಪವಾಸವನ್ನೂ ಆಚರಿಸುವೆನು ಎಂದು. ಮನ್ವಾದಿಗಳಲ್ಲಿ ಸ್ನಾನ ಪೂಜೆಗಳನ್ನು ಮಾಡುವುದಕ್ಕಿಂತ ಕೋಟಿಪಾಲು ಅಧಿಕಪುಣ್ಯ ಭಾದ್ರಪದ ಅಷ್ಟಮೀ ಸ್ನಾನಪೂಜೆಗಳಿಂದ ಸಿಗುತ್ತದೆ. ಅಂದು ಬರಿ ನೀರನ್ನು ಪಿತೃಗಳಿಗೆ ಅರ್ಪಿಸಿದರೂ ನೂರು ವರ್ಷ ಗಯಾಶ್ರಾದ್ಧಮಾಡಿದ ಫಲವಿದೆ. ಅದರಿಂದ ಸ್ನಾನಮಾಡಿ ನಿತ್ಯಕರ್ಮ ಪೂರೈಸಿ ಶ್ರೀಕೃಷ್ಣ ಜನ್ಮಸ್ಥಾನವಾದ ಹೆರಿಗೆ ಮನೆಯನ್ನು ಸಿದ್ಧಪಡಿಸಬೇಕು. ಅದರಲ್ಲಿ ಕಬ್ಬಿಣದ ಕತ್ತಿ, ಬೆಂಕಿ, ನೀರು, ರಕ್ಷಕ ಜನರು, ಹೊಕ್ಕಳ ಬಳ್ಳಿಯನ್ನು ಕತ್ತರಿಸುವ ಕತ್ತಿ, ದಾದಿಯ ರೂಪದ ಸ್ತ್ರೀ, ಷೋಡಶೋಪಚಾರ ಪೂಜೆಗೆ ಬೇಕಾಗುವ ದ್ರವ್ಯಗಳು, ರುಚಿಕರವಾದ ಎಂಟು ಬಗೆಯ ಅಂದರೆ ಜಾಯಿಕಾಯಿ, ಕಂಕೋಲ, ದಾಳಿಂಬೆ, ಶ್ರೀಫಲ, ತೆಂಗಿನಕಾಯಿ, ನಿಂಬೆಹಣ್ಣು, ಕುಂಬಳಕಾಯಿ, ಸುವಾಸ ಫಲಗಳನ್ನು ಸಿದ್ಧಪಡಿಸಬೇಕು.

**ಆಸನಂ ವಸನಂ ಪಾದ್ಯಂ ಮಧುಪರ್ಕಂ ತಥೈವ ಚ ।**
**ಅರ್ಘ್ಯಮಾಚಮನೀಯಂ ಚ ಸ್ನಾನೀಯಂ ಶಯನಂ ತಥಾ ॥**
**ಗಂಧಂ ಪುಷ್ಪಂ ಚ ನೈವೇದ್ಯಂ ತಾಂಬೂಲಮನುಲೇಪನಂ ।**
**ಧೂಪದೀಪೌ ಭೂಷಣಂ ವೈ ಚೋಪಚಾರಾಶ್ಚ ಷೋಡಶ ॥**

ಆಸನ ವಸ್ತ್ರ ಪಾದ್ಯ ಮಧುಪರ್ಕ ಅರ್ಘ್ಯ ಆಚಮನೀಯ ಸ್ನಾನೀಯ ಶಯ್ಯೆ ಗಂಧ ಪುಷ್ಪ ನೈವೇದ್ಯ ತಾಂಬೂಲ ಅನುಲೇಪನ ಧೂಪ ದೀಪ ಭೂಷಣ ಇವೇ ಹದಿನಾರು ಉಪಚಾರಗಳು. ಕಾಲು ತೊಳೆದುಕೊಂಡು ಶುಭ್ರವಸ್ತ್ರಗಳನ್ನುಟ್ಟುಕೊಂಡು ಆಚಮನ ಆಸನ ಸ್ವಸ್ತಿವಾಚನ ಕಲಶಸ್ಥಾಪನ ಪಂಚದೇವಾರ್ಚನಗಳನ್ನು ಮಾಡಿ ಕಲಶದಲ್ಲಿ ಶ್ರೀಕೃಷ್ಣನನ್ನೂ ವಸುದೇವ ದೇವಕೀ ಯಶೋದಾ ನಂದಗೋಪ ರೋಹಿಣೀ ಬಲರಾಮ ಷಷ್ಠೀದೇವಿ ಭೂದೇವಿಯರನ್ನೂ ರೋಹಿಣೀನಕ್ಷತ್ರ ಅಷ್ಟಮೀತಿಥಿದೇವಿಯರನ್ನೂ ಅಶ್ವತ್ಥಾಮ ಬಲಿ ಹನುಮಂತ ವಿಭೀಷಣ ಕೃಪ ಪರಶುರಾಮ ವೇದವ್ಯಾಸ ಮಾರ್ಕಂಡೇಯರನ್ನೂ ಆವಾಹಿಸಬೇಕು. ಹೂವನ್ನು ಅರ್ಪಿಸಿ ಸಾಮವೇದೋಕ್ತ ಕ್ರಮದಿಂದ ಧ್ಯಾನಮಾಡಬೇಕು. ಇದನ್ನು ಮೊದಲಿಗೆ ಬ್ರಹ್ಮ ಸನತ್ಕುಮಾರನಿಗೆ ಉಪದೇಶ ಮಾಡಿದ. ನಾರದ, ಅದನ್ನು ನಾನು ನಿನಗೆ ಹೇಳುತ್ತೇನೆ, ಕೇಳು.

"ನೀಲಮೇಘಶ್ಯಾಮ, ಅತಿ ಸುಂದರ, ನಗುಮೊಗದವನು, ಬ್ರಹ್ಮ ರುದ್ರ ಶೇಷ ಧರ್ಮರಿಂದ ಸ್ತುತಿಸಲ್ಪಡುವವನು, ಋಷಿಗಳು, ಮುನಿಗಳು ಮಾನವರು ಸಿದ್ಧರು ಇವರಾರಿಗೂ ಧ್ಯಾನಿಸಲಾಗದವನು. ಮಹಾಯೋಗಿಗಳಿಗೂ ಚಿಂತಿಸಲಾಗದವನು. ಸರ್ವೋತ್ತಮ, ಅಸದೃಶ ಸಾಕ್ಷಿರೂಪನಾದ ಶ್ರೀಕೃಷ್ಣನನ್ನು ಭಜಿಸುವೆನು."

ಹೀಗೆ ಧ್ಯಾನ ಮಾಡಿ ಹೂವನ್ನು ಅರ್ಪಿಸಿ ಷೋಡಶೋಪಚಾರಗಳನ್ನು ಸಲ್ಲಿಸಬೇಕು. ಅದಕ್ಕೆ ಮಂತ್ರಗಳು ಹೀಗೆ -

'ಒಳ್ಳೆಯ ರತ್ನಮಣಿಗಳಿಂದ ನಿರ್ಮಿತವಾಗಿದ್ದು ಚಿತ್ರಗಳಿಂದ ಚಿತ್ರಿತವಾದ ಬಲು ಸುಂದರ ಆಸನವನ್ನು ಸಮರ್ಪಿಸುತ್ತೇನೆ, ಹರಿ, ಸ್ವೀಕರಿಸು.

ವಿಶ್ವಕರ್ಮನಿರ್ಮಿತವಾಗಿದ್ದು ಅಗ್ನಿಶುದ್ಧವಾದ, ಪುಟಕ್ಕಿಟ್ಟ ಚಿನ್ನದಿಂದ ಖಚಿತವಾದ ವಸ್ತ್ರವನ್ನು ಸಮರ್ಪಿಸುತ್ತೇನೆ, ಹರಿ, ಸ್ವೀಕರಿಸು.

ಪವಿತ್ರ ಹಾಗೂ ನಿರ್ಮಲವಾದ ಪಾದ್ಯಜಲವನ್ನು ಪಾದಪ್ರಕ್ಷಾಲನೆಗಾಗಿ ಬಂಗಾರದ ಪಾತ್ರದಲ್ಲಿ ನಿನಗೆ ಅರ್ಪಿಸುತ್ತೇನೆ ಹರಿ, ಸ್ವೀಕರಿಸು.

ಜೇನು, ತುಪ್ಪ, ಮೊಸರು, ಹಾಲು, ಸಕ್ಕರೆ ಎಂಬ ಪಂಚಾಮೃತವನ್ನು ಸ್ನಾನಕ್ಕಾಗಿ ಬಂಗಾರದ ಪಾತ್ರೆಯಲ್ಲಿ ನಿನಗೆ ಅರ್ಪಿಸುತ್ತೇನೆ, ಹರಿ, ಸ್ವೀಕರಿಸು.

ದೂರ್ವೆ ಅಕ್ಷತ ಬಿಳಿಹೂ ಸ್ವಚ್ಛ ನೀರುಗಳಿಂದ ಕೂಡಿದ ಚಂದನ ಅಗುರು ಕಸ್ತೂರಿ ಸಹಿತವಾದ ಅರ್ಘ್ಯವನ್ನು ಅರ್ಪಿಸುತ್ತೇನೆ, ಹರಿ, ಸ್ವೀಕರಿಸು.

ಗಂಧವಸ್ತುಗಳಿಂದ ಪರಿಮಳಯುಕ್ತವಾದ, ಶುದ್ಧವಾದ ಸ್ವಚ್ಛ ನೀರಿನ ಆಚಮನೀಯವನ್ನು ಅರ್ಪಿಸುತ್ತೇನೆ, ಹರಿ, ಸ್ವೀಕರಿಸು.

ಗಂಧವಸ್ತುಗಳಿಂದ ಪರಿಮಳಯುಕ್ತವಾದ ನೆಲ್ಲಿರಸದಿಂದ ಕೂಡಿದ ಸ್ನಾನದ ತೈಲವನ್ನು ಅರ್ಪಿಸುತ್ತೇನೆ ಹರಿ, ಸ್ವೀಕರಿಸು.

ಒಳ್ಳೆಯ ಮಣಿರತ್ನಗಳಿಂದ ನಿರ್ಮಿತವಾಗಿದ್ದು ತೆಳುವಾದ ಬಟ್ಟೆ ಹಾಸಿದ ಮನೋಹರವಾದ ಮಂಚವನ್ನು ಅರ್ಪಿಸುತ್ತೇನೆ, ಹರಿ, ಸ್ವೀಕರಿಸು.

ನಾನಾ ಬಗೆಯ ಮರಗಳ ಬೇರುಗಳು ಮತ್ತು ಕಸ್ತೂರಿಯ ಚೂರ್ಣಯುಕ್ತವಾದ ಗಂಧವನ್ನು, ಹರಿ, ಸ್ವೀಕರಿಸು. ಎಲ್ಲ ದೇವತೆಗಳಿಗೆ ಪ್ರಿಯವಾದ, ಒಳ್ಳೆಯ ಪರಿಮಳಯುಕ್ತವಾದ ಕುಂಕುಮದಿಂದ ಕೂಡಿದ ಪುಷ್ಪವನ್ನು ಹರಿ, ಸ್ವೀಕರಿಸು.

ಸ್ವಸ್ತಿಕವೆಂಬ ರುಚಿಯಾದ ಭಕ್ಷ್ಯ, ಒಳ್ಳೆಯ ಮಾಗಿದ ಹಣ್ಣುಗಳು, ಲಡ್ಡು ಮೋದಕ, ತುಪ್ಪ, ಹಾಲು, ಬೆಲ್ಲ, ಜೇನು, ಬೆಣ್ಣೆ ಮೊಸರು ಮಜ್ಜಿಗೆ ಈ ಎಲ್ಲ ನೈವೇದ್ಯವನ್ನು ಅರ್ಪಿಸುತ್ತೇನೆ, ಹರಿ, ಸ್ವೀಕರಿಸು.

ಸಕ್ಕರೆ ಬೆರೆಸಿದ ತಣ್ಣನೆ ಹಾಲಿನೊಂದಿಗೆ ಅಡಿಕೆ ಕರ್ಪೂರಾದಿಗಳಿಂದ ಯುಕ್ತವಾದ ಸ್ವಾದುವಾದ ಈ ತಾಂಬೂಲವನ್ನು ಭಕ್ತಿಯಿಂದ ಅರ್ಪಿಸುತ್ತೇನೆ, ಹರಿ, ಸ್ವೀಕರಿಸು.

ಚಂದನ ಅಗುರು ಕಸ್ತೂರಿ ಕುಂಕುಮ ದ್ರವಯುಕ್ತವಾದ ಸುಂದರವಾದ ಅಬೀರಚೂರ್ಣದ ಅನುಲೇಪನವನ್ನು ಅರ್ಪಿಸುತ್ತೇನೆ, ಸ್ವೀಕರಿಸು. ನಾನಾವೃಕ್ಷಗಳ ರಸದಿಂದ ಉತ್ಪನ್ನವಾಗುವ, ಬೆಂಕಿಯಿಂದ ಕೂಡಿದ, ಗಂಧಯುಕ್ತವಾದ, ಎಲ್ಲ ದೇವತೆಗಳಿಗೆ ಪ್ರಿಯವಾದ ಧೂಪವನ್ನು ಅರ್ಪಿಸುತ್ತೇನೆ, ಹರಿ, ಸ್ವೀಕರಿಸು.

ಘೋರ ಅಂಧಕಾರವನ್ನು ನಾಶಗೈವ ಪ್ರಕಾಶಮಾನವಾದ ಮಂಗಳಕರವಾಗಿ ಬೆಳಗುವ ಈ ದೀಪವನ್ನು ಹರಿ, ಸ್ವೀಕರಿಸು.

ಎಲ್ಲ ಜೀವಿಗಳ ಜೀವನಹೇತುವಾದ, ಕರ್ಪೂರಾದಿಯುಕ್ತವಾದ ಪವಿತ್ರ ನಿರ್ಮಲ ಜಲವನ್ನು ಪಾನಕ್ಕಾಗಿ ಅರ್ಪಿಸುತ್ತೇನೆ, ಹರಿ, ಸ್ವೀಕರಿಸು.

ಶರೀರಕ್ಕೆ ಶ್ರೇಷ್ಠ ಅಲಂಕಾರವಾದ ನಾನಾ ಪುಷ್ಪಗಳನ್ನು ತೆಳುವಾದ ದಾರದಿಂದ ಪೋಣಿಸಿ ಮಾಡಿದ ಪುಷ್ಪಹಾರವನ್ನು ಹರಿ, ಸ್ವೀಕರಿಸು. ಸ್ವಾದುವಾದ, ಸುಂದರವಾದ, ವಂಶವೃದ್ಧಿಕರವಾದ ಹಣ್ಣುಗಳನ್ನೂ ಬೀಜಗಳನ್ನೂ, ಹರಿ, ಸ್ವೀಕರಿಸು''

ಹೀಗೆ ವ್ರತಸ್ಥಾನದಲ್ಲಿರಿಸಿರುವ ಎಲ್ಲ ಪೂಜಾದ್ರವ್ಯಗಳನ್ನೂ ಹರಿಗೆ ಅರ್ಪಿಸಬೇಕು. ಆವಾಹಿತರಾದ ಬೇರೆ ದೇವತೆಗಳನ್ನೂ ಪ್ರತ್ಯೇಕವಾಗಿ ಭಕ್ತಿಯಿಂದ ಪೂಜಿಸಿ ಮೂರು ಬಾರಿ ಪುಷ್ಪಾಂಜಲಿ ಅರ್ಪಿಸಬೇಕು. ಸುನಂದ, ನಂದ, ಕುಮುದ ಎಂಬ ಗೋಪಾಲಕರನ್ನೂ ಗೋಪಿಯರನ್ನೂ ರಾಧೆಯನ್ನೂ ಗಣೇಶ ಸ್ಕಂದ ಬ್ರಹ್ಮ ಶಿವ ಪಾರ್ವತಿಯರನ್ನೂ ಲಕ್ಷ್ಮೀ ಸರಸ್ವತಿಯರನ್ನೂ ದಿಕ್ಪಾಲಕರನ್ನೂ ಗ್ರಹಗಳನ್ನೂ ಪಾರ್ಷದ ಪ್ರಮುಖರಾದ ಶೇಷ ಸುದರ್ಶನರನ್ನೂ ಎಲ್ಲ ದೇವತೆಗಳನ್ನೂ ಪೂಜಿಸಿ ದಂಡಪ್ರಣಾಮ ಮಾಡಬೇಕು. ಬ್ರಾಹ್ಮಣರಿಗೆ ನೈವೇದ್ಯವನ್ನೂ ದಕ್ಷಿಣೆಯನ್ನೂ ನೀಡಬೇಕು. ಭಕ್ತಿಯಿಂದ ಶ್ರೀಕೃಷ್ಣಜನ್ಮಾಧ್ಯಾಯದ ಕಥೆಯನ್ನು ಶ್ರವಣ ಮಾಡಬೇಕು. ದರ್ಭಾಸನದಲ್ಲಿ ಕುಳಿತು ಜಾಗರಣ ಮಾಡಬೇಕು. ಬೆಳಿಗ್ಗೆ ಆಹ್ನಿಕಗಳನ್ನು ಮುಗಿಸಿ ಶ್ರೀಹರಿಯನ್ನು ಪೂಜಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಹರಿನಾಮ ಸಂಕೀರ್ತನ ಮಾಡಬೇಕು.

**ನಾರದ:-** ವೇದೋಕ್ತವಾದ ಸರ್ವಸಮ್ಮತವಾದ ಜನ್ಮಾಷ್ಟಮೀವ್ರತ ಕಾಲವ್ಯವಸ್ಥೆ ಹೇಗೆ? ವ್ರತದಲ್ಲಿ ಉಪವಾಸಕ್ಕೂ ಜಾಗರಣಕ್ಕೂ ಏನು ಫಲ? ಉಂಡರೆ ಏನು ದೋಷ? ಇವೆಲ್ಲವನ್ನೂ ಉಪದೇಶಿಸು.

**ನಾರಾಯಣ:-** ಅರ್ಧರಾತ್ರಿಯಲ್ಲಿ ಅಷ್ಟಮೀ ತಿಥಿಗೆ ರೋಹಿಣೀ ನಕ್ಷತ್ರಯೋಗವಿದ್ದರೆ ಅದು ಮುಖ್ಯವಾದ ವ್ರತಕಾಲ. ಆ ಕಾಲದಲ್ಲಿಯೆ ಶ್ರೀಕೃಷ್ಣನ ಅವತಾರವಾಯಿತು. ಅದರಿಂದ ಅದು ಜಯವನ್ನೂ ಪುಣ್ಯವನ್ನೂ ಉಂಟುಮಾಡುವುದರಿಂದ ಜಯಂತಿ ಎನಿಸುತ್ತದೆ. ಆ ಕಾಲದಲ್ಲಿ ಉಪವಾಸ ವ್ರತ ಮಾಡಿ ಜಾಗರಣ ಮಾಡಬೇಕು. ಎಲ್ಲಕ್ಕೂ ಅಪವಾದವಾಗಿರುವ ಪ್ರಧಾನವಾದ ಕಾಲ ಇದು, ಸರ್ವಸಮ್ಮತ, ವೇದವೇತ್ತರು ಎಲ್ಲರೂ ಹಾಗೇ ಹೇಳುತ್ತಾರೆ ಎಂದು ಬ್ರಹ್ಮ ಹೇಳಿದ್ದಾನೆ. ಈ ಕಾಲದಲ್ಲಿ ಉಪವಾಸ ಮಾಡಿ ಜಾಗರಣ ಮಾಡಿದರೆ ಕೋಟಿಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಬಿಡುಗಡೆಯಾಗುತ್ತದೆ. ಇದರಲ್ಲಿ ಸಂಶಯವಿಲ್ಲ. ಅಷ್ಟಮೀತಿಥಿಗೆ ಸಪ್ತಮಿಯ ವೇಧವಿದ್ದರೆ ಅಂಥ ಅಷ್ಟಮಿಯಲ್ಲಿ ವ್ರತ ಮಾಡಕೂಡದು. ವೇಧವಿಲ್ಲದ ಅಷ್ಟಮಿಯಂದೇ ರೋಹಿಣೀಯೋಗವಿದ್ದಾಗ ಕೃಷ್ಣಾವತಾರವಾಗಿತ್ತು. ಆ ಕಾಲವೇ ಅತ್ಯಂತ ಮಂಗಳಕರ. ವೇದ ವೇದಾಂಗಗಳಿಗೆ ಸಂಮತ. ರೋಹಿಣೀ ನಕ್ಷತ್ರ ಕಳೆದ ಮೇಲೆ ಪಾರಣ ಮಾಡಬೇಕು. ಹಾಗೇ ಅಷ್ಟಮೀ ತಿಥಿ ಕಳೆದ ಮೇಲೂ ಪಾರಣ ಮಾಡಬಹುದು. ದೇವಪೂಜೆ ಮಾಡಿ ಹರಿಸ್ಮರಣ ಪೂರ್ವಕವಾಗಿ ಪಾರಣ ಮಾಡಿದರೆ ಅದು ಎಲ್ಲ ಪಾಪಗಳನ್ನು ಪರಿಹರಿಸುವುದು ಉಪವಾಸದ ಅಂಗಭೂತವಾಗಿದ್ದು ಅದರ ಫಲಸಿದ್ಧಿಗೂ ಕಾರಣವಾಗುವುದು. ಎಲ್ಲ

ವ್ರತಪಾರಣಗಳೂ ಹಗಲಿನಲ್ಲಿ ನಡೆಯಬೇಕು. ಇಲ್ಲದಿದ್ದರೆ ಫಲವಿಲ್ಲ, ಆದರಿಂದ ರಾತ್ರಿಯಲ್ಲಿ ಪಾರಣವಿಲ್ಲ. ಆದರೆ ರೋಹಿಣೀವ್ರತ ಹಾಗಲ್ಲ. ರಾತ್ರಿಯಲ್ಲಿಯೂ ಪಾರಣ ಮಾಡಬಹುದು. ಆದರೆ ಮಹಾನಿಶೆಯನ್ನು ವರ್ಜ್ಯಮಾಡಬೇಕು. ಬೇರೆ ವ್ರತಗಳಲ್ಲಿ ಪೂರ್ವಾಹ್ಣದಲ್ಲಿ ಬ್ರಾಹ್ಮಣರನ್ನೂ ದೇವತೆಗಳನ್ನೂ ಪೂಜಿಸಿ ಪಾರಣ ಮಾಡುವ ನಿಯಮವಿದ್ದರೂ ರೋಹಿಣೀವ್ರತದಲ್ಲಿ ಆ ನಿಯಮವಿಲ್ಲ.

ಬುಧವಾರ ಸೋಮವಾರಗಳಲ್ಲಿ ಈ ಜಯಂತೀಯೋಗ ಒದಗಿ ಬಂದರೆ ಆಗ ವ್ರತವನ್ನು ಆಚರಿಸುವವನಿಗೆ ಮುಂದೆ ಪುನರ್ಜನ್ಮವಿಲ್ಲದಂತಾಗುವುದು. ಉದಯಕಾಲದಲ್ಲಿ ಸ್ವಲ್ಪ ಅಷ್ಟಮಿ ಇದ್ದು ಬಳಿಕ ಪೂರ್ತಿ ನವಮಿ ಇರಬೇಕು. ಅಂದು ಬುಧವಾರ ಅಥವಾ ಸೋಮವಾರವಾಗಿರಬೇಕು. ರೋಹಿಣೀ ನಕ್ಷತ್ರವೂ ಸೇರಿರಬೇಕು. ಇಂಥ ಯೋಗ ನೂರು ವರ್ಷಕ್ಕೊಮ್ಮೆಯೂ ಲಭಿಸಲಾರದು. ಆಗ ವ್ರತ ಮಾಡಿದರೆ ಕೋಟಿ ಪಿತೃಗಳ ಉದ್ಧಾರವಾಗುವುದು.

ಧನಸಂಪತ್ತಿನ ಕೊರತೆಯಿಂದ ವಿಧ್ಯುಕ್ತವಾಗಿ ವ್ರತಾಚರಣ ಮಾಡಲು ಅಶಕ್ತನಾದಲ್ಲಿ ಭಕ್ತಿಯಿಂದ ಉಪವಾಸ ಪೂರ್ವಕವಾಗಿ ಪೂಜೆ ನಡೆಸಿ ಜಾಗರಣ ಮಾಡಿದರೆ ಸಾಕು. ವ್ರತಫಲವನ್ನು ಹರಿ ನೀಡುತ್ತಾನೆ. ಸಂಪತ್ತು ಇದ್ದೂ ಇಲ್ಲವೆಂದು ತೋರಿಕೊಳ್ಳಕೂಡದು. ಹಾಗೆ ತೋರಿಕೊಂಡರೆ ಅದಕ್ಕೆ ತಕ್ಕ ಫಲವನ್ನು ಅನುಭವಿಸಬೇಕಾಗುತ್ತದೆ.

ಅಷ್ಟಮೀ ತಿಥಿಯೂ ರೋಹಿಣೀ ನಕ್ಷತ್ರವೂ ಇರುವಾಗ ಪಾರಣ ಮಾಡಕೂಡದು. ಮಾಡಿದರೆ ಪೂರ್ವಪುಣ್ಯವೂ ಉಪವಾಸ ಫಲವೂ ನಶಿಸುವುದು. ತಿಥಿ ಎಂಟು ಪಾಲು, ನಕ್ಷತ್ರ ನಾಲ್ಕು ಪಾಲು ಪುಣ್ಯನಾಶ ಮಾಡುವುದು. ಅದರಿಂದ ಪ್ರಯತ್ನಪಟ್ಟು ತಿಥಿ ನಕ್ಷತ್ರಗಳು ಮುಗಿದಾಗ ಪಾರಣ ಮಾಡಬೇಕು. ಮಹಾನಿಶಾ ಬಂದಾಗಲೇ ತಿಥಿ ನಕ್ಷತ್ರಗಳು ಮುಗಿದರೆ ಮೂರನೇ ದಿನವೇ ಪಾರಣ ಮಾಡಬೇಕು. ರಾತ್ರಿಯಲ್ಲಿ ಆರು ಮುಹೂರ್ತಗಳು ಕಳೆದರೆ ಅದು ಮಹಾನಿಶೆಯಾಗುತ್ತದೆ. ಆಗ ಭೋಜನ ಮಾಡಿದರೆ ಅದು ಬ್ರಹ್ಮಹತ್ಯೆಗೆ ಸಮಾನ. ತಾಂಬೂಲ, ಹಣ್ಣು, ನೀರು ಕೂಡ ಗೋಮಾಂಸ ಮಲಮೂತ್ರಗಳಿಗೆ ಸಮಾನವೆಂದ ಮೇಲೆ ಅನ್ನ ಅಭೋಜ್ಯವೆಂದು ಬೇರೇನು ಹೇಳಬೇಕು? ಶುದ್ಧ ಜನ್ಮಾಷ್ಟಮಿಯಲ್ಲಿ ಜಾಗರಣದಿಂದ ನೂರು ಜನ್ಮಗಳ ಪಾಪ ಪರಿಹಾರ. ಉಪವಾಸದಿಂದ ಅಶ್ವಮೇಧಫಲ ಮತು ಬಾಲ್ಯ ಕೌಮಾರ ಯೌವನ ವಾರ್ಧಕ್ಯಗಳಲ್ಲಿ ಏಳು ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತಿ. ಅಂದು ಭೋಜನ ಮಾಡುವವನು ಮಾತೃಗಮನ ನೂರು ಬ್ರಹ್ಮಹತ್ಯೆಗಳ ಪಾಪಕ್ಕೆ ಭಾಗಿಯಾಗುತ್ತಾನೆ. ಕೋಟಿಜನ್ಮಗಳಲ್ಲಿ ಮಾಡಿದ ಪುಣ್ಯವನ್ನು ಕಳೆದುಕೊಳ್ಳುತ್ತಾನೆ. ಮತ್ತು ದೇವಕಾರ್ಯ ಪಿತೃಕಾರ್ಯಗಳಲ್ಲಿ ಅವನು ಅನರ್ಹ ಅಶುಚಿ ಎನಿಸುತ್ತಾನೆ. ಮರಣಾನಂತರ ಚಂದ್ರಸೂರ್ಯರಿರುವಷ್ಟು ಕಾಲ ಕಾಲಸೂತ್ರನರಕದಲ್ಲಿ ವಾಸಮಾಡುತ್ತಾನೆ. ಅಲ್ಲಿ ಶೂಲದಂತೆ ಚುಚ್ಚುವ ಕ್ರಿಮಿಗಳು ಅವನನ್ನು ಕಡಿಯುತ್ತವೆ. ಅಲ್ಲಿಂದ ಎದ್ದು ಬಂದು ಭಾರತ ಭೂಮಿಯಲ್ಲಿ ಜನಿಸಿದರೂ ಅರವತ್ತು ಸಾವಿರ ವರ್ಷಕಾಲ ಮಲದಲ್ಲಿ ಕ್ರಿಮಿಯಾಗಿ ಹುಟ್ಟುತ್ತಾನೆ. ಹಂದಿ ನರಿ ಹಾವು ಕಾಗೆ ಮುಂತಾದ ಜನ್ಮ ಪಡೆಯುತ್ತಾನೆ. ಬಳಿಕ ಮಾನವನಾಗಿ ಜನಿಸಿದರೂ ಮೂಕನಾಗಿ ರೋಗಿಯಾಗಿ ಅಧಾರ್ಮಿಕ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಉಪವಾಸ ಮಾಡಲು ಶಕ್ತಿ ಇಲ್ಲದಿದ್ದರೆ ಒಬ್ಬ

ಬ್ರಾಹ್ಮಣನಿಗೆ ಭೋಜನ ಮಾಡಿಸಬೇಕು. ಸಾವಿರ ಗಾಯತ್ರೀ ಜಪ ಮಾಡಬೇಕು. ಹೀಗೆ ಜನ್ಮಾಷ್ಟಮೀವ್ರತ ಉಪವಾಸ ಪೂಜಾ ವಿಧಾನ ಮತ್ತು ಅದನ್ನು ಮಾಡದಿದ್ದರೆ ಉಂಟಾಗುವ ಅನರ್ಥಫಲಗಳ ಬಗ್ಗೆ ಧರ್ಮನ ಮುಖದಿಂದ ನಾನು ಕೇಳಿ ತಿಳಿದ ವಿವರವನ್ನು ನಿನಗೆ ಹೇಳಿದ್ದೇನೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಜನ್ಮಾಷ್ಟಮೀ ವ್ರತಪೂಜೋಪವಾಸ ನಿರೂಪಣವೆಂಬ ಎಂಟನೆಯ ಅಧ್ಯಾಯ ಮುಗಿದುದು*

—○—

## ಗೋಕುಲದಲ್ಲಿ ಪುತ್ರೋತ್ಸವ

ಅಧ್ಯಾಯ - ೯

**ನಾರದ:-** ವಸುದೇವ ಗೋಕುಲದಲ್ಲಿ ನಂದನ ಮನೆಯಲ್ಲಿ ಕೃಷ್ಣನನ್ನು ಇಟ್ಟುಹೋದ ಬಳಿಕ ನಂದ ಏನು ಮಾಡಿದ? ಕೃಷ್ಣ ಏನು ಮಾಡಿದ? ಎಷ್ಟು ವರ್ಷಕಾಲ ಕೃಷ್ಣ ಅಲ್ಲಿ ವಾಸಮಾಡಿದ? ಏನು ಬಾಲಲೀಲೆಗಳನ್ನು ತೋರಿದ? ಹಿಂದೆ ಗೋಲೋಕದಲ್ಲಿ ರಾಧೆಯ ಮುಂದೆ ಕೃಷ್ಣ ಮಾಡಿದ್ದ ಪ್ರತಿಜ್ಞೆಯನ್ನು ಈಗ ಹೇಗೆ ನಡೆಸಿಕೊಟ್ಟ? ವೃಂದಾವನ ಪ್ರದೇಶ ಯಾವುದು? ಹೇಗೆ ಇದೆ? ಅಲ್ಲಿ ಕೃಷ್ಣ ನಡೆಸಿದ ರಾಸಕ್ರೀಡೆ ಜಲಕ್ರೀಡೆಗಳನ್ನು ವರ್ಣಿಸು. ನಂದ ಯಶೋದೆಯರು ರೋಹಿಣಿ ಹಿಂದಿನ ಜನ್ಮದಲ್ಲಿ ಏನು ತಪಸ್ಸು ಮಾಡಿದ್ದರು? ಕೃಷ್ಣನಿಗಿಂತ ಮೊದಲಿಗೆ ಬಲರಾಮ ಎಲ್ಲಿ ಜನಿಸಿದ? ಶ್ರೀಕೃಷ್ಣನ ಕಥೆ ಎಂದರೆ ಅಮೃತರಸದ ಗಟ್ಟಿ, ಅಪೂರ್ವ. ಕವಿಗಳ ಮುಖದಿಂದ ಅದು ಪ್ರತಿಪದದಲ್ಲಿಯೂ ಹೊಸತನ ಪಡೆಯುತ್ತದೆ. ಪ್ರಭು, ನಿನ್ನ ರಾಸಕ್ರೀಡೆಯ ಸೊಬಗನ್ನು ನೀನೇ ವರ್ಣಿಸಬೇಕು. ಕಾವ್ಯದಲ್ಲಿ ಕವಿ ತಾನು ಕಂಡಿರದ ಅಂಶವನ್ನು ಕಲ್ಪಿಸಿಕೊಂಡು ಹೇಳುತ್ತಾನೆ. ಅದಕ್ಕಿಂತ ಸ್ವತಃ ಅನುಭವದಿಂದ ಕಂಡಿರುವ ರಾಸವೃತ್ತಾಂತವನ್ನು ನೀನು ಹೇಳಿದರೆ ಅದು ಇನ್ನೂ ಹೆಚ್ಚು ರಸಭರಿತವಾಗುತ್ತದೆ. ಏಕೆಂದರೆ ನೀನು ಸಾಕ್ಷಾತ್ ಭಗವಾನ್ ಕೃಷ್ಣನ ಅಂಶ. ನೀನೇ ಹೇಳಿರುವಿ, ಶ್ರೀಕೃಷ್ಣನಲ್ಲಿ ನೀನು ಲೀನನಾದೆ ಎಂದು. ಅದರಿಂದ ಕೃಷ್ಣನ ರಾಸಕ್ರೀಡೆ ನಿನ್ನ ಕ್ರೀಡೆಯೇ ತಾನೆ?

**ನಾರಾಯಣ:-** ನಾರದ! ಬ್ರಹ್ಮ ಶಿವ ಶೇಷ ಗಣೇಶ ಕೂರ್ಮ ಧರ್ಮ ನಾನು ನರ ಕಾರ್ತಿಕೇಯ ಈ ಒಂಬತ್ತು ಮಂದಿಯೂ ಶ್ರೀಕೃಷ್ಣನ ಅಂಶಭೂತರೆ. ಆಗೋಲೋಕದ ಪ್ರಭುವಿನ ಮಹಿಮೆಯನ್ನು ಯಾರು ವರ್ಣಿಸಬಲ್ಲ? ನಾವೂ ತಿಳಿಯಲಾರೆವು, ವೇದವು ತಿಳಿಸಲಾರದು. ಉಳಿದವರ ಪಾಡೇನು? ವರಾಹ ವಾಮನ ಕಲ್ಕಿ ಬುದ್ಧ ಕಪಿಲ ಮತ್ಸ್ಯ ಇವರೂ ಬೇರೆ ಅವತಾರಗಳೂ ಕೃಷ್ಣನ ಅಂಶ ಮಾತ್ರಗಳು. ನರಸಿಂಹ ರಾಮ ಶ್ವೇತದ್ವೀಪದ ಅಧಿಪತಿ ವಿಷ್ಣು ವಿರಾಟ್‌ಪುರುಷ ಇವರು ಪೂರ್ಣರಾದ ಅಂಶರೂಪರೆ ಶ್ರೀಕೃಷ್ಣ ಪರಿಪೂರ್ಣಪರಮಾತ್ಮ. ಅವನೇ ವೈಕುಂಠದಲ್ಲಿಯೂ ಗೋಲೋಕ ಗೋಕುಲಗಳಲ್ಲಿಯೂ ಇದ್ದಾನೆ. ವೈಕುಂಠದಲ್ಲಿ ಚತುರ್ಭುಜ

ಕಮಲಾಕಾಂತ. ಗೋಲೋಕ ಗೋಕುಲಗಳಲ್ಲಿ ದ್ವಿಭುಜ ರಾಧಾರಮಣ. ಯೋಗಿಗಳು ಇವರನ್ನು ಸದಾ ಧ್ಯಾನಿಸುತ್ತಾರೆ. ಭಕ್ತರು ಅವನ ಚರಣಾರವಿಂದವನ್ನು ಸ್ಮರಿಸುತ್ತಾರೆ.

ನಾರದ, ಯಶೋದಾ ನಂದಗೋಪರೂ ರೋಹಿಣಿಯೂ ಹರಿಯ ಮುಖದರ್ಶನ ಮಾಡಲು ಏನು ಪುಣ್ಯ ಮಾಡಿದ್ದರೆನ್ನುವುದನ್ನೂ ಹೇಳುತ್ತೇನೆ ಕೇಳು. ವಸುಗಳಲ್ಲಿ ಒಬ್ಬನಾದ ದ್ರೋಣ ನಂದಗೋಪನಾಗಿ ಭೂಮಿಯಲ್ಲಿ ಹುಟ್ಟಿದ. ಅವನ ಪತ್ನಿ ಧರೆ ಯಶೋದೆಯಾಗಿ ಹುಟ್ಟಿದಳು. ನಾಗಮಾತೆ ಕದ್ರು ರೋಹಿಣಿಯಾಗಿ ಹುಟ್ಟಿದಳು. ಇವರ ಜನ್ಮವೃತ್ತಾಂತ ಮತ್ತು ಜೀವನ ಚರಿತ್ರೆಗಳನ್ನು ಹೇಳುತ್ತೇನೆ. ಒಮ್ಮೆ ಪುಣ್ಯಕ್ಷೇತ್ರ ಭಾರತವರ್ಷದಲ್ಲಿ ಗೌತಮರ ಆಶ್ರಮದ ಬಳಿ ಗಂಧಮಾದನ ಪರ್ವತದ ಮೇಲೆ ಧರಾದ್ರೋಣರು ತಪಸ್ಸು ಮಾಡಿದರು. ಶ್ರೀಕೃಷ್ಣನ ದರ್ಶನ ಲಾಭಕ್ಕಾಗಿ ಸುಪ್ರಭಾ ನದೀತೀರದ ನಿರ್ಜನ ಪ್ರದೇಶದಲ್ಲಿ ಹತ್ತು ಸಾವಿರ ವರ್ಷಕಾಲ ತಪಸ್ಸು ಮಾಡಿದರು. ಆದರೂ ಕೃಷ್ಣದರ್ಶನವಾಗಲಿಲ್ಲ. ಅವರು ಹತಾಶರಾಗಿ ಅಗ್ನಿಕುಂಡವನ್ನು ನಿರ್ಮಿಸಿ ಅಗ್ನಿ ಪ್ರವೇಶ ಮಾಡಲು ಉದ್ಯುಕ್ತರಾದರು. ಹೀಗೆ ಇಬ್ಬರೂ ಪ್ರಾಣತ್ಯಾಗಕ್ಕೆ ಹೊರಟಿದ್ದನ್ನು ಕಂಡು ಆಕಾಶವಾಣಿ ನುಡಿಯಿತು, 'ವಸುಶ್ರೇಷ್ಠ, ನೀವಿಬ್ಬರೂ ದಂಪತಿಗಳು ಮುಂದಿನ ಜನ್ಮದಲ್ಲಿ ಭೂಮಿಯಲ್ಲಿ ಹುಟ್ಟಿ ಗೋಕುಲದಲ್ಲಿ ನಿಮ್ಮ ಮಗನ ರೂಪದಲ್ಲಿ ಹರಿಯ ದರ್ಶನ ಮಾಡುವಿರಿ. ಯೋಗಿಗಳಿಗೂ ಅವನ ದರ್ಶನ ದುರ್ಲಭ. ಮಹಾಜ್ಞಾನಿಗಳಿಗೂ ಕೂಡ ಧ್ಯಾನಕ್ಕೆ ಅವನು ವಶನಾಗುವುದಿಲ್ಲ. ಬ್ರಹ್ಮಾದಿದೇವತೆಗಳಿಗೂ ಅವನು ವಂದ್ಯ.' ಇದನ್ನು ಕೇಳಿ ದಂಪತಿಗಳು ಸಮಾಧಾನಹೊಂದಿ ತಮ್ಮ ಲೋಕಕ್ಕೆ ತೆರಳಿದರು. ಬಳಿಕ ಭೂಮಿಯಲ್ಲಿ ನಂದ ಯಶೋದೆಯರಾಗಿ ಜನಿಸಿ ಶ್ರೀಕೃಷ್ಣನ ಮುಖಾರವಿಂದ ದರ್ಶನ ಪಡೆದರು. ಇದು ನಂದಯಶೋದೆಯರ ವೃತ್ತಾಂತ.

ಇನ್ನು ರೋಹಿಣಿಯ ವೃತ್ತಾಂತವನ್ನೂ ಹೇಳುತ್ತೇನೆ ಕೇಳು. ಒಮ್ಮೆ ದೇವಮಾತೆ ಅದಿತಿ ಋತುಸ್ನಾತೆಯಾಗಿ ಪತಿಯಾದ ಕಶ್ಯಪರ ಸಂಗ ಬಯಸಿ ಕಾದಿದ್ದಳು. ಆಗ ಮುನಿ ನಾಗಮಾತೆ ಕದ್ರುವಿನ ಜೊತೆಗಿದ್ದರು. ಪತಿಸಮಾಗಮಕ್ಕೆ ವಿಲಂಬವಾಯಿತೆಂದು ಅದಿತಿ ಸಿಟ್ಟಾಗಿ ಕದ್ರುವಿಗೆ ಭೂಮಿಯಲ್ಲಿ ಮಾನವಯೋನಿಯಲ್ಲಿ ಜನಿಸೆಂದು ಶಾಪ ನೀಡಿದಳು. ಅದಕ್ಕೆ ಪ್ರತಿಯಾಗಿ ಕದ್ರುವೂ ಅದಿತಿಗೆ ನೀನೂ ಮಾನವಯೋನಿಯಲ್ಲಿ ಜನಿಸೆಂದು ಶಪಿಸಿದಳು. ಮುನಿ ಕದ್ರುವನ್ನು ಸಂತೈಸುತ್ತ ನೀನು ಭೂಮಿಯಲ್ಲಿ ನನ್ನೊಂದಿಗೇ ಇದ್ದು ಶ್ರೀಹರಿಯ ಮುಖಾರವಿಂದ ದರ್ಶನ ಭಾಗಿಯಾಗುವಿ ಎಂದು ವರವಿತ್ತ. ಬಳಿಕ ಅದಿತಿಯ ಬಳಿಗೆ ಹೋಗಿ ಅವಳ ಇಚ್ಛೆಯನ್ನು ಪೂರೈಸಿದ. ಬಳಿಕ ಅದಿತಿ ದೇವಕಿಯಾಗಿ, ಕದ್ರು ರೋಹಿಣಿಯಾಗಿ, ಕಶ್ಯಪ ವಸುದೇವನಾಗಿ ಜನ್ಮತಳೆದರು. ಈ ರಹಸ್ಯವಾದ ವೃತ್ತಾಂತವನ್ನು ನಿನಗೆ ಹೇಳಿದ್ದೇನೆ. ನಾರದ, ಇನ್ನು ಸಹಸ್ರಶೀರ್ಷನಾದ ಅನಂತ ಬಲರಾಮನಾಗಿ ಜನಿಸಿದ ವೃತ್ತಾಂತವನ್ನು ಹೇಳುತ್ತೇನೆ ಕೇಳು.

ರೋಹಿಣಿ ವಸುದೇವನ ಪ್ರೀತಿಯ ಪತ್ನಿಯಾಗಿದ್ದಳು. ಅವಳು ಗರ್ಭಿಣಿಯಾದೊಡನೆ ಕಂಸನ ಭಯದಿಂದ ಗೋಕುಲಕ್ಕೆ ಹೋಗಿ ಯಶೋದೆಯ ಬಳಿ

ವಾಸವಾಗಿದ್ದಳು. ದೇವಕಿ ಏಳನೆ ಗರ್ಭ ಧರಿಸಿದಾಗ ಯೋಗಮಾಯೆ ಶ್ರೀಕೃಷ್ಣನ ಆಜ್ಞೆಯಂತೆ ರೋಹಿಣಿಯ ಉದರದಲ್ಲಿ ಅವಳ ಗರ್ಭವನ್ನು ಪಾತಮಾಡಿಸಿ ದೇವಕಿಯ ಗರ್ಭವನ್ನು ಅಲ್ಲಿ ಇರಿಸಿದಳು. ಬಳಿಕ ಕೈಲಾಸಕ್ಕೆ ನಡೆದಳು. ಇತ್ತ ರೋಹಿಣಿ ಬಲರಾಮನಿಗೆ ಜನ್ಮವಿತ್ತಳು. ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುವ ಮೈಕಾಂತಿ, ಮುಖದಲ್ಲಿ ಪ್ರಸನ್ನತೆ, ಮಂದಹಾಸಗಳಿಂದ ಕೂಡಿ ಬ್ರಹ್ಮತೇಜಸ್ಸಿನಿಂದ ಬೆಳಗುವ ಶಿಶು ಜನಿಸಿದಾಗ ದೇವತೆಗಳಿಗೆ ಆನಂದವಾಯಿತು. ಅವರು ಆನಕದುಂದುಭಿ ಮುರಜ ಮುಂತಾದ ವಾದ್ಯಗಳನ್ನು ಮೊಳಗಿಸಿದರು, ಶಂಖಧ್ವನಿ ಗೈದರು, ಜಯಜಯಕಾರ ಮಾಡಿದರು. ನಂದನ ಹೃದಯ ಹರ್ಷದಿಂದ ಉಲ್ಲಾಸಗೊಂಡಿತು. ಬ್ರಾಹ್ಮಣರಿಗೆ ಅಪಾರ ಧನಸಂಪತ್ತನ್ನು ದಾನ ಮಾಡಿದ. ದಾದಿ ಹೊಕ್ಕಳ ಬಳ್ಳಿಯನ್ನು ಕುಯ್ದು ಶಿಶುವನ್ನು ಸ್ನಾನ ಮಾಡಿಸಿದಳು. ಗೋಪಿಯರು ಸಂಭ್ರಮದಿಂದ ಸರ್ವಾಲಂಕಾರ ಭೂಷಿತರಾಗಿ ಬಂದು ಜಯಜಯಕಾರ ಮಾಡಿದರು. ಹೀಗೆ ನಂದಗೋಪ ವಸುದೇವನ ಪುತ್ರೋತ್ಸವವನ್ನು ವೈಭವದಿಂದ ಆಚರಿಸಿದ, ಯಶೋದೆಯೂ ಗೋಪಿಯರಿಗೆ ಮತ್ತು ಬ್ರಾಹ್ಮಣಸ್ತ್ರೀಯರಿಗೆ ಧನವಿತ್ತಳು. ನಾನಾ ಬಗೆಯ ಪರಿಮಳ ದ್ರವ್ಯಗಳನ್ನೂ ಸಿಂದೂರ ತೈಲಗಳನ್ನೂ ನೀಡಿದಳು.

ನಾರದ, ಇನ್ನು ಮುಂದೆ ನಂದ ತನ್ನ ಪುತ್ರೋತ್ಸವವನ್ನು ಹೇಗೆ ಆಚರಿಸಿದನೆನ್ನುವುದನ್ನು ಹೇಳುತ್ತೇನೆ, ಕೇಳು. ಅದು ಸುಖದಾಯಕ, ಮೋಕ್ಷದಾಯಕ, ಜನ್ಮ ಮರಣ ಜರೆಗಳನ್ನು ನಿವಾರಿಸುವ ಉತ್ತಮವಾದ ಪ್ರಮೇಯ. ಶ್ರೀಕೃಷ್ಣನ ಚರಿತ್ರೆಯೇ ವೈಷ್ಣವರಿಗೆ ಜೀವನ. ಪರಮ ಮಂಗಳಕರ. ಸಮಸ್ತ ಅಶುಭವನ್ನು ಕಳೆಯುತ್ತದೆ. ಶ್ರೀಹರಿಯ ದಾಸ್ಯವನ್ನು ನೀಡುತ್ತದೆ.

ವಸುದೇವ ಶ್ರೀಕೃಷ್ಣನನ್ನು ನಂದನ ಅರಮನೆಯಲ್ಲಿ ಇಟ್ಟು ದುರ್ಗೆಯನ್ನು ಎತ್ತಿಕೊಂಡು ಸಂತೋಷದಿಂದ ಹಿಂತಿರುಗಿ ಬಂದ. ಈ ಪ್ರಸಂಗವನ್ನೂ ದುರ್ಗೆಯ ಶ್ರವಣ ಸುಖಕರವಾದ ಚರಿತ್ರೆಯನ್ನೂ ಹೇಳಿದ್ದೇನೆ. ಮುಂದೆ, ಗೋಕುಲದಲ್ಲಿ ಶ್ರೀಕೃಷ್ಣನ ಪರಮ ಮಂಗಳಕರವಾದ ಲೀಲೆ ಪ್ರಕಟವಾಗಲು ತೊಡಗಿತು. ಅದನ್ನು ಹೇಳುತ್ತೇನೆ.

ವಸುದೇವ ಗೋಕುಲದಿಂದ ಹಿಂತಿರುಗಿ ಹೋದಾಗ ವಿಜಯಪೂರ್ಣವಾದ ಆಜಯಂತೀ ಯೋಗಕಾಲದಲ್ಲಿ ಹೆರಿಗೆಮನೆಯಲ್ಲಿ ಮಲಗಿದ ಬಾಲಕೃಷ್ಣನನ್ನು ನಂದಯಶೋದೆಯರು ಕಾಣುತ್ತಾರೆ. ನವಮೇಘದಂಥ ಶರೀರಕಾಂತಿಯಿಂದ ಬೆಳಗುವ ನಗ್ನಶಿಶುರೂಪದ ಕೃಷ್ಣ ಶರತ್ಕಾಲದ ಪೂರ್ಣಚಂದ್ರನಂಥ ಮುಖದಿಂದ ನೀಲಕಮಲದಂಥ ಕಣ್ಣುಗಳಿಂದ ಮನೋಹರವಾಗಿ ಕಂಗೊಳಿಸುತ್ತಿದ್ದಾನೆ. ಮೇಲೆ ಮನೆಯ ಸೂರನ್ನು ನೋಡುತ್ತ ಒಮ್ಮೆ ನಗುತ್ತಾನೆ ಒಮ್ಮೆ ಅಳುತ್ತಾನೆ. ನಂದಯಶೋದೆಯರು ಕಂಡು ಆನಂದತುಂದಿಲರಾದರು. ದಾದಿ ಮಗುವನ್ನು ಸ್ನಾನಮಾಡಿಸಿ ಹೊಕ್ಕಳ ಬಳ್ಳಿಯನ್ನು ಕುಯ್ದಳು. ಗೋಪಿಯರು ಆನಂದದಿಂದ ಜಯಕಾರ ಮಾಡಿದರು. ಎಲ್ಲ ಗೋಪಿಯರೂ ಬ್ರಾಹ್ಮಣಸ್ತ್ರೀಯರೂ ಬಂದು ಬಾಲಕನನ್ನು ಕಂಡು ಹರಸಿದರು. ಮಡಿಲಲ್ಲಿಟ್ಟುಕೊಂಡು ಕುಳಿತರು. ನಂದ ಸಚ್ಚೈಲ

ಸ್ನಾನಮಾಡಿ ಮಡಿಯುಟ್ಟು ಪರಂಪರಾಗತ ಕ್ರಮದಿಂದ ಪುತ್ರೋತ್ಸವವನ್ನು ಆಚರಿಸಿದ. ಬ್ರಾಹ್ಮಣರಿಗೆ ಭೋಜನ ನೀಡಿದ. ಮಂಗಲವಾದ್ಯ ಘೋಷ ಮಾಡಿಸಿದ. ಸ್ತುತಿಪಾಠ ಮಾಡಿಸಿ ಬಹುಮಾನಗಳನ್ನಿತ್ತ. ಬ್ರಾಹ್ಮಣರಿಗೆ ಭಕ್ಷ್ಯಾದರಗಳಿಂದ ಧನಧಾನ್ಯಾದಿ ದಾನ ಮಾಡಿದ. ಹೆರಿಗೆಮನೆಯ ರಕ್ಷಣೆಗೆ ಮಂತ್ರವೇತ್ತರಾದ ಬ್ರಾಹ್ಮಣರನ್ನೂ ವೃದ್ಧ ಗೋಪಿಯರನ್ನೂ ಇರಿಸಿದ. ಬ್ರಾಹ್ಮಣರಿಂದ ವೇದಪಾಠ ಮಾಡಿಸಿದ. ಹರಿನಾಮ ಸಂಕೀರ್ತನೆ ನಡೆಸಿದ. ಬ್ರಾಹ್ಮಣರಿಂದ ದೇವತಾರಾಧನೆ ಮಾಡಿಸಿದ. ಜ್ಯೋತಿಷ್ಯ ಶಾಸ್ತ್ರ ವಿಶಾರದರಾದ ವಾಕ್ಸಿದ್ಧಿ ಪಡೆದಿರುವ ಜ್ಯೋತಿಷಿಗಳು ಪುಸ್ತಕ ಸಮೇತರಾಗಿ ಬಂದು ನಂದನಿಂದ ನಾನಾ ರತ್ನಾಭರಣಾದಿಗಳ ದಾನ ಪಡೆದು ಆಶೀರ್ವಾದ ಮಾಡಿದರು. ನಂದ ಅವರ ಮುಖದಿಂದ ಮಗುವಿನ ಭವಿಷ್ಯದ ಬಗ್ಗೆ ಕೇಳಿ ತಿಳಿದುಕೊಂಡ.

ನಂದನ ಮನೆಯಲ್ಲಿ ಯಶೋದೆಯ ಮಡಿಲಲ್ಲಿ ಕೃಷ್ಣ ಶುಕ್ಲಪಕ್ಷದ ಚಂದ್ರನಂತೆ ಪ್ರವರ್ಧಮಾನನಾದ. ಜೊತೆಗೆ ರೋಹಿಣಿಯ ಮಡಿಲಲ್ಲಿ ಬಲರಾಮನೂ ಹಾಗೆ ದಿನೇ ದಿನೇ ಪ್ರವರ್ಧಮಾನನಾದ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ನಂದಪುತ್ರೋತ್ಸವವೆಂಬ ಒಂಬತ್ತನೇಯ ಅಧ್ಯಾಯ ಮುಗಿದುದು*



## ಪೂತನಾಮೋಕ್ಷ

## ಅಧ್ಯಾಯ - ೧೦

**ನಾರಾಯಣ:-** ನಾರದ, ಒಂದುದಿನ ರಾಜಸಭೆಯಲ್ಲಿ ಬಂಗಾರದ ಸಿಂಹಾಸನದಲ್ಲಿ ಕುಳಿತ ಕಂಸನಿಗೆ ಆಕಾಶವಾಣಿ ನುಡಿಯಿತು. 'ಮೂರ್ಖಕಂಸ, ನೀನೇನು ಮಾಡುತ್ತಿರುವೆ? ನಿನ್ನ ಸುರಕ್ಷಿತತೆಯ ಬಗ್ಗೆ ಆಲೋಚನೆ ಮಾಡಬೇಡವೆ? ನಿನಗೆ ಮೃತ್ಯುವಾಗುವವನು ಭೂಮಿಯಲ್ಲಿ ಹುಟ್ಟಿಯಾಗಿದೆ. ವಸುದೇವ ಕಪಟದಿಂದ ತನ್ನ ಮಗನನ್ನು ನಂದನಿಗೆ ಕೊಟ್ಟು ಅವನ ಮಗಳನ್ನು ತಂದು ನಿನ್ನ ಕೈಗೊಪ್ಪಿಸಿದ್ದಾನೆ. ಅವಳು, ಮಾಯೆಯ ಅಂಶ. ವಸುದೇವನ ಮಗ, ಸಾಕ್ಷಾತ್ ಶ್ರೀಹರಿ. ಅವನೆ ನಿನಗೆ ಮಾರಕ ಮೃತ್ಯು. ಈಗ ಗೋಕುಲದಲ್ಲಿ ನಂದನ ಮನೆಯಲ್ಲಿ ಅವನ ಲಾಲನೆ ಪೋಷಣೆಗಳು ನಡೆಯುತ್ತಿವೆ. ದೇವಕಿಯ ಏಳನೆ ಗರ್ಭವೂ ಪಾತವಾಗಲಿಲ್ಲ. ಯೋಗಮಾಯೆ ಆ ಗರ್ಭವನ್ನು ಸೆಳೆದು ರೋಹಿಣಿಯ ಉದರದಲ್ಲಿಟ್ಟಿದ್ದಳು. ಆಗರ್ಭದಿಂದ ಶೇಷನ ಅಂಶಭೂತನಾದ ಬಲರಾಮ ಅವತರಿಸಿದ್ದಾನೆ. ಕೃಷ್ಣ ರಾಮ ಇಬ್ಬರೂ ನಿನಗೆ ಮೃತ್ಯುಗಳು. ಈಗ ಗೋಕುಲದಲ್ಲಿ ನಂದನ ಅರಮನೆಯಲ್ಲಿ ಬೆಳೆಯುತ್ತಿದ್ದಾರೆ.'

ಈ ಆಕಾಶವಾಣಿಯನ್ನು ಕೇಳಿ ಕಂಸ ತಲೆತಗ್ಗಿಸಿದ. ಗಾಢವಾದ ಚಿಂತೆಯಲ್ಲಿ ಮುಳುಗಿದ. ದುಃಖದಿಂದ ಆಹಾರ ತ್ಯಜಿಸಿದ. ಪ್ರಾಣಪ್ರಿಯಳೆನಿಸಿದ ತಂಗಿ ಪೂತನೆಯನ್ನು ಕರೆಸಿ ನುಡಿದ.

**ಕಂಸ:-** ಪೂತನೆ, ನನ್ನ ಕಾರ್ಯಸಿದ್ಧಿಗಾಗಿ ನೀನು ಗೋಕುಲದಲ್ಲಿ ನಂದನ ಮನೆಗೆ ಹೋಗಿ ಬೇಗನೆ ನಂದನ ನವಜಾತ ಶಿಶುವಿಗೆ ವಿಷದ ಮೊಲೆ ಉಣಿಸಬೇಕು. ನೀನು ಮನೋವೇಗದಿಂದ ಚಲಿಸಬಲ್ಲ ಮಾಯಾವಿದ್ಯೆಯಲ್ಲಿ ನಿಪುಣೆ. ಮಾಯೆಯಿಂದ ಮನುಷ್ಯಸ್ತ್ರೀರೂಪ ಧರಿಸಿ ಹೋಗು, ನೀನು ದುರ್ವಾಸನಿಂದ ಮಹಾಮಂತ್ರ ದೀಕ್ಷೆ ಪಡೆದು ಅದರ ಬಲದಿಂದ ಎಲ್ಲೆಡೆ ಹೋಗುವ, ಎಲ್ಲ ರೂಪ ಧರಿಸುವ ಸಾಮರ್ಥ್ಯ ಉಳ್ಳವಳು.

ನಾರದ, ಹೀಗೆ ಮಹಾರಾಜ ಕಂಸ ರಾಜಸಭೆಯಲ್ಲಿ ಹೇಳಿ ಸುಮ್ಮನಾದ. ಪೂತನೆ ಕಂಸನಿಗೆ ತಲೆಬಾಗಿ ನಂದಗೋಕುಲಕ್ಕೆ ಧಾವಿಸಿದಳು. ಪರಮಸುಂದರ ಮಾನವಸ್ತ್ರೀರೂಪ ಧರಿಸಿದಳು. ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುವ ಮೈ ಮೇಲೆ ರತ್ನಾಭರಣ ತೊಟ್ಟು ತಲೆಗೆ ಜಾಜಿ ಹೂ ಮುಡಿದು ಹಣೆಗೆ ಕಸ್ತೂರಿಯುಕ್ತ ಸಿಂದೂರದ ಬೊಟ್ಟು ಇಟ್ಟುಕೊಂಡಳು. ಕಾಲಗೆಜ್ಜೆ ನಡುವಿನ ಒಡ್ಯಾಣಗಳ ಧ್ವನಿ ಮಾಡುತ್ತ ನಂದನ ಅರಮನೆಯನ್ನು ಪ್ರವೇಶಿಸಿದಳು. ಅರಮನೆಯ ಸುತ್ತಲೂ ಅಳವಾದ ಕಂದಕವಿತ್ತು. ದಿವ್ಯಶಿಲೆಯಿಂದ ಸಾಕ್ಷಾತ್ ವಿಶ್ವಕರ್ಮ ನಿರ್ಮಿಸಿದ ಅರಮನೆ ಅದು. ಇಂದ್ರನೀಲ, ಮರಕತ ಪದ್ಮರಾಗ ಮುಂತಾದ ಮಣಿಗಳಿಂದ ಅದರ ಶೋಭೆ ಹೆಚ್ಚಿತ್ತು. ಬಂಗಾರದ ಕಲಶಗಳಿಂದ ಕೂಡಿದ ಶುಭ್ರ ಶಿಖರಗಳು ಗಗನ ಚುಂಬಿಯಾದ ಪ್ರಾಕಾರಗಳು ನಾಲ್ಕು ಮಹಾದ್ವಾರಗಳು. ಆ ದ್ವಾರಗಳಲ್ಲಿ ದ್ವಾರಪಾಲಕರು. ಒಳಗೆ ಅಸಂಖ್ಯ ಸುಂದರ ದಾಸದಾಸಿಯರು, ಗೋಪಾಲಕರು, ಗೋವುಗಳು. ಪೂತನೆ ಒಳಗೆ ಪ್ರವೇಶಿಸಿದಳು. ಗೋಪಿಯರು ಅವಳನ್ನು ಕಂಡು ಆದರದಿಂದ ಬರಮಾಡಿಕೊಂಡರು, ''ಇವಳು ಸಾಕ್ಷಾತ್ ಲಕ್ಷ್ಮಿಯೋ ದುರ್ಗೆಯೋ ಇರಬೇಕು. ಶ್ರೀಕೃಷ್ಣನ ದರ್ಶನಕ್ಕಾಗಿ ಬಂದಿದ್ದಾಳೆ'' ಎಂದುಕೊಂಡರು. ಕುಳಿತುಕೊಳ್ಳಲು ಸಿಂಹಾಸನವಿತ್ತು ಕಾಲು ತೊಳೆಯಲು ಪಾದ್ಯಜಲವಿತ್ತರು. ಪೂತನೆ ಗೋಪಬಾಲಕರ ಕುಶಲ ಪ್ರಶ್ನೆ ಮಾಡುತ್ತ ನಗುಮೊಗದಿಂದ ಸಿಂಹಾಸನದಲ್ಲಿ ಕುಳಿತು ಪಾದ್ಯಜಲವನ್ನು ಸ್ವೀಕರಿಸಿದಳು. ಬಳಿಕ ಗೋಪಿಯರು ಪ್ರಶ್ನಿಸಿದರು. ''ಅಮ್ಮ ನೀನಾರು, ಯಾವ ಊರವಳು, ನಿನ್ನ ಹೆಸರೇನು? ಯವ ಕಾರ್ಯ ನಿಮಿತ್ತ ಇಲ್ಲಿಗೆ ಬಂದಿರುವೆ? ಹೇಳು.'' ಪೂತನೆ ಹೇಳಿದಳು. ''ನಾನು ಮಥುರೆಯಲ್ಲಿ ವಾಸಮಾಡುವ ಒಬ್ಬಳು ಗೋಪಿ. ಒಬ್ಬ ಬ್ರಾಹ್ಮಣನ ಪತ್ನಿಯಾಗಿರುವೆನು. ಜನರ ಬಾಯಿಂದ ಒಂದು ಶುಭವಾರ್ತೆಯನ್ನು ಕೇಳಿದೆ, ನಂದರಾಜನಿಗೆ ಇಳಿವಯಸ್ಸಿನಲ್ಲಿ ಪುತ್ರರತ್ನ ಪ್ರಾಪ್ತಿಯಾಗಿದೆ ಎಂದು. ನಾನು ಆ ಪುತ್ರನನ್ನು ಕಂಡು ಹರಸಲು ಬಂದಿದ್ದೇನೆ. ನೀವು ನನ್ನನ್ನು ಆನಂದನಂದನನ ಬಳಿಗೆ ಕರೆದೊಯ್ಯುವಿರೇನು? ನಾನು ಶಿಶುವನ್ನು ಕಂಡು ಹರಸಿ ಹಾಗೇ ಹೊರಟು ಹೋಗುತ್ತೇನೆ.''

ಬ್ರಾಹ್ಮಣಸ್ತ್ರೀ ಕಂದನನ್ನು ಹರಸಲು ಬಂದಳೆಂದು ಕೇಳಿ ಯಶೋದೆ ಹರ್ಷಗೊಂಡಳು. ಬಾಲಕೃಷ್ಣನನ್ನು ಅವಳ ಮಡಿಲಲ್ಲಿರಿಸಿದಳು. ಅವಳು ಮಗುವನ್ನು ಮತ್ತೆ ಮತ್ತೆ ಮುದ್ದಿಸಿದಳು. ಬಾಯಲ್ಲಿ ಸ್ತನವನ್ನಿಟ್ಟಳು. 'ಯಶೋದೆ, ನಿನ್ನ ಈಮಗ ಅದ್ಭುತ ಶಿಶು. ಸಾಕ್ಷಾತ್ ನಾರಾಯಣನಂತೇ ಇದ್ದಾನೆ' ಎಂದಳು. ಕೃಷ್ಣ

ಅವಳ ವಿಷಲಿಪ್ತವಾದ ಸ್ತನ್ಯವನ್ನು ಅಮೃತದಂತೆ ಪಾನ ಮಾಡಿದ. ಎದೆ ಹಾಲಿನೊಂದಿಗೆ ಎದೆಯಲ್ಲಿರುವ ಪ್ರಾಣವಾಯುವನ್ನೂ ಹೀರಿದ. ಅವಳು ಅಸುನೀಗಿ ನೆಲದ ಮೇಲೆ ಒರಗಿದಳು. ಆಗ ಅವಳ ಆಕಾರ ವಿಕಾರವಾಯಿತು. ಮುಖ ಕರಾಳವಾಯಿತು. ಶರೀರ ಬೆಟ್ಟದಷ್ಟಾಯಿತು. ಆ ಸ್ಥೂಲಶರೀರವನ್ನು ತೊರೆದು ಪೂತನೆ ಸೂಕ್ಷ್ಮಶರೀರದಿಂದ ರತ್ನಮಯವಾದ ದಿವ್ಯ ರಥವೇರಿದಳು. ಪಾರ್ಷದರು ಅವಳನ್ನು ರಥದಲ್ಲಿ ಕುಳ್ಳಿರಿಸಿ ಗೋಲೋಕಕ್ಕೆ ಒಯ್ದರು. ಈ ಅದ್ಭುತ ದೃಶ್ಯವನ್ನು ಕಂಡು ಗೋಪಗೋಪಿಯರು ಆಶ್ಚರ್ಯಚಕಿತರಾದರು. ಕಂಸನಿಗೂ ಇದನ್ನು ಕೇಳಿ ಅಚ್ಚರಿಯಾಯಿತು. ಯಶೋದೆ ಬಾಲಕೃಷ್ಣನನ್ನು ಎತ್ತಿಕೊಂಡು ಸ್ತನಪಾನ ಮಾಡಿಸಿದಳು. ಮಗುವಿಗೆ ಬ್ರಾಹ್ಮಣರಿಂದ ಮಂಗಲಪಾಠದ ರಕ್ಷೆ ಮಾಡಿಸಿದಳು. ನಂದಗೋಪ ಪೂತನೆಯ ಶರೀರಕ್ಕೆ ದೇಹಸಂಸ್ಕಾರ ಮಾಡಿಸಿದ. ಆಗ ಅವಳ ಚಿತೆಯಿಂದ ಚಂದನ ಅಗುರು ಕಸ್ತೂರಿಗಳ ಸುಗಂಧ ಎದ್ದು ಎಲ್ಲೆಡೆ ಪಸರಿಸಿತು!

**ನಾರದ:-** ರಾಕ್ಷಸಿ ಪೂತನೆಯ ರೂಪದಿಂದ ಬಂದು ಕೃಷ್ಣನಿಗೆ ಸ್ತನಪಾನ ಮಾಡಿಸಿದ ಆ ಪುಣ್ಯವತಿ ಯಾರು? ಅವಳು ಯಾವ ಪುಣ್ಯದಿಂದ ಭಗವಂತನ ದರ್ಶನ ಮಾಡಿ ಅವನ ಲೋಕವನ್ನು ಪಡೆದಳು?

**ನಾರಾಯಣ:-** ನಾರದ, ಬಲಿಚಕ್ರವರ್ತಿಯ ಯಜ್ಞಶಾಲೆಯಲ್ಲಿ ವಾಮನನ ಮನೋಹರ ರೂಪವನ್ನು ಕಂಡು ಬಲಿಯ ಮಗಳು ರತ್ನಮಾಲೆ ಅವನನ್ನು ಪುತ್ರಪ್ರೇಮದಿಂದ ಕಂಡಳು. 'ನನಗೆ ವಾಮನನಂಥ ಮಗ ಬೇಕು. ಅವನಿಗೆ ನಾನು ಸ್ತನಪಾನ ಮಾಡಿಸಬೇಕು' ಎಂದು ಮನಸಿನಲ್ಲಿ ಬಹಳ ಆಸೆಪಟ್ಟಳು. ಅವಳ ಆಸೆಯನ್ನು ತಿಳಿದು ಹರಿ ಜನ್ಮಾಂತರದಲ್ಲಿ ಅದನ್ನು ಹೀಗೆ ಈಡೇರಿಸಿದ. ಭಕ್ತರ ಅಭೀಷ್ಟಗಳನ್ನು ಪೂರೈಸುವ ಕೃಪಾನಿಧಿ ಆತ ಮಾತೆಯ ಗತಿಯನ್ನು ಪೂತನೆಗೆ ನೀಡಿದ. ಅವಳು ದ್ವೇಷದಿಂದ ವಿಷದ ಮೊಲೆ ಉಣಿಸಿದರೂ ಭಕ್ತಿಯಿಂದ ಮಾತೃಗತಿಯನ್ನೇ ಪಡೆದಳು. ಇಂಥ ಹರಿಯನ್ನು ಬಿಟ್ಟು ಇನ್ನಾರನ್ನು ಭಜಿಸಬೇಕು? ಇದು ಶ್ರೀಕೃಷ್ಣನ ಗುಣಗಾನ, ಬಲು ಮಧುರವಾಗಿದೆ. ಇನ್ನೂ ಹೇಳುತ್ತೇನೆ ಕೇಳು.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ*
*ನಾರಾಯಣನಾರದಸಂವಾದದಲ್ಲಿ ಪೂತನಾ ಮೋಕ್ಷವೆಂಬ*
*ಹತ್ತನೆ ಅಧ್ಯಾಯ ಮುಗಿದುದು*

—o—

## ಅಧ್ಯಾಯ - ೧೧

**ನಾರಾಯಣ:-** ಒಂದು ದಿನ ನಂದರಾಣಿ ಯಶೋದೆ ಕೃಷ್ಣನನ್ನು ಎತ್ತಿಕೊಂಡು ಮನೆ ಕೆಲಸ ಮಾಡುತ್ತಿದ್ದಳು. ಅದೇ ಸಮಯದಲ್ಲಿ ಅತ್ತ ತೃಣಾವರ್ತ ರಾಕ್ಷಸ ಬಿರುಗಾಳಿಯ ರೂಪದಿಂದ ಬರುತ್ತಿರುವುದನ್ನು ತಿಳಿದು ಕೃಷ್ಣ ತನ್ನ ಶರೀರದ ಭಾರವನ್ನು ಹೆಚ್ಚಿಸಿದ. ಆ ಭಾರದಿಂದ ಯಶೋದೆ ಸೋತು ಮಗುವನ್ನು ಕೆಳಗೆ ಮಲಗಿಸಿ ಯಮುನೆಯ ಕಡೆಗೆ ಹೋದಳು. ತೃಣಾವರ್ತ ಆಗ ಬಂದು ಮಗುವನ್ನೆತ್ತಿಕೊಂಡ. ಗರಗರನೆ ತಿರುಗಿಸುತ್ತ ನೂರು ಯೋಜನದಷ್ಟು ಎತ್ತರಕ್ಕೊಯ್ದ. ಮರಗಳ ಕೊಂಬೆಗಳನ್ನು ಮುರಿದ. ಎಲ್ಲೆಡೆ ದೂಳೆಬ್ಬಿಸಿ ಜನರಿಗೆ ಕಣ್ಣೇ ಕಾಣದಂತೆ ಮಾಡಿದ. ಆದರೆ ಕೃಷ್ಣನ ಭಾರ ತಾಳಲಾರದೆ ನೂರು ಯೋಜನದೆತ್ತರದಿಂದ ದೊಪ್ಪನೆ ನೆಲಕ್ಕೆ ಬಿದ್ದು ಅಸು ನೀಗಿದ. ಆದರೆ ಹರಿಯ ಅಂಗಸ್ಪರ್ಶದ ಪ್ರಭಾವದಿಂದ ತನ್ನ ದುಷ್ಕರ್ಮ ನಾಶಪಡಿಸಿಕೊಂಡು ದಿವ್ಯರಥವೇರಿ ಗೋಲೋಕಕ್ಕೆ ಹೊರಟು ಹೋದ. ಅವನು ಹಿಂದೆ ಪಾಂಡ್ಯದೇಶದ ರಾಜನಾಗಿದ್ದು ದುರ್ವಾಸಮುನಿಯ ಶಾಪದಿಂದ ಅಸುರಜನ್ಮ ಹೊಂದಿದ್ದ. ಶ್ರೀಕೃಷ್ಣನ ಪಾದಸ್ಪರ್ಶದಿಂದ ಅವನಿಗೆ ಗೋಲೋಕ ಪ್ರಾಪ್ತಿಯಾಯಿತು.

ಬಿರುಗಾಳಿ ಬಂದು ಹೋದಾಗ ಮಗು ಕಾಣೆಯಾದುದನ್ನು ಕಂಡು ಗೋಪಗೋಪಿಯರೆಲ್ಲರೂ ಭಯವಿಹ್ವಲರಾಗಿ ಎಲ್ಲಕಡೆ ಅರಸಿದರು. ಶೋಕಾರ್ತರಾಗಿ ಎದೆಯನ್ನು ಹೊಡೆದುಕೊಂಡರು. ಭಯದಿಂದ ಕೆಲವರು ಮೂರ್ಛೆ ಹೊಂದಿದರು. ಕೆಲವರು ಗಟ್ಟಿಯಾಗಿ ಅತ್ತರು. ಅರಸುತ್ತ ಅರಸುತ್ತ ಕೊನೆಗೆ ಒಂದು ಹೂದೋಟದಲ್ಲಿ ಮಗುವನ್ನು ಕಂಡರು. ಮಗುವಿನ ಮೈಯೆಲ್ಲ ದೂಳಾಗಿತ್ತು. ಬಾನನ್ನೇ ದಿಟ್ಟಿಸುತ್ತ ಭಯದಿಂದ ಒಂದೇ ಸಮನೆ ಅಳುತ್ತಿತ್ತು. ನಂದ ಬೇಗನೆ ಮಗುವನ್ನೆತ್ತಿ ತಬ್ಬಿಕೊಂಡ. ಅದರ ಮುಖ ನೋಡಿ ನೋಡಿ ಅಳತೊಡಗಿದ. ತಾಯಿ ಯಶೋದೆಯೂ ರೋಹಿಣಿಯೂ ಮಗುವನ್ನು ಕಂಡು ಎತ್ತಿ ಅಪ್ಪಿಕೊಂಡು ಮುಖವನ್ನು ಮತ್ತೆ ಮತ್ತೆ ಮುದ್ದಿಸಿದರು. ನಂದ ಮಗುವಿಗೆ ಸ್ನಾನ ಮಾಡಿಸಿದ. ಮಂಗಲಪಾಠದ ರಕ್ಷೆಯನ್ನೂ ಮಾಡಿಸಿದ. ಯಶೋದೆಯ ಮುಖ ಕಣ್ಣು ಅರಳಿದುವು. ಆನಂದದಿಂದ ಮಗುವಿಗೆ ಎದೆ ಹಾಲುಣಿಸಿದಳು.

**ನಾರದ:-** ಪಾಂಡ್ಯರಾಜನಿಗೆ ದುರ್ವಾಸನೇಕೆ ಶಪಿಸಿದ? ಆ ವೃತ್ತಾಂತವನ್ನೂ ಉಪದೇಶಿಸು.

**ನಾರಾಯಣ:-** ಪಾಂಡ್ಯರಾಜ ಸಹಸ್ರಾಕ್ಷನೊಮ್ಮೆ ಸಾವಿರ ಮಂದಿ ಪತ್ನಿಯರೊಂದಿಗೆ ಗಂಧಮಾದನ ಪರ್ವತ ತಪ್ಪಲಿನಲ್ಲಿ ನದೀ ತೀರದಲ್ಲಿದ್ದ ಒಂದು ಪುಷ್ಪೋದ್ಯಾನದಲ್ಲಿ ವಿಹಾರ ಮಾಡತೊಡಗಿದ. ಯೋಗಶಕ್ತಿಯಿಂದ ಸಾವಿರ ರೂಪ ತಾಳಿ ಸಾವಿರ ಸ್ತ್ರೀಯರೊಂದಿಗೆ ಏಕಕಾಲದಲ್ಲಿ ನಾನಾ ಬಗೆಯ ರತಿಕ್ರೀಡೆ ಮಾಡಿದ. ಜಲಕ್ರೀಡೆಯಾಡಿದ. ನಾರಿಯರೆಲ್ಲ ವಿವಸ್ತ್ರರಾಗಿ ಜಲಕೇಳಿಯಾಡುತ್ತಿದ್ದರು. ಆಗಲೆ

ದುರ್ವಾಸಮುನಿ ಲಕ್ಷ ಶಿಷ್ಯರೊಂದಿಗೆ ಶಿವನನ್ನು ಕಾಣಲು ಆ ಮಾರ್ಗವಾಗಿ ಬಂದುದನ್ನು ರಾಜ ಕಂಡರೂ ನೀರಿನಿಂದ ಎದ್ದು ಬಂದು ಗೌರವ ತೋರಲಿಲ್ಲ. ಮದೋನ್ಮತ್ತನಾಗಿ, ಕೈಯಿಂದಾಗಲಿ ಮಾತಿನಿಂದಾಗಲಿ ನಮಸ್ಕಾರ ಮಾಡದೆ, ಸಂಭಾಷಣೆಯನ್ನೂ ನಡೆಸದೆ, ಅನಾದರ ತೋರಿದ. ಮುನಿ ಕುಪಿತನಾಗಿ ''ಅಸುರನಾಗು, ಯೋಗಭ್ರಷ್ಟನಾಗು. ಹರಿಪಾದ ಸ್ಪರ್ಶದಿಂದ ಮುಂದೆ ಗೋಲೋಕ ಪಡೆ'' ಎಂದು ಹೇಳಿ ಕೈಲಾಸದ ಕಡೆಗೆ ಪ್ರಯಾಣ ಮಾಡಿದ. ರಾಜ ಅಗ್ನಿಕುಂಡವನ್ನು ಮಾಡಿಸಿ ಅದರಲ್ಲಿ ಅಗ್ನಿಪ್ರವೇಶ ಮಾಡಿದ. ಜೊತೆಗೆ ಎಲ್ಲ ಪತ್ನಿಯರೂ ಅಗ್ನಿಪ್ರವೇಶ ಮಾಡಿದರು. ಬಳಿಕ ರಾಜ ತೃಣಾವರ್ತನಾಗಿ ಹುಟ್ಟಿ ಹರಿಪಾದಸ್ಪರ್ಶದಿಂದ ಗೋಲೋಕವನ್ನು ಪಡೆದ. ಪತ್ನಿಯರು ನಾನಾ ದೇಶಗಳಲ್ಲಿ ರಾಜಕುಮಾರಿಯಾಗಿ ಜನಿಸಿದರು. ಇದು ದುರ್ವಾಸ ಶಾಪದಿಂದ ಅಸುರನಾಗಿ ಜನಿಸಿ ಉದ್ಧಾರ ಹೊಂದಿದ ಪಾಂಡ್ಯರಾಜನ ಕಥೆ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ*
*ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ತೃಣಾವರ್ತವಧವೆಂಬ*
*ಹನ್ನೊಂದನೆಯ ಅಧ್ಯಾಯ ಮುಗಿದುದು*

—o—

## ಶಕಟ ಭಂಜನ

## ಅಧ್ಯಾಯ - ೧೨

**ನಾರಾಯಣ:-** ನಾರದ, ಒಂದು ದಿನ ಯಶೋದೆ ಕೃಷ್ಣನಿಗೆ ಎದೆಹಾಲು ಉಣಿಸುತ್ತಿದ್ದಳು. ಆಗ ಮನೆಗೆ ಅನೇಕ ಮಂದಿ ಗೋಪಿಯರು ಬಂದರು. ಕೆಲವರು ವೃದ್ಧರು. ಕೆಲವರು ಯಶೋದೆಯ ಸಖಿಯರು, ಇನ್ನು ಕೆಲವರು ಬಾಲಕ ಬಾಲಕಿಯರು. ಮಗುವಿನ ಉಪನಿಷ್ಕ್ರಮಣ ಮಹೋತ್ಸವಕ್ಕಾಗಿ ಬಂದ ಆ ಬಂಧು ಬಾಂಧವರಿಗೆ ಸತ್ಕಾರ ಮಾಡುವ ಭರದಲ್ಲಿ ಸ್ತನಪಾನ ಮಾಡುತ್ತಿದ್ದ ಮಗುವನ್ನು ಅರ್ಧದಲ್ಲಿ ಕೆಳಗಿಟ್ಟು ನಡೆದಳು, ಬಂಧುಗಳನ್ನು ನಮಿಸಿದಳು, ಅವರಿಗೆ ತೈಲ ಸಿಂದೂರ ಪಾನ ಮಿಷ್ಟಾನ್ನ ವಸ್ತ್ರಭೂಷಣಗಳನ್ನು ನೀಡಿದಳು ಯಶೋದೆ. ಇತ್ತ ಬಾಲಕೃಷ್ಣ ಹಸಿವಿನಿಂದ ಅಳುತ್ತ ಕೈಕಾಲುಗಳನ್ನು ಜೋರಾಗಿ ಆಡಿಸುತ್ತಿದ್ದ. ಪಕ್ಕದಲ್ಲೇ ಇದ್ದ ಒಂದು ಬಂಡಿ ಆಕಸ್ಮಾತ್ ಅವನ ಮೇಲೆ ತಾನಾಗಿ ಹರಿದು ಬಂದಿತು. ಕೃಷ್ಣ ಕಾಲು ಕೊಡವಿದಾಗ ಅದರ ಸ್ಪರ್ಶಮಾತ್ರದಿಂದ ಹಾಲು ಮೊಸರು ಬೆಣ್ಣೆ ತುಪ್ಪ ಜೇನು ಮುಂತಾದವುಗಳನ್ನು ತುಂಬಿಕೊಂಡಿದ್ದ ಆ ಬಂಡಿ ಉರುಳಿ ಪುಡಿಪುಡಿಯಾಯಿತು. ಹಾಲು ಮೊಸರು ಮುಂತಾದುವು ಚೆಲ್ಲಿಹೋದವು. ಈ ಅನಾಹುತವನ್ನು ಕಂಡು ಭಯ ಚಕಿತರಾಗಿ ಗೋಪಿಯರೆಲ್ಲ ಏನಾಯಿತೆಂದು ನೋಡಲು ಬಂದರು. ಮುರಿದು ಪುಡಿಯಾಗಿ ರಾಶಿಯಾಗಿ ಬಿದ್ದಿದ್ದ ಬಂಡಿಯ ಚೂರುಗಳ ಅಡಿಯಲ್ಲಿ ಮಗು! ಆಚೂರುಗಳನ್ನು ಸರಿಸಿ ಮಗುವನ್ನೆತ್ತಿಕೊಂಡರು. ಮಗುವಿನ ಮೈಕೈ ಸುರಕ್ಷಿತವಾಗಿತ್ತೆಂದು ಕಂಡು ಸಮಾಧಾನ ಪಟ್ಟುಕೊಂಡರು. ಮಗು ಇನ್ನೂ ಹಸಿವಿಂದ ಅಳುತ್ತಿತ್ತು. ಯಶೋದೆ ಸ್ತನಪಾನ ಮಾಡಿಸುತ್ತ ಭಯಶೋಕಗಳಿಂದ ಅತ್ತಳು.

ಬಂಡಿ ಏಕೆ ಮುರಿದು ಬಿದ್ದಿತೆನ್ನುವುದು ಯಾರಿಗೂ ಅರ್ಥವಾಗಲಿಲ್ಲ. ಅಲ್ಲೇ ಆಟವಾಡುತ್ತಿದ್ದ ಮಕ್ಕಳನ್ನು ಕೇಳಿದರು. ಮಕ್ಕಳೆಲ್ಲರೂ ಹೇಳಿದರು. 'ಕೃಷ್ಣ ಒದ್ದಿದ್ದರಿಂದ ಬಂಡಿ ಉರುಳಿ ಪುಡಿಯಾಯಿತು!' ಗೋಪಗೋಪಿಯರು ನಕ್ಕು ಬಿಟ್ಟರು. ಅವರಿಗೆ ಮಕ್ಕಳ ಮಾತಿನಲ್ಲಿ ವಿಶ್ವಾಸ ಉಂಟಾಗಲಿಲ್ಲ. 'ಮಕ್ಕಳು! ಏನೋ ಹೇಳುತ್ತಾರೆ! ಅದರಲ್ಲಿ ಸತ್ಯಾಂಶವೇನಿಲ್ಲ!' ಬೇಗನೆ ಬ್ರಾಹ್ಮಣರು ಬಂದು ಮಗುವಿನ ರಕ್ಷೆಗಾಗಿ ಮಂಗಲಪಾಠ ಮಾಡಿದರು. ಒಬ್ಬ ಬ್ರಾಹ್ಮಣ ಮಗುವಿನ ಮೈ ಮುಟ್ಟಿಕೊಂಡು ಕವಚಮಂತ್ರವನ್ನು ಪಠಿಸಿದ.

ನಾರದ, ಈ ಕವಚಮಂತ್ರ ಹಿಂದೆ ವಿಷ್ಣುವಿನ ನಾಭಿಕಮಲದಲ್ಲಿ ಜನಿಸಿದ ಬ್ರಹ್ಮ ಮಧುಕೈಟಭರ ಭಯದಿಂದ ಯೋಗನಿದ್ರೆಯನ್ನು ಸ್ತುತಿಸಿದಾಗ ದೇವಿ ಬ್ರಹ್ಮನಿಗೆ ಉಪದೇಶಿಸಿದ ಮಂತ್ರ.

**ಯೋಗನಿದ್ರೆ:-** ''ಬ್ರಹ್ಮ, ಭಯಪಡಬೇಡ. ಹರಿ ಇದ್ದಾನೆ, ನಾನಿದ್ದೇನೆ, ನಿನಗೇತರ ಭಯ? ನೆಮ್ಮದಿಯಿಂದಿರು.

ಶ್ರೀಹರಿ ನಿನ್ನ ಮುಖವನ್ನು ರಕ್ಷಿಸಲಿ. ಮಧುಸೂದನ ತಲೆಯನ್ನು ರಕ್ಷಿಸಲಿ. ಶ್ರೀಕೃಷ್ಣ ಕಣ್ಣುಗಳನ್ನು ಕಾಪಾಡಲಿ. ರಾಧಾರಮಣ ಮೂಗನ್ನು ಕಾಪಾಡಲಿ. ಮಾಧವ ಕಿವಿ ಗಂಟಲು ಕಪೋಲಗಳನ್ನು ಕಾಪಾಡಲಿ. ಗೋವಿಂದ ಕೆನ್ನೆಯನ್ನು, ಕೇಶವ ಕೇಶವನ್ನು, ಹೃಷೀಕೇಶ ಕೆಳತುಟಿಯನ್ನು, ಗದಾಗ್ರಜ ದಂತಪಂಕ್ತಿಯನ್ನು ರಾಸೇಶ್ವರ ನಾಲಿಗೆಯನ್ನು ವಾಮನ ತಾಲುವನ್ನು, ಮುಕುಂದ ಎದೆಯನ್ನು, ದೈತ್ಯಾರಿ ಉದರವನ್ನು, ಜನಾರ್ದನ ನಾಭಿಯನ್ನು, ವಿಷ್ಣು ದವಡೆಯನ್ನು, ಪುರುಷೋತ್ತಮ ನಿತಂಬ ಗುಹ್ಯಗಳನ್ನು, ಜಾನಕೀರಮಣ ಜಾನುಗಳನ್ನು ನರಸಿಂಹ ಕೈಗಳನ್ನು, ವರಾಹ ಕಾಲುಗಳನ್ನು ರಕ್ಷಿಸಲಿ.

ಮೇಲೆ ನಾರಾಯಣ, ಕೆಳಗೆ ಕಮಲಾಪತಿ, ಪೂರ್ವದಿಕ್ಕಿನಲ್ಲಿ ಗೋಪಾಲ, ಆಗ್ನೇಯದಲ್ಲಿ ರಾವಣಾರಿ, ದಕ್ಷಿಣದಲ್ಲಿ ವನಮಾಲಿ, ನೈಋತ್ಯದಲ್ಲಿ ವೈಕುಂಠ, ಪಶ್ಚಿಮದಲ್ಲಿ ವಾಸುದೇವ, ವಾಯವ್ಯದಲ್ಲಿ ವಿಷ್ಟರಶ್ರವ, ಉತ್ತರದಲ್ಲಿ ಕಮಲಾಸನ, ಈಶಾನ್ಯದಲ್ಲಿ ಈಶ್ವರ, ಎಲ್ಲೆಡೆ ಶತ್ರುಜಿತ್ ರಕ್ಷಿಸಲಿ. ನೀರಲ್ಲಿ ನೆಲದಲ್ಲಿ ಅಂತರಿಕ್ಷದಲ್ಲಿ ನಿದ್ರೆಯಲ್ಲಿ ಶ್ರೀರಾಮ ಕಾಪಾಡಲಿ.

-ಇದು ಪರಮಾದ್ಭುತವಾದ ಕವಚಮಂತ್ರ. ಹಿಂದೆ ಭಗವಾನ್ ಶ್ರೀಕೃಷ್ಣನೆ ನನಗೆ ಉಪದೇಶಿಸಿದ. ಶುಂಭಾಸುರನೊಡನೆ ಘೋರ ಸಂಗ್ರಾಮವಾಗುತ್ತಿದ್ದಾಗ ಆಕಾಶದಲ್ಲಿ ನಿಂತು ನಾನು ಈ ಕವಚವನ್ನು ಪಠಿಸಿದ ಮಾತ್ರಕ್ಕೆ ಶುಂಭ ಭೂಮಿಯ ಮೇಲೆ ಬಿದ್ದು ಅಸು ನೀಗಿದ.''

ಹೀಗೆ ದೇವಿ ಕವಚಮಂತ್ರವನ್ನು ಬ್ರಹ್ಮನಿಗೆ ಉಪದೇಶಿಸಿ ಅಂತರ್ಧಾನ ಹೊಂದಿದಳು. ಬ್ರಹ್ಮ ನಾಭಿಕಮಲದಲ್ಲಿ ನಿರ್ಭಯನಾಗಿ ಕುಳಿತ. ಈ ಮಂತ್ರವನ್ನು ಬರೆದು ಬಂಗಾರದ ತಾಯಿತದೊಳಗೆ ಇರಿಸಿ ಕಂಠದಲ್ಲಿ ಅಥವಾ ಬಲಭುಜದಲ್ಲಿ ಧರಿಸಿದರೆ ವಿಷ ಅಗ್ನಿ ಜಲ ಶತ್ರುಗಳಿಂದ ಭಯವಿಲ್ಲ. ನೆಲ ಜಲ ಅಂತರಿಕ್ಷಗಳಲ್ಲಿ ನಿದ್ದೆಯಲ್ಲಿ ಹರಿ ಕಾಪಾಡುತ್ತಾನೆ. ಯುದ್ಧ, ಸಿಡಿಲಿನ ಆಘಾತ, ಆಪತ್ತು

ಪ್ರಾಣಸಂಕಟಗಳಲ್ಲಿ ಈ ಮಂತ್ರಸ್ಮರಣದಿಂದ ಎಲ್ಲವೂ ಪರಿಹಾರವಾಗುತ್ತದೆ. ಇದನ್ನು ಕಂಠದಲ್ಲಿ ಧರಿಸಿ ಶಿವ ತ್ರಿಪುರಾಸುರನನ್ನು ವಧಿಸಿದ. ಕಾಳಿ ರಕ್ತಬೀಜಾಸುರನನ್ನು ಭಕ್ಷಿಸಿದಳು. ಶೇಷ ಬ್ರಹ್ಮಾಂಡವನ್ನು ಹೊರಲು ಸಮರ್ಥನಾಗಿದ್ದಾನೆ.

ಬ್ರಾಹ್ಮಣ ಕೃಷ್ಣನ ಕೊರಳಲ್ಲಿ ಈಕವಚಮಂತ್ರದ ತಾಯಿತವನ್ನು ಕಟ್ಟಿದ. ತನ್ನ ಕವಚವನ್ನು ತಾನೇ ಧರಿಸಿದ ಶ್ರೀಹರಿ!

*ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣ ನಾರದ ಸಂವಾದದಲ್ಲಿ ಶಕಟಭಂಜನ ಯೋಗನಿದ್ರೋಕ್ತ ಕವಚನ್ಯಾಸವೆಂಬ ಹನ್ನೆರಡನೆಯ ಅಧ್ಯಾಯ ಮುಗಿಯಿತು*

—o—

## ಕೃಷ್ಣರಾಮ ನಾಮಕರಣ

ಅಧ್ಯಾಯ - ೧೩

**ನಾರಾಯಣ:-** ಶ್ರೀಕೃಷ್ಣ ತೋರಿದ ಇನ್ನೂ ಬೇರೆ ಲೀಲೆಗಳನ್ನೂ ಹೇಳುತ್ತೇನೆ, ನಾರದ, ಕೇಳು. ಅವನ ಲೀಲೆ ಪ್ರತಿಯೊಂದೂ ಪಾಪನಾಶಕ, ಪುಣ್ಯದಾಯಕವಾದ ಉತ್ತಮವಾದ ಲೀಲೆ.

ಒಂದು ದಿನ ಯಶೋದೆ ಬಂಗಾರದ ಸಿಂಹಾಸನದಲ್ಲಿ ಕುಳಿತು ಹಸಿದ ಕೃಷ್ಣನಿಗೆ ಸ್ತನಪಾನ ಮಾಡಿಸುತ್ತಿದ್ದಳು. ಆಗ ಒಬ್ಬ ಬ್ರಾಹ್ಮಣ ತನ್ನ ಶಿಷ್ಯ ಸಮೂಹದೊಂದಿಗೆ ಅರಮನೆಗೆ ಬಂದ. ಶುದ್ಧ ಸ್ಫಟಿಕಮಾಲೆಯನ್ನು ಹಿಡಿದು ಪರಬ್ರಹ್ಮನ ಜಪಧ್ಯಾನ ಮಾಡುತ್ತ ಬ್ರಹ್ಮತೇಜಸ್ಸಿನಿಂದ ಹೊಳೆಯುವ ಶ್ರೇಷ್ಠ ಬ್ರಾಹ್ಮಣ ಆತ. ಬಿಳಿಯಾದ ದಂತಪಂಕ್ತಿ ಉಳ್ಳವ. ಬಿಳಿ ಬಟ್ಟೆ ಉಟ್ಟು ದಂಡ ಛತ್ರ ಧರಿಸಿದವ, ವೇದವೇದಾಂಗ ಪಾರಂಗತ, ಜ್ಯೋತಿಷ್ಯದಲ್ಲಿ ಮೂರ್ತಿಮತ್ತಾಗಿ ಬಂದ ಶಾಸ್ತ್ರವಾಗಿದ್ದ. ಶುಭ್ರವಾದ ಮೈಬಣ್ಣ, ಪುಟಕ್ಕಿಟ್ಟ ಚಿನ್ನದ ಬಣ್ಣದ ಜಟೆ, ಚಂದ್ರನಂಥ ಮುಖ, ಕಮಲದಂಥ ಕಣ್ಣುಗಳಿಂದ ಕೂಡಿದ, ಯೋಗಿರಾಜ ಭಗವಾನ್ ಶಂಕರನ ಶಿಷ್ಯ. ಗದಾಧರ ವಿಷ್ಣುವಿನಲ್ಲಿ ಶುದ್ಧ ಭಕ್ತಿ ಉಳ್ಳವ. ಅವನ ಕೈ ಸದಾ ವ್ಯಾಖ್ಯಾನಮುದ್ರೆಯಿಂದ ಯುಕ್ತವಾಗಿತ್ತು. ವೇದವ್ಯಾಖ್ಯಾನ ಮಾಡುತ್ತಿದ್ದರೆ ಸಾಕ್ಷಾತ್ ನಾಲ್ಕುವೇದಗಳೇ ಮೂರ್ತಿಮತ್ತಾಗಿ ಬಂದಂತಿದ್ದ. ಅವನ ಕಂಠ ಸರಸ್ವತಿಯ ವಾಸಸ್ಥಾನವಾಗಿತ್ತು. ಶಾಸ್ತ್ರಸಿದ್ಧಾಂತಗಳ ವಿಶೇಷ ತಜ್ಞನೆನಿಸಿದ್ದ ಆತ ಹಗಲು ರಾತ್ರಿ ಶ್ರೀಕೃಷ್ಣನ ಚರಣಾರವಿಂದಧ್ಯಾನದಲ್ಲಿ ಲೀನನಾಗುತ್ತಿದ್ದ. ಸರ್ವಜ್ಞನಾಗಿದ್ದು ಸಿದ್ಧರಿಗೆ ಸ್ವಾಮಿಯಾಗಿದ್ದು ಜೀವನ್ಮುಕ್ತನೆನಿಸಿದ್ದ.

ಯಶೋದೆ ಬ್ರಾಹ್ಮಣನನ್ನು ಕಂಡು ಎದ್ದು ನಿಂತಳು. ತಲೆಬಾಗಿ ಅವನ ಪಾದಗಳಿಗೆ ಮಣಿದಳು. ಬಂಗಾರದ ಸಿಂಹಾಸನ ನೀಡಿದಳು. ಪಾದ್ಯ ಅರ್ಘ್ಯ ಮಧುಪರ್ಕಗಳನ್ನು ನೀಡಿದಳು. ಬಾಲಕೃಷ್ಣನಿಂದ ಅವನಿಗೆ ನಮಸ್ಕಾರ ಮಾಡಿಸಿದಳು. ಮುನಿ ಅಂತರಂಗದಲ್ಲಿ ಬಾಲಕೃಷ್ಣನಿಗೆ ನೂರಾರು ಪ್ರಣಾಮ ಅರ್ಪಿಸುತ್ತ ಹೊರಗೆ ವೇದಮಂತ್ರಗಳಿಂದ ಆಶೀರ್ವಾದ ಮಾಡುತ್ತಾನೆ. ಬಳಿಕ ಯಶೋದೆ ಮುನಿಯ ಶಿಷ್ಯರಿಗೂ ಭಕ್ತಿಯಿಂದ ನಮಿಸಿ ಎಲ್ಲರಿಗೂ ಪ್ರತ್ಯೇಕವಾಗಿ ಪಾದ್ಯ ಮುಂತಾದ ಉಪಚಾರ ಸಲ್ಲಿಸಿದಳು. ಅವರೆಲ್ಲರೂ ಯಶೋದೆಯನ್ನು ಹರಸಿದರು. ಯಶೋದೆ ಮುನಿಗೆ ಕೈಮುಗಿದು ಅವನ ಆಗಮನಕ್ಕೆ ಕಾರಣವನ್ನು ಕೇಳತೊಡಗಿದಳು.

**ಯಶೋದೆ:-** ಮುನಿಯೆ, ನೀನು ಸ್ವಾತ್ಮಾರಾಮನಾದ ಮಹರ್ಷಿ. ನಿನ್ನ ಕುಶಲಪ್ರಶ್ನೆ ಮಾಡುವುದು ಉಚಿತವಾಗುವುದಿಲ್ಲ. ಆದರೂ ಕೇಳುತ್ತಿದ್ದೇನೆ. ನಾನು ಹೆಣ್ಣು ಹೆಂಗಸು, ಬುದ್ಧಿ ಇಲ್ಲದವಳು. ನನ್ನ ತಪ್ಪನ್ನು ಮನ್ನಿಸಬೇಕು. ಸಜ್ಜನರು ಯಾವಾಗಲೂ ಅಜ್ಞಜನರ ಅಪರಾಧಗಳನ್ನು ಕ್ಷಮಿಸುತ್ತಾರೆ. ಮೊದಲಿಗೆ ನೀನಾರು ಹೇಳು. ಅಂಗಿರ ಅತ್ರಿ ಮರೀಚಿ ಗೌತಮ ಕ್ರತು ಪ್ರಚೇತ ಪುಲಸ್ತ್ಯ ಪುಲಹ ದುರ್ವಾಸ ಕರ್ದಮ ವಸಿಷ್ಠ ಗರ್ಗ ಜೈಗೀಷವ್ಯ ದೇವಲ ಕಪಿಲ ಸನತ್ಕುಮಾರ ಸನಕ ಸನಂದ ವೋಢು ಪಂಚಶಿಖ ಆಸುರಿ ಸೌಭರಿ ವಿಶ್ವಾಮಿತ್ರ ವಾಲ್ಮೀಕಿ ವಾಮದೇವ ಕಶ್ಯಪ ಸಂವರ್ತ ಉತಥ್ಯ ಕಚ ಬೃಹಸ್ಪತಿ ಭೃಗು ಶುಕ್ರ ಚ್ಯವನ ನರ ನಾರಾಯಣ ಸಕ್ಥಿ ಪರಾಶರ ವ್ಯಾಸ ಶುಕ ಜೈಮಿನಿ ಮಾರ್ಕಂಡೇಯ ಲೋಮಶ ಕಣ್ವ ಕಾತ್ಯಾಯನ ಆಸ್ತೀಕ ಜರತ್ಕಾರು ಋಷ್ಯಶೃಂಗ ವಿಭಾಂಡಕ ಪೌಲಸ್ತ್ಯ ಅಗಸ್ತ್ಯ ಶರದ್ವಾನ್ ಗಿರಿ ಶಮೀಕ ಅರಿಷ್ಟನೇಮಿ ಮಾಂಡವ್ಯ ಪೈಲ ಪಾಣಿನಿ ಕಣಾದ ಶಾಕಲ್ಯ ಶಾಕಟಾಯನ ಅಷ್ಟಾವಕ್ರ ಭಾಗುರಿ ಸುಮಂತು ವತ್ಸ ಜಾಬಾಲ ಯಾಜ್ಞವಲ್ಕ್ಯ ವೈಶಂಪಾಯನ ಯತಿ ಹಂಸೀ ಪಿಪ್ಪಲಾದ ಮೈತ್ರೇಯ ಕರುಷ ಉಪಮನ್ಯು ಗೌರಮುಖ ಆರುಣಿ ಔರ್ವ ಕಕ್ಷೀವಾನ್ ಭರದ್ವಾಜ ವೇದಶಿರ ಶಂಕುಕರ್ಣ ಶೌನಕ - ಈ ಪುಣ್ಯಶ್ಲೋಕರೆನಿಸಿದ ಮುನಿಗಳಲ್ಲಿ ನೀನಾರು? ಕೃಪೆ ಮಾಡಿ ಹೇಳು. ನಾನಿದನ್ನು ಕೇಳಿ ತಿಳಿಯಲು ಯೋಗ್ಯಳಲ್ಲ. ಆದರೂ ಹೇಳು. ದಾಸನಾಗಲಿ ದಾಸಿಯಾಗಲಿ ಪ್ರಭುವನ್ನೇ ಕೇಳಬೇಕು ತಾನೇ? ಪ್ರಭುವನ್ನು ಬಿಟ್ಟು ಇನ್ನಾರನ್ನು ಕೇಳಬೇಕು? ನಾನು ಧನ್ಯೆ, ಕೃತಕೃತ್ಯೆ. ನನ್ನ ಜೀವನ ಸಫಲವಾಯಿತು. ನಿನ್ನ ಪಾದಕಮಲದ ಧೂಳಿನ ಸ್ಪರ್ಶದಿಂದ ನನ್ನ ಕೋಟಿ ಜನ್ಮಗಳ ಪಾಪ ಕಳೆಯಿತು. ನಿನ್ನ ಪಾದೋದಕ ಸ್ಪರ್ಶದಿಂದ ಈ ನೆಲ ಪವಿತ್ರವಾಯಿತು. ನಿನ್ನಾಗಮನದಿಂದ ನನ್ನ ಮನೆ ಪಾವನವಾಯಿತು. ವೇದಗಳಲ್ಲಿ ಪ್ರಸಿದ್ಧರಾದ ಮಹರ್ಷಿಗಳಲ್ಲಿ ಒಬ್ಬನ ದರ್ಶನ ಇಂದು ನನಗೆ ಪೂರ್ವಜನ್ಮದ ಪುಣ್ಯದಿಂದ ಲಭಿಸಿತು. ನಿನ್ನ ಶಿಷ್ಯರೂ ವೇದಗಳೇ ಮೂರ್ತಿಮತ್ತಾಗಿ ಬಂದಂತಿದ್ದಾರೆ. ಬೇಸಗೆಯ ನಡು ಹಗಲಿನ ಸೂರ್ಯನಂತೆ ಬೆಳಗುತ್ತಿದ್ದಾರೆ. ಗೋಕುಲವನ್ನೂ ನನ್ನ ಮನೆಯನ್ನೂ ಪಾದಧೂಳಿಯಿಂದ ಪವಿತ್ರಗೊಳಿಸುತ್ತಿದ್ದಾರೆ. ನನ್ನ ಮಗುವಿಗೆ ನೀನು ತುಂಬಿದ ಹೃದಯದಿಂದ ಆಶೀರ್ವಾದ ಮಾಡಬೇಕು. ಬ್ರಾಹ್ಮಣಾಶೀರ್ವಾದ ತಕ್ಷಣವೇ ಪೂರ್ಣಫಲದಾಯಕವಾಗುವುದು.''

ಹೀಗೆ ಹೇಳಿ ಯಶೋದೆ ಮುನಿಯ ಮುಂದೆ ಭಕ್ತಿಭಾವದಿಂದ ನಿಂತಳು. ನಂದಗೋಪನಿಗೆ ಬರಲು ಹೇಳಿಕಳಿಸಿದಳು. ಮುನಿಶ್ರೇಷ್ಠನಾದ ಗರ್ಗ ಯಶೋದೆಯ ಮಾತೆಲ್ಲ ಕೇಳಿ ನಕ್ಕುಬಿಟ್ಟ, ಶಿಷ್ಯರೂ ನಕ್ಕರು. ಮುನಿ ಹೇಳತೊಡಗಿದ, ''ದೇವಿ, ನಿನ್ನ ಸಮಯೋಚಿತವಾದ ಮಾತು ಅಮೃತದಂತಿದೆ. ಯಾರು ಯಾವ ಕುಲದಲ್ಲಿ ಜನಿಸುವರೋ ಅವರಲ್ಲಿ ಆ ಕುಲದ ಗುಣ ಕಂಡುಬರುತ್ತದೆ. ಗೋಪರೆಂಬ ಕಮಲಗಳ ವಿಕಾಸಕ್ಕೆ ಕಾರಣನಾದ ಸೂರ್ಯ, ಗಿರಿಭಾನು ಎಂಬ ಗೋಪ. ಅವನ ಪತ್ನಿ ಪದ್ಮಾವತಿ. ಇವರ ಪುತ್ರಿ ಯಶೋದೆ ನೀನು ಹೆಸರಿಗೆ ತಕ್ಕಂತೆ ಎಲ್ಲಕಾರ್ಯಗಳಲ್ಲಿ ಯಶಸ್ಸನ್ನೇ ಕಾಣುವವಳು. ನಂದ ಯಾರು, ನೀನಾರು, ಈ ಬಾಲಕೃಷ್ಣ ಯಾರು ಎಲ್ಲವೂ ನನಗೆ ತಿಳಿದಿದೆ. ನಿರ್ಜನಪ್ರದೇಶದಲ್ಲಿ ಏಕಾಂತದಲ್ಲಿ ನಾನು ಅದನ್ನು ನಂದನ ಮುಂದೆ ಹೇಳುತ್ತೇನೆ. ನನ್ನ ಹೆಸರು ಗರ್ಗ. ಬಹುಕಾಲದಿಂದ ಯಾದವರ ಕುಲಪುರೋಹಿತ.

ಒಂದು ಅವಶ್ಯಕಾರ್ಯಕ್ಕಾಗಿ ವಸುದೇವ ನನ್ನನ್ನು ನಿಮ್ಮ ಬಳಿಗೆ ಕಳಿಸಿದ್ದಾನೆ. ಆಕಾರ್ಯ ಇನ್ನೊಬ್ಬರಿಂದ ಆಗದು."

ಅಷ್ಟರಲ್ಲಿ ಗರ್ಗನ ಆಗಮನ ಕೇಳಿ ನಂದಗೋಪ ಅಲ್ಲಿಗೆ ಬಂದ. ಮುನಿಗೆ ದಂಡಪ್ರಣಾಮ ಮಾಡಿದ. ಶಿಷ್ಯರಿಗೂ ತಲೆಬಾಗಿ ನಮಿಸಿದ. ಎಲ್ಲರೂ ಅವನನ್ನು ಆಶೀರ್ವದಿಸಿದರು. ಗರ್ಗಮುನಿ ಆಸನದಿಂದ ಎದ್ದು ನಂದ ಯಶೋದೆಯರೊಡನೆ ಅವನ ಅಂತಃಪುರವನ್ನು ಪ್ರವೇಶಿಸಿದ. ಗರ್ಗ ನಂದ ಯಶೋದೆ ಕೃಷ್ಣ ಹೊರತು ಇನ್ನಾರೂ ಇಲ್ಲದ ಏಕಾಂತದಲ್ಲಿ ಗರ್ಗ ನಂದನಿಗೆ ರಹಸ್ಯವನ್ನು ಹೇಳತೊಡಗುತ್ತಾನೆ.

**ಗರ್ಗಮುನಿ:-** ನಂದ, ನಾನು ನಿನಗೆ ಹೇಳುವ ಮಾತು ಮಂಗಳಕರವಾಗಿದೆ. ನನ್ನನ್ನು ಇಲ್ಲಿಗೆ ವಸುದೇವ ಕಳಿಸಿಕೊಟ್ಟಿದ್ದಾನೆ. ಏಕೆಂದರೆ ಹಿಂದೆ ಅವನು ಹೆರಿಗೆ ಮನೆಗೆ ಬಂದು ತನ್ನ ಗಂಡುಮಗುವನ್ನು ಇಲ್ಲಿ ಇಟ್ಟು ನಿನ್ನ ಹೆಣ್ಣುಮಗುವನ್ನು ಮಥುರೆಗೆ ಒಯ್ದಿದ್ದಾನೆ. ಕಂಸನ ಭಯದಿಂದ ಹೀಗೆ ಮಾಡಿದ್ದಾನೆ. ಈ ಗಂಡುಮಗು ವಸುದೇವನದು. ರೋಹಿಣಿಯ ಮಗುವೂ ಅವನದೆ. ಇಬ್ಬರಿಗೂ ಅನ್ನಪ್ರಾಶನ ನಾಮಕರಣಗಳನ್ನು ನಡೆಸಲು ವಸುದೇವ ಗುಪ್ತವಾಗಿ ನನ್ನನ್ನು ನಿಮ್ಮಲ್ಲಿಗೆ ಕಳಿಸಿದ್ದಾನೆ. ನೀವು ಇದಕ್ಕೆ ಏರ್ಪಾಡು ಮಾಡಿರಿ. ಈ ಮಗು ಸಾಕ್ಷಾತ್ ಪರಬ್ರಹ್ಮ ಶ್ರೀಕೃಷ್ಣ, ಭೂಮಿಯ ಭಾರಹರಣಕ್ಕಾಗಿ ಅವತರಿಸಿದ್ದಾನೆ. ಬ್ರಹ್ಮನ ಪ್ರಾರ್ಥನೆಯಂತೆ ಮುಂದೆ ಭೂಭಾರಹರಣ ಮಾಡುತ್ತಾನೆ. ಇವನೇ ವೈಕುಂಠದಲ್ಲಿ ನಾರಾಯಣ, ಶ್ವೇತದ್ವೀಪದಲ್ಲಿ ವಿಷ್ಣು. ಕಪಿಲ ಮಹರ್ಷಿ ಮತ್ತು ಬೇರೆ ನರನಾರಾಯಣ ಮುಂತಾದವರೂ ಇವನ ಅಂಶಭೂತರು. ಎಲ್ಲ ತೇಜಸ್ಸುಗಳ ಪುಂಜ ಈತ. ಅವತಾರ ಕಾಲದಲ್ಲಿ ವಸುದೇವನಿಗೆ ತನ್ನ ನಿಜರೂಪ ತೋರಿ ಬಳಿಕ ಶಿಶುರೂಪ ತಾಳಿ ನಿಮ್ಮ ಬಳಿಗೆ ಬಂದಿದ್ದಾನೆ ಹೊರತು ಈತ ಪ್ರಾಕೃತ ಶರೀರಿಯಲ್ಲ. ಅಯೋನಿಜ, ಭೂತಲದಲ್ಲಿ ಸ್ವೇಚ್ಛೆಯಿಂದ ಪ್ರಕಟನಾಗಿದ್ದಾನೆ. ತನ್ನ ತಾಯಿಯ ಗರ್ಭವನ್ನು ಒಂಬತ್ತು ತಿಂಗಳಕಾಲ ಗಾಳಿಯಿಂದ ತುಂಬಿಸಿಟ್ಟು ಪ್ರಸವಕಾಲ ಬಂದಾಗ ತಾನು ಸ್ವತಃ ಪ್ರಕಟನಾಗಿದ್ದಾನೆ.

ನಂದರಾಜ, ಯುಗಯುಗಗಳಲ್ಲಿ ಇವನಿಗೆ ಬೇರೆಬೇರೆ ರೂಪಗಳಿವೆ, ನಾಮಗಳಿವೆ. ಮೊದಲ ಮೂರು ಯುಗಗಳಲ್ಲಿ ಶ್ವೇತ ರಕ್ತ ಪೀತರೂಪಗಳು; ಈಗ ಕಲಿಯುಗದ ಆರಂಭವಾಗುವುದರಿಂದ ಕೃಷ್ಣರೂಪಿಯಾಗಿದ್ದಾನೆ. ಆದರಿಂದ ಕೃಷ್ಣ ಎಂದು ಹೆಸರು. ಮತ್ತು 'ಕೃಷ್ಣಃ' ಎಂಬ ಮಂಗಲನಾಮದಲ್ಲಿ ಕಕಾರಕ್ಕೆ ಬ್ರಹ್ಮ ಅರ್ಥ. ಋಕಾರಕ್ಕೆ ಶೇಷ ಅರ್ಥ. ಷಕಾರಕ್ಕೆ ಶಿವ, ಣಕಾರಕ್ಕೆ ಧರ್ಮ, ಅಕಾರಕ್ಕೆ ಶ್ವೇತದ್ವೀಪದಲ್ಲಿರುವ ವಿಷ್ಣು, ಕೊನೆಯ ವಿಸರ್ಗಕ್ಕೆ ನರನಾರಾಯಣರು ಅರ್ಥ. ಈ ಎಲ್ಲರ ತೇಜಸ್ಸುಗಳ ಸಮೂಹರೂಪ ಶ್ರೀಹರಿಯಾದ್ದರಿಂದ ಅವನಿಗೇ ಈ ನಾಮ ಸಲ್ಲುತ್ತದೆ. ಮತ್ತು 'ಕೃಷ್' ಎಂದರೆ ಪ್ರಾಕೃತಶರೀರರಹಿತವಾದುದು ಎಂದರ್ಥ. 'ಣ' ಎಂದರೆ ಮೋಕ್ಷ. ಪ್ರಾಕೃತ ಶರೀರವಿಲ್ಲದ ಮೋಕ್ಷವನ್ನು ನೀಡುವುದರಿಂದ ಅವನಿಗೆ 'ಕೃಷ್ಣ' ಎಂದು ಹೆಸರು. ಕೃಷ್ ಎಂದರೆ ಕಾಮ್ಯಕರ್ಮ ರಹಿತವಾದುದು ಎಂದರ್ಥ. ಣಕಾರ ಭಕ್ತಿಯನ್ನು ಹೇಳುತ್ತದೆ. ಕಾಮ್ಯಕರ್ಮರಹಿತವಾದ ನಿರ್ಮಲ ಭಕ್ತಿಯನ್ನು ನೀಡುವುದರಿಂದ ಇವನು

ಕೃಷ್ಣನೆನಿಸುತ್ತಾನೆ. ಕೃಷ್ ಎಂದರೆ ಕರ್ಮಕ್ಷಯ. ಣ ಕಾರ ದಾಸ್ಯವನ್ನು ಹೇಳುತ್ತದೆ. ಸರ್ವ ಅನಿಷ್ಟಕರ್ಮಕ್ಷಯ ಮಾಡಿ ಮೋಕ್ಷದಲ್ಲಿ ನಿರ್ಮಲ ದಾಸ್ಯಭಾವ ನೀಡುವುದರಿಂದಲೂ ಈತ ಕೃಷ್ಣನೆನಿಸುತ್ತಾನೆ. ಹರಿಯ ಕೋಟಿನಾಮಗಳ ಸ್ಮರಣೆಯಿಂದ ಸಿಗುವ ಫಲ ಈ ಒಂದು ನಾಮಜಪದಿಂದಲೇ ಲಭ್ಯವಿದೆ. ಕೃಷ್ಣನಾಮದ ಈ ಮಹಿಮೆಯನ್ನು ಹೇಳಿದರೆ ಕೇಳಿದರೆ ಸಾಕು ಆ ನಾಮಜಪದ ಫಲವೇ ಸಿಗುತ್ತದೆ. ನಾಮಕೀರ್ತನ ಶ್ರವಣ ಸ್ಮರಣಗಳು ಮಾನವನಿಗೆ ಅವನ ಕೋಟಿಜನ್ಮಗಳ ಪಾಪವನ್ನು ಪರಿಹರಿಸುತ್ತವೆ. ವಿಷ್ಣುನಾಮಗಳಲ್ಲೆಲ್ಲ ಸುಂದರವಾದ ಕೃಷ್ಣನಾಮ ಶ್ರೇಷ್ಠವಾದುದು, ಅತ್ಯಂತ ಮಂಗಳಕರ, ಭಕ್ತಿದಾಸ್ಯಗಳನ್ನು ನೀಡುವಂತಹದು.

**ವಿಷ್ಣೋರ್ನಾಮ್ನಾಂ ಚ ಸರ್ವೇಷಾಂ ಸಾರಾತ್‌ಸಾರಂ ಪರಾತ್ಪರಂ ।**
**ಕೃಷ್ಣೇತಿ ಸುಂದರಂ ನಾಮ ಮಂಗಲಂ ಭಕ್ತಿದಾಸ್ಯದಂ ॥**

ಕೃಷ್ಣನಾಮದ ಕಕಾರ ಉಚ್ಚರಿಸಿದರೆ ಜನನ ಮರಣಗಳಿಲ್ಲದ ಮೋಕ್ಷ ಲಭಿಸುತ್ತದೆ. ಋಕಾರದ ಉಚ್ಚಾರಣದಿಂದ ಹರಿದಾಸ್ಯ ಲಭಿಸುತ್ತದೆ. ಷಕಾರದ ಉಚ್ಚಾರಣದಿಂದ ಹರಿಭಕ್ತಿ ದೃಢವಾಗುತ್ತದೆ. ಣಕಾರದ ಉಚ್ಚಾರಣದಿಂದ ಹರಿಯ ಸಾಮೀಪ್ಯ ಲಭಿಸುತ್ತದೆ. ವಿಸರ್ಗದ ಉಚ್ಚಾರಣದಿಂದ ಹರಿಯ ಸಾರೂಪ್ಯ ಲಭಿಸುತ್ತದೆ.

ಕಕಾರ ಉಚ್ಚಾರಣ ಮಾಡಿದರೆ ಯಮದೂತರು ನಡುಗುತ್ತಾರೆ. ಋಕಾರ ಉಚ್ಚಾರಣದಿಂದ ಅವರು ಓಡಿಹೋಗುತ್ತಾರೆ. ಷಕಾರ ಣಕಾರ ಅಕಾರ ಉಚ್ಚಾರಣಗಳಿಂದ ಪಾಪ ರೋಗ ಮೃತ್ಯುಗಳು ಪಲಾಯನ ಮಾಡುತ್ತವೆ. ಕೃಷ್ಣನಾಮ ಸ್ಮರಣ ಕೀರ್ತನ ಶ್ರವಣ ಮಾಡುವವರನ್ನು ಕೊಂಡೊಯ್ಯಲು ಶ್ರೀಕೃಷ್ಣನ ಭೃತ್ಯರು ವಿಮಾನಗಳನ್ನು ತೆಗೆದುಕೊಂಡು ಧಾವಿಸಿ ಬರುತ್ತಾರೆ. ವಿದ್ವಾಂಸರು ನೆಲದ ಮೇಲಿನ ದೂಳಿನ ಕಣಗಳನ್ನಾದರೂ ಎಣಿಸಿ ಇಷ್ಟೆಂದು ಹೇಳಬಹುದು, ಕೃಷ್ಣನಾಮದ ಪ್ರಭಾವವನ್ನು ಮಾತ್ರ ಇಷ್ಟೆಂದು ಹೇಳಲಾರರು. ಹಿಂದೆ ಶಿವನ ಮುಖದಿಂದ ನಾನು ಕೃಷ್ಣನಾಮದ ಮಹಿಮೆಯನ್ನು ಹೀಗೆ ಉಪದೇಶ ಪಡೆದಿದ್ದೆ. ಆದರೂ ಅವನಿಗೂ ಕೃಷ್ಣನ ಗುಣ, ನಾಮದ ಪ್ರಭಾವಗಳು ಸ್ವಲ್ಪವೇ ಗೊತ್ತು.

**ಪೃಥಿವ್ಯಾಂ ರಜಸಃ ಸಂಖ್ಯಾಂ ಕರ್ತುಂ ಶಕ್ತಾ ವಿಪಶ್ಚಿತಃ ।**
**ನಾಮ್ನಃ ಪ್ರಭಾವಸಂಖ್ಯಾನಂ ಸಂತೋ ವಕ್ತುಂ ನ ಚ ಕ್ಷಮಾಃ ॥**
**ಪುರಾ ಶಂಕರವಕ್ತ್ರೇಣ ನಾಮ್ನೋಽಸ್ಯ ಮಹಿಮಾ ಶ್ರುತಃ ।**
**ಗುಣಾನ್ ನಾಮಪ್ರಭಾವಂ ಚ ಕಿಂಚಿದ್ ಜಾನಾತಿ ಮದ್ಗುರುಃ ॥**

ಬ್ರಹ್ಮಶೇಷ ಧರ್ಮ ದೇವತೆಗಳು ಋಷಿಗಳು ಮನುಗಳು ಮಾನವರು ಯಾರೂ ಶ್ರೀಕೃಷ್ಣನ ಮಹಿಮೆಯ ಹದಿನಾರನೆ ಒಂದಂಶವನ್ನು ತಿಳಿದಿಲ್ಲ. ನಾನು ನನಗೆ ತಿಳಿದಷ್ಟೇ ನಿನ್ನ ಮಗನ ಮಹಿಮೆಯನ್ನು ಹೇಳಿದ್ದೇನೆ. ಇದನ್ನು ನಾನು ಗುರುಮುಖದಿಂದ ತಿಳಿದೆ. ಶ್ರೀಕೃಷ್ಣನ ಕೆಲವು ನಾಮಗಳನ್ನು ಹೇಳುತ್ತೇನೆ ಕೇಳು.

ಕೃಷ್ಣ ಪೀತಾಂಬರ ಕಂಸಧ್ವಂಸಿ ವಿಷ್ಟರಶ್ರವ ದೇವಕೀನಂದನ ಶ್ರೀಶ ಯಶೋದಾನಂದನ ಹರಿ ಸರ್ವೇಶ ಸರ್ವರೂಪಧೃಕ್ ಸರ್ವಾಧಾರ ಸರ್ವಗತಿ

ಸರ್ವಕಾರಣಕಾರಣ ರಾಧಾಬಂಧು ರಾಧಿಕಾತ್ಮ ರಾಧಿಕಾಜೀವನ ರಾಧಿಕಾಸಹಚಾರಿ ರಾಧಾಮಾನಸಪೂರಕ ರಾಧಾಧನ ರಾಧಿಕಾಂಗ ರಾಧಿಕಾಸಕ್ತಮಾನಸ ರಾಧಾಪ್ರಾಣ ರಾಧಿಕೇಶ ರಾಧಿಕಾರಮಣ ರಾಧಿಕಾಚಿತ್ತಚೋರ ರಾಧಾಪ್ರಾಣಾಧಿಕಪ್ರಭು ಪರಿಪೂರ್ಣತಮಬ್ರಹ್ಮ ಗೋವಿಂದ ಗರುಡಧ್ವಜ.

ನಂದ, ಈ ಕೃಷ್ಣನಾಮಗಳನ್ನು ನಿನ್ನ ಹೃದಯದಲ್ಲಿ ತುಂಬಿಕೊಳ್ಳು. ಇವು ಜನನ ಮರಣ ಸಂಕಟಗಳನ್ನು ದೂರಮಾಡುವುವು.

ಇನ್ನು ಜ್ಯೇಷ್ಠಪುತ್ರನಾದ ಬಲರಾಮನ ನಾಮಗಳನ್ನೂ ಹೇಳುತ್ತೇನೆ, ಕೇಳು. ಅವನು ದೇವಕಿಯ ಗರ್ಭದಲ್ಲಿದ್ದಾಗ ಯೋಗಮಾಯೆ ಅವನನ್ನು ಸೆಳೆದುದರಿಂದ ಸಂಕರ್ಷಣ ಎನಿಸುತ್ತಾನೆ. ಇವನಿಗೆ ಅಂತವಿಲ್ಲವೆಂದು ವೇದಗಳು ಹೇಳುವುದರಿಂದ ಅನಂತ ಎನಿಸುತ್ತಾನೆ. ಬಲ ಅಧಿಕವಾಗಿರುವುದರಿಂದ ಬಲದೇವ. ಹಲಾಯುಧ ಧರಿಸುವುದರಿಂದ ಹಲಿ. ಕಪ್ಪುಬಟ್ಟೆ ಉಡುವುದರಿಂದ ಶಿತಿವಾಸ, ಮುಸಲಾಯುಧ ಧರಿಸುವುದರಿಂದ ಮುಸಲಿ. ರೇವತಿಯನ್ನು ಮದುವೆಯಾಗುವುದರಿಂದ ರೇವತೀರಮಣ. ರೋಹಿಣಿಯ ಗರ್ಭದಲ್ಲಿ ವಾಸಮಾಡಿದ್ದರಿಂದ ರೌಹಿಣೇಯ. ಹೀಗೆ ನಿನ್ನ ಜ್ಯೇಷ್ಠಪುತ್ರನ ನಾಮಗಳನ್ನೂ ಹೇಳಿದ್ದೇನೆ. ಇನ್ನು ನಾನು ನನ್ನ ಮನೆಗೆ ಹಿಂತಿರುಗುತ್ತೇನೆ, ನೀನು ನಿನ್ನ ಮನೆಯಲ್ಲಿ ಸುಖವಾಗಿರು.''

ಗರ್ಗಮುನಿಯ ಮಾತನ್ನು ಕೇಳಿ ನಂದ ತಬ್ಬಿಬ್ಬಾದ. ಯಶೋದೆಯೂ ದಿಙ್ಮೂಢಳಾದಳು. ಬಾಲಕೃಷ್ಣ ನಸುನಕ್ಕ. ಬಳಿಕ ನಂದ ಸಾವರಿಸಿಕೊಂಡು ನುಡಿದ, 'ಮುನಿಯೆ, ನೀನು ಹೊರಟುಹೋದರೆ ಮಗುವಿಗೆ ನಾಮಕರಣ ಅನ್ನಪ್ರಾಶನ ಮಾಡಿಸುವವರು ಯಾರು? ದಯವಿಟ್ಟು ನೀನೆ ಅದನ್ನು ನಡೆಸಿಕೊಡಬೇಕು. ಮತ್ತು ಕೃಷ್ಣನಾಮಗಳಲ್ಲಿ 'ರಾಧಾಬಂಧು'ವಿನಿಂದ ತೊಡಗಿ ರಾಧಾಪ್ರಾಣಾಧಿಕ ನಾಮದ ವರೆಗೆ ಬರುವ ರಾಧೆ ಯಾರು, ಯಾರ ಮಗಳು ಎನ್ನುವುದನ್ನೂ ನಮಗೆ ಹೇಳಬೇಕು.' ನಂದನ ಮಾತನ್ನು ಕೇಳಿ ಗರ್ಗಮುನಿ ನಕ್ಕು ನುಡಿದ.

**ಗರ್ಗಮುನಿ:-** ರಾಧೆಯ ಸ್ವರೂಪ ಒಂದು ಪರಮನಿಗೂಢವಾದ ತತ್ವ. ಅದನ್ನೂ ಹೇಳುತ್ತೇನೆ ಕೇಳು. ಇದಕ್ಕೆ ಪುರಾತನ ಇತಿಹಾಸ ಒಂದುಂಟು. ಅದು ಗೋಲೋಕದಲ್ಲಿ ನಡೆದ ಸಂಗತಿ. ಅದನ್ನು ಭಗವಾನ್ ಶಂಕರನ ಮುಖದಿಂದ ನಾನು ಕೇಳಿದ್ದೇನೆ. ಒಮ್ಮೆ ಗೋಲೋಕದಲ್ಲಿ ಶ್ರೀದಾಮನಿಗೆ ರಾಧೆಯೊಡನೆ ಲೀಲಾರೂಪವಾಗಿ ಒಂದು ಕಲಹ ಉಂಟಾಯಿತು. ಅದರ ಫಲವಾಗಿ ರಾಧೆ ಗೋಕುಲಕ್ಕೆ ಬರಬೇಕಾಯಿತು. ಈಗ ಅವಳು ವೃಷಭಾನು ಗೋಪನ ಮಗಳು. ಕಲಾವತಿ ಅವಳ ತಾಯಿ. ರಾಧೆ ಕೃಷ್ಣನ ಅರ್ಧಾಂಗದಿಂದ ಪ್ರಕಟಳಾದವಳು, ಪತಿಗೆ ಅನುರೂಪಳಾದ ಪರಮಸುಂದರಿ. ಗೋಲೋಕವಾಸಿ ಯಾಗಿದ್ದರೂ ಈಗ ಶ್ರೀಕೃಷ್ಣನ ಆಜ್ಞೆಯಿಂದ ಅಯೋನಿಜೆಯಾಗಿ ಭೂಮಿಯಲ್ಲಿ ಪ್ರಕಟಳಾಗಿದ್ದಾಳೆ. ಇವಳೇ ಮೂಲಪ್ರಕೃತಿ, ಸರ್ವೇಶ್ವರಿ. ಇವಳು ತಾಯಿಯ ಗರ್ಭವನ್ನು ಗಾಳಿಯಿಂದ ತುಂಬಿಸಿಟ್ಟು ಪ್ರಸವಕಾಲದಲ್ಲಿ ಗಾಳಿ ಹೊರಗೆ ಬರುವಾಗ ಸ್ವತಃ ಶಿಶುರೂಪ ತಳೆದಿದ್ದಳು. ಶುಕ್ಲಪಕ್ಷದ ಚಂದ್ರನಂತೆ ಅವಳು ಗೋಕುಲದಲ್ಲಿ

ಪ್ರವರ್ಧಮಾನಳಾಗಿದ್ದಾಳೆ. ಮೊದಲಿಗೆ ಅವಳು ಕೃಷ್ಣನೊಂದಿಗೆ ಒಂದೇ ಶರೀರರೂಪವಾಗಿದ್ದಳು. ಭೇದವೇ ಇರಲಿಲ್ಲ. ಬಳಿಕ ಒಂದು ಶರೀರ ಎರಡಾಗಿ ವಿಭಾಗ ಹೊಂದಿತು. ಅದರಿಂದ ಇವಳು ಸ್ತ್ರೀ ಅವನು ಪುರುಷ ಎನ್ನಬೇಕೆ? ಅಥವಾ ಅವನು ಸ್ತ್ರೀ ಇವಳು ಪುರುಷ ಎನ್ನಬೇಕೆ? ಇದಕ್ಕೆ ಸ್ಪಷ್ಟೀಕರಣ ಸಿಗಲಾರದು. ಎರಡೂ ರೂಪಗಳು ಸ್ವರೂಪ ಗುಣ ತೇಜಸ್ಸುಗಳ ದೃಷ್ಟಿಯಿಂದ ಸಮಾನವಾಗಿವೆ. ಪರಾಕ್ರಮ ಬುದ್ಧಿ ಜ್ಞಾನಸಂಪತ್ತುಗಳ ದೃಷ್ಟಿಯಿಂದಲೂ ಒಂದು ಕಡಿಮೆ ಇನ್ನೊಂದು ಹೆಚ್ಚು ಎನ್ನುವಂತಿಲ್ಲ. ಮೊದಲಿಗೆ ಭೂಮಿಗೆ ಬಂದವಳು ರಾಧೆಯಾದ್ದರಿಂದ ವಯಸ್ಸಿನಲ್ಲಿ ಅವಳು ಕೃಷ್ಣನಿಗಿಂತ ಹಿರಿಯಳೆನ್ನಬೇಕು. ಕೃಷ್ಣ ಸದಾ ರಾಧೆಯ ಧ್ಯಾನದಲ್ಲಿರುತ್ತಾನೆ. ರಾಧೆ ಕೃಷ್ಣನನ್ನೇ ಧ್ಯಾನಿಸುತ್ತಿರುತ್ತಾಳೆ. ರಾಧೆಗೆ ಪ್ರಾಣ ಕೃಷ್ಣ, ಕೃಷ್ಣನಿಗೆ ಪ್ರಾಣ ರಾಧೆ. ಕೃಷ್ಣ ಭೂಮಿಗೆ ಬಂದಿರುವುದೇ ರಾಧೆಯ ಸಲುವಾಗಿ. ಗೋಲೋಕದಲ್ಲಿ ಹರಿ ಹಾಗೆ ಪ್ರತಿಜ್ಞೆ ಮಾಡಿರುವುದರಿಂದ ಕಂಸನ ಭಯವನ್ನು ಒಂದು ನೆಪಮಾಡಿಕೊಂಡು ಕೃಷ್ಣ ಗೋಕುಲಕ್ಕೆ ಬಂದಿದ್ದಾನೆ. ಭಯಕ್ಕೂ ಸ್ವಾಮಿಯಾದ ಅವನಿಗೆ ಎಲ್ಲಿಯ ಭಯ?

ಸಾಮವೇದದಲ್ಲಿ 'ರಾಧಾ' ನಾಮ ನಿರ್ವಚನವಿದೆ. ಮೊದಲಿಗೆ ನಾರಾಯಣ ತನ್ನ ನಾಭಿಕಮಲದಲ್ಲಿ ಜನಿಸಿದ ಬ್ರಹ್ಮನಿಗೆ ಅದನ್ನು ಉಪದೇಶಿಸಿದ. ಬ್ರಹ್ಮ ಬ್ರಹ್ಮಲೋಕದಲ್ಲಿ ಶಿವನಿಗೆ ಉಪದೇಶಿಸಿದ. ಶಿವ ಕೈಲಾಸದಲ್ಲಿ ನನಗೆ ಉಪದೇಶಿದ. ದೇವತೆಗಳಿಗೂ ಅದು ದುರ್ಲಭ. ನಿನಗೆ ಅದನ್ನು ಉಪದೇಶಿಸುತ್ತೇನೆ. ಅದು ದೇವ ಅಸುರ ಮುನಿಗಳೆಲ್ಲರಿಗೂ ಅಭೀಷ್ಟವಾಗಿದೆ. ಮೋಕ್ಷದಾಯಕವಾಗಿದೆ.

'ರಾಧಾ' ನಾಮದಲ್ಲಿ ರೇಫ ಕೋಟಿಜನ್ಮಗಳ ಪಾಪವನ್ನು ಕಳೆಯುತ್ತದೆ. 'ಆ'ಕಾರ ಗರ್ಭವಾಸ ಮೃತ್ಯು ರೋಗಗಳನ್ನು ದೂರ ಮಾಡುತ್ತದೆ. 'ಧ'ಕಾರ ಆಯುಷ್ಯಹಾನಿಯನ್ನೂ 'ಆ'ಕಾರ ಭವಬಂಧನವನ್ನೂ ನಿವಾರಿಸುತ್ತದೆ. ಹೀಗೆ ರಾಧಾನಾಮದ ಶ್ರವಣ ಸ್ಮರಣ ಕೀರ್ತನಗಳಿಂದ ಸಕಲದೋಷಪರಿಹಾರ.

ರಾಧಾನಾಮದ ರೇಫ ಶ್ರೀಕೃಷ್ಣನ ಚರಣಾರವಿಂದಗಳಲ್ಲಿ ನಿಶ್ಚಲ ಭಕ್ತಿದಾಸ್ಯಗಳನ್ನು ನೀಡುತ್ತದೆ. 'ಆ'ಕಾರ ಆನಂದಸ್ವರೂಪನಾದ ಪರಮಾತ್ಮನ ಪ್ರಾಪ್ತಿಗೆ ಕಾರಣವಾಗುತ್ತದೆ. 'ಧ'ಕಾರ ಹರಿಯೊಂದಿಗೆ ಅನಂತಕಾಲದ ವರೆಗೆ ಸಹವಾಸ ಸುಖವನ್ನೂ ಸಾರೂಪ್ಯವನ್ನೂ ನೀಡುತ್ತದೆ. 'ಆ'ಕಾರ ತೇಜಸ್ಸು ಶಕ್ತಿಗಳನ್ನೂ ಸರ್ವಕಾಲದಲ್ಲಿ ಹರಿಸ್ಮೃತಿಯನ್ನೂ ಕೊಡುತ್ತದೆ. ಅದರಿಂದ ರಾಧಾನಾಮ ಶ್ರವಣ ಸ್ಮರಣ ಕೀರ್ತನಗಳಿಂದ ಮೋಹ ಪಾಪ ರೋಗ ಮೃತ್ಯು ಶೋಕ ಯಮಭಯಗಳೆಲ್ಲವೂ ಇಲ್ಲವಾಗುತ್ತವೆ.

ರಾಧಾಮಾಧವರ ನಾಮದ ಅರ್ಥವನ್ನು ನಾನು ಗುರುಮುಖದಿಂದ ಕೇಳಿದಂತೆ ಯಥಾಶಕ್ತಿ ಹೇಳಿದ್ದೇನೆ. ಪೂರ್ತಿ ಹೇಳಲು ನಾನು ಶಕ್ತನಲ್ಲ. ನಂದಗೋಪ, ಇಲ್ಲಿಯೇ ಸಮೀಪದ ವೃಂದಾವನದಲ್ಲಿ ರಾಧಾ ಮಾಧವರಿಗೆ ವಿವಾಹವಾಗಲಿದೆ. ಸಾಕ್ಷಾತ್ ಸೃಷ್ಟಿಕರ್ತನಾದ ಬ್ರಹ್ಮ ಪುರೋಹಿತನಾಗಿ ಬಂದು ಅಗ್ನಿದೇವನನ್ನು ಸಾಕ್ಷಿಯಾಗಿಟ್ಟುಕೊಂಡು ವಿವಾಹ ಕಾರ್ಯವನ್ನು ನಡೆಸುತ್ತಾನೆ.

ಶ್ರೀಕೃಷ್ಣ ಮುಂದೆ ತೋರಲಿರುವ ಬಾಲಲೀಲೆಗಳಲ್ಲಿ ಮುಖ್ಯವಾದವುಗಳನ್ನು ಈಗಲೆ ನಿನಗೆ ತಿಳಿಸುತ್ತೇನೆ. ಕುಬೇರಪುತ್ರನ ಉದ್ಧಾರ, ಗೋಪಿಯರ ಮನೆಗಳಲ್ಲಿ ಬೆಣ್ಣೆ ಕದ್ದು ತಿನ್ನುವುದು, ತಾಳವನದಲ್ಲಿ ತಾಳೆಹಣ್ಣು ತಿಂದು ಧೇನುಕಾಸುರನನ್ನು ಸಂಹರಿಸುವುದು, ಬಕ ಕೇಶಿ ಪ್ರಲಂಬರ ವಧ, ಬ್ರಾಹ್ಮಣಪತ್ನಿಯರ ಉದ್ಧಾರ. ಅವರು ನೀಡುವ ಅನ್ನ ಉಣ್ಣುವುದು. ಇಂದ್ರಯಾಗವನ್ನು ತಡೆಯುವುದು. ಇಂದ್ರನ ಕೋಪದಿಂದ ಗೋಕುಲವನ್ನು ಕಾಪಾಡುವುದು. ಗೋಪಿಯರ ವಸ್ತ್ರಾಪಹರಣ, ಅವರ ವ್ರತವನ್ನು ಪೂರ್ತಿಗೊಳಿಸುವುದು, ತಿರುಗಿ ಅವರಿಗೆ ವಸ್ತ್ರನೀಡಿ ಅವರ ಮನವನ್ನು ಅಪಹರಿಸಿ ಅವರನ್ನು ತನ್ನ ಅಧೀನರನ್ನಾಗಿ ಮಾಡಿಕೊಳ್ಳುವುದು, ಮುಂದೆ ಅತ್ಯಂತ ರಮಣೀಯವಾದ ರಾಸೋತ್ಸವ. ಶರತ್ಕಾಲದಲ್ಲಿಯೂ ವಸಂತದಲ್ಲಿಯೂ ಹುಣ್ಣಿಮೆ ಚಂದ್ರ ಉದಿಸಿದಾಗ ರಾಸಮಂಡಲದಲ್ಲಿ ಗೋಪಿಯರಿಗೆ ನೂತನ ಪ್ರೇಮಮಿಲನದ ಸುಖ ನೀಡುವುದು, ಅವರ ಮನೋರಥವನ್ನು ಪೂರೈಸುವುದು, ಜಲವಿಹಾರ. ಮುಂದೆ ಶ್ರೀದಾಮನ ಶಾಪದ ಪ್ರಯುಕ್ತ ಗೋಪಗೋಪಿಯರಿಗೂ ರಾಧೆಗೂ ನೂರು ವರ್ಷಕಾಲ ಕೃಷ್ಣನ ವಿಯೋಗ. ಕೃಷ್ಣ ಮಧುರೆಗೆ ಹೊರಟುಹೋಗುತ್ತಾನೆ. ಅದರಿಂದ ಗೋಪಿಯರಿಗೆ ಶೋಕ. ಕೃಷ್ಣ ಅವರಿಗೆ ಸಾಂತ್ವನ ಹೇಳಿ ಅಧ್ಯಾತ್ಮ ಉಪದೇಶಿಸುತ್ತಾನೆ. ಮುಂದೆ ರಥಾರೂಢನಾಗಿ ಹೊರಟು ಮಾರ್ಗಮಧ್ಯದಲ್ಲಿ ಅಕ್ರೂರನಿಗೆ ಯಮುನಾ ಜಲದಲ್ಲಿ ತನ್ನ ಸ್ವರೂಪದರ್ಶನ ನೀಡಿ ಜ್ಞಾನದಾನ ಮಾಡುವುದು. ಸಾಯಂಕಾಲದಲ್ಲಿ ಮಥುರೆಯನ್ನು ಪ್ರವೇಶಿಸಿ ನಗರದರ್ಶನ ಮಾಡುವುದು. ಹೂವಾಡಿಗ ಅಗಸ ಕುಬ್ಜೆಯರಿಗೆ ಮುಕ್ತಿ ನೀಡುವುದು. ಶಿವಧನುಸ್ಸನ್ನು ಮುರಿದು ಕುವಲಯಾಪೀಡ ಮಲ್ಲರನ್ನು ವಧಿಸಿ ಕಂಸನನ್ನು ಧ್ವಂಸಮಾಡಿ ಮಾತಾಪಿತರನ್ನು ಬಂಧನದಿಂದ ಬಿಡಿಸುವುದು. ನಿನ್ನನ್ನೂ ಗೋಪರನ್ನೂ ಸಂತೈಸಿ ಗೋಕುಲಕ್ಕೆ ಕಳಿಸುವುದು. ಉಗ್ರಸೇನ ಪಟ್ಟಾಭಿಷೇಕ, ಕಂಸನ ಬಂಧುಗಳಿಗೆ ಜ್ಞಾನೋಪದೇಶ ನೀಡಿ ಸಂತೈಸುವುದು. ತನಗೂ ಬಲರಾಮನಿಗೂ ಉಪನಯನ ಸಂಸ್ಕಾರ ಮಾಡಿಸಿಕೊಂಡು ಸಾಂದೀಪನಿಯ ಬಳಿ ವಿದ್ಯಾಭ್ಯಾಸ ಮಾಡುವುದು. ಸತ್ತಿದ್ದ ಗುರುಪುತ್ರನನ್ನು ತಿರುಗಿ ಬದುಕಿಸಿಕೊಡುವುದು, ಜರಾಸಂಧನ ಸೈನ್ಯವನ್ನು ಪರಾಭವಗೊಳಿಸುವುದು. ಕಾಲಯವನನ ಸಂಹಾರ, ದ್ವಾರಕಾ ನಿರ್ಮಾಣ, ಮುಚುಕುಂದನ ಉದ್ಧಾರ, ಯಾದವರೊಂದಿಗೆ ದ್ವಾರಕಾಪ್ರವೇಶ. ಅಲ್ಲಿ ಸ್ತ್ರೀಯರೊಡನೆ ವಿಹಾರ. ಅವರಿಗೆ ಪುತ್ರಪೌತ್ರಾದಿ ಸೌಭಾಗ್ಯ ವೃದ್ಧಿ, ಸ್ಯಮಂತಕ ಮಣಿ ಸಂಬಂಧವಾಗಿ ಬಂದ ಅಪವಾದ ಪರಿಹಾರ. ಪಾಂಡವರಿಗೆ ಸಹಾಯ, ಭೂಭಾರಹರಣ, ಯುಧಿಷ್ಠಿರನಿಂದ ರಾಜಸೂಯಯಾಗ ಮಾಡಿಸುವುದು. ಪಾರಿಜಾತ ಹರಣ, ಇಂದ್ರನ ದರ್ಪವನ್ನು ಮುರಿಯುವುದು, ಸತ್ಯಭಾಮೆಯ ವ್ರತಸಮಾಪ್ತಿ, ಬಾಣಾಸುರನ ಭುಜಗಳನ್ನು ಕಡಿಯುವುದು, ಶಿವನ ಸೈನ್ಯವನ್ನು ಮರ್ದಿಸುವುದು, ಶಿವನನ್ನು ಜೃಂಭಣಾಸ್ತ್ರದಿಂದ ಬಂಧಿಸುವುದು. ಬಾಣಪುತ್ರಿ ಉಷೆಯನ್ನು ಅಪಹರಿಸುವುದು. ಅನಿರುದ್ಧನನ್ನು ಬಾಣಾಸುರನ ಬಂಧನದಿಂದ ಬಿಡಿಸುವುದು. ವಾರಣಾಸಿಯನ್ನು ಸುಡುವುದು, ಬ್ರಾಹ್ಮಣನ ದಾರಿದ್ರ್ಯವನ್ನು ಪರಿಹರಿಸುವುದು, ಒಬ್ಬ ಬ್ರಾಹ್ಮಣನ ಮೃತಬಾಲಕರನ್ನು ತಿರುಗಿ ತಂದುಕೊಡುವುದು. ದುಷ್ಟದಮನ. ತೀರ್ಥಯಾತ್ರೆಯ

ಪ್ರಸಂಗದಲ್ಲಿ ನಿನ್ನನ್ನೂ ಗೋಕುಲವಾಸಿಗಳನ್ನೂ ಭೆಟ್ಟಿಮಾಡುವುದು, ರಾಧೆಯೊಂದಿಗೆ ಪುನಃ ಗೋಕುಲಕ್ಕೆ ಬರುವುದು. ತನ್ನ ನಾರಾಯಣಾಂಶವನ್ನು ದ್ವಾರಕೆಗೆ ಕಳಿಸಿ ಗೋಕುಲದಲ್ಲಿ ರಾಧೆಯೊಂದಿಗೆ ಆವಶ್ಯಕಕಾರ್ಯ ಪೂರ್ತಿಮಾಡಿ ಗೋಕುಲವಾಸಿಗಳೊಂದಿಗೆ ರಾಧೆಯೊಂದಿಗೆ ಗೋಲೋಕಧಾಮಕ್ಕೆ ತೆರಳುವುದು, ನಾರಾಯಣ ನಿನ್ನನ್ನು ವೈಕುಂಠಕ್ಕೆ ಕರೆದುಕೊಂಡು ಹೋಗುವುದು, ನರನಾರಾಯಣರು ಧರ್ಮನ ಲೋಕಕ್ಕೆ ತೆರಳುವುದು, ಶ್ವೇತದ್ವೀಪವಾಸಿ ವಿಷ್ಣು ಕ್ಷೀರಸಾಗರಕ್ಕೆ ತೆರಳುವುದು ಹೀಗೆ ಭವಿಷ್ಯದಲ್ಲಿ ನಡೆಯುವ ಕೃಷ್ಣನ ಎಲ್ಲ ಲೀಲೆಗಳನ್ನೂ ಸಂಕ್ಷೇಪವಾಗಿ ತಿಳಿಸಿದ್ದೇನೆ. ಈಗ ನಾನು ನಿಮ್ಮಲ್ಲಿಗೆ ಬಂದ ಉದ್ದೇಶವನ್ನು ತಿಳಿಸುತ್ತೇನೆ. ಕೇಳು. ಮಾಘ ಶುಕ್ಲ ಚತುರ್ದಶಿ ಗುರುವಾರ ರೇವತೀ ನಕ್ಷತ್ರದಲ್ಲಿ ನಿನ್ನ ಮಕ್ಕಳಿಗೆ ನಾಮಕರಣಸಂಸ್ಕಾರ ಮಾಡು. ಮೀನದಲ್ಲಿ ಚಂದ್ರ, ಅವನ ಮೇಲೆ ಲಗ್ನಾಧಿಪತಿಯ ದೃಷ್ಟಿ ಇದೆ. ಉತ್ತಮವಾದ ವಣಿಜ ನಾಮಕ ಕರಣ. ಎಲ್ಲ ಉತ್ತಮ ಯೋಗಗಳಿವೆ. ಅಂದೇ ಶುಭದಿನ.'' ಹೀಗೆ ಹೇಳಿ ಗರ್ಗಮುನಿ ಅಂತಃಪುರದಿಂದ ಹೊರಗೆ ನಡೆದ. ಹೊರಗೆ ಸಿಂಹಾಸನದಲ್ಲಿ ಕುಳಿತ. ನಂದಯಶೋದೆಯರಿಗೆ ಬಹಳ ಆನಂದವಾಯಿತು. ಅವರು ನಾಮಕರಣ ಸಮಾರಂಭಕ್ಕೆ ಸಿದ್ಧತೆ ಮಾಡತೊಡಗಿದರು.

ಶಿಷ್ಯರೊಡಗೂಡಿ ಗರ್ಗಮುನಿ ಬಂದನೆಂದು ಕೇಳಿ ಅವನ ದರ್ಶನಕ್ಕಾಗಿ ಗೋಪಗೋಪಿಯರೆಲ್ಲರೂ ನಂದನ ಅರಮನೆಗೆ ಬಂದರು. ನಡುಹಗಲಿನ ಸೂರ್ಯನಂತೆ ಬ್ರಹ್ಮತೇಜದಿಂದ ಹೊಳೆಯುವ ಮುನಿಯನ್ನು ಕಂಡರು. ಶಿಷ್ಯರ ಪ್ರಶ್ನೆಗಳಿಗೆಲ್ಲ ಸಮಾಧಾನ ನೀಡುತ್ತಾನೆ ಮುನಿ. ಜೊತೆಗೆ, ಜ್ಞಾನದೃಷ್ಟಿಯಿಂದ ಭೂತ ಭವಿಷ್ಯ ವರ್ತಮಾನಗಳನ್ನು ನೋಡುತ್ತಲೂ ಇದ್ದಾನೆ. ಅರಮನೆಯ ಪ್ರತಿಯೊಂದು ಪದಾರ್ಥವನ್ನೂ ನಗುಮೊಗದಿಂದ ಈಕ್ಷಿಸುತ್ತಿದ್ದಾನೆ. ಮಂತ್ರಪೂರ್ವಕ ಧ್ಯಾನದಲ್ಲಿ ಅವನು ಹೃದಯದಲ್ಲಿ ಕಾಣುತ್ತಿದ್ದ ಪರಮಾತ್ಮರೂಪವೆ ಎದುರಿನಲ್ಲಿ ಶಿಶುರೂಪದಿಂದ ಯಶೋದೆಯ ಮಡಿಲಲ್ಲಿ ನಗುವುದನ್ನು ಕಾಣುತ್ತಾನೆ. ಮೈ ರೋಮಾಂಚಗೊಂಡು ಕಣ್ಣುಗಳಲ್ಲಿ ಆನಂದಬಾಷ್ಪ ಸುರಿಸುತ್ತ ಆನಂದಸಾಗರದಲ್ಲಿ ಮುಳುಗುತ್ತಾನೆ. ಅಂತರಂಗದಲ್ಲಿಯೆ ಮಗುವಿಗೆ ಮಾನಸಪೂಜೆ ಪ್ರಣಾಮಗಳನ್ನು ಅರ್ಪಿಸುತ್ತಾನೆ. ತಲೆಬಾಗಿ ತನಗೆ ನಮಿಸುವ ಗೋಪಗೋಪಿಯರಿಗೆ ಆಶೀರ್ವಾದವನ್ನೂ ಮಾಡುತ್ತಾನೆ.

ನಂದಗೋಪ ತನ್ನ ಬಂಧುಗಳೆಲ್ಲರಿಗೂ ಆಮಂತ್ರಣಪತ್ರಿಕೆಗಳನ್ನು ಕಳಿಸಿದ ಮತ್ತು ಸಮಾರಂಭದ ಸಿದ್ಧತೆ ಏರ್ಪಡಿಸಿದ. ಹಾಲು ಮೊಸರು ತುಪ್ಪ ಜೇನು ಬೆಲ್ಲ ಎಣ್ಣೆ ಬೆಣ್ಣೆ ಮಜ್ಜಿಗೆ ಪಾನಕ ಅಕ್ಕಿ ಬೇಳೆ ಅವಲಕ್ಕಿ ಮಾಗಿದ ಹಣ್ಣುಗಳು ಲಡ್ಡು ಮೋದಕ ತಾಂಬೂಲ ಪರಿಮಳದ್ರವ್ಯಗಳು ನಾನಾ ಬಗೆಯ ರತ್ನಗಳು ಚಿನ್ನ ಮುತ್ತು ಹವಳ ವಸ್ತ್ರಾಭರಣಗಳು ಇವೆಲ್ಲವನ್ನೂ ನಂದ ಸಿದ್ಧಪಡಿಸಿದ. ಸಭಾಂಗಣವನ್ನು ಬಾಳೆಕಂಬಗಳಿಂದ ತಳಿರು ತೋರಣಗಳಿಂದ ತೆಳುವಾದ ಬಟ್ಟೆಗಳಿಂದ ಅಲಂಕರಿಸಿದ. ಮಂಗಳಕಲಶಗಳು ಹಣ್ಣು ಹಂಪಲುಗಳು ಚಂದನ ಅಗುರು ಕಸ್ತೂರಿ ಪುಷ್ಪಮಾಲೆಗಳು ಉತ್ತಮ ವಸ್ತ್ರರಾಶಿಗಳು ಮಧುಪರ್ಕದ ಗೋವುಗಳು, ಡಕ್ಕೆ ದುಂದುಬಿ ಪಟಹ ಮುರಜ ಮೃದಂಗಗಳು ತಾಳವಾದ್ಯಗಳು ಇವುಗಳನ್ನೆಲ್ಲ ಸಿದ್ಧಪಡಿಸಿದ. ವಿದ್ಯಾಧರಿಯರ ನೃತ್ಯ ಗಂಧರ್ವರ ಗಾಯನಗಳನ್ನೂ ಏರ್ಪಡಿಸಿದ.

ಅಷ್ಟರಲ್ಲಿ ವಾರ್ತಾವಾಹಕ ಬಂದು ತಿಳಿಸಿದ, "ಬಂಧುಗಳಾದ ಗೋಪ ಗೋಪಿಯರೆಲ್ಲರೂ ಬಂದಿದ್ದಾರೆ. ಅಶ್ವಗಜರಥಗಳಲ್ಲಿ ರತ್ನಾಭರಣ ಭೂಷಿತರಾದ ರಾಜಕುಮಾರರು ಬಂದು ಇಳಿದಿದ್ದಾರೆ. ಗಿರಿಭಾನು ಸಪರಿವಾರನಾಗಿ ಬಂದಿದ್ದಾನೆ. ಋಷಿಮುನಿಗಳೂ ಸ್ತುತಿಪಾಠಕರೂ ಬಂದಿದ್ದಾರೆ."

ನಂದಗೋಪ ಎಲ್ಲರನ್ನೂ ಎದುರುಗೊಂಡು ಸಭಾಂಗಣದಲ್ಲಿ ಕುಳ್ಳಿರಿಸಿ ಸತ್ಕಾರ ಮಾಡಿದ. ಋಷಿಮುನಿಗಳಿಗೂ ತಲೆಬಾಗಿ ನಮಿಸಿ ಪಾದ್ಯಾದಿಗಳನ್ನಿತ್ತು ಸತ್ಕರಿಸಿದ. ನಂದಗೋಕುಲವಿಡೀ ಧನಧಾನ್ಯಾದಿ ವಸ್ತುಗಳಿಂದಲೂ ಬಂಧುಬಾಂಧವರು ಮುನಿಜನರುಗಳಿಂದಲೂ ತುಂಬಿಹೋಯಿತು. ಎಲ್ಲೆಡೆ ಗುಜಗುಜು ಕೋಲಾಹಲ. ಒಬ್ಬ ನಾಡುವ ಮಾತನ್ನು ಇನ್ನೊಬ್ಬ ಕೇಳಿಸಿಕೊಳ್ಳಲಾರ. ಹಾಗಾಯಿತು. ಕೃಷ್ಣನ ಪ್ರೀತಿಗಾಗಿ ಕುಬೇರ ಮೂರು ಮುಹೂರ್ತಗಳ ಕಾಲ ಸ್ವರ್ಣವೃಷ್ಟಿಯನ್ನು ಮಾಡಿದ. ಗೋಕುಲ ಐಶ್ವರ್ಯ ಸಮೃದ್ಧಿಯಿಂದ ತುಂಬಿತುಳುಕಿತು. ಇಷ್ಟು ದೊಡ್ಡ ಸಮಾರಂಭವನ್ನು ನಿರ್ವಹಿಸುವುದು ನಿನ್ನಿಂದಾಗದೆಂದು ವಿನೋದಕ್ಕಾಗಿ ಗೇಲಿಮಾಡಿದ್ದ ಬಂಧುಗಳು ಈಸಂಪತ್ತನ್ನು ಕಂಡು ಸೋತು ತಲೆ ತಗ್ಗಿಸಿದರು.

ನಂದಗೋಪ ಬೆಳಗಿನ ಆಹ್ನಿಕಗಳನ್ನು ಮುಗಿಸಿ ಮಡಿಯುಟ್ಟು ಚಂದನ ಅಗುರು ಕಸ್ತೂರಿ ಕುಂಕುಮಗಳಿಂದ ಅಲಂಕರಿಸಿಕೊಂಡು ಕಾಲು ತೊಳೆದುಕೊಂಡು ಗರ್ಗಮುನಿಯ ಮತ್ತು ಬೇರೆ ಮುನಿಗಳ ಅನುಜ್ಞೆ ಪಡೆದು ಬಂಗಾರದ ಪೀಠದಲ್ಲಿ ಕುಳಿತ. ವಿಷ್ಣುಸ್ಮರಣಪೂರ್ವಕ ಆಚಮನ ಮಾಡಿ ಸ್ವಸ್ತಿವಾಚನ ಮಾಡಿಸಿ ಮಗುವಿಗೆ ಅನ್ನಪ್ರಾಶನ ಮಾಡಿಸಿದ. ಶುಭಮುಹೂರ್ತದಲ್ಲಿ 'ಕೃಷ್ಣ' ಎಂದು ಮಂಗಲ ನಾಮಕರಣ ಮಾಡಿದ. ಮಂಗಲವಾದ್ಯ ಘೋಷ ಮಾಡಿಸಿ ಬ್ರಾಹ್ಮಣರಿಗೆ ಸ್ವರ್ಣಾದಿ ನಾನಾ ಧನವನ್ನೂ ಭಕ್ಷ್ಯದ್ರವ್ಯವನ್ನೂ ದಾನ ಮಾಡಿದ. ಸ್ತುತಿಪಾಠಕರಿಗೂ ಭಿಕ್ಷುಕರಿಗೂ ವಿಪುಲ ಸ್ವರ್ಣದಾನ ಮಾಡಿದ. ಅವರೆಲ್ಲರೂ ಭಾರವಾದ ದಾನದ್ರವ್ಯಗಳನ್ನು ಹೊರಲು ಅಶಕ್ತರಾದರು. ಎಲ್ಲರಿಗೂ ಮಿಷ್ಟಾನ್ನ ಭೋಜನ ಮಾಡಿಸಿದ. ಬಡಿಸಿರಿ ಬಡಿಸಿರೆಂದು ಉಣ್ಣಿರಿ ಉಣ್ಣಿರೆಂದು ಶಬ್ದಗಳೇ ಎಲ್ಲೆಡೆ ಕೇಳಿಬರುತ್ತಿದ್ದವು. ಗರ್ಗಮುನಿಗೆ ನಂದ ವಿಶ್ವಕರ್ಮನಿರ್ಮಿತವಾದ ಬಂಗಾರದ ಪಾತ್ರೆಗಳನ್ನೂ ವಸ್ತ್ರಾಭರಣಗಳನ್ನೂ ಶ್ರೇಷ್ಠರತ್ನಗಳನ್ನೂ ನೀಡಿದ. ಶಿಷ್ಯರಿಗೂ ಸ್ವರ್ಣಾಭರಣಗಳನ್ನು ನೀಡಿದ. ಬೇರೆ ಬ್ರಾಹ್ಮಣರಿಗೂ ಯಥೇಚ್ಛ ದಾನಗಳನ್ನು ನೀಡಿದ.

ಗರ್ಗಮುನಿ ಬಾಲಕೃಷ್ಣನನ್ನು ಎತ್ತಿಕೊಂಡು ಪರಮಭಕ್ತಿಯಿಂದ ನಮಿಸಿ ಕಣ್ಣಲ್ಲಿ ನೀರು ತುಂಬಿಕೊಂಡು ಮೈ ಎಲ್ಲ ರೋಮಾಂಚಗೊಂಡು ಭಕ್ತಿಯಿಂದ ತಲೆಬಾಗಿ ಕೈಮುಗಿದು ನುಡಿದ.

**ಗರ್ಗಮುನಿ:-** ಹೇ ಕೃಷ್ಣ, ಜಗನ್ನಾಥ, ಪ್ರಸನ್ನನಾಗು. ನನಗೆ ನಿನ್ನ ದಾಸ್ಯವನ್ನು ನೀಡು. ನಿನ್ನ ತಂದೆ ನನಗೆ ಧನವನ್ನು ನೀಡಿದ್ದಾನೆ. ನನಗೆ ಅದರಿಂದೇನು ಪ್ರಯೋಜನ? ನನಗೆ ನಿನ್ನಲ್ಲಿ ನಿಶ್ಚಲವಾದ ಭಕ್ತಿ ನೀಡು. ಅಣಿಮಾದಿ ಯೋಗ ಸಿದ್ಧಿಗಳಲ್ಲಿಯಾಗಲಿ ಮುಕ್ತಿ ಅಮರತ್ವಗಳಲ್ಲಾಗಲಿ ನನಗೆ ಆಸೆ ಇಲ್ಲ. ಇಂದ್ರನಾಗಬೇಕು

ಮನುವಾಗಬೇಕು ಸ್ವರ್ಗಪಡೆಯಬೇಕೆಂದೂ ನಾನು ಆಸೆಪಡುವುದಿಲ್ಲ. ನಿನ್ನ ಪಾದಸೇವೆ ನನಗೆ ಬೇಕು. ನಿನ್ನ ಪಾದಸೇವೆ ಇಲ್ಲವಾದರೆ ಸಾಲೋಕ್ಯ ಸಾರ್ಷ್ಟಿ ಸಾರೂಪ್ಯ ಸಾಮೀಪ್ಯ ಸಾಯುಜ್ಯಗಳೂ ನನಗೆ ಬೇಡ. ಗೋಲೋಕವಾಸ ಪಾತಾಳವಾಸಗಳೂ ಬೇಡ. ನಿನ್ನ ಪಾದಕಮಲಗಳ ಸ್ಮರಣೆಯೇ ಸಾಕು. ಕೋಟಿಜನ್ಮಗಳ ಪುಣ್ಯದಿಂದ ನಿನ್ನ ಮಂತ್ರವನ್ನು ಉಪದೇಶಪಡೆದು ಸರ್ವಜ್ಞ ಸರ್ವದರ್ಶಿಯಾಗಿದ್ದೇನೆ. ಆದರೆ ಅದೂ ನನಗೆ ಬೇಡ. ನೀನು ನನಗೆ ಅಭಯ ನೀಡಿ ರಕ್ಷಣೆ ನೀಡು. ಆಗ ಮೃತ್ಯು ನನ್ನನ್ನೇನು ಮಾಡೀತು? ಆ ಶಿವ, ಬ್ರಹ್ಮ, ಧರ್ಮ, ಶೇಷ ಎಲ್ಲರೂ ನಿನ್ನ ಪಾದಕಮಲಸೇವೆಯಿಂದ ಸೃಷ್ಟಿ ಸಂಹಾರ ಪಾಲನಾದಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಎಲ್ಲರಿಗೂ ಎಲ್ಲ ಸಂಪತ್ತು ನೀಡುವ ಲಕ್ಷ್ಮಿ ನಿನ್ನ ಪಾದಕಮಲವನ್ನು ಕೇಶಪಾಶದಿಂದ ಒರೆಸುವಳು. ಮೂಲಕಾರಣಳಾದ ಪ್ರಕೃತಿ ನಿನ್ನ ಪಾದಕಮಲ ಸ್ಮರಣ ತತ್ಪರಳಾಗಿದ್ದಾಳೆ. ಪಾರ್ವತಿ ನಿನ್ನ ಪಾದಸೇವೆ ಮಾಡಿದ ಪುಣ್ಯದಿಂದ ಶಿವನನ್ನು ಪತಿಯಾಗಿ ಪಡೆದಳು. ವಿದ್ಯಾಧಿದೇವತೆ ಸರಸ್ವತಿ ನಿನ್ನ ಪಾದ ಸೇವೆಯಿಂದಲೆ ಸರ್ವರಿಗೂ ಪೂಜ್ಯಳಾದಳು. ವೇದಜನನಿ ಸಾವಿತ್ರಿ ನಿನ್ನ ಪಾದಕಮಲ ಸೇವೆಯಿಂದ ಬ್ರಹ್ಮನಿಗೂ ಬ್ರಾಹ್ಮಣರಿಗೂ ಗತಿ ಎನಿಸಿದ್ದಾಳೆ. ಭೂಮಿ ನಿನ್ನ ಪಾದಸೇವೆಯಿಂದಲೇ ಎಲ್ಲ ಸಸ್ಯಗಳ ಉತ್ಪತ್ತಿ ಕಾರಣಳಾಗಿದ್ದಾಳೆ. ನಿನ್ನ ಅಂಶ ಸಂಭೂತಳಾದ ರಾಧೆ ನಿನಗೆ ಸಮಾನಳಾಗಿದ್ದು ನಿನ್ನೆದೆಯಲ್ಲಿದ್ದೂ ನಿನ್ನ ಪಾದಸೇವೆ ಮಾಡುತ್ತಾಳೆ ಎಂದ ಮೇಲೆ ಉಳಿದವರ ಪಾಡೇನು? ಬ್ರಹ್ಮಾದಿ ದೇವತೆಗಳನ್ನು ಹೇಗೋ ಹಾಗೇ ನನ್ನನ್ನೂ ಕೃಪೆಯಿಂದ ಕಾಪಾಡು. ನಾನು ಮನೆಗೆ ಹೋಗಲಾರೆ, ನಿನ್ನ ಧನವನ್ನು ಒಯ್ಯಲಾರೆ. ನಿನ್ನ ಸೇವಕನನ್ನಾಗಿ ಮಾಡಿ ನನ್ನನ್ನು ಕಾಪಾಡು'' ಎಂದು ಸ್ತುತಿಸುತ್ತ ಗರ್ಗಮುನಿ ಕೃಷ್ಣನ ಪಾದಗಳಲ್ಲಿ ಬಿದ್ದು ಕಣ್ಣೀರು ಸುರಿಸಿದ. ಕೃಷ್ಣ ನಕ್ಕು ''ನನ್ನಲ್ಲಿ ನಿನಗೆ ಭಕ್ತಿ ಉಂಟಾಗಲಿ'' ಎಂದು ವರವಿತ್ತ. ಗರ್ಗಮುನಿ ಮಾಡಿದ ಈ ಸ್ತೋತ್ರವನ್ನು ಮೂರು ಹೊತ್ತು ಪಠಿಸುವವನು ಹರಿಯಲ್ಲಿ ದೃಢಭಕ್ತಿಯನ್ನೂ ಸ್ಮೃತಿಯನ್ನೂ ಪಡೆಯುತ್ತಾನೆ. ಜನನ ಮರಣ ಜರೆ ರೋಗ ಶೋಕ ಮೋಹ ಮುಂತಾದ ಸಂಕಟಗಳು ದೂರವಾಗುತ್ತವೆ. ಹರಿಪಾದ ಸೇವಾಸಕ್ತನಾಗಿ ಆತ ಹರಿಯೊಡನೆ ವಾಸಮಾಡುತ್ತಾನೆ. ಎಂದೂ ಅವನಿಗೆ ಹರಿಯ ವಿಯೋಗವಾಗದು.

**ನಾರಾಯಣ:-** ಗರ್ಗಮುನಿ ಕೃಷ್ಣನ ಸ್ತೋತ್ರಮಾಡಿ ಅವನನ್ನು ನಂದನ ಕೈಗಿತ್ತು ''ನಾನು ಮನೆಗೆ ಹೋಗಲು ಅನುಜ್ಞೆ ನೀಡು. ಇದೆಂಥ ವಿಚಿತ್ರ! ಈ ಸಂಸಾರ ಮೋಹಜಾಲದಿಂದ ಆವೃತವಾಗಿದೆ. ಸಮುದ್ರದ ನೀರಲ್ಲಿ ನೊರೆಗುಳ್ಳೆಗಳಂತೆ ಇಲ್ಲಿಯೂ ಸಂಯೋಗ ವಿಯೋಗಗಳ ಅನುಭವವಾಗುತ್ತಲೆ ಇರುತ್ತದೆ'' ಎಂದನು. ಮುನಿಯ ಮಾತನ್ನು ಕೇಳಿ ನಂದನಿಗೆ ದುಃಖವಾಯಿತು. ಸಜ್ಜನರಿಗೆ ಸಜ್ಜನರ ವಿಯೋಗ ಮರಣಕ್ಕಿಂತ ಹೆಚ್ಚು ದುಃಖದಾಯಕವಾಗುತ್ತದೆ. ಮುನಿ ಹೊರಟು ನಿಂತಾಗ ನಂದ ಮೊದಲಾದ ಗೋಪಗೋಪಿಯರೆಲ್ಲರೂ ಕಣ್ಣೀರು ಸುರಿಸುತ್ತ ಅತ್ಯಂತ ಪ್ರೀತಿಪೂರ್ವಕ ವಿನೀತಭಾವದಿಂದ ನಮಿಸಿದರು. ಮುನಿ ಎಲ್ಲರಿಗೂ ಹರಸಿ ಆನಂದದಿಂದ ಮಥುರೆಗೆ ಹೊರಟುಹೋದ. ಋಷಿಮುನಿಗಳೂ ಪ್ರಿಯ ಬಂಧುವರ್ಗದವರೂ ಧನಸಂಪನ್ನರಾಗಿ ಸಂತೋಷದಿಂದ ತಮ್ಮ ಮನೆಗಳಿಗೆ ಹಿಂತಿರುಗಿದರು. ಸಿಹಿತಿಂಡಿಗಳು, ವಸ್ತ್ರಾಭರಣಗಳು,

**ಅಷ್ಟರಲ್ಲಿ ವಾರ್ತಾವಾಹಕ ಬಂದು ತಿಳಿಸಿದ, ''ಬಂಧುಗಳಾದ ಗೋಪ ಗೋಪಿಯರೆಲ್ಲರೂ ಬಂದಿದ್ದಾರೆ. ಅಶ್ವಗಜರಥಗಳಲ್ಲಿ ರತ್ನಾಭರಣ ಭೂಷಿತರಾದ ರಾಜಕುಮಾರರು ಬಂದು ಇಳಿದಿದ್ದಾರೆ. ಗಿರಿಭಾನು ಸಪರಿವಾರನಾಗಿ ಬಂದಿದ್ದಾನೆ. ಋಷಿಮುನಿಗಳೂ ಸ್ತುತಿಪಾಠಕರೂ ಬಂದಿದ್ದಾರೆ.''**

ನಂದಗೋಪ ಎಲ್ಲರನ್ನೂ ಎದುರುಗೊಂಡು ಸಭಾಂಗಣದಲ್ಲಿ ಕುಳ್ಳಿರಿಸಿ ಸತ್ಕಾರ ಮಾಡಿದ. ಋಷಿಮುನಿಗಳಿಗೂ ತಲೆಬಾಗಿ ನಮಿಸಿ ಪಾದ್ಯಾದಿಗಳನ್ನಿತ್ತು ಸತ್ಕರಿಸಿದ. ನಂದಗೋಕುಲವಿಡೀ ಧನಧಾನ್ಯಾದಿ ವಸ್ತುಗಳಿಂದಲೂ ಬಂಧುಬಾಂಧವರು ಮುನಿಜನರುಗಳಿಂದಲೂ ತುಂಬಿಹೋಯಿತು. ಎಲ್ಲೆಡೆ ಗುಜಗುಜು ಕೋಲಾಹಲ. ಒಬ್ಬ ನಾಡುವ ಮಾತನ್ನು ಇನ್ನೊಬ್ಬ ಕೇಳಿಸಿಕೊಳ್ಳಲಾರ. ಹಾಗಾಯಿತು. ಕೃಷ್ಣನ ಪ್ರೀತಿಗಾಗಿ ಕುಬೇರ ಮೂರು ಮುಹೂರ್ತಗಳ ಕಾಲ ಸ್ವರ್ಣವೃಷ್ಟಿಯನ್ನು ಮಾಡಿದ. ಗೋಕುಲ ಐಶ್ವರ್ಯ ಸಮೃದ್ಧಿಯಿಂದ ತುಂಬಿತುಳುಕಿತು. ಇಷ್ಟು ದೊಡ್ಡ ಸಮಾರಂಭವನ್ನು ನಿರ್ವಹಿಸುವುದು ನಿನ್ನಿಂದಾಗದೆಂದು ವಿನೋದಕ್ಕಾಗಿ ಗೇಲಿಮಾಡಿದ್ದ ಬಂಧುಗಳು ಈಸಂಪತ್ತನ್ನು ಕಂಡು ಸೋತು ತಲೆ ತಗ್ಗಿಸಿದರು.

ನಂದಗೋಪ ಬೆಳಗಿನ ಆಹ್ನಿಕಗಳನ್ನು ಮುಗಿಸಿ ಮಡಿಯುಟ್ಟು ಚಂದನ ಅಗುರು ಕಸ್ತೂರಿ ಕುಂಕುಮಗಳಿಂದ ಅಲಂಕರಿಸಿಕೊಂಡು ಕಾಲು ತೊಳೆದುಕೊಂಡು ಗರ್ಗಮುನಿಯ ಮತ್ತು ಬೇರೆ ಮುನಿಗಳ ಅನುಜ್ಞೆ ಪಡೆದು ಬಂಗಾರದ ಪೀಠದಲ್ಲಿ ಕುಳಿತ. ವಿಷ್ಣುಸ್ಮರಣಪೂರ್ವಕ ಆಚಮನ ಮಾಡಿ ಸ್ವಸ್ತಿವಾಚನ ಮಾಡಿಸಿ ಮಗುವಿಗೆ ಅನ್ನಪ್ರಾಶನ ಮಾಡಿಸಿದ. ಶುಭಮುಹೂರ್ತದಲ್ಲಿ 'ಕೃಷ್ಣ' ಎಂದು ಮಂಗಲ ನಾಮಕರಣ ಮಾಡಿದ. ಮಂಗಲವಾದ್ಯ ಘೋಷ ಮಾಡಿಸಿ ಬ್ರಾಹ್ಮಣರಿಗೆ ಸ್ವರ್ಣಾದಿ ನಾನಾ ಧನವನ್ನೂ ಭಕ್ಷ್ಯದ್ರವ್ಯವನ್ನೂ ದಾನ ಮಾಡಿದ. ಸ್ತುತಿಪಾಠಕರಿಗೂ ಭಿಕ್ಷುಕರಿಗೂ ವಿಪುಲ ಸ್ವರ್ಣದಾನ ಮಾಡಿದ. ಅವರೆಲ್ಲರೂ ಭಾರವಾದ ದಾನದ್ರವ್ಯಗಳನ್ನು ಹೊರಲು ಅಶಕ್ತರಾದರು. ಎಲ್ಲರಿಗೂ ಮಿಷ್ಟಾನ್ನ ಭೋಜನ ಮಾಡಿಸಿದ. ಬಡಿಸಿರಿ ಬಡಿಸಿರೆಂದು ಉಣ್ಣಿರಿ ಉಣ್ಣಿರೆಂದು ಶಬ್ದಗಳೇ ಎಲ್ಲೆಡೆ ಕೇಳಿಬರುತ್ತಿದ್ದವು. ಗರ್ಗಮುನಿಗೆ ನಂದ ವಿಶ್ವಕರ್ಮನಿರ್ಮಿತವಾದ ಬಂಗಾರದ ಪಾತ್ರೆಗಳನ್ನೂ ವಸ್ತ್ರಾಭರಣಗಳನ್ನೂ ಶ್ರೇಷ್ಠರತ್ನಗಳನ್ನೂ ನೀಡಿದ. ಶಿಷ್ಯರಿಗೂ ಸ್ವರ್ಣಾಭರಣಗಳನ್ನು ನೀಡಿದ. ಬೇರೆ ಬ್ರಾಹ್ಮಣರಿಗೂ ಯಥೇಚ್ಛ ದಾನಗಳನ್ನು ನೀಡಿದ.

ಗರ್ಗಮುನಿ ಬಾಲಕೃಷ್ಣನನ್ನು ಎತ್ತಿಕೊಂಡು ಪರಮಭಕ್ತಿಯಿಂದ ನಮಿಸಿ ಕಣ್ಣಲ್ಲಿ ನೀರು ತುಂಬಿಕೊಂಡು ಮೈ ಎಲ್ಲ ರೋಮಾಂಚಗೊಂಡು ಭಕ್ತಿಯಿಂದ ತಲೆಬಾಗಿ ಕೈಮುಗಿದು ನುಡಿದ.

**ಗರ್ಗಮುನಿ:-** ಹೇ ಕೃಷ್ಣ, ಜಗನ್ನಾಥ, ಪ್ರಸನ್ನನಾಗು. ನನಗೆ ನಿನ್ನ ದಾಸ್ಯವನ್ನು ನೀಡು. ನಿನ್ನ ತಂದೆ ನನಗೆ ಧನವನ್ನು ನೀಡಿದ್ದಾನೆ. ನನಗೆ ಅದರಿಂದೇನು ಪ್ರಯೋಜನ? ನನಗೆ ನಿನ್ನಲ್ಲಿ ನಿಶ್ಚಲವಾದ ಭಕ್ತಿ ನೀಡು. ಅಣಿಮಾದಿ ಯೋಗ ಸಿದ್ಧಿಗಳಲ್ಲಿಯಾಗಲಿ ಮುಕ್ತಿ ಅಮರತ್ವಗಳಲ್ಲಾಗಲಿ ನನಗೆ ಆಸೆ ಇಲ್ಲ. ಇಂದ್ರನಾಗಬೇಕು

ಮನುವಾಗಬೇಕು ಸ್ವರ್ಗಪಡೆಯಬೇಕೆಂದೂ ನಾನು ಆಸೆಪಡುವುದಿಲ್ಲ. ನಿನ್ನ ಪಾದಸೇವೆ ನನಗೆ ಬೇಕು. ನಿನ್ನ ಪಾದಸೇವೆ ಇಲ್ಲವಾದರೆ ಸಾಲೋಕ್ಯ ಸಾರ್ಷ್ಟಿ ಸಾರೂಪ್ಯ ಸಾಮೀಪ್ಯ ಸಾಯುಜ್ಯಗಳೂ ನನಗೆ ಬೇಡ. ಗೋಲೋಕವಾಸ ಪಾತಾಳವಾಸಗಳೂ ಬೇಡ. ನಿನ್ನ ಪಾದಕಮಲಗಳ ಸ್ಮರಣೆಯೇ ಸಾಕು. ಕೋಟಿಜನ್ಮಗಳ ಪುಣ್ಯದಿಂದ ನಿನ್ನ ಮಂತ್ರವನ್ನು ಉಪದೇಶಪಡೆದು ಸರ್ವಜ್ಞ ಸರ್ವದರ್ಶಿಯಾಗಿದ್ದೇನೆ. ಆದರೆ ಅದೂ ನನಗೆ ಬೇಡ. ನೀನು ನನಗೆ ಅಭಯ ನೀಡಿ ರಕ್ಷಣೆ ನೀಡು. ಆಗ ಮೃತ್ಯು ನನ್ನನ್ನೇನು ಮಾಡೀತು? ಆ ಶಿವ, ಬ್ರಹ್ಮ, ಧರ್ಮ, ಶೇಷ ಎಲ್ಲರೂ ನಿನ್ನ ಪಾದಕಮಲಸೇವೆಯಿಂದ ಸೃಷ್ಟಿ ಸಂಹಾರ ಪಾಲನಾದಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಎಲ್ಲರಿಗೂ ಎಲ್ಲ ಸಂಪತ್ತು ನೀಡುವ ಲಕ್ಷ್ಮಿ ನಿನ್ನ ಪಾದಕಮಲವನ್ನು ಕೇಶಪಾಶದಿಂದ ಒರೆಸುವಳು. ಮೂಲಕಾರಣಳಾದ ಪ್ರಕೃತಿ ನಿನ್ನ ಪಾದಕಮಲ ಸ್ಮರಣ ತತ್ಪರಳಾಗಿದ್ದಾಳೆ. ಪಾರ್ವತಿ ನಿನ್ನ ಪಾದಸೇವೆ ಮಾಡಿದ ಪುಣ್ಯದಿಂದ ಶಿವನನ್ನು ಪತಿಯಾಗಿ ಪಡೆದಳು. ವಿದ್ಯಾಧಿದೇವತೆ ಸರಸ್ವತಿ ನಿನ್ನ ಪಾದ ಸೇವೆಯಿಂದಲೆ ಸರ್ವರಿಗೂ ಪೂಜ್ಯಳಾದಳು. ವೇದಜನನಿ ಸಾವಿತ್ರಿ ನಿನ್ನ ಪಾದಕಮಲ ಸೇವೆಯಿಂದ ಬ್ರಹ್ಮನಿಗೂ ಬ್ರಾಹ್ಮಣರಿಗೂ ಗತಿ ಎನಿಸಿದ್ದಾಳೆ. ಭೂಮಿ ನಿನ್ನ ಪಾದಸೇವೆಯಿಂದಲೇ ಎಲ್ಲ ಸಸ್ಯಗಳ ಉತ್ಪತ್ತಿ ಕಾರಣಳಾಗಿದ್ದಾಳೆ. ನಿನ್ನ ಅಂಶ ಸಂಭೂತಳಾದ ರಾಧೆ ನಿನಗೆ ಸಮಾನಳಾಗಿದ್ದು ನಿನ್ನೆದೆಯಲ್ಲಿದ್ದೂ ನಿನ್ನ ಪಾದಸೇವೆ ಮಾಡುತ್ತಾಳೆ ಎಂದ ಮೇಲೆ ಉಳಿದವರ ಪಾಡೇನು? ಬ್ರಹ್ಮಾದಿ ದೇವತೆಗಳನ್ನು ಹೇಗೋ ಹಾಗೇ ನನ್ನನ್ನೂ ಕೃಪೆಯಿಂದ ಕಾಪಾಡು. ನಾನು ಮನೆಗೆ ಹೋಗಲಾರೆ, ನಿನ್ನ ಧನವನ್ನು ಒಯ್ಯಲಾರೆ. ನಿನ್ನ ಸೇವಕನನ್ನಾಗಿ ಮಾಡಿ ನನ್ನನ್ನು ಕಾಪಾಡು'' ಎಂದು ಸ್ತುತಿಸುತ್ತ ಗರ್ಗಮುನಿ ಕೃಷ್ಣನ ಪಾದಗಳಲ್ಲಿ ಬಿದ್ದು ಕಣ್ಣೀರು ಸುರಿಸಿದ. ಕೃಷ್ಣ ನಕ್ಕು ''ನನ್ನಲ್ಲಿ ನಿನಗೆ ಭಕ್ತಿ ಉಂಟಾಗಲಿ'' ಎಂದು ವರವಿತ್ತ. ಗರ್ಗಮುನಿ ಮಾಡಿದ ಈ ಸ್ತೋತ್ರವನ್ನು ಮೂರು ಹೊತ್ತು ಪಠಿಸುವವನು ಹರಿಯಲ್ಲಿ ದೃಢಭಕ್ತಿಯನ್ನೂ ಸ್ಮೃತಿಯನ್ನೂ ಪಡೆಯುತ್ತಾನೆ. ಜನನ ಮರಣ ಜರೆ ರೋಗ ಶೋಕ ಮೋಹ ಮುಂತಾದ ಸಂಕಟಗಳು ದೂರವಾಗುತ್ತವೆ. ಹರಿಪಾದ ಸೇವಾಸಕ್ತನಾಗಿ ಆತ ಹರಿಯೊಡನೆ ವಾಸಮಾಡುತ್ತಾನೆ. ಎಂದೂ ಅವನಿಗೆ ಹರಿಯ ವಿಯೋಗವಾಗದು.

**ನಾರಾಯಣ:-** ಗರ್ಗಮುನಿ ಕೃಷ್ಣನ ಸ್ತೋತ್ರಮಾಡಿ ಅವನನ್ನು ನಂದನ ಕೈಗಿತ್ತು ''ನಾನು ಮನೆಗೆ ಹೋಗಲು ಅನುಜ್ಞೆ ನೀಡು. ಇದೆಂಥ ವಿಚಿತ್ರ! ಈ ಸಂಸಾರ ಮೋಹಜಾಲದಿಂದ ಆವೃತವಾಗಿದೆ. ಸಮುದ್ರದ ನೀರಲ್ಲಿ ನೊರೆಗುಳ್ಳೆಗಳಂತೆ ಇಲ್ಲಿಯೂ ಸಂಯೋಗ ವಿಯೋಗಗಳ ಅನುಭವವಾಗುತ್ತಲೆ ಇರುತ್ತದೆ'' ಎಂದನು. ಮುನಿಯ ಮಾತನ್ನು ಕೇಳಿ ನಂದನಿಗೆ ದುಃಖವಾಯಿತು. ಸಜ್ಜನರಿಗೆ ಸಜ್ಜನರ ವಿಯೋಗ ಮರಣಕ್ಕಿಂತ ಹೆಚ್ಚು ದುಃಖದಾಯಕವಾಗುತ್ತದೆ. ಮುನಿ ಹೊರಟು ನಿಂತಾಗ ನಂದ ಮೊದಲಾದ ಗೋಪಗೋಪಿಯರೆಲ್ಲರೂ ಕಣ್ಣೀರು ಸುರಿಸುತ್ತ ಅತ್ಯಂತ ಪ್ರೀತಿಪೂರ್ವಕ ವಿನೀತಭಾವದಿಂದ ನಮಿಸಿದರು. ಮುನಿ ಎಲ್ಲರಿಗೂ ಹರಸಿ ಆನಂದದಿಂದ ಮಥುರೆಗೆ ಹೊರಟುಹೋದ. ಋಷಿಮುನಿಗಳೂ ಪ್ರಿಯ ಬಂಧುವರ್ಗದವರೂ ಧನಸಂಪನ್ನರಾಗಿ ಸಂತೋಷದಿಂದ ತಮ್ಮ ಮನೆಗಳಿಗೆ ಹಿಂತಿರುಗಿದರು. ಸಿಹಿತಿಂಡಿಗಳು, ವಸ್ತ್ರಾಭರಣಗಳು,

ಮುಂತಾದವುಗಳ ಭಾರವನ್ನು ಹೊರುತ್ತ ಎಲ್ಲರೂ ಕಷ್ಟದಿಂದ ನಡೆದರು. ಕೆಲವರು ಹಾಡುತ್ತ, ಕೆಲವರು ಕುಣಿಯುತ್ತ ಹೋದರು. ರಾಜಾ ಮರುತ್ತ ಶ್ವೇತ ಸಗರ ಮಾಂಧಾತ ಉತ್ತಾನಪಾದ ನಹುಷ ನಲ ಮುಂತಾದ ರಾಜರ ಚರಿತ್ರೆಗಳನ್ನು ಹಾಡಿದರು. ಶ್ರೀರಾಮನ ಅಶ್ವಮೇಧವನ್ನೂ ರಾಜಾ ರಂತಿದೇವನ ದಾನಧರ್ಮವನ್ನೂ ಹೊಗಳುವ ಹಾಡುಗಳನ್ನು ಹಾಡಿದರು. ಹೀಗೆ ಎಲ್ಲರೂ ಸಂತೋಷದಿಂದ ಹೊರಟು ಹೋದರು. ನಂದ ಯಶೋದೆಯರು ಕೃಷ್ಣನನ್ನು ಮಡಿಲಲ್ಲಿ ಆಡಿಸುತ್ತ ಕುಬೇರನ ಅರಮನೆಗೆ ಸಮಾನವಾದ ತಮ್ಮ ಸುಂದರ ಭವನದಲ್ಲಿ ವಾಸಮಾಡಿದರು.

ಶಿಶುಗಳಾದ ರಾಮ ಕೃಷ್ಣರು ಶುಕ್ಲಪಕ್ಷದ ಚಂದ್ರನಂತೆ ದಿನೇ ದಿನೇ ಬೆಳೆದರು. ಗೋವುಗಳ ಬಾಲವನ್ನೋ ಗೋಡೆಯನ್ನೋ ಆಧರಿಸಿ ನಿಲ್ಲಲು ಆರಂಭಿಸಿದರು. ಸ್ವಲ್ಪಸ್ವಲ್ಪವಾಗಿ ಮಾತನಾಡಲೂ ಕಲಿತರು. ಅಂಗಳದಲ್ಲಿ ಅಂಬೆಗಾಲಿಟ್ಟು ಓಡಾಡುತ್ತ ತಂದೆತಾಯಿಗಳಿಗೆ ಹರ್ಷ ನೀಡಿದರು. ಒಂದೊಂದು ಹೆಜ್ಜೆ ನಡೆಯಲೂ ಆರಂಭಿಸಿದರು. ಕೃಷ್ಣನಿಗಿಂತ ರಾಮ ಒಂದು ವರ್ಷದಷ್ಟು ದೊಡ್ಡವನು. ಇಬ್ಬರೂ ಮಾಯೆಯಿಂದ ಶಿಶುರೂಪ ಧರಿಸಿ ಗೋಕುಲದಲ್ಲಿ ಎಲ್ಲೆಡೆ ಓಡಾಡಲು ತೊಡಗಿದರು. ಸ್ಫುಟವಾಗಿ ಮಾತನಾಡಲೂ ತೊಡಗಿದರು.

ಗರ್ಗಮುನಿ ಮಥುರೆಯಲ್ಲಿ ವಸುದೇವನ ಮನೆಗೆ ಹೋಗಿ ಬಾಲಕರ ನಾಮಕರಣ ಸಮಾರಂಭದ ವಿಜೃಂಭಣೆಯನ್ನು ಬಣ್ಣಿಸಿ ಹೇಳಿದ. ಅದನ್ನು ಕೇಳಿ ವಸುದೇವ ಆನಂದದ ಕಣ್ಣೀರು ಸುರಿಸಿದ. ದೇವಕಿಯೂ ಆನಂದದ ಕಣ್ಣೀರು ಹರಿಸುತ್ತ ಪ್ರೀತಿಯಿಂದ ಮಕ್ಕಳ ಸಮಾಚಾರವನ್ನು ಮತ್ತೆ ಮತ್ತೆ ಕೇಳಿದಳು. ಮುನಿ ಅವರಿಬ್ಬರನ್ನೂ ಹರಸಿ ತನ್ನ ಮನೆಗೆ ಹೊರಟುಹೋದ. ಇಬ್ಬರೂ ಕುಬೇರ ಭವನದಂಥ ತಮ್ಮ ಮನೆಯಲ್ಲಿ ವಾಸಮಾಡಿದರು.

ನಾರದ, ನೀನೂ ಹಿಂದಿನ ಕಲ್ಪದಲ್ಲಿ ಹೀಗೇ ಗೃಹಸ್ಥನಾಗಿದ್ದೆ. ಉಪಬರ್ಹಣ ಎಂಬ ಗಂಧರ್ವರಾಜ ನೀನು ಐವತ್ತು ಮಂದಿ ಪತ್ನಿಯರೊಂದಿಗೆ ವಾಸಮಾಡುತ್ತ ಶೃಂಗಾರಕ್ರೀಡಾ ನಿಪುಣನಾಗಿದ್ದು ಅವರಿಗೆ ಪ್ರಾಣಕ್ಕಿಂತ ಹೆಚ್ಚು ಎನಿಸಿದ್ದೆ. ಬಳಿಕ ಬ್ರಹ್ಮಶಾಪದಿಂದ ದಾಸೀಪುತ್ರನಾಗಿ ಜನಿಸಿ ವಿಷ್ಣುಭಕ್ತರ ಉಚ್ಛಿಷ್ಟವನ್ನು ಉಂಡ ಪರಿಣಾಮವಾಗಿ ಈಗ ಬ್ರಹ್ಮಪುತ್ರನಾಗಿ ಹರಿಸೇವೆಯಿಂದ ಸರ್ವಜ್ಞ ಸರ್ವದರ್ಶಿಯಾಗಿರುವೆ. ನಿನಗೆ ಈಗ ಕೃಷ್ಣಚರಿತ್ರೆಯಲ್ಲಿ ಅನ್ನಪ್ರಾಶನ ನಾಮಕರಣಗಳನ್ನು ವರ್ಣಿಸಿದ್ದೇನೆ. ಜನನ ಮರಣ ಜರೆಗಳನ್ನು ಅವು ಕಳೆಯುತ್ತವೆ. ಇನ್ನೂ ಇಂಥ ಕಥೆಗಳನ್ನು ಹೇಳುತ್ತೇನೆ, ಕೇಳು.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಕೃಷ್ಣಾನ್ನಪ್ರಾಶನ ನಾಮಕರಣ ಪ್ರಸ್ತಾವವೆಂಬ ಹದಿಮೂರನೆಯ ಅಧ್ಯಾಯ ಮುಗಿದುದು*

—o—

## ನಳಕೂಬರ ಮೋಕ್ಷ

**ಅಧ್ಯಾಯ - ೧೪**

**ನಾರಾಯಣಮುನಿ:-** ಒಮ್ಮೆ ಯಶೋದೆ ಸ್ನಾನಕ್ಕಾಗಿ ಯಮುನಾನದಿಗೆ ಹೋದಳು. ಮನೆಯಲ್ಲಿ ಮೊಸರು ಹಾಲು ತುಪ್ಪ ಮಜ್ಜಿಗೆ ಬೆಣ್ಣೆಗಳನ್ನು ಬಾಲಕೃಷ್ಣ ನೋಡಿ ನಕ್ಕ. ಎಲ್ಲವನ್ನೂ ಭಕ್ಷಿಸಿದ. ಯಶೋದೆ ಹಿಂತಿರುಗಿ ಬರುವಾಗ ಕೃಷ್ಣ ಬೆಣ್ಣೆ ತಿಂದು ಬಟ್ಟೆಯಿಂದ ಬಾಯಿ ಒರೆಸಿಕೊಳ್ಳುತ್ತಿದ್ದುದನ್ನು ಕಂಡಳು. ಸುತ್ತಲೂ ನೋಡುತ್ತಾಳೆ, ಗಡಿಗೆಗಳೆಲ್ಲ ಬರಿದಾಗಿದ್ದುವು. ಕೆಲವು ಒಡೆದುಹೋಗಿದ್ದುವು. ಬಳಿಯಲ್ಲಿ ಆಟವಾಡುತ್ತಿದ್ದ ಮಕ್ಕಳನ್ನು ಕೇಳಿದಳು, ''ಯಾರು ಈ ಕೆಲಸ ಮಾಡಿದವರು?'' ಮಕ್ಕಳೆಲ್ಲರೂ ಹೇಳಿದರು, ''ನಿನ್ನ ಮಗನೆ ಎಲ್ಲವನ್ನೂ ತಿಂದ, ನಮಗೇನೂ ಕೊಡಲೇ ಇಲ್ಲ.'' ಯಶೋದೆ ಹುಸಿಮುನಿಸಿನಿಂದ ಹೊಡೆಯಲು ಕೋಲನ್ನೆತ್ತಿಕೊಂಡಳು. ಕೃಷ್ಣ ಓಡತೊಡಗಿದ. ಅವಳಿಗೆ ಅವನನ್ನು ಹಿಡಿಯಲಾಗಲಿಲ್ಲ. ಶಿವನಂಥ ಯೋಗಿಗಳಿಗೂ ಧ್ಯಾನಕ್ಕೆ ನಿಲುಕದವನು ಯಶೋದೆಯ ಕೈಗೆ ಸಿಗುವನೆ? ಅವಳು ಓಡಿ ಓಡಿ ಸೋತು ಮೈಯೆಲ್ಲ ಬೆವರಿಕೊಂಡು ಕುಳಿತಳು. ಮಾತೆಗೆ ಆಯಾಸವಾಯಿತೆಂದು ಕೃಪಾಳುವಾದ ಕೃಷ್ಣ ನಸುನುಗತ್ತ ಎದುರಿಗೆ ಬಂದು ನಿಂತ. ಅವಳು ಅವನನ್ನು ಹಿಡಿದು ತಂದು ಒಂದು ಮರಕ್ಕೆ ಬಟ್ಟೆಯಿಂದ ಕಟ್ಟಿ ಮನೆಯೊಳಗೆ ನಡೆದಳು. ಅಷ್ಟರಲ್ಲಿ ಆ ಮರ ಉರುಳಿತು. ದೊಡ್ಡ ಶಬ್ದ ಮಾಡುತ್ತ ಬಿದ್ದಿತು. ಮರದಿಂದ ಒಬ್ಬ ದಿವ್ಯ ಸುಂದರಾಕಾರದ ವ್ಯಕ್ತಿಯೊಬ್ಬ ಆವಿರ್ಭವಿಸಿದ್ದ. ಗೌರವರ್ಣದವನು, ಇನ್ನೂ ಎಳೆವಯಸ್ಸಿನವನು, ರತ್ನಾಭರಣಗಳಿಂದ ಅಲಂಕೃತನಾಗಿದ್ದಾನೆ. ಅವನು ಜಗದೀಶ್ವರನಾದ ಕೃಷ್ಣನನ್ನು ನಮಿಸಿ ನಗುಮೊಗದಿಂದ ದಿವ್ಯರಥವನ್ನೇರಿ ತನ್ನ ಲೋಕಕ್ಕೆ ಹೊರಟುಹೋದ.

ಮರ ಬಿದ್ದ ಸದ್ದನ್ನು ಕೇಳಿ ಯಶೋದೆ ಬಂದು ನೋಡಿದಳು. ಭಯಚಕಿತಳಾದಳು. ಆಳುತ್ತಿದ್ದ ಕಂದನನ್ನು ಎತ್ತಿಕೊಂಡಳು. ಗೋಕುಲದ ಗೋಪಗೋಪಿಯರೆಲ್ಲರೂ ಧಾವಿಸಿ ಬಂದು ನೋಡಿದರು. ಮಗುವಿಗೆ ರಕ್ಷೆ ಮಾಡುತ್ತ ಯಶೋದೆಯನ್ನು ಚೆನ್ನಾಗಿ ಬೈದರು: ''ನಿನಗೆ ಈ ಇಳಿವಯಸ್ಸಿನಲ್ಲಿ ಮಗುವಾಗಿದೆ. ಧನಧಾನ್ಯ ಮುಂತಾದ ಯಾವುದೇ ಶ್ರೇಷ್ಠ ವಸ್ತು ಮಗನಿಗಾಗಿಯೇ ತಾನೆ? ನಿನಗೇನೂ ಬುದ್ಧಿ ಇಲ್ಲ. ಮಗನಿಗೆ ಉಣಲಿಲ್ಲದ ವಸ್ತು ಮನೆಯಲ್ಲಿದ್ದರೇನು ಬಿಟ್ಟರೇನು? ಅದು ವ್ಯರ್ಥ. ಮಗ ಬೆಣ್ಣೆತಿಂದನೆಂದು ಅವನನ್ನು ಮರಕ್ಕೆ ಕಟ್ಟಿಹಾಕಿದೆಯಲ್ಲ! ಎಂಥ ಕಲ್ಲು ಮನಸಿನವಳು ನೀನು! ಅತ್ತ ನೀನು ಮನೆಕೆಲಸದಲ್ಲಿ ನಿರತಳಾಗಿದ್ದಾಗ ಅಕಸ್ಮಾತ್ ಮರ ಬಿದ್ದಿದೆ! ಮರ ಬಿದ್ದರೂ ನಿನ್ನ ಭಾಗ್ಯದಿಂದ ಮಗ ಉಳಿದ. ಒಂದು ವೇಳೆ ಮಗನಿಗೇನಾದರೂ ಅಪಾಯವಾಗಿದ್ದರೆ ಮನೆಯಲ್ಲಿ ಹಾಲು ಬೆಣ್ಣೆಗಳಿದ್ದೇನು ಪ್ರಯೋಜನವಿರುತ್ತಿತ್ತು? ಹೇಳು.'' ಹೀಗೆ ಬೈದು ಬುದ್ಧಿ ಹೇಳಿ ಗೋಪಗೋಪಿಯರು ಮಗುವನ್ನು ಹರಸಿದರು. ಬ್ರಾಹ್ಮಣರಿಂದ ಹರಿನಾಮ ಸಂಕೀರ್ತನ ಮಾಡಿಸಿದರು. ತಮ್ಮ ಮನೆಗಳಿಗೆ ತೆರಳಿದರು.

ಬಳಿಕ ನಂದಗೋಪ ಯಶೋದೆಗೆ ಬುದ್ಧಿ ಹೇಳಿದ. "ನಾನಿಂದೇ ಮಗುವನ್ನು ಕೊರಳಿಗೆ ಕಟ್ಟಿಕೊಂಡು ಯಾತ್ರೆಗೆ ಹೊರಡುತ್ತೇನೆ. ಅಥವಾ ನೀನೇ ಮನೆಬಿಟ್ಟು ಹೊರಟುಹೋಗು. ನಿನ್ನಿಂದ ನನಗೇನಾಗಬೇಕಾಗಿದೆ?

**ಶತಕೂಪಾಧಿಕಾ ವಾಪೀ ಶತವಾಪೀಸಮಂ ಸರಃ ।**
**ಸರಃ ಶತಾಧಿಕೋ ಯಜ್ಞಃ ಪುತ್ರೋ ಯಜ್ಞಶತಾಧಿಕಃ ॥**
**ತಪೋ ದಾನೋದ್ಭವಂ ಪುಣ್ಯಂ ಜನ್ಮಾಂತರಸುಖಪ್ರದಂ ।**
**ಸುಖಪ್ರದೋಽಪಿ ಸತ್ಪುತ್ರ ಇಹೈವ ಚ ಪರತ್ರ ಚ ॥**
**ಪುತ್ರಾದಪಿ ಪರೋ ಬಂಧುರ್ನ ಭೂತೋ ನ ಭವಿಷ್ಯತಿ ॥**

ನೂರು ಸೇದುವ ಬಾವಿಗಳಿಗಿಂತ ಒಂದು ಇಳಿ ಬಾವಿ ಶ್ರೇಷ್ಠ. ನೂರು ಇಳಿಬಾವಿಗಳಿಗಿಂತ ಒಂದು ಕೊಳ ಶ್ರೇಷ್ಠ. ನೂರು ಕೊಳಗಳಿಗಿಂತ ಒಂದು ಯಾಗ ಶ್ರೇಷ್ಠ. ನೂರು ಯಾಗಗಳಿಗಿಂತ ಒಬ್ಬ ಪುತ್ರ ಶ್ರೇಷ್ಠ. ತಪಸ್ಸು ದಾನಗಳಿಂದ ಸಿಗುವ ಪುಣ್ಯ ಜನ್ಮಾಂತರದಲ್ಲಿ ಸುಖ ಕೊಟ್ಟೀತು. ಸುಪುತ್ರ ಈ ಜನ್ಮದಲ್ಲಿಯೂ ಜನ್ಮಾಂತರದಲ್ಲಿಯೂ ಸುಖನೀಡುತ್ತಾನೆ.ಆದರಿಂದಪುತ್ರನಿಗಿಂತಹೆಚ್ಚಿನಬಂಧುಹಿಂದೆಯಾಗಲಿಮುಂದೆಯಾಗಲಿ ಎಂದೂ ಇಲ್ಲ." ಹೀಗೆ ನಂದಗೋಪ ಯಶೋದೆಗೆ ಉಪದೇಶ ಮಾಡಿದ.

**ನಾರದ:-** ಮರದಿಂದ ವ್ಯಕ್ತನಾದ ಆ ಸುಂದರ ವ್ಯಕ್ತಿ ಯಾರು? ಅವನೇಕೆ ಮರದ ಜನ್ಮ ಹೊಂದಿದ್ದ?

**ನಾರಾಯಣ:-** ಕುಬೇರನ ಮಗ ನಳಕೂಬರ ಒಮ್ಮೆ ರಂಭೆಯೊಂದಿಗೆ ನಂದನವನದಲ್ಲಿ ವಿಹಾರ ಮಾಡಿದ. ಒಂದು ಸರೋವರದ ಬಳಿ ಸುಂದರ ಉದ್ಯಾನದ ನಿರ್ಜನ ಪ್ರದೇಶದಲ್ಲಿ ಒಂದು ಆಲದ ಮರದ ಬಳಿ ಹೂವಿನ ಹಾಸಿಗೆ ಹಾಸಿ ರತ್ನ ದೀಪಗಳನ್ನು ಬೆಳಗಿಸಿ ಚಂದನ ಅಗುರು ಕಸ್ತೂರಿ ಕುಂಕುಮ ದ್ರವ್ಯಗಳನ್ನೂ ಹೂಮಾಲೆಗಳನ್ನೂ ರೇಶ್ಮೆ ಬಟ್ಟೆಗಳನ್ನೂ ಸಿದ್ಧಪಡಿಸಿ ಹೂಪರಿಮಳವನ್ನು ಹೊತ್ತುಬೀಸುವ ಸುಗಂಧ ವಾಯುವನ್ನು ಸೇವಿಸುತ್ತ ರಂಭೆಯೊಡನೆ ಹೂವಿನ ಹಾಸಿಗೆಯಲ್ಲಿ ನಾನಾ ಬಗೆ ಶೃಂಗಾರ ಕ್ರೀಡೆಯನ್ನು ನಡೆಸಿದ. ಅವನು ರಸಿಕ, ಕಾಮಶಾಸ್ತ್ರ ವಿಶಾರದ. ಒಮ್ಮೆ ನೀರಾಟ ಇನ್ನೊಮ್ಮೆ ವನವಿಹಾರ. ಒಮ್ಮೆ ವನವಿಹಾರ ಇನ್ನೊಮ್ಮೆ ನೀರಾಟ. ಹೀಗೆ ನಾನಾ ಬಗೆಯಿಂದ ರತಿಸುಖದಲ್ಲಿ ಲೀನನಾಗಿದ್ದ ನಳಕೂಬರನನ್ನು ದೇವಲ ಮುನಿ ಕಂಡ. ಜೊತೆಯಲ್ಲಿ ನಗ್ನಾವಸ್ಥೆಯಲ್ಲಿದ್ದ ರಂಭೆಯನ್ನೂ ಕಂಡ. ಅವಳೂ ರತಿಸುಖದಲ್ಲಿ ಮುಳುಗಿದ್ದಳು. ಅವಳ ಮೈ ರೋಮಾಂಚಗೊಂಡಿತ್ತು. ನಖಕ್ಷತ ದಂತಕ್ಷತಗಳಿಂದ ಶೋಭಿಸುತ್ತಿತ್ತು. ಮುನಿಯನ್ನು ಕಂಡೂ ನಳಕೂಬರ ರತಿಶಯ್ಯೆಯಿಂದ ಮೇಲೇಳಲಿಲ್ಲ. "ಪಾಪಿ ನೀನು ಮರವಾಗಿ ಹುಟ್ಟು" ಎಂದು ಮುನಿ ಅವನಿಗೆ ಶಪಿಸಿದ. ರಂಭೆಗೂ 'ಮನುಷ್ಯಜನ್ಮದಲ್ಲಿ ಹುಟ್ಟು' ಎಂದು ಶಪಿಸಿದ. "ನಳಕೂಬರ, ನೀನು ಗೋಕುಲದಲ್ಲಿ ಮರವಾಗಿ ಹುಟ್ಟು. ಶ್ರೀಕೃಷ್ಣನ ಸ್ಪರ್ಶದಿಂದ ನಿನಗೆ ವೃಕ್ಷಜನ್ಮದಿಂದ ಮುಕ್ತಿ ದೊರೆಯುವುದು. ರಂಭೆ, ನೀನು ಮನುಷ್ಯಜನ್ಮದಲ್ಲಿ ಜನಮೇಜಯನ ರಾಣಿಯಾಗಿ ದೇವೇಂದ್ರನಿಂದ ಬಲಾತ್ಕಾರ

ಕ್ಕೊಳಗಾದಾಗ ಮನುಷ್ಯಶರೀರವನ್ನು ತೊರೆದು ಸ್ವರ್ಗವನ್ನು ಸೇರುವಿ'' ಎಂದ. ಹೀಗೆ ಹೇಳಿ ಮುನಿ ಹೊರಟುಹೋದ. ಅವನ ಶಾಪದಿಂದ ನಳಕೂಬರ ಗೋಕುಲದಲ್ಲಿ ವೃಕ್ಷರೂಪದಿಂದ ಜನಿಸಿ ಕೃಷ್ಣನ ಸ್ಪರ್ಶದಿಂದ ಶಾಪಮುಕ್ತಿ ಪಡೆದ. ರಂಭೆ ರಾಜಾ ಸುಚಂದ್ರನ ಮಗಳಾಗಿ ಹುಟ್ಟಿ ಜನಮೇಜಯನ ರಾಣಿಯಾದಳು. ಒಮ್ಮೆ ರಾಜ ಅಶ್ವಮೇಧಯಾಗಕ್ಕೆ ದೀಕ್ಷಿತನಾದ. ಯಾಗದ ಕುದುರೆಯನ್ನು ದೇವೇಂದ್ರ ಕದ್ದ. ರಾಣಿ ಕುತೂಹಲದಿಂದ ಏಕಾಕಿನಿಯಾಗಿ ಕುದುರೆಯನ್ನು ಹುಡುಕುತ್ತ ಹೋದಳು. ಒಂದೆಡೆ ಕುದುರೆ ಕಣ್ಣಿಗೆ ಬಿತ್ತು. ಆದರೆ ದೇವೇಂದ್ರ ಅವಳನ್ನು ಹಿಡಿದು ಬಲಾತ್ಕರಿಸಿದ. ಅವಳೆಷ್ಟು ತಡೆದರೂ ಆತ ಕೇಳಲಿಲ್ಲ. ಮೈಮರೆತು ಹಗಲುರಾತ್ರಿ ಎನ್ನದೆ ನಿರಂತರ ಅವಳೊಂದಿಗೆ ರತಿಕ್ರೀಡೆಯಾಡಿದ. ರಾಣಿ ರಾಜನ ಭಯದಿಂದ ಮತ್ತು ಲಜ್ಜೆಯಿಂದ, ಯೋಗಬಲದಿಂದ ಶರೀರತ್ಯಾಗ ಮಾಡಿ ರಂಭೆಯಾಗಿ ಸ್ವರ್ಗಕ್ಕೆ ಹೋದಳು. ದೇವೇಂದ್ರನೂ ಸ್ವರ್ಗಸೇರಿದ. ಇತ್ತ ರಾಜ ರಾಣಿಯ ಮೃತಶರೀರವನ್ನು ಕಂಡು ಬಹಳ ವಿಲಾಪಗೈದು ಯಜ್ಞವನ್ನು ಅಲ್ಲಿಗೆ ನಿಲ್ಲಿಸಿ ಋತ್ವಿಜರಿಗೆ ಪೂರ್ಣದಕ್ಷಿಣೆ ನೀಡಿ ಕಳಿಸಿದ. ಇದು ಶ್ರೀಕೃಷ್ಣನ ಚರಿತ್ರೆ, ಜನ್ಮಮರಣ ಜರೆಗಳನ್ನು ಕಳೆಯುವಂತಹುದು.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ವೃಕ್ಷಾರ್ಜುನಭಂಜನವೆಂಬ ಹದಿನಾಲ್ಕನೇಯ ಅಧ್ಯಾಯ ಮುಗಿದುದು*



## ರಾಧಾಕೃಷ್ಣರ ವಿವಾಹ

**ಅಧ್ಯಾಯ - ೧೫**

**ನಾರಾಯಣ ಮುನಿ:-** ಒಂದು ದಿನ ನಂದ ಕೃಷ್ಣನೊಂದಿಗೆ ವೃಂದಾವನಕ್ಕೆ ಹೋಗಿ ಅಲ್ಲಿ ಭಾಂಡೀರವನದಲ್ಲಿ ಗೋವುಗಳನ್ನು ಮೇಯಿಸಿದ. ಸಿಹಿನೀರಿನ ಸರೋವರದಲ್ಲಿ ಗೋವುಗಳಿಗೆ ನೀರು ಕುಡಿಸಿದ. ಮರದ ಬುಡದಲ್ಲಿ ಬಾಲಕೃಷ್ಣನನ್ನು ತಬ್ಬಿಕೊಂಡು ಕುಳಿತ. ಮಾಯಾಮಾನುಷಶರೀರಿಯಾದ ಕೃಷ್ಣ ಆಗ ಮಾಯೆಯಿಂದ ಆಕಾಶದಲ್ಲಿ ಮೋಡ ಕವಿದು ಕಾಡುಕತ್ತಲಾಗುವಂತೆ ಮಾಡಿದ. ಬಿರುಗಾಳಿ ಗುಡುಗುಗಳೊಂದಿಗೆ ಧಾರಾಕಾರವಾಗಿ ಮಳೆ ಸುರಿದು ಮರಗಳನ್ನು ಕಂಪಿಸುವಂತೆ ಮಾಡಿತು. ಮರಗಳ ಕೊಂಬೆಗಳು ಮುರಿದು ಬೀಳುವುದನ್ನು ಕಂಡು ನಂದ ಭಯಗ್ರಸ್ತನಾದ. ಕರುಗಳನ್ನು ಬಿಟ್ಟು ನಾನು ಹೇಗೆ ಮನೆಗೆ ಹೋಗಲಿ? ಇಲ್ಲೇ ಇದ್ದರೆ ಮಗುವಿನ ಗತಿ ಏನು? ಎಂದು ಚಿಂತಿಸತೊಡಗಿದ. ಆಗಲೆ ಕೃಷ್ಣ ಜೋರಾಗಿ ಅಳತೊಡಗಿದ. ಮಳೆನೀರು ಮೈಮೇಲೆ ಬೀಳುವುದೆಂದು ನಂದನ ಕುತ್ತಿಗೆಗೆ ಜೋತುಬಿದ್ದ. ಇದೇ ಸಮಯದಲ್ಲಿ ರಾಧೆ ಕೃಷ್ಣನ ಬಳಿಗೆ ಬಂದಳು.

ಶರತ್ಕಾಲದ ಹುಣ್ಣಿಮೆಚಂದ್ರನಂಥ ಮುಖದವಳು, ಶರತ್ಕಾಲ ಮಧ್ಯಾಹ್ನದ ಅರಳಿದ ತಾವರೆಯಂಥ ಕಣ್ಣಿನವಳು. ಕಣ್ಣಿಗೆ ಕಾಡಿಗೆ, ಮೂಗಿಗೆ ಮೂಗುತಿ, ಮುಡಿಯಲ್ಲಿ ಜಾಜಿಹೂಮಾಲೆ, ಕಿವಿಗೆ ಓಲೆಗಳು, ಹಣೆಯಲ್ಲಿ ಕಸ್ತೂರಿ ಸಿಂದೂರಗಳ ಬೊಟ್ಟು, ಎದೆಯಲ್ಲಿ ರತ್ನಹಾರಗಳು, ನಡುವಿನಲ್ಲಿ ಒಡ್ಯಾಣ, ಕಾಲುಗಳಲ್ಲಿ ಉಲಿವ

ಗೆಜ್ಜೆಗಳು, ಕೈಗಳಿಗೆ ರತ್ನದ ಬಳೆಗಳು, ಬೆರಳುಗಳಿಗೆ ರತ್ನದುಂಗುರಗಳು, ಕೈಗಳಲ್ಲಿ ಕ್ರೀಡಾ ಕಮಲಗಳು ಮತ್ತು ಶ್ರೀಮುಖದರ್ಶನಕ್ಕೆ ರತ್ನದ ಕನ್ನಡಿ ಹಿಡಿದು ಸಂಪಿಗೆ ಬಣ್ಣದ ಮೈಯವಳು ಮೈಯೆಲ್ಲ ರೋಮಾಂಚಗೊಂಡು ರಾಜಹಂಸನಂತೆ ಮೆಲ್ಲಡಿ ಇಡುತ್ತ ಬರುತ್ತಾಳೆ ರಾಧೆ. ಶ್ರೀಫಲಗಳಂತಿರುವ ಕಠಿನ ಸ್ತನಗಳು ತ್ರಿವಳಿಯಿಂದ ಶೋಭಿಸುವ ಸಣ್ಣನಡು, ಆಳದ ಹೊಕ್ಕಳು, ಬೆಟ್ಟದಂತಿರುವ ನಿತಂಬಗಳು ನೆಲದಾವರೆಗಳಂಥ ಪಾದಗಳು, ಯೋಗಿಗಳ ಚಿತ್ತಸ್ಥೈರ್ಯವನ್ನೂ ಕಲಕುವ ಮನ್ಮಥನ ಬಿಲ್ಲಿನಂತೆ ಬಾಗಿದ ಹುಬ್ಬುಗಳು. ಮೈಕಾಂತಿ ಕೋಟಿಚಂದ್ರರ ಪ್ರಭೆಯನ್ನೂ ನಾಚಿಸುತ್ತ ದಶದಿಕ್ಕುಗಳನ್ನೂ ಬೆಳಗುವಂತಿದೆ. ನಿರ್ಜನವಾದ ಕಾಡಿನಲ್ಲಿ ಇಂಥ ಸುಂದರಿ ಒಬ್ಬಳೇ ತನ್ನ ಕಡೆಗೆ ಬರುವುದನ್ನು ಕಂಡು ನಂದ ಪರಮಾಶ್ಚರ್ಯಭರಿತನಾದ. ಭಕ್ತಿಯ ಕಣ್ಣೀರು ಸುರಿಸುತ್ತ ತಲೆಬಾಗಿ ನಮಿಸಿದ. ಗರ್ಗಮುನಿಯ ಮಾತಿನಿಂದ ಅವನಿಗೆ ತಿಳಿದುಹೋಗಿತ್ತು ಈಕೆ ಕೃಷ್ಣನಿಗೆ ಲಕ್ಷ್ಮಿಗಿಂತಲೂ ಹೆಚ್ಚು ಪ್ರಿಯಳಾದ ರಾಧೆ ಎಂದು. ಕೃಷ್ಣನೂ ಸಾಕ್ಷಾತ್ ಮಹಾವಿಷ್ಣು ಎಂದು ತಿಳಿದಿತ್ತು. ಆದರೂ ವಿಷ್ಣುಮಾಯೆ ಆಗಾಗ ಅವನಿಗೆ ಮರೆವು ಉಂಟುಮಾಡುತ್ತಿತ್ತು. ಆತ ರಾಧೆಯಲ್ಲಿ ವಿನಯದಿಂದ ಅರಿಕೆಮಾಡಿಕೊಂಡ.

''ದೇವಿ, ನೀನು ನಿನ್ನ ಪ್ರಾಣನಾಥನನ್ನು ಸುಖವಾಗಿ ಕರೆದೊಯ್ಯಬಹುದು. ಬಳಿಕ ನನ್ನ ಮಗನ ಆಸೆ ಪೂರೈಸಿ ಅವನನ್ನು ನನ್ನ ಬಳಿಗೇ ತಂದು ಬಿಟ್ಟುಬಿಡು.'' ರಾಧೆ ನುಡಿದಳು, ''ನೋಡು, ಇದನ್ನು ಯಾರಿಗೂ ಹೇಳಬೇಡ, ರಹಸ್ಯವಾಗಿಟ್ಟಿರು. ಅನೇಕ ಜನ್ಮಗಳ ಪುಣ್ಯದಿಂದ ನೀನು ನನ್ನನ್ನು ಕಂಡಿರುವೆ. ನೀನು ತಿಳಿದವನು. ಗರ್ಗಮುನಿಯ ಮಾತಿನಿಂದ ಎಲ್ಲವನ್ನೂ ತಿಳಿದಿರುವೆ. ನಮ್ಮಿಬ್ಬರ ರಹಸ್ಯವನ್ನು ಗೋಕುಲದಲ್ಲಿ ಯಾರಿಗೂ ತಿಳಿಸಬೇಡ. ನಿನಗೇನು ವರಬೇಕು, ಕೇಳು, ಕೊಡುತ್ತೇನೆ. ದೇವತೆಗಳಿಗೂ ದುರ್ಲಭವಾದ ವರವನ್ನು ನಿನಗೆ ಕೊಡುತ್ತೇನೆ''. ಈ ಮಾತನ್ನು ಕೇಳಿ ನಂದ ಕೇಳಿಕೊಂಡ, ''ನಿಮ್ಮಿಬ್ಬರ ಪಾದಭಕ್ತಿಯನ್ನು ನನಗೆ ನೀಡು. ನಮಗೆ ದಂಪತಿಗಳಿಗೆ ನಿಮ್ಮ ಸಮೀಪ ಸದಾ ವಾಸಮಾಡುವ ದುರ್ಲಭವಾದ ಭಾಗ್ಯವನ್ನು ನೀಡು.'' ರಾಧೆ ನುಡಿದಳು. ''ನಿನಗೆ ಅನುಪಮವಾದ ದಾಸ್ಯವನ್ನೇ ಮುಂದೆ ನೀಡುತ್ತೇನೆ. ಈಗ ನಿನಗೆ ನಮ್ಮ ಪಾದಗಳಲ್ಲಿ ಭಕ್ತಿ ನೀಡುತ್ತೇನೆ, ನಿನ್ನ ಹೃದಯದಲ್ಲಿ ಸದಾ ನಮ್ಮ ಸ್ಮರಣೆ ಉಂಟಾಗುವಂತೆ ವರ ನೀಡುತ್ತೇನೆ. ಮಾಯೆ ನಿಮ್ಮನ್ನು ಕವಿಯದಂತೆ ಮಾಡುತ್ತೇನೆ. ಕೊನೆಗೆ ಇಬ್ಬರೂ ನೀವು ಮನುಷ್ಯಶರೀರವನ್ನು ತೊರೆದು ಗೋಲೋಕಕ್ಕೆ ಹೋಗುವಿರಿ.'' ಹೀಗೆ ಹೇಳಿ ರಾಧೆ ಕೃಷ್ಣನನ್ನು ತಬ್ಬಿಕೊಂಡು ಹೆಗಲ ಮೇಲೆ ಹೊತ್ತು ನಡೆದಳು. ದೂರಕ್ಕೆ ಒಯ್ದು ಅವನನ್ನು ಮತ್ತೆ ಮತ್ತೆ ತಬ್ಬಿಕೊಂಡು ಮುದ್ದಿಸಿದಳು. ಮೈ ರೋಮಾಂಚಗೊಂಡಳು.

ಬಳಿಕ ರಾಧೆ ರಾಸಮಂಡಲವನ್ನು ನೆನೆದಳು. ಒಡನೆ ಅದು ಪ್ರತ್ಯಕ್ಷವಾಯಿತು. ನೂರಾರು ರತ್ನಕಲಶಗಳಿಂದ ಶೋಭಿಸುವ ರತ್ನಮಂಡಪ. ಚಿತ್ರವಿಚಿತ್ರ ಮಣಿಮಯ ಸ್ತಂಭಗಳಿಂದ ಕೂಡಿದೆ. ಚಂದನ ಅಗುರು ಕಸ್ತೂರಿ ಕುಂಕುಮ ದ್ರವ್ಯಗಳಿಂದ ಜಾಜಿ ಹೂಮಾಲೆಗಳಿಂದ ದಿವ್ಯದರ್ಪಣಗಳಿಂದ ಮುತ್ತು ಮಾಣಿಕ್ಯ ಜಾಲಗಳಿಂದ ಮಣಿಮಯ

ಕಪಾಟುಗಳಿಂದ ವಸ್ತ್ರಭೂಷಣಗಳಿಂದ ಭೂಷಿತವಾಗಿದೆ. ಅರಳಿದ ಹೂಗಳ ಉದ್ಯಾನದಿಂದಲೂ ಕೂಡಿದೆ. ರಾಧೆ ಒಳಗೆ ನಡೆದಳು. ಅಲ್ಲಿ ಕರ್ಪೂರಾದಿಯುಕ್ತವಾದ ತಾಂಬೂಲ, ರತ್ನಕಲಶಗಳಲ್ಲಿ ತುಂಬಿದ ಮನೋಹರವಾದ ಶೀತಜಲ, ಹಾಲು ಜೇನುಗಳಿಂದ ತುಂಬಿದ ರತ್ನಕಲಶಗಳು. ಬಳಿಯಲ್ಲಿ ಎಳೆಹರೆಯದ ಕೋಟಿಮನ್ಮಥ ಲಾವಣ್ಯಸಂಪನ್ನನಾದ ಶ್ಯಾಮಸುಂದರ, ಮೈಯೆಲ್ಲ ಶ್ರೀಗಂಧ ಬಳಿದುಕೊಂಡು ಹೂವಿನ ಹಾಸಿಗೆಯಲ್ಲಿ ಒರಗಿದ್ದಾನೆ. ಪ್ರಸನ್ನ ಮುಖಕಣ್ಣುಗಳು. ಉಲಿವ ಮಣಿಮಯವಾದ ಕಾಲಕಡಗ, ರತ್ನಮಯವಾದ ಕೈಕಡಗ ವಂಕಿಗಳು, ಕೌಸ್ತುಭಮಣಿಯಿಂದೊಪ್ಪುವ ವಕ್ಷಃಸ್ಥಲ, ಶರತ್ಕಾಲದ ಚಂದ್ರನನ್ನು ನಾಚಿಸುವ ಮುಖ, ಅರಳಿದ ತಾವರೆಗಣ್ಣುಗಳು. ತಲೆಯಲ್ಲಿ ನವಿಲಗರಿ ಜಾಜಿಯ ಹೂಮಾಲೆಗಳಿಂದ ಅಲಂಕೃತವಾದ ಮೂರು ಜಡೆಗಳು. ಹಿಂದಿನ ಬಾಲಕೃಷ್ಣನಲ್ಲ. ಈಗ ನವಯುವಕನಾದ ಕೃಷ್ಣನ ರೂಪವನ್ನು ಕಂಡು ರಾಧೆ ಮೋಹಗೊಂಡಳು. ಕಣ್ಣುಗಳೆಂಬ ಬೊಗಸೆಗಳಿಂದೆತ್ತಿ ಅವನ ಮುಖಚಂದ್ರನ ಸೌಂದರ್ಯರಸಪಾನ ಮಾಡಿದಳು. ನವಸಂಗಮದ ಆಸೆಯಿಂದ ಎವೆಯಿಕ್ಕದೆ ನೋಡಿದಳು. ಮೈರೋಮಾಂಚಗೊಂಡಳು. ನವಸಂಗಮಯೋಗ್ಯಳಾದ ಅರಳಿದ ಮುಖಕಮಲದ ರಾಧೆಯನ್ನು ಓರೆನೋಟದಿಂದ ನೋಡಿ ಕೃಷ್ಣ ನುಡಿದ.

**ಶ್ರೀಕೃಷ್ಣ:-** ದೇವಿ, ಗೋಲೋಕದ ವೃತ್ತಾಂತ ನಿನಗೆ ನೆನಪಿದೆಯೆ? ಅಲ್ಲಿ ದೇವತೆಗಳ ಮುಂದೆ ನಾನು ನಿನಗೆ ಕೊಟ್ಟಿದ್ದ ಮಾತನ್ನು ಈಗ ನಡೆಸಿಕೊಡುತ್ತೇನೆ. ನೀನು ನನ್ನ ಪ್ರೇಯಸಿ, ನನಗೆ ಪ್ರಾಣಕ್ಕಿಂತ ಹೆಚ್ಚು. ನಿನ್ನಂತೇ ನಾನು. ನಮ್ಮಿಬ್ಬರೊಳಗೆ ಭೇದವಿಲ್ಲ. ಹಾಲಲ್ಲಿ ಬಿಳುಪು, ಬೆಂಕಿಯಲ್ಲಿ ಶಾಖ, ನೆಲದಲ್ಲಿ ಕಂಪು, ಹೇಗೋ ಹಾಗೆ ನಾನು ನಿನ್ನಲ್ಲಿ ಸದಾ ಇರುತ್ತೇನೆ. ಮಣ್ಣಿಲ್ಲದೆ ಗಡಿಗೆ ಮಾಡಲಾಗದು. ಬಂಗಾರವಿಲ್ಲದೆ ಓಲೆ ಮಾಡಲಾಗದು. ಹಾಗೇ ನೀನಿಲ್ಲದೆ ನನ್ನ ಸೃಷ್ಟಿಕಾರ್ಯವೇ ಇಲ್ಲ. ಸೃಷ್ಟಿಗೆ ಆಧಾರ ನೀನು, ಬೀಜರೂಪ ನಾನು. ಬಾ, ಮಂಚವನ್ನೇರು. ನನ್ನನ್ನು ತಬ್ಬಿಕೊಳ್ಳು. ನೀನಿಲ್ಲದೆ ನನಗೆ ಶೋಭೆ ಇಲ್ಲ. ಆಭರಣವಿಲ್ಲದೆ ಶರೀರಕ್ಕೆ ಶೋಭೆ ಇಲ್ಲ. ನೀನಿಲ್ಲದಿದ್ದಾಗ ನಾನು ಬರಿ 'ಕೃಷ್ಣ' ನೀನು ಜೊತೆಗಿದ್ದರೆ 'ಶ್ರೀಕೃಷ್ಣ'. ನೀನೇ ಶ್ರೀ, ನೀನೇ ಸಂಪತ್ತು, ಸರ್ವಾಧಾರ ಸ್ವರೂಪಳು, ಸರ್ವಶಕ್ತಿ ಸ್ವರೂಪಳು. ನಾನು ಸರ್ವರೂಪ, ಅವಿನಾಶಿ. ನಾನು ತೇಜೋರೂಪನಾಗುವಾಗ ನೀನು ತೇಜೋರೂಪಳಾಗುವಿ. ನಾನು ಅಶರೀರನಾದಾಗ ನೀನು ಅಶರೀರಳಾಗುವಿ. ನನ್ನ ಅಂಶಸ್ವರೂಪಳು. ಮೂಲಪ್ರಕೃತಿ. ಸರ್ವೇಶ್ವರಿ ನೀನು. ಶಕ್ತಿಬುದ್ಧಿಜ್ಞಾನಗಳಲ್ಲಿ ನನಗೆ ಸಮಾನಳು. ನಮ್ಮಲ್ಲಿ ಭೇದವನ್ನು ತಿಳಿಯುವ ನರಾಧಮನಿಗೆ ಚಂದ್ರಸೂರ್ಯರಿರುವಷ್ಟು ಕಾಲ ಕಾಲಸೂತ್ರನರಕವಾಸ. ಹಿಂದು ಮುಂದಿನ ಏಳು ತಲೆಮಾರಿನ ಕುಲಪುರುಷರನ್ನು ಅವನು ನರಕದಲ್ಲಿ ಬೀಳಿಸುತ್ತಾನೆ. ಕೋಟಿಜನ್ಮಗಳ ಪುಣ್ಯವನ್ನು ಒಮ್ಮೆಲೆ ಕಳೆದುಕೊಳ್ಳುತ್ತಾನೆ. ಅಜ್ಞಾನದಿಂದ ನಮ್ಮನ್ನು ನಿಂದಿಸುವವರಿಗೆ ಚಂದ್ರಸೂರ್ಯರಿರುವಷ್ಟು ಕಾಲ ನರಕವಾಸ ನಿಶ್ಚಿತ.

ನಿನ್ನ ನಾಮದ 'ರಾ' ಶಬ್ದವನ್ನು ಉಚ್ಚರಿಸಿದವರಿಗೆ ಭಕ್ತಿನೀಡುತ್ತೇನೆ. 'ಧಾ' ಶಬ್ದೋಚ್ಚಾರಣ ಒಮ್ಮೆ ಮಾಡಿದರೆ, ಪುನಃ ಪುನಃ ಆ ಶಬ್ದವನ್ನು ಕೇಳುವ ತವಕದಿಂದ ಅವನ ಹಿಂದೆ ಹಿಂದೆಯೇ ನಾನು ಎಲ್ಲಕಡೆ ಸಂಚರಿಸುತ್ತೇನೆ.

**ರಾ ಶಬ್ದಂ ಕುರ್ವತಸ್ತಸ್ಮೋ ದದಾಮಿ ಭಕ್ತಿಮುತ್ತಮಾಂ।**
**ಧಾಶಬ್ದಂ ಕುರ್ವತಃ ಪಶ್ಚಾದ್ ಯಾಮಿ ಶ್ರವಣಲೋಭತಃ ॥**

ನನಗೆ ಷೋಡಶೋಪಚಾರ ನೀಡುತ್ತ ಜೀವನಪರ್ಯಂತ ಸೇವೆ ಮಾಡುವುದಕ್ಕಿಂತಲೂ ರಾಧಾ ನಾಮಮಂತ್ರ ಜಪವೆ ನನಗೆ ಹೆಚ್ಚು ಪ್ರೀತಿಕರ. ರಾಧೆಗಿಂತಲೂ ರಾಧಾನಾಮಜಪ ಮಾಡುವವನು ನನಗೆ ಹೆಚ್ಚು ಪ್ರಿಯನೆನಿಸುತ್ತಾನೆ. ಬ್ರಹ್ಮ ಅನಂತ ಶಿವ ಧರ್ಮ ನರ ನಾರಾಯಣ ಕಪಿಲ ಗಣೇಶ ಕಾರ್ತಿಕೇಯರೂ ಲಕ್ಷ್ಮಿ ಸರಸ್ವತಿ ದುರ್ಗೆ ಸಾವಿತ್ರಿ ಪ್ರಕೃತಿ ದೇವಿಯರೂ ಅವನಷ್ಟು ಪ್ರಿಯರಲ್ಲ. ಈ ದೇವ ದೇವಿಯರೂ ಎಲ್ಲರೂ ನನಗೆ ಪ್ರಾಣಕ್ಕೆ ಸಮಾನರೆ. ನೀನು ಪ್ರಾಣಕ್ಕಿಂತ ಹೆಚ್ಚು. ಅವರೆಲ್ಲ ಬೇರೆ ಬೇರೆ ಸ್ಥಾನಗಳಲ್ಲಿರುತ್ತಾರೆ. ನೀನು ನನ್ನೆದೆಯಲ್ಲಿಯೇ ಇರುತ್ತಿ. ನನ್ನ ಚತುರ್ಭುಜ ಮೂರ್ತಿ ಎದೆಯಲ್ಲಿ ಪ್ರೇಯಸಿಯನ್ನಿರಿಸಿಕೊಂಡಿದ್ದಾನೆ. ನಾನೂ ನಿನ್ನನ್ನು ಸದಾ ಎದೆಯಲ್ಲಿ ಧರಿಸುತ್ತೇನೆ.''

**ರಾಧೆ:-** ಗೋಲೋಕ ವೃತ್ತಾಂತವನ್ನೆಲ್ಲ ನೆನಪಿನಲ್ಲಿಟ್ಟುಕೊಂಡಿದ್ದೇನೆ. ಅದನ್ನು ಹೇಗೆ ಮರೆಯಲಿ, ಪ್ರಭು! ನೀನು ಏನೆಲ್ಲ ನನ್ನ ಬಗ್ಗೆ ಪ್ರಶಂಸೆ ಮಾಡಿದೆಯೋ ಅದೆಲ್ಲ ನಿನ್ನ ಪಾದಸೇವೆಯ ಬಲದಿಂದ ನಿಜವೆ ಆಗಿದೆ. ನಿನಗೆ ಪ್ರಿಯರು ಅಪ್ರಿಯರೆಂದು ಯಾರೂ ಇಲ್ಲ. ಆದರೂ ನನ್ನನ್ನು ಸ್ಮರಿಸದವರಲ್ಲಿ ನೀನು ಕೃಪೆ ಮಾಡುವುದಿಲ್ಲ. ಹುಲ್ಲುಕಡ್ಡಿಯನ್ನು ಬೆಟ್ಟ ಮಾಡಬಲ್ಲೆ ನೀನು. ಬೆಟ್ಟವನ್ನೂ ಹುಲ್ಲುಕಡ್ಡಿಯಂತೆ ಅಲ್ಪವಾಗಿಸಬಲ್ಲೆ. ಅದರಿಂದ ನೀನು ಹಾಸಿಗೆಯಲ್ಲಿ ಒರಗಿದ್ದು ನಾನು ನಿಂತಿದ್ದರೆ, ಸುಮ್ಮನೆ ಮಾತನಾಡುತ್ತಿದ್ದರೆ ಕಳೆಯುವ ಒಂದು ಕ್ಷಣವೂ ಯುಗವಾಗುತ್ತದೆ. ನನ್ನ ಎದೆಯಲ್ಲಿ ಶಿರಸ್ಸಿನಲ್ಲಿ ನಿನ್ನ ಪಾದಕಮಲವನ್ನಿಡು. ನಿನ್ನ ವಿರಹಾಗ್ನಿಯಿಂದ ನನ್ನ ಮನಸ್ಸು ಬೇಯುತ್ತಿದೆ. ನನ್ನ ದೃಷ್ಟಿ ನಿನ್ನ ಪಾದಕಮಲದ ಮೇಲೆ ಬಿದ್ದಾಗಲೇ ಅದು ಬೇರೆಕಡೆ ಹೋಗಲು ಶಕ್ತವಾಗಲಿಲ್ಲ. ಹೇಗೋ ಬೇರೆ ಅಂಗಗಳನ್ನೂ ಕಂಡೆ. ಈಗ ನಿನ್ನ ಮುಖಕಮಲ ಕಂಡಮೇಲೆ ನನ್ನ ದೃಷ್ಟಿ ಬೇರೆಕಡೆ ಹೋಗಲು ಸರ್ವಥಾ ಅಸಮರ್ಥವಾಗಿದೆ.''

ರಾಧೆಯ ಮಾತನ್ನು ಕೇಳಿ ಕೃಷ್ಣ ನಕ್ಕು ನುಡಿದ. ''ನಾನು ಹಿಂದೆ ಗೋಲೋಕದಲ್ಲಿ ಕೊಟ್ಟ ಮಾತು ಸರ್ವಥಾ ಸುಳ್ಳಾಗುವುದಿಲ್ಲ. ಒಂದು ಕ್ಷಣ ತಾಳು. ನಿನ್ನ ಮನೋರಥವನ್ನು ಪೂರೈಸುತ್ತೇನೆ. ಅದಕ್ಕೆ ಕಾಲ ಈಗ ಕೂಡಿ ಬಂದಿದೆ. ಯಾರಿಗೆ ಯಾವ ಕಾಲದಲ್ಲಿ ಏನಾಗಬೇಕೆಂದು ನಾನು ಬರೆಯುವೆನೋ ಅದು ಆ ಕಾಲದಲ್ಲಿ ಆಗೇ ತೀರುವುದು. ಅದನ್ನು ತಡೆಯುವುದು ನನ್ನಿಂದಾಗದು, ಇನ್ನು ಆ ವಿಧಾತನೆಲ್ಲಿ? ವಿಧಾತನಿಗೆ ವಿಧಾತ ನಾನು.''

ಅಷ್ಟರಲ್ಲಿ ಅಲ್ಲಿಗೆ ಅಕ್ಷಮಾಲೆ ಕಮಂಡಲುಗಳನ್ನು ಹಿಡಿದ ನಗುಮೊಗದ ಬ್ರಹ್ಮ ಬಂದು ನಮಿಸಿದ. ಭಕ್ತಿಭಾವದಿಂದ ಕಣ್ಣೀರು ಹರಿಸುತ್ತ ಮೈರೋಮಾಂಚಗೊಂಡು ತಲೆಬಾಗಿ ಸ್ತುತಿಸಿದ. ಪುನಃ ಪುನಃ ಸ್ತುತಿಸಿದ, ತಲೆ ಬಾಗಿದ. ಬಳಿಕ ಮಾತೆಯ ಪಾದಕಮಲಗಳಿಗೂ ತಲೆ ಇಟ್ಟು, ಜಟೆಯಿಂದ ಒರೆಸಿ ಕಮಂಡಲು ಜಲದಿಂದ ತೊಳೆದ, ಕೈ ಮುಗಿದು ಸ್ತೋತ್ರ ಮಾಡಿದ.

**ಬ್ರಹ್ಮ:-** ಮಾತೆ, ನಿನ್ನ ಪಾದಕಮಲವನ್ನು ಕಂಡೆ. ಇದು ಕೃಷ್ಣನ ಅನುಗ್ರಹ. ಇಲ್ಲದಿದ್ದರೆ ಇದು ಬಹಳ ದುರ್ಲಭ. ನಾನು ಭಾರತವರ್ಷದಲ್ಲಿ ಪುಷ್ಕರದಲ್ಲಿ ಅರವತ್ತುಸಾವಿರ ವರ್ಷಕಾಲ ತಪಸ್ಸುಮಾಡಿ ಹರಿಯನ್ನು ಒಲಿಸಿಕೊಂಡೆ. ವರದಾಯಕನಾದ ಆತ ವರ ನೀಡಲು ಬಂದಾಗ ನಾನು ನನ್ನ ಅಭೀಷ್ಟವನ್ನು ಕೇಳಿಕೊಂಡೆ, ರಾಧೆಯ ಚರಣಕಮಲ ದರ್ಶನ ನೀಡು ಎಂದು. ''ನೀಡುತ್ತೇನೆ, ಆದರೆ ಅದಕ್ಕೆ ಕಾಲ ಬರಬೇಕು, ಈಗ ತಡೆದುಕೊಳ್ಳು'' ಎಂದಿದ್ದ ಹರಿ. ಭಗವಂತನ ವರವೆಂದೂ ಸುಳ್ಳಾಗುವುದಿಲ್ಲ. ಅದರಿಂದ ನನಗೆ ನಿನ್ನ ಪಾದಕಮಲ ದರ್ಶನ ಈಗ ಲಭಿಸಿದೆ.

ಎಲ್ಲ ದೇವಿಯರೂ ಪ್ರಕೃತಿಯಿಂದ ಹುಟ್ಟಿದವರು, ಪ್ರಾಕೃತರು. ನೀನು ಮಾತ್ರ ಸಾಕ್ಷಾತ್ ಶ್ರೀಕೃಷ್ಣನ ಅರ್ಧಾಂಗದಿಂದ ಉದಿಸಿದವಳು. ಕೃಷ್ಣನಿಗೆ ಸಮಾನಳು. ನೀನೇ ಕೃಷ್ಣ, ಅವನೇ ರಾಧೆ ಎನ್ನಬೇಕೆ? ನೀನು ರಾಧೆ ಅವನು ಕೃಷ್ಣ ಎನ್ನಬೇಕೆ? ಇದರ ನಿರ್ಣಯ ವೇದದಲ್ಲಿಯೂ ಇಲ್ಲ. ಗೋಲೋಕ ವೈಕುಂಠಗಳು ಹೇಗೆ ಅನಾದಿ ಅಪ್ರಾಕೃತವೋ ಹಾಗೇ ನೀನೂ ಅನಾದಿ ಅಪ್ರಾಕೃತಳು. ಬ್ರಹ್ಮಾಂಡದಲ್ಲಿ ಎಲ್ಲ ಜೀವರೂ ಕೃಷ್ಣನ ಅಂಶಾಂಶರೂಪರು. ಅವರೆಲ್ಲರಲ್ಲೂ ನೀನು ಶಕ್ತಿರೂಪದಿಂದ ನೆಲೆಸಿರುವೆ. ಎಲ್ಲ ಪುರುಷರೂ ಕೃಷ್ಣನ ಅಂಶರು, ಎಲ್ಲ ಸ್ತ್ರೀಯರೂ ನಿನ್ನ ಅಂಶರು, ಶ್ರೀಕೃಷ್ಣನಿಗೆ ನೀನು ಶರೀರರೂಪಳು. ಆಧಾರಭೂತಳು. ಅವನ ಪ್ರಾಣವೆ ನಿನಗೆ ಪ್ರಾಣ, ನಿನ್ನ ಪ್ರಾಣವೇ ಅವನಿಗೆ ಪ್ರಾಣ. ಅವನೂ ನಿತ್ಯ, ನೀನು ನಿತ್ಯಳು. ಅವನು ನಿನ್ನ ಅಂಶವೆ, ಅಥವಾ ನೀನು ಅವನ ಅಂಶವೆ? ಯಾರು ಹೇಳಬಲ್ಲರು? ನಾನು ಸೃಷ್ಟಿಕರ್ತ, ವೇದವನ್ನು ಉಪದೇಶಿಸುವೆನು. ಆ ವೇದವನ್ನು ಗುರುಮುಖದಿಂದ ತಿಳಿದು ಎಲ್ಲರೂ ಜ್ಞಾನಿಗಳಾಗುತ್ತಾರೆ. ಆದರೆ ಆ ವೇದವಾಗಲಿ ಈ ಜ್ಞಾನಿಗಳಾಗಲಿ ನಿನ್ನ ಮಹಿಮೆಯ ನೂರನೆ ಒಂದಂಶವನ್ನೂ ವರ್ಣಿಸಲಾರರು. ಇನ್ನು ಉಳಿದವರ ಪಾಡೇನು? ಸ್ತೋತ್ರಕ್ಕೆ ಕಾರಣ ಜ್ಞಾನ, ಜ್ಞಾನಕ್ಕೆ ಕಾರಣ ಬುದ್ಧಿ, ಬುದ್ಧಿಗೆ ಕಾರಣ ನೀನು ಎಂದ ಮೇಲೆ ನಿನ್ನನ್ನು ಯಾರು ಸ್ತೋತ್ರ ಮಾಡಬಲ್ಲರು? ಕಣ್ಣಿಗೆ ಕಂಡಿದ್ದನ್ನು ವರ್ಣಿಸಲು ಎಲ್ಲರೂ ಶಕ್ತರು. ಆದರೆ ಕಣ್ಣಿಗೆ ಕಾಣದ್ದನ್ನು, ಕೇಳಿ ತಿಳಿಯಲಾಗದ್ದನ್ನು ಯಾರು ತಾನೆ ವರ್ಣಿಸಬಲ್ಲರು? ಮಹೇಶ್ವರನಾಗಲಿ ಅನಂತನಾಗಲಿ ಯಾರೂ ನಿನ್ನ ಸ್ತೋತ್ರ ಮಾಡಲು ಶಕ್ತರಲ್ಲ, ಸರಸ್ವತಿಯೂ ವೇದವೂ ಅಸಮರ್ಥವಾಗಿದೆ ಎಂದ ಮೇಲೆ ಯಾರು ನಿನ್ನನ್ನು ಸ್ತುತಿಸಬಲ್ಲರು? ನಾನು ವೇದಾನುಸಾರ ಸ್ವಲ್ಪ ಮಾತ್ರ ಸ್ತುತಿಸಿದ್ದೇನೆ, ಅದನ್ನು ನಿಂದಿಸಬೇಡ. ಪರಮಾತ್ಮ ಸರ್ವೇಶ್ವರ. ಯೋಗ್ಯ ಅಯೋಗ್ಯರೆಲ್ಲರಲ್ಲಿಯೂ ಕೃಪೆ ಮಾಡುವವನು. ನಾವು ನಿಮ್ಮ ಸಂತಾನ, ಗುಣದೋಷಗಳು ಎರಡೂ ಆಗಾಗ ಪ್ರಕಟವಾಗುತ್ತಲೇ ಇರುತ್ತವೆ. ನೀವು ತಾಯಿತಂದೆಗಳು ಪ್ರೀತಿಯಿಂದ ನಮ್ಮ ದೋಷಗಳನ್ನೆಲ್ಲ ಕ್ಷಮಿಸುತ್ತೀರಿ.''

ಹೀಗೆ ಹೇಳಿ ಬ್ರಹ್ಮ ರಾಧಾಕೃಷ್ಣರ ಪಾದಕಮಲಗಳಿಗೆ ಮಣಿದು ನಿಂತ. ಬ್ರಹ್ಮನು ಮಾಡಿದ ಈ ಸ್ತೋತ್ರವನ್ನು ಮೂರು ಸಂಧ್ಯೆಗಳಲ್ಲಿ ಪಠಿಸುವವನು ರಾಧಾ ಮಾಧವರ ಚರಣಭಕ್ತಿದಾಸ್ಯಗಳನ್ನು ಪಡೆಯುತ್ತಾನೆ. ಕರ್ಮನಾಶ ಮಾಡಿಕೊಂಡು ಮೃತ್ಯುವನ್ನು ಗೆಲ್ಲುತ್ತಾನೆ. ಎಲ್ಲಲೋಕಗಳನ್ನೂ ದಾಟಿ ಗೋಲೋಕವನ್ನು ಹೊಂದುತ್ತಾನೆ.

ಬ್ರಹ್ಮನು ಮಾಡಿದ ಸ್ತೋತ್ರವನ್ನು ಕೇಳಿ ರಾಧೆ ನುಡಿದಳು. 'ನಿನ್ನ ಮನದ ಅಭೀಷ್ಟವೇನು? ಬೇಕಾದ ವರವನ್ನು ಕೇಳು.'' ಬ್ರಹ್ಮನೆಂದ, ''ನಿಮ್ಮಿಬ್ಬರ ಚರಣಕಮಲಗಳಲ್ಲಿ ಭಕ್ತಿಮಾತ್ರ ನನಗೆ ಅಭೀಷ್ಟವಾಗಿದೆ. ಅದೇ ವರವನ್ನು ನೀಡು.'' ರಾಧೆ 'ಹಾಗೇ ಆಗಲಿ' ಎಂದಳು.

ಬ್ರಹ್ಮ ರಾಧಾಕೃಷ್ಣರ ನಡುವೆ ಅಗ್ನಿಪ್ರತಿಷ್ಠೆ ಮಾಡಿ ಹರಿಸ್ಮರಣ ಪೂರ್ವಕವಾಗಿ ವಿಧ್ಯುಕ್ತವಾಗಿ ಅಗ್ನಿಯಲ್ಲಿ ಆಹುತಿ ನೀಡಿದ. ಬಳಿಕ ಕೃಷ್ಣ ಶಯ್ಯೆಯಿಂದ ಎದ್ದು ಬಂದು ಅಗ್ನಿಯ ಬಳಿ ಕುಳಿತು ಬ್ರಹ್ಮನ ಪೌರೋಹಿತ್ಯದಲ್ಲಿ ಹೋಮ ನಡೆಸಿದ. ಬ್ರಹ್ಮ ಕೃಷ್ಣನ ತಂದೆಯ ಸ್ಥಾನದಲ್ಲಿ ನಿಂತು ವೈವಾಹಿಕ ಮಂಗಲಕೃತ್ಯ ನಡೆಸಿದ. ಅಗ್ನಿಪ್ರದಕ್ಷಿಣೆ ಮಾಡಿಸಿದ. ಶ್ರೀಕೃಷ್ಣನಿಂದ ರಾಧೆಯ ಪಾಣಿಗ್ರಹಣ ಮಾಡಿಸಿದ. ಕೃಷ್ಣನ ಎದೆಯ ಮೇಲೆ ರಾಧೆಯ ಹಸ್ತ, ರಾಧೆಯ ಬೆನ್ನಮೇಲೆ ಕೃಷ್ಣನ ಹಸ್ತ ಇಡಿಸಿ ರಾಧೆಯಿಂದ ಮೂರು ವೇದಮಂತ್ರಗಳನ್ನು ಹೇಳಿಸಿದ. ಬಳಿಕ ಪಾರಿಜಾತ ಹೂವಿನ ಆಜಾನುಲಂಬಿ ಮಾಲೆಯನ್ನು ರಾಧೆಯಿಂದ ಕೃಷ್ಣನ ಕೊರಳಿಗೆ ತೊಡಿಸಿದ. ಹಾಗೇ ಕೃಷ್ಣನ ಕೈಯಿಂದ ರಾಧೆಯ ಕೊರಳಿಗೆ ಮಾಲೆ ತೊಡಿಸಿದ. ಕೃಷ್ಣನನ್ನು ಕುಳ್ಳಿರಿಸಿ ಅವನೆಡಭಾಗದಲ್ಲಿ ನಗುಮೊಗದ ರಾಧೆಯನ್ನು ಕುಳ್ಳಿರಿಸಿದ. ಐದು ವೇದಮಂತ್ರಗಳನ್ನು ಇಬ್ಬರಿಂದಲೂ ಹೇಳಿಸಿದ. ಕನ್ಯಾಪಿತನು ಕನ್ಯೆಯನ್ನು ವರನಿಗೆ ಒಪ್ಪಿಸುವಂತೆ ರಾಧೆಯನ್ನು ಕೃಷ್ಣನ ಕೈಗೊಪ್ಪಿಸಿದ. ಭಕ್ತಿಭಾವದಿಂದ ಎದುರಲ್ಲಿ ನಿಂತ. ಆಗ ಎಲ್ಲವನ್ನೂ ಆಗಸದಲ್ಲಿ ನಿಂತು ನೋಡುತ್ತ ಆನಂದಿಸಿದ ದೇವತೆಗಳು ರೋಮಾಂಚಿತರಾಗಿ ದುಂದುಭಿ ಆನಕ ಮುರಜ ಮುಂತಾದ ಮಂಗಳವಾದ್ಯಗಳನ್ನು ಮೊಳಗಿಸಿದರು. ಪಾರಿಜಾತ ಹೂವಿನ ಮಳೆಗರೆದರು. ಗಂಧರ್ವರು ಹಾಡಿದರು, ಅಪ್ಸರೆಯರು ಕುಣಿದರು. ಬ್ರಹ್ಮ ಹರಿಯನ್ನು ಸ್ತುತಿಸಿ ''ನಿಮ್ಮಿಬ್ಬರ ಚರಣಕಮಲಗಳಲ್ಲಿ ನನಗಿನ್ನೂ ಹೆಚ್ಚಿನ ಭಕ್ತಿ ನೀಡಿ, ಇದೇ ನನಗೆ ಪೌರೋಹಿತ್ಯದ ದಕ್ಷಿಣೆಯಾಗಲಿ'' ಎಂದ. ಶ್ರೀಕೃಷ್ಣನೆಂದ, ''ನಮ್ಮ ಚರಣಕಮಲಗಳಲ್ಲಿ ನಿನಗೆ ದೃಢಭಕ್ತಿ ನೀಡುತ್ತೇನೆ. ನೀನಿನ್ನು ನಿನ್ನ ಲೋಕಕ್ಕೆ ಹಿಂತಿರುಗು, ನಿನಗೆ ಒಳ್ಳೆಯದಾಗಲಿ. ನಾನು ನಿನಗೊಪ್ಪಿಸಿರುವ ಕಾರ್ಯವನ್ನು ನನ್ನಾಜ್ಞೆಯಂತೆ ಮಾಡುತ್ತಿರು.''

ನಾರದ, ಬ್ರಹ್ಮನು ರಾಧಾಕೃಷ್ಣರಿಗೆ ನಮಿಸಿ ಹೊರಟುಹೋದ. ಬಳಿಕ ರಾಧೆ ಶ್ರೀಕೃಷ್ಣನ ಮುಖವನ್ನು ನೋಡಿ ಸರ್ವಾಂಗಪುಲಕಿತಳಾಗಿ ಪ್ರೇಮವೇದನೆಯನ್ನು ಅನುಭವಿಸುತ್ತ ಅವನನ್ನು ನಮಿಸಿ ಅವನೊಂದಿಗೆ ಶಯ್ಯೆಯನ್ನೇರಿದಳು. ಕೃಷ್ಣನ ಹಣೆಗೆ ಕಸ್ತೂರಿಯ ತಿಲಕವಿಟ್ಟು ಎದೆಗೆ ಚಂದನ ಬಳಿದಳು. ಹಾಲುಜೇನುಗಳಿಂದ ತುಂಬಿದ ರತ್ನಪಾತ್ರೆಯನ್ನು ಭಕ್ತಿಯಿಂದ ಅವನ ಕೈಗಿತ್ತಳು. ಅದನ್ನು ಅವನು ಪಾನ ಮಾಡಿದೊಡನೆ ಕರ್ಪೂರಾದಿಯುಕ್ತ ಸುಗಂಧಭರಿತವಾದ ತಾಂಬೂಲವಿತ್ತಳು. ಕೃಷ್ಣ ಅದನ್ನು ಮೆದ್ದು ರಾಧೆಗೂ ಹಾಲು ಜೇನು ಕುಡಿಸಿದ, ತಾಂಬೂಲ ತಿನ್ನಿಸಿದ. ಬಳಿಕ ಕೃಷ್ಣ ರಾಧೆಯ ಕೈಯಿಂದ ರತ್ನದರ್ಪಣವನ್ನು ಕಸಿದ. ರಾಧೆಯೂ ಕೃಷ್ಣನ ಕೈಯಿಂದ ಕೊಳಲನ್ನು ಕಸಿದಳು. ಇಬ್ಬರೂ ಪರಸ್ಪರ ಮುಖವನ್ನು ಚುಂಬಿಸಿದರು. ಕೃಷ್ಣ ರಾಧೆಯ ಸರ್ವಾಂಗಗಳಿಗೆ ಚಂದನ ಅಗುರು ಕಸ್ತೂರಿ ಕುಂಕುಮದ್ರವವನ್ನು ಬಳಿದ. ಯಾವ

ಮನ್ಮಥ ಕೃಷ್ಣನ ಪಾದಕಮಲಗಳನ್ನು ಸದಾ ಧ್ಯಾನಿಸುವನೋ ಆ ಮನ್ಮಥನಿಗೆ ಕೃಷ್ಣ ವಶನಾದ. ಇದು ರಾಧೆಯ ಸಂತೋಷಕ್ಕಾಗಿ. ಏಕೆಂದರೆ ಕೃಷ್ಣನ ಭೃತ್ಯಭೃತ್ಯರೂ ಕೂಡ ಮನ್ಮಥನನ್ನು ಗೆಲ್ಲುತ್ತಾರೆ. ಅಂಥ ಕೃಷ್ಣ ಮನ್ಮಥನಿಗೆ ವಶನಾಗುತ್ತಿದ್ದಾನೆ! ರಾಧೆಯನ್ನು ಕೈಗಳಿಂದೆತ್ತಿ ತನ್ನೆದೆಯ ಮೇಲೇರಿಸಿಕೊಂಡ. ಆಲಿಂಗನ ಚುಂಬನಗಳಿಂದ ಅವಳನ್ನು ಸರ್ವಾಂಗ ಪುಲಕಿತಗೊಳಿಸಿದ. ನವಸಂಗಮದ ಸುಖದಲ್ಲಿ ಅವಳನ್ನು ಮೈಮರೆಸಿದ. ಅವಳಿಗೆ ಹಗಲುರಾತ್ರಿಗಳ ಭೇದವೇ ತಿಳಿಯದಂತಾಯಿತು. ಬಳಿಕ ರತಿಶಯ್ಯೆಯಿಂದ ಎದ್ದು ರಾಧೆ ಕೃಷ್ಣನ ಕೈಗೆ ಕೊಳಲನ್ನಿತ್ತಳು. ಕೃಷ್ಣನೂ ಅವಳ ಕೈಗೆ ರತ್ನದರ್ಪಣವನ್ನಿತ್ತ. ಕ್ರೀಡಾ ಕಮಲವನ್ನೂ ನೀಡಿದ. ಹಣೆಗೆ ತಿಲಕವಿಟ್ಟ. ಕ್ಷಣದಲ್ಲಿ ಹದಿಹರೆಯದ ಕೃಷ್ಣ ಪುಟ್ಟಬಾಲಕನಾಗಿ ಹಸಿವಿಂದ ಅಳತೊಡಗಿದ!

ನಂದ ಕೃಷ್ಣನನ್ನು ತನ್ನ ಕೈಗೊಪ್ಪಿಸಿದಾಗ ಆತ ಹೇಗಿದ್ದನೋ ಹಾಗೇ ತಿರುಗಿ ಬಾಲಕನಾಗಿ ಆತ ಅಳತೊಡಗಿದುದನ್ನು ಕಂಡು ರಾಧೆ ನಿಟ್ಟುಸಿರಿಟ್ಟು ಅತ್ತಿತ್ತ ನೋಡುತ್ತ ವಿರಹ ಶೋಕಾರ್ತಳಾಗಿ, ''ಕೃಷ್ಣ! ಇದೇನು ಮಾಡುತ್ತಿರುವೆ? ನಿನ್ನ ಚರಣದಾಸಿಯ ಮುಂದೆ ಏಕೆ ಈ ಮಾಯೆಯ ಆಟ?'' ಎನ್ನುತ್ತ ಕುಸಿದು ನೆಲದ ಮೇಲೆ ಕುಳಿತಳು. ಕಣ್ಣೀರು ಸುರಿಸಿದಳು. ಆದರೂ ಕೃಷ್ಣ ಅಳುತ್ತಲೇ ಇದ್ದ. ಆಗ ಅಶರೀರವಾಣಿ ನುಡಿಯಿತು, ''ರಾಧೆ, ಏಕೆ ಅಳುವೆ? ಕೃಷ್ಣನ ಪಾದಕಮಲಗಳನ್ನು ನೆನೆಯುತ್ತಿರು. ಪ್ರತಿರಾತ್ರಿ ನಿನ್ನ ಮನೆಯಲ್ಲಿ ನಿನ್ನ ಛಾಯೆಯನ್ನು ಬಿಟ್ಟು ನೀನು ಇಲ್ಲಿಗೇ ಬಂದುಬಿಡು. ಕೃಷ್ಣನೊಂದಿಗೆ ವಿಹಾರ ಮಾಡು. ಅಳಬೇಡ. ಈ ಶಿಶುರೂಪಿ ಪ್ರಾಣಕಾಂತನನ್ನು ಎತ್ತಿಕೊಂಡು ನಂದನ ಮನೆಗೆ ಹೋಗಿ ಸೇರಿಸು.'' ಇದನ್ನು ಕೇಳಿ ರಾಧೆ ಕೃಷ್ಣನನ್ನೆತ್ತಿಕೊಂಡು ನಡೆದಳು. ಮನೋವೇಗದಿಂದ ಅರೆಕ್ಷಣದಲ್ಲಿ ನಂದನ ಮನೆ ಸೇರಿದಳು. ಯಶೋದೆಯ ಮಡಿಲಲ್ಲಿ ಕೃಷ್ಣನನ್ನಿರಿಸಿ ಹೇಳಿದಳು, ''ತಾಯಿ, ಇಗೋ ನಿನ್ನ ಬಾಲಕನನ್ನು ಎತ್ತಿಕೊಳ್ಳು. ನಿನ್ನ ಪತಿ ಈತನನ್ನು ನನ್ನ ಕೈಗಿತ್ತು ಬೇಗ ನಿನಗೆ ತಂದೊಪ್ಪಿಸಲು ಹೇಳಿದ್ದಾನೆ. ಆದರೆ ಧಾರಾಕಾರವಾಗಿ ಮಳೆ ಸುರಿಯಿತು. ನನ್ನ ಸೀರೆ ಒದ್ದೆಯಾಯಿತು. ದಾರಿ ಎಲ್ಲ ಕೆಸರು. ಮಗುವನ್ನು ಹೊತ್ತು ಬೇಗ ನಡೆಯಲಾರದೆ ಹೋದೆ. ವಿಲಂಬವಾಯಿತು. ನಾನು ಮನೆ ಬಿಟ್ಟು ಬಂದು ಬಹಳ ಹೊತ್ತಾಗಿದೆ. ಅದರಿಂದ ಈಗಲೆ ಹಿಂತಿರುಗುತ್ತೇನೆ.'' ಹೀಗೆ ಹೇಳಿ ರಾಧೆ ತನ್ನ ಮನೆಗೆ ಹೋದಳು. ಯಶೋದೆ ಮಗನಿಗೆ ಸ್ತನಪಾನ ಮಾಡಿಸಿದಳು. ಅಂದಿನಿಂದ ಪ್ರತಿದಿನ ರಾತ್ರಿಕಾಲದಲ್ಲಿ ರಾಧೆ ಕೃಷ್ಣನೊಂದಿಗೆ ವಿಹರಿಸಿದಳು.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ರಾಧಾಕೃಷ್ಣವಿವಾಹ ನವಸಂಗಮ ಪ್ರಸ್ತಾವವೆಂಬ ಹದಿನೈದನೆ ಅಧ್ಯಾಯ ಮುಗಿದುದು*

—o—

## ಬಕ ಪ್ರಲಂಬ ಕೇಶಿ ವಧ

ಅಧ್ಯಾಯ - ೧೬

**ನಾರಾಯಣ:-** ಒಂದು ದಿನ ಶ್ರೀಕೃಷ್ಣ ಬಲರಾಮನೊಂದಿಗೆ ಆಟವಾಡುತ್ತ ಮಧುವನವನ್ನು ಪ್ರವೇಶಿಸಿದ. ಅಲ್ಲಿ ಬೆಟ್ಟದಷ್ಟು ದೊಡ್ಡ ಆಕಾರದ ಬಿಳಿಯಾದ ಭಯಂಕರವಾದ ಕೊಕ್ಕರೆಯೊಂದು ಇದಿರಾಯಿತು. ಅವನು ಬಕನೆಂಬ ದೈತ್ಯ. ಅನಾಯಾಸವಾಗಿ ವಾತಾಪಿಯನ್ನು ಅಗಸ್ತ್ಯಮುನಿ ನುಂಗಿದಂತೆ ಆತ ಕೃಷ್ಣನನ್ನು ನುಂಗಿದ. ಅದನ್ನು ಕಂಡು ದೇವತೆಗಳೆಲ್ಲರೂ ಭಯದಿಂದ ಹಾಹಾಕಾರ ಮಾಡಿದರು. ಆಯುಧ ಪಾಣಿಗಳಾಗಿ ಧಾವಿಸಿ ಬಂದರು. ದೇವೇಂದ್ರ ವಜ್ರಾಯುಧವನ್ನು ಪ್ರಯೋಗಿಸಿದ. ಆದರೆ ಅದು ಬಕನನ್ನು ಸುಡಲಿಲ್ಲ. ಅವನ ಮೈಯ ಒಂದು ಗರಿಯನ್ನು ಮಾತ್ರ ಸುಟ್ಟಿತು. ಚಂದ್ರ ನೀಹಾರಾಸ್ತ್ರ ಎಸೆದ. ಬಕ ಕೇವಲ ಚಳಿಯಿಂದ ನಡುಗಿದ. ಯಮ ದಂಡಪ್ರಯೋಗ ಮಾಡಿದ. ಬಕನ ಶಕ್ತಿ ಸ್ವಲ್ಪ ಕುಂಠಿತವಾಯಿತು. ವಾಯು ವಾಯವ್ಯಾಸ್ತ್ರ ಪ್ರಯೋಗಿಸಿದ. ಬಕ ಹಾರಿ ಬೇರೆ ಕಡೆ ನಿಂತ. ವರುಣ ಕಲ್ಲಿನ ಮಳೆಗರೆದ. ಬಕನಿಗೆ ಮೈಯಲ್ಲಿ ಸ್ವಲ್ಪ ನೋವಾಯಿತು. ಅಗ್ನಿ ಆಗ್ನೇಯಾಸ್ತ್ರ ಪ್ರಯೋಗಿಸಿದ. ಬಕನ ರೆಕ್ಕೆ ಸ್ವಲ್ಪ ಸುಟ್ಟಿತು. ಕುಬೇರ ಅರ್ಧಚಂದ್ರಪ್ರಯೋಗ ಮಾಡಿದ. ಬಕನ ಕಾಲು ಸ್ವಲ್ಪ ಮುರಿಯಿತು. ಶಿವನ ಶೂಲದಿಂದಲೂ ಅವನಿಗೆ ಮೂರ್ಛೆ ಮಾತ್ರ ಉಂಟಾಯಿತು. ಋಷಿಮುನಿಗಳೆಲ್ಲರೂ ಭಯದಿಂದ ಕೃಷ್ಣನಿಗೇನೂ ಅಪಾಯ ಬಾರದಿರಲೆಂದು ಪ್ರಾರ್ಥನೆ ಮಾಡಿದರು. ಈಗ ಕೃಷ್ಣ ದಾನವನ ಉದರದೊಳಗೆ ಬೆಂಕಿಯಾಗಿ ಪ್ರಜ್ವಲಿಸಿ ಉರಿದ. ಅವನ ಶರೀರವನ್ನೆಲ್ಲ ಸುಡತೊಡಗಿದ. ಆತ ಒಡನೆ ಕೃಷ್ಣನನ್ನು ವಮನ ಮಾಡಿ ಅಸು ನೀಗಿದ.

ಬಕನನ್ನು ಕೊಂದು ಕೃಷ್ಣ ಬಾಲಕರೊಂದಿಗೆ ಹಸುಕರುಗಳೊಂದಿಗೆ ಕದಂಬವನವನ್ನು ಹೊಕ್ಕ. ಅಲ್ಲಿ ಪ್ರಲಂಬ ಎಂಬ ಮಹಾಬಲಿಷ್ಠ ದುಷ್ಟದಾನವನೊಬ್ಬ ಎತ್ತಿನ ರೂಪದಿಂದ ಬಂದು ಕೊಂಬುಗಳಿಂದ ಕೃಷ್ಣನನ್ನೆತ್ತಿ ತಿರುಗಿಸಿದ. ಮಕ್ಕಳೆಲ್ಲರೂ ದೂರಕ್ಕೆ ಓಡಿ ಭಯದಿಂದ ಅಳತೊಡಗಿದರು. ಬಲರಾಮನಿಗೆ ಕೃಷ್ಣ ಪರಮಾತ್ಮನೆಂಬ ಅರಿವಿದ್ದುದರಿಂದ ಅವನು ಭಯಪಡದೆ ಮಕ್ಕಳನ್ನು ಸಮಾಧಾನ ಪಡಿಸಿದ. 'ಏಕೆ ಭಯ?' ಎಂದ. ಅಷ್ಟರಲ್ಲಿ ಕೃಷ್ಣ ತಾನೇ ಕೊಂಬುಗಳಲ್ಲಿ ಎತ್ತನ್ನು ಎತ್ತಿ ಆಕಾಶದಲ್ಲಿ ಗರಗರನೆ ತಿರುಗಿಸಿ ನೆಲದ ಮೇಲೆ ಅಪ್ಪಳಿಸಿ ಒಗೆದ. ದೈತ್ಯ ಅಸು ನೀಗಿದ. ಮಕ್ಕಳೆಲ್ಲ ಆನಂದದಿಂದ ಕುಣಿದರು. ಕೇಕೇ ಹಾಕಿ ನಕ್ಕರು.

ಕೃಷ್ಣ ಭಾಂಡೀರವನವನ್ನು ಪ್ರವೇಶಿಸಿದ. ಅಲ್ಲಿ ಕೇಶಿ ಎಂಬ ದಾನವ ಕುದುರೆಯ ರೂಪದಿಂದ ಬಂದು ಕೃಷ್ಣನ ಕೈ ನುಂಗಲು ತೊಡಗಿದ. ಆದರೆ ಕೃಷ್ಣನ ಕೋಮಲವಾದ ಕೈ ವಜ್ರದಂತೆ ಕಠಿಣವಾಯಿತು. ದಾನವನ ಹಲ್ಲುಗಳು ಮುರಿದುವು. ಬೆಂಕಿಯಂತೆ ಉರಿವ ಕೈ ಅವನ ಮೈ ಎಲ್ಲವನ್ನು ಸುಟ್ಟಿತು. ಆತ ಅಸು ನೀಗಿದ. ಸ್ವರ್ಗದಲ್ಲಿ ದುಂದುಭಿಗಳು ಮೊಳಗಿದುವು, ಹೂಮಳೆಯಾಯಿತು.

ಈ ನಡುವೆ ದಿವ್ಯರೂಪಿಗಳಾದ ವಿಷ್ಣು ಪಾರ್ಷದರು ರಥಾರೂಢರಾಗಿ ಅಲ್ಲಿ ಬಂದು ಸೇರಿದರು. ಕಿರೀಟ ಕುಂಡಲ ವನಮಾಲಾ ಭೂಷಿತರು ಸರ್ವಾಂಗ ಚಂದನ ಬಳಿದುಕೊಂಡು ಗೋಪವೇಷ ಧರಿಸಿ ವಿನೋದಕ್ಕಾಗಿ ಕೈಯಲ್ಲಿ ಕೊಳಲು ಹಿಡಿದಿದ್ದರು. ಪೀತಾಂಬರ ಉಟ್ಟಿದ್ದರು. ಎಲ್ಲರೂ ದ್ವಿಭುಜರು ಕೃಷ್ಣನ ಬಳಿ ಬಂದು ನಿಂತರು. ಬಳಿಕ ದಿವ್ಯವಸ್ತ್ರ ಉಟ್ಟು ರತ್ನಾಲಂಕಾರ ಭೂಷಿತರಾದ ಮೂವರು ವಿಷ್ಣುಭಕ್ತರು ದಾನವ ಶರೀರದಿಂದ ಹೊರಗೆ ಬಂದು ಕೃಷ್ಣನನ್ನು ಸ್ತುತಿಸಿ ನಮಸ್ಕರಿಸಿ ಆ ಪಾರ್ಷದರೊಂದಿಗೆ ರಥವೇರಿ ಗೋಲೋಕಕ್ಕೆ ಹೊರಟುಹೋದರು.

**ನಾರದ:-** ಯಾರು ಆ ಮೂವರು ವಿಷ್ಣುಭಕ್ತರು? ಅವರಿಗೆ ದಾನವ ಶರೀರವೇಕೆ ಬಂದಿತು?

**ನಾರಾಯಣ:-** ನಾರದ, ಕೇಳು. ಪುರಾತನ ಇತಿಹಾಸ ಒಂದನ್ನು ಹೇಳುತ್ತೇನೆ. ಪುಷ್ಕರ ಕ್ಷೇತ್ರದಲ್ಲಿ ಸೂರ್ಯಗ್ರಹಣ ಕಾಲದಲ್ಲಿ ನಾನು ಇದನ್ನು ಶಿವನ ಮುಖದಿಂದ ಕೇಳಿದ್ದೇನೆ. ಧರ್ಮ ಬ್ರಹ್ಮ ಮುನಿಗಳೂ ಎಲ್ಲರೂ ಕೇಳಿದ್ದಾರೆ. ಲೋಕಪಾವನವಾದ ಕಥೆ ಇದು. ಗಂಧಮಾದನ ಪರ್ವತದಲ್ಲಿ ಗಂಧವಾಹ ಎಂಬ ಗಂಧರ್ವರಾಜನಿದ್ದ. ಮಹಾತಪಸ್ವಿ, ಹರಿಸೇವಾ ತತ್ಪರ. ಅವನಿಗೆ ನಾಲ್ವರು ಗಂಡು ಮಕ್ಕಳು, ವಸುದೇವ ಸುಹೋತ್ರ ಸುದರ್ಶನ ಸುಪಾರ್ಶ್ವ ಎಂದು. ಅವರೆಲ್ಲರೂ ಹಗಲಿರುಳು ಕೃಷ್ಣನ ಪಾದಕಮಲವನ್ನೆ ಸ್ಮರಿಸುವವರು, ದುರ್ವಾಸಮುನಿಯ ಶಿಷ್ಯರು. ನಿತ್ಯ ಹರಿಯನ್ನು ಕಮಲದಿಂದ ಪೂಜಿಸಿಯೆ ನೀರು ಕುಡಿಯುವ ವ್ರತ ತೊಟ್ಟವರು. ಬಹುಕಾಲ ತಪಸ್ಸು ಮಾಡಿ ಮಂತ್ರಸಿದ್ಧಿ ಪಡೆದಿದ್ದರು. ಅವರಲ್ಲಿ ವಸುದೇವ ದುರ್ವಾಸನಿಂದ ಯೋಗವನ್ನು ಉಪದೇಶ ಪಡೆದು ಯೋಗಬಲದಿಂದ ಶರೀರತ್ಯಾಗ ಮಾಡಿ ಕೃಷ್ಣನ ಪಾರ್ಷದನಾದ. ಮೂವರು ಸೋದರರು ಒಮ್ಮೆ ಸೂರ್ಯೋದಯಕಾಲದಲ್ಲಿ ಕಮಲವನ್ನು ತರಲು ಒಂದು ಸರೋವರವನ್ನು ಹೊಕ್ಕರು. ಕಮಲಗಳನ್ನು ಕಿತ್ತುಕೊಂಡು ಹೊರಡುವಷ್ಟರಲ್ಲಿ ಸರೋವರದ ಕಾವಲುಗಾರರು ಬಂದು ಅವರನ್ನು ಬಂಧಿಸಿ ಬಲಾತ್ಕಾರವಾಗಿ ಒಯ್ದು ಶಿವನ ಮುಂದೆ ನಿಲ್ಲಿಸಿದರು. ಅವರು ಶಿವನನ್ನು ಕಂಡು ಭಕ್ತಿಯಿಂದ ತಲೆಬಾಗಿ ನಮಿಸಿದರು. ಶಿವ ಅವರಿಗೆ ಆಶೀರ್ವದಿಸಿ ಕೇಳಿದ.

**ಶಿವ:-** ನೀವು ಯಾರು? ಪಾರ್ವತಿಯ ಸರೋವರವನ್ನು ಹೊಕ್ಕು ಕಮಲಗಳನ್ನು ಏಕೆ ಕಿತ್ತುಕೊಂಡಿರಿ? ಪಾರ್ವತಿಯ ವ್ರತಕ್ಕೆ ಬೇಕಾಗಿರುವ ಕಮಲಗಳು ಅವು. ಅದಕ್ಕೆ ಸರೋವರವನ್ನು ಲಕ್ಷ ಯಕ್ಷರು ಕಾಯುತ್ತಿದ್ದಾರೆ. ಪಾರ್ವತಿ ಮೂರು ತಿಂಗಳ ಒಂದು ವ್ರತವನ್ನು ಮಾಡುತ್ತಿದ್ದಾಳೆ. ಅದರಂತೆ ಪ್ರತಿದಿನ ಸಾವಿರ ಕಮಲಗಳಿಂದ ಹರಿಯನ್ನು ಆರಾಧಿಸಿ ಪತಿಸೌಭಾಗ್ಯವೃದ್ಧಿಯನ್ನು ಬೇಡುತ್ತಾಳೆ.

ಶಿವನ ಮಾತನ್ನು ಕೇಳಿ ಗಂಧರ್ವರು ಭೀತಿಯಿಂದ ಕೈಮುಗಿದು ಭಕ್ತಿಭಾರದಿಂದ ತಲೆಬಾಗಿಸಿ ನುಡಿದರು. ''ನಾವು ಗಂಧರ್ವರು, ಗಂಧವಾಹನ ಮಕ್ಕಳು. ಹರಿಗೆ ಕಮಲವನ್ನರ್ಪಿಸಿಯೆ ಜಲಪಾನ ಮಾಡುವ ವ್ರತ ತೊಟ್ಟಿದ್ದೇವೆ. ಇದು ಪಾರ್ವತಿಗಾಗಿ ರಕ್ಷಿತವಾಗಿರುವ ಕೊಳವೆಂದು ನಮಗೆ ತಿಳಿದಿರಲಿಲ್ಲ. ನಾವು ಕಿತ್ತುಕೊಂಡ ಕಮಲಗಳನ್ನು ತಿರುಗಿ ನಿನಗೇ ಅರ್ಪಿಸುವೆವು. ಇಂದು ನಾವು ಹರಿಗೆ ಕಮಲ ಅರ್ಪಿಸುವುದಿಲ್ಲ,

ನೀರನ್ನೂ ಕುಡಿಯುವುದಿಲ್ಲ. ಅಥವಾ ನೀರು ಕುಡಿಯುತ್ತೇವೆ. ಏಕೆಂದರೆ ನಾವು ನಿತ್ಯ ಯಾರನ್ನು ಕಮಲದಿಂದ ಪೂಜಿಸುವೆವೋ ಆ ಹರಿ ಬೇರೆಯಲ್ಲ ನೀನು ಬೇರೆಯಲ್ಲ. ನಿನಗೆ ಈಗ ಕಮಲವನ್ನು ಅರ್ಪಿಸಿದರೆ ಅದು ಹರಿಪೂಜೆಯೇ ಆಯಿತು. ಪರಮಾತ್ಮ ಒಬ್ಬನೆ, ಅದ್ವಿತೀಯ. ಅವನಿಗೆ ಶರೀರವಿಲ್ಲ ರೂಪವಿಲ್ಲ. ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಮಾಯೆಯಿಂದ ದೇಹವನ್ನು ತೋರುತ್ತಾನೆ. ಬೇರೆಬೇರೆ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಅದರಿಂದ ಕಮಲಗಳನ್ನು ನೀನೇ ಸ್ವೀಕರಿಸು. ನೀನೇ ನಮ್ಮ ಪ್ರಭು. ನಿನ್ನ ಪೂಜೆಯಿಂದ ನಮ್ಮ ಇಷ್ಟಾರ್ಥ ಪೂರೈಸುವುದು. ಪ್ರಭು, ನಾವು ಧ್ಯಾನಿಸುವ ನಿನ್ನ ಆ ದ್ವಿಭುಜ ಶ್ಯಾಮಸುಂದರ ಪೀತಾಂಬರಧಾರಿ, ಕೌಸ್ತುಭಧಾರಿಯಾದ, ರಾಧಾ ವಕ್ಷಃಸ್ಥಲದಲ್ಲಿರುವ, ಗೋಪೀಜನ ಪರಿವೃತವಾದ, ಕೃಷ್ಣರೂಪವನ್ನು ತೋರು.''

ಶ್ರೀಕೃಷ್ಣನ ರೂಪವರ್ಣನೆಯನ್ನು ಕೇಳಿದಾಗ ಶಿವನ ಮೈ ಪುಲಕಿತವಾಯಿತು. ಕಣ್ಣಲ್ಲಿ ನೀರು ತುಂಬಿಕೊಂಡು ಅವನು ನುಡಿದ. ''ನೀವು ವೈಷ್ಣವರು. ಪಾದಧೂಳಿಯಿಂದ ನೆಲವನ್ನು ಪವಿತ್ರಗೊಳಿಸುತ್ತ ಸಂಚರಿಸುವ ಇಂಥ ವಿಷ್ಣುಭಕ್ತರನ್ನು ಕಾಣಲು ನಾನು ಇಚ್ಛೆಪಡುತ್ತೇನೆ. ಸಜ್ಜನರ ಸಂಗ ದುರ್ಲಭ. ಪಾರ್ವತಿಗಾಗಲಿ ನನಗಾಗಲಿ ನೀವು ಸದಾ ಪ್ರಿಯರು. ನಮಗೆ ನಮಗಿಂತ, ನಮ್ಮ ಭಕ್ತರಿಗಿಂತ ವಿಷ್ಣುಭಕ್ತರು ಹೆಚ್ಚುಪ್ರಿಯರು. ಆದರೆ ನಾನು ಹಿಂದೆ ಮಾಡಿರುವ ಒಂದು ನಿಯಮವಿದೆ. ಪಾರ್ವತಿಯ ವ್ರತದ ಮಧ್ಯದಲ್ಲಿ ಕೊಳದಿಂದ ಕಮಲವನ್ನು ಕಿತ್ತುಕೊಳ್ಳುವವರು ಅಸುರರಾಗಿ ಜನಿಸಬೇಕು ಎಂದು. ಆ ನಿಯಮದಂತೆ ನೀವು ಅಸುರರಾಗಿ ಹುಟ್ಟುವಿರಿ. ಆದರೂ ಕೃಷ್ಣಭಕ್ತರಿಗೆ ಎಂದೂ ಕೇಡಿಲ್ಲ. ನೀವು ಮಾನವ ಶರೀರ ಪಡೆದು ಗೋಲೋಕಕ್ಕೆ ಹೋಗುವಿರಿ. ನೀವು ಕೃಷ್ಣರೂಪವನ್ನು ಪ್ರತ್ಯಕ್ಷ ನೋಡಲು ಉತ್ಸುಕರಾಗಿರುವಿರಿ ತಾನೆ? ನೀವು ಅಸುರರಾಗಿ ಭಾರತದಲ್ಲಿ ವೃಂದಾವನದೊಳಗೆ ಕೃಷ್ಣನನ್ನು ಕಂಡೇ ಮುಕ್ತರಾಗುವಿರಿ. ದಿವ್ಯ ರಥವೇರಿ ಗೋಲೋಕಕ್ಕೆ ತೆರಳುವಿರಿ. ಈಗಲೂ ನಿಮಗೆ ಕೃಷ್ಣರೂಪ ತೋರುತ್ತೇನೆ, ನೋಡಿರಿ'' ಎನ್ನುತ್ತ ಶಿವ ಆ ರೂಪವನ್ನು ತೋರಿದ. ಗಂಧರ್ವರು ನೋಡಿ ಸರ್ವರೂಪಿಯನ್ನು ನಮಿಸಿ ದಾನವಜನ್ಮ ತಳೆದು ವೃಂದಾವನಕ್ಕೆ ಬಂದರು. ಅವರಲ್ಲಿ ಸುದರ್ಶನನೇ ಪ್ರಲಂಬ, ಸುಹೋತ್ರ ಬಕಾಸುರ, ಸುಪಾರ್ಶ್ವ ಕೇಶಿ. ಇದು ಬಕ ಕೇಶಿ ಪ್ರಲಂಬರ ಚರಿತ್ರೆ, ಮೋಕ್ಷಕಾರಣವಾದ ಹರಿಚರಿತ್ರೆ.

**ನಾರದ:-** ಪಾರ್ವತಿ ಯಾವ ವ್ರತವನ್ನು ಆಚರಿಸಿದಳು, ಅದರಲ್ಲಿ ಆರಾಧ್ಯ ದೈವ ಯಾರು? ಅದರ ಫಲವೇನು? ಅದರ ನಿಯಮಗಳೇನು? ಅದಕ್ಕೆ ಬೇಕಾಗುವ ದ್ರವ್ಯಗಳು ಯಾವುವು? ಎಷ್ಟು ಸಮಯ ಆಚರಿಸಬೇಕು? ಇವನ್ನೆಲ್ಲ ಕೇಳಲು ಉತ್ಸುಕನಾಗಿದ್ದೇನೆ.

**ನಾರಾಯಣ:-** ಇದು ಪತಿಸೌಭಾಗ್ಯ ವರ್ಧನವೆಂಬ ತ್ರೈಮಾಸಿಕ ವ್ರತ. ಈವ್ರತದಲ್ಲಿ ಆರಾಧ್ಯದೈವ ರಾಧಾಸಮೇತನಾದ ಶ್ರೀಕೃಷ್ಣ. ಮೇಷ ಸಂಕ್ರಮಣದಂದು ಪ್ರಾರಂಭಿಸಿ ಮೂರು ತಿಂಗಳ ಕಾಲ ದಕ್ಷಿಣಾಯನಾರಂಭಕಾಲದವರೆಗೆ ಆಚರಿಸಿ ಸಮಾಪ್ತಿ ಮಾಡಬೇಕು. ಗಂಗಾತೀರದಲ್ಲಿ ಸಂಕಲ್ಪ ಮಾಡಿ ಕಲಶಸ್ಥಾಪನ ಮಾಡಬೇಕು.

ಕಲಶದ ಮೇಲೆ ಮಣಿಯಲ್ಲಿ ಶಾಲಗ್ರಾಮದಲ್ಲಿ ಅಥವಾ ಜಲದಲ್ಲಿ ರಾಧಾಸಮೇತನಾದ ಕೃಷ್ಣನನ್ನು ಆವಾಹಿಸಿ ಪೂಜಿಸಬೇಕು. ಮೊದಲಿಗೆ ಪಂಚದೇವತಾರಾಧನೆ ಮಾಡಿ ಕೃಷ್ಣನನ್ನು ಧ್ಯಾನಿಸಬೇಕು. ಧ್ಯೇಯ ಆಕಾರ ಹೀಗೆ - ''ಮೇಘಶ್ಯಾಮ ಪೀತಾಂಬರಧಾರಿ. ಶರತ್ಕಾಲದ ಪೂರ್ಣಚಂದ್ರನಂಥ ಮುಖ, ಅದರಲ್ಲಿ ಮಂದಹಾಸದ ಪ್ರಭೆ. ಶರತ್ಕಾಲದಲ್ಲಿ ಅರಳಿದ ಕಮಲದಂಥ ಕಣ್ಣುಗಳು. ಗೋಪಿಯರ ಮನ ಸೆಳೆಯುತ್ತ ರಾಧೆಯನ್ನು ನೋಡುತ್ತ ಅವಳ ವಕ್ಷಃಸ್ಥಳವನ್ನು ಆಲಿಂಗಿಸಿದ್ದಾನೆ. ಬ್ರಹ್ಮ ಅನಂತ ಶಿವ ಧರ್ಮ ಮುಂತಾದ ದೇವತೆಗಳು ಅವನನ್ನು ಸ್ತುತಿಸುತ್ತಾರೆ.''

ಹೀಗೆ ಧ್ಯಾನ ಮಾಡಿ ಆವಾಹಿಸಬೇಕು. ಬಳಿಕ ರಾಧೆಯನ್ನೂ ಯಜುರ್ವೇದ ಮಾಧ್ಯಂದಿನ ಶಾಖೆಯಲ್ಲಿ ಹೇಳಿದಂತೆ ಧ್ಯಾನಮಾಡಿ ಆವಾಹಿಸಬೇಕು. ಧ್ಯೇಯವಾದ ಆಕಾರ ಹೀಗಿದೆ - ''ರಾಧೆ ರಾಸೇಶ್ವರಿ, ರಮಣೀಯಳು, ರಾಸೋಲ್ಲಾಸರಸದಲ್ಲಿ ಉತ್ಸುಕಳು. ರಾಸಮಂಡಲದ ಮಧ್ಯಭಾಗದಲ್ಲಿದ್ದಾಳೆ. ರಾಸಾಧಿಷ್ಠಾತ್ರಿ ದೇವಿ, ರಾಸೇಶ್ವರನ ವಕ್ಷಃಸ್ಥಳದಲ್ಲಿದ್ದಾಳೆ. ರಾಸ ರಸಿಕಳು, ರಸಿಕೇಶ್ವರನಾದ ಶ್ಯಾಮಸುಂದರನ ಪ್ರಿಯೆ. ರಸಿಕರಲ್ಲಿ ಮೊದಲನೆಯವಳು, ರಮ್ಯರಮಾರೂಪಳು. ಪ್ರಿಯತಮನೊಂದಿಗೆ ರಮಣೋತ್ಸುಕಳು. ಶರತ್ಕಾಲದಲ್ಲಿ ಅರಳಿದ ಕಮಲಕ್ಕಿಂತ ಚೆಲುವಾದ ಕಣ್ಣಿನವಳು. ಬಾಗಿದ ಹುಬ್ಬುಗಳುಳ್ಳವಳು. ಕಣ್ಣಿಗೆ ಕಾಡಿಗೆ ಹಾಕಿಕೊಂಡಿದ್ದಾಳೆ. ಶರತ್ಕಾಲದ ಹುಣ್ಣಿಮೆಚಂದ್ರನಂಥ ಮುಖದಲ್ಲಿ ಮಂದಹಾಸದಿಂದ ಒಪ್ಪುವವಳು. ಸಂಪಿಗೆ ಹೂವಿನಂಥ ಮೈಬಣ್ಣ, ಮೈಗೆ ಶ್ರೀಗಂಧದ ಲೇಪ, ಹಣೆಯಲ್ಲಿ ಕಸ್ತೂರಿ ಸಿಂದೂರಗಳ ತಿಲಕ, ಕೆನ್ನೆಯಲ್ಲಿ ಪತ್ರಾವಳಿ, ವಹ್ನಿಶುದ್ಧವಾದ ಸೀರೆ ಉಟ್ಟಿದ್ದಾಳೆ. ರತ್ನ ಕುಂಡಲ, ಎದೆಯಲ್ಲಿ ಹೊಳೆಯುವ ರತ್ನಹಾರ, ಕೈಗಳಿಗೆ ರತ್ನದ ಬಳೆಗಳು, ಕಾಲುಗಳಿಗೆ ರತ್ನದ ಗೆಜ್ಜೆಗಳು. ಬ್ರಹ್ಮಾದಿ ಸೇವ್ಯನಾದ ಶ್ರೀಕೃಷ್ಣನಿಂದಲೂ ಸೇವಿತಳು. ಸರ್ವೇಶನಾದ ಕೃಷ್ಣ ಅವಳನ್ನು ಸ್ತುತಿಸುತ್ತಿದ್ದಾನೆ. ಪ್ರಪಂಚಮೂಲಕಾರಣಳಾದ ಈ ರಾಧೆಯನ್ನು ಭಜಿಸುವೆನು.'' ಹೀಗೆ ಧ್ಯಾನಿಸಿ ಕೃಷ್ಣನೊಂದಿಗೆ ರಾಧೆಯನ್ನು ಪೂಜಿಸಬೇಕು. ಪ್ರತಿದಿನ ಭಕ್ತಿಯಿಂದ ಷೋಡಶ ಉಪಚಾರಗಳನ್ನು ಅರ್ಪಿಸಬೇಕು. ಪ್ರತಿದಿನ ನೂರೆಂಟು ಕಮಲಗಳಿಂದ 'ಕೃಷ್ಣಾಯ ಸ್ವಾಹಾ' ಎಂದು ಅಗ್ನಿಯಲ್ಲಿ ನೂರೆಂಟು ಆಹುತಿಯಿತ್ತು ಹೋಮ ಮಾಡಬೇಕು. ಮಾವು ಬಾಳೆಹಣ್ಣುಗಳಿಂದಲೂ ಘಲಯುಕ್ತ ತಿಲದಿಂದಲೂ ನೂರೆಂಟು ಆಹುತಿಗಳು. ಹಣ್ಣುಗಳು ಅಖಂಡವಿರಬೇಕು. ಅವುಗಳನ್ನು ಕುಯ್ದಿರಬಾರದು. ಪ್ರತಿದಿನ ನೂರು ಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

ಹೀಗೆ ಮೂರು ತಿಂಗಳ ಕಾಲ ವ್ರತವನ್ನಾಚರಿಸಿ ಉದ್ಯಾಪನ ಮಾಡಬೇಕು. ಅಂದು ತೊಂಬತ್ತು ಸಾವಿರ ಕಮಲಗಳಿಂದ ಆಹುತಿ ನೀಡಬೇಕು. ಒಂಬತ್ತು ಸಾವಿರ ಬ್ರಾಹ್ಮಣರಿಗೆ ಭೋಜನ. ಒಂಬತ್ತು ಸಾವಿರದೇಳುನೂರಿಪ್ಪತ್ತು ಫಲಗಳನ್ನು ನೀಡಬೇಕು. ಘೃತಯುಕ್ತ ತಿಲದಿಂದ ತೊಂಬತ್ತು ಸಾವಿರ ಆಹುತಿ ನೀಡಬೇಕು. ಬ್ರಾಹ್ಮಣರಿಗೆ ಅನ್ನವಸ್ತ್ರಯಜ್ಞೋಪವೀತ ಫಲ ಲಡ್ಡುಗಳನ್ನು ನೀಡಬೇಕು. ತಣ್ಣೀರಿನಿಂದ ತುಂಬಿದ ತೊಂಬತ್ತು ಕಲಶಗಳನ್ನು ದಾನ ಮಾಡಬೇಕು. ಹೀಗೆ ವ್ರತ ಸಮಾಪ್ತಿ ಮಾಡಿ ದಕ್ಷಿಣೆಯಾಗಿ ಒಂದು ಸಾವಿರ ಅಲಂಕೃತವಾದ ಎತ್ತುಗಳನ್ನು

ನೀಡಬೇಕು. ಹೀಗೆ ತ್ರೈಮಾಸಿಕ ವ್ರತ ಮಾಡಿದರೆ ಉತ್ತಮ ಸಂತತಿ ದೊರೆಯುವುದು. ಪತಿಸೌಭಾಗ್ಯ ವರ್ಧಿಸುವುದು. ನೂರು ಜನ್ಮಗಳಲ್ಲಿ ಸ್ತ್ರೀಗೆ ಪತಿಪುತ್ರರ ಪ್ರೀತಿ ಲಭಿಸುವುದು. ಪುತ್ರ ಸೇವಕನಂತೆ ವಿಧೇಯನಾಗುತ್ತಾನೆ. ಪತಿ ತನ್ನ ಎಲ್ಲ ಮಾತನ್ನು ನಡೆಸುವ ಮನಸ್ಸಿನವನಾಗುತ್ತಾನೆ. ಅವಳಿಗೆ ಪ್ರತಿಕ್ಷಣ ರಾಧಾಕೃಷ್ಣರ ಭಕ್ತಿ ಹೆಚ್ಚುತ್ತದೆ.

ಈ ವ್ರತವನ್ನು ಸ್ವಾಯಂಭುವ ಮನು ಶತರೂಪೆಯರು ಮಾಡಿದರು, ಅಗಸ್ತ್ಯಮುನಿ ಪುರೋಹಿತ. ದೇವಹೂತಿ ಆಕೂತಿಯರೂ ಪುಲಸ್ತ್ಯನ ಪೌರೋಹಿತ್ಯದಲ್ಲಿ ಈವ್ರತವನ್ನು ಮಾಡಿದರು. ಕ್ರತುಮುನಿಯ ಪೌರೋಹಿತ್ಯದಲ್ಲಿ ರೋಹಿಣಿ, ಗೌತಮರ ಪೌರೋಹಿತ್ಯದಲ್ಲಿ ರತಿ, ವಸಿಷ್ಠರ ಪೌರೋಹಿತ್ಯದಲ್ಲಿ ಬೃಹಸ್ಪತಿಪತ್ನಿ ತಾರೆ, ಬೃಹಸ್ಪತಿಯ ಪೌರೋಹಿತ್ಯದಲ್ಲಿ ಶಚೀ, ಮರೀಚಿಯ ಪೌರೋಹಿತ್ಯದಲ್ಲಿ ಸ್ವಾಹಾದೇವಿ, ಹೀಗೆ ಎಲ್ಲರೂ ಈ ವ್ರತವನ್ನು ಆಚರಿಸಿದರು. ಇದನ್ನು ಕಂಡು ಪಾರ್ವತಿ ತಾನೂ ವ್ರತವನ್ನಾಚರಿಸಲು ಬಯಸಿ ಪತಿಯಲ್ಲಿ ಅನುಮತಿ ಬೇಡಿದಳು.

**ಪಾರ್ವತಿ:-** ನಾಥ, ನನಗೆ ಒಂದು ವ್ರತವನ್ನು ಆಚರಿಸಲು ಅನುಮತಿ ನೀಡು. ಅದು ಇಷ್ಟದೇವನಾದ ಶ್ರೀಹರಿಯ ವ್ರತಗಳಲ್ಲಿ ಶ್ರೇಷ್ಠವಾದುದು. ಸಮಸ್ತಮಂಗಲ ಪ್ರಾಪ್ತಿಗೆ ಸಾಧನ. ಯಜ್ಞದಾನ ವೇದಾಧ್ಯಯನ ತೀರ್ಥಯಾತ್ರೆ ಭೂಪ್ರದಕ್ಷಿಣೆ ಈ ಎಲ್ಲವೂ ಈ ವ್ರತದ ಹದಿನಾರನೆ ಒಂದಂಶಕ್ಕೆ ಸಮಾನವಾಗಲಾರವು. ಇದು ಸದಾ ಹರಿಸ್ಮರಣೆ ನೀಡುವುದು. ಅದರಿಂದ ಜೀವನ್ಮುಕ್ತನಾದ ಪುರುಷನ ದರ್ಶನದಿಂದ ಮುಕ್ತಿ ದೊರೆಯುವುದು. ಅವನ ಪಾದಧೂಳಿಯಿಂದ ಭೂಮಿ ಪವಿತ್ರವಾಗುವುದು ಅವನ ದರ್ಶನದಿಂದ ಲೋಕ ಪವಿತ್ರವಾಗುವುದು. ಬ್ರಹ್ಮ, ವಿಷ್ಣು, ಧರ್ಮ ಶೇಷ, ನೀನು, ಗಣೇಶ ಎಲ್ಲರೂ ಹರಿಯ ಚರಣಕಮಲ ಧ್ಯಾನದಿಂದಲೆ ಅವನಿಗೆ ಸಮಾನರೆನಿಸಿರುವಿರಿ. ಯಾರು ಯಾರನ್ನು ಸದಾ ಧ್ಯಾನಿಸುವನೋ ಅವನು ನಿಶ್ಚಯವಾಗಿ ಅವನನ್ನು ಹೊಂದುತ್ತಾನೆ. ಮಾತ್ರವಲ್ಲ, ಧ್ಯಾನ ಮಾಡುವವನು ಗುಣ ತೇಜಸ್ಸು ಬುದ್ಧಿ ಜ್ಞಾನಗಳಲ್ಲಿ ಧ್ಯೇಯಮೂರ್ತಿಗೆ ಸಮಾನನಾಗುವನು. ಶ್ರೀಕೃಷ್ಣನ ಧ್ಯಾನ ತಪಸ್ಸು ಸೇವೆಗಳಿಂದಲೆ ನಾನು ನಿಮ್ಮಂಥ ಪತಿಪುತ್ರರನ್ನು ಪಡೆದಿದ್ದೇನೆ. ಅನಾಯಾಸವಾಗಿ ಎಲ್ಲ ಅಭೀಷ್ಟಗಳನ್ನೂ ಹೊಂದಿದ್ದೇನೆ. ನನಗಿನ್ನೇನು ಬೇಕು. ನಿನ್ನಂಥ ಪತಿ, ಗಣೇಶ ಕಾರ್ತಿಕೇಯರಂಥ ಮಕ್ಕಳು ಶ್ರೀಕೃಷ್ಣನ ಅಂಶಭೂತನಾದ ಹಿಮವಂತನಂಥ ತಂದೆ ಸಿಕ್ಕಿದ್ದಾರೆ. ಪ್ರಭು, ನನಗೆ ಏನು ದುರ್ಲಭವಿದೆ?'' ಪಾರ್ವತಿಯ ಮಾತನ್ನು ಕೇಳಿ ಶಿವ ಪ್ರಸನ್ನನಾದ. ಅವನ ಮೈ ಪುಲಕಿತವಾಯಿತು. ನಗುತ್ತ ಮಧುರವಾಗಿ ನುಡಿದ.

**ಶ್ರೀಮಹಾದೇವ:-** ದೇವಿ, ನೀನು ಮಹಾಲಕ್ಷ್ಮೀ ಸ್ವರೂಪಳು. ನಿನಗೇನು ಕಡಿಮೆ ಇದೆ? ನೀನು ಸರ್ವಸಂಪತ್‌ಸ್ವರೂಪಳು. ಅನಂತ ಶಕ್ತಿರೂಪಳು. ನೀನು ಯಾರ ಮನೆಯಲ್ಲಿ ವಾಸಮಾಡುವಿಯೋ ಅವನು ಪೂರ್ಣ ಐಶ್ವರ್ಯಕ್ಕೆ ಭಾಗಿಯಾಗುತ್ತಾನೆ. ನಾನು ಬ್ರಹ್ಮ ವಿಷ್ಣು ಎಲ್ಲರೂ ನಿನ್ನ ಕೃಪೆಯಿಂದ ಸೃಷ್ಟಿ ಸ್ಥಿತಿ ಸಂಹಾರಗಳನ್ನು ನಡೆಸುತ್ತಿದ್ದೇವೆ. ನೀನಿಲ್ಲದಿದ್ದರೆ ನಾವು ಯಾರೂ ಯಾವುದಕ್ಕೂ ಸಮರ್ಥರಲ್ಲ. ಆದರೂ ಪತಿವ್ರತೆಯಾದ ನಾರಿಯರು ಪತಿಯಾಜ್ಞೆ ಪಡೆದೇ ವ್ರತವನ್ನಾಚರಿಸುವರು. ನೀನೂ ಹಾಗೇ ನನ್ನಾಜ್ಞೆಯಂತೆ ವ್ರತವನ್ನು ಮಾಡು. ಹಿಂದೆ ಅವರೆಲ್ಲರೂ

ಮಾಡಿದ್ದಕ್ಕಿಂತ ವಿಲಕ್ಷಣವಾಗಿ ಅತ್ಯುತ್ತಮ ರೀತಿಯಿಂದ ನೀನು ವ್ರತವನ್ನು ಮಾಡು. ಸನತ್ಕುಮಾರ ನಿನಗೆ ಪುರೋಹಿತನಾಗಲಿ. ಈ ವ್ರತಕ್ಕಾಗಿ ಎಷ್ಟು ಕಮಲಗಳು, ದ್ರವ್ಯಗಳು, ಬ್ರಾಹ್ಮಣರು ಬೇಕಾಗುವರೋ ಅಷ್ಟನ್ನು ನಾನು ನಿನಗೆ ಒದಗಿಸಿಕೊಡುತ್ತೇನೆ. ದ್ರವ್ಯಭಂಡಾರ ರಕ್ಷಕನಾಗಿ ಕುಬೇರನನ್ನು ನೇಮಿಸು. ದಾನಕಾರ್ಯವನ್ನು ನಾನು ನಡೆಸಿಕೊಡುತ್ತೇನೆ. ಭಗವತಿ ಲಕ್ಷ್ಮಿ ಧನ ನೀಡುವಳು. ಅಗ್ನಿ ವೇದಪಾಠ ನಡೆಸುತ್ತಾನೆ. ವರುಣ ನೀರನ್ನು ನೀಡುತ್ತಾನೆ. ಯಕ್ಷರು ದ್ರವ್ಯಗಳನ್ನು ಹೊತ್ತುತರುತ್ತಾರೆ. ಅವರ ಮೇಲ್ವಿಚಾರಣೆಗೆ ಸ್ಕಂದನಿರುತ್ತಾನೆ. ಸ್ಥಳವನ್ನು ಶುದ್ಧೀಕರಿಸುವ ಕಾರ್ಯವನ್ನು ವಾಯು ಮಾಡುತ್ತಾನೆ. ಅನ್ನಬಡಿಸುವ ವ್ಯವಸ್ಥೆಯನ್ನು ಇಂದ್ರ ನೋಡಿಕೊಳ್ಳುತ್ತಾನೆ. ಚಂದ್ರ ವ್ರತಕ್ಕೆ ಅಧಿಷ್ಠಾಪಕ. ಸೂರ್ಯ ದಾನಕ್ಕೆ ಯೋಗ್ಯಾಯೋಗ್ಯರನ್ನು ನೋಡಿ ಹೇಳುತ್ತಾನೆ. ವ್ರತದಲ್ಲಿ ಹರಿಗೆ ಎಷ್ಟು ಫಲಪುಷ್ಪಗಳನ್ನು ಸಮರ್ಪಿಸಬೇಕೋ ಅದಕ್ಕಿಂತ ಹೆಚ್ಚೇ ಸಮರ್ಪಿಸು. ಎಷ್ಟು ಬ್ರಾಹ್ಮಣರಿಗೆ ಭೋಜನ ನೀಡಬೇಕಾಗುವುದೋ ಅದಕ್ಕಿಂತ ಹೆಚ್ಚೇ ಬ್ರಾಹ್ಮಣರನ್ನು ನಿಮಂತ್ರಿಸು. ಸಮಾಪ್ತಿದಿನಗಳಲ್ಲಿ ಸುವರ್ಣ ರತ್ನ ಮುತ್ತು ಹವಳ ಮುಂತಾದ ಎಲ್ಲ ದ್ರವ್ಯಗಳನ್ನು ದಕ್ಷಿಣೆಯಾಗಿ ನೀಡು.''

ಹೀಗೆ ಹೇಳಿ ಶಿವ ಪಾರ್ವತಿಯಿಂದ ವ್ರತವನ್ನು ಮಾಡಿಸಿದ. ದೇವಿ ಎಲ್ಲರಿಗಿಂತ ವಿಲಕ್ಷಣವಾಗಿಯೇ ವೈಭವದಿಂದ ವ್ರತ ನಡೆಸಿದಳು. ಬ್ರಾಹ್ಮಣರಿಗೆ ಅವರಿಂದ ಹೊರಲಾಗದಷ್ಟು ದಾನಗಳನ್ನು ನೀಡಿದಳು. ಇದು ಹಿಂದಿನ ಇತಿಹಾಸ. ಮುಂದೆ ಪ್ರಕೃತವಾದ ಕೃಷ್ಣಚರಿತ್ರೆಯನ್ನು ಹೇಳುತ್ತೇನೆ ಕೇಳು. ಶ್ರೀಕೃಷ್ಣನ ಬಾಲಲೀಲೆ ಪ್ರತಿಯೊಂದು ನೂತನವೇ.

ಶ್ರೀಕೃಷ್ಣ ಬಕ ಮುಂತಾದ ದಾನವರನ್ನು ಕೊಂದು ಮನೆಗೆ ಹಿಂತಿರುಗಿದ. ಮಕ್ಕಳೆಲ್ಲರೂ ಕಾಡಿನಲ್ಲಿ ನಡೆದ ಸಂಗತಿಗಳನ್ನೆಲ್ಲ ಎಲ್ಲರಿಗೂ ಬಣ್ಣಿಸಿ ಹೇಳಿದರು. ಎಲ್ಲರೂ ಆಶ್ಚರ್ಯಪಟ್ಟರು. ಆದರೆ ನಂದನಿಗೆ ಭಯವಾಯಿತು. ಅವನು ಎಲ್ಲ ಹಿರಿಯ ಗೋಪಗೋಪಿಯರನ್ನು ಕರೆಸಿಕೊಂಡು ಸಮಾಲೋಚನೆ ನಡೆಸಿದ. ಗೋಕುಲದಲ್ಲಿ ದಾನವರ ಉಪದ್ರವ ಅಧಿಕವಾದ್ದರಿಂದ ಅದನ್ನು ತೊರೆದು ಎಲ್ಲರೂ ವೃಂದಾವನಕ್ಕೆ ಹೊರಟರು. ಕೃಷ್ಣರಾಮರೂ ಎಲ್ಲ ಮಕ್ಕಳೊಂದಿಗೆ ಹೊರಟರು. ಹಾಡುತ್ತ ಹೋಗುವವರು ಕೆಲವರು. ಕೆಲವರು ಕೊಳಲು ನುಡಿಸುತ್ತ ನಡೆಯುವವರು, ನಾನಾ ವೇಷದಿಂದ ಕೆಲವರು ಅಭಿನಯಿಸುತ್ತಾರೆ, ಕೈ ಚಪ್ಪಾಳೆ ಹಾಕುತ್ತಾರೆ. ಕೊಂಬು ಊದುತ್ತಾರೆ. ತಾಳ ಹಾಕುತ್ತಾರೆ, ಕೆಲವರು ಹೂಮಾಲೆ ತೊಟ್ಟಿದ್ದಾರೆ, ಕೆಲವರು ಎಲೆ ಚಿಗುರೆಲೆಗಳಿಂದ ಅಲಂಕರಿಸಿಕೊಂಡಿದ್ದಾರೆ. ಕೆಲವರು ಆಜಾನುಲಂಬಿ ವನಮಾಲೆ ಧರಿಸಿದ್ದಾರೆ. ಹೀಗೆ ನಾನಾ ವೇಷಭೂಷಣಗಳನ್ನು ತೊಟ್ಟು ಒಂಭತ್ತು ಕೋಟಿ ಮಕ್ಕಳು ಪ್ರಯಾಣ ಮಾಡಿದ್ದಾರೆ. ಕೋಟಿಕೋಟಿಗಟ್ಟಲೆ ಗೋಪಗೋಪಿಯರು ನಡೆದಿದ್ದಾರೆ. ರಾಧೆಯ ಸಖಿಯರು ಸುಶೀಲೆ ಮುಂತಾದವರು ದಿವ್ಯವಸ್ತ್ರಧರಿಸಿ ಕೆಲವರು ರಥವೇರಿ, ಕೆಲವರು ಪಲ್ಲಕ್ಕಿಯಲ್ಲಿ ಕುಳಿತು ಪ್ರಯಾಣ ಬೆಳೆಸಿದರು. ರಾಧೆ ರತ್ನಾಭರಣಭೂಷಿತಳಾಗಿ ಸಖಿಯರೊಂದಿಗೆ ರಥವೇರಿ ಪ್ರಯಾಣ ಮಾಡಿದಳು.

ಯಶೋದೆ, ರೋಹಿಣಿ, ನಂದ, ಸುನಂದ, ಶ್ರೀದಾಮ, ಗಿರಿಭಾನು, ವಿಭಾಕರ ವೀರಭಾನು ಚಂದ್ರಭಾನು ಇವರೆಲ್ಲರೂ ಆನೆಗಳನ್ನೇರಿದರು. ಕೃಷ್ಣರಾಮರು ಬಂಗಾರದ ರಥವೇರಿದರು. ಹೀಗೆ ಕುದುರೆ ಆನೆ ರಥಗಳನ್ನೇರಿ ಎಲ್ಲ ಗೋಪಗೋಪಿಯರು ಸಂಗೀತವಾದ್ಯ ನಿರತರಾಗಿ ಪ್ರಯಾಣ ಬೆಳೆಸಿದರು. ಎಲ್ಲರೂ ವೃಂದಾವನವನ್ನು ಸೇರಿದರು. ಅಲ್ಲಿ ಶೂನ್ಯಪ್ರದೇಶದಲ್ಲಿ ಮರಗಳ ಕೆಳಗೆ ನಿಂತರು. ಶ್ರೀಕೃಷ್ಣನೆಂದ, "ಇಲ್ಲಿ ಎಲ್ಲರಿಗೂ ದಿವ್ಯವಾದ ಮನೆಗಳಿವೆ. ದೇವತೆಗಳು ನಿರ್ಮಿಸಿರುವ ಮನೆಗಳು ದೇವತಾನುಗ್ರಹವಿಲ್ಲದೆ ಕಣ್ಣಿಗೆ ಕಾಣಿಸಲಾರವು. ಆದರಿಂದ ಇಂದು ವನದೇವತೆಗಳನ್ನು ಪೂಜಿಸಿ ಒಂದು ರಾತ್ರಿಯನ್ನು ಕಳೆಯಿರಿ. ನಾಳೆ ಬೆಳಿಗ್ಗೆ ಸುಂದರವಾದ ಮನೆಗಳನ್ನು ನೀವು ನೋಡುವಿರಿ. ಧೂಪದೀಪ ನೈವೇದ್ಯಗಳಿಂದ ಪುಷ್ಪಗಂಧಗಳಿಂದ ವಟಮೂಲದಲ್ಲಿ ದೇವಿ ಚಂಡಿಕೆಯನ್ನು ಆರಾಧಿಸಿರಿ." ಶ್ರೀಕೃಷ್ಣನ ಮಾತನ್ನು ಕೇಳಿ ಗೋಪಗೋಪಿಯರು ದೇವಿಯನ್ನು ಪೂಜಿಸಿ ಉಂಡು ರಾತ್ರಿ ಮಲಗಿ ನಿದ್ರೆ ಹೋದರು.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಬಕ ಪ್ರಲಂಬ ಕೇಶಿ ವಧಪೂರ್ವಕ ವೃಂದಾವನಗಮನವೆಂಬ ಹದಿನಾರನೆಯ ಅಧ್ಯಾಯ ಮುಗಿದುದು*



## ವೃಂದಾವನ ವರ್ಣನೆ

ಅಧ್ಯಾಯ - ೧೭

**ಶ್ರೀನಾರಾಯಣ:-** ನಾರದ, ರಾತ್ರಿಯಲ್ಲಿ ಗೋಕುಲವಾಸಿಗಳೆಲ್ಲರೂ ವೃಂದಾವನದಲ್ಲಿ ಮಲಗಿ ನಿದ್ದೆ ಹೋದರು. ನಿದ್ದೆಗೆ ಸ್ವಾಮಿಯಾದ ಶ್ರೀಕೃಷ್ಣನೂ ಯಶೋದೆಯ ಮಡಿಲಲ್ಲಿ ಗಾಢವಾದ ನಿದ್ದೆಗೆ ವಶನಾಗಿದ್ದಾನೆ. ಕೆಲವರು ಉತ್ತಮವಾದ ಹಾಸಿಗೆ ಹಾಸಿ ಮಲಗಿದರು. ಕೆಲವರು ಗೋಪಿಯರು ತಮ್ಮ ಮಕ್ಕಳನ್ನು ಮಡಿಲಲ್ಲಿರಿಸಿಕೊಂಡು ಹಾಗೇ ನಿದ್ದೆ ಹೋದರು. ಕೆಲವರು ಗಾಡಿಗಳಲ್ಲಿ ಕೆಲವರು ರಥದಲ್ಲಿ ಹೀಗೆ ಎಲ್ಲರೂ ನಿದ್ರಿಸುತ್ತಿದ್ದಂತೆ ಚಂದ್ರನ ಬೆಳದಿಂಗಳು ಎಲ್ಲೆಡೆ ಹರಡಿತು. ನಾನಾ ಬಗೆಯ ಹೂಗಳ ಸುವಾಸನೆ ಹರಡಿತು. ವೃಂದಾವನ ನಂದನವನದಂತಾಯಿತು. ಆಗ ಶಿಲ್ಪಿಗಳಿಗೆಲ್ಲ ಮೂಲಗುರುವಾದ ವಿಶ್ವಕರ್ಮ ಮೂರು ಕೋಟಿ ನಿಪುಣರಾದ ಶಿಲ್ಪಿಗಳೊಂದಿಗೆ ಬಂದ. ದಿವ್ಯಸೂಕ್ಷ್ಮವಸ್ತ್ರ ಉಟ್ಟು ಮನೋಹರವಾದ ರತ್ನಮಾಲೆ ತೊಟ್ಟು, ಜ್ಞಾನದಿಂದಲೂ ವಯಸ್ಸಿನಿಂದಲೂ ವೃದ್ಧನಾಗಿದ್ದರೂ ಶರೀರದಲ್ಲಿ ನವತರುಣ, ಸುಂದರ, ಕಾಮದೇವನಿಗೆ ಸಮಾನ. ಅವನು ವೃಂದಾವನದಲ್ಲಿ ಐದು ಯೋಜನ ವಿಸ್ತಾರವಾದ ಪವಿತ್ರವಾದ ಒಂದು ನೂತನ ನಗರವನ್ನು ನಿರ್ಮಾಣ ಮಾಡಲು ಉದ್ಯುಕ್ತನಾದ. ಕುಬೇರನ ಕಡೆಯ ಯಕ್ಷರು ಸ್ಫಟಿಕ ಪದ್ಮರಾಗ ಇಂದ್ರನೀಲ ಸ್ಯಮಂತಕ ಚಂದ್ರಕಾಂತ ಸೂರ್ಯಕಾಂತಗಳನ್ನೂ ಚಾಮರ ದರ್ಪಣ ಬಂಗಾರದ ಕಲಶ

ಮುಂತಾದುವನ್ನೂ ತಂದರು. ಶ್ರೀಕೃಷ್ಣನನ್ನು ಧ್ಯಾನಿಸಿ ವಿಶ್ವಕರ್ಮ ನಗರನಿರ್ಮಾಣ ಕಾರ್ಯವನ್ನು ಆರಂಭಿಸಿದ. ಪ್ರತಿಮನೆಗೂ ಚತುಃಶಾಲೆ, ಕಪಾಟ, ಸ್ತಂಭ, ಸೋಪಾನ, ಚಿತ್ರ, ಗೊಂಬೆಗಳನ್ನು ವಜ್ರದ ಪ್ರಾಕಾರಗಳನ್ನು ಕಂದಕಗಳನ್ನೂ ನಿರ್ಮಿಸಿದ. ವೃಷಭಾನುವಿಗೆ ಅತಿಸುಂದರವಾದ ಭವನವನ್ನು ನಿರ್ಮಿಸಿದ. ನಿರ್ಜನವಾದ ಮನೋಹರವಾದ ಒಂದು ಪ್ರದೇಶದಲ್ಲಿ ಸಂಪಿಗೆವನದೊಳಗೆ ಕಲಾವತಿಗೆ ಸ್ವಾಮಿಯೊಡನೆ ವಿಹಾರಮಾಡಲು ವಿಶಾಲವಾದ ಮನೆಯನ್ನು ನಿರ್ಮಿಸಿದ. ಅದು ಎಲ್ಲ ಮನೆಗಳಿಗಿಂತ ವಿಲಕ್ಷಣವಾಗಿತ್ತು.

**ನಾರದ:-** ಕಲಾವತಿ ಯಾರು, ಯಾರ ಪತ್ನಿ? ಅವಳಿಗೆ ಮನೆಯನ್ನು ಎಲ್ಲಕ್ಕಿಂತ ವಿಲಕ್ಷಣವಾಗಿ ವಿಶ್ವಕರ್ಮನೇಕೆ ನಿರ್ಮಿಸಿದ?

**ನಾರಾಯಣ:-** ಪಿತೃಗಳ ಮಾನಸಕನ್ಯೆ ಕಲಾವತಿ. ಲಕ್ಷ್ಮಿಯ ಅಂಶದಿಂದ ಯುಕ್ತಳು. ವೃಷಭಾನನ ಪತ್ನಿ, ಪತಿವ್ರತೆ. ಅವಳ ಮಗಳೇ ರಾಧೆ. ಶ್ರೀಕೃಷ್ಣನಿಗೆ ಪ್ರಾಣಕ್ಕಿಂತ ಹೆಚ್ಚಿನವಳು. ಕೃಷ್ಣನ ಅರ್ಧಾಂಶ ಸಂಭೂತೆ. ತೇಜಸ್ಸಿನಲ್ಲಿ ಅವನಿಗೆ ಸಮಾನಳು. ಅವಳ ಪಾದಕಮಲ ಧೂಳಿಯಿಂದ ಭೂಮಿ ಪವಿತ್ರವಾಯಿತು. ಸಜ್ಜನರು ಸದಾ ಅವಳಲ್ಲಿ ದೃಢವಾದ ಭಕ್ತಿಯನ್ನು ಬಯಸುತ್ತಾರೆ.

**ನಾರದ:-** ಪಿತೃದೇವತೆಗಳ ಮಾನಸಕನ್ಯೆ ಒಬ್ಬ ಮಾನವನಿಗೆ ಮಗಳಾಗಿ ಹೇಗೆ ಲಭಿಸಿದಳು? ಅವನೇನು ಪುಣ್ಯ ಮಾಡಿದ್ದ? ಹಿಂದೆ ಅವನು ಏನಾಗಿದ್ದ? ರಾಧೆಯನ್ನು ಮಗಳಾಗಿ ಪಡೆಯಲು ಏನು ತಪಸ್ಸು ಮಾಡಿದ್ದ?

**ನಾರಾಯಣ:-** ಹಿಂದೆ ಪಿತೃದೇವತೆಗಳಿಗೆ ಮೂವರು ಮಾನಸ ಪುತ್ರಿಯರು ಜನಿಸಿದರು. ಕಲಾವತಿ, ರತ್ನಮಾಲೆ, ಮೇನಕೆ ಎಂದು. ಮೇನಕೆ ಹರಿಯ ಅಂಶಸಂಭೂತನಾದ ಪರ್ವತರಾಜನಾದ ಹಿಮಾಲಯನನ್ನು ಮದುವೆಯಾದಳು. ರತ್ನಮಾಲೆ ಜನಕಮಹಾರಾಜನನ್ನು ವರಿಸಿದಳು. ಅವಳ ಮಗಳೆ ಸಾಕ್ಷಾತ್ ಲಕ್ಷ್ಮಿಯ ಅವತಾರಳಾದ ಅಯೋನಿಜೆಯಾದ ರಾಮಪತ್ನಿ ಸೀತಾದೇವಿ. ಮೇನಕೆಯ ಗರ್ಭದಲ್ಲಿ ದಕ್ಷಪುತ್ರಿ ದಾಕ್ಷಾಯಣಿ ಅವತರಿಸಿದಳು. ಪಾರ್ವತಿ ಎನಿಸಿದಳು. ಕಲಾವತಿ ಮನುವಂಶ ಸಂಭೂತನಾದ ಹರಿಯ ಅಂಶಯುಕ್ತನಾದ ರಾಜಾ ಸುಚಂದ್ರನನ್ನು ಮದುವೆಯಾದಳು. ರಾಜ ಅವಳ ರೂಪಯೌವನಗಳಿಗೆ ಹಾವಭಾವಗಳಿಗೆ ಮನಸೋತು ಅವಳೊಡನೆ ದಿವ್ಯವಾದ ರಥದಲ್ಲಿ ಕುಳಿತು ಮಲಯಪರ್ವತ ರಮ್ಯವಾದ ಕಣಿವೆಗಳನ್ನು ಸೇರಿ ಏಕಾಂತದಲ್ಲಿ ವಿಹರಿಸಿದ. ಪಶ್ಚಿಮ ಸಮುದ್ರತೀರದ ಪುಷ್ಪೋದ್ಯಾನಗಳಲ್ಲಿ, ನಂದನವನದ ರಮ್ಯಪ್ರದೇಶಗಳಲ್ಲಿ, ಮಂದರಪರ್ವತದ ಕಣಿವೆಗಳಲ್ಲಿ, ಕಾವೇರೀ ತೀರದ ಉಪವನಗಳಲ್ಲಿ ಎಲ್ಲೆಡೆ ಹಗಲು ರಾತ್ರಿಗಳ ವ್ಯತ್ಯಾಸವಿಲ್ಲದೆ ಕಾಲದ ಪರಿವೆಯೆ ಇಲ್ಲದೆ ಬಹುಕಾಲ ವಿಹರಿಸಿದ. ಸಾವಿರವರ್ಷಗಳು ಒಂದು ಮುಹೂರ್ತದಂತೆ ಕಳೆದು ಹೋದುವು. ಬಳಿಕ ವಿಂಧ್ಯಪರ್ವತದ ಪುಲಹಾಶ್ರಮದಲ್ಲಿ ತಪಸ್ಸಿಗೆ ಕುಳಿತು ನಿರಾಹಾರನಾಗಿ ನಿಷ್ಕಾಮನಾಗಿ ಮೋಕ್ಷ ಒಂದನ್ನೆ ಬಯಸುತ್ತ ಸಾವಿರ ವರ್ಷಕಾಲ ತಪಸ್ಸು ಮಾಡಿದ. ಅವನ ಮೈಯೆಲ್ಲ ಹುತ್ತ ವ್ಯಾಪಿಸಿತು. ಕಲಾವತಿ ಹುತ್ತವನ್ನು ಸರಿಸಿ

ನೋಡುತ್ತಾಳೆ. ರಕ್ತಮಾಂಸಗಳಿಲ್ಲದ ಪಂಚಪ್ರಾಣಗಳೂ ಇಲ್ಲದ ಅಸ್ಥಿಮಾತ್ರವಾದ ನಿಶ್ಚೇಷ್ಟವಾದ ಪತಿಯ ಶರೀರ ಕಣ್ಣಿಗೆ ಗೋಚರವಾಯಿತು. ಶೋಕಾರ್ತಳಾಗಿ ಗಟ್ಟಿಯಾಗಿ ಅತ್ತಳು. ನಾಥ! ಎನ್ನುತ್ತ ಅವನ ಎದೆಗಪ್ಪಿಕೊಂಡು ಗೋಳಾಡಿದಳು.ಅವಳ ದೀನಧ್ವನಿ ಕೇಳಿ ಬ್ರಹ್ಮ ಕನಿಕರದಿಂದ ಪ್ರತ್ಯಕ್ಷನಾಗಿ ಕಮಂಡಲು ಜಲದಿಂದ ರಾಜನ ಮೈಗೆ ಪ್ರೋಕ್ಷಿಸಿದ. ಒಡನೆ ರಾಜನಲ್ಲಿ ಪ್ರಾಣವಾಯು ಸಂಚರಿಸಲಾರಂಭಿಸಿತು. ಆತ ಎಚ್ಚತ್ತು ಇದಿರಿಗೆ ಬ್ರಹ್ಮ ನಿಂತಿರುವುದನ್ನು ಕಂಡು ವಂದಿಸಿದ. ಬ್ರಹ್ಮನೆಂದ, ''ರಾಜ, ನಿನಗೆ ಬೇಕಾದ ವರ ಕೇಳು.'' ರಾಜ ನಿರ್ವಾಣ ಮುಕ್ತಿಯನ್ನು ಬೇಡಿದ. ಇನ್ನೇನು ಬ್ರಹ್ಮ ಪತಿಗೆ ಮುಕ್ತಿಯನ್ನು ಅನುಗ್ರಹಿಸುವನೊ ಎಂದು ಬೆದರಿದಳು ಕಲಾವತಿ. ಭಯದಿಂದ ಅವಳ ಗಂಟಲು ಒಣಗಿತು. ಬ್ರಹ್ಮನಲ್ಲಿ ಕೇಳಿದಳು, ''ರಾಜನಿಗೆ ಮುಕ್ತಿ ಕೊಟ್ಟಿಯಾದರೆ ನನಗಿನ್ನು ಗತಿ ಯಾರು, ಹೇಳು. ಕಾಂತೆ ಕಾಂತನಿಲ್ಲದೆ ಶೋಭಿಸುವಳೆ? ಪತಿವ್ರತೆಯಾದ ಹೆಣ್ಣಿಗೆ ಪತಿಸೇವೆಯೊಂದೆ ವ್ರತ. ಪತಿಯೆ ಆಕೆಗೆ ದೈವ. ಪತಿಸೇವೆ ಮಾಡದವಳಿಗೆ ಬೇರೆ ವ್ರತದಾನ ತಪಸ್ಸು ಪೂಜೆ ಜಪ ಹೋಮಾದಿಗಳೆಲ್ಲವೂ ವ್ಯರ್ಥ. ತೀರ್ಥಸ್ನಾನ ಭೂ ಪ್ರದಕ್ಷಿಣೆ ಯಜ್ಞಗಳು ಮಹಾದಾನಗಳು. ವೇದಾಧ್ಯಯನ ತಪಸ್ಸು ಬ್ರಾಹ್ಮಣಾರಾಧನೆ ದೇವಪೂಜೆ ಇವು ಯಾವುವೂ ಪತಿಸೇವೆಯ ಹದಿನಾರನೆ ಒಂದಂಶಕ್ಕೂ ಸಮನಲ್ಲ. ಪತಿಯ ಮುಂದೆ ಕಟು ನುಡಿ ನುಡಿವವಳು ಕಾಲಸೂತ್ರವೆಂಬ ನರಕದಲ್ಲಿ ಬಿದ್ದು ನರಳಿ ನರಳಿ ಬಳಿಕ ನೂರಾರು ಬಾರಿ ಕ್ರಿಮಿಯಾಗಿ ಹುಟ್ಟುವಳು. ಇದರ ಬಗ್ಗೆ ವೇದಗಳಲ್ಲಿ ಹೇಳುವುದನ್ನು ಸ್ತ್ರೀಯಾದ ನಾನು ಬಲ್ಲವರ ಮುಖದಿಂದ ಕಿಂಚಿತ್ತು ಕೇಳಿ ತಿಳಿದಿದ್ದೇನೆ. ನೀನಾದರೊ ವೇದಗಳಿಗೆ ಜನಕ, ಗುರುಗಳಿಗೆ ಗುರು, ಸರ್ವಜ್ಞ. ನಿನಗೆ ನಾನೇನು ಹೇಳಲಿ? ನೀನು ನನ್ನ ಪತಿಗೆ ಮುಕ್ತಿ ನೀಡಿದೆ ಎಂದರೆ ನನ್ನನ್ನು, ನನ್ನ ಸ್ತ್ರೀಧರ್ಮವನ್ನು, ನನ್ನ ಯೌವನವನ್ನು ಕಾಪಾಡುವವರು ಯಾರು? ಸಣ್ಣಂದಿನಲ್ಲಿ ತಂದೆ ಕಾಪಾಡುತ್ತಾನೆ. ಬಳಿಕ ಯೋಗ್ಯವರನಿಗೆ ಕೊಟ್ಟು ಮದುವೆಮಾಡುತ್ತಾನೆ. ಬಳಿಕ ಪತಿಯೆ ಸತಿಯನ್ನು ಕಾಪಾಡಬೇಕು. ಅವನು ತೀರಿಹೋದ ಮೇಲೆ ಮಕ್ಕಳು ಕಾಪಾಡಬೇಕು. ಹೀಗೆ ಬಾಲ್ಯ ಯೌವನ ವೃದ್ಧಾಪ್ಯಗಳಲ್ಲಿ ಕ್ರಮವಾಗಿ ತಾತ ಪತಿ ಸುತರು ಸ್ತ್ರೀಯನ್ನು ಕಾಪಾಡಬೇಕು. ಯಾರ ರಕ್ಷಣೆಯಲ್ಲಿಯೂ ಇಲ್ಲದೆ ಸ್ವತಂತ್ರಳಾಗಿ ಬದುಕುವ ಹೆಣ್ಣು ದಾರಿ ತಪ್ಪಿದರೆ ಆ ಒಂದು ಜನ್ಮದಲ್ಲಿ ಹಿಂದೆ ನೂರು ಜನ್ಮಗಳಲ್ಲಿ ಮಾಡಿರಬಹುದಾದ ಪುಣ್ಯಗಳನ್ನೆಲ್ಲ ಕಳೆದುಕೊಳ್ಳುತ್ತಾಳೆ.

ಪತಿವ್ರತೆಯಾದ ಸ್ತ್ರೀಗೆ ಪತಿಯಲ್ಲಿ ಸದಾ ಪ್ರೀತಿ. ಆದರೆ ಮಗುವಿನಲ್ಲಿ ಅದು ಎದೆಹಾಲುಣ್ಣುವಾಗ ಮಾತ್ರ ಅಧಿಕಪ್ರೀತಿ. ಅನ್ನ ಎಷ್ಟು ರುಚಿಕರವಾಗಿದ್ದರೂ ಹೊಟ್ಟೆ ತುಂಬುವವರೆಗೆ ಮಾತ್ರವೆ ಅದರಲ್ಲಿ ಪ್ರೀತಿ ಇರುತ್ತದೆ ತಾನೆ?

ಪತಿವ್ರತಾಧರ್ಮವನ್ನು ಅರಿಯದ ಹೆಣ್ಣಿಗೆ ಬೆಂಕಿ ವಿಷಗಳು ಹೇಗೋ ಹಾಗೆ ಅರಿತ ಹೆಣ್ಣಿಗೆ ಪತಿಯ ವಿರಹಾಗ್ನಿ. ಅವಳನ್ನು ಸುಡಲು ಅದೊಂದೇ ಸಾಕು.

ಬ್ರಹ್ಮನೆ, ನನ್ನನ್ನು ಬಿಟ್ಟು ನನ್ನ ಪತಿಯೊಬ್ಬನನ್ನೆ ಮುಕ್ತನನ್ನಾಗಿ ಮಾಡುವಿಯಾದರೆ ನಿನಗೆ ಸ್ತ್ರೀಹತ್ಯಾ ಪಾತಕ ಬರಲೆಂದು ಶಪಿಸುತ್ತೇನೆ.''

ಕಲಾವತಿಯ ಮಾತು ಕೇಳಿ ಭೀತಿಗೊಂಡ ಬ್ರಹ್ಮ ಅಮೃತದಂಥ ಹಿತನುಡಿಯನ್ನಾಡಿದ- ''ಮಗಳೆ, ನಿನ್ನನ್ನು ಬಿಟ್ಟು ನಿನ್ನ ಪತಿಗೆ ಮುಕ್ತಿಯನ್ನು ನಾನೀಗ ಕೊಡಲಾರೆ. ಪ್ರಾರಬ್ಧ ಕರ್ಮವನ್ನು ಅನುಭವಿಸದೆ ಯಾರಿಗೂ ಮುಕ್ತಿ ಇಲ್ಲ. ಅದರಿಂದ ನೀನು ಪತಿಯೊಡನೆ ಅನೇಕ ವರ್ಷಗಳ ಕಾಲ ಸ್ವರ್ಗಸುಖ ಭೋಗಿಸು. ಬಳಿಕ ನೀವು ಭಾರತದೇಶದಲ್ಲಿ ಹುಟ್ಟುವಿರಿ. ಆಗ ರಾಧೆ ನಿಮ್ಮ ಮಗಳಾಗಿ ಜನಿಸುವಳು. ಮುಂದೆ ರಾಧೆಯೊಡನೆಯೆ ಗೋಲೋಕಕ್ಕೆ ನೀವಿಬ್ಬರೂ ಹೋಗುವಿರಿ'' ಬ್ರಹ್ಮ ಹೀಗೆ ವರನೀಡಿ ತನ್ನ ಲೋಕಕ್ಕೆ ಮರಳಿದ.

ರಾಜದಂಪತಿಗಳು ಬಹುಕಾಲ ಪ್ರಾರಬ್ಧಕರ್ಮಫಲವಾದ ಸುಖಭೋಗಗಳನ್ನು ಅನುಭವಿಸಿ ಭರತಖಂಡದಲ್ಲಿ ಅವತರಿಸಿದರು. ಬ್ರಹ್ಮಾದಿಗಳಿಗೂ ದುರ್ಲಭವಾದ ದಿವ್ಯ ಪುಣ್ಯಕರ ಜನ್ಮವನ್ನು ಗೋಕುಲದಲ್ಲಿ ಪಡೆದರು. ಸುಚಂದ್ರ ವೃಷಭಾನುವಾಗಿ ಸುರಭಾನು ಪದ್ಮಾವತಿ ದಂಪತಿಗಳಿಗೆ ಮಗನಾಗಿ ಜನಿಸಿದ. ಹರಿಯ ಅಂಶಯುಕ್ತನಾಗಿದ್ದು ಜನ್ಮಾಂತರ ಸ್ಮರಣೆ ಉಳ್ಳವನಾಗಿ ಶುಕ್ಲಪಕ್ಷದ ಚಂದ್ರನಂತೆ ಪ್ರವರ್ಧಮಾನನಾಗಿ ಗೋಪಾಲಕರಿಗೆ ಅಧಿಪತಿಯೆನಿಸಿದ. ನಂದಗೋಪನಿಗೆ ಆಪ್ತನೆನಿಸಿದ. ಇತ್ತ ಕಲಾವತಿ ಕಾನ್ಯಕುಬ್ಜದ ರಾಜಾ ಭನಂದನನ ಯಜ್ಞಕುಂಡದಿಂದ ಅಯೋನಿಜೆಯಾಗಿ ಅವತರಿಸಿದಳು. ಲಕ್ಷ್ಮಿಯ ಅಂಶದಿಂದ ಯುಕ್ತಳಾಗಿ ಚಿನ್ನದಂತೆ ಹೊಳೆವ ಆ ಶಿಶುವಿಗೆ ರಾಣಿ ಸ್ತನ್ಯಪಾನವಿತ್ತು ಪೋಷಿಸಿದಳು. ಅವಳಿಗೆ ನಾಮಕರಣ ಮಾಡುವಾಗ 'ರಾಜನೆ, ಈಕೆಗೆ ಕಲಾವತಿ ಎಂದು ಹೆಸರಿಡು' ಎಂದಿತು ಅಶರೀರವಾಣಿ. ಕಾಲಕ್ರಮದಲ್ಲಿ ಆಕೆ ರೂಪಯೌವನ ಭರಿತಳಾಗಿ ಬೆಳೆದು ಮುನಿಗಳ ಮನಸ್ಸನ್ನೂ ಸೆಳೆದಳು. ಒಮ್ಮೆ ರಾಜಮಾರ್ಗದಲ್ಲಿ ಅಡಿಯಿಡುತ್ತಿದ್ದ ಆ ಗಜಗಮನೆಯನ್ನು ಕಂಡ ನಂದ ಅವಳ ಚೆಲುವನ್ನು ಕಂಡು ಮೈ ಮರೆತುಹೋದನು. ಬಳಿಕ ಎಚ್ಚೆತ್ತು ಬಳಿಯಲ್ಲಿ ಹೋಗುತ್ತಿರುವವರನ್ನು ಕೇಳಿದ 'ಯಾರು ಈ ಚೆಲುವೆ?' ಅವರು ಹೇಳಿದರು, 'ಈಕೆ ರಾಜಕುಮಾರಿ, ಕಲಾವತಿ. ರಾಜಾ ಭನಂದನನ ಅರಮನೆಯಲ್ಲಿ ಮಹಾಲಕ್ಷ್ಮಿಯ ಅಂಶಯುಕ್ತಳಾಗಿ ಜನಿಸಿದವಳು. ಈಗ ವಿಹಾರಕ್ಕಾಗಿ ತನ್ನ ಸಖಿಯ ಮನೆಗೆ ಹೋಗುತ್ತಿದ್ದಾಳೆ.' ನಂದಗೋಪ ಅರಮನೆಗೆ ಹೋಗಿ ರಾಜನಲ್ಲಿ ಹೀಗೆ ಪ್ರಸ್ತಾಪಿಸಿದ-

'ಮಹಾರಾಜ, ನಿನ್ನ ಮಗಳಿಗೆ ಯೋಗ್ಯನಾದ ವರ ನಮ್ಮಲ್ಲಿದ್ದಾನೆ. ಹೆಸರು ವೃಷಭಾನು. ಸುರಭಾನುವಿನ ಪುತ್ರ. ಶ್ರೀಮಂತ, ಗುಣವಂತ, ತರುಣ, ಸ್ಫುರದ್ರೂಪಿ, ಸಾಕ್ಷಾತ್ ನಾರಾಯಣಾಂಶದಿಂದ ಜನಿಸಿ ಗೋಕುಲಕ್ಕೆ ಅಧಿಪತಿಯಾಗಿದ್ದಾನೆ. ಪೂರ್ವಜನ್ಮದ ಸ್ಮರಣೆ ಆತನಿಗಿದೆ. ನಿನ್ನ ಮಗಳೂ ಕಮಲೆಯ ಅಂಶಸಂಭೂತಳು. ಅಯೋನಿಜೆಯಾಗಿ ಯಜ್ಞಕುಂಡದಿಂದ ಅವಿರ್ಭವಿಸಿದಳು. ಇಬ್ಬರೂ ಒಬ್ಬರಿಗೊಬ್ಬರು ಅನುರೂಪರು.'

ರಾಜ ವಿನಯದಿಂದ ನುಡಿದ, 'ವ್ರಜರಾಜ, ವಧೂವರರು ಜೊತೆ ಸೇರುವುದು ವಿಧಿಪ್ರೇರಣೆಯಿಂದ ಹೊರತು ಮನುಷ್ಯನ ಇಚ್ಛೆಯಿಂದಲ್ಲ. ವಧುವಿಗೆ ಜನ್ಮದಾತ ನಾನಾದರೂ ಸಂಬಂಧ ಕಲ್ಪಿಸುವವ ವಿಧಿ. ಯಾರು ಯಾರಿಗೆ ಮಗಳಾಗುತ್ತಾಳೆ, ಯಾರಿಗೆ ವಧುವಾಗುತ್ತಾಳೆ, ಯಾರು ವರನಾಗುತ್ತಾನೆ ಎನ್ನುವುದೆಲ್ಲ ಕರ್ಮಾನುಸಾರ ಫಲದಾತನಾದ ಆ ವಿಧಿಯ ವಶ. ಮಾಡಿದ ಕರ್ಮ ಉಣಲೇಬೇಕು. ಪೂರ್ವ

ಪುಣ್ಯವಿಲ್ಲದವನು ಮಾಡುವ ಪ್ರಯತ್ನವೆಲ್ಲ ನಿಷ್ಫಲವೆ ಆಗುತ್ತದೆ; ಅಶಕ್ತನು ಮಾಡುವ ಪ್ರಯತ್ನದಂತೆಯೆ ಅದು. ನನ್ನ ಮಗಳು ವೃಷಭಾನುವಿಗೆ ಮಡದಿಯಾಗುವಳೆಂದು ವಿಧಿ ಬರೆದಿದ್ದರೆ ಹಾಗೇ ಆಗುವುದು. ಅದನ್ನು ಯಾರೂ ತಡೆಯಲಾರರು' ಹೀಗೆ ಹೇಳಿ ಮಹಾರಾಜ ನಂದಗೋಪನಿಗೆ ಆದರದಿಂದ ಮಿಷ್ಟಾನ್ನ ಉಣಬಡಿಸಿದ. ನಂದಗೋಪ ಅವನ ಅನುಜ್ಞೆ ಪಡೆದು ನಂದಗೋಕುಲಕ್ಕೆ ತೆರಳಿದ. ಅಲ್ಲಿ ಸುರಭಾನುವಿನ ಮನೆಯಲ್ಲಿ ಎಲ್ಲವನ್ನೂ ತಿಳಿಸಿದ. ಸುರಭಾನು ಗರ್ಗಮಹರ್ಷಿಯ ಮೂಲಕ ವೃಷಭಾನುವಿಗೆ ಕಲಾವತಿಯನ್ನು ತಂದು ಮದುವೆ ಮಾಡಿದ. ಕಲಾವತಿಗೆ ತಂದೆ ಯಥೇಚ್ಛವಾಗಿ ಆನೆ ಕುದುರೆಗಳು ರತ್ನಾಭರಣಗಳು ಮುಂತಾದುವನ್ನು ಬಳುವಳಿಯಾಗಿ ಕೊಟ್ಟ.

ವೃಷಭಾನು ಕಲಾವತಿಯ ಜೊತೆಗೆ ಏಕಾಂತದಲ್ಲಿ ರಮಿಸುತ್ತ ಹಗಲು ರಾತ್ರಿಗಳು ಉರುಳುವುದನ್ನೆ ಅರಿಯದಾದ. ಕಲಾವತಿಗೂ ಒಮ್ಮೆ ಕಣ್ಣು ರೆಪ್ಪೆ ಮುಚ್ಚಿ ತೆರೆಯುವಷ್ಟು ಕಾಲವೂ ಪತಿಯನ್ನು ಅಗಲಿ ಇರುವುದು ಅಶಕ್ಯವೆನಿಸಿತ್ತು. ಪ್ರಣಯ ಕೇಳಿಯಲ್ಲಿ ಪ್ರೌಢೆ ಆಕೆ. ಆತ ಮನ್ಮಥನಂಥ ಯುವಕ. ಕಾಲಕ್ರಮದಲ್ಲಿ ಆ ದಂಪತಿಗಳಿಗೆ ರಾಧೆ ಮಗಳಾಗಿ ಜನಿಸಿದಳು. ಆಯೋನಿಜೆಯಾಗಿಯೆ ಅವತರಿಸಿದಳು. ಅವಳ ದರ್ಶನಮಾತ್ರದಿಂದ ಆ ದಂಪತಿಗಳು ಮುಕ್ತರಾದರು. ಇದು ರಾಧೆಯ ಅವತಾರದ ಕಥೆ. ಪಾಪವೆಂಬ ಕಟ್ಟಿಗೆಯನ್ನು ಸುಡುವ ಬೆಂಕಿಯ ಜ್ವಾಲೆ.

ನಾರದ, ಇನ್ನು ಪ್ರಕೃತ ಏನಾಯಿತೆಂಬುದನ್ನು ಹೇಳುತ್ತೇನೆ, ಕೇಳು. ವಿಶ್ವಕರ್ಮ ವೃಷಭಾನುವಿಗೆ ಅರಮನೆ ಕಟ್ಟಿಸಿಕೊಟ್ಟು ನಂದಗೋಪನಿಗೂ ಒಂದು ವಿಲಕ್ಷಣವಾದ ಅರಮನೆಯನ್ನು ಕಟ್ಟಿಸಲಾರಂಭಿಸಿದ. ಸುತ್ತಲೂ ಕಂದಕಗಳಿದ್ದು ಶತ್ರುಗಳಿಗೆ ಅಭೇದ್ಯವಾದ ಅರಮನೆ ಅದು. ಸಂಪಿಗೆ ಹೂಗಳ ಉದ್ಯಾನಗಳು ಮಾವು ಕಬ್ಬು ಹಲಸು ಖರ್ಜೂರ ದಾಳಿಂಬೆ ನಿಂಬೆ ಕಿತ್ತಳೆಗಳ ಉಪವನಗಳು. ಅವುಗಳ ನಡುವೆ ರತಿಕೇಳಿಗೆ ಯೋಗ್ಯವಾದ ಏಕಾಂತ ಸ್ಥಳಗಳು. ಅರಮನೆಗೆ ಮಣಿಖಚಿತವಾದ ಏಳು ದ್ವಾರಗಳು. ತುದಿಯಲ್ಲಿ ಚಿನ್ನದ ಕಲಶಗಳು. ಹೀಗೆ ಶೋಭಿಸುವ ನಂದಗೋಪನ ಅರಮನೆಯನ್ನು ಕಟ್ಟಿಸಿಕೊಟ್ಟು ವಿಶ್ವಕರ್ಮ ನಗರದ ರಾಜಮಾರ್ಗಗಳನ್ನು ನಿರ್ಮಿಸಿದ. ವರ್ತಕರ ವ್ಯಾಪಾರಕ್ಕೆ ತಕ್ಕುದಾದ ಮಣಿ ಮಂಟಪಗಳನ್ನೂ ನಿರ್ಮಿಸಿದ. ಬಳಿಕ ವೃಂದಾವನದಲ್ಲಿ ರಾಸಮಂಡಲವನ್ನೂ ರಚಿಸಿದ. ಅದು ಸುತ್ತಲೂ ಒಂದು ಯೋಜನ ವಿಸ್ತಾರವಾಗಿದ್ದು ಮಣಿನಿರ್ಮಿತವಾದ ಪ್ರಾಕಾರಗಳು ರತ್ನವೇದಿಕೆಗಳು ರತ್ನಮಂಟಪಗಳು ರತ್ನದೀಪಗಳು ರತಿಶಯ್ಯೆಗಳು ಸುವರ್ಣ ಕಲಶಗಳು ಮನೋಹರವಾದ ಹೂದೋಟಗಳು ಮತ್ತು ಸರೋವರಗಳಿಂದ ಶೋಭಿಸುವಂಥದ್ದು. ಈ ರಾಸಮಂಡಲದಲ್ಲಿ ಮಧುವನದ ಸಮೀಪದಲ್ಲಿ ರಾಧಾಮಾಧವರ ವಿಹಾರಕ್ಕೆ ಯೋಗ್ಯವಾದ ರತ್ನಮಂಟಪ ಒಂದನ್ನು ನಿರ್ಮಿಸಿದ. ಅದರ ಸುತ್ತಲೂ ಸಂಪಗೆ, ಕೇದಗೆ ಹೂಗಳ ಉದ್ಯಾನಗಳು. ಒಂಬತ್ತು ದ್ವಾರಗಳು. ರತ್ನಕಲಶಗಳು, ಧ್ವಜತೋರಣಗಳು ಶ್ವೇತಚಾಮರಗಳು ರತ್ನಕನ್ನಡಿಗಳು ರತ್ನಖಚಿತಶಯ್ಯೆಗಳು ಶುದ್ಧವಾದ ವಸ್ತ್ರಗಳು ಹೂಮಾಲೆಗಳು ಚಂದನ ಅಗುರು ಕಸ್ತೂರಿ ಕುಂಕುಮ ಮುಂತಾದ ಸುಗಂಧದ್ರವ್ಯಗಳು ತಾಂಬೂಲಗಳು ಇವೆಲ್ಲವುಗಳಿಂದ ಕೂಡಿದ್ದು ಶೃಂಗಾರರಸವರ್ಧಕವೂ ನವಸಂಗಮ ಯೋಗ್ಯವೂ ಆಗಿತ್ತು ಆ ಮಂಟಪ.

ವಿಶ್ವಕರ್ಮ ಹೀಗೆ ಎಲ್ಲ ಗೋಪಾಲಕರಿಗೂ ಮಂದಿರಗಳನ್ನು ನಿರ್ಮಿಸಿ ಅವರ ಹೆಸರುಗಳನ್ನು ಅವರ ಮಂದಿರದ ಮುಂದೆ ಬರೆಸಿದ. ಈ ಎಲ್ಲ ಕಾರ್ಯಗಳನ್ನೂ ಒಂದು ರಾತ್ರಿಯಲ್ಲಿ ಮಾಡಿ ಮುಗಿಸಿ ಅಲ್ಲಿಯೆ ಯಶೋದೆಯ ಮಡಿಲಲ್ಲಿ ನಿದ್ರಿಸುತ್ತಿದ್ದ ನಿದ್ರಾಧಿಪತಿಯಾದ ಶ್ರೀಕೃಷ್ಣನಿಗೆ ವಂದಿಸಿ ತನ್ನ ಲೋಕಕ್ಕೆ ಹಿಂತಿರುಗಿದ.

**ನಾರದ:-**ಪ್ರಭು, ವೃಂದಾವನಕ್ಕೆ ಆ ಹೆಸರು ಬರಲು ಕಾರಣವೇನು? ಆ ಹೆಸರು ಅನ್ವರ್ಥವೆ ಅಥವಾ ಕೇವಲ ಹೆಸರೆ, ಹೇಳು. ಅದರ ತತ್ವವನ್ನು ತಿಳಿದವ ನೀನೆ ತಾನೆ?

**ನಾರಾಯಣ:-** ನಾರದ, ಹಿಂದೆ ಸತ್ಯಯುಗದಲ್ಲಿ ಕೇದಾರನೆಂಬ ರಾಜ ಸಪ್ತದ್ವೀಪಗಳಿಗೆ ಒಡೆಯನಾಗಿದ್ದ. ಅವನಿಗೆ ಅನೇಕಮಂದಿ ಪತ್ನಿಯರು, ಪುತ್ರರು, ಪೌತ್ರರು. ಪ್ರಜೆಗಳನ್ನು ಮಕ್ಕಳಂತೆ ಕಾಪಾಡುತ್ತಿದ್ದ. ನೂರು ಯಾಗಗಳನ್ನು ಮಾಡಿದರೂ ಇಂದ್ರಪದವಿಯನ್ನು ಆಕ್ರಮಿಸಲಿಲ್ಲ. ಎಲ್ಲ ಬಗೆಯ ಪುಣ್ಯಕರ್ಮಗಳನ್ನೂ ಫಲಾಕಾಂಕ್ಷೆಯಿಲ್ಲದೆಯೆ ಶ್ರೀಕೃಷ್ಣನಲ್ಲಿ ಭಕ್ತಿಯಿಂದ ಆಚರಿಸುತ್ತಿದ್ದ. ಕೇದಾರನಂಥ ರಾಜ ಹಿಂದೆ ಇರಲಿಲ್ಲ, ಮುಂದೆ ಬರುವುದಿಲ್ಲ ಎನ್ನುವಂಥ ಕೀರ್ತಿಯನ್ನು ಗಳಿಸಿ ಮಕ್ಕಳಿಗೆ ರಾಜ್ಯವನ್ನು ಒಪ್ಪಿಸಿಕೊಟ್ಟು ಜೈಗೀಷವ್ಯನ ಉಪದೇಶದಿಂದ ಕಾಡಿನಲ್ಲಿ ತಪಸ್ಸು ಮಾಡಿದ. ಅವನ ಬಳಿ ಸದಾ ಸುದರ್ಶನಚಕ್ರವಿರುತ್ತಿತ್ತು. ಹೀಗೆ ಚಿರಕಾಲ ತಪಸ್ಸುಮಾಡಿ ಗೋಲೋಕವನ್ನು ಸೇರಿದ. ಆ ರಾಜರ್ಷಿಯ ಹೆಸರಿನಿಂದಲೆ ಬದರಿಕಾಶ್ರಮದ ಬಳಿಯ ಕೇದಾರಕ್ಷೇತ್ರ ಪ್ರಸಿದ್ಧವಾಗಿದೆ. ಅಲ್ಲಿ ಮರಣ ಹೊಂದುವ ಜೀವಿಗೆ ಕೂಡಲೆ ಮುಕ್ತಿ ಲಭಿಸುತ್ತದೆ.

ಕೇದಾರರಾಜನ ಮಗಳು ಕಮಲಾಂಶಸಂಭೂತಳಾದ ವೃಂದೆ. ಅವಳು ನಿಷ್ಕಾ ಮನೆಯಿಂದ ಹರಿಪ್ರೀತಿಗಾಗಿ ಕಾಡಿನಲ್ಲಿ ತಪಸ್ಸು ಮಾಡಿದಳು. ದೂರ್ವಾಸಮುನಿ ಉಪದೇಶಿಸಿದ ಮಂತ್ರ ಜಪಿಸುತ್ತ ಅರವತ್ತು ಸಾವಿರ ವರ್ಷ ತಪಗೈದು ಶ್ರೀಕೃಷ್ಣನನ್ನು ಕಂಡಳು. ಅವನ ರೂಪ ಕಂಡು ಕಾಮಬಾಣಕ್ಕೆ ಸಿಲುಕಿ ನೀನೆ ನನಗೆ ಪತಿಯಾಗಬೇಕೆಂದು ವರ ಬೇಡಿದಳು. ಕೃಷ್ಣ ತಥಾಸ್ತು ಎಂದು ಹೇಳಿ ಅವಳೊಡನೆ ಏಕಾಂತದಲ್ಲಿ ಚಿರಕಾಲ ವಿಹರಿಸಿದ. ಬಳಿಕ ಅವಳು ಕೃಷ್ಣನೊಡನೆಯೆ ಗೋಲೋಕಕ್ಕೆ ತೆರಳಿದಳು. ಅಲ್ಲಿ ರಾಧೆಗೆ ಸಮಾನವಾಗಿ ಕೃಷ್ಣನಿಗೆ ಪ್ರೇಯಸಿಯೆನಿಸಿದಳು. ಗೋಪಿಯರಲ್ಲಿ ಶ್ರೇಷ್ಠಳೆನಿಸಿದಳು. ವೃಂದೆ ತಪಸ್ಸು ಮಾಡಿದ ಸ್ಥಳ, ಅವಳು ಕೃಷ್ಣನೊಡನೆ ವಿಹಾರ ಮಾಡಿದ ಸ್ಥಳ ವೃಂದಾವನವೆನಿಸಿತು. ವೃಂದಾವನವೆಂಬ ಹೆಸರಿಗೆ ಇನ್ನೊಂದು ಕಾರಣವೂ ಇದೆ ಕೇಳು. ಕುಶಧ್ವಜನೆಂಬ ರಾಜನಿಗೆ ತುಳಸಿ ಮತ್ತು ವೇದವತಿ ಎಂಬ ಇಬ್ಬರು ಮಕ್ಕಳು ಜನಿಸಿದರು. ವೇದವತಿ ತಪಸ್ಸು ಮಾಡಿ ಹರಿಯ ಅನುಗ್ರಹದಿಂದ ಜನಕರಾಜನ ಪುತ್ರಿ ಸೀತೆಯಾಗಿ ಜನಿಸಿ ಪ್ರಸಿದ್ಧಳಾದಳು. ತುಳಸಿಯೂ ಹರಿಯ ಪ್ರೀತಿಗಾಗಿ ತಪಸ್ಸು ಮಾಡಿದಳು. ಆದರೆ ದೈವವಶಾತ್ ದೂರ್ವಾಸರ ಶಾಪಕ್ಕೀಡಾಗಿ ಶಂಖಚೂಡನೆಂಬ ಅಸುರನನ್ನು ಮದುವೆಯಾದಳು. ಬಳಿಕ ಹರಿಯನ್ನೆ ಹೊಂದಿದಳು. ಹರಿಯ ಶಾಪದಿಂದ ತಾನು ವೃಕ್ಷವಾದಳು. ಹರಿಯನ್ನು ಶಪಿಸಿ ಶಾಲಗ್ರಾಮ ಶಿಲೆಯನ್ನಾಗಿಸಿದಳು. ಆಶಿಲಾಮೂರ್ತಿಯ ವಕ್ಷಸ್ಥಳವನ್ನೆ ಆಶ್ರಯಿಸಿದಳು. ತುಳಸಿ ತಪಸ್ಸು ಮಾಡಿದ ಸ್ಥಳವೂ ಇದೇ ಆಗಿತ್ತು. ಅದರಿಂದಲೂ ಬೃಂದಾವನವೆಂದು ಹೆಸರಾಯಿತು.

ರಾಧೆಯ ಶ್ರುತಿಪ್ರಸಿದ್ಧವಾದ ಹದಿನಾರು ಹೆಸರುಗಳಲ್ಲಿ ವೃಂದೆ ಎಂಬುದೂ ಒಂದಾಗಿದೆ. ಈ ವೃಂದೆಯ ವಿಹಾರಸ್ಥಳವಾದ್ದರಿಂದಲೂ ವೃಂದಾವನವೆಂಬ ಹೆಸರು ಬಂದಿತು. ಕೃಷ್ಣ ಗೋಲೋಕದಲ್ಲಿ ಅವಳ ವಿಹಾರಕ್ಕೆ ಒಂದು ವೃಂದಾವನವನ್ನು ನಿರ್ಮಿಸಿಕೊಟ್ಟ. ಭೂಲೋಕದಲ್ಲಿ ಇನ್ನೊಂದು ವೃಂದಾವನವನ್ನೂ ನಿರ್ಮಿಸಿಕೊಟ್ಟ.

**ನಾರದ:-** ಜಗದ್ಗುರುವೆ, ರಾಧೆಯ ಹದಿನಾರು ದಿವ್ಯ ನಾಮಗಳಾವುವು? ಸಾಮವೇದೋಕ್ತವಾದ ದೇವಿಯ ಸಹಸ್ರನಾಮಗಳನ್ನು ಕೇಳಿದ್ದೇನೆ. ಹದಿನಾರು ನಾಮಗಳು ಈಸಹಸ್ರನಾಮಗಳಲ್ಲಿ ಸೇರಿದವುಗಳೆ ಅಥವಾ ಬೇರೆಯೆ? ಅವುಗಳು ದೇವಿಗೆ ಹೇಗೆ ಅನ್ವರ್ಥಕವಾಗಿವೆ ಎಂಬುದನ್ನೂ ಹೇಳು.

**ನಾರಾಯಣ:-** ರಾಧೆಯ ಹದಿನಾರು ನಾಮಗಳು ಇವು - ರಾಧೆ, ರಾಸೇಶ್ವರಿ, ರಾಸವಾಸಿನಿ, ರಸಿಕೇಶ್ವರಿ, ಕೃಷ್ಣಪ್ರಾಣಾಧಿಕೆ, ಕೃಷ್ಣಪ್ರಿಯೆ, ಕೃಷ್ಣಸ್ವರೂಪಿಣಿ, ಕೃಷ್ಣವಾಮಾಂಗ ಸಂಭೂತೆ, ಪರಮಾನಂದರೂಪಿಣಿ, ಕೃಷ್ಣೆ, ವೃಂದಾವನಿ, ವೃಂದೆ, ವೃಂದಾವನವಿನೋದಿನಿ, ಚಂದ್ರಾವಳಿ, ಚಂದ್ರಕಾಂತೆ, ಶತಚಂದ್ರನಿಭಾನನೆ, ಈ ನಾಮಗಳೆಲ್ಲವೂ ಸಹಸ್ರನಾಮಗಳಲ್ಲಿ ಸೇರಿದವುಗಳೆ.

'ರಾ' ಎಂದರೆ ಮೋಕ್ಷಸುಖ ನೀಡುವವಳು 'ಧಾ' ಎಂದರೆ ಸ್ವತಃ ಮೋಕ್ಷಸುಖ ಉಳ್ಳವಳು. ಆದರಿಂದ ರಾಧೆ ಎನಿಸಿದಳು. ರಾಸೇಶ್ವರನಾದ ಕೃಷ್ಣನ ಪತ್ನಿಯಾದ್ದರಿಂದ ರಾಸೇಶ್ವರಿ. ರಾಸಮಂಡಲದಲ್ಲಿ ವಾಸಮಾಡುವುದರಿಂದ ರಾಸವಾಸಿನಿ. ರಸಿಕೆಯರಾದ ದೇವಿಯರಿಗೆ ಒಡತಿಯಾದ್ದರಿಂದ ರಸಿಕೇಶ್ವರಿ. ಕೃಷ್ಣನಿಗೆ ಪ್ರಾಣಕ್ಕಿಂತ ಹೆಚ್ಚು ಪ್ರಿಯಳಾದ್ದರಿಂದ ಕೃಷ್ಣಪ್ರಾಣಾಧಿಕೆ. ಕೃಷ್ಣನಿಗೆ ಪ್ರಿಯಳು ರಾಧೆ, ರಾಧೆಗೆ ಪ್ರಿಯ ಕೃಷ್ಣ. ಆದರಿಂದ ರಾಧೆಗೆ ಕೃಷ್ಣಪ್ರಿಯೆ ಎಂದು ಹೆಸರು. ಲೀಲಾಮಾತ್ರದಿಂದ ಕೃಷ್ಣನ ಸ್ವರೂಪವನ್ನು ತೋರಬಲ್ಲಳು, ಹಾಗೂ ಎಲ್ಲ ಅಂಶಗಳಲ್ಲಿ ಕೃಷ್ಣನಿಗೆ ಸದೃಶಳು. ಆದರಿಂದ ಕೃಷ್ಣಸ್ವರೂಪಿಣಿ. ಕೃಷ್ಣನ ಶರೀರದ ಎಡಭಾಗದಿಂದ ಪ್ರಾದುರ್ಭವಿಸಿದುದರಿಂದ ಕೃಷ್ಣವಾಮಾಂಗಸಂಭೂತೆ. ಮೂರ್ತಿವೆತ್ತ ಪರಮಾನಂದ ಸ್ವರೂಪಳಾದ್ದರಿಂದ ಪರಮಾನಂದ ರೂಪಿಣಿ. 'ಕೃಷ್ಣಾ' ಎಂಬಲ್ಲಿ ಕೃಷ್ ಎಂದರೆ ಮೋಕ್ಷ. ಣ್ ಎಂದರೆ ಉತ್ಕೃಷ್ಟ. ಆ ಎಂದರೆ ಕೊಡುವವಳು. ಉತ್ಕೃಷ್ಟವಾದ ಮೋಕ್ಷ ನೀಡುವವಳಾದ್ದರಿಂದ ಕೃಷ್ಣೆ ಎನಿಸುತ್ತಾಳೆ. ವೃಂದಾವನದ ಒಡತಿ, ಅಧಿದೇವತೆ ರಾಧೆ. ಅದರಿಂದ ವೃಂದಾವನಿ ಎಂದು ಹೆಸರು. ಸಖಿಯರ ವೃಂದದಿಂದ ಕೂಡಿದವಳು ವೃಂದೆ. ವೃಂದಾವನದಲ್ಲಿಯೆ ಅವಳಿಗೆ ವಿನೋದ. ಅದರಿಂದ ವೃಂದಾವನವಿನೋದಿನಿ. ನಖಗಳೆಂಬ ಚಂದ್ರಸಮೂಹದಲ್ಲಿ ಮುಖ ಪ್ರತಿಫಲಿಸುವುದರಿಂದ ನಖ ಚಂದ್ರಾವಳಿಯಲ್ಲಿ ಮುಖಚಂದ್ರಾವಳಿ ಉಳ್ಳವಳು ಚಂದ್ರಾವಳಿ ಎನಿಸುತ್ತಾಳೆ. ಹಗಲು ರಾತ್ರಿ ಎನ್ನದೆ ಸದಾ ಚಂದ್ರನಂತೆ ಬೆಳಗುವುದರಿಂದ ಶ್ರೀಹರಿ ಅವಳನ್ನು ಚಂದ್ರಕಾಂತೆ ಎಂದು ಕರೆದ. ಮುಖದಲ್ಲಿ ಹಗಲೂ ರಾತ್ರಿಯೂ ಶರಚ್ಚಂದ್ರನ ಪ್ರಭೆ ಬೆಳಗುವುದರಿಂದ ಅವಳೆ ಶರಚ್ಚಂದ್ರ ಪ್ರಭಾನನೆ. ಈನಾಮಗಳನ್ನು ಅರ್ಥಸಹಿತವಾಗಿ ನಾರಾಯಣ ನಾಭಿಕಮಲದಲ್ಲಿರುವ ಬ್ರಹ್ಮನಿಗೆ ಹಿಂದೆ ಉಪದೇಶಿಸಿದ. ಬ್ರಹ್ಮ ನನ್ನ ತಂದೆಯಾದ ಧರ್ಮನಿಗೂ, ಧರ್ಮ ನನಗೂ ಉಪದೇಶಿಸಿದ. ಈ ರಾಧಾ

ಷೋಡಶನಾಮಸ್ತೋತ್ರ ಮಹಾಪುಣ್ಯಕರ. ವಿಷ್ಣುಭಕ್ತಿಹೀನನಿಗೆ ಇದನ್ನು ಉಪದೇಶಿಸಬೇಡ. ಪ್ರತಿದಿನ ತ್ರಿಸಂಧ್ಯೆಗಳಲ್ಲಿ ಪಠಿಸಿದರೆ ರಾಧಾಮಾಧವರ ಪಾದಕಮಲದಲ್ಲಿ ಭಕ್ತಿ ಲಭಿಸುವುದು. ಭಕ್ತಿಯಿಂದ ಅವರ ದಾಸ್ಯ. ಬಳಿಕ ಅಣಿಮಾದಿ ಯೋಗಸಿದ್ಧಿ. ಎಲ್ಲ ವ್ರತದಾನ ಉಪವಾಸ ಯಜ್ಞಯಾಗಗಳು ವೇದಾಧ್ಯಯನ ತೀರ್ಥಸ್ನಾನ ಭೂಪ್ರದಕ್ಷಿಣ ಮುಂತಾದ ಪುಣ್ಯಕರ್ಮಗಳೂ ಈ ಸ್ತೋತ್ರಪಾಠದ ಹದಿನಾರನೆ ಒಂದಂಶಕ್ಕೆ ಸಮನಾಗಲಾರವು.

**ನಾರದ:-** ಪ್ರಭು, ದುರ್ಲಭವಾದ ಸ್ತೋತ್ರ ಕವಚಗಳನ್ನು ನಿನ್ನ ಅನುಗ್ರಹದಿಂದ ಪಡೆದಂತಾಯಿತು. ಈಗ ಹೇಳು. ಬೆಳಿಗ್ಗೆ ಗೋಪರೆಲ್ಲರೂ ಎದ್ದು ನಗರವನ್ನು ನೋಡಿ ಏನೆಂದರು?

**ನಾರಾಯಣ:-** ಅರುಣೋದಯಕಾಲದಲ್ಲಿ ಗೋಪರು ಎದ್ದು ನೋಡುತ್ತಾರೆ, ಎಲ್ಲಕ್ಕಿಂತ ವಿಲಕ್ಷಣವಾದ ನಗರ ಕಣ್ಣ ಮುಂದೆ ಇದೆ! ಆಶ್ಚರ್ಯ! ಆಶ್ಚರ್ಯ! ಎಂದರು. 'ಇದು ಎಲ್ಲಿಂದ ಬಂದಿತು?' ಎಂದರು. 'ಈ ಭೂಮಿಯಲ್ಲಿ ಏನೇನು ಆಶ್ಚರ್ಯಗಳು ಉಂಟಾಗುವುವೊ ಯಾರು ಬಲ್ಲರು?' ಎಂದುಕೊಂಡರು. ನಂದಗೋಪನು ಮಾತ್ರ ಗರ್ಗಮುನಿಯ ಮಾತನ್ನು ನೆನೆದು 'ಎಲ್ಲವೂ ಹರಿಯ ಇಚ್ಛೆ! ಒಂದು ಹುಬ್ಬಿನ ಕುಣಿತದಿಂದ ಪ್ರಪಂಚದ ಸೃಷ್ಟಿಸ್ಥಿತಿಲಯ ಮಾಡುವವನಿಗೆ ರೋಮಕೂಪದೊಳಗೆ ಎಲ್ಲ ಬ್ರಹ್ಮಾಂಡಗಳನ್ನು ಧರಿಸುವವನಿಗೆ ಏನು ಅಸಾಧ್ಯ? ಬ್ರಹ್ಮ ಶೇಷ ಶಿವ ಧರ್ಮರೂ ಯಾರ ಪಾದಕಮಲವನ್ನೆ ಸದಾ ಧ್ಯಾನಿಸುವರೋ ಅಂಥ ಮಾಯಾ ಮಾನುಷರೂಪಿಯಾದ ಸರ್ವೇಶ್ವರನಿಗೆ ಅಸಾಧ್ಯವೇನು?' ಎಂದುಕೊಂಡ. ನಗರದಲ್ಲಿ ಎಲ್ಲೆಡೆ ಸುತ್ತಿಸುತ್ತಿ ಎಲ್ಲ ಮನೆಗಳನ್ನೂ ನೋಡಿ ನೋಡಿ ಎಲ್ಲ ಮನೆಗಳ ಮುಂದಿನ ಹೆಸರುಗಳನ್ನು ಓದಿ ಓದಿ ನಂದಗೋಪ ಎಲ್ಲರಿಗೂ ಅವರವರ ಮನೆಗಳನ್ನು ಕೊಟ್ಟ. ತಾನೂ ತನ್ನ ಪರಿವಾರದೊಂದಿಗೆ ತನ್ನ ಮನೆಯನ್ನು ಒಂದು ಶುಭಸಮಾರಂಭದಲ್ಲಿ ಪ್ರವೇಶಿಸಿದ. ವೃಷಭಾನುವೂ ತನ್ನ ಮನೆಯನ್ನು ಹಾಗೇ ಪ್ರವೇಶಿಸಿದ. ಎಲ್ಲ ಗೋಪರೂ ತಮ್ಮ ತಮ್ಮ ಮನೆಗಳನ್ನು ಪ್ರವೇಶಿಸಿ ಆನಂದದಿಂದ ನಲಿದರು. ಮಕ್ಕಳು ಆಟವಾಡಿದರು. ರಾಮಕೃಷ್ಣರೂ ಅವರೊಡನೆ ಸೇರಿ ಆಡಿದರು.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಶ್ರೀಬೃಂದಾವನನಗರವರ್ಣನೆ ಎಂಬ ಹದಿನೇಳನೆ ಅಧ್ಯಾಯ ಮುಗಿದುದು*

—o—

## ವಿಪ್ರಪತ್ನೀಮೋಕ್ಷ



**ನಾರದ:-** ಪ್ರಭು, ನಿನ್ನ ಈ ಶಿಷ್ಯನಿಗೆ ಅಮೃತದಂಥ ಶ್ರೀಕೃಷ್ಣಚರಿತ್ರೆಯನ್ನು ಇನ್ನೂ ಉಪದೇಶಿಸು.

**ನಾರಾಯಣ:-** ಒಮ್ಮೆ ಕೃಷ್ಣ ಬಲರಾಮನೊಡನೆ ಮತ್ತು ಗೋಪಬಾಲಕರೊಡನೆ ಯಮುನಾ ತೀರದ ಮಧುವನಕ್ಕೆ ಹೋಗಿದ್ದಾಗ ಗೋವುಗಳನ್ನು ಮೇಯಿಸುತ್ತ ಆಟವಾಡುತ್ತ ಬಳಲಿದ. ಹಸಿವಿಂದ ಪೀಡಿತನಾದ. ಎಲ್ಲ ಬಾಲಕರೂ ಹಸಿದಿದ್ದರು. ಎಲ್ಲರೂ ಕೃಷ್ಣನನ್ನೆ ಕೇಳಿದರು, 'ಕೃಷ್ಣ, ನಾವೆಲ್ಲ ಹಸಿದಿದ್ದೇವೆ, ಏನು ಮಾಡಲಿ ಹೇಳು.' ಕೃಷ್ಣ ನಕ್ಕು ನುಡಿದ - 'ಇಲ್ಲಿಯೆ ಸಮೀಪದಲ್ಲಿ ಬ್ರಾಹ್ಮಣರು ಯಾಗ ಮಾಡುತ್ತಿದ್ದಾರೆ. ಅವರಲ್ಲಿ ಅನ್ನ ಬೇಡಿರಿ. ಅವರು ಆಂಗಿರಸ ಗೋತ್ರದವರು, ಶ್ರುತಿಸ್ಮೃತಿ ವಿಶಾರದರು. ವಿಷ್ಣುಭಕ್ತರು ನಿಷ್ಕಾಮನೆಯಿಂದ ಕೇವಲ ನನ್ನ ಪ್ರೀತಿಗಾಗಿ ಯಾಗ ಮಾಡುತ್ತಿದ್ದಾರೆ. ನನ್ನ ಮಾಯೆಯಿಂದ ಅವರು ನನ್ನನ್ನು ತಿಳಿಯಲು ಅಶಕ್ತರಾಗಿದ್ದಾರೆ. ಆದರಿಂದ ಅವರು ಅನ್ನ ಕೊಡದಿರಬಹುದು. ಆಗ ಅವರ ಪತ್ನಿಯರ ಬಳಿ ಅನ್ನ ಬೇಡಿರಿ. ಮಕ್ಕಳೆಂದು ಪ್ರೀತಿಯಿಂದ ಅವರು ಅನ್ನ ನೀಡುತ್ತಾರೆ.'

ಗೋಪಬಾಲಕರು ಬ್ರಾಹ್ಮಣರ ಬಳಿಗೆ ಹೋಗಿ 'ಅನ್ನ ನೀಡಿ' ಎಂದು ಹೇಳಿ ತಲೆ ತಗ್ಗಿಸಿ ನಿಂತರು. ಬ್ರಾಹ್ಮಣರು ಕೆಲವರು ಬಾಲಕರ ಮಾತನ್ನು ಕಿವಿಗೇ ಹಾಕಿಸಿಕೊಳ್ಳಲಿಲ್ಲ. ಕೆಲವರು ಕೇಳಿ ತಿಳಿದುಕೊಂಡರೂ ಸುಮ್ಮನಿದ್ದರು. ಬಾಲಕರು ಬ್ರಾಹ್ಮಣರ ಪತ್ನಿಯರ ಬಳಿಗೆ ಹೋಗಿ ತಲೆ ಬಾಗಿ ನುಡಿದರು 'ಮಾತೆಯರೆ, ನಾವು ಹಸಿದಿದ್ದೇವೆ. ಅನ್ನ ನೀಡಿ.' ಬ್ರಾಹ್ಮಣ ಪತ್ನಿಯರು ಆ ಮುದ್ದು ಮಕ್ಕಳನ್ನು ಕಂಡು ವಾತ್ಸಲ್ಯಪೂರ್ಣವಾಗಿ ನಕ್ಕು ಕೇಳಿದರು. 'ಮಕ್ಕಳೆ, ನೀವು ಯಾರು? ನಿಮ್ಮನ್ನು ಯಾರು ಇಲ್ಲಿಗೆ ಕಳಿಸಿದರು? ನಿಮಗೆ ನಾನಾ ಬಗೆಯ ಅನ್ನವನ್ನು ಮೇಲೋಗರ ಸಹಿತವಾಗಿ ಉಣಬಡಿಸುತ್ತೇವೆ, ಹೇಳಿ ನಿಮ್ಮನ್ನು ಯಾರು ಕಳಿಸಿದರು?'

ಬಾಲಕರು ಸಂತೋಷದಿಂದ ನುಡಿದರು - 'ಮಾತೆಯರೆ, ರಾಮ ಕೃಷ್ಣರು ನಮ್ಮನ್ನು ಇಲ್ಲಿಗೆ ಕಳಿಸಿದರು. ಇಲ್ಲಿಯೆ ಸಮೀಪದಲ್ಲಿ ಭಾಂಡೀರವನದೊಳಗೆ ಮಧುವನದಲ್ಲಿ ಆಲದ ಮರದ ಕೆಳಗೆ ರಾಮ ಕೃಷ್ಣರು ವಿಹಾರ ಮಾಡುತ್ತಿದ್ದಾರೆ. ಅವರೂ ಹಸಿದಿದ್ದಾರೆ, ಅನ್ನ ನೀಡುವಿರಿ ತಾನೆ?' ಬಾಲಕರ ಮಾತು ಕೇಳಿ ಬ್ರಾಹ್ಮಣ ಪತ್ನಿಯರು ಆನಂದದಿಂದ ರೋಮಾಂಚಗೊಂಡರು ಆನಂದಬಾಷ್ಪ ಸುರಿಸುತ್ತ ಶ್ರೀಕೃಷ್ಣನ ಪಾದಕಮಲಗಳನ್ನು ಸ್ಮರಿಸಿದರು. ನಾನಾ ಬಗೆಯ ಮೇಲೋಗರ ಸಹಿತವಾಗಿ ಒಳ್ಳೆಯ ಶಾಲ್ಯಾನ್ನ ಪಾಯಸ ತಂಬಿಟ್ಟು ಮೊಸರು ಹಾಲು ತುಪ್ಪ ಜೇನು ಮುಂತಾದುವನ್ನು ಬೆಳ್ಳಿ ಕಂಚುಗಳ ಪಾತ್ರೆಗಳಲ್ಲಿಟ್ಟುಕೊಂಡು ಕೃಷ್ಣನ ಸನ್ನಿಧಿಗೆ ಒಯ್ದರು. ಕೃಷ್ಣನನ್ನು ನೋಡಬೇಕು ಮಾತನಾಡಿಸಬೇಕೆಂದು ಮುಂತಾಗಿ ನಾನಾ ಆಸೆಗಳನ್ನು ಹೊತ್ತು ಉತ್ಸುಕತೆಯಿಂದ ನಡೆದರು. ಆಲದ ಮರದ ಬುಡದಲ್ಲಿ

ಬಾಲಕರ ನಡುವೆ ರಾಮ ಕೃಷ್ಣರು ಕುಳಿತಿದ್ದರು. ನಕ್ಷತ್ರಗಳ ನಡುವೆ ಹೊಳೆಯುವ ಚಂದ್ರನಂತೆ ಕಾಣುತ್ತಿದ್ದರು. ಯೋಗಿಗಳ ಧ್ಯಾನಕ್ಕೂ ನಿಲುಕದ ರಾಧಾರಮಣನನ್ನು ಬ್ರಹ್ಮ ಶಿವ ಧರ್ಮ ಶೇಷ ಇಂದ್ರ ಮುಂತಾದ ದೇವತೆಗಳೂ ಋಷಿಗಳೂ ಸ್ತೋತ್ರಮಾಡುತ್ತಿದ್ದರು. ದ್ವಿಜಪತ್ನಿಯರು ಅವನನ್ನು ಕಂಡು ಸ್ತುತಿಸಿದರು -

'ಮಧುಸೂದನ, ನಿರ್ಗುಣನೂ ಸಗುಣನೂ, ನಿರಾಕಾರನೂ ಸಾಕಾರನೂ ಆದ ಪರಬ್ರಹ್ಮ ನೀನು. ಪ್ರಕೃತಿಯೂ ಪುರುಷನೂ ನೀನೆ. ಅವರಿಗೆ ಕಾರಣನೂ ನೀನೆ. ಸೃಷ್ಟಿಸ್ಥಿತಿಲಯ ಕಾರಣರಾದ ಬ್ರಹ್ಮ ವಿಷ್ಣು ಮಹೇಶ್ವರರೂ ನಿನ್ನ ಅಂಶಭೂತರೆ. ರೋಮಕೂಪಗಳಲ್ಲಿ ಬ್ರಹ್ಮಾಂಡವನ್ನು ಹೊರುವ ಮಹಾವಿರಾಡ್ರೂಪನಾದ ಮಹಾವಿಷ್ಣುವಿಗೂ ನೀನೆ ಜನಕ. ತೇಜೋರೂಪನೂ ತೇಜಸ್ವಿಯೂ ನೀನೆ. ಜ್ಞಾನರೂಪನೂ ಜ್ಞಾನಿಯೂ ನೀನೆ. ವೇದಗಳಿಗೂ ನಿಲುಕದವ ನೀನು. ಇನ್ನಾರು ನಿನ್ನನ್ನು ಸ್ತುತಿಸಬಲ್ಲರು? ಮಹತ್ತು ಅಹಂಕಾರ ಪಂಚತನ್ಮಾತ್ರೆಗಳೆಲ್ಲವೂ ನೀನೆ. ನೀನೆ ಸಕಲಶಕ್ತಿಸ್ವರೂಪ. ಸಕಲಶಕ್ತಿಗಳಿಗೂ ಬೀಜರೂಪ. ಶರೀರರಹಿತನಾಗಿದ್ದೂ ಅನಂತ ಶರೀರ ಉಳ್ಳವನಾಗಿರುವಿ. ಇಂದ್ರಿಯರಹಿತನಾಗಿದ್ದೂ ಸಕಲೇಂದ್ರಿಯಾನುಭವ ಉಳ್ಳವನಾಗಿರುವಿ. ನಿನ್ನನ್ನು ಸ್ತೋತ್ರ ಮಾಡಲು ಹೊರಟು ಸರಸ್ವತಿಯೂ ಸೋತಳು. ಮಹೇಶ್ವರ ಶೇಷ ಧರ್ಮ ಬ್ರಹ್ಮರೂ ಸೋತು ಜಡವಾದರು. ಪಾರ್ವತಿ ಕಮಲೆ ರಾಧೆ ಸಾವಿತ್ರಿಯರೂ ವೇದವೂ ಸೋತು ಜಡವಾದರೆಂದಮೇಲೆ ಅಜ್ಞಸ್ತ್ರೀಯರಾದ ನಾವೇನು ನಿನ್ನನ್ನು ಹೊಗಳಬಲ್ಲೆವು? ದೀನಬಂಧುವಾದ ನೀನು ಪ್ರಸನ್ನನಾಗು, ದಯೆದೋರು.' ಹೀಗೆ ಸ್ತೋತ್ರ ಮಾಡಿ ದ್ವಿಜಸ್ತ್ರೀಯರು ಕೃಷ್ಣನ ಪಾದಕಮಲಗಳಿಗೆ ಮಣಿದರು. ಕೃಷ್ಣ ಪ್ರಸನ್ನಮುಖ ನೇತ್ರಗಳಿಂದ ಅವರನ್ನು ಕಂಡು ಅಭಯ ನೀಡಿದ. ವಿಪ್ರಪತ್ನಿಯರು ಮಾಡಿದ ಈ ಕೃಷ್ಣಸ್ತುತಿಯನ್ನು ಪೂಜಾಕಾಲದಲ್ಲಿ ಪಠಿಸಿದರೆ ವಿಪ್ರಪತ್ನಿಯರಿಗೆ ದೊರೆತ ಉತ್ತಮಗತಿಯೆ ಲಭಿಸುವುದು.

ಕೃಷ್ಣ ದ್ವಿಜಪತ್ನಿಯರನ್ನು ನೋಡಿ 'ನೀವು ಬೇಕಾದ ವರವನ್ನು ಬೇಡಿರಿ. ನಿಮಗೆ ಒಳ್ಳೆಯದಾಗುವುದು' ಎಂದ. ಅವರು ಭಕ್ತಿಯಿಂದ ತಲೆಬಾಗಿ ನುಡಿದರು, 'ಕೃಷ್ಣ, ನಾವೇನೂ ವರವನ್ನು ಬೇಡುವುದಿಲ್ಲ. ನಮಗಿರುವ ಆಸೆ ಒಂದೇ. ನಿನ್ನ ಪಾದಕಮಲಗಳನ್ನು ಸೇವಿಸಬೇಕು ಎಂದು. ಅದರಿಂದ ನಮಗೆ ನಿನ್ನ ದಾಸ್ಯ ನೀಡು. ದೃಢಭಕ್ತಿ ನೀಡು. ನಿನ್ನ ಮುಖಕಮಲವನ್ನೆ ಸದಾ ನೋಡುತ್ತಿರುವಂತೆ ಅನುಗ್ರಹಿಸು. ನಾವು ನಮ್ಮ ಮನೆಗಳಿಗೆ ಹಿಂತಿರುಗಿ ಹೋಗಲು ಬಯಸುವುದಿಲ್ಲ.' ದಯಾಮಯನಾದ ಕೃಷ್ಣ 'ಹಾಗೇ ಆಗಲಿ' ಎಂದ. ಅವರು ಕೊಟ್ಟ ಅಮೃತದಂಥ ಅನ್ನವನ್ನು ಬಾಲಕರಿಗೂ ಕೊಟ್ಟು ತಾನೂ ಉಂಡ. ಆಗಲೆ ಅಂತರಿಕ್ಷದಿಂದ ಇಳಿದು ಬಂದ ಬಂಗಾರದರಥವನ್ನು ದ್ವಿಜಪತ್ನಿಯರು ಕಂಡರು. ರತ್ನಸ್ತಂಭಗಳು, ಕಲಶಗಳು, ಬಿಳಿ ಚಾಮರಗಳು ಪಾರಿಜಾತ ಹೂಗಳ ಮಾಲೆಗಳು ಇವುಗಳಿಂದ ಅಲಂಕೃತವಾಗಿದ್ದು ನೂರು ಚಕ್ರಗಳಿಂದ ಯುಕ್ತವಾಗಿದ್ದ ಆ ರಥದಲ್ಲಿ ಪೀತಾಂಬರ ವನಮಾಲೆಗಳನ್ನು ಧರಿಸಿದ ರತ್ನಾಲಂಕಾರ ಭೂಷಿತರಾದ ದಿವ್ಯ ಪಾರ್ಷದರಿದ್ದರು. ಅವರೆಲ್ಲರೂ ಗೋಪವೇಷಧಾರಿಗಳು. ಕೈಯಲ್ಲಿ ಕೊಳಲು ಹಿಡಿದಿದ್ದರು. ತಲೆಯಲ್ಲಿ ನವಿಲು ಗರಿ ಧರಿಸಿದ್ದರು. ಅವರು ರಥದಿಂದಿಳಿದು

ಕೃಷ್ಣನಿಗೆ ವಂದಿಸಿ ವಿಪ್ರಪತ್ನಿಯರನ್ನು ರಥವೇರಲು ಕೇಳಿಕೊಂಡರು. ವಿಪ್ರಪತ್ನಿಯರು ಕೃಷ್ಣನನ್ನು ನಮಸ್ಕರಿಸಿ ರಥವೇರಿ ಗೋಲೋಕ ಸೇರಿದರು. ಮಾನುಷಶರೀರ ತೊರೆದು ಗೋಪಿಯರಾದರು. ಕೃಷ್ಣ ಮಾಯೆಯಿಂದ ಈ ವಿಪ್ರಪತ್ನಿಯರಂತೆಯೆ ಕಾಣುವ ಛಾಯಾ ಸ್ತ್ರೀಯರನ್ನು ನಿರ್ಮಿಸಿ ವಿಪ್ರರ ಮನೆಗಳಿಗೆ ಕಳಿಸಿದ. ಇತ್ತ ವಿಪ್ರರು ತಮ್ಮ ಪತ್ನಿಯರನ್ನು ಕಾಣದೆ ಕಳವಳಗೊಂಡು ಹುಡುಕುತ್ತಿದ್ದರು. ದಾರಿಯಲ್ಲಿ ಈ ಛಾಯಾ ಸ್ತ್ರೀಯರನ್ನು ಕಂಡು ಎಲ್ಲ ವಿಷಯ ತಿಳಿದು ಆನಂದದಿಂದ ಮೈಯೆಲ್ಲ ರೋಮಾಂಚಗೊಂಡು ನುಡಿದರು - 'ನೀವೆ ಧನ್ಯರು. ಕೃಷ್ಣನ ದರ್ಶನ ಮಾಡಿದಿರಿ. ಅವನ ಸೇವೆ ಮಾಡಿದಿರಿ. ನಾವು ವೇದ ಓದಿ ಏನು ಪ್ರಯೋಜನವಾಯಿತು? ವೇದಾಧ್ಯಯನ ತಪಸ್ಸು ತೀರ್ಥಯಾತ್ರೆ ಉಪವಾಸ ಎಲ್ಲಕ್ಕೂ ಕೃಷ್ಣದರ್ಶನವೆ ಫಲ. ಅದೇ ನಿಮಗೆ ದೊರಕಿದೆ ಎಂದ ಮೇಲೆ ನೀವು ಇನ್ನೇನೂ ಮಾಡಬೇಕಾಗಿಲ್ಲ.

**ಶ್ರೀಕೃಷ್ಣಃ ಸೇವಿತೋ ಯೇನ ತಸ್ಯ ಕಿಂ ಕರ್ಮಭಿಃ ಕೃತೈಃ ।**
**ಪ್ರಾಪ್ತಃ ಕಲ್ಪತರುರ್ಯೇನ ಕಿಂ ತಸ್ಯಾನ್ಯೇನ ಶಾಖಿನಾ?**

'ಕೃಷ್ಣಸೇವೆ ಮಾಡಿದ ಮೇಲೆ ಬೇರೆ ತಪಸ್ಸೇಕೆ? ಕಲ್ಪವೃಕ್ಷವನ್ನು ಪಡೆದ ಮೇಲೆ ಬೇರೆ ಮರಗಳು ಬೇಕೆ?' ಹೀಗೆ ಹೇಳಿ ವಿಪ್ರರು ಛಾಯಾಪತ್ನಿಯರನ್ನು ತಮ್ಮ ಮನೆಗೆ ಕರೆದುಕೊಂಡು ಬಂದು ಸುಖವಾಗಿದ್ದರು. ಕೃಷ್ಣನ ಮಾಯೆಯಿಂದ ಅವರಿಗೆ ಪತ್ನಿಯರಲ್ಲಿ ಯಾವ ಸಂದೇಹವೂ ಮೂಡಲಿಲ್ಲ. ಮೊದಲಿಗಿಂತಲೂ ಹೆಚ್ಚು ಪ್ರೀತಿ ಮಾಡಿದರು.

**ನಾರದ:-** ಮುನಿಶ್ರೇಷ್ಠನೆ. ಈ ಋಷಿಪತ್ನಿಯರು ಅದೇನು ಪುಣ್ಯಮಾಡಿದ್ದರು? ಯೋಗಿಗಳಿಗೂ ದುರ್ಲಭವಾದ ಸದ್ಗತಿ ಅವರಿಗೆ ಅನಾಯಾಸವಾಗಿ ಹೇಗೆ ದೊರೆಯಿತು? ಅವರು ಪೂರ್ವಜನ್ಮದಲ್ಲಿ ಯಾರಾಗಿದ್ದರು? ಯಾವ ಕಾರಣದಿಂದ ಭೂಮಿಯಲ್ಲಿ ಜನಿಸಿದರು?

**ನಾರಾಯಣ:-** ನಾರದ, ಹಿಂದೆ ಸಪ್ತರ್ಷಿಗಳ ಪತ್ನಿಯರು ಅಪ್ರತಿಮ ರೂಪ ಸೌಂದರ್ಯ ನವಯೌವನವತಿಯರಾಗಿದ್ದು ದಿವ್ಯ ವಸ್ತ್ರಾಭರಣಗಳಿಂದ ಕೂಡಿ ಮುನಿಗಳ ಮನಸ್ಸನ್ನು ಮೋಹಿಸುವಂತಿದ್ದರು. ಅವರ ಸ್ತನ ನಿತಂಬ ಮುಂತಾದ ಅವಯವಗಳನ್ನು ಕಂಡು ಅಗ್ನಿದೇವ ಮಾರು ಹೋದ. ಅಗ್ನಿಕುಂಡದ ಬಳಿ ಅವರು ಕುಳಿತಿದ್ದಾಗ ಜ್ವಾಲೆಯ ಕೈಗಳಿಂದ ಅವರ ಮೈ ಮುಟ್ಟಿದ. ಸುಖದಲ್ಲಿ ಲೀನನಾಗಿ ಮೈಮರೆತ. ಪತಿವ್ರತೆಯರಾದ ಆ ಸ್ತ್ರೀಯರು ಪತಿಗಳ ಪಾದಕಮಲಗಳನ್ನೆ ಚಿಂತಿಸುತ್ತಿದ್ದುದರಿಂದ ಅಗ್ನಿ ತಮ್ಮನ್ನು ಸ್ಪರ್ಶಿಸಿದುದು ಅವರಿಗೆ ತಿಳಿಯಲಿಲ್ಲ. ಅಂಗಿರಸರು ಅಗ್ನಿಯ ಈ ಮನೋವಿಕಾರವನ್ನು ಗಮನಿಸಿ ಕುಪಿತರಾದರು. ಸರ್ವಭಕ್ಷಕನಾಗೆಂದು ಶಪಿಸಿದರು. ಇನ್ನೂ ಬೇರೆ ಶಾಪಗಳನ್ನು ಕೊಡಲು ಉದ್ಯುಕ್ತರಾದರು. ಅಗ್ನಿ ಬೇಗನೆ ಮುನಿಯನ್ನು ಸ್ತೋತ್ರ ಮಾಡಿ ಒಲಿಸಿಕೊಂಡ. ಈಗ ಮುನಿ ಪತ್ನಿಯರನ್ನು ಶಪಿಸಿದ - 'ನೀವು ಮನುಷ್ಯಜನ್ಮದಲ್ಲಿ ಬ್ರಾಹ್ಮಣರ ಮನೆಗಳಲ್ಲಿ ಹುಟ್ಟಿರಿ. ಬ್ರಾಹ್ಮಣರನ್ನು ಮದುವೆಯಾಗಿ ವಾಸಮಾಡಿರಿ.' ಈ ಶಾಪವನ್ನು ಕೇಳಿ ಮುನಿ ಪತ್ನಿಯರು ಪತಿವಿರಹದ ಶೋಕದಿಂದ ವಿಹ್ವಲರಾಗಿ ಕೈ ಮುಗಿದು ಹೇಳಿದರು -

'ನಾವು ಪಾಪ ಮಾಡಿಲ್ಲ. ತಿಳಿಯದೆ ಪರಪುರುಷ ಸ್ಪರ್ಶ ನಮಗಾಯಿತು. ಅಷ್ಟಕ್ಕೇ ನಮ್ಮನ್ನು ನೀವು ಪರಿತ್ಯಜಿಸುವುದು ಸರಿಯಲ್ಲ. ನಾವು ನಿಮ್ಮ ದಾಸಿಯರು. ನಮಗೆ ಇಂಥ ಉಗ್ರ ಶಿಕ್ಷೆ ನೀಡಬೇಡಿ. ನಿಮ್ಮ ಪಾದಕಮಲದರ್ಶನವನ್ನೆ ಸದಾ ಬಯಸುವವರು ನಾವು.

**ಖಡ್ಗಚ್ಛೇದಾದ್ ವಜ್ರಪಾತಾತ್ ಸರ್ವಪ್ರಹರಣಾನ್ಮುನೇ ।**
**ದಾರುಣಃ ಕಾಂತವಿಚ್ಛೇದಃ ಸಾಧ್ವೀನಾಂ ದುಃಸಹಃ ಸದಾ ॥**

'ಪತಿವ್ರತೆಯರಿಗೆ ಪತಿವಿರಹವೆಂಬುದು ಖಡ್ಗಪ್ರಹಾರಕ್ಕಿಂತ ಅಧಿಕ, ವಜ್ರಾಘಾತ ಕ್ಕಿಂತ ಏಕೆ, ಸಕಲ ಆಯುಧಗಳ ಏಟಿಗಿಂತಲೂ ಅಧಿಕ, ಭಯಂಕರ, ಅಸಹನೀಯ.' ಮಹಾಬ್ರಹ್ಮಜ್ಞಾನಿಗಳಾದ ತಮ್ಮಂಥ ಮಹಾಮುನಿಗಳನ್ನು ಬಿಟ್ಟು ಭೂಮಿಯಲ್ಲಿ ಅನ್ಯರನ್ನು ವರಿಸಿ ನಾವು ಬಾಳಬಲ್ಲವೆ? ನಾವು ಭೂಲೋಕದಲ್ಲಿ ಎಷ್ಟು ಕಾಲ ವಿರಬೇಕು? ಎಂದು ಹಿಂದಿರುಗುತ್ತೇವೆ? ಮಹಾಮುನಿಯೆ, ಸ್ವಲ್ಪ ವಿಚಾರ ಮಾಡು. ವಿಧಿವಶದಿಂದ ನಮಗೆ ಅರಿವಿಲ್ಲದಂತೆ ಸಂಭವಿಸಿದ ಈ ಪರಪುರುಷ ಸ್ಪರ್ಶ ನಮಗೆ ದೋಷಕರವಲ್ಲ. ಅಹಲ್ಯೆಯನ್ನು ಇಂದ್ರ ಕೆಡಿಸಿದರೂ ಅವಳು ತಿರುಗಿ ಪತಿಸಮಾಗಮ ಹೊಂದಿದಳು. ಅವಳನ್ನು ಆತ ಭೋಗಿಸಿದ್ದ. ಆದರೂ ಅವಳು ಶುದ್ಧಳೆನಿಸಿದಳು. ನಮ್ಮನ್ನು ಸ್ಪರ್ಶದೋಷ ಮಾತ್ರದಿಂದಲೆ ಪರಿತ್ಯಜಿಸುತ್ತಿರುವಿ. ವಿಚಾರ ಮಾಡು. ನೀನು ವೇದ ವೇದಾಂಗಗಳನ್ನು ಬಲ್ಲವ. ಸೃಷ್ಟಿಕರ್ತನ ಸಾಕ್ಷಾತ್ ಪುತ್ರ.

**ಅನ್ಯೇಷಾಂ ಚ ಭಯಾತ್ ಕಾಂತಾ ವ್ರಜಂತಿ ಶರಣಂ ಪತಿಂ ।**
**ಸ್ವಕಾಂತಭಯಸಂವಿಗ್ನಾಃ ಶರಣಂ ಕಂ ವ್ರಜಂತಿ ತಾಃ?**

ಅನ್ಯರಿಂದ ಭಯ ಉಂಟಾದಾಗ ಸ್ತ್ರೀಯರು ಪತಿಗಳನ್ನು ಶರಣು ಹೊಂದುತ್ತಾರೆ. ಪತಿಗಳಿಂದಲೆ ಭಯ ಉಂಟಾದರೆ ಅವರು ಯಾರನ್ನು ಮೊರೆ ಹೋಗಬೇಕು? ಆದ್ದರಿಂದ ನಮಗೆ ನೀನೆ ಅಭಯ ನೀಡಬೇಕು. ನಮ್ಮನ್ನು ಶಪಿಸಲೂ ಅನುಗ್ರಹಿಸಲೂ ನೀನೆ ಶಕ್ತ. ಪತ್ನಿ ಪುತ್ರ ಶಿಷ್ಯರ ವಿಷಯದಲ್ಲಿ ದಂಡ ವಿಧಿಸಲು ಎಲ್ಲರಿಗೂ ಅಧಿಕಾರವಿದೆ. ಅವನು ಶಕ್ತನಾಗಿರಲಿ ಅಶಕ್ತನೆ ಆಗಿರಲಿ, ತನ್ನ ವಶದಲ್ಲಿರುವ ಪದಾರ್ಥವನ್ನು ಇನ್ನೊಬ್ಬರಿಗೆ ಮಾರಲು ಅಧಿಕಾರವಿದೆ. ಆಗ ಅದನ್ನು ಯಾರೂ ತಡೆಯಲಾರರು.'

ಸ್ತ್ರೀಯರ ಈ ಮಾತನ್ನು ಕೇಳಿ ದಯಾಳುವಾದ ಅಂಗಿರಸ ಮುನಿ ಕಣ್ಣುಗಳಲ್ಲಿ ನೀರು ಸುರಿಸಿದ. ಪತ್ನೀವಿಯೋಗವನ್ನು ನೆನೆದು ಶೋಕದಿಂದ ಮೈಮರೆತ. ಬೇರೆ ಮುನಿಗಳೂ ಹಾಗೇ ಶೋಕಾರ್ತರಾಗಿ ಪತ್ನಿಯರ ಮುಖ ನೋಡುತ್ತ ಗೊಂಬೆಗಳಂತೆ ಕುಳಿತು ಬಿಟ್ಟರು. ಬಹಳ ಹೊತ್ತು ಅತ್ತು ಕೊನೆಯಲ್ಲಿ ಅಂಗಿರಸಮುನಿ ಇತರ ಮುನಿಗಳೊಡನೆ ಸಮಾಲೋಚನೆ ಮಾಡಿ ನುಡಿದ -

'ಪತ್ನಿಯರೆ, ಕೇಳಿ ಎಲ್ಲರೂ ತಮ್ಮ ಕರ್ಮಫಲವನ್ನು ತಾವು ಉಣಬೇಕು. ನಿಮ್ಮ ಜೊತೆಗೆ ಸಂಸಾರ ಮಾಡುವ ಅದೃಷ್ಟವನ್ನು ಉಂಡು ತೀರಿಸಿದ್ದಾಯಿತು. ಒಮ್ಮೆ ಉಂಡ ಬಳಿಕ ತಿರುಗಿ ಉಣ್ಣುವುದೆಂಬುದು ಇಲ್ಲ. ಅದನ್ನು ವೇದ ಎಲ್ಲಿಯೂ ಹೇಳಿಲ್ಲ. ಒಮ್ಮೆ ಪರಪುರುಷಸ್ಪರ್ಶಕ್ಕೊಳಗಾದ ಮಡದಿಯನ್ನು ತಿರುಗಿ ಸ್ವೀಕರಿಸಿದರೆ ಕಾಲಸೂತ್ರ ನರಕದಲ್ಲಿ ಸೂರ್ಯ ಚಂದ್ರರಿರುವಷ್ಟು ಕಾಲ ವಾಸಮಾಡಬೇಕಾಗುವುದು. ಅವಳು

ಪಾಕ ಮಾಡಿದರೆ ಅದು ದೇವಕಾರ್ಯ ಪಿತೃಕಾರ್ಯಗಳಿಗೆ ಯೋಗ್ಯವಾಗಲಾರದು. ಅವಳ ಆಲಿಂಗನದಿಂದ ಪತಿಯ ಶಾಂತಿ ತೇಜಸ್ಸೆಲ್ಲವೂ ನಷ್ಟವಾಗುವುವು. ಆತ ದೇವತೆಗಳಿಗೆ ಹೋಮ ಮಾಡಿದರೆ ಅವರಿಗೆ ಸಂತೋಷವಾಗದು. ಪಿತೃಗಳಿಗೆ ತರ್ಪಣ ನೀಡಿದರೂ ತೃಪ್ತಿಯಾಗದು. ಆದ್ದರಿಂದಲೆ ಸತಿಯ ಶೀಲ ಸಂರಕ್ಷಣೆಯನ್ನು ಪತಿ ಬಹಳಯತ್ನದಿಂದ ಮಾಡುತ್ತಿರಬೇಕು. ಹಾಗೆ ಮಾಡದಿದ್ದರೆ ಆತ ಪಾಪಭಾಗಿಯಾಗುತ್ತಾನೆ, ನರಕ ಹೊಂದುತ್ತಾನೆ. ನೀವು ಅರಿವಿಲ್ಲದೆಯೆ ಪರಪುರುಷ ಸ್ಪರ್ಶ ಹೊಂದಿದ್ದರಿಂದ ಮಾನವಜನ್ಮ ಹೊಂದಿದ್ದರೂ ಕೃಷ್ಣನ ದರ್ಶನಪಡೆದು ಗೋಲೋಕವನ್ನು ಸೇರುವಿರಿ. ಕೃಷ್ಣನ ಮಾಯೆಯಿಂದ ನಿರ್ಮಿತರಾಗುವ ನಿಮ್ಮ ಛಾಯಾ ಸ್ತ್ರೀಯರು ನಿಮ್ಮ ಪತಿಗಳೊಂದಿಗೆ ಮನೆಯಲ್ಲಿ ನಿಲ್ಲುವರು. ಒಂದು ಅಂಶದಿಂದ ಗೋಲೋಕದಲ್ಲಿ ಗೋಪಿಯರಾಗಿ ವಿಹರಿಸುತ್ತ ಇನ್ನೊಂದು ಅಂಶದಿಂದ ನಮ್ಮ ಪತ್ನಿಯರಾಗಿಯೂ ನಮ್ಮ ಬಳಿಯಲ್ಲಿರುವಿರಿ. ಹೀಗೆ ನಾನು ನಿಮಗೆ ಕೊಟ್ಟ ಶಾಪ ವರವಾಗುವುದು. ಏಕೆ ಅದಕ್ಕಿಂತಲೂ ಹೆಚ್ಚಿನದೆ ಆಗುವುದು ಚಿಂತಿಸಬೇಡಿ.'

ಹೀಗೆ ಮುನಿಪತ್ನಿಯರು ವಿಪ್ರಪತ್ನಿಯರಾದರು. ಕೃಷ್ಣನಿಗೆ ಭಕ್ತಿಯಿಂದ ಅನ್ನವನ್ನು ಸಮರ್ಪಿಸಿ ಕೃಷ್ಣನ ಗೋಲೋಕವನ್ನೆ ಪಡೆದರು.

**ನಿಂದ್ಯಾ ನೀಚಾಚ್ಚ ಸಂಪತ್ತಿರ್ವಿಪತ್ತಿರ್ಮಹತೋ ವರಾ ।**
**ಅಹೋ ಸದ್ಯಃ ಸತಾಂ ಕೋಪಶ್ಚೋಽಪಕಾರಾಯ ಜಾಯತೇ ॥**

ನೀಚರಿಂದ ಸಂಪತ್ತು ಬಂದರೂ ಕೆಟ್ಟದೆ. ಮಹಾತ್ಮರಿಂದ ಆಪತ್ತು ಬಂದರೂ ಒಳ್ಳೆಯದೆ. ಸಜ್ಜನರು ಕೋಪಗೊಂಡರೂ ಅದರಿಂದ ಉಪಕಾರವೆ ಆಗುತ್ತದೆ. ಇದು ಆಶ್ಚರ್ಯವಲ್ಲವೆ?

**ವಿನಾ ವಿಪತ್ತೇರ್ಮಹಿಮಾ ಕುತಃ ಕಸ್ಯ ಭವೇದ್ ಭುವಿ?**

ಲೋಕದಲ್ಲಿ ವಿಪತ್ತು ಬಾರದೆ ಸಂಪತ್ತು ಯಾರಿಗೆ ಬರುತ್ತದೆ? ಎಲ್ಲಿ ಬರುತ್ತದೆ?

ಇದು ಶ್ರೀಕೃಷ್ಣನ ಉತ್ತಮ ಕಥೆ. ಪುಣ್ಯವತಿಯರಾದ ವಿಪ್ರಪತ್ನಿಯರು ಮೋಕ್ಷ ಪಡೆದ ಕಥೆ. ಕೃಷ್ಣನಕಥೆ ಎಲ್ಲವೂ ಹೊಸತು. ಒಂದಕ್ಕಿಂತ ಇನ್ನೊಂದು ಹೊಸತು. ಕೇಳಿದಷ್ಟೂ ತೃಪ್ತಿ ಇಲ್ಲ. ಶ್ರೇಯಸ್ಸು ಯಾರಿಗೆ ತಾನೆ ಸಾಕೆನಿಸುತ್ತದೆ?

**ನಾರದ:-** ಜಗದ್ಗುರು, ಮಂಗಳಕರವಾದ ಕೃಷ್ಣಚರಿತ್ರೆಯನ್ನು ಇನ್ನೂ ಹೇಳು. ನಾರದರ ಈ ಮಾತನ್ನು ಕೇಳಿ ನಾರಾಯಣಮಹರ್ಷಿ ಇನ್ನೊಂದು ಕೃಷ್ಣಚರಿತ್ರೆ ಹೇಳತೊಡಗಿದ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ*
*ನಾರಾಯಣನಾರದಸಂವಾದದಲ್ಲಿ ವಿಪ್ರಪತ್ನೀಮೋಕ್ಷಪ್ರಸ್ತಾವವೆಂಬ*
*ಹದಿನೆಂಟನೆ ಅಧ್ಯಾಯ ಮುಗಿದುದು*

—o—

## ಕಾಳಿಯ ದಮನ ಮತ್ತು ದಾವಾಗ್ನಿ ಪರಿಹಾರ | ಅಧ್ಯಾಯ - ೧೯

**ನಾರಾಯಣ:-** ನಾರದ, ಒಮ್ಮೆ ಕೃಷ್ಣ ಬಲರಾಮನನ್ನು ಬಿಟ್ಟು ಬೇರೆ ಗೋಪಾಲಕರ ಜೊತೆಗೆ ಯಮುನಾತೀರದ ಕಾಳಿಂಗ ಮಡುವಿನ ಬಳಿ ವಿಹಾರ ಮಾಡಿದ. ಹಸುಗಳೂ ಎಳೆ ಹುಲ್ಲನ್ನು ಮೇದುವು. ಬಳಿಕ ಬಾಯಾರಿ ಮಡುವಿನ ನೀರನ್ನು ಕುಡಿದವು. ನೀರು ವಿಷಪೂರ್ಣವಾಗಿದ್ದುದರಿಂದ ಗೋವುಗಳು ಮಡಿದುವು. ಗೋಪಾಲಕರೆಲ್ಲರೂ ಕಳವಳಗೊಂಡು ಕೃಷ್ಣನನ್ನು ಮೊರೆಹೊಕ್ಕರು. ಕೃಷ್ಣ ಗೋವುಗಳನ್ನು ಪುನಃ ಬದುಕಿಸಿ ಮಡುವಿನ ಬಳಿಯಲ್ಲಿದ್ದ ಒಂದು ಕದಂಬವೃಕ್ಷವನ್ನೇರಿ ಮಡುವಿಗೆ ಧುಮುಕಿದ. ಒಡನೆ ನೂರು ಮೊಳಗಳಷ್ಟು ನೀರು ಮೇಲೆ ಉಕ್ಕಿತು. ಕೃಷ್ಣನೋರ್ವ ಸಾಮಾನ್ಯ ಮಾನವನೆಂದು ಭಾವಿಸಿ ಕಾಳಿಯ ಕೋಪದಿಂದ ಕೃಷ್ಣನನ್ನು ಹಿಡಿದು ನುಂಗಿದ. ಕಾದ ಕಬ್ಬಿಣವನ್ನೆ ನುಂಗಿದಂತಾಯಿತು. 'ಅಯ್ಯೋ ಪ್ರಾಣ ಹೋಗುತ್ತಿದೆ' ಎನ್ನುತ್ತ ಹೊರಗೆ ವಮನ ಮಾಡಿದ. ವಜ್ರದಂತೆ ಕಠಿನವಾದ ಕೃಷ್ಣನ ಶರೀರವನ್ನು ಕಚ್ಚಿದ ಪರಿಣಾಮವಾಗಿ ಹಲ್ಲುಗಳು ಮುರಿದುವು. ಬಾಯೆಲ್ಲ ರಕ್ತಮಯವಾಯಿತು. ಅಷ್ಟರಲ್ಲಿ ಕೃಷ್ಣ ಕಾಳಿಯನ ಹೆಡೆಯ ಮೇಲೆ ನಿಂತಿದ್ದ. ಬ್ರಹ್ಮಾಂಡಧಾರನಾದ ಹರಿಯ ಭಾರವನ್ನು ತಡೆದುಕೊಳ್ಳಲಾರದೆ ರಕ್ತಕಾರಿ ಮೂರ್ಛಿತನಾದ ಕಾಳಿಯ. ಅವನ ಪರಿವಾರದ ಸರ್ಪಗಳು ಎಲ್ಲರೂ ಕಳವಳಗೊಂಡು ದಿಗ್ಭ್ರಾಂತರಾದರು. ಕೆಲವರು ದೂರ ಓಡಿ ಬಿಲಗಳನ್ನು ಹೊಕ್ಕರು. ಕಾಳಿಯನ ಮಡದಿ ಸುರಸೆ ಭಯ ವಿಹ್ವಲಳಾಗಿ ಕೃಷ್ಣನಿಗೆ ಭಕ್ತಿಯಿಂದ ನಮಿಸಿ ಪ್ರಾರ್ಥಿಸಿದಳು.

'ಜಗದೀಶ, ನನಗೆ ಪತಿಭಿಕ್ಷೆ ನೀಡು. ಸ್ತ್ರೀಗೆ ಪತಿ ಪ್ರಾಣಕ್ಕಿಂತ ಪ್ರಿಯನಾಗಿರುತ್ತಾನೆ. ಅವನಿಗಿಂತ ಹೆಚ್ಚಿನ ಬಂಧುಗಳೆ ಇಲ್ಲ. ಸಕಲ ಪ್ರಪಂಚಕ್ಕೆ ಬಂಧುವಾದ, ರಾಧೆಗೆ ಪ್ರಣಯಸಮುದ್ರರೂಪನೂ ಆದ ನಿನ್ನನ್ನು ಬೇಡುತ್ತೇನೆ. ಪತಿಯ ಪ್ರಾಣ ಉಳಿಸು. ನಿನ್ನನ್ನು ನಾನು ಸ್ತೋತ್ರ ಮಾಡಲು ಅಶಕ್ತಳು. ವೇದಮಾತೆಯಾದ ಸಾವಿತ್ರಿಯೂ ನಿನ್ನನ್ನು ಹೊಗಳಲಾರಳು, ಲಕ್ಷ್ಮಿಪಾರ್ವತಿಯರೂ ಹೊಗಳಲಾರರು. ಶಾಸ್ತ್ರಶ್ರವಣವೆ ಇಲ್ಲದ ಅಜ್ಞಳಾದ ನಾನೇನು ಹೊಗಳಬಲ್ಲೆ? ರತ್ನಮಂಚದಲ್ಲಿ ರಾಧೆಯನ್ನು ಆಲಿಂಗಿಸಿಕೊಂಡು ಪ್ರಣಯರಸಸಮುದ್ರದಲ್ಲಿ ಸುಖವಾಗಿ ಲೀನನಾಗುವವ ನೀನು. ಶೃಂಗಾರಾನುಭವದಿಂದ ಮೈಯೆಲ್ಲ ರೋಮಾಂಚಗೊಳ್ಳುವವ ನೀನು. ವೇದಗಳೂ ನಿನ್ನ ಈ ಲೀಲೆಯನ್ನು ವರ್ಣಿಸಲಾರವು. ಪ್ರಪಂಚದ ಆದಿಕಾರಣನೂ ಸುರಾಸುರರೆಲ್ಲರಿಗೂ ಅಧಿಪತಿಯೂ ಸರ್ವೇಶ್ವರನೂ ಆದ ನಿನ್ನನ್ನು ಬೇಡುತ್ತಿದ್ದೇನೆ. ನನ್ನ ಪತಿಯನ್ನು ಕಾಪಾಡು.' ಹೀಗೆ ಹೇಳಿ ಕಾಳಿಯನ ಮಡದಿ ಸುರಸೆ ಕೃಷ್ಣನ ಕಾಲು ಹಿಡಿದುಕೊಂಡಳು. ಅವಳು ಮಾಡಿದ ಈ ಕೃಷ್ಣಸ್ತೋತ್ರವನ್ನು ಮೂರು ಹೊತ್ತು ಪಠಿಸುವವನು ಎಲ್ಲ ಪಾಪಗಳಿಂದಲೂ ಮುಕ್ತನಾಗಿ ಹರಿಪದವನ್ನು ಸೇರುವನು. ಈಲೋಕದಲ್ಲಿ ಹರಿಭಕ್ತಿ ಹೊಂದುವನು. ಅಂತ್ಯದಲ್ಲಿ ಹರಿದಾಸ್ಯ ಪಡೆದು ಹರಿಯ ಪಾರ್ಷದನಾಗುವನು. ಸಾಲೋಕ್ಯ ಮುಂತಾದ ಚತುರ್ವಿಧ ಮುಕ್ತಿಯನ್ನೂ ಪಡೆಯುವನು.

**ನಾರದ:-** ಸುರಸೆಯ ಮಾತನ್ನು ಕೇಳಿ ಕೃಷ್ಣ ಏನು ಹೇಳಿದ?

**ನಾರಾಯಣ:-** ಶ್ರೀಕೃಷ್ಣ ಸುರಸೆಗೆ ಅಭಯನೀಡಿ ನುಡಿದ, 'ನಾಗಪತ್ನಿ ಎದ್ದೇಳು, ಭಯ ಪಡಬೇಡ. ನಿನ್ನ ಪತಿಯನ್ನು ಸ್ವೀಕರಿಸು. ನನ್ನ ಅನುಗ್ರಹದಿಂದ ಆತ ಅಜರಾಮರನೆನಿಸುತ್ತಾನೆ. ಆದರೆ ಈ ಯಮುನೆಯ ಮಡುವನ್ನು ಬಿಟ್ಟುಬಿಡು. ನಿನ್ನ ಮನೆಗೇ ಹಿಂತಿರುಗು. ಇಂದಿನಿಂದ ನೀನು ನನಗೆ ಮಗಳು. ಈ ಕಾಲಿಯನು ಅಳಿಯ. ಅವನ ತಲೆಯಮೇಲೆ ನನ್ನ ಪಾದಚಿಹ್ನೆ ಮೂಡಿರುವುದರಿಂದ ಗರುಡನ ಭಯವಿಲ್ಲ. ಆತ ನನ್ನ ಪಾದಚಿಹ್ನೆಯನ್ನು ನೋಡಿ ಭಕ್ತಿಯಿಂದ ನಮಿಸುತ್ತಾನೆ. ಆದರಿಂದ ನಿರ್ಭಯವಾಗಿ ಪತಿಯೊಡನೆ ರಮಣಕ ದ್ವೀಪವನ್ನು ಸೇರು. ಮಗಳೆ, ನಿನಗೆ ಇನ್ನೇನು ವರಬೇಕು, ಕೇಳು.' ಆಗ ಸುರಸೆ ಹೇಳಿದಳು. 'ಪ್ರಭು, ನೀನು ನನಗೆ ವರ ಕೊಡುವಿಯಾದರೆ ನಿನ್ನ ಪಾದಕಮಲಗಳಲ್ಲಿ ದೃಢಭಕ್ತಿ ಉಂಟಾಗುವಂತೆ ವರ ನೀಡು. ನನ್ನ ಮನಸ್ಸು ನಿನ್ನ ಪಾದಕಮಲಗಳಲ್ಲಿಯೆ ದುಂಬಿಯಂತೆ ಸದಾ ಆಸಕ್ತವಾಗಿರಲಿ. ನಿನ್ನ ಸ್ಮರಣೆ ನನಗೆಂದೂ ತಪ್ಪದಿರಲಿ.' ಹೀಗೆ ಹೇಳುತ್ತ ಆ ನಾಗಿಣಿ ಕೃಷ್ಣನ ಮುಖಚಂದ್ರಮನನ್ನು ನೋಡಿ ಅದರ ಸೊಬಗನ್ನು ಎವೆಯಿಕ್ಕದ ಕಣ್ಣುಗಳಿಂದ ಕುಡಿದಳು. ಮೈಯೆಲ್ಲ ರೋಮಾಂಚಗೊಂಡಳು. ಆನಂದ ಬಾಷ್ಪ ಸುರಿಸಿದಳು. ಮುದ್ದು ಮಗುವಾದ ಬಾಲಕೃಷ್ಣನನ್ನು ಪುತ್ರಸ್ನೇಹದಿಂದ ಕಂಡಳು. 'ಕೃಷ್ಣ, ನಾನು ನಿನ್ನನ್ನು ಬಿಟ್ಟು ಹೋಗಲಾರೆ. ರಮಣಕದ್ವೀಪಕ್ಕೆ ಹೋಗಿ ನಾನು ಮಾಡಬೇಕಾದುದು ಏನೂ ಇಲ್ಲ. ನನ್ನ ಪತಿಯೆ ಅಲ್ಲಿ ಸಂಸಾರ ಹೂಡಲಿ. ನಾನು ನಿನ್ನ ಸೇವೆ ಮಾಡುತ್ತ ನಿನ್ನ ಬಳಿಯೆ ಇರುವೆ. ನನಗೆ ಸಾಲೋಕ್ಯಾದಿ ನಾಲ್ಕು ಬಗೆಯ ಮುಕ್ತಿಯಲ್ಲಿಯೂ ಆಸೆ ಇಲ್ಲ. ನಿನ್ನ ಪಾದಸೇವೆಯ ಹದಿನಾರನೆ ಒಂದಂಶಕ್ಕೂ ಅದು ಸಮವಾಗದು. ಭಾರತದಲ್ಲಿ ದುರ್ಲಭವಾದ ಜನ್ಮಪಡೆದೂ ನಿನ್ನ ಪಾದಸೇವೆ ಹೊರತು ಬೇರೆ ಸುಖದ ಬೆನ್ನು ಹತ್ತುವವ ನಿಶ್ಚಿತವಾಗಿ ಮೋಸ ಹೋಗಿರುತ್ತಾನೆ' ಎಂದಳು. ಶ್ರೀಕೃಷ್ಣ ಸಂತುಷ್ಟನಾಗಿ 'ಆಗಲಿ' ಎಂದು ವರವಿತ್ತ. ಒಡನೆ ಆಕಾಶದಿಂದ ದಿವ್ಯ ರತ್ನಮಯವಾದ ಒಂದು ಒಂದು ರಥ ಇಳಿದು ಬಂದಿತು. ಅದಕ್ಕೆ ನೂರು ಚಕ್ರಗಳು. ವಾಯುವೇಗದಿಂದ, ಮನೋವೇಗದಿಂದ ಓಡುವಂಥಹುದು. ವಿಷ್ಣುಪಾರ್ಷದರು ಅದರಿಂದ ಇಳಿದು ಬಂದು ಕೃಷ್ಣನನ್ನು ವಂದಿಸಿ ಸುರಸೆಯನ್ನು ರಥದಲ್ಲಿರಿಸಿಕೊಂಡು ಗೋಲೋಕಕ್ಕೆ ಒಯ್ದರು. ಕೃಷ್ಣ ಛಾಯಾಸುರಸೆಯನ್ನು ನಿರ್ಮಿಸಿ ಕಾಳಿಯನಿಗೆ ಕೊಟ್ಟ. ವಿಷ್ಣುಮಾಯೆಯಿಂದ ಮೋಹಿತನಾದ ಆತ ನಿಜಸಂಗತಿಯನ್ನು ತಿಳಿಯಲಿಲ್ಲ. ಅವನ ಹೆಡೆಯಿಂದ ಕೃಷ್ಣ ಇಳಿದು ಕೈಯಿಂದ ಸ್ಪರ್ಶಿಸಿದಾಗಲೆ ಆತ ಎಚ್ಚರಗೊಂಡು ನೋಡಿದ. ಕಣ್ಣೆದುರಿಗೆ ಕೃಷ್ಣನಿಗೆ ಕೈ ಮುಗಿದು ನಿಂತ ಸುರಸೆ ಗೋಚರವಾದಳು. ಆತ ಒಂದೇ ಸವನೆ ಪ್ರೇಮವಿಹ್ವಲನಾಗಿ ಕಣ್ಣೀರು ಸುರಿಸಿದ. ಭಕ್ತ್ಯುದ್ರೇಕದಿಂದ ಮೈ ರೋಮಾಂಚಗೊಂಡು ಸುಮ್ಮನೆ ನಿಂತುಬಿಟ್ಟ. ಕೃಷ್ಣ ನುಡಿದ -

'ಕಾಲಿಯ, ನಿನಗೆ ಅಭೀಷ್ಟವಾದ ವರ ಕೇಳು, ಕೊಡುತ್ತೇನೆ. ಭಯಪಡಬೇಡ. ನನಗೆ ನೀನು ಪ್ರಾಣಕ್ಕಿಂತ ಹೆಚ್ಚು. ನಾನು ನನ್ನ ಭಕ್ತನನ್ನು ಮೊದಲಿಗೆ ಸ್ವಲ್ಪ ದಂಡಿಸುತ್ತೇನೆ. ಬಳಿಕ ಒಲಿದು ಅನುಗ್ರಹಿಸುತ್ತೇನೆ. ಆದರಿಂದ ನಿನ್ನನ್ನು ದಂಡಿಸಿದ್ದೇನೆ.

ಇನ್ನು ಮುಂದೆ ನಿನ್ನನ್ನು ಮಾತ್ರವಲ್ಲ, ನಿನ್ನ ವಂಶದಲ್ಲಿ ಹುಟ್ಟುವ ಸರ್ಪಗಳನ್ನೂ ಯಾರೂ ಹಿಂಸಿಸಕೂಡದು. ನನ್ನ ಪಾದದ ಚಿಹ್ನೆ ಇರುವ ಸರ್ಪವನ್ನು ಕೋಲಿಂದ ಹೊಡೆದರೆ ಬ್ರಹ್ಮಹತ್ಯಾಪಾಪ ತಗಲುವುದು. ಅವನನ್ನು ಶಪಿಸಿ ಲಕ್ಷ್ಮಿ ಮನೆ ಬಿಟ್ಟು ಹೊರಟು ಹೋಗುವಳು. ಅವನ ವಂಶ ನಾಶವಾಗುವುದು. ಆಯುಸ್ಸು ಯಶಸ್ಸು ಕ್ಷೀಣಿಸುವುದು, ನರಕಪ್ರಾಪ್ತಿಯಾಗುವುದು. ನಿನ್ನ ವಂಶದ ಸರ್ಪಗಳಲ್ಲಿ ನನ್ನ ಪಾದಚಿಹ್ನೆಯನ್ನು ಕಂಡು ನಮಿಸುವವರಿಗೆ ಸಕಲ ಪಾಪ ಪರಿಹಾರವಾಗುವುದು. ಈಗ ನೀನು ರಮಣಕ ದ್ವೀಪಕ್ಕೆ ಹೋಗು. ನಿನ್ನ ತಲೆಯಲ್ಲಿರುವ ನನ್ನ ಪಾದಚಿಹ್ನೆಯನ್ನು ಕಂಡೊಡನೆ ಗರುಡ ನಿನ್ನನ್ನು ಭಕ್ತಿಯಿಂದ ನಮಿಸುತ್ತಾನೆ. ನಿನ್ನ ವಂಶದವರಿಗೂ ಅವನಿಂದ ಭಯವಿರುವುದಿಲ್ಲ. ಇನ್ನೇನು ವರ ಬೇಕು, ಕೇಳು.'

ಶ್ರೀಕೃಷ್ಣನ ಮಾತನ್ನು ಕೇಳಿ ಕಾಳಿಯ ಕೈಮುಗಿದು ನುಡಿದ, 'ಪ್ರಭು, ನನಗಿನ್ನೇನೂ ವರ ಬೇಡ. ನಿನ್ನ ಭಕ್ತಿ ನೀಡು. ನಿನ್ನ ಪಾದಕಮಲಗಳ ಸ್ಮರಣೆ ನನಗೆ ಜನ್ಮ ಜನ್ಮಗಳಲ್ಲೂ ತಪ್ಪದಿರಲಿ. ನಾನು ಬ್ರಾಹ್ಮಣನಾಗಿ ಹುಟ್ಟಲಿ ಅಥವಾ ಪಶುವಾಗಿ ಹುಟ್ಟಲಿ. ನಿನ್ನ ಪಾದಸ್ಮರಣೆಯೊಂದಿದ್ದರೆ ನನ್ನ ಜನ್ಮ ಸಫಲವಾಗುವುದು. ನಿನ್ನ ಪಾದಸ್ಮರಣೆ ಇಲ್ಲದಿದ್ದರೆ ಸ್ವರ್ಗವಾಸವೂ ವ್ಯರ್ಥವೆ. ನಿನ್ನ ಪಾದಕಮಲಸೇವಕರಿಗೆ ಜನನ ಮರಣ ರೋಗ ಶೋಕ ಭಯ ಒಂದೂ ಇಲ್ಲವಾಗುವುದು. ಅವರಿಗೆ ದೇವಪದವಿಯಲ್ಲಾಗಲಿ ದೇವೇಂದ್ರ ಪದವಿಯಲ್ಲಾಗಲಿ ಬ್ರಹ್ಮಪದವಿಯಲ್ಲಾಗಲಿ ಆಸೆ ಇರುವುದಿಲ್ಲ. ಅವರಿಗೆ ಹಳೆಯ ಹರಕು ಬಟ್ಟೆಯೂ ಹೊಸ ಬಟ್ಟೆಯೂ ಸಮಾನವೆ. ಹೀಗಿರುವಾಗ ಸಾಲೋಕ್ಯ ಮುಂತಾದ ಚತುರ್ವಿಧ ಮುಕ್ತಿಗೆ ಅವರು ಆಸೆ ಪಡುವರೆ? ನಾನು ಶೇಷನಿಂದ ನಿನ್ನ ಮಂತ್ರ ಉಪದೇಶ ಪಡೆದಾಗಲೆ ನಿನ್ನ ಧ್ಯಾನದಿಂದ ನನಗೆ ನಿನ್ನ ಕೃಷ್ಣವರ್ಣ ಪ್ರಾಪ್ತವಾಯಿತು. ಆದರೂ ನನ್ನ ಭಕ್ತಿ ಇನ್ನೂ ಪಕ್ವವಾಗಿಲ್ಲದಿರುವುದನ್ನು ಕಂಡು ದೃಢಭಕ್ತಿ ಉಳ್ಳ ಗರುಡ ನನ್ನನ್ನು ಬಹಳವಾಗಿ ಪೀಡಿಸಿ ದೂರ ಓಡಿಸಿದ. ನನಗೆ ಈಗ ನೀನು ದೃಢಭಕ್ತಿಯನ್ನು ಅನುಗ್ರಹಿಸಿರುವೆ. ನಾನು ಭಕ್ತನೆಂದು ಅವನಿಗೆ ತಿಳಿಯುವಂತೆ ಮಾಡಿರುವೆ. ಇನ್ನು ಮುಂದೆ ಆತ ನನ್ನನ್ನು ದೂರಮಾಡಲಾರ. ಏಕೆಂದರೆ ನಾನು ದೋಷಿಯಾಗಲಿ, ಗುಣಿಯಾಗಲಿ, ನಿನ್ನ ಪಾದಚಿಹ್ನೆಯನ್ನು ತಲೆಯಲ್ಲಿ ಧರಿಸಿದ್ದೇನೆ. ಪ್ರಭು, ನಿನ್ನನ್ನು ದೇವತೆಗಳು ಮುನಿಗಳು ಮನುಗಳು ಮಾನವರು ಯಾರೂ ಸ್ವಪ್ನದಲ್ಲಾಗಲಿ ಧ್ಯಾನದಲ್ಲಾಗಲಿ ಕಾಣಲಾರರು. ಹೀಗೆ ಕಣ್ಣಿಗೆ ಅಗೋಚರನಾದ ನೀನು ಭಕ್ತರಿಗೆ ಒಲಿದು ಸಾಕಾರನೆನಿಸುವಿ. ಇಲ್ಲದಿದ್ದರೆ ನಿನಗೆಲ್ಲಿಯ ಶರೀರ? ನೀನು ಸಗುಣಸಾಕಾರನೂ ಹೌದು, ನಿರ್ಗುಣ ನಿರಾಕಾರನೂ ಹೌದು. ವೇದವೇದಾಂಗ ಪಾರಂಗತರಾದ ಬ್ರಹ್ಮ ಶಿವ ಶೇಷ ಧರ್ಮರೂ ನಿನ್ನನ್ನು ಸ್ತುತಿಸಲಾರರು. ಸರ್ಪನಾದ ನಾನು ಹೇಗೆ ಸ್ತುತಿಸಲಿ? ಕರುಣಾಸಿಂಧು ದೀನಬಂಧುವಾದ ನೀನು ನನ್ನನ್ನು ಕ್ಷಮಿಸು. ಅಜ್ಞಾನದಿಂದ ದುಷ್ಟಸ್ವಭಾವ ತೋರುತ್ತ ನಾನು ನಿನ್ನನ್ನು ಕಚ್ಚಿದೆ. ನೀನು ಆಕಾಶದಂತೆ ಅನಂತ. ಅಚ್ಛೇದ್ಯ ಅಭೇದ್ಯ' ಹೀಗೆಹೇಳಿ ಕಾಳಿಯ ಕೃಷ್ಣನ ಪಾದಕಮಲಗಳ ಮೇಲೆ ಎರಗಿದ. ಕೃಷ್ಣ 'ನೀನು ಹೇಳಿದಂತೆ ಆಗಲಿ' ಎನ್ನುತ್ತ ಅವನು ಕೇಳಿದ ಎಲ್ಲ ವರವನ್ನೂ ಅನುಗ್ರಹಿಸಿದ.

ನಾಗರಾಜ ಕಾಳಿಯನು ಮಾಡಿದ ಈ ಕೃಷ್ಣಸ್ತೋತ್ರವನ್ನು ಬೆಳಿಗ್ಗೆ ಎದ್ದು ಯಾರು ಪಠಿಸುವರೋ ಅವರಿಗೆ ಅವನ ಕುಲದ ನಾಗಗಳಿಂದ ಭಯ ಉಂಟಾಗುವುದಿಲ್ಲ. ಅವರು ನಾಗಶಯ್ಯೆಯ ಮೇಲೆ ಮಲಗಬಲ್ಲರು. ವಿಷ ಅಮೃತಗಳಿಗೆ ಭೇದವೆ ಅವರಿಗೆ ಇರುವುದಿಲ್ಲ. ಹಾವು ಕಚ್ಚಿದಾಗ ಅಥವಾ ವಿಷಪಾನದಿಂದ ಪ್ರಾಣ ಹೋಗುತ್ತಿರುವಾಗ ಈ ಸ್ತೋತ್ರವನ್ನು ಸ್ಮರಿಸಿದರೆ ಸಾಕು ಮಾನವ ಸ್ವಸ್ಥನಾಗುತ್ತಾನೆ. ಭೂರ್ಜಪತ್ರದಲ್ಲಿ ಈ ಸ್ತೋತ್ರ ಬರೆದು ಕಂಠದಲ್ಲಿ ಅಥವಾ ಬಲಗೈಯಲ್ಲಿ ಧರಿಸಿದರೆ ಸರ್ಪಭಯವಿರುವುದಿಲ್ಲ. ಈ ಸ್ತೋತ್ರಪಾಠ ಯಾವ ಮನೆಯಲ್ಲಿ ಕೇಳಿ ಬರುವುದೋ ಆ ಮನೆಯಲ್ಲಿ ಸರ್ಪ ವಾಸಮಾಡುವುದಿಲ್ಲ. ಅಲ್ಲಿ ವಿಷ ಬೆಂಕಿ ಸಿಡಿಲುಗಳ ಭಯವೂ ಇರುವುದಿಲ್ಲ. ಇಹದಲ್ಲಿ ಹರಿಭಕ್ತಿ ಹರಿಸ್ಮರಣೆ ಲಭ್ಯವಾಗುವುದು, ಪರದಲ್ಲಿ ಹರಿದಾಸ್ಯ ದೊರಕುವುದು.

ಶ್ರೀಕೃಷ್ಣ ಕಾಳಿಯನಿಗೆ ವರ ನೀಡಿ ಪುನಃ ಹೇಳಿದ. 'ಕಾಳಿಯ, ನೀನು ನಿನ್ನ ರಮಣಕ ದ್ವೀಪಕ್ಕೆ ಹೋಗು. ಅದು ಇನ್ನೊಂದು ಅಮರಾವತಿಯಂತಿದೆ. ನಿನ್ನ ಪರಿವಾರದೊಂದಿಗೆ ಈ ಯಮುನಾ ಜಲಮಾರ್ಗವಾಗಿ ಹೋಗು.' ಕಾಳಿಯ ಶ್ರೀಕೃಷ್ಣನ ವಿರಹವನ್ನು ಸಹಿಸಲಾರದೆ ಅತ್ತುಬಿಟ್ಟ. ನೂರಾರು ಬಾರಿ ನಮಸ್ಕಾರ ಮಾಡಿದ. ಬಳಿಕ ಪರಿವಾರದೊಂದಿಗೆ ಅಲ್ಲಿಂದ ಹೊರಟಹೋದ. ಯಮುನೆಯ ಮಡು ಆಗ ಶುದ್ಧವಾಯಿತು. ನೀರು ಅಮೃತತುಲ್ಯವಾಯಿತು. ಪ್ರಾಣಿಗಳೆಲ್ಲ ಸಂತಸಗೊಂಡುವು. ಇತ್ತ ಕಾಳಿಯನೂ ರಮಣಕ ದ್ವೀಪದಲ್ಲಿ ವಿಶ್ವಕರ್ಮನಿಂದ ನಿರ್ಮಿತವಾದ ತನ್ನ ಮಂದಿರವನ್ನು ಹೊಕ್ಕು ಹೆಂಡತಿ ಮಕ್ಕಳೊಂದಿಗೆ ಸುಖವಾಗಿ ವಾಸಮಾಡಿದ. ಹರಿಧ್ಯಾನ ನಿರತನಾದ. ಇದು ಶ್ರೀಹರಿಯ ದಿವ್ಯ ಕಥೆ. ಅದ್ಭುತ ಮತ್ತು ಸುಖಕರ, ಮೋಕ್ಷದಾಯಕ.

**ನಾರದ:-** ಜಗದ್ಗುರು, ಕಾಳಿಯ ತನ್ನ ವಾಸಸ್ಥಾನವನ್ನು ತೊರೆದು ಯಮುನೆಯ ಮಡುವಿಗೆ ಏಕೆ ಬಂದಿದ್ದ? ಹೇಳು.

**ನಾರಾಯಣ:-** ನಾರದ, ಅದೊಂದು ಹಳೆ ಕಥೆ. ಮಲಯಪರ್ವತದ ಬಳಿ ಸುಪ್ರಭಾನದಿಯ ಪಶ್ಚಿಮ ತೀರದಲ್ಲಿ ಸೂರ್ಯಗ್ರಹಣಕಾಲದಲ್ಲಿ ಕೃಷ್ಣಕಥೆಯನ್ನು ಹೇಳುತ್ತ ನಡುವೆ ಈ ಕಥೆಯನ್ನು ನಮ್ಮ ತಂದೆ ಧರ್ಮನೆ ನನಗೆ ಉಪದೇಶಿಸಿದ. ಮುನಿಗಳ ನಡುವೆ ಕುಳಿತಿದ್ದ ನಮ್ಮ ತಂದೆಯನ್ನು ಪುಲಹಮುನಿ ಕೇಳಿದಾಗ ಅವರು ಹೇಳಿದ ಕಥೆ ಇದು. ಶೇಷನ ಆಜ್ಞೆಯಂತೆ ಪ್ರತಿವರ್ಷ ಕಾರ್ತಿಕ ಹುಣ್ಣಿಮೆಯಂದು ಎಲ್ಲ ನಾಗರೂ ಗರುಡನನ್ನು ಪೂಜಿಸುತ್ತಿದ್ದರು. ಪುಷ್ಪ ಧೂಪ ದೀಪ ನೈವೇದ್ಯ ಮುಂತಾದವನ್ನು ಸಮರ್ಪಿಸುತ್ತಿದ್ದರು. ಕಾಳಿಯ ಮಾತ್ರ ಅಹಂಕಾರದಿಂದ ಪೂಜೆ ಮಾಡದೆ ನೈವೇದ್ಯವನ್ನು ತಾನೆ ಭಕ್ಷಿಸತೊಡಗಿದ. ಬೇರೆ ನಾಗರು ತಡೆದು ಹಿತವನ್ನು ಉಪದೇಶಿಸಿದರು. ಆತ ಕೇಳಲಿಲ್ಲ. ಅಷ್ಟರಲ್ಲಿ ಗರುಡ ಅಲ್ಲಿಗೆ ಬಂದ. ನಾಗರು ಕಾಳಿಯನ ಪ್ರಾಣರಕ್ಷಣೆಗಾಗಿ ಗರುಡನೊಡನೆ ಹೋರಾಡಿದರು. ರಾತ್ರಿ ಇಡೀ ಸೂರ್ಯೋದಯವಾಗುವವರೆಗೂ ಹೋರಾಟ ನಡೆಯಿತು. ಕೊನೆಗೆ ನಾಗರು ಸೋತು ಶೇಷನ ಬಳಿಗೆ ಓಡಿದರು. ಪಲಾಯನಗೈಯುತ್ತಿದ್ದ ನಾಗರನ್ನು ದಯಾಮಯನಾದ ಗರುಡ ಹಾಗೇ ಬಿಟ್ಟ. ಕಾಳಿಯ ಮಾತ್ರ ನಿರ್ಭೀತಿಯಿಂದ ಅಲ್ಲಿಯೆ ನಿಂತ. ಹರಿಯ ಪಾದಕಮಲಗಳನ್ನು ನೆನೆದು ಗರುಡನೊಡನೆ ಹೋರಾಟ ಮಾಡಿದ. ಮುಹೂರ್ತ ಕಾಲ

ಇಬ್ಬರಿಗೂ ಭಯಂಕರ ಯುದ್ಧ ನಡೆಯಿತು. ಕೊನೆಗೆ ಕಾಳಿಯನೆ ಸೋತು ಯಮುನೆಯ ಮಡುವಿಗೆ ಹೋಗಿ ಅವಿತುಕೊಂಡ. ಏಕೆಂದರೆ ಸೌಭರಿಮುನಿಯ ಶಾಪದಿಂದ ಗರುಡ ಅಲ್ಲಿಗೆ ಬರಲು ಅಸಮರ್ಥನಾಗಿದ್ದ.

**ನಾರದ:-** ಸೌಭರಿಮುನಿ ಗರುಡನಿಗೆ ಏಕೆ ಶಾಪ ನೀಡಿದ?

**ನಾರಾಯಣ:-** ಸೌಭರಿ ಒಂದು ಸಾವಿರ ದಿವ್ಯ ವರ್ಷಗಳ ಕಾಲ ಕೃಷ್ಣನ ಪಾದ ಕಮಲಗಳನ್ನು ಧ್ಯಾನಿಸಿ ಸಿದ್ಧಿ ಪಡೆದವ. ಯಮುನಾತೀರದಲ್ಲಿ ಆತ ತಪಸ್ಸು ಮಾಡುತ್ತಿದ್ದಾಗ ಒಮ್ಮೆ ಗರುಡ ಮಡುವಿನಿಂದ ಒಂದು ಮೀನನ್ನು ಎತ್ತಿಕೊಂಡ. ಮುನಿ ಆಗ ಕೋಪದಿಂದ ಗರುಡನನ್ನು ದಿಟ್ಟಿಸಿದ. ಒಡನೆ ಮೀನು ನೀರಿಗೆ ಬಿದ್ದಿತು. ತಿರುಗಿ ಅದನ್ನು ಗರುಡ ಎತ್ತಿಕೊಳ್ಳಲು ಉದ್ಯುಕ್ತನಾದ. ಮೀನು ಭಯದಿಂದ ಮುನಿಯ ಸಮೀಪಕ್ಕೆ ಬಂದಿತು. ಮುನಿ ಗರುಡನನ್ನು ಶಪಿಸಿದ -

'ಗರುಡ, ತೊಲಗಿ ಹೋಗು. ನನ್ನ ಕಣ್ಣ ಮುಂದೆಯೆ ಒಂದು ಪ್ರಾಣಿಯನ್ನು ಎತ್ತಿಕೊಂಡೊಯ್ಯಲು ನಿನಗೆ ಎಲ್ಲಿಯ ಸಾಮರ್ಥ್ಯ? ಕೃಷ್ಣನ ವಾಹನನೆಂದು ನಿನಗೆ ಬಹಳ ಅಹಂಕಾರ. ಆದರೆ ನಿನ್ನಂಥ ವಾಹಕರನ್ನು ಶ್ರೀಕೃಷ್ಣ ಕೋಟಿಗಟ್ಟಲೆ ಸೃಜಿಸಬಲ್ಲನೆಂಬುದನ್ನು ನೀನರಿಯೆ. ನಾನೂ ನಿನ್ನನ್ನು ಒಂದು ಹುಬ್ಬಿನ ಕುಣಿತದಿಂದ ಸುಟ್ಟು ಬೂದಿ ಮಾಡಬಲ್ಲೆ. ನೀನು ಕೃಷ್ಣನ ವಾಹನವಾದ ಮಾತ್ರಕ್ಕೆ ನಾವು ನಿನ್ನ ಸೇವಕರಲ್ಲ. ಆದ್ದರಿಂದ ಇನ್ನು ಮುಂದೆ ನೀನು ನನ್ನ ಈಮಡುವಿಗೆ ಬಂದರೆ ನನ್ನ ಶಾಪದಿಂದ ಸುಟ್ಟು ಬೂದಿಯಾಗುವೆ.'

ಇದನ್ನು ತಿಳಿದ ಕಾಳಿಯ ಯಮುನೆಯ ಮಡುವಿನಲ್ಲಿ ಸೇರಿ ವಾಸ ಮಾಡತೊಡಗಿದ. ತನ್ನ ಪರಿವಾರದೊಂದಿಗೆ ನಿರ್ಭೀತಿಯಿಂದ ಸಂಚರಿಸಿದ. ಬಾಲವನ್ನೆತ್ತಿ ಆನಂದದಿಂದ ಮುನಿಗೆ ಸುತ್ತು ಬರುತ್ತಲಿದ್ದ ಸರ್ಪಗಳನ್ನು ನೋಡುತ್ತಲೆ ಗರುಡನೂ ಸುಮ್ಮನೆ ಪ್ರದಕ್ಷಿಣೆ ಮಾಡಿ ಹೋಗುತ್ತಿದ್ದ.

ಇದು ಅತಿಗೋಪ್ಯವೂ ಶ್ರವಣಾನಂದಕಾರಿಯೂ ಆದ ಇತಿಹಾಸ. ನಾರದ, ನಿನಗೆ ಈಗ ಮುಂದಿನ ಕಥೆಯನ್ನು ಹೇಳುತ್ತೇನೆ ಕೇಳು. ಶ್ರೀಕೃಷ್ಣ ಕಾಳಿಯನ ಮಡುವಿನೊಳಗೆ ಧುಮುಕಿ ಎಷ್ಟು ಹೊತ್ತಾದರೂ ಹೊರಗೆ ಬಾರದಿದ್ದುದನ್ನು ಕಂಡು ಗೋಪಬಾಲಕರು ಕಳವಳಗೊಂಡರು. ಕೆಲವರು ಎದೆ ಹೊಡೆದುಕೊಂಡು ಅತ್ತರು. ಕೆಲವರು ಮೂರ್ಛೆಗೊಂಡರು. ಕೆಲವರು ದುಃಖ ತಡೆದುಕೊಳ್ಳಲಾರದೆ ತಾವೂ ಮಡುವನ್ನು ಪ್ರವೇಶಿಸಲು ಹೊರಟರು. ಕೆಲವರು ಅವರನ್ನು ತಡೆದರು. ಕೆಲವರು ಕೃಷ್ಣನಿಗೆ ಏನೂ ಅಪಾಯವಾಗದಿರಲಿ ಎಂದು ರಕ್ಷೆ ಮಾಡಿದರು. ಇನ್ನು ಕೆಲವರು ಹಾ ಕೃಷ್ಣ ಹಾ ಕೃಷ್ಣ ಎಂದು ಅಳುತ್ತ ನಂದಗೋಪನ ಬಳಿಗೆ ಓಡಿದರು. ಬಲರಾಮನಿಗೂ ಎಲ್ಲ ಗೋಪೀ ಗೋಪರಿಗೂ ನಡೆದ ಸಂಗತಿಯನ್ನು ತಿಳಿಸಿದರು. ಅವರೆಲ್ಲರೂ ಮಡುವಿನ ಬಳಿಗೆ ಧಾವಿಸಿದರು. ನಂದ ಯಶೋದೆಯರು ದುಃಖ ತಡೆಯಲಾರದೆ ಮಡುವಿಗೆ ಹಾರಲು ಉದ್ಯುಕ್ತರಾದಾಗ ಎಲ್ಲರೂ ತಡೆದರು. ರಾಧೆಯೂ ಮಡುವನ್ನು ಪ್ರವೇಶಿಸಲು ಯತ್ನಿಸಿದಾಗ ಜನರು ತಡೆದು ನಂದ ಯಶೋದೆಯರೂ ಎಲ್ಲ ಗೋಪ

ಗೋಪಿಯರೂ ರಾಧೆಯೂ ಶೋಕತಪ್ತರಾಗಿ ಮೈಮರೆತುದನ್ನು ಕಂಡ ಬಲರಾಮ ಎಲ್ಲರಿಗೂ ಸಮಾಧಾನದ ಮಾತುಗಳನ್ನು ನುಡಿದ -

'ಎಲ್ಲರೂ ನನ್ನ ಮಾತನ್ನು ಕೇಳಿ. ಕೃಷ್ಣ ಜಗದೀಶ್ವರ. ಪ್ರಳಯಕಾಲದಲ್ಲಿ ಶೇಷ ರುದ್ರ ಬ್ರಹ್ಮರನ್ನೂ ಲಯ ಮಾಡುವವ. ಸೃಷ್ಟಿಕಾಲದಲ್ಲಿ ಅವರನ್ನು ಸೃಷ್ಟಿಮಾಡುವವ. ಇಂಥ ಸರ್ವೇಶ್ವರನಾದ ಕೃಷ್ಣನಿಗೆ ಎತರ ಭಯ? ನಂದ, ನೀನೂ ಜ್ಞಾನಿಗಳಲ್ಲಿ ಶ್ರೇಷ್ಠ. ಗರ್ಗಾಚಾರ್ಯರೂ ಕೃಷ್ಣನ ಬಗ್ಗೆ ನಿನಗೆ ಉಪದೇಶ ಮಾಡಿದ್ದಾರೆ. ಅದನ್ನು ನೆನೆದುಕೊಳ್ಳು. ವೇದಗಳು ಹೇಳುತ್ತಿವೆ. ಕೃಷ್ಣ ಯಾವ ಶಸ್ತ್ರಾಸ್ತ್ರಗಳಿಗೂ ಗುರಿಯಾಗುವವನಲ್ಲ. ಅವನನ್ನು ಯಾರೂ ವಧಿಸಲು ಸಮರ್ಥರಲ್ಲ. ಯಾವ ಬೆಂಕಿಯೂ ಅವನನ್ನು ಸುಡಲಾರದು. ಯಾವ ಮೃಗ ಸರ್ಪಗಳೂ ಅವನ್ನು ಹಿಂಸಿಸಲಾರವು. ಆದಿ ಅಂತ್ಯಗಳಿಲ್ಲದ ಜ್ಯೋತಿಸ್ವರೂಪನಾದ ಕೃಷ್ಣ ಭಕ್ತರಿಗಾಗಿ ತನ್ನ ಅನಾದಿನಿತ್ಯವಾದ ಶರೀರವನ್ನು ತೋರುತ್ತಿದ್ದಾನೆ. ಪ್ರಳಯಕಾಲದಲ್ಲಿ ಬ್ರಹ್ಮಾಂಡವಿಡೀ ನಶಿಸಿದಾಗ ಪ್ರಳಯೋದಕದಲ್ಲಿ ಮಲಗುವ ಕೃಷ್ಣನಿಗೆ, ನಾಭಿಕಮಲದಲ್ಲಿ ಬ್ರಹ್ಮನನ್ನು ಸೃಷ್ಟಿಸಿದ ಕೃಷ್ಣನಿಗೆ ಎಲ್ಲಿಯ ಆಪತ್ತು? ಒಂದು ಸೊಳ್ಳೆ ಬ್ರಹ್ಮಾಂಡವನ್ನು ನುಂಗಲೂ ಸಮರ್ಥವಾದೀತೇನೊ! ಆದರೂ ಕೃಷ್ಣನನ್ನು ಒಂದು ಹಾವು ನುಂಗುವುದು ಅತ್ಯಂತ ಅಸಂಭಾವಿತವೆಂದು ತಿಳಿಯಿರಿ' ಎಂದು ಮುಂತಾಗಿ ಉತ್ತಮವಾದ ಅಧ್ಯಾತ್ಮರಹಸ್ಯವನ್ನು ಬಲರಾಮ ಉಪದೇಶಿಸಿದ. ಆಗ ನಂದ ಸಮಾಧಾನಗೊಂಡ. ಎಲ್ಲ ಗೋಪಗೋಪಿಯರೂ ಸಮಾಧಾನಗೊಂಡರು. ಆದರೂ ಯಶೋದೆಯೂ ರಾಧೆಯೂ ದುಃಖ ತಡೆದುಕೊಳ್ಳಲು ಶಕ್ತರಾಗಲಿಲ್ಲ. ಅಷ್ಟರಲ್ಲಿ ಕೃಷ್ಣ ನೀರಿನಿಂದ ಮೇಲೆ ಎದ್ದು ಬಂದ. ಶರತ್ಕಾಲದ ಹುಣ್ಣಿಮೆಚಂದ್ರನಂಥ ನಗುಮೊಗದ ಮನೋಹರ ಶರೀರದ ಕೃಷ್ಣನನ್ನು ಎಲ್ಲರೂ ಕಂಡರು. ಅವನ ಬಟ್ಟೆ ಒದ್ದೆಯಾಗಿರಲಿಲ್ಲ. ಮೈ ನೆನೆದಿರಲಿಲ್ಲ. ಮೈಗೆ ಬಳಿದ ಚಂದನವಾಗಲಿ ಕಣ್ಣಿಗೆ ಹಾಕಿದ್ದ ಕಾಡಿಗೆಯಾಗಲಿ ಹಾಗೇ ಇದ್ದುವು. ಆಭರಣಗಳೂ ಹಾಗೇ ಇದ್ದುವು. ತಲೆಯಲ್ಲಿ ನವಿಲಗರಿ ಶೋಭಿಸುತ್ತಿತ್ತು. ಕೈಯಲ್ಲಿ ಕೊಳಲು ನಲಿದಾಡುತ್ತಿತ್ತು. ಯಶೋದೆ ಬಾಲಕ ಕೃಷ್ಣನನ್ನು ಬಿಗಿದಪ್ಪಿಕೊಂಡಳು. ಮುಖಕಮಲವನ್ನು ಚುಂಬಿಸಿದಳು. ನಂದನೂ ಬಲರಾಮನೂ ರೋಹಿಣಿಯೂ ಎಲ್ಲರೂ ಕೃಷ್ಣನನ್ನು ಆಲಿಂಗಿಸಿದರು. ಎಲ್ಲ ಗೋಪಗೋಪಿಯರೂ ಕೃಷ್ಣನ ಮುಖವನ್ನು ಎವೆಯಿಕ್ಕದೆ ಕಂಡರು. ಅದೇ ಸಮಯದಲ್ಲಿ ಕಾಡಿನಲ್ಲೆಲ್ಲ ಕಾಳ್ಗಿಚ್ಚು ತಲೆದೋರಿತು. ಬೆಟ್ಟದಷ್ಟು ಎತ್ತರಕ್ಕೆ ಬೆಳೆದು ಇಡಿ ಗೋಕುಲವನ್ನು ಸುತ್ತುವರಿಯಿತು. ಸರ್ವನಾಶವಾಗುವುದೆಂದು ಎಲ್ಲರೂ ಭಯಭೀತರಾದರು. ಶ್ರೀಕೃಷ್ಣನಿಗೆ ಕೈಮುಗಿದು ತಲೆಬಾಗಿ ಬೇಡಿಕೊಂಡರು -

'ಕೃಷ್ಣ, ನೀನು ನಮ್ಮನ್ನು ಎಲ್ಲ ಆಪತ್ತುಗಳಿಂದಲೂ ರಕ್ಷಿಸುವವನು. ಈ ಕಾಳ್ಗಿಚ್ಚಿನಿಂದಲೂ ರಕ್ಷಿಸು. ನೀನೆ ನಮಗೆ ಇಷ್ಟದೇವತೆ, ಕುಲದೇವತೆ. ನಿನ್ನನ್ನೆ ಬೇಡುತ್ತೇವೆ. ಪ್ರಪಂಚದ ಸೃಷ್ಟಿಸ್ಥಿತಿಲಯಗಳನ್ನು ಮಾಡುವವ ನೀನು. ಅಗ್ನಿ ವರುಣ ಚಂದ್ರ ಸೂರ್ಯ ಯಮ ಕುಬೇರ ವಾಯು ಶಿವ ಮುಂತಾದ ದೇವತೆಗಳೂ ಬ್ರಹ್ಮ ರುದ್ರ ಶೇಷ ಧರ್ಮ ಇಂದ್ರರೂ ಮುನಿಗಳೂ ಮನುಗಳೂ ಮಾನವರೂ ದೈತ್ಯ ಯಕ್ಷ ರಾಕ್ಷಸ ಕಿನ್ನರರೂ ಎಲ್ಲ ಚರಾಚರ ವಸ್ತುಗಳೂ ನಿನ್ನ ವಿಭೂತಿರೂಪಗಳೇ ಆಗಿವೆ. ನಿನ್ನನ್ನೆ ನಾವು ಮೊರೆಹೊಕ್ಕಿದ್ದೇವೆ, ಅಭಯನೀಡು.'

ಶ್ರೀಕೃಷ್ಣ ತನ್ನ ಅಮೃತಮಯವಾದ ದೃಷ್ಟಿಯನ್ನು ಸುತ್ತಲೂ ಹರಿಸಿದ. ಕಾಳ್ಗಿಚ್ಚು ಒಡನೆ ದೂರಕ್ಕೆ ಸರಿಯಿತು. ಎಲ್ಲರೂ ಆನಂದದಿಂದ ಕುಣಿದರು.

**ಸರ್ವಾಪದಃ ಪ್ರಣಶ್ಯಂತಿ ಹರಿಸ್ಮರಣಮಾತ್ರತಃ।**

ಹರಿಯನ್ನು ಸ್ಮರಿಸಿದರೆ ಸಾಕು, ಎಲ್ಲ ಆಪತ್ತುಗಳೂ ಪರಿಹಾರವಾಗುವುವು ಎಂದು ಹೇಳಿಕೊಂಡರು.

ಈ ಸ್ತೋತ್ರವನ್ನು ಬೆಳಿಗ್ಗೆ ಎದ್ದು ಪಠಿಸಿದರೆ ಅಗ್ನಿಭಯವಿರುವುದಿಲ್ಲ. ಶತ್ರುಭಯ ಆಪತ್ತಿನ ಭಯ ಪ್ರಾಣಸಂಕಟ ಎಲ್ಲವೂ ಪರಿಹಾರವಾಗುವುವು. ಶತ್ರುಗಳ ಬಲ ಅಡಗುವುದು, ವಿಜಯ ಲಭಿಸುವುದು. ಇಹದಲ್ಲಿ ಹರಿಭಕ್ತಿಯೂ ಕೊನೆಯಲ್ಲಿ ಹರಿದಾಸ್ಯವೂ ಲಭಿಸುವುದು.

ನಾರದ, ಕೃಷ್ಣ ಹೀಗೆ ಕಾಳ್ಗಿಚ್ಚಿನ ಭಯ ಪರಿಹರಿಸಿ ಎಲ್ಲ ಗೋಪಗೋಪಿಯರೊಡನೆ ತನ್ನ ಅರಮನೆಗೆ ತೆರಳಿದ. ನಂದಗೋಪ ಬ್ರಾಹ್ಮಣರಿಗೆ ದಾನ ದಕ್ಷಿಣೆಗಳನ್ನಿತ್ತ. ಬಂಧುಮಿತ್ರರಿಗೆ ಭೋಜನವಿತ್ತ. ವೇದಪಾಠ ಮುಂತಾದ ನಾನಾ ಮಂಗಳಕಾರ್ಯಗಳನ್ನು ಬ್ರಾಹ್ಮಣರಿಂದ ಮಾಡಿಸಿದ. ಹರಿನಾಮ ಸಂಕೀರ್ತನೆ ನಡೆಸಿದ. ಎಲ್ಲರೂ ಕೃಷ್ಣನ ಪಾದಕಮಲಗಳನ್ನು ಧ್ಯಾನಿಸುತ್ತ ನಲಿದರು.

ಇದು ಹರಿಯ ಮಂಗಲ ಚರಿತ್ರೆ. ಪಾಪಗಳೆಂಬ ಕಟ್ಟಿಗೆಯನ್ನು ಸುಡುವುದರಲ್ಲಿ ಬೆಂಕಿಗೆ ಸಮಾನ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಕಾಳಿಯದಮನ ಮತ್ತು ದಾವಾಗ್ನಿಪರಿಹಾರವೆಂಬ ಹತ್ತೊಂಬನೆಯ ಅಧ್ಯಾಯ ಮುಗಿದುದು*

—o—

## ಗೋವತ್ಸಬಾಲಕಹರಣ

ಅಧ್ಯಾಯ - ೨೦

**ನಾರಾಯಣ:-** ಒಮ್ಮೆ ಕೃಷ್ಣ ಬಲರಾಮನೊಡನೆ ಮತ್ತು ಎಲ್ಲ ಬಾಲಕರೊಡನೆ ವೃಂದಾವನದಲ್ಲಿ ವಿಹರಿಸುತ್ತ ಎಲ್ಲರೂ ಆಟವಾಡುವುದರಲ್ಲಿ ಮಗ್ನರಾಗಿದ್ದಾಗ ಬ್ರಹ್ಮ ಕೃಷ್ಣನ ಮಹಿಮೆಯನ್ನು ತಿಳಿಯುವ ಉದ್ದೇಶದಿಂದ ಅಲ್ಲಿಗೆ ಬಂದ. ಆಗ ಆಟದಲ್ಲಿ ಮಗ್ನರಾದ ಬಾಲಕರು ಗೋವುಗಳ ಕಡೆಗೆ ಗಮನ ಹರಿಸಿರಲಿಲ್ಲ. ಕೆಲವು ಗೋವುಗಳು ಕರುಗಳು ಮತ್ತು ಬಾಲಕರು ದೂರ ಹೋಗಿದ್ದುವು. ಬ್ರಹ್ಮ ಅವುಗಳನ್ನು ಅದೃಶ್ಯಗೊಳಿಸಿ ಅಪಹರಿಸಿದ. ಕೃಷ್ಣ ಸರ್ವಜ್ಞ ಮಹಾಯೋಗಿ. ಬ್ರಹ್ಮನ ಈ ಕೃತ್ಯವನ್ನು ತಿಳಿದು ಯೋಗಮಾಯೆಯಿಂದ ಪುನಃ ಗೋವುಗಳನ್ನೂ ಕರುಗಳನ್ನೂ ಬಾಲಕರನ್ನೂ ಕೃತ್ರಿಮವಾಗಿ ನಿರ್ಮಿಸಿದ. ಒಂದು ವರ್ಷಕಾಲ ಈಕೃತ್ರಿಮ ಗೋವುಗಳನ್ನೆ ಗೋಪ ಬಾಲಕರು ಮೇಸಿದರು. ಕೊನೆಗೆ ಬ್ರಹ್ಮ ಸೋತು ಲಜ್ಜೆಯಿಂದ ಕೃಷ್ಣನಿಗೆ ತಲೆ ಬಾಗಿದ. ಕಣ್ತುಂಬ ನೋಡುತ್ತ ಪುನಃ ಪುನಃ ನಮಸ್ಕರಿಸಿದ. ಹೃದಯಕಮಲದಲ್ಲಿ ಹರಿಯ ಯಾವ ರೂಪವನ್ನು ಹಿಂದೆ ಕಾಣುತ್ತಿದ್ದನೋ ಅದೇ ರೂಪ ತನ್ನೆದುರಿಗೆ ಕಂಡು ಬಂದಿತು. ಎದುರಿನಲ್ಲಿ ಮಾತ್ರವಲ್ಲ ಬೆನ್ನ ಹಿಂದೆಯೂ ಅದೇ ರೂಪ. ಸುತ್ತಲೂ ಅದೇ ರೂಪ. ವೃಂದಾವನದಲ್ಲಿ ಎಲ್ಲವೂ ಕೃಷ್ಣನಂತೆಯೆ ಕಂಡುಬಂದುವು.

ಗೋವುಗಳೂ ಕರುಗಳೂ ಗೋಪಬಾಲಕರೂ ಮರಗಿಡ ಬಳ್ಳಿಗಳೂ ಕೃಷ್ಣನಂತೆ ನೀಲವರ್ಣದಿಂದ ಶೋಭಿಸಿದುವು. ಈ ಪರಮಾಶ್ಚರ್ಯವನ್ನು ಕಂಡು ಬ್ರಹ್ಮ ಧ್ಯಾನಮಾಡುತ್ತ ನಿಂತ. ಧ್ಯಾನಮಾಡುತ್ತ ಮೂಲೋಕದಲ್ಲಿಯೂ ಕೃಷ್ಣನನ್ನು ಕಂಡ. ಕೃಷ್ಣನಲ್ಲದೆ ಬೇರೇನೂ ಅವನ ಕಣ್ಣಿಗೆ ಕಾಣದಾಯಿತು. ಮರವೆಲ್ಲಿ? ಬೆಟ್ಟವೆಲ್ಲಿ? ನೆಲವೆಲ್ಲಿ? ಸಾಗರವೆಲ್ಲಿ? ದೇವ ಗಂಧರ್ವ ಮುನಿ ಮಾನವರೆಲ್ಲ ಎಲ್ಲಿ? ಹರಿಯ ಮಾಯೆಯಿಂದ ಎಲ್ಲವೂ ಕೃಷ್ಣಮಯವಾಗಿಯೆ ಆತನಿಗೆ ಕಂಡಿತು. ಏನು ಹೇಳಬೇಕೆಂದೆ ತಿಳಿಯದಾಯಿತು. ಯಾರನ್ನು ಸ್ತುತಿಸಲಿ? ಏನು ಮಾಡಲಿ? ಎಂದು ತಿಳಿಯದೆ ಜಪ ಮಾಡಲು ಉದ್ಯುಕ್ತನಾದ. ಸುಖಕರವಾದ ಯೋಗಾಸನದಲ್ಲಿ ಕುಳಿತು ಇಡಾ ಪಿಂಗಲಾ ಸುಷುಮ್ನಾ ಮಧ್ಯಾ ನಲಿನೀ ಧುರಾ ಎಂಬ ನಾಡಿಗಳನ್ನು ಯೋಗಬಲದಿಂದ ಬಂಧಿಸಿದ. ಮೂಲಾಧಾರ ಸ್ವಾಧಿಷ್ಠಾನ ಮಣಿಪೂರ ಅನಾಹತ ವಿಶುದ್ಧ ಆಜ್ಞಾ ಎಂಬ ಚಕ್ರಗಳನ್ನೂ ಬಂಧಿಸಿದ. ಅವುಗಳಲ್ಲಿ ಕ್ರಮವಾಗಿ ಪ್ರಾಣವಾಯುವನ್ನು ಒಯ್ದು ಬ್ರಹ್ಮರಂಧ್ರದಲ್ಲಿ ನಿಲ್ಲಿಸಿ ಹೃದಯಕಮಲವನ್ನು ಮಧ್ಯಾನಾಡಿಗೆ ಸೇರಿಸಿ ಪ್ರಾಣವಾಯುವನ್ನು ಅಲ್ಲಿಗೆ ತಂದು ನಿಲ್ಲಿಸಿ ನಿಶ್ಚಲವಾಗಿ ಕುಳಿತು ಹರಿಯೆ ಹಿಂದೆ ಉಪದೇಶಿಸಿದ್ದ ದಶಾಕ್ಷರ ಮಂತ್ರವನ್ನು ಜಪಿಸಿದ. ಹರಿಯ ಪಾದಕಮಲವನ್ನು ಹೃದಯಕಮಲದಲ್ಲಿರಿಸಿಕೊಂಡು ಧ್ಯಾನಿಸಿದ. ಮೈಯೆಲ್ಲ ರೋಮಾಂಚಗೊಂಡು ಆನಂದಬಾಷ್ಪ ಸುರಿಸುತ್ತ ಒಂದು ಮುಹೂರ್ತಕಾಲ ಜಪ ಧ್ಯಾನಗಳನ್ನು ಮಾಡಿ ಹೃದಯಕಮಲದಲ್ಲಿ ದ್ವಿಭುಜ ಮುರಲೀ ಹಸ್ತ ಪೀತಾಂಬರಧಾರಿ ಮನೋಹರ ಕೃಷ್ಣಮೂರ್ತಿಯನ್ನು ಪ್ರತ್ಯಕ್ಷ ಕಂಡ. ಬಳಿಕ ಹೊರಗೂ ಅದೇ ರೂಪವನ್ನು ಕಂಡು ಪರಮಾಶ್ಚರ್ಯದಿಂದ ಸ್ತೋತ್ರ ಮಾಡಿದ. ಹಿಂದೆ ಹರಿ ತನಗೆ ಉಪದೇಶಿಸಿದ್ದ ಸ್ತೋತ್ರವನ್ನೆ ಪಠಿಸಿದ.

'ಸರ್ವಸ್ವರೂಪನೂ ಸರ್ವೇಶ್ವರನೂ ಸರ್ವಕಾರಣಗಳಿಗೆ ಕಾರಣನೂ ಯಾರಿಗೂ ವರ್ಣಿಸಲಾಗದವನೂ ಮಂಗಳಸ್ವರೂಪನೂ ಆದ ಹರಿಗೆ ನಮಸ್ಕಾರ ಮಾಡುವೆನು. ನೀಲಮೇಘಶ್ಯಾಮ ಸ್ವಾತ್ಮಾರಾಮ ಪೂರ್ಣಕಾಮ ಸರ್ವಾಧಾರ ಸರ್ವಶಕ್ತ ಸಂಸಾರಸಾಗರ ನೌಕಾರೂಪ, ಭಕ್ತವತ್ಸಲ, ವೇದಜನಕ, ಮಂತ್ರಸ್ವರೂಪ, ಯೋಗೀಂದ್ರರಿಗೂ ಧ್ಯಾನಕ್ಕೆ ನಿಲುಕದವ, ರಾಸಮಂಡಲ ಮಧ್ಯದಲ್ಲಿರುವವ, ಯೋಗೀಶ್ವರ, ಸುಖದುಃಖದಾಯಕ ಪರಾತ್ಪರ ಇಂಥ ಹರಿಯನ್ನು ನಮಿಸುತ್ತೇನೆ.'

ಬ್ರಹ್ಮನು ಮಾಡಿದ ಈ ಸ್ತೋತ್ರದ ಪಠನದಿಂದ ಇಹದಲ್ಲಿ ಸುಖ ಪರದಲ್ಲಿಯೂ ಹರಿದಾಸ್ಯ ಲಭಿಸುವುದು. ಕೃಷ್ಣನನ್ನು ಹೀಗೆ ಸ್ತೋತ್ರಮಾಡಿ ಬ್ರಹ್ಮ ತನ್ನ ಲೋಕಕ್ಕೆ ತೆರಳಿದ. ಕೃಷ್ಣ ತನ್ನ ಮಂದಿರವನ್ನು ಸೇರಿದ. ಬ್ರಹ್ಮನು ಅಪಹರಿಸಿದ ಗೋವುಗಳೂ ಕರುಗಳೂ ಬಾಲಕರೂ ಒಂದು ವರ್ಷದ ಅನಂತರ ತಮ್ಮ ಮನೆಗಳಿಗೆ ಬಂದರು. ಕೃಷ್ಣನ ಮಾಯೆಯಿಂದ ಅವರಿಗೆ ಒಂದು ವರ್ಷ ಒಂದು ದಿನವೆ ಆಗಿತ್ತು.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಗೋವತ್ಸಬಾಲಕಹರಣವೆಂಬ ಇಪ್ಪತ್ತನೆ ಅಧ್ಯಾಯ ಮುಗಿದುದು*

—○—

**ಶ್ರೀನಾರಾಯಣಮುನಿ ನುಡಿದ:-** ಒಮ್ಮೆ ನಂದಗೋಪ ಇಂದ್ರಯಾಗಕ್ಕಾಗಿ ದುಂದುಭಿ ಮೊಳಗಿಸಿದ. 'ಎಲ್ಲರೂ ಹಾಲು, ಮೊಸರು, ತುಪ್ಪ, ಬೆಣ್ಣೆ, ಬೆಲ್ಲ, ಜೇನು, ಮುಂತಾದ ವಸ್ತುಗಳನ್ನು ತಂದು ಇಂದ್ರನನ್ನು ಪೂಜಿಸಿರಿ. ಈ ನಗರದಲ್ಲಿ ಗೋಪಗೋಪಿಯರು ಬಾಲಕ ಬಾಲಕಿಯರು ಬ್ರಾಹ್ಮಣರು ವೈಶ್ಯರು ಶೂದ್ರರು ಯಾರು ಯಾರು ಇರುವರೋ ಅವರೆಲ್ಲರೂ ಸೇರಿ ಪೂಜೆ ಮಾಡಬೇಕು' ಎಂದು ಘೋಷಣೆ ಮಾಡಿಸಿದ. ತಾನು ಒಂದು ವಿಶಾಲವಾದ ಸುಂದರವಾದ ಸ್ಥಳದಲ್ಲಿ ಇಂದ್ರಧ್ವಜ ಸ್ತಂಭವನ್ನು ಸ್ಥಾಪಿಸಿದ. ಆ ಸ್ತಂಭಕ್ಕೆ ತೆಳುವಾದ ರೇಶಿಮೆ ಬಟ್ಟೆ ಸುತ್ತಿ ಮನೋಹರವಾದ ಹೂಮಾಲೆ ತೊಡಿಸಿ ಚಂದನ ಅಗುರು ಕಸ್ತೂರಿ ಕುಂಕುಮ ಕೇಸರಿಯನ್ನು ಲೇಪಿಸಿದ. ಸ್ನಾನ ಆಹ್ನೀಕಗಳನ್ನು ಮುಗಿಸಿ ಒಗೆದ ಶುಭ್ರವಸ್ತ್ರ ಉಟ್ಟು ಕೈಕಾಲು ತೊಳೆದುಕೊಂಡು ಸುವರ್ಣಪೀಠದಲ್ಲಿ ಕುಳಿತ. ಅವನ ಸುತ್ತಲೂ ನಾನಾವಿಧವಾದ ಪೂಜಾಸಾಮಗ್ರಿಗಳ ಪಾತ್ರೆಗಳು. ಬ್ರಾಹ್ಮಣರು ಪುರೋಹಿತರು ಗೋಪ ಗೋಪಿಯರು ಬಾಲಕ ಬಾಲಿಕೆಯರು ಕುಳಿತಿದ್ದರು. ಅಲ್ಲಿಗೆ ನಾಗರಿಕರೆಲ್ಲರೂ ಪೂಜಾ ಸಾಮಗ್ರಿಗಳನ್ನು ನಾನಾ ನೈವೇದ್ಯವಸ್ತುಗಳನ್ನೂ ಹಿಡಿದುಕೊಂಡು ಬಂದರು.

ಬ್ರಹ್ಮತೇಜಸ್ಸಿನಿಂದ ಜ್ವಲಿಸುವ, ವೇದವೇದಾಂಗ ಪಾರಂಗತರಾದ ಮುನಿಗಳೂ ಶಿಷ್ಯರೊಡಗೂಡಿ ಬಂದರು. ಗರ್ಗ ಗಾಲವ ಶಾಕಲ್ಯ ಶಾಕಟಾಯನ, ಗೌತಮ, ಕರುಷ, ಕಣ್ವ, ವಾತ್ಸ್ಯ, ಕಾತ್ಯಾಯನ, ಸೌಭರಿ, ವಾಮದೇವ, ಯಾಜ್ಞವಲ್ಕ್ಯ, ಪಾಣಿನಿ, ಋಷ್ಯಶೃಂಗ, ಗೌರಮುಖ, ಭರದ್ವಾಜ, ವಾಮನ, ಕೃಷ್ಣದ್ವೈಪಾಯನ, ಶೃಂಗಿ, ಸುಮಂತು, ಜೈಮಿನಿ, ಕಚಃ, ಪರಾಶರ, ಮೈತ್ರೇಯ, ವೈಶಂಪಾಯನ ಮುಂತಾದ ಮಹರ್ಷಿಗಳು ಬಂದರು. ಬ್ರಾಹ್ಮಣರು, ಭಿಕ್ಷುಗಳು, ಬಂದಿಗಳು, ರಾಜರು, ವೈಶ್ಯರು ಶೂದ್ರರು ಎಲ್ಲರೂ ಮಹೋತ್ಸವಕ್ಕೆ ಆಗಮಿಸಿದರು. ನಂದಗೋಪ ಸುವರ್ಣಪೀಠದಿಂದ ಎದ್ದು ಬಂದು, ಮುನಿಗಳಿಗೂ ರಾಜರಿಗೂ ಬ್ರಾಹ್ಮಣರಿಗೂ ಆಸನವಿತ್ತು ಕುಳ್ಳಿರಿಸಿದ. ಅವರ ಅನುಮತಿ ಪಡೆದು ಪೀಠದಲ್ಲಿ ಕುಳಿತ. ನೂರಾರು ಪಾಕತಜ್ಞರಾದ ಬ್ರಾಹ್ಮಣರನ್ನು ಧ್ವಜದ ಬಳಿಯಲ್ಲಿ ನೈವೇದ್ಯ ಪಾಕ ಮಾಡಲು ಆಜ್ಞಾಪಿಸಿದ. ಸುತ್ತಲೂ ರತ್ನದೀಪಗಳು ಬೆಳಗಿದುವು. ಧೂಪದ ಹೊಗೆಯಿಂದ ಆ ಪ್ರದೇಶವೆಲ್ಲ ಏನೂ ಕಾಣದಾಯಿತು. ಸುವಾಸನೆಯಿಂದ ತುಂಬಿತು. ನಾನಾವಿಧವಾದ ಪುಷ್ಪಮಾಲೆಗಳು ಅಪೂರ್ವವಾದ ನೈವೇದ್ಯಗಳು ಎಳ್ಳುಂಡೆ ಮಂಡಿಗೆ ಹೋಳಿಗೆಗಳು ಸಕ್ಕರೆ ಗೋದಿಹಿಟ್ಟಿನ ಲಡ್ಡುಗಳು ತುಪ್ಪದಲ್ಲಿ ಕರಿದ ತಿಂಡಿಗಳು, ಮರದ ಮೇಲೆ ಹಣ್ಣಾದ ಬಾಳೆಹಣ್ಣುಗಳು, ಹಾಲು, ಮೊಸರು, ಜೇನುತುಪ್ಪ, ಮಜ್ಜಿಗೆ ಎಲ್ಲವೂ ಸಿದ್ಧವಾದುವು. ಸುವರ್ಣಪೀಠಗಳು ದಾನಕ್ಕೆ ಯೋಗ್ಯವಾದ ವಸ್ತ್ರಾಭರಣಗಳು ಸಿದ್ಧವಾದುವು. ವಿವಿಧ ವಾದ್ಯಗಳು ಮೊಳಗಿದುವು. ಹೋತ, ಕುರಿ, ಕೋಣ, ಖಡ್ಗಮೃಗಗಳನ್ನು ಬಲಿಕೊಡಲು ಧ್ವಜಸ್ತಂಭದ ಬಳಿ

ಕಟ್ಟಿದರು. ಮಧುರವಾದ ಸಂಗೀತ ನೃತ್ಯಗಳನ್ನು ನಡೆಸಿದರು. ರಂಭೆ, ಊರ್ವಶಿ, ಮೇನಕೆ ಘೃತಾಚಿ ಮೋಹಿನಿ ರತಿ ಪ್ರಭಾವತಿ ವಿಪ್ರಚಿತ್ತಿ ತಿಲೋತ್ತಮೆ ಚಂದ್ರಪ್ರಭೆ ಸುಪ್ರಭೆ ರತ್ನಮಾಲೆ ಮದಾಲಸೆ ರೇಣುಕೆ ಮುಂತಾದ ಅಪ್ಸರೆಯರು ನಾಟ್ಯವಾಡಿದರು. ಅವರ ಮನೋಹರ ರೂಪವನ್ನೂ ಚಂಚಲ ಕಟಾಕ್ಷವನ್ನೂ ಕಂಡವರೆಲ್ಲ ಮನ್ಮಥನ ಬಾಣಕ್ಕೆ ವಶರಾಗಿ ಹೋದರು.

ಅಷ್ಟರಲ್ಲಿ ಶ್ರೀಕೃಷ್ಣ ಬಲರಾಮನೊಡನೆ ಮತ್ತು ಗೋಪಬಾಲಕರೊಡನೆ ಅಲ್ಲಿಗೆ ಬಂದ. ಆಗ ಎಲ್ಲರೂ ಸಂತೋಷ ಸಂಭ್ರಮಗಳಿಂದ ರೋಮಾಂಚಗೊಂಡು ಎದ್ದುನಿಂತರು. ಶ್ರೀಕೃಷ್ಣ ಆಗತಾನೆ ಆಟದ ಬಯಲಿಂದ ಬಂದಿದ್ದ. ಕೊಳಲನ್ನು ನುಡಿಸುತ್ತ ಬಂದಿದ್ದ. ರತ್ನಾಭರಣಗಳಿಂದ ಕೌಸ್ತುಭಮಣಿಯಿಂದ ಚಂದನದ ಚಂದ್ರ ಕಸ್ತೂರಿಯ ತಿಲಕಗಳಿಂದ ಅಲಂಕೃತನಾಗಿದ್ದ. ಮೈಯೆಲ್ಲ ಚಂದನ ಅಗುರು ಲೇಪಿಸಿಕೊಂಡಿದ್ದ. ಕೊರಳಲ್ಲಿ ಎದೆಯಲ್ಲಿ ಜಾಜಿಯ ಹೂಮಾಲೆ ಶರತ್ಕಾಲದ ನಿರ್ಮಲ ಆಕಾಶದಲ್ಲಿ ಬಕಪಕ್ಷಿಗಳ ಮಾಲೆಯಂತೆ ಶೋಭಿಸುತ್ತಿತ್ತು. ನೀಲವರ್ಣದ ಮೈಗೆ ಪೀತಾಂಬರ, ಕರಿಯ ಮೋಡದ ನಡುವೆ ಹೊಳೆವ ಮಿಂಚಿನಂತಿತ್ತು. ಮೊಲ್ಲೆ ಹೂವನ್ನೂ ಗುಲಗುಂಜಿಯನ್ನೂ ಪೋಣಿಸಿ ಅದರ ಮಾಲೆಯಿಂದ ಕಟ್ಟಿದ ಶಿಖೆ ಕಾಮನಬಿಲ್ಲು ಮತ್ತು ನಕ್ಷತ್ರಮಾಲೆಗಳಿಂದ ಶೋಭಿಸುವ ಆಕಾಶದಂತಿತ್ತು. ಶರತ್ಕಾಲದಲ್ಲಿ ಅರಳಿದ ತಾವರೆ ಸೂರ್ಯನ ಕಿರಣಗಳಿಂದ ಶೋಭಿಸುವಂತೆ ರತ್ನಕುಂಡಲಗಳ ದೀಪ್ತಿಯಿಂದ ಮುಖ ಶೋಭಿಸುತ್ತಿತ್ತು. ಬ್ರಾಹ್ಮಣ ಕ್ಷತ್ರಿಯ ವೈಶ್ಯರು ಮುನಿಗಳು ಗೋಪಾಲಕರು ಎಲ್ಲರೂ ಕೃಷ್ಣನನ್ನು ವಂದಿಸಿ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿದರು. ಶರತ್ಕಾಲದ ಚಂದ್ರ ನಕ್ಷತ್ರಗ್ರಹಗಳ ನಡುವೆ ಶೋಭಿಸುವಂತೆ ಕೃಷ್ಣ ಎಲ್ಲರ ನಡುವೆ ಶೋಭಿಸಿದ. ಮಹೋತ್ಸವದ ಬಗ್ಗೆ ಕೇಳಿ ತಿಳಿದು ತಂದೆಗೂ ನೆರೆದ ಎಲ್ಲ ಮಂದಿಗೂ ಹೀಗೆ ಹೇಳಿದ-

'ಈ ಉತ್ಸವದ ಆರಾಧ್ಯದೇವತೆ ಯಾರು? ಇದು ಯಾವ ಪೂಜೆ? ಇದಕ್ಕೆ ಫಲವೇನು? ಪೂಜೆ ನಿಲ್ಲಿಸಿದರೆ ಆ ದೇವತೆ ಕೋಪಗೊಂಡು ಏನು ಮಾಡಬಲ್ಲ? ಪೂಜೆಯಿಂದ ತುಷ್ಟನಾದರೆ ಏನು ಮಾಡಬಲ್ಲ? ಇಹ ಪರಗಳೆರಡರಲ್ಲಿಯೂ ಫಲ ನೀಡುವನೆ? ಕೆಲವು ದೇವತೆಗಳು ಐಹಿಕಫಲವನ್ನು ಮಾತ್ರ ಕೊಡುತ್ತಾರೆ. ಪಾರತ್ರಿಕವೇನೂ ನೀಡಲಾರರು. ಕೆಲವು ದೇವತೆಗಳು ಐಹಿಕಪಾರತ್ರಿಕಗಳೆರಡನ್ನೂ ಕೊಡುವುದಿಲ್ಲ. ಕೆಲವು ದೇವತೆಗಳು ಎರಡನ್ನೂ ಕೊಡುತ್ತಾರೆ. ಪೂಜೆಯೂ ವೇದವಿಹಿತವಲ್ಲದಿದ್ದರೆ ಎಲ್ಲ ಅನರ್ಥಗಳಿಗೂ ಕಾರಣವಾಗುವುದು. ಆದ್ದರಿಂದ ಈ ಪೂಜೆ ಇತ್ತೀಚಿನದೆ ಅಥವಾ ಪರಂಪರೆಯಿಂದ ರೂಢಿಯಾಗಿ ಬಂದುದೆ? ಈ ಪೂಜೆಯ ಆರಾಧ್ಯದೇವತೆ ನಮ್ಮ ಕಣ್ಣಿಗೆ ಕಂಡಿರುವನೆ? ಪ್ರತ್ಯಕ್ಷವಾಗಿ ನೈವೇದ್ಯ ಉಂಡಿರುವನೆ? ಪ್ರತ್ಯಕ್ಷ ಉಣ್ಣುವ ದೇವತೆಯನ್ನು ಪೂಜಿಸಿದರೆ ಆ ಪೂಜೆ ಉತ್ತಮ. ಬ್ರಾಹ್ಮಣ ರೂಪದಿಂದ ಶ್ರೀಹರಿ ಪ್ರತ್ಯಕ್ಷವಾಗಿ ಉಣ್ಣುತ್ತಾನೆ. ಬ್ರಾಹ್ಮಣ ತೃಪ್ತನಾದರೆ ಎಲ್ಲ ದೇವತೆಗಳೂ ತೃಪ್ತರಾಗುತ್ತಾರೆ. ಅದರಿಂದ ಬ್ರಾಹ್ಮಣಸತ್ಕಾರ ಮಾಡುವವನು ಬೇರೆ ದೇವಪೂಜೆ ಮಾಡಬೇಕಾಗಿಲ್ಲ. ದೇವರಿಗೆ ನೈವೇದ್ಯವಿಟ್ಟು ಅದನ್ನು ಬ್ರಾಹ್ಮಣರಿಗೆ ನೀಡದಿದ್ದಲ್ಲಿ ಆ ನೈವೇದ್ಯ ನಿಷ್ಫಲ, ಪೂಜೆಯೂ ನಿಷ್ಫಲ. ಬ್ರಾಹ್ಮಣರಿಗೆ ನೀಡಿದರೆ

ಅನಂತ ಫಲ. ದೇವತೆ ಸಂತುಷ್ಟವಾಗಿ ವರ ನೀಡುತ್ತಾನೆ. ದೇವರಿಗೆ ನೈವೇದ್ಯವಿಟ್ಟು ಅದನ್ನು ತಾನೆ ಉಂಡರೆ ಅದು ದತ್ತಾಪಹಾರವಾಗುವುದು. ದೇವಸ್ವವನ್ನು ಉಂಡಂತಾಗುವುದು, ನರಕ ಪ್ರಾಪ್ತವಾಗುವುದು. ಅದರಿಂದ ಹರಿನೈವೇದ್ಯವನ್ನು ಹೊರತು ಇನ್ನಾವ ದೇವತೆಯ ನೈವೇದ್ಯವನ್ನು ಭಕ್ಷಿಸಬಾರದು. ವಿಷ್ಣುನೈವೇದ್ಯವನ್ನೆ ಭಕ್ಷಿಸಬೇಕು. ಬೇರೆ ಅನ್ನ ನೀರು ಸೇವಿಸಬಾರದು. ಸೇವಿಸಿದರೆ ಅನ್ನ ಮಲದಂತೆ, ನೀರು ಮೂತ್ರದಂತೆ ಅಪವಿತ್ರವಾಗಿರುತ್ತದೆ. ಈ ನಿಯಮ ಎಲ್ಲರಿಗೂ ಅನ್ವಯಿಸುವುದು. ವಿಶೇಷವಾಗಿ ಬ್ರಾಹ್ಮಣರಿಗೆ ಅನ್ವಯಿಸುವುದು. ನೈವೇದ್ಯವನ್ನು ಬೇರೆ ದೇವತೆಗಳಿಗೆ ಕೊಡದಿದ್ದರೂ ಬ್ರಾಹ್ಮಣರಿಗೆ ಕೊಟ್ಟ ಮಾತ್ರಕ್ಕೆ ಆ ದೇವತೆಗಳು ತುಷ್ಟರಾಗಿ ಸ್ವರ್ಗಸುಖ ನೀಡುತ್ತಾರೆ. ಅದರಿಂದ ಸರ್ವ ಪ್ರಯತ್ನದಿಂದಲೂ ಬ್ರಾಹ್ಮಣಪೂಜೆಯನ್ನೆ ಮಾಡುವುದು ಪ್ರಶಸ್ತ. ಏಕೆಂದರೆ ಇಹದಲ್ಲಿಯೂ ಪರದಲ್ಲಿಯೂ ಪ್ರಶಸ್ತಫಲ ನೀಡುವವರು ಅವರು. ಜಪ ತಪ ಪೂಜೆ ಯಜ್ಞ ದಾನ ಉತ್ಸವ ಮುಂತಾದ ಎಲ್ಲ ಕರ್ಮಗಳಿಗಿಂತ ಶ್ರೇಷ್ಠ ಬ್ರಾಹ್ಮಣಸತ್ಕಾರ.

**ಬ್ರಾಹ್ಮಣಾನಾಂ ಶರೀರೇಷು ತಿಷ್ಠಂತಿ ಸರ್ವದೇವತಾಃ ।**
**ಪಾದೇಷು ಸರ್ವತೀರ್ಥಾನಿ ಪುಣ್ಯಾನಿ ಪಾದಧೂಲಿಷು ॥**

ಬ್ರಾಹ್ಮಣರ ಶರೀರಗಳಲ್ಲಿ ಎಲ್ಲ ದೇವತೆಗಳೂ ಸನ್ನಿಹಿತರಾಗಿರುತ್ತಾರೆ. ಅವರ ಪಾದಗಳಲ್ಲಿ ಪಾದಧೂಳಿಗಳಲ್ಲಿ ಎಲ್ಲ ಪುಣ್ಯತೀರ್ಥಗಳೂ ಇರುತ್ತವೆ.

**ಪಾದೋದಕೇ ಚ ವಿಪ್ರಾಣಾಂ ತೀರ್ಥತೋಯಾನಿ ಸಂತಿ ಚ ।**
**ತತ್ ಸ್ಪರ್ಶಾತ್ ಸರ್ವತೀರ್ಥೇಷು ಸ್ನಾನಜನ್ಯಫಲಂ ಲಭೇತ್ ।**
**ನಶ್ಯಂತಿ ಭಕ್ಷಣಾದ್ ರೋಗಾ ಭಕ್ತಿಭಾವೇನ ಬಲ್ಲವ ॥**

ವಿಪ್ರಪಾದೋದಕದಲ್ಲಿ ಪುಣ್ಯತೀರ್ಥಗಳಿವೆ. ಅದರ ಸ್ಪರ್ಶದಿಂದ ಸಕಲತೀರ್ಥ ಸ್ನಾನದ ಫಲ ಲಭಿಸುತ್ತದೆ. ಭಕ್ತಿಭಾವದಿಂದ ಪಾನಮಾಡಿದರೆ ರೋಗ ಪರಿಹಾರ.

ಬ್ರಾಹ್ಮಣನಿಗೆ ನಮಸ್ಕಾರ ಮಾಡಿದರೆ ಏಳು ಜನ್ಮಗಳಲ್ಲಿ ಮಾಡಿರಬಹುದಾದ ಪಂಚ ಮಹಾಪಾತಕಗಳಿಂದ ಬಿಡುಗಡೆ ಯಾಗುವುದು. ಸ್ಪರ್ಶಮಾತ್ರದಿಂದ ಅಥವಾ ದರ್ಶನಮಾತ್ರದಿಂದ ಪಾಪಪರಿಹಾರವೆಂದೂ ವೇದದಲ್ಲಿ ಹೇಳಿದೆ. ಬ್ರಾಹ್ಮಣ ಮಹಾಜ್ಞಾನಿ ಇರಬಹುದು. ಮಹಾಜ್ಞಾನಿಯಲ್ಲದಿರಬಹುದು, ವಿಷ್ಣುವಿಗೆ ಅವನು ಪ್ರತಿಮೆ ಎನಿಸುತ್ತಾನೆ. ವಿಷ್ಣುವನ್ನು ಸೇವಿಸುವ ಬ್ರಾಹ್ಮಣ ವಿಷ್ಣುವಿಗೆ ಪ್ರಾಣಕ್ಕಿಂತ ಹೆಚ್ಚು ಪ್ರಿಯನೆನಿಸುತ್ತಾನೆ. ಹರಿಭಕ್ತರಾದ ದ್ವಿಜರ ಪ್ರಭಾವ ದುರ್ಲಭವೆಂದು ಶ್ರುತಿಯಲ್ಲಿ ಹೇಳಿದೆ. ಅವರ ಪಾದಕಮಲ ದೂಳಿನಿಂದ ಭೂಮಿ ತಕ್ಷಣವೆ ಪವಿತ್ರವಾಗುತ್ತದೆ. ಅವರ ಪಾದಚಿಹ್ನೆ ಪವಿತ್ರ ತೀರ್ಥವೆನಿಸುತ್ತದೆ. ವಿಪ್ರರ ಸ್ಪರ್ಶಮಾತ್ರದಿಂದ ಪುಣ್ಯತೀರ್ಥಗಳೂ ಪಾಪಮುಕ್ತವಾಗುವುವು. ಅವರನ್ನು ಆಲಿಂಗಿಸುವುದು, ಮಾತನಾಡಿಸುವುದು, ಅವರ ಉಚ್ಛಿಷ್ಟ ಉಣ್ಣುವುದು, ದರ್ಶನ ಸ್ಪರ್ಶನ ಎಲ್ಲವೂ ಪಾಪಪರಿಹಾರಕಗಳು. ಸರ್ವತೀರ್ಥಯಾತ್ರೆ, ಸ್ನಾನಗಳ ಪುಣ್ಯವನ್ನು ಒಬ್ಬ ಹರಿಭಕ್ತನಾದ ವಿಪ್ರನ ದರ್ಶನವೆ ನೀಡಬಲ್ಲದು. ವಿಪ್ರರು ಹರಿಗೆ ಅನ್ನನಿವೇದನೆ ಮಾಡಿಯೆ ತಾವು ಉಣಬೇಕು. ತಿಳಿಯದೆ ಹರಿಗೆ ಅನಿವೇದಿತವಾದ ಅನ್ನ ಉಂಡರೂ ಅದು ಮಲಮೂತ್ರ ಸಮಾನವೆನಿಸುವುದು.

ಹರಿಭಕ್ತನಾದ ಶೂದ್ರ, ಹರಿನೈವೇದ್ಯವನ್ನು ಉಣಬಯಸಿದರೆ ಅಪಕ್ವ ಅನ್ನವನ್ನು ನಿವೇದಿಸಿ ಬಳಿಕ ಬೇಯಿಸಿ ಉಣಬೇಕು.

**ವಿಪ್ರಕ್ಷತ್ರಿಯವೈಶ್ಯಾನಾಂ ಶಾಲಗ್ರಾಮಶಿಲಾರ್ಚನೇ ।**
**ಅಧಿಕಾರೋ ನ ಶೂದ್ರಾಣಾಂ ಹರೇರಪ್ಯರ್ಚನೇ ತಥಾ ॥**

ಬ್ರಾಹ್ಮಣ ಕ್ಷತ್ರಿಯ ವೈಶ್ಯರು ಶಾಲಗ್ರಾಮ ಪೂಜೆ ಮಾಡಲು ಅರ್ಹರಾಗಿರುತ್ತಾರೆ ಹೊರತು ಶೂದ್ರರಲ್ಲ.

ದ್ರವ್ಯಗಳನ್ನು ವಿಪ್ರರಿಗೆ ದಾನ ಮಾಡದಿದ್ದರೆ ಅವು ನಿಷ್ಫಲವಾಗುವುವು. ಅನ್ನವನ್ನು ಮಾತ್ರ ಎಲ್ಲ ಜೀವಿಗಳಿಗೂ ನೀಡಬೇಕು. ಅದರಿಂದ ಪುಣ್ಯಲಭಿಸುವುದು. ಉತ್ತಮ ಜೀವಿಗಳಿಗೆ ನೀಡಿದರೆ ಉತ್ತಮ ಫಲ. ಪ್ರಾಣಿಗಳಿಗೆ ನೀಡುವುದಕ್ಕಿಂತ ಮನುಷ್ಯರಿಗೆ ನೀಡುವುದರಿಂದ ಎಂಟುಪಾಲು ಅಧಿಕ ಪುಣ್ಯ ಬರುವುದು. ಮನುಷ್ಯರಲ್ಲಿಯೂ ಶೂದ್ರರಿಗಿಂತ ಎರಡುಪಾಲು ವೈಶ್ಯರಿಗೆ, ವೈಶ್ಯರಿಗಿಂತ ಎರಡುಪಾಲು ಕ್ಷತ್ರಿಯರಿಗೆ, ಕ್ಷತ್ರಿಯರಿಗಿಂತ ನೂರುಪಾಲು ಶಾಸ್ತ್ರಜ್ಞರಾದ ಬ್ರಾಹ್ಮಣರಿಗೆ, ಶಾಸ್ತ್ರಜ್ಞ ಬ್ರಾಹ್ಮಣರಿಗಿಂತ ನೂರುಪಾಲು ಹರಿಭಕ್ತರಾದ ಬ್ರಾಹ್ಮಣರಿಗೆ ಅನ್ನದಾನದಿಂದ ಫಲ ಬರುವುದು.

**ಭಕ್ತೇ ತುಷ್ಟೇ ಹರಿಸ್ತುಷ್ಟೋ ಹರೌ ತುಷ್ಟೇ ಚ ದೇವತಾಃ ।**
**ಭವಂತಿ ಸಿಕ್ತಾಃ ಶಾಖಾಶ್ಚ ಯಥಾ ಮೂಲನಿಷೇಚನಾತ್ ॥**

ಭಕ್ತ ತೃಪ್ತನಾದರೆ ಹರಿ ತೃಪ್ತನಾಗುತ್ತಾನೆ. ಹರಿ ತೃಪ್ತನಾದರೆ ದೇವತೆಗಳು ತೃಪ್ತರಾಗುತ್ತಾರೆ, ಬೇರಿಗೆ ನೀರೆರೆದರೆ ಕೊಂಬೆಗಳು ತೃಪ್ತವಾಗುವಂತೆ.

ಈಗ ನೀವು ನೈವೇದ್ಯಪದಾರ್ಥಗಳನ್ನು ಒಬ್ಬ ದೇವತೆಗೆ ಸಮರ್ಪಿಸಿದರೆ ಉಳಿದ ದೇವತೆಗಳು ಸಿಟ್ಟಾಗಬಹುದು. ಅವರೆಲ್ಲ ಸಿಟ್ಟಾದರೆ ಒಬ್ಬನೇನು ಮಾಡಬಲ್ಲ? ಅದರಿಂದ ವಿಷ್ಣುವಿಗೆ ಸಮರ್ಪಿಸಿರಿ. ಅಥವಾ ಈ ಪದಾರ್ಥಗಳಲ್ಲಿ ಅರ್ಧಾಂಶವನ್ನಾದರೂ ಗೋವರ್ಧನಪರ್ವತದೇವತೆಗೆ ಸಮರ್ಪಿಸಿರಿ. ಗೋವುಗಳಿಗೆ ನಿತ್ಯ ಎಳೆ ಹುಲ್ಲು ನೀಡಿ ಅವುಗಳನ್ನು ವೃದ್ಧಿಪಡಿಸುವುದರಿಂದ ಅವನು **'ಗೋವರ್ಧನ'** ಎಂಬ ಸಾರ್ಥಕ ನಾಮ ಉಳ್ಳವ. ತೀರ್ಥಸ್ನಾನ, ಬ್ರಾಹ್ಮಣಭೋಜನ, ವ್ರತ ಉಪವಾಸಗಳು ತಪಸ್ಸುಗಳು ಮಹಾದಾನಗಳು ಹರಿಪೂಜೆ ಭೂಪ್ರದಕ್ಷಿಣೆ ಸತ್ಯವಚನ ಯಜ್ಞಗಳು ಇವೆಲ್ಲವುಗಳಿಂದ ಬರುವ ಪುಣ್ಯಗಳೂ ಗೋವುಗಳಿಗೆ ಹುಲ್ಲು ನೀಡಿದರೆ ಬರುತ್ತವೆ. ಹಸು ಹುಲ್ಲು ಮೇಯುವುದನ್ನು ತಡೆದರೆ ಬ್ರಹ್ಮಹತ್ಯಾ ಪಾಪ ಬರುತ್ತದೆ. ಪ್ರಾಯಶ್ಚಿತ್ತದಿಂದ ಶುದ್ಧಿ ಮಾಡಿಕೊಳ್ಳಬೇಕಾಗುವುದು.

ಎಲ್ಲ ದೇವತೆಗಳೂ ಗೋವಿನ ಅಂಗಗಳಲ್ಲಿರುತ್ತಾರೆ. ಪಾದಗಳಲ್ಲಿ ತೀರ್ಥಗಳು, ಗುಹ್ಯದಲ್ಲಿ ಲಕ್ಷ್ಮಿ, ಗೋಪಾದ ಮೃತ್ತಿಕೆಯಿಂದ ತಿಲಕಧಾರಣ ಮಾಡಿದರೆ ತೀರ್ಥಸ್ನಾನ ಫಲ. ಅವನಿಗೆ ಪದೇ ಪದೇ ಜಯಲಾಭ. ಗೋವುಗಳು ನಿಂತ ಸ್ಥಳ ತೀರ್ಥಕ್ಷೇತ್ರವೆನಿಸುತ್ತದೆ. ಅಲ್ಲಿ ಪ್ರಾಣೋತ್ಕ್ರಮಣ ಮಾಡುವ ಮಾನವ ತಕ್ಷಣವೆ ಮುಕ್ತಿ ಹೊಂದುತ್ತಾನೆ. ಬ್ರಾಹ್ಮಣರ ಮತ್ತು ಗೋವುಗಳ ಶರೀರವನ್ನು ದಂಡಿಸಿದರೆ ಬ್ರಹ್ಮಹತ್ಯೆಗೆ ಸಮಾನವಾದ ಪಾಪ ಬರುತ್ತದೆ. ನಾರಾಯಣನ ಅಂಶಯುಕ್ತರಾದ

ಗೋಬ್ರಾಹ್ಮಣರನ್ನು ಹಿಂಸಿಸುವವನು ಚಂದ್ರ ಸೂರ್ಯರಿರುವಷ್ಟು ಕಾಲ ಕಾಲಸೂತ್ರವೆಂಬ ನರಕದಲ್ಲಿರುತ್ತಾನೆ.''

ಹೀಗೆ ಹೇಳಿ ಶ್ರೀಕೃಷ್ಣ ಸುಮ್ಮನಾದ. ನಂದ ನಗುತ್ತ ನುಡಿದ - 'ಇದು ಮಹಾತ್ಮನಾದ ಮಹೇಂದ್ರನ ಪೂಜೆ, ವಂಶಪಾರಂಪರ್ಯದಿಂದ ಬಂದಿರುವುದು. ಈಪೂಜೆಯಿಂದ ಒಳ್ಳೆಯ ಮಳೆಯಾಗುವುದು. ಸಸ್ಯ ಸಮೃದ್ಧಿ ಉಂಟಾಗುವುದು. ಅದರಿಂದ ಗೋಕುಲದಲ್ಲಿ ಎಲ್ಲರೂ ನಿತ್ಯ ಮಹೇಂದ್ರನನ್ನು ಪೂಜಿಸುತ್ತಾರೆ. ವರ್ಷದ ಕೊನೆಯಲ್ಲಿ ದೊಡ್ಡ ಉತ್ಸವವನ್ನು ಆಚರಿಸುತ್ತಾರೆ. ಅದರಿಂದ ಎಲ್ಲ ವಿಘ್ನಗಳು ಪರಿಹಾರವಾಗುತ್ತವೆ. ಶುಭ ಉಂಟಾಗುತ್ತದೆ.'

ಇದನ್ನು ಕೇಳಿ ಬಲರಾಮ ಕೃಷ್ಣರು ಗಟ್ಟಿಯಾಗಿ ನಕ್ಕರು. ಕೃಷ್ಣ ನುಡಿದ - 'ಆಶ್ಚರ್ಯ! ಲೋಕಶಾಸ್ತ್ರ ವೇದಗಳಲ್ಲಿ ನಿಂದಿತವಾದ, ಅಪಹಾಸಾಸ್ಪದವಾದ, ವಿಚಿತ್ರ ಅದ್ಭುತವಾದ ಮಾತನ್ನು ಆಡುತ್ತಿರುವಿ. ಇಂದ್ರನಿಂದ ಮಳೆಯಾಗುತ್ತದೆ ಎಂದು ಎಲ್ಲಿಯೂ ಹೇಳಿಲ್ಲ. ಇಂದೇ ನಿನ್ನ ಮುಖದಿಂದ ಅಪೂರ್ವವಾದ ಈ ಮಾತನ್ನು ಕೇಳುತ್ತಿದ್ದೇನೆ. ಅಪ್ಪ, ಕೇಳು, ನಾನೇನೂ ಸುಳ್ಳು ಹೇಳುವುದಿಲ್ಲ. ಸಾಮವೇದದಲ್ಲಿ ಉಕ್ತವಾದುದನ್ನೆ ಹೇಳುತ್ತೇನೆ. ಸಜ್ಜನರಿಗೆಲ್ಲರಿಗೂ ಅದು ಸಮ್ಮತವಾಗಿದೆ. ಜ್ಞಾನಿಗಳ ಮುಂದೆ ಈ ಪ್ರಶ್ನೆಯನ್ನು ಮುಂದಿಡು, 'ಸತ್ಯ ಹೇಳಿರಿ, ಇಂದ್ರನಿಂದ ಮಳೆಯಾಗುವುದೆ?' ಎಂದು. ಸೂರ್ಯನಿಂದ ಮಳೆ. ಮಳೆಯಿಂದ ಸಸ್ಯ. ಸಸ್ಯದಿಂದ ಅನ್ನ, ಫಲಗಳು. ಅದರಿಂದ ಜೀವಿಗಳ ಬದುಕು. ಸೂರ್ಯ ನೀರನ್ನು ಸೆಳೆದು ಮೋಡವಾಗಿ ಪರಿವರ್ತಿಸಿ ಕಾಲಕಾಲಕ್ಕೆ ಮಳೆ ನೀಡುತ್ತಾನೆ. ಸೂರ್ಯ, ಮೋಡ ಮುಂತಾದುವನ್ನು ಬ್ರಹ್ಮನೆ ಏರ್ಪಡಿಸಿದ್ದಾನೆ. ಯಾವ ವರ್ಷದಲ್ಲಿ ಯಾವ ಮೋಡ, ಆನೆ, ಸಮುದ್ರ, ಸಸ್ಯಾಧಿಪ, ನೃಪ, ಮಂತ್ರಿ ಎಂದೆಲ್ಲ ಬ್ರಹ್ಮನೆ ನೇಮಿಸಿದ್ದಾನೆ. ಆನೆ ಸಮುದ್ರದಿಂದ ನೀರನ್ನೆತ್ತಿ ಮೋಡಕ್ಕೆ ಕೊಡುತ್ತದೆ. ಮೋಡ ಗಾಳಿಯ ಪ್ರೇರಣೆಯಂತೆ ಕಾಲಕಾಲಕ್ಕೆ ಆಯಾ ಪ್ರದೇಶಗಳಲ್ಲಿ ಯಥೋಚಿತವಾಗಿ ಪರಮಾತ್ಮನ ಇಚ್ಛೆಯಿಂದ ಪ್ರಾದುರ್ಭವಿಸಿ ಮಳೆ ನೀಡುತ್ತದೆ. ಇದಕ್ಕೆ ತಡೆಯೆ ಇಲ್ಲ! ಭೂತ, ಭವಿಷ್ಯ, ವರ್ತಮಾನ, ಮಹತ್ತು, ಅಲ್ಪ, ಮಧ್ಯಮ ಕರ್ಮ ಯಾವುದೇ ಇರಲಿ ಬ್ರಹ್ಮ ನಿರ್ಣಯಿಸಿದಂತೆ ನಡೆಯುತ್ತದೆ. ಅದನ್ನು ತಡೆಯಲು ಯಾರಿಗೂ ಶಕ್ಯವಿಲ್ಲ. ಚರಾಚರ ಪ್ರಪಂಚವೆಲ್ಲವನ್ನು ಪರಮಾತ್ಮನ ಆಜ್ಞೆಯಿಂದ ಅವನು ನಿರ್ಮಿಸಿದ. ಮೊದಲಿಗೆ ಅನ್ನಸೃಷ್ಟಿ. ಬಳಿಕ ಜೀವಸೃಷ್ಟಿ. ಜೀವನಲ್ಲಿ ಅಭ್ಯಾಸಬಲದಿಂದ ಸ್ವಭಾವವೂ ಸ್ವಭಾವದಿಂದ ಕರ್ಮವೂ ವ್ಯಕ್ತವಾಗುತ್ತದೆ. ಕರ್ಮಫಲಭೋಗ ಜೀವಿಗಳಿಗೆ ಸುಖದುಃಖರೂಪವಾಗಿರುತ್ತದೆ. ಯಾತನೆ ಜನನ ಮರಣ ರೋಗ ಶೋಕ, ಭಯ, ಸಂಪತ್ತು, ವಿಪತ್ತು, ವಿದ್ಯೆ, ಕವಿತೆ, ಯಶಸ್ಸು ಅಯಶಸ್ಸು, ಪುಣ್ಯ, ಸ್ವರ್ಗವಾಸ, ಪಾಪ, ನರಕವಾಸ, ಭುಕ್ತಿಮುಕ್ತಿ, ಹರಿದಾಸ್ಯ ಎಲ್ಲವೂ ಕರ್ಮದಿಂದ ಉಂಟಾಗುತ್ತವೆ. ಎಲ್ಲಕ್ಕೂ ಜನಕ ಪರಮಾತ್ಮ. ಕರ್ಮಗಳಿಗೆ ಅವನೆ ಫಲದಾತ, ಎಲ್ಲವೂ ಅವನ ಇಚ್ಛೆಯಿಂದ ನಡೆಯುತ್ತದೆ. ವಿರಾಟ ಪುರುಷ, ಪ್ರಕೃತಿ, ತತ್ವಗಳು, ಕೂರ್ಮ, ಶೇಷ ಎಲ್ಲರೂ ಅವನಿಂದ ಹುಟ್ಟಿದವರು. ಬ್ರಹ್ಮನಿಂದ ಹಿಡಿದು ಹುಲ್ಲುಕಡ್ಡಿಯವರೆಗೂ

ಎಲ್ಲವೂ ಅವನ ಸೃಷ್ಟಿ. ಅವನಾಜ್ಞೆಯಂತೆ ವಾಯು ಕೂರ್ಮರೂಪ ಧರಿಸುತ್ತಾನೆ. ಆ ಕೂರ್ಮ ಶೇಷನನ್ನೂ ಶೇಷ ಭೂಮಿಯನ್ನೂ ಭೂಮಿ ಚರಾಚರವೆಲ್ಲವನ್ನೂ ಧರಿಸುತ್ತಾರೆ. ಅವನ ಆಜ್ಞೆಯಿಂದಲೆ ಜಗತ್ತಿನ ಪ್ರಾಣಸ್ವರೂಪನಾದ ವಾಯು ಮೂಲೋಕದಲ್ಲಿ ಬೀಸುತ್ತಾನೆ.· ಅವನ ಆಜ್ಞೆಯಿಂದಲೆ ಸೂರ್ಯ ಭೂಮಿಗೆ ಶಾಖ ನೀಡುತ್ತಾನೆ, ಬೆಳಕು ನೀಡುತ್ತಾನೆ. ಅವನ ಆಜ್ಞೆಯಿಂದಲೆ ಅಗ್ನಿ ಉರಿಯುತ್ತಾನೆ. ಎಲ್ಲ ಜಂತುಗಳಲ್ಲಿಯೂ ಮೃತ್ಯು ಮನೆಮಾಡಿಕೊಂಡಿರುವುದೂ ವೃಕ್ಷಗಳಲ್ಲಿ ಕಾಲಕಾಲಕ್ಕೆ ಹೂ ಹಣ್ಣು ಉಂಟಾಗುವುದೂ ಸಮುದ್ರಗಳು ಮೇರೆಮೀರದೆ ಸ್ವಸ್ಥಾನಗಳಲ್ಲಿ ಇರುವುದೂ ಅವನ ಇಚ್ಛೆಯಿಂದಲೆ. ಅದರಿಂದ ಅವನನ್ನೆ ಎಲ್ಲರೂ ಆರಾಧಿಸಿರಿ.

ಅವನ ಹುಬ್ಬಿನ ಕುಣಿತಕ್ಕೇ ಎಷ್ಟು ಬ್ರಹ್ಮಾಂಡಗಳು ಹುಟ್ಟಿನಾಶವಾಗಿವೆ! ಎಷ್ಟು ಮಂದಿ ಬ್ರಹ್ಮರು ಆಗಿಹೋಗಿದ್ದಾರೆ! ಮೃತ್ಯುವಿಗೆ ಮೃತ್ಯು, ಕಾಲಕ್ಕೆ ಕಾಲ, ವಿಧಿಗೆ ವಿಧಿ ಅವನು. ಅವನನ್ನು ಶರಣ ಹೊಂದಿದರೆ ರಕ್ಷಣೆ ನೀಡುತ್ತಾನೆ. ಇಪ್ಪತ್ತೆಂಟು ಇಂದ್ರರ ಆಯುಷ್ಯ ಯಾವ ಬ್ರಹ್ಮನಿಗೆ ಕೇವಲ ಒಂದು ದಿನ ಮಾತ್ರವಾಗಿರುವುದೋ ಆ ಬ್ರಹ್ಮನ ನೂರೆಂಟು ವರ್ಷಗಳ ಆಯುಷ್ಯ ಪರಮಾತ್ಮನಿಗೆ ಒಂದು ನಿಮಿಷ ಮಾತ್ರ. ಇಂಥ ಪರಮಾತ್ಮನ ಆರಾಧನೆ ಮಾಡುವುದನ್ನು ಬಿಟ್ಟು ಇಂದ್ರನನ್ನು ಪೂಜಿಸುವುದೊಂದು ದೊಡ್ಡ ವಿಪರ್ಯಾಸ.''

ಶ್ರೀಕೃಷ್ಣ ಹೀಗೆ ಹೇಳಿದಾಗ ಮುನಿಗಳೂ ಎಲ್ಲ ಸಭಾಸದರೂ ಒಕ್ಕೊರಲಿನಿಂದ ಪ್ರಶಂಸೆ ಮಾಡಿದರು. ನಂದ ಪುಲಕಿತನಾಗಿ ಆನಂದಬಾಷ್ಪ ಸುರಿಸಿದ. ತಾನೀಗ ಸೋತಿದ್ದರೂ ಅದು ಮಗನಿಂದ ಉಂಟಾದ ಪರಾಜಯವೆಂದು ಆನಂದಗೊಂಡ. ಶ್ರೀಕೃಷ್ಣನ ಅಪ್ಪಣೆಯಂತೆ ಸ್ವಸ್ತಿವಾಚನ ಋತ್ವಿಗ್ ವರಣಗಳನ್ನು ಮಾಡಿ ಪರ್ವತಕ್ಕೂ ಮುನಿಗಳಿಗೂ ಗೋಬ್ರಾಹ್ಮಣರಿಗೂ ಅಗ್ನಿಗೂ ಪೂಜೆನಡೆಸಿದ. ಆ ಮಹೋತ್ಸವದಲ್ಲಿ ನಾನಾ ಬಗೆಯ ವಾದ್ಯಘೋಷಗಳಾದುವು. ಶಂಖನಾದ ಹಬ್ಬಿತು. 'ಜಯ ಜಯ' ಎಂದರು. 'ಹರಿ ಹರಿ' ಎಂದರು ಎಲ್ಲ ಜನರು. ಮುನಿಗಳು ವೇದಘೋಷ ಮಾಡಿದರು.

ಅಷ್ಟರಲ್ಲಿ ಕೃಷ್ಣ ಒಂದು ರೂಪದಿಂದ ಗೋವರ್ಧನ ಪರ್ವತವನ್ನು ಪ್ರವೇಶಿಸಿ 'ನಾನುಗೋವರ್ಧನಪರ್ವತ. ನೀವು ನೀಡಿದ ನೈವೇದ್ಯ ಉಣ್ಣುತ್ತೇನೆ. ನಿಮಗೆ ಬೇಕಾದ ವರ ನೀಡುತ್ತೇನೆ. ಕೇಳಿ' ಎಂದ. ಇನ್ನೊಂದು ರೂಪದಿಂದ ನಂದಗೋಪನ ಬಳಿಯಲ್ಲಿಯೆ ಇದ್ದು 'ಅಪ್ಪ, ನೋಡು ಗೋವರ್ಧನ ಪರ್ವತ ನಿನ್ನ ಕಣ್ಣ ಮುಂದೆ ಪ್ರತ್ಯಕ್ಷನಾಗಿ ನಿಂತಿದ್ದಾನೆ. ಅವನಲ್ಲಿ ವರವನ್ನು ಬೇಡು, ನಿನಗೆ ಶುಭವಾಗುವುದು' ಎಂದ. ನಂದಗೋಪ ಹರಿದಾಸ್ಯವನ್ನೂ ಹರಿಭಕ್ತಿಯನ್ನೂ ಬೇಡಿದ. ಪರ್ವತರೂಪದಿಂದ ನಿಂತಿದ್ದ ಕೃಷ್ಣ ಎಲ್ಲ ನೈವೇದ್ಯವನ್ನೂ ಉಂಡು ವರವಿತ್ತು ಅಂತರ್ಧಾನ ಹೊಂದಿದ.

ಬಳಿಕ ಮುನಿಗಳಿಗೂ ಬ್ರಾಹ್ಮಣರಿಗೂ ಅನ್ನದಾನ ದಕ್ಷಿಣೆಗಳನ್ನು ನೀಡಿ ಬಲರಾಮ ಕೃಷ್ಣರೊಂದಿಗೆ ತನ್ನ ಮನೆಗೆ ತೆರಳಿದ. ರಾಮಕೃಷ್ಣರನ್ನು ಸ್ತುತಿಸಿ ನಮಿಸಿ ಮುನಿಗಳೂ ಬ್ರಾಹ್ಮಣರೂ ಅಪ್ಸರೆಯರೂ ಗಂಧರ್ವ ಕಿನ್ನರರೂ ರಾಜರೂ ಹೊರಟು ಹೋದರು.

ಇಂದ್ರನಿಗೆ ಕೋಪದಿಂದ ತುಟಿ ನಡುಗಿತು. ತನ್ನ ಯಜ್ಞನಿಂತುದು, ಆಸಂದರ್ಭದಲ್ಲಿ ತನ್ನ ನಿಂದೆ ನಡೆದುದು ಅವನಿಗೆ ಬಹಳ ಕೋಪ ಉಂಟುಮಾಡಿತ್ತು.

ಆತ ಗಾಳಿ ಮೋಡಗಳೊಂದಿಗೆ ರಥವೇರಿ ನಂದನ ನಗರವಾದ ವೃಂದಾವನದ ಕಡೆಗೆ ವೇಗದಿಂದ ಹೊರಟ. ಯುದ್ಧಶಾಸ್ತ್ರ ವಿಶಾರದರಾದ ಎಲ್ಲ ದೇವತೆಗಳೂ ಶಸ್ತ್ರಧರಿಸಿ ರಥವೇರಿ ಅವನನ್ನು ಹಿಂಬಾಲಿಸಿದರು. ಗಾಳಿ ಮೋಡ ಮತ್ತು ಸೈನ್ಯಗಳ ಭಯಾನಕ ಶಬ್ದಗಳಿಂದ ನಗರವಿಡೀ ನಡುಗಿತು. ನಂದ ಭಯಭೀತನಾದ. ಯಶೋದೆಯನ್ನೂ ರೋಹಿಣಿಯನ್ನೂ ಕೆಲವು ಆಪ್ತರನ್ನೂ ಕರೆದು ಏಕಾಂತದಲ್ಲಿ ಹೇಳಿದ - 'ಯಶೋದೆ, ರೋಹಿಣಿ, ನೀವು ಈಗಲೆ ರಾಮಕೃಷ್ಣರನ್ನು ಕರೆದುಕೊಂಡು ದೂರಹೋಗಿರಿ. ಎಲ್ಲ ಮಕ್ಕಳೂ ಹೆಂಗಸರೂ ದೂರ ಹೋಗಲಿ. ಇಲ್ಲಿ ನನ್ನ ಬಳಿಯಲ್ಲಿ ಬಲಿಷ್ಠರಾದ ಗೋಪಾಲಕರು ಮಾತ್ರ ಇರಲಿ. ಮುಂದೆ ಪ್ರಾಣಕ್ಕೆ ಅಪಾಯ ಬರುವ ಸಂದರ್ಭದಲ್ಲಿ ನಾವೂ ಇಲ್ಲಿಂದ ಹೊರಟು ಹೋಗುತ್ತೇವೆ.'

ಹೀಗೆ ಹೇಳಿ ನಂದ ಭಯದಿಂದ ಶ್ರೀಹರಿಯನ್ನು ನೆನೆದ. ಭಕ್ತಿಯಿಂದ ತಲೆಬಾಗಿ ಕೈಮುಗಿದು ಕಾಣ್ವಶಾಖೆಯಲ್ಲಿ ಉಕ್ತವಾದ ಸ್ತೋತ್ರದಿಂದ ಇಂದ್ರನನ್ನು ಸ್ತುತಿಸಿದ -

'ಇಂದ್ರ, ದೇವತೆಗಳಿಗೆ ಒಡೆಯ ದುಷ್ಟನಿಗ್ರಹದಲ್ಲಿ ಶಕ್ತ. ಅದಿತಿಯ ಪುತ್ರ, ಮರುತ್ತುಗಳ ಹಿರಿಯಣ್ಣ. ಸಾವಿರಕಣ್ಣುಳ್ಳವ. ಮೈಯೆಲ್ಲ ಯೋನಿಚಿಹ್ನೆ ಉಳ್ಳವ, ಕಶ್ಯಪಪುತ್ರ, ಶತ್ರುಗಳಿಗೆ ವ್ಯಥೆ ನೀಡುವ ಪರಾಕ್ರಮಿ, ಉತ್ತಮಸೈನ್ಯ ಉಳ್ಳವ, ಮರುತ್ತುಗಳಿಂದ ಕೂಡಿದವ, ಪಾಕಾಸುರನನ್ನು ಕೊಂದವ, ಜಯಂತನ ಜನಕ. ಶ್ರೀದೇವಿಯಿಂದ ಯುಕ್ತನಾದವ, ಶಚೀರಮಣ, ದೈತ್ಯನಾಶಕ, ವಜ್ರಾಯುಧಧಾರಿ, ಮನ್ಮಥ ಮಿತ್ರ, ಅಹಲ್ಯೆಯ ಪಾತಿವ್ರತ್ಯವನ್ನು ಕೆಡಿಸಿದವ, ವೃತ್ರಸಂಹಾರಿ, ಸಂಪತ್ತುಳ್ಳವ, ದಧೀಚಿಯ ಶರೀರವನ್ನು ಬೇಡಿದವ. ಜಯಶಾಲಿ, ವಾಮನನ ಸೋದರ. ಅನೇಕ ನಾಮ ಉಳ್ಳವ, ಅಸುರರ ಪಟ್ಟಣಗಳನ್ನು ನಾಶ ಮಾಡುವವ. ದೇವಲೋಕದೊಡೆಯ. ನೂರುಯಾಗ ಮಾಡಿದವ, ಲೋಕಗಳನ್ನು ಚೆನ್ನಾಗಿ ಕಾಪಾಡುವವ, ಪರ್ವತಗಳನ್ನು ಭೇದಿಸಿದವ, ವ್ಯಾಪಕ. ದೇವೋತ್ತಮ, ಬಲಾಸುರನನ್ನು ಕೊಂದವ, ಜಂಭಾಸುರನನ್ನು ಕೊಂದವ, ದೇವತೆಗಳಿಗೆ ಆಶ್ರಯ, ಶತ್ರುಗಳನ್ನು ಅಳಿಸುವವ, ಚ್ಯವನನನ್ನು ನಿಗ್ರಹಿಸುವಲ್ಲಿ ಅಶಕ್ತನಾದವ, ಶತ್ರುವೇಗ ಸಹನದಲ್ಲಿ ಶಕ್ತ. ಮೇಘಗಳನ್ನು ವಾಹನವಾಗಿ ಮಾಡಿಕೊಂಡವ. ಶತ್ರುಗಳನ್ನು ಖಂಡಿಸುವವ, ಹಸುರುಕುದುರೆಗಳುಳ್ಳವ, ನಮುಚಿಯ ಪ್ರಾಣಕಳೆದವ, ಹಿರಿಯರ ಉಪದೇಶ ಕೇಳುವವ, ಅಭೀಷ್ಟಗಳ ಮಳೆ ಸುರಿಸುವವ, ದೈತ್ಯರ ದರ್ಪವನ್ನು ಕಳೆವವ - ಈ ನಲವತ್ತಾರು ನಾಮಗಳು ಪಾಪಪರಿಹಾರಕಗಳು.

ಕೌಥುಮ ಶಾಖೋಕ್ತವಾದ ಈ ಸ್ತೋತ್ರವನ್ನು ನಿತ್ಯಪಠಿಸಿದರೆ ಎಂದೂ ಭಯವಿಲ್ಲ. ಇಂದ್ರ ಸ್ವತಃ ಅವನ ರಕ್ಷಣೆ ಮಾಡುತ್ತಾನೆ. ಯಾವ ಮನೆಯಲ್ಲಿ ಈ ಸ್ತೋತ್ರ ಪಠನವಿದೆಯೋ ಆ ಮನೆಗೆ ಸಿಡಿಲಿನ ಆಘಾತವಿಲ್ಲ, ಕಲ್ಲಿನ ಮಳೆಯೂ ಬೀಳುವುದಿಲ್ಲ.

ನಂದ ಹೀಗೆ ಇಂದ್ರನನ್ನು ಸ್ತುತಿಸಿದುದನ್ನು ಕೇಳಿ ಕೃಷ್ಣ ಕುಪಿತನಾದ. ಬ್ರಹ್ಮತೇಜಸ್ಸಿನಿಂದ ಪ್ರಜ್ವಲಿಸುತ್ತ ನುಡಿದ -

'ಅಪ್ಪ, ನೀನು ಅಂಜುಬುರುಕ, ಯಾರನ್ನು ಸ್ತೋತ್ರ ಮಾಡುತ್ತಿರುವೆ? ಯಾರು ಈ ಇಂದ್ರ? ಭಯವನ್ನು ಬಿಡು. ನನ್ನ ಬಳಿ ಇರುವಾಗ ನಿನಗೆ ಯಾರ ಭಯ? ಈ ಇಂದ್ರಾದಿಗಳನ್ನು ಅರೆಕ್ಷಣದಲ್ಲಿ ಅನಾಯಾಸವಾಗಿ ಸುಟ್ಟು ಬೂದಿ ಮಾಡಬಲ್ಲೆ.

ಗೋವುಗಳನ್ನೂ, ಕರುಗಳನ್ನೂ ಭೀತರಾದ ಮಕ್ಕಳನ್ನೂ ಹೆಂಗಸರನ್ನೂ ಗೋವರ್ಧನ ಪರ್ವತದ ಗುಹೆಗಳಲ್ಲಿ ಇರಿಸಿ ನಿರ್ಭಯನಾಗಿರು.

ಕೃಷ್ಣನ ಮಾತನ್ನು ಕೇಳಿ ನಂದ ಹಾಗೇ ಮಾಡಿದ. ಕೃಷ್ಣ ಎಡಗೈಯಿಂದ ಪರ್ವತವನ್ನು ಎತ್ತಿ ಹಿಡಿದ. ಆಗ ಒಳ್ಳೆಯ ರತ್ನಕಾಂತಿಯಿಂದ ಬೆಳಗುತ್ತಿದ್ದ ಪ್ರದೇಶವೂ ಕತ್ತಲಿಂದ ತುಂಬಿತು. ಧೂಳು ಮುಚ್ಚಿತು. ಬಿರುಗಾಳಿ ಬೀಸಿತು. ಆಕಾಶವನ್ನೆಲ್ಲ ಮೋಡ ಆವರಿಸಿತು. ವೃಂದಾವನದಲ್ಲಿ ಎಲ್ಲೆಡೆ ನಿರಂತರ ಅತಿವೃಷ್ಟಿಯಾಯಿತು. ಕಲ್ಲಿನ ಮಳೆ, ಸಿಡಿಲನ ಆಘಾತ, ಉಲ್ಕಾಪಾತಗಳಾದುವು. ಆದರೆ ಅವೆಲ್ಲ ಪರ್ವತ ಸ್ಪರ್ಶ ಮಾತ್ರದಿಂದ ದೂರಹೋಗಿ ಬಿದ್ದುವು. ಇಂದ್ರನ ಯತ್ನವೆಲ್ಲ ಅಶಕ್ತರ ಪ್ರಯತ್ನದಂತೆ ವ್ಯರ್ಥವಾಯಿತು. ಇಂದ್ರನಿಗೆ ಕೋಪ ಉಂಟಾಯಿತು. ದಧೀಚಿ ಮುನಿಯ ಅಸ್ಥಿಯಿಂದ ನಿರ್ಮಿತವಾದ ವಜ್ರಾಯುಧವನ್ನು ಆತ ಕೈಗೆ ಎತ್ತಿಕೊಂಡ. ಆದರೆ ವಜ್ರಾಯುಧ ಸಹಿತವಾದ ಆ ಕೈಯನ್ನು ಕೃಷ್ಣ ನಗುತ್ತಲೆ ಸ್ತಂಭಿಸಿದ. ಎಲ್ಲ ದೇವತೆಗಳೂ ಸ್ತಂಭಿತರಾದರು. ನಿಶ್ಚಲವಾಗಿ ಬೊಂಬೆಗಳಂತೆ ನಿಂತರು. ಇಂದ್ರ ನಿದ್ರಾವಸ್ಥೆ ಹೊಂದಿ ಆ ನಿದ್ರೆಯಲ್ಲಿ ಜಗತ್ತೆಲ್ಲ ಕೃಷ್ಣಮಯವಾಗಿರುವುದನ್ನು ಕಂಡ. ಎಲ್ಲಿ ನೋಡಿದರೂ ಕೃಷ್ಣ ಪೀತಾಂಬರ ಉಟ್ಟು ರತ್ನಾಲಂಕಾರ ಧರಿಸಿ ರತ್ನಸಿಂಹಾಸನದಲ್ಲಿ ಕುಳಿತ ಮುರಳೀಧರ ದ್ವಿಭುಜ ಕೃಷ್ಣ ಮುಗುಳುನಗೆಯಿಂದ ಅರಳಿದ ಮುಖದಿಂದ ಭಕ್ತರಿಗೆ ಅನುಗ್ರಹ ಮಾಡುತ್ತಿದ್ದಾನೆ. ಈಅದ್ಭುತವನ್ನು ಕಂಡು ಇಂದ್ರ ಒಡನೆ ಮೈಮರೆತು ಗುರೂಪದೇಶದಿಂದ ತಿಳಿದಿದ್ದ ಮಂತ್ರವನ್ನು ಜಪಿಸಿದ. ಸಾವಿರದಳದ ಪದ್ಮದಲ್ಲಿ ಕುಳಿತ ಮನೋಹರ ದಿವ್ಯರೂಪದ, ನವ ಮೇಘಶ್ಯಾಮಕಾಂತಿಯ, ರತ್ನಮಯ ಮಕರಕುಂಡಲ ಕಿರೀಟ ಕೇಯೂರ ಮಂಜೀರಗಳಿಂದ ಕೌಸ್ತುಭಹಾರದಿಂದ ಶೋಭಿಸುವ ಉತ್ತಮವಾದ ಜ್ಯೋತಿಯನ್ನು ಧ್ಯಾನಿಸುತ್ತ ಸ್ತೋತ್ರಮಾಡಿದ -

'ನಾಶರಹಿತ ಗುಣಾತೀತ ನಿರಾಕಾರ ಸನಾತನ ಜ್ಯೋತಿಃಸ್ವರೂಪನಾದ ಪರಬ್ರಹ್ಮ ಕೃಷ್ಣನನ್ನು ನಮಿಸುವೆನು. ಭಕ್ತರು ಧ್ಯಾನಿಸಲಿ ಸೇವಿಸಲಿ ಎಂದೇ ನಾನಾ ರೂಪ ಧರಿಸುತ್ತಾನೆ. ಈತ. ಯುಗಾನುಸಾರವಾಗಿ ಬಿಳಿ ಕೆಂಪು ಹಳದಿ ಕಪ್ಪು ಬಣ್ಣ ತಾಳುತ್ತಾನೆ. ಸತ್ಯಯುಗದಲ್ಲಿ ಬಿಳಿ. ತ್ರೇತಾಯುಗದಲ್ಲಿ ಕೆಂಪು, ದ್ವಾಪರಯುಗದಲ್ಲಿ ಹಳದಿ. ಕಲಿಯುಗದಲ್ಲಿ ಕಪ್ಪು. ನವಮೇಘಶ್ಯಾಮವರ್ಣದ ಸುಂದರ ಶರೀರದ ಯಶೋದಾನಂದರ ಸುತನೆ ಈತ. ಗೋಪಿಯರ ಮನಸ್ಸನ್ನು ಕದ್ದವ. ರಾಧೆಗೆ ಪ್ರಾಣಕ್ಕಿಂತ ಹೆಚ್ಚು ಪ್ರಿಯ. ವಿನೋದದಿಂದ ಕೊಳಲೂದುತ್ತಾನೆ. ಕೋಟಿ ಮನ್ಮಥರ ಸೌಂದರ್ಯದಿಂದ ಹೊಳೆಯುತ್ತ ರಾಧೆಯೊಂದಿಗೆ ವೃಂದಾವನದಲ್ಲಿ ಕ್ರೀಡಿಸುತ್ತಾನೆ. ಅವಳನ್ನು ಆಲಿಂಗಿಸುತ್ತಾನೆ. ಅವಳೊಡನೆ ಜಲಕ್ರೀಡೆಯಾಡುತ್ತಾನೆ. ಅವಳ ತಲೆ ಕೂದಲನ್ನು ಬಾಚಿ ಹೆರಳು ಹಾಕುತ್ತಾನೆ. ಅವಳ ಕಾಲಿಗೆ ಅಲಕ್ತಕರಸ ಲೇಪಿಸುತ್ತಾನೆ. ಅವಳು ಮೆದ್ದ ತಾಂಬೂಲವನ್ನು ಮೆಲ್ಲುತ್ತಾನೆ. ಅವಳನ್ನು ಓರೆಗಣ್ಣಿನಿಂದ ನೋಡುತ್ತಾನೆ. ಮಾಲೆ ಹಾಕುತ್ತಾನೆ. ರಾಸಮಂಡಲಕ್ಕೆ ಹೋಗಿ ಬೇರೆ ಗೋಪಿಯರೊಡನೆ ವಿಹರಿಸುತ್ತಾನೆ. ರಾಧೆಯನ್ನು ಕರೆದೊಯ್ಯುತ್ತಾನೆ. ಬಳಿಕ ಅವಳನ್ನೂ ಬಿಟ್ಟು ಬಿಡುತ್ತಾನೆ.

ವಿಪ್ರಪತ್ನಿಯರ ಅನ್ನ ಉಣ್ಣುತ್ತಾನೆ. ಬಾಲಕರೊಡನೆ ತಾಳೆಹಣ್ಣು ಮೆಲ್ಲುತ್ತಾನೆ. ಗೋಪಿಯರ ಸೀರೆಗಳನ್ನು ಅಪಹರಿಸುತ್ತಾನೆ. ಗೋವುಗಳನ್ನು ಹೆಸರು ಹಿಡಿದು ಕೂಗಿ ಕರೆಯುತ್ತಾನೆ. ಬಾಲಕರೊಡನೆ ಮಧುರವಾದ ಸಂಗೀತ ಹಾಡುತ್ತಾನೆ. ಇಂಥ ಕೃಷ್ಣನನ್ನು ವಂದಿಸುತ್ತೇನೆ.'

ಹೀಗೆ ದೇವೇಂದ್ರ ಕೃಷ್ಣನನ್ನು ಉತ್ತಮ ಸ್ತೋತ್ರದಿಂದ ಸ್ತುತಿಸಿ ನಮಿಸಿದ.

ಹಿಂದೆ ವೃತ್ರಾಸುರನೊಡನೆ ಇಂದ್ರ ಹೋರಾಡುತ್ತಿದ್ದಾಗ ಬೃಹಸ್ಪತ್ಯಾಚಾರ್ಯರು ಇಂದ್ರನಿಗೆ ಈ ಸ್ತೋತ್ರವನ್ನು ಉಪದೇಶಿಸಿದ್ದರು. ಬ್ರಹ್ಮ ತಪಸ್ಸು ಮಾಡುವಾಗ ಕೃಷ್ಣ ಅವನಿಗೆ ಉಪದೇಶಿಸಿದ್ದ. ಏಕಾದಶಾಕ್ಷರ ಮಂತ್ರ ಕವಚಗಳಿಂದ ಸಹಿತವಾಗಿ ಈ ಸ್ತೋತ್ರವನ್ನು ಪುಷ್ಕರದಲ್ಲಿ ಸನತ್ಕುಮಾರನಿಗೂ ಬ್ರಹ್ಮ ಉಪದೇಶಿಸಿದ್ದ. ಕುಮಾರ ಅಂಗಿರಸನಿಗೂ ಅಂಗಿರಸ ಬೃಹಸ್ಪತಿಗೂ ಉಪದೇಶಿಸಿದ.

ಇಂದ್ರಕೃತವಾದ ಈ ಸ್ತೋತ್ರವನ್ನು ನಿತ್ಯವೂ ಭಕ್ತಿಯಿಂದ ಪಠಿಸಿದರೆ ದೃಢವಾದ ಹರಿಭಕ್ತಿಯೂ ಕೊನೆಗೆ ಹರಿದಾಸ್ಯವೂ ಲಭಿಸುವುದು. ಜನನ ಮರಣ ಮುಪ್ಪು ರೋಗ ದುಃಖಗಳಿಂದ ಮುಕ್ತಿ ದೊರೆಯುವುದು. ಕನಸಿನಲ್ಲಿಯೂ ಯಮದೂತರು, ಯಮಪಟ್ಟಣ ಕಾಣಿಸುವುದಿಲ್ಲ.

ಇಂದ್ರನ ಸ್ತೋತ್ರವನ್ನು ಕೇಳಿ ಶ್ರೀಕೃಷ್ಣ ಪ್ರಸನ್ನನಾದ. ವರನೀಡಿದ. ಪರ್ವತವನ್ನು ಸ್ವಸ್ಥಾನದಲ್ಲಿಟ್ಟ. ಇಂದ್ರ ಕೃಷ್ಣನನ್ನು ನಮಿಸಿ ಪರಿವಾರ ಸಹಿತನಾಗಿ ಹೊರಟುಹೋದ. ಗೋಪಾಲಕರೆಲ್ಲರೂ ಕೃಷ್ಣನ ಮಹಿಮೆಯನ್ನು ಕಂಡು ಅವನನ್ನು ಪೂರ್ಣಗುಣನಾದ ಪರಮಾತ್ಮನೆಂದು ತಿಳಿದರು. ನಂದನೂ ಮಗನನ್ನು ಪೂರ್ಣಬ್ರಹ್ಮಸ್ವರೂಪನೆಂದು ತಿಳಿದು ಮೈರೋಮಾಂಚಗೊಂಡು ಭಕ್ತಿಯ ಕಣ್ಣೀರನ್ನು ಸುರಿಸಿ ಸ್ತೋತ್ರ ಮಾಡಿದ.

**ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।**
**ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥**

''ವೇದವೇದ್ಯನೂ ಗೋಬ್ರಾಹ್ಮಣಹಿತಕಾರಿಯೂ ಜಗತ್ತಿಗೆ ಹಿತಕಾರಿಯೂ ಭೂಮಿಯ ಉದ್ಧಾರಕನೂ ಆದ ಕೃಷ್ಣನಿಗೆ ನಮೋ ನಮಃ. ಅನಂತ ಕೋಟಿ ಬ್ರಹ್ಮಾಂಡಗಳಿಗೆ ಆಶ್ರಯ ನೀನು. ನಿರ್ಲಿಪ್ತ, ನಿರ್ಗುಣ, ನಿರಾಕಾರ. ಅತಿಸೂಕ್ಷ್ಮ ಸ್ವರೂಪ. ಮಹತೋ ಮಹೀಯ, ಸರ್ವೇಶ್ವರ, ತೇಜೋರೂಪ, ಪ್ರತ್ಯಕ್ಷಕ್ಕೆ ನಿಲುಕದವ, ಯೋಗಿಗಳ ಧ್ಯಾನಕ್ಕೂ ನಿಲುಕದವ, ಬ್ರಹ್ಮವಿಷ್ಣು ಮಹೇಶರಿಗೆ ವಂದ್ಯ, ನಾಲ್ಕೂ ಯುಗಗಳಲ್ಲಿ ನಾಲ್ಕೂ ವರ್ಣಗಳಿಗೆ ಆಶ್ರಯ, ಬಿಳಿ ಕೆಂಪು ಹಳದಿ ಕಪ್ಪು ಬಣ್ಣದವ, ಯೋಗಿ, ಯೋಗರೂಪ, ಯೋಗಿಗಳಿಗೆ ಗುರು, ಸಿದ್ಧೇಶ್ವರ, ಸಿದ್ಧ, ಸಿದ್ಧರಿಗೆ ಗುರು, ಬ್ರಹ್ಮ ವಿಷ್ಣು ರುದ್ರ ಶೇಷ ಧರ್ಮ ಸೂರ್ಯ ಗಣೇಶ ಷಣ್ಮುಖರೂ ಸನಕಾದಿ ಮುನಿಗಳೂ, ಸಿದ್ಧರಿಗೆ ಗುರುವಾದ ಕಪಿಲನೂ, ನರನಾರಾಯಣ ಮುನಿಗಳೂ ನಿನ್ನನ್ನು ಸ್ತೋತ್ರಮಾಡಲು ಶಕ್ತರಲ್ಲ. ಮಂದಬುದ್ಧಿಯ ಬೇರೆ ಜನರು ಪರಾತ್ಪರನಾದ ನಿನ್ನನ್ನು ಏನೂ ಸ್ತುತಿಸಲಾರರು. ವೇದಗಳಾಗಲಿ ಲಕ್ಷ್ಮೀ ಸರಸ್ವತಿಯರಾಗಲಿ ರಾಧೆಯಾಗಲಿ

ನಿನ್ನನ್ನು ಸುತ್ತಿಸಲಾರರು. ನಾನು ಕ್ಷಣಕ್ಷಣದಲ್ಲಿ ನಿನ್ನಲ್ಲಿ ಅಪರಾಧಗೈಯುತ್ತಿದ್ದೇನೆ. ಅದನ್ನು ಕ್ಷಮಿಸು. ನನ್ನನ್ನು ಕಾಪಾಡು. ನೀನು ಕರುಣಾಸಿಂಧು. ದೀನಬಂಧು. ಭವಸಾಗರದಲ್ಲಿ ಮುಳುಗಿದ ನನ್ನನ್ನು ರಕ್ಷಿಸು. ಹಿಂದೆ ಪುಣ್ಯಕ್ಷೇತ್ರಗಳಲ್ಲಿ ತಪಸ್ಸು ಮಾಡಿ ನಿನ್ನನ್ನು ಮಗನನ್ನಾಗಿ ಪಡೆದಿದ್ದೇನೆ. ನಿನ್ನ ಪಾದಾರವಿಂದದಲ್ಲಿ ಭಕ್ತಿ ದಾಸ್ಯಗಳನ್ನು ನೀಡು. ಬ್ರಹ್ಮಪದವಿಯೂ ನನಗೆ ಬೇಡ. ದೇವತ್ವವೂ ಸಾಲೋಕ್ಯಾದಿ ಪದವಿಯೂ ನಿನ್ನ ಪಾದಕಮಲಸೇವೆಯ ಹದಿನಾರನೆ ಒಂದಂಶಕ್ಕೆ ಸಮನಾಗದು. ಇಂದ್ರಪದವಿಯಾಗಲಿ ರಾಜಪದವಿಯಾಗಲಿ ಚಿರಜೀವಿತ್ವವಾಗಲಿ ಸಿದ್ಧಿಪ್ರಾಪ್ತಿಯಾಗಲಿ ಸ್ವರ್ಗಸುಖವಾಗಲಿ ಹರಿದಾಸ್ಯಕ್ಕೆ ಹೋಲಿಸಿದರೆ ಯಾವ ಗಣನೆಗೂ ಬಾರದುದು. ಬ್ರಹ್ಮಪದವಿ ಮುಂತಾದುದು ಯಾವುದೂ ಭಕ್ತರ ಒಡನಾಟದ ಅರೆಕ್ಷಣಕ್ಕೂ ಸಮಾನವಾಗದು. ನಿನ್ನ ಭಕ್ತ ನಿನಗೆ ಸಮಾನ. ಅರೆಕ್ಷಣದ ಸಂಭಾಷಣದಿಂದಲೆ·ಎಲ್ಲ ದುಃಖಗಳಿಂದ ಪಾರುಮಾಡಬಲ್ಲ. ನಿನ್ನ ಭಕ್ತರ ಜೊತೆಗೆ ಸಂಭಾಷಣೆ ಮಾಡಿದರೆ ಮಳೆಗರೆದಂತಾಗಿ ಭಕ್ತಿಯ ಬೆಳೆ ಹುಲುಸಾಗಿ ಬೆಳೆಯುತ್ತದೆ. ನಿನ್ನ ದ್ವೇಷಿಗಳೊಡನೆ ಸಂಭಾಷಿಸಿದರೆ ಒಡನೆ ಭಕ್ತಿಯ ಬೆಳೆ ಒಣಗಿ ಹೋಗುವುದು. ತಿರುಗಿ ನಿನ್ನ ಗುಣಗಳ ಧ್ಯಾನದಿಂದ ಚಿಗುರಿ ಬೆಳೆಯಲಾರಂಭಿಸುತ್ತದೆ. ಮನಸ್ಸಿನಲ್ಲಿ ಅಂಕುರಿಸುವ ನಿನ್ನ ಭಕ್ತಿಯ ಮೊಳಕೆಯನ್ನು ನಾಶಹೊಂದಲು ಬಿಡಬಾರದು. ಸದಾ ಬೆಳೆಸಬೇಕು. ಅದು ಮರವಾಗಿ ಬೆಳೆದರೆ ಭಕ್ತನಿಗೆ ಜೀವನಾಧಾರವಾಗುತ್ತದೆ. ಅವನಿಗೆ ಹರಿದಾಸ್ಯದ ಫಲವನ್ನು ಕೊಡುತ್ತದೆ. ದುರ್ಲಭವಾದ ಆ ದಾಸ್ಯವನ್ನು ಪಡೆದು ದಾಸನಾದನೆಂದರೆ ನಿಶ್ಚಯವಾಗಿಯೂ ಅವನು ಎಲ್ಲ ಭಯವನ್ನೂ ಗೆದ್ದಂತೆಯೆ.''

ಹೀಗೆ ಹೇಳಿ ನಂದ ಕೃಷ್ಣನ ಮುಂದೆ ಭಕ್ತಿಭಾವದಿಂದ ನಿಂತ. ಕೃಷ್ಣ ನಗುಮೊಗದಿಂದ ಅವನಿಗೆ ಅಭೀಷ್ಟವರವನ್ನು ನೀಡಿದ.

ನಂದನು ಮಾಡಿದ ಈ ಸ್ತೋತ್ರವನ್ನು ನಿತ್ಯವೂ ಭಕ್ತಿಯಿಂದ ಪಠಿಸುವವನು ದೃಢವಾದ ಹರಿಭಕ್ತಿದಾಸ್ಯಗಳನ್ನು ಪಡೆಯುತ್ತಾನೆ. ದ್ರೋಣನೆಂಬ ವಸುನಂದ, ಅವನೆ ತನ್ನ ಪತ್ನಿಯಾದ ಧರಾದೇವಿಯೊಡನೆ ಪುಣ್ಯತೀರ್ಥದಲ್ಲಿ ತಪಸ್ಸು ಮಾಡುತ್ತಿದ್ದಾಗ ಈ ಸ್ತೋತ್ರವನ್ನು ಬ್ರಹ್ಮ ಅವನಿಗೆ ಉಪದೇಶಿಸಿದ್ದ. ಸಂತುಷ್ಟನಾದ ಸೌಭರಿ ಮುನಿಯೂ ಅವನಿಗೆ ವಿಷ್ಣುಷಡಕ್ಷರಮಂತ್ರವನ್ನೂ ಸರ್ವರಕ್ಷಕವಾದ ಕವಚವನ್ನೂ ಉಪದೇಶಿಸಿದ. ಮಂತ್ರ ಸ್ತೋತ್ರ ಕವಚ ಇಷ್ಟದೇವತೆ ಗುರು ವಿದ್ಯೆಗಳು ಯಾರಿಗೆ ಯಾವ ರೀತಿಯಲ್ಲಿ ಪರಂಪರೆಯಿಂದ ಬಂದಿರುವುವೋ ಆ ರೀತಿ ಅವನ್ನು ಉಪಾಸನೆ ಮಾಡಬೇಕು. ಬಿಡಕೂಡದು.

ಹೀಗೆ ಶ್ರೀಕೃಷ್ಣನ ಅದ್ಭುತವಾದ ಆಖ್ಯಾನವನ್ನೂ ಸ್ತೋತ್ರವನ್ನೂ ಹೇಳಿದ್ದೇನೆ. ಇವು ಶ್ರೇಷ್ಠ ಸುಖಪ್ರದ, ಮೋಕ್ಷದಾಯಕ, ಸಂಸಾರ ಬಂಧವನ್ನು ಕಳೆಯುತ್ತವೆ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ*
*ನಾರಾಯಣನಾರದಸಂವಾದದಲ್ಲಿ ಇಂದ್ರಯಾಗ ಭಂಜನವೆಂಬ*
*ಇಪ್ಪತ್ತೊಂದನೆಯ ಅಧ್ಯಾಯ ಮುಗಿದುದು*

ಧೇನುಕ ವಧ

## ಅಧ್ಯಾಯ - ೨೨

**ಶ್ರೀನಾರಾಯಣಮುನಿ:-** 'ಒಮ್ಮೆ ಶ್ರೀಕೃಷ್ಣ ಬಲರಾಮನ ಮತ್ತು ಗೋಪಾಲಕರ ಜೊತೆಗೆ ತಾಲವನವನ್ನು ಹೊಕ್ಕ. ಆಗ ವನ ಪಕ್ವಫಲಗಳಿಂದ ತುಂಬಿತ್ತು. ಅಲ್ಲಿ ಮರಗಳನ್ನು ಕತ್ತೆಯ ರೂಪದ ಧೇನುಕನೆಂಬ ಅಸುರ ರಕ್ಷಿಸಿಕೊಂಡಿದ್ದ. ಅವನು ಕೋಟಿ ಸಿಂಹಗಳ ಬಲ ಉಳ್ಳವ, ದೇವತೆಗಳ ದರ್ಪವನ್ನೂ ಇಳಿಸಬಲ್ಲವ. ಅವನ ಮೈ ಬೆಟ್ಟದಂತೆ, ಕಣ್ಣುಗಳು ಬಾವಿಗಳಂತೆ, ಹಲ್ಲುಗಳು ನೇಗಿಲ ಈಚುಮರದಂತೆ, ಬಾಯಿ ಗುಹೆಯಂತೆ, ಭೀಕರವಾದ ನಾಲಿಗೆ ನೂರು ಮೊಳ ಉದ್ದ. ಹೊಕ್ಕಳೂ ಕೆರೆಯಂತಿತ್ತು. ಶಬ್ದ ಭಯಾನಕವಿತ್ತು. ಗೋಪಬಾಲಕರು ವನವನ್ನು ಹೊಕ್ಕು ಮರಗಳನ್ನು ಕಂಡು ಹರ್ಷಿತರಾದರು. ಅವರ ಮೊಗದಾವರೆ ಅರಳಿತು. ಕುತೂಹಲ ತಡೆಯದಾಯಿತು.

'ಕೃಷ್ಣ, ಒಂದು ಅರೆಕ್ಷಣ ನಮ್ಮ ನಿವೇದನೆಯನ್ನು ಕೇಳು. ನಾವು ಹಸಿದಿದ್ದೇವೆ. ಮರಗಳಲ್ಲಿ ಮಧುರವಾದ ಸುಂದರವಾದ ಫಲಗಳಿವೆ. ನಾನಾ ಬಣ್ಣದ ಹೂಗಳಿವೆ. ಮರಗಳನ್ನು ಅಲ್ಲಾಡಿಸಿ ಅಥವಾ ಮುರಿದು ಹೂ ಹಣ್ಣುಗಳನ್ನು ಉದುರಿಸಲು ಅಪ್ಪಣೆ ಕೊಡುವಿಯಾದರೆ ನಾವು ಈಗಲೆ ಸಿದ್ಧರಿದ್ದೇವೆ. ಆದರೆ ಇಲ್ಲಿ ಬಲಿಷ್ಠನಾದ ಕತ್ತೆಯ ರೂಪಿನ ಧೇನುಕಾಸುರನಿದ್ದಾನೆ. ದೇವತೆಗಳಿಗೂ ಸೋಲದ ಮಹಾಬಲಪರಾಕ್ರಮಿ ಆತ. ಕಂಸನ ಒಬ್ಬ ಮಂತ್ರಿ. ಎಲ್ಲ ಜಂತುಗಳನ್ನೂ ಹಿಂಸಿಸುವವ. ಅವನನ್ನು ಯಾರೂ ತಡೆಯುವವರಿಲ್ಲ. ಅವನು ಈ ವನವನ್ನು ರಕ್ಷಿಸುತ್ತಿದ್ದಾನೆ. ವಿಚಾರಮಾಡಿ ಹೇಳು, ನಾವು ಹಣ್ಣುಗಳನ್ನು ಉದುರಿಸುವುದು ಯುಕ್ತವೆ ಅಯುಕ್ತವೆ?' ಎಂದು ಕೇಳಿದರು. ಬಾಲಕರ ಮಾತನ್ನು ಕೇಳಿ ಕೃಷ್ಣ ಮಧುರವಾಗಿ ನುಡಿದ - 'ನನ್ನ ಜೊತೆಗಿರುವಾಗ ನಿಮಗೆ ದೈತ್ಯನಿಂದ ಏನು ಭಯ? ಮರಗಳನ್ನು ಮುರಿಯಿರಿ, ಅಲ್ಲಾಡಿಸಿರಿ. ಹಣ್ಣುಗಳನ್ನು ನಿರ್ಭಯವಾಗಿ ತಿನ್ನಿರಿ.'

ಶ್ರೀಕೃಷ್ಣನ ಆಜ್ಞೆ ಪಡೆದು ಬಲಿಷ್ಠರಾದ ಬಾಲಕರು ಮರದ ತುದಿಯನ್ನೇರಿದರು. ನಾನಾ ಬಗೆಯ ಬಣ್ಣಬಣ್ಣದ ಮಧುರವಾದ ಮಾಗಿದ ಹಣ್ಣುಗಳನ್ನು ಉದುರಿಸಿದರು. ಕೆಲವರು ಮರಗಳನ್ನು ಮುರಿದರು. ಕೆಲವರು ಅಲ್ಲಾಡಿಸಿದರು. ಕೆಲವರು ಕೋಲಾಹಲ ಮಾಡಿದರು, ಕುಣಿದರು. ಮರದಿಂದಿಳಿದ ಬಲಿಷ್ಠರಾದ ಬಾಲಕರು ಹಣ್ಣುಗಳನ್ನು ಹಿಡಿದುಕೊಂಡು ಹೋಗುತ್ತ ಇದಿರಿಗೆ ಆ ಮಹಾದೈತ್ಯನನ್ನು ಕಂಡರು. ಕತ್ತೆಯ ರೂಪದ ಮಹಾಕಾಯದ ದೈತ್ಯ ದೊಡ್ಡ ಶಬ್ದ ಮಾಡುತ್ತ ವೇಗವಾಗಿ ಬರುತ್ತಿದ್ದ. ಬಾಲಕರೆಲ್ಲರೂ ಭಯದಿಂದ ಅಳುತ್ತ ಹಣ್ಣುಗಳನ್ನು ಕೆಳಗೆ ಹಾಕಿ 'ಕೃಷ್ಣ ಕೃಷ್ಣ, ಕಾಪಾಡು, ಬಾ, ಕರುಣಾನಿಧಿಯೆ. ಬಲರಾಮ, ಕಾಪಾಡು ಈ ದೈತ್ಯನಿಂದ. ನಮ್ಮ ಪ್ರಾಣಗಳೆ ಹೋಗುತ್ತಿವೆ.

**ಹೇ ಕೃಷ್ಣ ಹೇ ಕೃಷ್ಣ ಹರೇ ಮುರಾರೇ**
**ಗೋವಿಂದ ದಾಮೋದರ ದೀನಬಂಧೋ ।**
**ಗೋಪೀಶ ಗೋಪೇಶ ಭವಾರ್ಣವೇಽಸ್ಮಾನ್**
**ಅನಂತ ನಾರಾಯಣ ರಕ್ಷ ರಕ್ಷ ॥**

ಹೇ ಕೃಷ್ಣ, ಹೇ ಕೃಷ್ಣ, ಹರಿ, ಮುರಾರಿ, ಗೋವಿಂದ, ದಾಮೋದರ, ದೀನಬಂಧು, ಗೋಪೀರಮಣ, ಗೋಪಾಲನಾಥ, ಅನಂತ, ನಾರಾಯಣ, ಸಂಸಾರ ಸಾಗರದಲ್ಲಿ ನಮ್ಮನ್ನು ಕಾಪಾಡು, ಕಾಪಾಡು.

**ಭಯೇಽಭಯೇ ವಾಥ ಶುಭೇಽಶುಭೇ ವಾ**
**ಸುಖೇಷು ದುಃಖೇಷು ಚ ದೀನನಾಥ ।**
**ತ್ವಯಾ ವಿನಾನ್ಯತ್ ಶರಣಂ ಭವಾರ್ಣವೇ**
**ನ ನೋಽಸ್ತಿ ಹೇ ಮಾಧವ ರಕ್ಷ ರಕ್ಷ ॥**

ಹೇ ಮಾಧವ, ದೀನನಾಥ, ಕಾಪಾಡು ಕಾಪಾಡು, ಸಂಸಾರಸಾಗರದಲ್ಲಿ ಭಯ ಅಭಯಗಳಲ್ಲಾಗಲಿ, ಶುಭ ಅಶುಭಗಳಲ್ಲಾಗಲಿ, ಸುಖ ದುಃಖಗಳಲ್ಲಾಗಲಿ ನಿನ್ನನ್ನು ಹೊರತು ಬೇರೆ ರಕ್ಷಕರು ನಮಗಿಲ್ಲ. ಗುಣಸಾಗರ, ಭಕ್ತಬಂಧು, ಕೃಷ್ಣ, ನಿನಗೆ ಜಯವಾಗಲಿ. ಬಹು ಭೀತರಾದ ಬಾಲಕರನ್ನು ಕಾಪಾಡು, ಕಾಪಾಡು. ನಮ್ಮನ್ನು ನಾಶ ಮಾಡಲು ಬಂದ ರಾಕ್ಷಸಕುಲದೊಡೆಯನಾದ ಈ ರಾಕ್ಷಸನನ್ನು ಕೊಲ್ಲು. ಕೊಂದು ದೇವಕುಲದ ಬಲದರ್ಪಗಳನ್ನು ಹೆಚ್ಚಿಸು.'

ಬಾಲಕರ ಭಯವಿಹ್ವಲತೆಯನ್ನು ಕಂಡು ಭಕ್ತವತ್ಸಲ ಭಯಪರಿಹಾರಕ ಕೃಷ್ಣ ಬಲರಾಮನೊಡನೆ ಅವರ ಬಳಿಗೆ ಬಂದ. 'ಹೆದರಬೇಡಿ ಹೆದರಬೇಡಿ' ಎನ್ನುತ್ತ ನಗು ಮೊಗದಿಂದ ಅಭಯನೀಡಿದ. ಬಾಲಕರು ಭಯವನ್ನು ತೊರೆದು ಕುಣಿಯತೊಡಗಿದರು. ಹರಿಸ್ಮರಣೆಯೆ ಹೀಗೆ. ಸರ್ವಮಂಗಳದಾಯಕವಾಗಿರುತ್ತದೆ. ಅಭಯ ನೀಡುತ್ತದೆ. ಬಾಲಕರನ್ನು ತಿನ್ನಲು ಬಂದ ದಾನವನನ್ನು ಎದುರಿಗೆ ಕಂಡು ಕೃಷ್ಣ ಬಲರಾಮನಿಗೆ ಹೇಳಿದ -

'ಈತ ಬಲಿಪುತ್ರನಾದ ಒಬ್ಬ ದಾನವ. ಹೆಸರು ಸಾಹಸಿಕ ಎಂದು, ಬಲಿಷ್ಠನಾಗಿದ್ದಾನೆ. ಬ್ರಾಹ್ಮಣಶಾಪದಿಂದ ಕತ್ತೆಯ ಆಕಾರ ತಾಳಿದ್ದಾನೆ. ಹಿಂದೆ ದೂರ್ವಾಸರು ಇವನನ್ನು ಶಪಿಸಿದರು. ಅಂಥ ಮಹಾಪಾಪಿ ಇವನು. ಇವನನ್ನು ನಾನು ಸಂಹರಿಸುತ್ತೇನೆ. ನೀನು ಬಾಲಕರನ್ನು ರಕ್ಷಿಸುತ್ತಿರು. ಅವರೆಲ್ಲರನ್ನೂ ಕರೆದುಕೊಂಡು ದೂರ ಹೋಗಿರು.'' ಬಲರಾಮ ಒಡನೆ ಎಲ್ಲ ಬಾಲಕರನ್ನು ದೂರಕ್ಕೆ ಕರೆದೊಯ್ದ.

ದಾನವ ಕೋಪದಿಂದ ಉರಿವ ಬೆಂಕಿಯ ಜ್ವಾಲೆಯಂತೆ ಕಾಣುತ್ತಿದ್ದ. ಅನಾಯಾಸವಾಗಿ ಕೃಷ್ಣನನ್ನು ನುಂಗಿದ. ಆದರೆ ಕೃಷ್ಣನ ತೇಜಸ್ಸು ಅವನನ್ನು ಸುಡಲು ತೊಡಗಿತು. ಭಯದಿಂದ ಬೇಗನೆ ಅವನನ್ನು ಹೊರಗೆ ಹಾಕಿದ. ಬ್ರಹ್ಮತೇಜಸ್ಸಿನಿಂದ ಜ್ವಲಿಸುವ ಶಾಂತ ಸುಂದರ ಮೂರ್ತಿಯಾದ ಕೃಷ್ಣನನ್ನು ದಿಟ್ಟಿಸಿ ನೋಡಿದ. ಆಗ ಅವನಿಗೆ ತನ್ನ ಪೂರ್ವಜನ್ಮದ ಸ್ಮರಣೆಯುಂಟಾಯಿತು. ಕೃಷ್ಣ ಜಗತ್ತಿಗೆ ಕಾರಣನಾದ ಪರಮಾತ್ಮನೆಂಬುದೂ ತಿಳಿಯಿತು. ಜ್ಯೋತಿಃಸ್ವರೂಪನಾದ ಕೃಷ್ಣನನ್ನು ದಾನವ ಸ್ತುತಿಸಿದ-

'ಶ್ರೀಹರಿ, ನೀನು ಒಂದು ಅಂಶದಿಂದ ವಾಮನನಾಗಿ ನನ್ನ ತಂದೆಯಾದ ಬಲಿಚಕ್ರವರ್ತಿಯ ಯಜ್ಞಶಾಲೆಗೆ ಬಂದು ಭಿಕ್ಷೆ ಬೇಡಿ ಅವನ ರಾಜ್ಯಸಂಪತ್ತುಗಳನ್ನು ಅಪಹರಿಸಿ ಅವನನ್ನು ಸುತಲಲೋಕದಲ್ಲಿರಿಸಿದವ. ಬಲಿಯ ಭಕ್ತಿಗೆ ವಶನಾದ ಭಕ್ತವತ್ಸಲ. ಈಗ ಶಾಪದಿಂದ ಕತ್ತೆಯಾಗಿರುವ ಪಾಪಿಯಾದ ನನ್ನನ್ನು ಕೊಲ್ಲು. ದುರ್ವಾಸಮುನಿಯ ಶಾಪದಿಂದ ನನಗೆ ಈ ಕೀಳಾದ ಜನ್ಮ ಬಂದಿದೆ. ನಿನ್ನಿಂದಲೆ ನನಗೆ ಮರಣವೆಂದೂ ಮುನಿ ಹೇಳಿದ್ದಾನೆ. ಹದಿನಾರು ಹಾರೆಕಾಲುಗಳುಳ್ಳ ನಿನ್ನ ತೀಕ್ಷ್ಣ ಸುದರ್ಶನಚಕ್ರದಿಂದ ನನ್ನನ್ನು ಕೊಂದು ಭಕ್ತಿಮುಕ್ತಿಗಳನ್ನು ನೀಡು. ಸಾಗರದಲ್ಲಿ ಮುಳುಗಿದ್ದ ಭೂಮಿಯನ್ನು ಎತ್ತಿ ತರಲು ವರಾಹನಾಗಿ ಅವತರಿಸಿ ಹಿರಣ್ಯಾಕ್ಷನನ್ನು ಕೊಂದೆ. ವೇದಗಳನ್ನು ರಕ್ಷಿಸಿದೆ. ಪ್ರಹ್ಲಾದನನ್ನು ರಕ್ಷಿಸಿ ದೇವತೆಗಳನ್ನು ಅನುಗ್ರಹಿಸಲು ನೃಸಿಂಹನಾಗಿ ಬಂದು ಹಿರಣ್ಯಕಶಿಪುವನ್ನು ಕೊಂದೆ. ವೈವಸ್ವತಮನುವಿಗೆ ಜ್ಞಾನದಾನ ಮಾಡುವುದಕ್ಕೂ ವೇದೋದ್ಧಾರಮಾಡಿ ದೇವಬ್ರಾಹ್ಮಣರನ್ನು ರಕ್ಷಿಸುವುದಕ್ಕೂ ದಯಾನಿಧಿಯಾದ ನೀನೆ ಮತ್ಸ್ಯಾವತಾರ ಮಾಡಿದೆ. ಸೃಷ್ಟಿಯನ್ನು ಕಾಪಾಡಲು ಜಗದಾಧಾರನಾದ ನೀನು ಕೂರ್ಮನಾಗಿ ಬಂದು ಜಗತ್ತನ್ನು ಹೊರುವ ಶೇಷನಿಗೆ ಆಧಾರನಾದೆ. ದಶರಥಪುತ್ರ ರಾಮನಾಗಿ ಬಂದು ಸಮುದ್ರಕ್ಕೆ ಸೇತುವೆ ಕಟ್ಟಿ ರಾವಣನನ್ನು ಕೊಂದು ಸೀತೆಯನ್ನು ತಂದೆ. ಜಮದಗ್ನಿಪುತ್ರ ಪರಶುರಾಮನಾಗಿ ಬಂದು ಇಪ್ಪತ್ತೊಂದು ಬಾರಿ ಕ್ಷತ್ರಿಯರನ್ನು ನಾಶಗೊಳಿಸಿದೆ. ಕಪಿಲನಾಗಿ ಅವತರಿಸಿ ಸಿದ್ಧರಿಗೆ ಗುರುವಿಗೂ ಗುರು ಎನಿಸಿ ತಾಯಿಗೆ ಜ್ಞಾನೋಪದೇಶ ನೀಡಿದೆ, ಯೋಗಶಾಸ್ತ್ರವನ್ನೂ ರಚಿಸಿದೆ. ನರನಾರಾಯಣ ರೂಪದಿಂದ ಧರ್ಮಪುತ್ರನಾಗಿ ಅವತರಿಸಿ ಲೋಕವಿಸ್ತಾರ ಗೈದೆ. ಈಗ ಕೃಷ್ಣರೂಪನಾಗಿ ಎಲ್ಲ ಅವತಾರಗಳಿಗೂ ಬೀಜರೂಪನಾದ ನೀನು ಯಶೋದೆಗೆ ನಂದಗೋಪನಿಗೆ ಆನಂದವಿತ್ತೆ. ಗೋಪಿಯರಿಗೆ ಪ್ರಾಣೇಶ್ವರನೆನಿಸಿದೆ. ರಾಧೆಗೆ ಪ್ರಾಣಕ್ಕಿಂತ ಅಧಿಕನೆನಿಸಿದೆ. ವಸುದೇವಸುತನೆನಿಸಿದೆ. ದೇವಕಿಯ ದುಃಖಕಳೆದೆ. ಅಯೋನಿಜನಾದ ನೀನು ಭೂಭಾರಹರಣಕ್ಕಾಗಿ ಬಂದು ಪೂತನೆಗೆ ಮಾತೃಗತಿ ನೀಡಿದೆ. ಬಲಕೇಶಿ ಪ್ರಲಂಬರಿಗೂ ಮೋಕ್ಷ ನೀಡಿದೆ. ನನಗೂ ಮೋಕ್ಷ ನೀಡುತ್ತಿರುವೆ. ಸ್ವತಂತ್ರ, ತ್ರಿಗುಣಾತೀತ, ಭಕ್ತರ ಭಯ ಪರಿಹಾರಕನಾದ ರಾಧಾರಮಣ, ಪ್ರಸನ್ನನಾಗು. ನನಗೆ ಮೋಕ್ಷ ನೀಡು. ಈ ಕತ್ತೆಯ ಜನ್ಮದಿಂದ ನನ್ನನ್ನು ಉದ್ಧರಿಸು. ನಾನು ನಿನ್ನ ಭಕ್ತನ ಮಗ, ಮೂರ್ಖ, ಸಂಸಾರಸಾಗರದಿಂದ ನನ್ನನ್ನು ಉದ್ಧರಿಸಬೇಕು. ವೇದಗಳಾಗಲಿ ಬ್ರಹ್ಮಾದಿಗಳಾಗಲಿ ಮುನಿಗಳಾಗಲಿ ಯಾರನ್ನು ಸ್ತುತಿಸಲಾರರೋ ಆನಿನ್ನನ್ನು ನಾನೇನು ಸ್ತುತಿಸಬಲ್ಲೆ? ಹಿಂದೆ ದೈತ್ಯನಾಗಿದ್ದು ಈಗ ಕತ್ತೆಯಾಗಿರುವ ನಾನು ತ್ರಿಗುಣಾತೀತನಾದ ನಿನ್ನನ್ನು ಸ್ತುತಿಸಬಲ್ಲೆನೆ? ಬ್ರಹ್ಮನೂ ಸ್ತುತಿಸುತ್ತಾನೆ, ಕತ್ತೆಯೂ ಸ್ತುತಿಸುತ್ತದೆ ಎಂದು ನನ್ನನ್ನು ಉಪಹಾಸ ಮಾಡಬೇಡ. ಸರ್ವಜ್ಞ ಸರ್ವೇಶ್ವರನಾದ ನಿನಗೆ ಯೋಗ್ಯ ಅಯೋಗ್ಯರಲ್ಲಿ ಸಮಾನವಾದ ಕರುಣೆ ತಾನೆ?' ಹೀಗೆ ಹೇಳಿ ಧೇನುಕಾಸುರ ಪ್ರಸನ್ನಮುಖದಿಂದ ಹರಿಯ ಮುಂದೆ ನಿಂತ.

ದೈತ್ಯನು ಮಾಡಿದ ಈ ಸ್ತೋತ್ರವನ್ನು ನಿತ್ಯವೂ ಭಕ್ತಿಯಿಂದ ಪಠಿಸುವವನು ಹರಿಯ ಸಾಲೋಕ್ಯ ಸಾರ್ಷ್ಟಿ ಸಾಮೀಪ್ಯಗಳನ್ನು ಅನಾಯಾಸವಾಗಿ ಪಡೆಯುತ್ತಾನೆ. ಇಹದಲ್ಲಿ

ಹರಿಭಕ್ತಿಯನ್ನೂ, ಕೊನೆಯಲ್ಲಿ ಅತ್ಯಂತ ದುರ್ಲಭವಾದ ಹರಿದಾಸ್ಯವನ್ನೂ ಪಡೆಯುತ್ತಾನೆ. ವಿದ್ಯೆ, ಸಂಪತ್ತು, ಕಾವ್ಯಶಕ್ತಿ, ಪುತ್ರಪೌತ್ರಾದಿ ಸಂತತಿ, ಕೀರ್ತಿಗಳನ್ನೂ ಪಡೆಯುತ್ತಾನೆ.

ಕೃಷ್ಣ ಈ ದೈತ್ಯನು ಮಾಡಿದ ಸ್ತೋತ್ರವನ್ನು ಕೇಳಿ ಇಂಥ ಸ್ತೋತ್ರ ಮಾಡುತ್ತಿರುವ ಭಕ್ತನನ್ನು ನಾನು ಹೇಗೆ ಕೊಲ್ಲಲಿ ಎಂದುಕೊಂಡು ಅವನ ಪೂರ್ವಜನ್ಮ ಸ್ಮರಣೆಯನ್ನೆ ಕಳೆದ. ಅವನು ವಿಷ್ಣುಮಾಯೆಯಿಂದ ಎಲ್ಲವನ್ನೂ ಮರೆತು ಕೃಷ್ಣನನ್ನು ಕೆಟ್ಟ ಮಾತುಗಳಿಂದ ಬೈಯಲಾರಂಭಿಸಿದ. ಕೋಪದಿಂದ ತುಟಿ ಅದುರಿಸುತ್ತ ವಿವೇಕ ಕಳೆದುಕೊಂಡು ಸಾಯಲು ಸಿದ್ಧನಾಗಿ ನಿಂದಿಸಿದ.

'ಕೃಷ್ಣ, ನೀನೊಬ್ಬ ದುರ್ಬುದ್ಧಿಯ ಮಾನವಶಿಶು. ನಿನ್ನನ್ನು ಈಗಲೆ ಯಮಪಟ್ಟಣಕ್ಕೆ ಕಳಿಸುತ್ತೇನೆ. ಹಣ್ಣು ತಿಂದು ಬದುಕುವೆನೆಂದು ಆಸೆಯಿಂದ ಈ ತಾಲವನವನ್ನು ಹೊಕ್ಕಿರುವೆ. ಆದರೆ ತಿರುಗಿ ನೀನು ಮನೆ ಸೇರಲಾರೆ, ಬಾಂಧವರನ್ನು ನೋಡಲಾರೆ. ನನಗೆ ಪರಾಕ್ರಮದಲ್ಲಿ ಕಂಸನೂ ಎಣೆಯಲ್ಲ. ಜರಾಸಂಧ ನರಕರೂ ಸಮಾನರಲ್ಲ. ನನ್ನ ಭಯದಿಂದ ದೇವತೆಗಳೆ ಸದಾ ನಡುಗುತ್ತಾರೆ. ಇನ್ನು ನನಗೆ ಸಮನಾರು? ಸಂಹಾರ ಮೂರ್ತಿಯಾದ ಶಿವನೂ ನನ್ನನ್ನು ಸಂಹಾರ ಮಾಡಲು ಶಕ್ತನಲ್ಲ. ಬ್ರಹ್ಮ, ವಿಷ್ಣು, ಮೃತ್ಯು ಕಾಲರೂ ನನ್ನನ್ನು ಕೊಲ್ಲಲಾರರು. ನನಗೆ ಸೇರಿದ ಈ ತಾಲವೃಕ್ಷಗಳಿಂದ ಹಣ್ಣು ಕಿತ್ತು ಅಹಂಕಾರಪಡುತ್ತಿರುವೆಯಲ್ಲ! ಯಾರ ಬಲದಿಂದ ನೀನು ಹೀಗೆ ಮಾಡುತ್ತಿರುವೆ? ನೀನಾರು, ಹೇಳು. ಮನೋಹರ ಸುಂದರ ರೂಪದ ನೀನು ನಿನ್ನ ದುರ್ಲಭವಾದ ಜೀವನವನ್ನು ನನ್ನ ಮುಂದೆ ಒಪ್ಪಿಸಲು ಹೇಗೆ ಬಂದೆ?'

ಹೀಗೆ ಹೇಳಿ ಧೇನುಕಾಸುರ ಶ್ರೀಕೃಷ್ಣನನ್ನೆತ್ತಿ ದೂರಕ್ಕೆ ಎಸೆದ. ಅವನನ್ನು ಕಚ್ಚಿದ. ಹಲ್ಲುಗಳು ಮುರಿದುವು. ನುಂಗಿದ, ಬಾಯಿಗಂಟಲು ಎಲ್ಲವೂ ಕೃಷ್ಣನ ತೇಜಸ್ಸಿನಿಂದ ಬೆಂದು ಹೋದುವು. ಆದರಿಂದ ತಿರುಗಿ ಹೊರಗೆ ಹಾಕಿದ. ಕೋಪದಿಂದ ಕಾಲಗೊರಂದ ನೆಲಕೆರೆದು ಬಾಲವಲ್ಲಾಡಿಸಿ ಭೀಕರ ಶಬ್ದಮಾಡುತ್ತಾ ಗೋಪ ಬಾಲಕರ ಬಳಿಗೆ ಬಂದ. ಬಾಲಕರು ಹೆದರಿ ಓಡಿದರು. ಬಲರಾಮನನ್ನು ಎತ್ತಿ ಎಸೆಯ ಬೇಕೆನ್ನುವಷ್ಟರಲ್ಲಿ ಅವನ ಮುಷ್ಟಿಯ ಏಟಿಗೆ ಮೂರ್ಛೆ ಬಂದಿತು. ಎಚ್ಚೆತ್ತು ಹರಿಯ ಬಳಿಗೆ ಬಂದ. ಅವನ ಮುಷ್ಟಿ ಏಟಿಗೆ ತಿರುಗಿ ಮೂರ್ಛೆಗೊಂಡ. ಬಳಿಕ ಎಚ್ಚೆತ್ತು ಭಯದಿಂದ ಮಲಮೂತ್ರ ವಿಸರ್ಜಿಸಿದ. ತಿರುಗಿ ಚೇತರಿಸಿಕೊಂಡು ಕೃಷ್ಣನನ್ನು ಎತ್ತಿ ಎತ್ತಿ ನೆಲದ ಮೇಲೆ ಕೆಡವಿದ. ಕೃಷ್ಣ ತಾಳವೃಕ್ಷವನ್ನು ಕಿತ್ತು ಅವನನ್ನು ಹೊಡೆದ. ಖಡ್ಗದ ಏಟಿನಂತಾಯಿತು ಅದು. ಕೃಷ್ಣ ಗೋವರ್ಧನ ಪರ್ವತವನ್ನೆ ಎತ್ತಿ ದೈತ್ಯನ ಮೇಲೆ ಎಸೆದ. ದೈತ್ಯ ಮೂರ್ಛಿತನಾದ. ಮೈ ಎಲ್ಲ ಪುಡಿಪುಡಿಯಾಯಿತು. ರಕ್ತ ಕಾರುತ್ತ ಬಿದ್ದ. ಆದರೂ ತಿರುಗಿ ಚೇತರಿಸಿಕೊಂಡು ಎದ್ದು ಅದೇ ಬೆಟ್ಟವನ್ನೆತ್ತಿ ಕೃಷ್ಣನ ಮೇಲೆ ಎಸೆದ. ಕೃಷ್ಣ ಕಬ್ಬಿನ ಜಲ್ಲೆಯಂತೆ ಅದನ್ನು ಲೀಲಾಜಾಲವಾಗಿ ಬಲಗೈಯಲ್ಲಿ ಹಿಡಿದ. ಯಥಾಸ್ಥಾನದಲ್ಲಿಟ್ಟ. ದೈತ್ಯನ ಕಿವಿಹಿಡಿದು ಎಳೆದು ದೂರಕ್ಕೆ ಎಸೆದ. ದೈತ್ಯ ಕಾಲ ಗೊರಸಿಂದ ನೆಲವನ್ನು ಬಗೆಯುತ್ತ ಬಂದು ಕೃಷ್ಣನನ್ನೆತ್ತಿ ಮನೋವೇಗದಿಂದ ಲಕ್ಷಯೋಜನ ದೂರಕ್ಕೆ ಆಕಾಶದಲ್ಲಿ ನೆಗೆದ. ಒಂದು ಪ್ರಹರಕಾಲ ಇಬ್ಬರಿಗೂ ಆಕಾಶದಲ್ಲಿ ಯುದ್ಧ ನಡೆಯಿತು. ಬಳಿಕ ಕೃಷ್ಣನನ್ನು ಹಿಡಿದು ನೆಲಕ್ಕೆ ಇಳಿದ.

ಮುಹೂರ್ತಕಾಲ ನೆಲದ ಮೇಲೆ ಯುದ್ಧ ನಡೆಯಿತು. ದೈತ್ಯನ ಈ ಪರಾಕ್ರಮಕ್ಕೆ ಮೆಚ್ಚಿ ಪ್ರಶಂಸೆಮಾಡಿದ ಕೃಷ್ಣ.

''ನನ್ನ ಭಕ್ತನಾದ ಬಲಿಯ ಪುತ್ರನೆ, ನಿನ್ನ ಬಾಳು ಸಾರ್ಥಕವಾಯಿತು. ನಿನಗೆ ಒಳ್ಳೆಯದಾಗಲಿ, ನಿರ್ವಾಣ ಹೊಂದು. ನನ್ನ ದರ್ಶನ ಒಳ್ಳೆಯದಕ್ಕೇ ಆಗುವುದು. ನಿರ್ವಾಣಕ್ಕೆ ಅದು ಕಾರಣ. ಎಲ್ಲಕ್ಕಿಂತ ಶ್ರೇಷ್ಠವಾದ ಮನೋಹರವಾದ ಸ್ಥಾನವನ್ನು ಪಡೆ.'

ಹೀಗೆ ಹೇಳಿ ಕೃಷ್ಣ ಸುದರ್ಶನ ಚಕ್ರವನ್ನು ಸ್ಮರಿಸಿದ. ಕೋಟಿಸೂರ್ಯರ ಪ್ರಭೆಯಿಂದ ಬೆಳಗುವ ಆ ಚಕ್ರ ಬಂದಿತು. ಕೃಷ್ಣ ಅದನ್ನು ಹಿಡಿದು ಎಸೆದ. ಬ್ರಹ್ಮ ವಿಷ್ಣು ಮಹೇಶ್ವರರಿಂದಲೂ ಅವಧ್ಯನಾದ ಆ ದೈತ್ಯನ ತಲೆ ಉರುಳಿತು. ನೂರು ಸೂರ್ಯರಂಥ ತೇಜಸ್ಸು ಎದ್ದು ಬಂದು ಹರಿಯ ಪಾದಕಮಲವನ್ನು ಸೇರಿತು. ಮಹಾದಾನವ ಪರಮಮೋಕ್ಷವನ್ನು ಪಡೆದ! ಎಂಥ ಆಶ್ಚರ್ಯ! ಆಕಾಶದಲ್ಲಿ ನಿಂತು ನೋಡುತ್ತಿದ್ದ ದೇವತೆಗಳೂ ಮುನಿಗಳೂ ಸಂತಸಗೊಂಡು ಹೂಮಳೆಗರೆದರು. ದೇವದುಂಬಿಗಳು ಮೊಳಗಿದುವು. ಅಪ್ಸರೆಯರು ಕುಣಿದರು. ಗಂಧರ್ವರು ಹಾಡಿದರು. ಮುನಿಗಳು ಸ್ತೋತ್ರ ಮಾಡಿದರು.

ಗೋಪಾಲಕರೂ ಬಲರಾಮನೂ ಬಂದು ಈ ದಾನವವಧೆಯನ್ನು ಪ್ರಶಂಸಿಸಿದರು. ಬಾಲಕರು ಕೃಷ್ಣರಾಮರಿಗೆ ತಾಳೆಹಣ್ಣುಗಳನ್ನು ಕೊಟ್ಟು ತಾವೂ ಯಥೇಚ್ಛ ತಿಂದರು. ನಾರದ, ಹೀಗೆ ಶ್ರೀ ಹರಿ ಧೇನುಕಾಸುರನನ್ನು ಕೊಂದು ಬಲರಾಮನೊಡನೆ, ಗೋಪಬಾಲಕರೊಡನೆ ಯಥೇಚ್ಛ ಹಣ್ಣು ತಿಂದು ನೀರು ಕುಡಿದು ತಮ್ಮ ಮನೆಗಳಿಗೆ ಹೋದರು.

*ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ನಾರಾಯಣ ನಾರದ ಸಂವಾದದಲ್ಲಿ ಧೇನುಕವಧವೆಂಬ ಇಪ್ಪತ್ತೆರಡನೆ ಅಧ್ಯಾಯ ಮುಗಿದುದು*

—o—

## ಧೇನುಕಾಸುರನ ವೃತ್ತಾಂತ

ಅಧ್ಯಾಯ - ೨೩

## ದುರ್ವಾಸ ಮಹರ್ಷಿ ಶಾಪ

**ನಾರದ:-** 'ಮುನಿಯೆ, ಬಲಿಪುತ್ರ ಸಾಹಸಿಕ ಯಾವ ಪಾಪದಿಂದ ಕತ್ತೆಯ ಜನ್ಮ ಹೊಂದಿದ? ದುರ್ವಾಸ ಮಹರ್ಷಿ ಅವನನ್ನು ಏಕೆ ಶಪಿಸಿದ? ದಾನವಾಧಿಪತಿಯಾದ ಬಲಿ ಯಾವ ಪುಣ್ಯದಿಂದ ಹರಿಯ ಪಾದವನ್ನೂ ಅವನಲ್ಲಿ ಐಕ್ಯವನ್ನೂ ಹೇಗೆ ಪಡೆದ? ಎಲ್ಲ ಸಂದೇಹಗಳನ್ನು ದೂರಮಾಡಬಲ್ಲ ನೀನು ವಿಸ್ತಾರವಾಗಿ ಹೇಳು. ಕವಿಯ ಬಾಯಲ್ಲಿ ಹೊರಹೊಮ್ಮುವ ಕಾವ್ಯ ಹೆಜ್ಜೆ ಹೆಜ್ಜೆಗೂ ಹೊಸದಾಗೇ ಕಾಣುತ್ತದೆ, ಆಶ್ಚರ್ಯ.'

**ಶ್ರೀನಾರಾಯಣಮುನಿ:-** 'ನಾರದ, ನಾನು ಹಿಂದೆ ಗಂಧಮಾದನ ಪರ್ವತದಲ್ಲಿ ಬ್ರಹ್ಮನ ಮುಖದಿಂದ ಕೇಳಿದ ಪುರಾತನ ಇತಿಹಾಸವನ್ನು ಹೇಳುತ್ತೇನೆ, ಕೇಳು. ಪಾದ್ಮಕಲ್ಪದಲ್ಲಿ ನಡೆದ ಈ ವೃತ್ತಾಂತ ನಾರಾಯಣಕಥೆಯಿಂದ ಕೂಡಿ ಮನೋಹರವಾಗಿದೆ. ಕರ್ಣಾಮೃತವಾಗಿದೆ. ಆ ಪಾದ್ಮಕಲ್ಪದಲ್ಲಿ ನೀನು ಉಪಬರ್ಹಣ ಗಂಧರ್ವನಾಗಿದ್ದು ಕಲ್ಪಾಂತ ಆಯುಷ್ಯ ಹೊಂದಿ ಸಂಪತ್ತು ಸೌಂದರ್ಯ

ಸ್ಥಿರಯೌವನಗಳಿಂದ ಕೂಡಿದ್ದ. ಐವತ್ತು ಮಂದಿ ಹೆಂಡಿರನ್ನು ಮದುವೆಯಾಗಿ ಶೃಂಗಾರಲೋಲನಾಗಿದ್ದೆ. ಬ್ರಹ್ಮನ ವರದಿಂದ ಒಳ್ಳೆಯ ಕಂಠ, ಗಾನ ಕಲೆ ಸಿದ್ಧಿಸಿತ್ತು. ನಿನ್ನ ಸುಂದರ ಮುಖಕಮಲವನ್ನು ಆ ಹೆಂಡಿರು ಪ್ರತಿಕ್ಷಣ ಬಿಟ್ಟಕಣ್ಣುಗಳಿಂದ ಕುಡಿದು ಬಿಡುವಂತೆ ನೋಡುತ್ತಿದ್ದರು. ಕಾಮಬಾಣದಿಂದ ಪೀಡಿತರಾಗುತ್ತಿದ್ದರು. ಅವರ ಪ್ರಾಣಗಳು ನಿನ್ನಲ್ಲಿದ್ದುವು. ಹಗಲುರಾತ್ರಿ ನಿನ್ನ ಜೊತೆಗೇ ಅವರು ಇರುತ್ತಿದ್ದರು. ನಿನ್ನ ಹೊರತು ಅವರು ಬದುಕುತ್ತಿರಲಿಲ್ಲ. ಹೂದೋಟದ ಮನೋಹರ ಏಕಾಂತ ಪ್ರದೇಶಗಳಲ್ಲಿ ಪರ್ವತಗುಹೆಗಳಲ್ಲಿ ನದಿಗಳಲ್ಲಿ ಮನಬಂದಂತೆ ಅವರು ನಿನ್ನೊಡನೆ ರಮಿಸುತ್ತಿದ್ದರು. ಮುಂದೆ ದೈವಾತ್ ಬ್ರಹ್ಮನ ಶಾಪದಿಂದ ನೀನು ದಾಸೀಸುತನಾಗಿ ಜನಿಸಿದೆ. ಆಗ ವಿಷ್ಣುಭಕ್ತರ ಉಚ್ಚಿಷ್ಟವನ್ನು ಉಂಡುದರ ಪರಿಣಾಮವಾಗಿ ಈಗ ಬ್ರಹ್ಮಪುತ್ರನಾಗಿ ಜನಿಸಿರುವೆ. ಅಸಂಖ್ಯಕಲ್ಪಕಾಲ ಜೀವಿಸುವ ವಿಷ್ಣುಭಕ್ತೋತ್ತಮ ನೀನು. ಜ್ಞಾನದೃಷ್ಟಿಯಿಂದ ಎಲ್ಲವನ್ನೂ ನೋಡಬಲ್ಲವ. ಶಿವನ ಪ್ರಿಯಶಿಷ್ಯ. ಆ ಪದ್ಮಕಲ್ಪದ ವೃತ್ತಾಂತವನ್ನು ಹೇಳುತ್ತೇನೆ ಕೇಳು. ಆ ದೈತ್ಯನ ಕಥೆ ಕೇಳಲು ಕಿವಿಗಳಿಗೆ ಅಮೃತದಂತಿದೆ. ವಿಸ್ತಾರವಾಗಿ ಹೇಳುತ್ತೇನೆ.

ಒಮ್ಮೆ ಬಲಿಪುತ್ರ ಸಾಹಸಿಕ ದೇವತೆಗಳನ್ನು ಗೆದ್ದು ಗಂಧಮಾದನದಲ್ಲಿ ರತ್ನ ಸಿಂಹಾಸನದಲ್ಲಿ ಮಂಡಿಸಿದ್ದ. ಮೈಎಲ್ಲ ಶ್ರೀಗಂಧ ಲೇಪಿಸಿಕೊಂಡು ರತ್ನಾಭರಣ ತೊಟ್ಟು ಕುಳಿತಿದ್ದ. ಸುತ್ತಲೂ ದೊಡ್ಡ ಸೈನ್ಯವಿತ್ತು. ಆಗ ಆ ದಾರಿಯಾಗಿ ತಿಲೋತ್ತಮೆ ಎಂಬ ಶ್ರೇಷ್ಠ ಅಪ್ಸರೆ ಬಂದಳು. ಸಂಪಿಗೆ ಬಣ್ಣದ ಮೈ ಕಾಂತಿಯವಳು. ನವಯೌವನ ಸಂಪನ್ನೆ. ರತ್ನಾಭರಣಭೂಷಿತೆ, ಕಾಮಬಾಣ ಪೀಡಿತೆ. ಮಂದಹಾಸಯುಕ್ತ ಪ್ರಸನ್ನಮುಖದವಳು. ದಿವ್ಯವಸ್ತ್ರ ಉಟ್ಟು ರತ್ನಾಭರಣ ತೊಟ್ಟು ಓರೆಗಣ್ಣಿಂದ ನೋಡುತ್ತ ಗಜಗಮನೆ ನಡೆದು ಬಂದಳು. ಗಾಳಿಗೆ ಅವಳು ಉಟ್ಟ ಬಟ್ಟೆ ಅಸ್ತವ್ಯಸ್ತವಾಗಿ ಅವಳ ಸ್ತನ ತೊಡೆ ಮುಖಗಳನ್ನು ಕಂಡ ಯುವಕನಾದ ಸಾಹಸಿಕ ಮೈಮರೆತ. ಅವಳೂ ಸುಂದರನಾದ ಆ ಯುವಕನನ್ನು ಕಂಡಳು. ನವಯೌವನದಿಂದ ಕಂಗೊಳಿಸುತ್ತ ಅರಳಿದ ಜಾಜಿಹೂಮಾಲೆ ತೊಟ್ಟು ಶರತ್ಕಾಲದ ಚಂದ್ರನಂಥ ಮುಖದಿಂದ ಮುಗುಳನಗು ಸೂಸುತ್ತಿದ್ದ ಸಾಹಸಿಕ. ತಿಲೋತ್ತಮೆ ಅಚ್ಚರಿಯ, ಬಯಕೆಯ ಕಣ್ಣಿಂದ ಕಟಾಕ್ಷ ಬೀರಿ ಚಂದ್ರನೊಡನೆ ವಿಹರಿಸಲು ಚಂದ್ರಲೋಕಕ್ಕೆ ಹೊರಟವಳು ಏನೋ ನೆಪಮಾಡಿ ನಿಂತಳು. ಶೃಂಗಾರಲೋಲಳಾಗಿ ಪುನಃ ಪುನಃ ಅವನನ್ನು ಓರೆಗಣ್ಣಿಂದ ನೋಡುತ್ತ ಸೆರಗಿಂದ ಮುಖ ಮುಚ್ಚಿಕೊಂಡಳು. ಚಂದ್ರನನ್ನು ಮರೆತಳು. ನೀತಿಗೆಟ್ಟ ಹೆಣ್ಣಿನ ಮನಸ್ಸೇ ಬಲು ವಿಚಿತ್ರ. ಅದನ್ನು ಯಾರಿಗೂ ತಿಳಿಯಲಾಗದು.

ಕುಲಟೆಯರನ್ನು ನಂಬುವುದು ವಿಧಿಯ ವಿಡಂಬನೆ. ಅದರಿಂದ ಯಶಸ್ಸು, ಧರ್ಮಗಳು ಹಾಳಾಗುವುವು. ಕುಲದಿಂದ ಬಹಿಷ್ಕಾರ ಉಂಟಾಗುವುದು. ಅವಳಿಗೆ ಹೊಸಬನೊಬ್ಬ ಸಿಕ್ಕಿದರೆ ಹಳಬನನ್ನು ಮರೆತು ಬಿಡುವಳು. ಅವಳನ್ನು ಒಲಿಸಿ ವಶದಲ್ಲಿ ಇಟ್ಟುಕೊಳ್ಳುವುದು ಆಗದ ಮಾತು. ಅವಳಿಗೆ ದೇವಕಾರ್ಯ ಪಿತೃಕಾರ್ಯಗಳು ಬೇಡ. ಮಕ್ಕಳು ಬೇಡ, ಬಂಧುಗಳು ಬೇಡ. ಸದಾ ಶೃಂಗಾರದಲ್ಲಿ ಆಸಕ್ತವಾದ ಅವಳ ಮನಸ್ಸಿನ ಆಲೋಚನೆಗಳು ಭಯಂಕರ. ಶೃಂಗಾರಕಲಾಭಿಜ್ಞನನ್ನು

ಅಮೃತಪೂರ್ಣ ದೃಷ್ಟಿಯಿಂದ ನೋಡುತ್ತಾಳೆ. ಅರಸಿಕನಾದವ ಒಳ್ಳೆಯ ವಿದ್ವಾಂಸನಿರಲಿ, ಉದಾರದಾನಿ ಇರಲಿ, ಅವನು ಬೇಡ. ವಿಷಪೂರಿತವಾದ ದೃಷ್ಟಿಯಿಂದಲೆ ಅವನನ್ನು ಕಾಣುತ್ತಾಳೆ.

ಎಲ್ಲರಿಗೂ ಪ್ರಪಂಚದಲ್ಲಿ ಒಂದು ನಿರ್ದಿಷ್ಟ ಸ್ಥಳವಿರುತ್ತದೆ. ಕುಲಟೆಗೆ ಒಂದು ಸ್ಥಳವೆಂದಿಲ್ಲ. ಎಲ್ಲರಿಗೂ ಎಲ್ಲ ಭೋಗ ಅನುಭವಿಸಿದ ಬಳಿಕ ಮೋಕ್ಷವಿದೆ. ನೀತಿಗೆಟ್ಟ ಹೆಣ್ಣಿಗೆ ಮೋಕ್ಷವಿಲ್ಲ. ಬೇರೆ ಸ್ತ್ರೀಯರಿಗೆ ಒಂದು ಕ್ರಿಮಿಯನ್ನು ಕೊಲ್ಲುವಲ್ಲಿ ಉಂಟಾಗಬಹುದಾದ ದಯೆ ನೀತಿಗೆಟ್ಟವಳಿಗೆ ಅವಳ ಹಿಂದಿನ ಪತಿಯನ್ನು ಕೊಲ್ಲುವಲ್ಲಿ ಇಲ್ಲ. ರಸಿಕನಾದ ಹೊಸಸಿಕ್ಕಿದರೆ ಹಳಬನನ್ನು ಉಪಾಯವಾಗಿ ಅನಾಯಾಸದಿಂದ ಕೊಂದು ಬಿಡುವಳು. ಅವಳಿಗೆ ಆತ ವಿಷತುಲ್ಯನೆನಿಸುತ್ತಾನೆ. ಭೂಮಿಯಲ್ಲಿ ಉಂಟಾಗುವ ಎಲ್ಲ ಪಾಪಗಳೂ ನೀತಿಗೆಟ್ಟ ಹೆಣ್ಣಿನಲ್ಲಿರುತ್ತವೆ. ಅವಳಿಗಿಂತ ಪಾಪಿಷ್ಠೆ ಯಾರೂ ಇಲ್ಲ. ಅವಳು ಪಾಕಮಾಡಿದ ಅನ್ನ ಎಲ್ಲ ಪಾಪಗಳಿಂದ ತುಂಬಿರುತ್ತದೆ. ಅವಳು ಕೊಡುವ ನೀರೂ ಅಷ್ಟೇ. ದೇವಕಾರ್ಯದಲ್ಲಾಗಲಿ ಪಿತೃಕಾರ್ಯದಲ್ಲಾಗಲಿ ದಾನಕ್ಕೆ ಯೋಗ್ಯವಲ್ಲ. ಆ ಅನ್ನನೀರು ಮಲಮೂತ್ರ ಸಮಾನ. ದೇವತೆಗಳಿಗೆ ಪಿತೃಗಳಿಗೆ ಕೊಟ್ಟರೆ ಉಂಡರೆ ನರಕ ಉಂಟಾಗುವುದು. ನೂರುವರ್ಷ ಕಾಲ ಕಾಲಸೂತ್ರ ಎಂಬ ನರಕದಲ್ಲಿ ಘೋರ ಅಂಧಕಾರದಲ್ಲಿ ಅವನನ್ನು ಕ್ರಿಮಿಗಳು ಹಗಲು ರಾತ್ರಿ ಕಚ್ಚುತ್ತವೆ. ಏಳು ಜನ್ಮದ ಪುಣ್ಯ ನಾಶವಾಗುತ್ತದೆ. ಆಯುಷ್ಯ ಸಂಪತ್ತು ಕೀರ್ತಿ ಎಲ್ಲವೂ ನಶಿಸುವುದು. ಆದರಿಂದ ಅನ್ನಪಾಕ ಮಾಡುವ ಪತ್ನಿಯ ಚಾರಿತ್ರ್ಯವನ್ನು ಸಕಲ ಪ್ರಯತ್ನಗಳಿಂದ ಕಾಪಾಡಬೇಕು.

ತೀರ್ಥಯಾತ್ರೆಗೆ ಹೊರಟಾಗ ವೇಶ್ಯೆಯ ದರ್ಶನವಾದರೆ ಶುಭಶಕುನ. ಯಾತ್ರೆ ನಿರ್ವಿಘ್ನವಾಗಿ ಕೈಗೂಡುವುದು. ಆದರೆ ಅವಳ ಸ್ಪರ್ಶಮಾಡಿದರೆ ಆ ಪಾಪಪರಿಹಾರಕ್ಕೆ ಬೇರೆ ತೀರ್ಥಯಾತ್ರೆ ಮಾಡಬೇಕಾಗುವುದು. ಅವಳು ಮಾಡುವ ಸ್ನಾನ ದಾನ ವ್ರತ ಜಪ ದೇವಪೂಜೆ ಭಾರತಭೂಮಿಯಲ್ಲಿ ವಾಸಮಾಡುವುದು ಎಲ್ಲವೂ ನಿಷ್ಫಲ. ನಾರದ, ಕುಲಟೆಯ ಆಖ್ಯಾನ ಗಹನ. ಶಾಸ್ತ್ರಾನುಸಾರ ಅದನ್ನು ಹೇಳಿದ್ದೇನೆ. ಇನ್ನು ಪ್ರಕೃತವಾದ ತಿಲೋತ್ತಮಾ ಸಾಹಸಿಕರ ಸಂವಾದವನ್ನು ಹೇಳುತ್ತೇನೆ ಕೇಳು.

ತಿಲೋತ್ತಮೆಯನ್ನು ಕಂಡು ಮೈಮರೆತ ಸಾಹಸಿಕ ಬಳಿಕ ಚೇತರಿಸಿಕೊಂಡು ಕಾಮಾತುರನಾಗಿ ಉನ್ಮತ್ತನಾಗಿ ಆ ಕುಲಟೆಯ ಬಳಿಗೆ ಹೋಗಿ ಮಾತನಾಡಿಸಿದ.

'ಸುಂದರಿ, ನೀನಾರು? ಯಾರ ಮಗಳು? ಯಾರ ಪ್ರೇಯಸಿ? ಎಲ್ಲಿಗೆ ಹೋಗುತ್ತಿರುವೆ? ನಿನ್ನನ್ನು ಒಲಿಸಿಕೊಂಡ ಆ ಪುಣ್ಯವಂತನಾರು? ಆತ ನಿನ್ನನ್ನು ಪಡೆಯಲು ಹಿಂದೆ ಕಲ್ಪಾಂತ್ಯದವರೆಗೂ ತಪಸ್ಸು ಮಾಡಿ ಪುನೀತನಾಗಿರಬೇಕು. ನೀನು ಅವನ ಬಳಿಗೆ ಹೋಗುವಿಯಾದರೆ ಹೋಗು. ಆದರೆ ಮೊದಲಿಗೆ ನನ್ನನ್ನು ನಿನ್ನ ದಾಸನನ್ನಾಗಿ ಮಾಡಿಕೊಳ್ಳು. ರತಿಸುಖವೆಂಬ ಹಣವನ್ನು ತೆತ್ತು ನನ್ನನ್ನು ಕೊಂಡುಕೊಳ್ಳು. ನೀನು ಶೃಂಗಾರ ಲೋಲಳು. ನನಗೂ ಶೃಂಗಾರಸುಖ ನೀಡು. ನಿನ್ನ ಆಲಿಂಗನ ನನಗೆ ಆ ವಿಧಿಯೆ ಕಲ್ಪಿಸಿದಂತಿದೆ. ಅದರಿಂದ ನನ್ನನ್ನು ನಿರಾಕರಿಸಲು ಕಾರಣವಿಲ್ಲ. ನಗುತ್ತ ಅಮೃತದಂಥ ಸವಿನುಡಿ ನುಡಿ, ಸುಂದರಿ! ಬಳ್ಳಿ ತೋಳುಗಳಿಂದ ನನ್ನನ್ನು ಏಕಾಂತದಲ್ಲಿ ಬಿಗಿದು ಬಂಧಿಸು. ತೀಕ್ಷ್ಣವಾದ ಕಡೆಗಣ್ಣ ನೋಟದಿಂದ ನನ್ನನ್ನು ಜರ್ಜರಿತನನ್ನಾಗಿ

ಮಾಡು. ಕಾಮನೆಂಬ ಸರ್ಪದ ಕಡಿತಕ್ಕೆ ಸಿಕ್ಕಿದ ನನ್ನನ್ನು ಪಾದಸ್ಪರ್ಶದಿಂದ ಬದುಕಿಸು. ಹಸಿದಿರುವ ನನಗೆ ಸವಿಯಾದ ನಿನ್ನ ಅಧರಾಮೃತ ಉಣಿಸು. ಮಾಗಿದ ದಾಳಿಂಬೆ ಬೀಜದಂತಹ ನಿನ್ನ ದಂತಗಳನ್ನು ತೋರು. ಗಭೀರವಾದ ನಾಭಿಯನ್ನು, ತ್ರಿವಳಿಯನ್ನು, ಶರತ್ಕಾಲದ ಮಧ್ಯಾಹ್ನದ ತಾವರೆಯಂಥ ಮುಖವನ್ನು ತೋರು.'

ತಿಲೋತ್ತಮೆ ನುಡಿದಳು. 'ಕಾಮಿನಿಯರಿಗೆ ಪತಿ ಎಂದರೆ ನಿನ್ನಂತಿರಬೇಕು. ನೀನು ಶೃಂಗಾರಕಲೆಯಲ್ಲಿ ನಿಪುಣನಾದ ರೂಪಗುಣಶಾಲಿಯಾದ ಧರ್ಮಿಷ್ಠನಾದ ಬಲಿಪುತ್ರ. ಕಾಮಶಾಸ್ತ್ರ ವಿಶಾರದ. ಸ್ತ್ರೀಯರಿಗೆ ಸ್ವಾಭಾವಿಕವಾಗಿ ಆಕರ್ಷಕ. ಒಳ್ಳೆಯ ವೇಷ ಧರಿಸಿರುವೆ. ಸುಂದರ, ಆರೋಗ್ಯಪೂರ್ಣ, ಯುವಕ, ರಸಿಕ, ಶುಚಿ, ಬಲಿಷ್ಠ. ಇಂಥ ಪುರುಷ ತಾನೆ ಬಯಸಿ ಬಂದಾಗ ಕಾಮಿನಿ ಅವನನ್ನು ಬಿಡುವುದುಂಟೆ? ನಿನ್ನನ್ನು ಒಲ್ಲದ ಸ್ತ್ರೀಯರು ಬುದ್ಧಿ ಇಲ್ಲದವರು, ಭಾಗ್ಯದಿಂದ ವಂಚಿತರೆ ಸರಿ. ನಿನಗೆ ಸುಖ ನೀಡುತ್ತೇನೆ, ಆದರೆ ಈಗಲೆ ಅಲ್ಲ, ಚಂದ್ರನ ಮನೆಯಿಂದ ಹಿಂತಿರುಗಿ ಬಂದಾಗ. ನಾನೀಗ ಅವನ ಪ್ರೇಯಸಿ, ಅವನೆಡೆಗೆ ಹೋಗುತ್ತಿದ್ದೇನೆ. ಅನ್ಯರನ್ನು ಆಲಿಂಗಿಸಲಾರೆ. ಹಾಗೆ ಮಾಡಿದರೆ ಧರ್ಮವನ್ನು ಮೀರಿದಂತಾಗುವುದು, ಧರ್ಮವನ್ನು ಕಾಪಾಡದವರು ಬದುಕಿರುವುದೆ ವ್ಯರ್ಥ. ಚಂದ್ರನ ಆಲಿಂಗನಸುಖವನ್ನು ಕಂಡರಿಯದ ಸ್ತ್ರೀಯರು ಬುದ್ಧಿಶೂನ್ಯರು. ಅಂಥ ಪುರುಷನ ಆಲಿಂಗನಸುಖವರಿಯದ ಸ್ತ್ರೀಯರಿಗೂ ತಾಯ ಹೊಟ್ಟೆಯಲ್ಲಿರುವ ಶಿಶುಗಳಿಗೂ ಏನು ವ್ಯತ್ಯಾಸವಿಲ್ಲ. ಅಶ್ವಿನೀ ದೇವತೆಗಳು, ಮನ್ಮಥ, ಚಂದ್ರ, ಇಂದ್ರ, ನಳಕೂಬರ ಇವರ ಆಲಿಂಗನ ಪಡೆಯದ ಸ್ತ್ರೀಯರು ರತಿಸುಖದಿಂದ ವಂಚಿತರೆಂದೇ ಹೇಳಬೇಕು. ಅವರು ಮಾಡುವ ರತಿಕ್ರೀಡೆಯನ್ನೆ ನನ್ನ ಮನಸ್ಸು ಹಗಲು ರಾತ್ರಿ ಎನ್ನದೆ ಸದಾ ಚಿಂತಿಸುತ್ತದೆ. ವಿಶೇಷವಾಗಿ ಮನ್ಮಥ ರತಿಕ್ರೀಡೆಯಲ್ಲಿ ನಿಪುಣ. ಹಾಗೇ ಚಂದ್ರನ ಶೃಂಗಾರಲೀಲೆ, ಆಲಿಂಗನ ಮಾತುಕತೆಗಳು ಅಮೃತಕ್ಕಿಂತ ಹೆಚ್ಚಿನವು. ಇಂದು ಅವನೊಡನೆ ನಾನು 'ರಮಿಸುವ ದಿನ. ಆದರಿಂದ ನನ್ನ ಮನಸ್ಸು ಅದನ್ನೆ ಚಿಂತಿಸುತ್ತಿದೆ.'

ತಿಲೋತ್ತಮೆಯ ಮಾತು ಕೇಳಿ ಬಲಿಪುತ್ರ ನಕ್ಕು ಕೇಳಿದ - 'ಅತ್ಯುತ್ತಮ ಸೃಷ್ಟಿ ಎಂದರೆ ಹೇಗಿರಬಹುದೆಂಬ ಕುತೂಹಲದಿಂದ ಬ್ರಹ್ಮ ನಿನ್ನನ್ನು ಸೃಷ್ಟಿಸಿದ. ಆದರಿಂದ ಅಪ್ಸರೆಯರಲ್ಲಿ ನೀನೆ ಶ್ರೇಷ್ಠಳು. ರಸಿಕರಲ್ಲಿ ಅಗ್ರಗಣ್ಯಳು. ಸುಂದೋಪಸುಂದರನ್ನು ನಾಶ ಮಾಡುವ ಉದ್ದೇಶದಿಂದ ಪ್ರಯತ್ನಪೂರ್ವಕವಾಗಿ ಬ್ರಹ್ಮ ಎಲ್ಲ ಸೌಂದರ್ಯ ಗುಣಗಳನ್ನು ತುಂಬಿ ನಿನ್ನನ್ನು ನಿರ್ಮಿಸಿದ. ಶೃಂಗಾರ ಕಲೆಯಲ್ಲಿ ಸರ್ವಜ್ಞಳು ನೀನು. ನಿನ್ನ ಮನಸ್ಸಿನ ಮಾತನ್ನು ಹೇಳು. ಸಂತೋಷದಿಂದ ಅದನ್ನು ಕೇಳಬಯಸುತ್ತೇನೆ. ನಿನಗೆ ಅತ್ಯಂತ ಪ್ರಿಯನಾಗಬಲ್ಲ ವ್ಯಕ್ತಿ ಯಾರು? ಎಂಥ ಸ್ವಭಾವ ನಿನಗೆ ಇಷ್ಟ! ಗಂಧರ್ವರು ದೇವತೆಗಳು, ಚಕ್ರವರ್ತಿಗಳು ಮತ್ತು ಇತರ ಪುಣ್ಯವಂತರಿಗೆಲ್ಲರಿಗೂ ನೀನು ಪ್ರಾಣಕ್ಕೆ ಸಮಾನಳು. ನಿನಗೆ ಅವರಲ್ಲಿ ಯಾರು ಹೆಚ್ಚು ಪ್ರಿಯ?'

ಅಸುರನ ಮಾತು ಕೇಳಿ ತಿಲೋತ್ತಮೆ ನಕ್ಕು ಓರೆಗಣ್ಣಿಂದ ನೋಡುತ್ತ ಸೆರಗಿಂದ ಮುಖ ಮರೆಮಾಡಿ ಅತಿ ರಹಸ್ಯವಾದ ವಿದ್ವಾಂಸರಿಗೂ ತಿಳಿದಿರಲಾರದ ನಿಜಾಂಶವನ್ನು ಬಿಚ್ಚಿ ಹೇಳಿದಳು-

''ಸಾಹಸಿಕ, ಕುಲಟೆಯರ ಮನೋಗತವನ್ನು ಹೇಳಿದರೆ ಸ್ತ್ರೀಜಾತಿಗೇ ಉಪಹಾಸಕ್ಕೆ ಕಾರಣವಾಗುವುದು. ಸ್ತ್ರೀಯರ ನಡತೆಯನ್ನು ಯಾರಿಗೂ ತಿಳಿಯಲು ಅಸಾಧ್ಯ. ಅದರಲ್ಲಿಯೂ ವಿಶೇಷವಾಗಿ ಕುಲಟೆಯರ ಆಂತರ್ಯವನ್ನು ತಿಳಿಯುವುದು ಅತ್ಯಂತ ಅಶಕ್ಯ. ವಿದ್ವಾಂಸ ವೇದ ವೇದಾಂಗಗಳ ಶಾಸ್ತ್ರಾರ್ಥ ತಿಳಿಯಬಲ್ಲ. ದಿಕ್ಕು ಆಕಾಶಗಳಂತೆ ಸ್ತ್ರೀಯರ ಮನಸ್ಸನ್ನು ಪೂರ್ತಿ ತಿಳಿಯುವುದು ಶಕ್ಯವಿಲ್ಲ. ಕುಲಟೆಗೆ ವೃದ್ಧನೆಂದರೆ ವಿಷಕ್ಕಿಂತ ಕಡೆ. ಯುವಕ ರತ್ನಕ್ಕಿಂತ ಮಿಗಿಲು. ಅವನು ಅವಳ ಸರ್ವಸ್ವವನ್ನು ಅಪಹರಿಸ ಬಂದನೆಂದರೆ ಪ್ರಾಣಕ್ಕಿಂತಲೂ ಮಿಗಿಲೆನಿಸುತ್ತಾನೆ. ಸುಂದರನಾದ ಯುವಕನನ್ನು ಕಂಡರೆ ಅವಳು ವ್ಯಾಕುಲಳಾಗುತ್ತಾಳೆ. ಅವನು ಒಳ್ಳೆಯ ವೇಷದಲ್ಲಿ ಬಂದರೆ ನೋಡಿದ ಮಾತ್ರಕ್ಕೆ ಮೈಮರೆಯುತ್ತಾಳೆ. ಎವೆಯಿಕ್ಕದ ಕಣ್ಣುಗಳಿಂದ ಕುಡಿದು ಬಿಡುವಂತೆ ನೋಡುತ್ತಾಳೆ. ಮೈಯೆಲ್ಲ ನಡುಗುತ್ತದೆ. ನಿಶ್ಚೇಷ್ಟವಾಗುತ್ತದೆ. ಕಾಮಾಗ್ನಿಯಿಂದ ಸುಡುತ್ತದೆ. ಏಕಾಂತದಲ್ಲಿ ಅವನು ಸಿಕ್ಕಿದರೆ ಸಂಕೋಚವಿಲ್ಲದೆ ಮಾತನಾಡಿಸುತ್ತಾಳೆ. ಓರೆಗಣ್ಣಿಂದ ನೋಡುತ್ತ ಮುಗುಳು ನಗು ನಗುತ್ತಾಳೆ. ಆಗಲೂ ಆತ ಜಿತೇಂದ್ರಿಯನಾಗಿದ್ದು ವಶಕ್ಕೆ ಬಾರದಿದ್ದರೆ ತನ್ನ ಅಂಗಗಳನ್ನು ತೋರಿ ಮನೋಗತವನ್ನು ಬಿಚ್ಚಿ ಹೇಳುತ್ತಾಳೆ. ಕೊನೆಗೂ ಆತ ವಶನಾಗದಿದ್ದರೆ ಜನ್ಮಜನ್ಮಕ್ಕೂ ಅದನ್ನು ನೆನೆದು ಕೊರಗುತ್ತಾಳೆ. ಆದರೆ ಅಂಥವನಿನ್ನೊಬ್ಬ ದೊರೆತರೆ ಹಿಂದಿನವನನ್ನು ಮರೆತು ಬಿಡುತ್ತಾಳೆ. ಕುಲಟೆಗೆ ಅಪ್ರಿಯ ಯಾರು? ಪ್ರಿಯ ಯಾರು? ಶೃಂಗಾರದಲ್ಲಿ ನಿಪುಣನಾದವ ಪ್ರಾಣಕ್ಕಿಂತ ಹೆಚ್ಚು ಪ್ರಿಯ. ಹೊಸಬನೊಬ್ಬ ದೊರೆತರೆ ಹಿಂದಿನ ಪ್ರಿಯಕರನನ್ನೂ ಪತಿ ಪುತ್ರ ಸೋದರ ತಂದೆ ಮುಂತಾದವರೆಲ್ಲರನ್ನೂ ತೊರೆದು ಬಿಡುತ್ತಾಳೆ. ಅವಳಿಗೆ ಅದೇನೂ ಕಷ್ಟಕರವಲ್ಲ.

ಧನಗೌರವಗಳನ್ನು ನೀಡುವುದರಿಂದಾಗಲಿ ಹೊಗಳಿಕೆಯಿಂದಾಗಲಿ ಉಪಕಾರ ದಿಂದಾಗಲಿ ಪ್ರೀತಿಯಿಂದಾಗಲಿ ಕುಲಟೆಯ ಹೃದಯವನ್ನು ಗೆಲ್ಲಲಾಗದು. ಕೇವಲ ಶೃಂಗಾರ ಕಲಾ ನೈಪುಣ್ಯಕ್ಕೇ ಅವಳು ಒಲಿಯುವಳು. ಮಲಗುವಾಗಲೂ ಉಣ್ಣುವಾಗಲೂ ಕನಸು ನೆನಸುಗಳಲ್ಲಿ ಹಗಲುರಾತ್ರಿ ಅವಳು ಚಿಂತಿಸುವುದು ಪುರುಷನ ಆಲಿಂಗನ ಸುಖವನ್ನೇ. ಇದು ಎಲ್ಲ ಕುಲಟೆಯರ ಸಾಧಾರಣ ನಡತೆ. ಇನ್ನು ನನ್ನ ಮನೋಗತವನ್ನು ಹೇಳುತ್ತೇನೆ. ಅದು ರಹಸ್ಯ! ಯಾರಿಗೂ ಹೇಳಬೇಡ. ನನಗೆ ಗಂಧರ್ವರಲ್ಲಿ ದೇವತೆಗಳಲ್ಲಿ ಬಹು ಮಂದಿ ಶೃಂಗಾರ ಕಲೆಯಲ್ಲಿ ಶೂರರಾದ ಯುವಕರು ಪ್ರಿಯರಾಗಿದ್ದಾರೆ. ವಿಶೇಷವಾಗಿ ಚಂದ್ರನಲ್ಲಿ ನನಗೆ ಹೆಚ್ಚು ಪ್ರೀತಿ. ಇನ್ನೊಬ್ಬ ಎಲ್ಲರಿಗಿಂತ ಹೆಚ್ಚು ಪ್ರಿಯ ಮನ್ಮಥ. ಮನ್ಮಥನಿಗೆ ಸಮಾನನಾದ ಪ್ರಿಯಕರ ನನಗೆ ಇನ್ನೊಬ್ಬ ಹಿಂದೆ ಇರಲಿಲ್ಲ. ಮುಂದೆಯೂ ಬರಲಾರ. ಅವನನ್ನು ನೆನೆಸಿದರೆ ಸಾಕು ನನ್ನ ಮನಸ್ಸು ಪ್ರೇಮ ವಿಹ್ವಲವಾಗುವುದು. ಇದಿಷ್ಟು ನನ್ನ ಬಗ್ಗೆ ಮತ್ತು ಕುಲಟೆಯರ ಬಗ್ಗೆ ಹೇಳಿದ್ದೇನೆ. ನಾನಿನ್ನು ಚಂದ್ರನ ಬಳಿಗೆ ಹೋಗುತ್ತೇನೆ ಅನುಮತಿ ನೀಡು. ಚಂದ್ರಲೋಕದಿಂದ ಹಿಂತಿರುಗಿ ಬಂದು ನಾನು ನಿನಗೆ ಸುಖ ನೀಡುತ್ತೇನೆ. ಅದರಲ್ಲಿ ಸಂಶಯ ಬೇಡ.'

ಬಲಿಪುತ್ರ ಇದನ್ನು ಕೇಳಿ ಒಂದೇ ಸಮನೆ ನಗಲು ತೊಡಗಿದ. ಅವಳೂ ಓರೆಗಣ್ಣಿಂದ ನೋಡುತ್ತ ಕಾಮಾತುರಳಾಗಿ ನಕ್ಕಳು. ಏನೋ ನೆಪಮಾಡಿ ಸಂಪಿಗೆ

ಬಣ್ಣದಿಂದ ಶೋಭಿಸುವ ದುಂಡಾದ ಸ್ತನಗಳನ್ನೂ ತೋರಿದಳು. ಮೈ ರೋಮಾಂಚಗೊಂಡು ಏಕಾಂತಕ್ಕೆ ಅವನನ್ನೊಯ್ದು ಕಣ್ಣುಗಳಿಂದ ತೃಪ್ತಿಯಾಗುವಷ್ಟು ನೋಡಿದಳು. ಬಹಳ ಕಾಮಾತುರಳಾಗಿದ್ದುದನ್ನು ಕಂಡು ನಿಪುಣನಾದ ಸಾಹಸಿಕ ಅವಳ ನಿಜವಾದ ಆಂತರ್ಯವನ್ನು ತಿಳಿಯಲು ಪ್ರಶ್ನಿಸಿದ.

'ಈಗ ನನ್ನನ್ನು ಏನು ಮಾಡುವಿ? ನಿಜ ಹೇಳು. ನಾನು ಬೇರೆ ಕೆಲಸ ಮಾಡಬೇಕಾಗಿದೆ. ಹೆಚ್ಚು ಹೊತ್ತು ನಿಲ್ಲಲಾರೆ. ಸ್ತ್ರೀಯರಲ್ಲಿ ಬಲಾತ್ಕಾರ ಧರ್ಮವಲ್ಲ. ಅದರಲ್ಲಿಯೂ ತಿಳಿದವರಾದ ನಮ್ಮ ಕುಲಕ್ಕೆ ಅದು ಉಚಿತವೂ ಅಲ್ಲ. ನನಗೆ ಶೃಂಗಾರ ಸುಖ ನೀಡು ಅಥವಾ ಚಂದ್ರನ ಬಳಿಗೆ ಹೋಗು. ನೀನು ಅನೇಕ ಪುರುಷರಿಗೆ ಬೇಕಾದವಳು. ಯಾರು ತಾನೆ ನಿನ್ನನ್ನು ವಶದಲ್ಲಿಟ್ಟುಕೊಳ್ಳಬಲ್ಲರು?' ದಾನವನ ಮಾತು ಕೇಳಿ ತಿಲೋತ್ತಮೆಯ ಗಂಟಲು, ತುಟಿ ಒಣಗಿದುವು. ಕಾಮಬಾಣಕ್ಕೆ ಸಿಲುಕಿ ತಾನು ಸೋತೆನೆಂದುಕೊಂಡಳು. ಉಪಾಯವಿಲ್ಲದೆ ಹೇಳಿದಳು -

'ನೀನು ಹೀಗೆ ಹೇಗೆ ಹೇಳುವಿ? ನನಗೆ ಪ್ರಾಣಕ್ಕಿಂತ ಹೆಚ್ಚು ಪ್ರಿಯ ನೀನು. ಕೋಪವೇಕೆ? ನಿನ್ನ ಇಷ್ಟದಂತೆ ಮಾಡು. ನಿನ್ನನ್ನು ಹೀಗೆ ನಿರಾಸೆಗೊಳಿಸಿ ಚಂದ್ರನ ಬಳಿಗೆ ನಾನು ಹೋದರೆ ನಿನ್ನ ಶಾಪದಿಂದ ನನಗೆ ಅಲ್ಲಿಯೆ ವಿಘ್ನ ಉಂಟಾದೀತು. ಅದರಿಂದ ನೀನು ನನ್ನೊಡನೆ ಈಗಲೆ ವಿಹಾರಮಾಡು. ಹರಿ ನಿನಗೆ ಶುಭ ಉಂಟು ಮಾಡುತ್ತಾನೆ. ಸ್ತ್ರೀಯ ಬಯಕೆಯನ್ನು ಈಡೇರಿಸಿದರೆ ಹೆಜ್ಜೆ ಹೆಜ್ಜೆಗೂ ಮಂಗಳ ಉಂಟಾಗುವುದು. ಅವಳನ್ನು ಅವಮಾನ ಮಾಡಿದರೆ ಪಾರ್ವತಿ ಪ್ರತಿಕ್ಷಣ ಅಶುಭ ಉಂಟುಮಾಡುವಳು.'

ತಿಲೋತ್ತಮೆಯ ಮಾತು ಕೇಳಿ ಸಾಹಸಿಕ ನಕ್ಕು ಅವಳ ಭಾವವನ್ನು ತಿಳಿದ. ಕಾಮಶಾಸ್ತ್ರ ವಿಶಾರದ ಆತ. ಅವಳ ಕೈ ಹಿಡಿದು ಬಿಗಿದಪ್ಪಿ ಮುಖವನ್ನು ಚುಂಬಿಸಿದ. ಅವಳೊಡನೆ ಗಂಧಮಾಧನಪರ್ವತದ ಒಂದು ಗುಹೆಯನ್ನು ಹೊಕ್ಕು ಅಲ್ಲಿ ಒಂದು ಏಕಾಂತ ನಿರ್ಜನ ಪ್ರದೇಶದಲ್ಲಿ ರತ್ನ ದೀಪಗಳನ್ನಿರಿಸಿ ಧೂಪವಿಟ್ಟು ರತಿಶಯ್ಯೆಯನ್ನು ಸಜ್ಜುಗೊಳಿಸಿ ಅವಳೊಡನೆ ಮಲಗಿದ. ನಾನಾ ಪ್ರಕಾರದ ಶೃಂಗಾರಲೀಲೆ ಮಾಡಿದ. ತಿಲೋತ್ತಮೆಗೆ ಈತ ಚಂದ್ರನಿಗಿಂತಲೂ ಮಿಗಿಲು ಎಂದೆನಿಸಿತು. ವಿಪರೀತ ರತಿಕ್ರೀಡೆಯಿಂದ ಸಂತುಷ್ಟಳಾಗಿ ಹಗಲುರಾತ್ರಿ ಎಂಬ ಭೇದವನ್ನೆ ತಿಳಿಯದೆ ಮೈಮರೆತು ಕ್ರೀಡಿಸಿದಳು. ತಬ್ಬಿಕೊಂಡು ನುಡಿದಳು -

'ನಾಥ, ನಿನ್ನ ಈ ಮುಖಚಂದ್ರನನ್ನು ತಿರುಗಿ ನಾನೆಂದು ನೋಡುವೆನೊ! ಇಂಥ ಶುಭದಿನ ಪುನಃ ಎಂದು ಬರುವುದೊ! ಅರೆ! ಎಂಥ ರೂಪ ಎಂಥ ಗುಣ ನಿನ್ನದು! ಶೃಂಗಾರ ನಿಪುಣನೆಂದರೆ ನೀನೆ ಸರಿ! ನಿನ್ನನ್ನು ಮೀರಿಸುವವ ಯಾರೂ ಇಲ್ಲ! ಆದರೆ ನೀನು ನನ್ನನ್ನು ಮರೆತುಬಿಡುವಿ. ಪುರುಷರೆ ಹೀಗೆ, ದುಂಬಿಗಳಂತೆ, ಬೇರೆ ಬೇರೆ ಸ್ತ್ರೀಯರ ಬಳಿಗೆ ಹೋಗುತ್ತಾರೆ. ಸ್ತ್ರೀಯರಿಗೆ ಪುರುಷನ ಆಲಿಂಗನಸುಖ ಅವರು ಬದುಕಿರುವಷ್ಟೂ ಕಾಲ ನೆನಪಿನಲ್ಲಿರುತ್ತದೆ. ಪುಣ್ಯವಂತರಿಗೆ ಅವರ ಪುಣ್ಯದಿಂದ ಒಳ್ಳೆಯ ದಿನದಲ್ಲಿ ಒಳ್ಳೆಯ ಕೂಟ ಲಭಿಸುತ್ತದೆ. ಒಳ್ಳೆಯ ಕೂಟ ಸುಖಮಯ. ಕೆಟ್ಟಕೂಟ ವಿಷಕ್ಕಿಂತಲೂ ಕೆಟ್ಟದು. ಒಂದು ಕ್ಷಣ ತಡೆ. ಪುನಃ ಆಲಿಂಗನ ನೀಡು. ನೀನು ಹೋದರೆ ಜೊತೆಗೆ ನನ್ನ ಪ್ರಾಣವೂ ಹೃದಯವೂ ಹೊರಟು ಹೋಗುವುವು.'

ಹೀಗೆ ಹೇಳಿ ತಿಲೋತ್ತಮೆ ಸಾಹಸಿಕನನ್ನು ಅಪ್ಪಿಕೊಂಡು ಸುಖದಲ್ಲಿ ಮೈ ಮರೆತಳು. ಸಾಹಸಿಕನ ಕಾಮಲಾಲಸೆ ಇನ್ನೂ ಹೆಚ್ಚಿತು, ಹವಿಸ್ಸನ್ನು ಹಾಕಿದಂತೇ ಅಗ್ನಿ ಇನ್ನೂ ಹೆಚ್ಚು ಉರಿಯುವಂತೆ. ಪುನಃ ಅಷ್ಟವಿಧ ಶೃಂಗಾರ, ನವವಿಧ ಚುಂಬನಗಳನ್ನೂ ನಖಕ್ಷತ ದಂತಕ್ಷತಗಳನ್ನೂ ಮಾಡುತ್ತ ನಾನಾ ಬಗೆಯ ರತಿಕ್ರೀಡೆ ನಡೆಯಿತು. ಕೈ ಬಳೆ ಕಾಲುಗೆಜ್ಜೆಗಳ ಧ್ವನಿ ಹೆಚ್ಚಿತು. ಸಮೀಪದಲ್ಲಿಯೆ ಧ್ಯಾನಾಸಕ್ತನಾಗಿ ಕುಳಿತಿದ್ದ ದುರ್ವಾಸಮುನಿ. ಅವನ ಮೈಯೆಲ್ಲ ಹುತ್ತ ಬೆಳೆದಿತ್ತು. ಯೋಗಾಸನದಲ್ಲಿ ಕುಳಿತು ಕೃಷ್ಣಪರಮಾತ್ಮನ ಪಾದಕಮಲಗಳನ್ನು ಧ್ಯಾನಿಸುತ್ತಿದ್ದ ಆತ. ಪ್ರಣಯಿಗಳ ದೃಷ್ಟಿ ಸಮೀಪದಲ್ಲಿಯೆ ಕುಳಿತಿದ್ದ ಆ ಮಹಾಮುನಿಯ ಕಡೆಗೆ ಹೋಗಲೆ ಇಲ್ಲ. ಅಷ್ಟೂ ಮೈಮರೆತಿದ್ದರು ಅವರು. ಮುನಿಗೆ ಧ್ಯಾನಭಂಗವಾಯಿತು. ಎಚ್ಚೆತ್ತು. ಕಣ್ಣಮುಂದೇ ಅವರನ್ನು ಕಂಡು ಕುಪಿತನಾದ. ಧ್ಯಾನದಲ್ಲಿ ಕೃಷ್ಣನ ಪಾದಕಮಲ ಕಣ್ಣಿಗೆ ಕಾಣಿಸಿತ್ತು. ಅದು ಈಗ ಮರೆಯಾಯಿತೆಂದು ಆತ ಉದ್ವಿಗ್ನಗೊಂಡು ಶಪಿಸಿದ -

'ಎದ್ದೇಳು, ಕತ್ತೆಯಂತಿರುವ ಪುರುಷಾಧಮ, ಭಕ್ತರಲ್ಲಿ ಶ್ರೇಷ್ಠನಾದ ಬಲಿಗೆ ಪಶುವಿನಂತಿರುವ ನಿನ್ನಂಥ ಮಗ ಹುಟ್ಟಿದನೆ? ದೇವ ಮಾನವ ದೈತ್ಯ ಗಂಧರ್ವ ರಾಕ್ಷಸರು ಯಾರೆ ಇರಲಿ ತಮ್ಮ ಜಾತಿಯವರ ಮುಂದೆ ರತಿಕ್ರೀಡೆ ಮಾಡಲು ಲಜ್ಜೆ ಪಡುತ್ತಾರೆ. ಪಶುಗಳಿಗೆ, ಅದರಲ್ಲಿಯೂ ಕತ್ತೆಯ ಜಾತಿಗೆ ಲಜ್ಜೆ ಇಲ್ಲ. ಅದರಿಂದ ಕತ್ತೆಯಾಗಿಯೆ ಹುಟ್ಟು. ತಿಲೋತ್ತಮೆ ನೀನೂ ಲಜ್ಜೆ ಇಲ್ಲದ ಕುಲಟೆ. ಅದರಿಂದಲೆ ಈ ದೈತ್ಯನಲ್ಲಿ, ನಿನಗೆ ಇಂಥ ಮೋಹ ಉಂಟಾಗಿದೆ. ಅದರಿಂದ ನೀನೂ ದಾನವಿಯಾಗಿ ಜನಿಸು.'

ಹೀಗೆ ಹೇಳಿ ಕೋಪದಿಂದ ಉರಿಯುತ್ತ ನಿಂತ, ಮುನಿ. ಇಬ್ಬರೂ ಭಯ ಭೀತರಾಗಿ ಲಜ್ಜಿತರಾಗಿ ನಿಂತು ಸ್ತುತಿಸ ತೊಡಗಿದರು -

'ನೀನೆ ಬ್ರಹ್ಮ, ವಿಷ್ಣು, ಮಹೇಶ್ವರ, ಅಗ್ನಿ ಸೂರ್ಯ ಎಲ್ಲವೂ ಆಗಿರುವೆ. ಸೃಷ್ಟಿಸ್ಥಿತಿಲಯ ಮಾಡುವವ ನೀನೆ. ಪೂಜ್ಯನೆ, ನಮ್ಮ ಅಪರಾಧವನ್ನು ಕ್ಷಮಿಸು. ದಯೆದೋರು. ತಿಳಿಯದೆ ಮಾಡಿದ ಅಪರಾಧವನ್ನು ಕ್ಷಮಿಸುವವನೆ ದೊಡ್ಡವನೆನಿಸುತ್ತಾನೆ.' ಹೀಗೆ ಹೇಳಿ ಸಾಹಸಿಕ ಗಟ್ಟಿಯಾಗಿ ಅತ್ತ. ಬಾಯಲ್ಲಿ ಹುಲ್ಲುಕಚ್ಚಿ ಮುನಿಯ ಪಾದಕಮಲಗಳಿಗೆ ಎರಗಿದ. ತಿಲೋತ್ತಮೆಯೂ ಹೇಳಿದಳು-

'ಕರುಣಾಸಮುದ್ರ, ದೀನ ಬಂಧು, ದಯೆ ದೋರು. ಬ್ರಹ್ಮನ ಸೃಷ್ಟಿಯಲ್ಲಿ ಸ್ತ್ರೀ ಜಾತಿಯೆ ಬುದ್ಧಿಶೂನ್ಯ. ಅವರಲ್ಲಿಯೂ ಕುಲಟೆ ಸದಾ ಕಾಮಾತುರಳು. ಕಾಮುಕರಾದ ಪುರುಷರು ಸಿಕ್ಕಿದಾಗ ಲಜ್ಜೆ ಭಯ ವಿವೇಕವೆಲ್ಲವನ್ನೂ ತೊರೆಯುವಳು!' ಹೀಗೆ ಹೇಳಿ ಅತ್ತು ಮುನಿಯನ್ನು ಮೊರೆಹೊಕ್ಕಳು. ವಿಪತ್ತು ಬಂದೊದಗದೆ ಯಾರಿಗೆ ತಾನೆ ಬುದ್ಧಿ ಬರುತ್ತದೆ? ಇಬ್ಬರೂ ಗೋಳಿಡುವುದನ್ನು ಕಂಡು ಮುನಿಗೆ ದಯೆ ಉಂಟಾಯಿತು.

'ಶಾಪ ಅನುಗ್ರಹಗಳು ದೈವಾಧೀನ. ಕೀರ್ತಿ ಅಪಕೀರ್ತಿಗಳು ಪ್ರಾಚೀನ ಕರ್ಮಾಧೀನ. ವಿಷ್ಣುಭಕ್ತನಾದ ಬಲಿಯ ಪುತ್ರ ನೀನು ಒಳ್ಳೆಯ ವಂಶದಲ್ಲಿ ಹುಟ್ಟಿರುವೆ. ತಂದೆಯ ವಿಷ್ಣುಭಕ್ತಿ ಎಂಬ ಗುಣ ನಿನ್ನಲ್ಲಿಯೂ ಬಂದಿರುತ್ತದೆ. ಇದು ನನಗೆ ಗೊತ್ತು. ತಂದೆಯ ಸ್ವಭಾವ ಮಗನಲ್ಲಿ ಬಂದೇ ಬರುತ್ತದೆ. ಕಾಳಿಯನ ತಲೆಯ ಮೇಲೆ

ಮೂಡಿದ ಶ್ರೀಕೃಷ್ಣನ ಪಾದಚಿಹ್ನೆ ಅವನ ವಂಶದ ಎಲ್ಲ ಸರ್ಪಗಳ ತಲೆಯ ಮೇಲೂ ಕಂಡುಬರುತ್ತದೆ ತಾನೆ! ಆದರಿಂದ ನೀನು ಕತ್ತೆಯ ಜನ್ಮ ಬಂದರೂ ನಿನಗೆ ಮುಕ್ತಿ ದೊರಕುವುದು. ಒಮ್ಮೆ ಕೃಷ್ಣನನ್ನು ಆರಾಧಿಸಿದರೆ ಅದರ ಫಲ ಎಂದಿಗೂ ನಶಿಸುವುದಿಲ್ಲ. ವೃಂದಾವನದ ತಾಳವನಕ್ಕೆ ಬೇಗನೆ ಹೋಗು. ಅಲ್ಲಿ ಹರಿಯ ಚಕ್ರದಿಂದ ಅಸುನೀಗಿ ಮುಕ್ತಿ ಪಡೆಯುವಿ. ತಿಲೋತ್ತಮೆ, ನೀನು ಭಾರತದಲ್ಲಿ ಬಾಣಾಸುರನ ಮಗಳಾಗಿ ಹುಟ್ಟಿ ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನ ಆಲಿಂಗನದಿಂದ ಪುನಃ ಪುನೀತಳಾಗುವೆ.''

ಹೀಗೆ ಹೇಳಿ ದುರ್ವಾಸಮುನಿ ಸುಮ್ಮನಾದ. ಇಬ್ಬರೂ ಮುನಿಗೆ ನಮಿಸಿ ತಮ್ಮ ಸ್ಥಾನಗಳಿಗೆ ಹಿಂತಿರುಗಿದರು. ಇದು ಧೇನುಕಾಸುರನ ವೃತ್ತಾಂತ. ತಿಲೋತ್ತಮೆ ಮುಂದೆ ಬಾಣಾಸುರನ ಮಗಳು ಉಷೆಯಾಗಿ ಜನಿಸಿ ಅನಿರುದ್ಧನನ್ನು ಮದುವೆಯಾಗುವಳು.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ತಿಲೋತ್ತಮಾ ಬಲಿಪುತ್ರರಿಗೆ ಬ್ರಾಹ್ಮಣಶಾಪ ಬಂದುದರ ಪ್ರಸ್ತಾವವೆಂಬ ಇಪ್ಪತ್ತಮೂರನೆ ಅಧ್ಯಾಯ ಮುಗಿದುದು*



## ದುರ್ವಾಸ ಕಂದಲಿ ವಿವಾಹ

**ಅಧ್ಯಾಯ - ೨೪**

ನಾರದ, ದುರ್ವಾಸಮುನಿಯ ರಹಸ್ಯ ವೃತ್ತಾಂತವನ್ನು ಹೇಳುತ್ತೇನೆ ಕೇಳು. ಊರ್ಧ್ವರೇತಸ್ಕನಾದ ಆ ಮುನಿಯೂ ವಿವಾಹವಾದನೆಂದರೆ ಆಶ್ಚರ್ಯವಲ್ಲವೆ? ತಿಲೋತ್ತಮಾ ಸಾಹಸಿಕರ ಶೃಂಗಾರಲೀಲೆಯನ್ನು ಕಂಡ ಬಳಿಕ ಮುನಿ ತಾನೂ ಕಾಮಕ್ಕೆ ವಶನಾದ. ಜಿತೇಂದ್ರಿಯನೂ ದುಷ್ಟರ ಸಂಸರ್ಗದಿಂದ ಹಾಳಾಗುವನು. ಆದರಿಂದ ಅವನ ಹೃದಯದಲ್ಲಿ ಸ್ತ್ರೀಸಂಗದ ಬಯಕೆ ಮೂಡಿತು. ತಪಸ್ಸುಮಾಡಿ ಸ್ತ್ರೀಯನ್ನೆ ಧ್ಯಾನಿಸಿದ. ಅಷ್ಟರಲ್ಲಿ ಔರ್ವನೆಂಬ ಒಬ್ಬ ಮುನಿ ತನ್ನ ಮಗಳೊಡನೆ ಆ ದಾರಿಯಾಗಿ ಬಂದ. ಮಗಳಿಗೆ ಯೋಗ್ಯವರನನ್ನು ಆತ ಹುಡುಕುತ್ತಿದ್ದ. ಹಿಂದಿನ ಕಲ್ಪದಲ್ಲಿ ಬ್ರಹ್ಮತಪಸ್ಸು ಮಾಡುತ್ತಿದ್ದಾಗ ಅವನ ತೊಡೆಯಿಂದ ಉದ್ಭವಿಸಿದ ಊರ್ಧ್ವರೇತಸನಾದ ಮುನಿ ಈತ. ಅವನ ಮೊಣಕಾಲಿಂದ ಉದ್ಭವಿಸಿದವಳು ಕಂದಲೀ ಎಂಬ ಈ ಕನ್ಯೆ. ಅವಳು ದುರ್ವಾಸರನ್ನೆ ಮದುವೆಯಾಗಲು ಬಯಸಿದಳು. ಬೇರೆ ಯಾರೂ ಅವಳಿಗೆ ರುಚಿಸಲಿಲ್ಲ. ಉರಿವ ಬೆಂಕಿಯ ಜ್ವಾಲೆಯಂತೆ ಬೆಳಗುವ ಮುನಿಶ್ರೇಷ್ಠ ಮಗಳೊಡನೆ ಬಂದು ದುರ್ವಾಸನ ಮುಂದೆ ಪ್ರಸನ್ನನಾಗಿ ನಿಂತ. ದುರ್ವಾಸ ಸಂಭ್ರಮದಿಂದ ಎದ್ದು ನಮಿಸಿದ. ಅವನನ್ನು ತಬ್ಬಿಕೊಂಡು ಔರ್ವ ಮಗಳ ಮನಸ್ಸಿನ ಬಯಕೆಯನ್ನು ಹೇಳಿದ -

'ಇವಳು ನನ್ನ ಮಗಳು ಕಂದಲಿ. ಸುಂದರಿ, ಪ್ರೌಢೆ. ಜನರ ಬಾಯಿಂದ ನಿನ್ನ ಬಗ್ಗೆ ಕೇಳಿ ತಿಳಿದು ನಿನ್ನನ್ನೆ ಬಯಸುತ್ತಿದ್ದಾಳೆ. ಇವಳು ಅಯೋನಿಜೆ. ಮೂಲೋಕವನ್ನು ಮೋಹಗೊಳಿಸಲು ಸಮರ್ಥಳು. ಎಲ್ಲ ಸೌಂದರ್ಯಗುಣಗಳಿಂದ ತುಂಬಿದವಳು. ಅವಳಲ್ಲಿ ಒಂದು ದೋಷವೇನೆಂದರೆ ಬಹಳ ಕಲಹಪ್ರಿಯಳು,

ಕೋಪದಿಂದ ಕಟುನುಡಿ ನುಡಿಯುತ್ತಾಳೆ. ನಾನಾ ಗುಣಗಳಿಂದ ಕೂಡಿದ ಒಂದು ವಸ್ತುವನ್ನು ಒಂದು ದೋಷವಿದೆ ಎಂದು ಬಿಡುವುದುಂಟೆ?'

ಇದನ್ನು ಕೇಳಿ ದುರ್ವಾಸನಿಗೆ ಹರ್ಷ ಶೋಕಗಳು ಎರಡೂ ಉಂಟಾದುವು. ಕಣ್ಣ ಮುಂದೆ ಗುಣರೂಪ ಸಮನ್ವಿತಳಾಗಿ ನಿಂತ ಕನ್ಯೆಯನ್ನು ನೋಡುತ್ತಿದ್ದಾನೆ ಮುನಿ. ಶರತ್ಕಾಲದ ಹುಣ್ಣಿಮೆ ಚಂದ್ರನಂಥ ಮುಖ ಶರತ್ಕಾಲದ ಕಮಲದಂಥ ಕಣ್ಣುಗಳು. ನವಯೌವನ ಭರಿತೆ. ಓರೆಗಣ್ಣಿಂದ ನೋಡುತ್ತಿದ್ದಾಳೆ. ರತ್ನಾಭರಣಗಳಿಂದ ಶೋಭಿಸುತ್ತಿದ್ದಾಳೆ. ವಹ್ನಿಶುದ್ಧ ವಸ್ತ್ರಧರಿಸಿದ್ದಾಳೆ. ಮುನಿ ಕಂಡು ಮೋಹಿಸಿದ. ಕಾಮಬಾಣಕ್ಕೆ ವಶನಾದ. ವಿಷಾದ ತುಂಬಿದ ಹೃದಯದಿಂದ ನುಡಿದ-

'ಸ್ತ್ರೀ ಸೌಂದರ್ಯ ಮೂಲೋಕದಲ್ಲಿ ಮೋಕ್ಷಮಾರ್ಗಕ್ಕೆ ಅಡ್ಡಿ ಮಾಡುವಂತಹುದು. ತಪಸ್ಸಿಗೆ ವಿಘ್ನಕರ. ಮೋಹಕ್ಕೆ ಕಾರಣ. ಸಂಸಾರವೆಂಬ ಕಾರಾಗೃಹದಲ್ಲಿ ಹೊರಲಾಗದಂತಹ ಬಂಧನ. ಶಂಕರಾದಿ ಹಿರಿಯ ದೇವತೆಗಳಿಗೂ ಜ್ಞಾನಖಡ್ಗದಿಂದ ಕತ್ತರಿಸಲಾಗದುದು. ಕರ್ಮವಶದಿಂದ ನೆರಳಿನಂತೆ ಹಿಂಬಾಲಿಸುತ್ತದೆ. ಅದರಲ್ಲಿ ಆಸಕ್ತಿ ಇರುವವರೆಗೂ ಮೋಕ್ಷ ಸಿಗಲಾರದು. ನಿರಂತರ ಜನ್ಮ ತಳೆಯಲೇಬೇಕು. ಜನ್ಮವಿರುವಷ್ಟು ಕಾಲ ಸಂಸಾರಭೋಗ ಸುಖಕರವಾಗಿ ಕಾಣುವುದು. ಆದರೆ ಎಲ್ಲಕ್ಕಿಂತ ಹರಿಪಾದ ಕಮಲದ ಸೇವೆಯೆ ಹೆಚ್ಚು ಸುಖಕರ. ಅದನ್ನೆ ನಾನು ಧ್ಯಾನಿಸುತ್ತಿದ್ದೆ. ಅದಕ್ಕೆ ಈಗ ವಿಘ್ನ ಬಂದಿದೆ. ಯಾವ ಪೂರ್ವಜನ್ಮದ ಪಾಪವೊ ನಾ ಕಾಣೆ. ದೈತ್ಯನೊಬ್ಬ ಕುಲಟೆಯೊಡನೆ ಶೃಂಗಾರ ನಿರತನಾಗಿದ್ದುದನ್ನು ಕಂಡೆ. ಬ್ರಹ್ಮ ಅದಕ್ಕೆ ಫಲವಿತ್ತ. ನನ್ನ ಮನಸ್ಸು ಕಾಮವಶವಾಯಿತು.

ಹೆಂಡತಿಯ ಕೆಟ್ಟ ಮಾತುಗಳನ್ನು ಕೇಳಿ ಸಹಿಸಿಕೊಂಡಿರುವುದು ಎಲ್ಲಕ್ಕಿಂತ ಹೆಚ್ಚು ನಿಂದಾರ್ಹವಾದುದು. ಹೆಂಡತಿಯ ಕೈಗೊಂಬೆಯಾಗಿರುವವ ಎಲ್ಲರಿಗಿಂತ ಹೆಚ್ಚು ನಿಂದಾರ್ಹ. ಆದರೂ ನಿನ್ನ ಆಜ್ಞೆಯನ್ನು ಶಿರಸಾವಹಿಸಿ ನಿನ್ನ ಮಗಳನ್ನು ಸ್ವೀಕರಿಸುತ್ತೇನೆ. ಏಕೆಂದರೆ ಬಯಸಿ ಬಂದ ಕಾಮಿನಿಯನ್ನು ನಿರಾಕರಿಸಿದರೆ ಕಾಲಸೂತ್ರ ನರಕ ಪ್ರಾಪ್ತವಾಗುವುದು. ಅದರಿಂದ ನಿನ್ನ ಮಗಳು ಆಡುವ ನೂರು ಕಟುನುಡಿಗಳನ್ನು ಸಹಿಸುತ್ತೇನೆ. ಮುಂದೆಯೂ ಹಾಗೆ ನುಡಿದರೆ ತಕ್ಕ ಫಲ ನೀಡುವೆನು.'

ಹೀಗೆ ಹೇಳಿ ದೂರ್ವಾಸ ಸುಮ್ಮನಾದ. ಔರ್ವ 'ಆಗಲಿ' ಎನ್ನುತ್ತ ಮಗಳನ್ನು ಧಾರೆಯೆರೆದು ಕೊಟ್ಟ. ಮೋಹ ಪರವಶತೆಯಿಂದ ಕಣ್ಣೀರಿಟ್ಟ. ಮಕ್ಕಳ ಅಗಲಿಕೆ ಆತ್ಮಾರಾಮರಾದ ಮುನಿಗಳಿಗೂ ಪೀಡಿಸದಿರುವುದಿಲ್ಲ. ಮಗಳೂ ತಂದೆಯ ಅಗಲಿಕೆಯಿಂದ ಅಳುತ್ತಿದ್ದಳು. ತಂದೆ ಉಪದೇಶಿಸಿದ -

'ಮಗಳೆ, ವೇದೋಕ್ತವಾದ ಹಿತಕರವಾದ ದುರ್ಲಭವಾದ ಒಂದು ನೀತಿಯನ್ನು ಹೇಳುತ್ತೇನೆ, ಕೇಳು. ಕುಲೀನಳಾದ ಸ್ತ್ರೀಗೆ ಇಹಪರಗಳೆರಡರಲ್ಲಿಯೂ ಪತಿಯೆ ಉತ್ತಮ ಬಂಧು. ಉತ್ತಮಗುರು. ಅವನಿಗಿಂತ ಹೆಚ್ಚು ಪ್ರೀತಿಪಾತ್ರನಿನ್ನೊಬ್ಬನಿಲ್ಲ. ದೇವಪೂಜೆ ವ್ರತದಾನ ತಪಸ್ಸು ಉಪವಾಸ ಜಪ ತೀರ್ಥಸ್ನಾನ ಯಜ್ಞದೀಕ್ಷೆ ಭೂಪ್ರದಕ್ಷಿಣೆ ಬ್ರಾಹ್ಮಣ-ಅತಿಥಿಸತ್ಕಾರ. ಇವೆಲ್ಲ ಸೇರಿದರೂ ಪತಿಸೇವೆಯ

ಹದಿನಾರನೆ ಒಂದು ಅಂಶಕ್ಕೆ ಸಮನಾಗಲಾರದು. ಪತಿಭಕ್ತೆಗೆ ಇವುಗಳಿಂದ ಏನೂ ಆಗಬೇಕಾದುದಿಲ್ಲ. ಪತಿಭಕ್ತಿ ಇಲ್ಲದವಳಿಗೆ ಇವುಗಳಿಂದ ಏನೂ ಆಗುವುದಿಲ್ಲ. ಪತಿಸೇವೆಯೆ ಶ್ರೇಷ್ಠ ಧರ್ಮವೆಂದು ಎಲ್ಲ ಶಾಸ್ತ್ರಗಳಲ್ಲಿ ಹೇಳಿದೆ. ಸತಿ ತನ್ನ ಪತಿಯನ್ನು ಶ್ರೇಷ್ಠವಾದ ನಾರಾಯಣ ಪ್ರತೀಕವೆಂದು ಭಾವಿಸಿ ಅವನ ಪಾದಕಮಲವನ್ನು ನಿತ್ಯ ಸೇವಿಸಬೇಕು. ಪರಿಹಾಸ ಕೋಪ ಭ್ರಾಂತಿ ತಿರಸ್ಕಾರ ಮುಂತಾದ ಯಾವುದೇ ಕಾರಣದಿಂದಲೂ ಪತಿಯನ್ನು ಪ್ರತ್ಯಕ್ಷ ಪರೋಕ್ಷಗಳಲ್ಲಿ ನಿಂದಿಸಬಾರದು. ಸ್ವೇಚ್ಛೆಯಿಂದ ದುಷ್ಟೆ, ಯೋನಿ ದುಷ್ಟೆಯಾದ ಸ್ತ್ರೀಗೆ ಪ್ರಾಯಶ್ಚಿತ್ತವನ್ನು ಶ್ರುತಿಯಲ್ಲಿ ಹೇಳಿಯೇ ಇಲ್ಲ. ಅವಳಿಗೆ ನೂರು ಬ್ರಹ್ಮಕಾಲ ನರಕ. ಎಲ್ಲ ಪುಣ್ಯಕರ್ಮ ಮಾಡಿಯೂ ಪತಿನಿಂದೆ ಮಾಡಿದಳೆಂದರೆ ನೂರು ಜನ್ಮಗಳ ಪುಣ್ಯ ನಾಶವಾಗುವುದು.'

ಹೀಗೆ ಉಪದೇಶಿಸಿ ಔರ್ವಮುನಿ ಹೊರಟು ಹೋದ. ಇತ್ತ ಆತ್ಮಾರಾಮನಾದ ದುರ್ವಾಸಮುನಿ ಪತ್ನಿಯೊಂದಿಗೆ ತನ್ನ ಆಶ್ರಮದಲ್ಲಿ ವಾಸಮಾಡಿದ. ಮನಸ್ಸಿನಲ್ಲಿ ಸ್ತ್ರೀಸಂಗದ ಬಯಕೆ ಬಂದೊಡನೆಯೆ ಮುನಿಗೆ ಕಾಮಿನಿ ದೊರತಿದ್ದಳು. ಪುಣ್ಯವಂತರಿಗೆ ಬಯಸಿದ್ದೆಲ್ಲವೂ ಬಯಸಿದ ಮಾತ್ರಕ್ಕೇ ಸಿಗುತ್ತದೆ. ಎಂಥ ಆಶ್ಚರ್ಯ!

ಮುನಿ ಒಂದು ಸುಮುಹೂರ್ತದಲ್ಲಿ ರತಿಶಯ್ಯೆಯನ್ನೇರಿ ಸತಿಯೊಡನೆ ರಮಿಸತೊಡಗಿದ. ಹುಟ್ಟಿದಂದಿನಿಂದಲೂ ಸ್ತ್ರೀಸುಖವನ್ನು ಕಂಡರಿಯದವನಾದರೂ ಒಳ್ಳೆಯ ಕಾಮಶಾಸ್ತ್ರ ವಿಶಾರದನಾತ. ನಾನಾ ಪ್ರಕಾರದ ಶೃಂಗಾರಕ್ರೀಡೆಯಾಡಿದ. ನವಸಂಗಮದ ಸುಖದಲ್ಲಿ ಸತಿಪತಿಗಳಿಬ್ಬರೂ ಮೈಮರೆತರು. ಹಗಲು ರಾತ್ರಿಗಳೆಂಬ ಭೇದವನ್ನೆ ಮರೆತರು. ಮುನಿ ತಪಸ್ಸನ್ನು ತೊರೆದು ಸಂಸಾರದಲ್ಲಿಯೆ ಆಸಕ್ತನಾದ. ಕಂದಲಿ ಸದಾ ಪತಿನಿಂದೆ ಮಾಡತೊಡಗಿದಳು. ದುರ್ವಾಸರು ಬುದ್ಧಿ ಹೇಳಿದರು. ಆದರೆ ಅದರಿಂದೇನೂ ಪರಿಣಾಮವಾಗಲಿಲ್ಲ. ಅವಳು ನಿತ್ಯ ಕಲಹವಾಡಿದಳು. ಹಿಂದೆ ತಂದೆಯೂ ಬಹಳ ಉಪದೇಶ ಮಾಡಿದ್ದ. ಅದೂ ವ್ಯರ್ಥವೆ ಆಯಿತು. ಹುಟ್ಟುಗುಣ ಎಷ್ಟು ಬೋಧಿಸಿದರೂ ತೊಲಗದು. ನಿತ್ಯವೂ ಕಾರಣವಿಲ್ಲದೆಯೆ ಪತಿಯೊಡನೆ ಅವಳು ಜಗಳವಾಡಿದಳು. ಜಗತ್ತನ್ನೆ ನಡುಗಿಸುತ್ತಿದ್ದ ದುರ್ವಾಸರೂ ಕಂದಲಿಯ ಮುಂದೆ ನಡುಗಿದರು. ಅವಳ ಕಟುನುಡಿಗಳನ್ನು ಅವರು ಸಹಿಸಿಕೊಂಡರು. ಪ್ರೀತಿಯಿಂದ ಕರುಣೆಯಿಂದ ಬಹುಪ್ರಕಾರವಾಗಿ ಬುದ್ಧಿ ಹೇಳಿದರು. ಕೊನೆಗೂ ಅವಳು ನೂರು ಕಟು ನುಡಿಗಳನ್ನಾಡಿ ಮುಗಿಸಿದಳು. ಅವಳ ಪಾಪದ ಕೊಡ ತುಂಬಿತು. ಅವಳು ಇನ್ನೂ ನಿಂದಿಸತೊಡಗಿದಾಗ ಮುನಿಗೆ ಕೋಪವನ್ನು ಸಹಿಸಲಾಗಲಿಲ್ಲ. ಸುಟ್ಟು ಬೂದಿ ಯಾಗೆಂದು ಶಪಿಸಿದರು. ಒಡನೆ ಅವಳು ಬೂದಿಯಾದಳು. ಮಿತಿ ಮೀರಿ ನಡೆದರೆ ಯಾರಿಗೂ ಸುಖವಿಲ್ಲ. ಶರೀರ ಬೂದಿಯಾದೊಡನೆ ಆತ್ಮ ಅಂತರಿಕ್ಷದಲ್ಲಿ ನಿಂತು ವಿನಯದಿಂದ ನುಡಿಯಿತು-

'ಪತಿದೇವ, ಜ್ಞಾನದ ಕಣ್ಣಿಂದ ಎಲ್ಲವನ್ನೂ ನೋಡಬಲ್ಲವ, ಎಲ್ಲವನ್ನೂ ತಿಳಿಯಬಲ್ಲವ, ಸರ್ವಜ್ಞ ನೀನು. ನಿನಗೆ ನಾನೇನು ಹೇಳಲಿ? ಸವಿ ನುಡಿಯಾಗಲಿ ಕಟು ನುಡಿಯಾಗಲಿ, ಕೋಪ ತಾಪ ಲೋಭ ಮೋಹ ಕಾಮ ಹಸಿವು ಬಾಯಾರಿಕೆಗಳಾಗಲಿ ಸ್ಥೌಲ್ಯ ಕೃಶತೆ ನಾಶಗಳಾಗಲಿ ಎಲ್ಲವೂ ಶರೀರಧರ್ಮಗಳು. ಆತ್ಮನ ಧರ್ಮಗಳಲ್ಲ.

ಶರೀರ ಸತ್ವ ರಜ ತಮ ಎಂಬ ಮೂರುಗುಣಗಳಿಂದಾಗಿದ್ದು ಕೆಲವು ಶರೀರದಲ್ಲಿ ಸತ್ವ ಅಧಿಕ. ಕೆಲವು ಶರೀರದಲ್ಲಿ ರಜ ಅಧಿಕ. ಕೆಲವು ಶರೀರದಲ್ಲಿ ತಮ ಅಧಿಕ. ಯಾವ ಶರೀರದಲ್ಲಿಯೂ ಮೂರು ಗುಣಗಳು ಸಮಾನವಾಗಿರುವುದಿಲ್ಲ. ಸತ್ವಗುಣ ಅಧಿಕವಾದರೆ ಮುಕ್ತಿ ಹೊಂದುವ ಬಯಕೆ ಮೂಡುತ್ತದೆ. ರಜೋಗುಣ ಅಧಿಕವಾದರೆ ಕರ್ಮಾಚರಣೆಯ ಬಯಕೆ, ತಮೋಗುಣ ಅಧಿಕವಾದರೆ ಜೀವಹಿಂಸೆಯ ಬಯಕೆ, ಕೋಪ, ಅಹಂಕಾರಗಳು, ಕೋಪದಿಂದ ಕಟುನುಡಿ. ಕಟುನುಡಿಯಿಂದ ಶತ್ರುತ್ವ, ಶತ್ರುತ್ವದಿಂದ ಅಪ್ರಿಯತ್ವ. ಸ್ವತಃ ಯಾರೂ ಯಾರಿಗೂ ಶತ್ರುವಲ್ಲ. ಯಾರೂ ಯಾರಿಗೂ ಮಿತ್ರನೂ ಅಲ್ಲ. ಇಂದ್ರಿಯಗಳೂ ಎಲ್ಲಕಡೆ ಶತ್ರುತ್ವ ಮಿತ್ರತ್ವಗಳಿಗೆ ಕಾರಣವಾಗುವುವು. ಸ್ತ್ರೀಗೆ ಪತಿ ಪ್ರಾಣಕ್ಕಿಂತ ಹೆಚ್ಚು ಪ್ರಿಯ. ಹಾಗೇ ಪತಿಗೂ ಸ್ತ್ರೀ ಪ್ರಾಣಕ್ಕಿಂತ ಹೆಚ್ಚು ಪ್ರಿಯಳು. ಆದರೇನು? ಕಟುನುಡಿಯ ಪರಿಣಾಮವಾಗಿ ಇಬ್ಬರಿಗೂ ಕ್ಷಣದಲ್ಲಿ ಶತ್ರುತ್ವ ಉಂಟಾಯಿತು. ಆಗಲಿ, ಆದುದು ಆಗಿಹೋಯಿತು. ನನ್ನ ತಪ್ಪನ್ನು ಮನ್ನಿಸು. ನಾನಿನ್ನು ಏನು ಮಾಡಬೇಕು, ಹೇಳು. ನಾನಿನ್ನು ಎಲ್ಲಿಗೆ ಹೋಗಲಿ? ಎಲ್ಲಿ ಜನ್ಮ ತಳೆಯಲಿ? ನಾನು ನಿನ್ನನ್ನು ಹೊರತು ಇನ್ನೊಬ್ಬರನ್ನು ಪತಿಯಾಗಿ ಹೊಂದಲಾರೆ'.

ಕಂದಲಿಯ ಆತ್ಮ ಹೀಗೆ ಹೇಳಿ ಸುಮ್ಮನಾಯಿತು. ಮುನಿ ಪತ್ನಿಯ ಶೋಕದಿಂದ ಮೂರ್ಛೆಗೊಂಡ. ಸ್ತ್ರೀ ವಿಯೋಗ ಎಂಥ ವಿದ್ವಾಂಸರಿಗೂ ಎಲ್ಲ ಶೋಕಗಳಿಗಿಂತ ಹೆಚ್ಚಿನದು. ಅದರಿಂದ ಕ್ಷಣದಲ್ಲಿ ಎಚ್ಚೆತ್ತುಕೊಂಡ ಮುನಿ ಪ್ರಾಣತ್ಯಾಗಕ್ಕೆ ತೊಡಗಿದ. ಯೋಗಾಸನ ಮಾಡಿ ಶ್ವಾಸನಿರೋಧಗೈದ. ಆಗ ಅಲ್ಲಿಗೆ ಒಬ್ಬ ಬ್ರಾಹ್ಮಣಬಾಲಕ ಬಂದ. ದಂಡ ಛತ್ರಗಳನ್ನು ಹಿಡಿದು ಹಣೆಯಲ್ಲಿ ಒಳ್ಳೆಯ ತಿಲಕವಿಟ್ಟುಕೊಂಡು ಬ್ರಹ್ಮತೇಜಸ್ಸಿನಿಂದ ಜ್ವಲಿಸುತ್ತಿದ್ದ ಶ್ಯಾಮವರ್ಣದ ರಕ್ತಾಂಬರಧಾರಿಯಾದ ಆ ಬಾಲಕ ಮಹಾಜ್ಞಾನಿ, ವೇದಗಳನ್ನು ಚೆನ್ನಾಗಿ ಬಲ್ಲವ. ಬಹಳ ಸಣ್ಣ ವಯಸ್ಸಿನವ. ದುರ್ವಾಸ ಅವನನ್ನು ಕಂಡು ನಮಿಸಿದ. ಆಸನದಲ್ಲಿ ಕೂಡಿಸಿ ಭಕ್ತಿಯಿಂದ ಸತ್ಕರಿಸಿದ. ಬಾಲಕ ಅವನಿಗೆ ಆಶೀರ್ವಾದ ಮಾಡಿ ಸಂಭಾಷಣೆಗೈದ. ಅವನ ದರ್ಶನ ಸಂಭಾಷಣೆಗಳಿಂದ ಮುನಿಯ ಎಲ್ಲ ದುಃಖ ಮರೆಯಾಯಿತು. ಬಾಲಕ ಒಂದು ಕ್ಷಣ ಸುಮ್ಮನಿದ್ದು ಬಳಿಕ ನೀತಿಯುಕ್ತವಾದ ಅಮೃತದಂಥ ಮಾತನ್ನಾಡಿದ.

**ಬಾಲಕ:-** ಮುನಿಯೆ, ನೀನು ಸರ್ವಜ್ಞ. ಗುರುಮಂತ್ರದ ಪ್ರಭಾವದಿಂದ ಎಲ್ಲವನ್ನೂ ತಿಳಿಯಬಲ್ಲೆ. ಆದರೂ ಏಕೆ ಶೋಕಕಾತರನಾಗಿರುವಿ? ಬ್ರಾಹ್ಮಣನ ಧರ್ಮ ತಪಸ್ಸು. ತಪಸ್ಸಿನಿಂದ ಮೂಲೋಕವನ್ನೆ ಗೆಲ್ಲಬಹುದು. ಅಂಥ ಸ್ವಧರ್ಮವನ್ನು ಬಿಟ್ಟು ಇದೇನು ಮಾಡುತ್ತಿರುವೆ? ಯಾರು ಯಾರಿಗೆ ಸತಿ? ಯಾರು ಪತಿ? ಮೂರ್ಖರನ್ನು ವಂಚಿಸುವುದಕ್ಕಾಗಿ ಮಾಯೆಯಿಂದ ಹರಿ ಎಲ್ಲವನ್ನೂ ಮಾಡುತ್ತಾನೆ. ಅವಳು ನಿನ್ನ ಪತ್ನಿ ಎನ್ನುವುದು ಸುಳ್ಳು. ಸುಳ್ಳು ಎಂದೂ ಸತ್ಯವಾಗಲಾರದು. ಅದನ್ನು ಚಿರಕಾಲ ನಂಬಲಾಗದು. ಏಕಾನಂಶೆ ವಸುದೇವ ಪುತ್ರಿ, ಕೃಷ್ಣನ ಸೋದರಿ, ಪಾರ್ವತಿಯ ಅಂಶ ಸಂಭೂತಳು, ಸುಶೀಲೆ, ದೀರ್ಘಾಯುಷ್ಯ ಉಳ್ಳವಳು, ಸುಂದರಿ, ಪ್ರತಿಕಲ್ಪದಲ್ಲಿಯೂ ಅವಳು ನಿನ್ನ ಮಡದಿಯಾಗುವವಳು. ನೀನು ಈಗ ಕೆಲವು ದಿನಗಳ ಕಾಲ ತಪಸ್ಸಿನಲ್ಲಿ ಮನವಿಡು. ಕಂದಲಿ ಭೂಮಿಯಲ್ಲಿ ಬಾಳೆಗಿಡವಾಗಿ ಜನಿಸುವಳು. ಒಮ್ಮೆ ಫಲ ನೀಡಿ

ನಶಿಸಿ. ಮುಂದಿನ ಕಲ್ಪದಲ್ಲಿ ತಿರುಗಿ ನಿನ್ನ ಮಡದಿಯಾಗುವಳು. ಹೆಚ್ಚು ಉನ್ನತಿ ಪಡೆದಾಗ ಪತನವಾಗುವುದು ಉಚಿತವೆಂದು ವೇದವೆ ಹೇಳುತ್ತದೆ.'

ಹೀಗೆ ಹೇಳಿ ಬಾಲಕರೂಪದಿಂದ ಬಂದಿದ್ದ ಶ್ರೀಹರಿ ಮುನಿಗೆ ಜ್ಞಾನ ಉಪದೇಶಿಸಿ ಬೇಗನೆ ಮರೆಯಾದ. ಮುನಿ ಎಲ್ಲ ಭ್ರಾಂತಿಯನ್ನು ನೀಗಿಕೊಂಡು ತಪಸ್ಸಿಗೆ ಮನವಿಟ್ಟ. ಕಂದಲಿ ಬಾಳೆಗಿಡವಾಗಿ ಹುಟ್ಟಿದಳು. ದೈತ್ಯ ತಾಳೆಯ ತೋಪಿಗೆ ಹೋಗಿ ಕತ್ತೆಯ ರೂಪುತಳೆದ. ತಿಲೋತ್ತಮೆ ಬಾಣನ ಮಗಳಾಗಿ ಜನಿಸಿದಳು. ದೈತ್ಯ ವಿಷ್ಣುಚಕ್ರದಿಂದ ಮಡಿದು ತಾನು ಬಯಸಿದ್ದ, ಮುನಿಗಳಿಗೂ ದುರ್ಲಭವಾದ ಹರಿಪಾದಕಮಲವನ್ನು ಹೊಂದಿದ. ತಿಲೋತ್ತಮೆಯೂ ಉಷೆಯಾಗಿ ಜನಿಸಿ ಅನಿರುದ್ಧನ ಆಲಿಂಗನದಿಂದ ತನ್ನ ಮನೋರಥವನ್ನು ಪೂರೈಸಿಕೊಂಡು ತನ್ನ ಲೋಕಕ್ಕೆ ತೆರಳಿದಳು. ಹೀಗೆ ಅತಿ ಸುಂದರವಾದ ಉತ್ತಮವಾದ ಶ್ರೀಕೃಷ್ಣಚರಿತ್ರೆಯನ್ನು ಹೇಳಿದ್ದೇನೆ. ಇನ್ನೇನು ಕೇಳಲು ಬಯಸುವೆ?

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ತಾಲಫಲ ಭಕ್ಷಣ ಪ್ರಸಂಗದಲ್ಲಿ ಬಲಿಪುತ್ರ ಮೋಕ್ಷವೆಂಬ ಇಪ್ಪತ್ತನಾಲ್ಕನೆ ಅಧ್ಯಾಯ ಮುಗಿದುದು*

—o—

## ದುರ್ವಾಸಮುನಿ ಮೋಕ್ಷ

**ಅಧ್ಯಾಯ - ೨೫**

**ನಾರದ:-** ಹರಿಕಥೆಯೆ ಅದ್ಭುತ. ಅದು ನಿನ್ನ ಮುಖದಿಂದ ಬಂದಾಗ ಇನ್ನೂ ಮನೋಹರವಾಗಿರುತ್ತದೆ. ಆದರಿಂದ, ಮುನಿಯೆ, ದುರ್ವಾಸನ ಶಾಪದಿಂದ ಕಂದಲಿ ಸತ್ತ ಬಳಿಕ ಅವಳ ತಂದೆ ಏನು ಮಾಡಿದ, ಅದನ್ನು ಹೇಳು.

**ನಾರಾಯಣಮುನಿ:-** ಸರಸ್ವತೀ ನದೀತೀರದಲ್ಲಿ ಔರ್ವಮುನಿ ತಪಸ್ಸು ಮಾಡುತ್ತಿದ್ದಂತೆ ಅವನ ಉತ್ತರೀಯ ಗಾಳಿಯಿಂದ ಕೆಳಗೆ ಬಿದ್ದಿತು. ಆಗ ಮುನಿ ತಪಸ್ಸಿನಿಂದ ಬಹಿರ್ಮುಖವಾಗಿ ಧ್ಯಾನದೃಷ್ಟಿಯಿಂದ ಕಂದಲಿಯ ವೃತ್ತಾಂತವನ್ನೆಲ್ಲ ಕಂಡು ಶೋಕಾವಿಷ್ಟನಾದ. ಬೇಗನೆ ಅಳಿಯನ ಆಶ್ರಮಕ್ಕೆ ನಡೆದ. ಆಶ್ರಮದ ನೆಲವನ್ನು ಕಣ್ಣೀರಿಂದ ತೋಯಿಸಿದ. 'ಓ ಮಗು, ಕಂದಲಿ!' ಎಂದು ಪುನಃ ಪುನಃ ಕರೆಯ ತೊಡಗಿದ.

ಮಾವನ ಧ್ವನಿಯನ್ನಾಲಿಸಿ ಭಯಭೀತನಾದ ದುರ್ವಾಸ ಬೇಗನೆ ಪರ್ಣಶಾಲೆಯಿಂದ ಹೊರಗೆ ಬಂದು ಕಾಲಿಗೆ ಬಿದ್ದ. ಶೋಕದಿಂದ ವಿಲಾಪಗೈದ. ಮೊದಲಿಂದ ಕಡೆವರೆಗೆ ಎಲ್ಲ ವೃತ್ತಾಂತವನ್ನು ಹೇಳಿದ. ಅದನ್ನು ಕೇಳಿ ಔರ್ವಮುನಿ ಶೋಕಾವೇಗದಿಂದ ಮೂರ್ಛಿತನಾಗಿ ಬಿದ್ದ. ನಿಶ್ಚೇಷ್ಟನಾಗಿ ಸತ್ತವನಂತೆ ಬಿದ್ದ ಮುನಿಯನ್ನು ಸತ್ತನೆಂದೇ ತಿಳಿದು ದುರ್ವಾಸ ಮನಸ್ಸಿನಲ್ಲಿ ಬಹಳ ಸಂಕಟಪಟ್ಟ. ಬಹು ಪ್ರಯತ್ನದಿಂದ ಮುನಿಯನ್ನು ಎಬ್ಬಿಸಿದ. ಮುನಿ ಎದ್ದು ಅಳಿಯನನ್ನು ನೋಡಿದ. ಆತ ಶೋಕಾತುರನಾಗಿ ಭೀತನಾಗಿ ತಲೆ ತಗ್ಗಿಸಿ ನಿಂತಿದ್ದ. ಅವನ ಕಣ್ಣುಗಳು ಅತ್ತು ಅತ್ತು ಕೆಂಪಾಗಿದ್ದುವು. ಕಣ್ಣೀರಿಂದ ತುಂಬಿದ್ದುವು. ಮುನಿಗೆ ಇನ್ನೂ ಕೋಪವಿತ್ತು. ಕೋಪದಿಂದ ನಡುಗುತ್ತ ತುಟಿಗಳನ್ನು ಅದುರಿಸುತ್ತ ನುಡಿದ.

**ಔರ್ವ:-** ಮುನಿಯೆ, ನೀನು ಅತ್ರಿವಂಶದವನು. ಜಗನ್ನಾಥನಾದ ಹರಿಯ ಮೊಮ್ಮಗ. ಶಿವನ ಅಂಶದಿಂದ ಜನಿಸಿ ಜಗದ್ಗುರುವಾದ ಅವನ ಶಿಷ್ಯನೂ ಆಗಿದ್ದು ವೇದವೇದಾಂಗ ತಜ್ಞನಾಗಿರುವವ, ಸರ್ವಜ್ಞ, ಗುಣವಂತ. ಹಾಗಿದ್ದರೂ ಸಣ್ಣ ಅಪರಾಧಕ್ಕಾಗಿ ನನ್ನ ಮಗುವಿಗೆ ದೊಡ್ಡ ಶಿಕ್ಷೆಯನ್ನೇಕೆ ನೀಡಿದೆ? ನಿನ್ನ ಹಡೆದ ತಾಯಿ ಅನಸೂಯೆ ಮಹಾಪತಿವ್ರತೆ, ಸಾಕ್ಷಾತ್ ಲಕ್ಷ್ಮಿಯಂತಿರುವವಳು. ನಿನಗೆ ಇಂಥ ಬುದ್ಧಿ ಏಕೆ ಬಂದಿತು? ನನಗೊಂದೂ ತಿಳಿಯದಾಗಿದೆ. ತಂದೆ ಗುಣಶಾಲಿ, ತಾಯಿಯೂ ಗುಣವತಿ. ಅವರಿಬ್ಬರ ಮಗ ಇಷ್ಟು ದಯಾಹೀನನಾದುದು ಹೇಗೆ? ನನಗೆ ಪ್ರಾಣಕ್ಕಿಂತ ಹೆಚ್ಚಾಗಿದ್ದ ಮಗಳನ್ನು ನಿನಗೆ ಸಂತೋಷದಿಂದ ನೀಡಿದ್ದೆ. ಅವಳೂ ಮಹಾಗುಣ ಉಳ್ಳವಳೆ. ಸ್ವಲ್ಪ ದೋಷವೂ ಸೇರಿತ್ತು, ಅಷ್ಟೇ. ಅವಳ ಮಾತುಗಳು ಕಟುವಾಗಿದ್ದುವು. ಅಂಥ ಸತಿಯನ್ನು ಪತಿ ಪರಿತ್ಯಾಗ ಮಾಡಬಹುದಿತ್ತು. ಹಾಗೇ ಹೇಳುತ್ತದೆ ವೇದ. ನೀನು ಕೋಪದಿಂದ ಅವಳನ್ನು ಬಿಟ್ಟುಬಿಟ್ಟಿದ್ದರೆ ನಾನು ತಂದೆ ಅವಳನ್ನು ಯತ್ನದಿಂದ ಕಾಪಾಡುತ್ತಿದ್ದೆ. ಸಣ್ಣ ಅಪರಾಧಕ್ಕೆ ನನ್ನ ಮಗುವನ್ನು ಸುಟ್ಟು ಬೂದಿ ಮಾಡಿದ ನಿನಗೆ ಮಹಾ ಅನರ್ಥ ಕಾದಿದೆ. ಇದರಲ್ಲಿ ಸಂಶಯವಿಲ್ಲ.

**ಮಹತಾಂ ಕ್ಷುದ್ರಜಂತೂನಾಂ ಸರ್ವೇಷಾಂ ಜೀವಿನಾಂ ಸದಾ ।**
**ಸ್ರಷ್ಟಾ ಪಾತಾ ಚ ಶಾಸ್ತಾ ಚ ಭಗವಾನ್ ಕರುಣಾನಿಧಿಃ ॥**

'ದೊಡ್ಡ ಸಣ್ಣ ಎಲ್ಲ ಜೀವಿಗಳನ್ನೂ ಹುಟ್ಟಿಸುವವ, ಕಾಪಾಡುವವ, ಅಪರಾಧ ಮಾಡಿದರೆ ದಂಡಿಸುವವ ಎಲ್ಲವೂ ಅವನೆ, ಕರುಣಾನಿಧಿಯಾದ ಭಗವಂತ' ಹೀಗೆ ಹೇಳಿ ಔರ್ವಮುನಿ ವಿಲಾಪಮಾಡುತ್ತ 'ಅಮ್ಮ, ಮಗು, ಕಂದಲಿ' ಎನ್ನುತ್ತ ತನ್ನ ಆಶ್ರಮಕ್ಕೆ ನಡೆದ. ಇತ್ತ ದುರ್ವಾಸನ ಶೋಕ ಜ್ಞಾನಬಲದಿಂದ ಸ್ವಲ್ಪ ಮರೆತು ಹೋಗಿದ್ದು ಈಗ ಬಂಧುದರ್ಶನದಿಂದ ತಿರುಗಿ ಭುಗಿಲೆದ್ದಿತು. ಆತ ಬಹುವಾಗಿ ಅತ್ತ.

**ಶೋಕಾನಲೋ ಹಿ ಕಾಲೇನ ವಿಚ್ಛನ್ನೋ ಜ್ಞಾನಭಸ್ಮನಾ ।**
**ಬಂಧುದರ್ಶನಶುಷ್ಕೇಂಧನೇನ ವರ್ಧತೇ ಪುನಃ ॥**

'ಕಾಲ ಕಳೆದಂತೆ ಶೋಕಾಗ್ನಿ ಜ್ಞಾನಭಸ್ಮದಿಂದ ಮುಚ್ಚಿಹೋದರೂ ಬಂಧುದರ್ಶನವೆಂಬ ಒಣ ಕಟ್ಟಿಗೆಯಿಂದ ತಿರುಗಿ ಜ್ವಲಿಸುತ್ತದೆ.' ಪ್ರಿಯೆಯನ್ನು ನೆನೆನೆನೆದು ವಿಲಾಪಗೈದು ದುರ್ವಾಸ ತನಗೆ ತಾನೆ ಸಮಾಧಾನ ಮಾಡಿಕೊಂಡು ತಪಸ್ಸಿನಲ್ಲಿ ಮನವಿಟ್ಟ.

ಹೀಗೆ ಮುನಿಶಾಪ ವೃತ್ತಾಂತವನ್ನು ಪೂರ್ಣವಾಗಿ ಹೇಳಿದ್ದೇನೆ. ಮುಂದೆ ದುರ್ವಾಸನಿಗೆ ಅಸಹನೀಯವಾದ ಆಪತ್ತು ಬಂದಿತು.

**ನಾರದ:-** ದುರ್ವಾಸ ಶಿವನ ಅಂಶ. ತೇಜಸ್ಸಿನಲ್ಲಿ ಶಿವನಿಗೆ ಸಮಾನ. ಅವನಿಗೂ ಪರಾಭವ ಉಂಟು ಮಾಡಿದ ಮಹಾತೇಜಸ್ವಿ ಯಾರು?

**ನಾರಾಯಣ ಮುನಿ:-** ಅಂಬರೀಷ ಸೂರ್ಯವಂಶದ ಒಬ್ಬ ಶ್ರೇಷ್ಠರಾಜ. ಸದಾ ಶ್ರೀಕೃಷ್ಣನ ಪಾದಕಮಲದಲ್ಲಿ ಮನವಿಟ್ಟವ. ರಾಜ್ಯಸುಖದಲ್ಲಾಗಲಿ ಹೆಂಡತಿ ಮಕ್ಕಳಲ್ಲಾಗಲಿ ಪುಣ್ಯ ಕರ್ಮದಿಂದ ಸಂಪಾದಿಸಿದ ಸಂಪತ್ತಿನಲ್ಲಾಗಲಿ ಅವನಿಗೆ ಆಸಕ್ತಿ

ಇರಲಿಲ್ಲ. ಕನಸಿನಲ್ಲಿಯೂ ಆತ ಧ್ಯಾನಿಸುತ್ತಿದ್ದುದು ಹರಿಯನ್ನೆ. ಮಹಾ ಜಿತೇಂದ್ರಿಯ. ಶಾಂತ ಸ್ವಭಾವದವ. ವಿಷ್ಣು ವ್ರತ ಪರಾಯಣ. ಏಕಾದಶೀವ್ರತದಲ್ಲಿ ನಿಷ್ಠೆ ಇದ್ದವ. ಎಲ್ಲ ಕರ್ಮಗಳನ್ನೂ ಫಲಾಪೇಕ್ಷೆಯಿಲ್ಲದೆ ಹರಿಪೂಜೆ ಎಂಬ ಭಾವನೆಯಿಂದಲೆ ಮಾಡಿ ಅವನಿಗೆ ಅರ್ಪಿಸುತ್ತಿದ್ದವ. ಬಲು ತೀಕ್ಷ್ಣವಾದ ಕೋಟಿ ಸೂರ್ಯರಂತೆ ಬೆಳಗುವ ಹದಿನಾರು ಅರಗಳಿಂದ ಕೂಡಿದ ಸುದರ್ಶನ ಎಂಬ ವಿಷ್ಣುಚಕ್ರ ವಿಷ್ಣುವಿನಂತೆಯೆ ಹೊಳೆಯುತ್ತ ಬ್ರಹ್ಮಾದಿಗಳಿಂದ ಸ್ತುತಿಸಿ ಕೊಳ್ಳುತ್ತ ರಾಜನ ರಕ್ಷೆಗಾಗಿ ಸದಾ ಅವನ ಬಳಿ ಇದ್ದಿತು. ರಾಜ ಅದನ್ನು ರಕ್ಷಿಸಿ ಇಟ್ಟಿದ್ದ.

ಒಮ್ಮೆ ಅಂಬರೀಷ ಏಕಾದಶೀ ವ್ರತಮಾಡಿ ದ್ವಾದಶಿಯಂದು ಸ್ನಾನಮಾಡಿ ವಿಧ್ಯುಕ್ತವಾಗಿ ಹರಿಪೂಜೆ ಮಾಡಿ ಬ್ರಾಹ್ಮಣರಿಗೆ ಬಂಗಾರ ಬೆಳ್ಳಿ ಮುಂತಾದುವನ್ನು ದಾನಮಾಡಿ ಅವರಿಗೆ ಭೋಜನ ಮಾಡಿಸಿ ತಾನು ಭೋಜನಕ್ಕೆ ಅಣಿಯಾಗುತ್ತಿದ್ದ. ಆಗ ಅಲ್ಲಿಗೆ ದುರ್ವಾಸಮುನಿ ಬಂದ. ಬಿಳಿ ಬಟ್ಟೆಯುಟ್ಟು ಹಣೆಗೆ ತಿಲಕವಿಟ್ಟು ಜಟಾಧಾರಿಯಾಗಿ ದಂಡ ಛತ್ರಗಳನ್ನು ಧರಿಸಿದ್ದ. ಆತ ಹಸಿದು ಬಂದಿದ್ದ. ಅವನ ಗಂಟಲು ನಾಲಿಗೆ ಒಣಗಿತ್ತು. ಅತ್ಯಂತ ಕೃಶನಾಗಿದ್ದ. ರಾಜನೆದ್ದು ಇದಿರುಗೊಂಡು ನಮಿಸಿ ಪಾದ್ಯವನ್ನೂ ಸ್ವರ್ಣಸಿಂಹಾಸನವನ್ನು ನೀಡಿದ. ಮುನಿ ರಾಜನನ್ನು ಆಶೀರ್ವದಿಸಿ ಸುಖಾಸನದಲ್ಲಿ ಕುಳಿತ. ರಾಜ ಸಂತುಷ್ಟನಾಗಿ 'ಮುನಿಯೆ, ಹೇಳು, ಏನು ನಿನ್ನ ಆಜ್ಞೆ? ನಿನ್ನ ಬಯಕೆ ಏನು?' ಎಂದ. ಅದನ್ನು ಕೇಳಿ ಮುನಿ ನುಡಿದ, 'ರಾಜನೆ, ನಾನು ಹಸಿದಿದ್ದೇನೆ. ವಿಧ್ಯುಕ್ತವಾಗಿ ನನಗೆ ಅನ್ನದಾನ ಮಾಡು. ಆದರೆ ನಾನು ಅಘಮರ್ಷಣ ಮಂತ್ರ ಜಪಿಸಿ ಬೇಗನೆ ಬಂದು ಬಿಡುತ್ತೇನೆ. ಕ್ಷಣ ಕಾಲ ಕಾದಿರು!' ಹೀಗೆ ಹೇಳಿ ಮುನಿ ಹೊರಟು ಹೋದ.

ಇತ್ತ ರಾಜರ್ಷಿ ಅಂಬರೀಷ ಬಹು ಹೊತ್ತು ಕಾದು ನೋಡಿದ. ದ್ವಾದಶಿ ತಿಥಿ ಹೊರಟು ಹೋಗುತ್ತಿದ್ದುದನ್ನು ಕಂಡು ಭೀತನಾದ. ಬಹಳ ಚಿಂತಾಗ್ರಸ್ತನಾದ. ಆಗ ರಾಜಗುರು ವಸಿಷ್ಠರು ಬಂದುದನ್ನು ಕಂಡು ನಮಿಸಿ ಹೇಳಿದ. 'ಗುರುಗಳೆ, ಮುನಿ ಇನ್ನೂ ಬರುತ್ತಿಲ್ಲ. ದ್ವಾದಶಿ ತಿಥಿ ಕಳೆಯುತ್ತಿದೆ. ಈ ಸಂಕಟದಲ್ಲಿ ನಾನು ವಿಧ್ಯುಕ್ತವಾಗಿ ಮಾಡಬೇಕಾದುದೇನು ಬೇಗನೆ ಹೇಳಿರಿ.'

ವಸಿಷ್ಠ:-

ದ್ವಾದಶ್ಯಾಂ ಸಮತೀತಾಯಾಂ ತ್ರಯೋದಶ್ಯಾಂ ತು ಪಾರಣಂ ।
ಉಪವಾಸಫಲಂ ಹತ್ವಾ ವ್ರತಿನಂ ಹಂತಿ ನಿಶ್ಚಿತಂ ॥

ದ್ವಾದಶಿ ಕಳೆದ ಮೇಲೆ ತ್ರಯೋದಶಿ ತಿಥಿಯಲ್ಲಿ ಪಾರಣ ಮಾಡಿದರೆ ಅದು ಉಪವಾಸದ ಫಲವನ್ನು ಮಾತ್ರವಲ್ಲದೆ ವ್ರತಮಾಡಿದವನನ್ನೂ ನಾಶಪಡಿಸುತ್ತದೆ. ಅವನಿಗೆ ಬ್ರಹ್ಮಹತ್ಯೆಗೆ ಸಮಾನವಾದ ಪಾಪ ಬರುತ್ತದೆ. ಉಣ್ಣುವುದು ಸುರಾಪಾನಕ್ಕೆ ಸಮವಾಗುತ್ತದೆ. ಆದರೆ ಬಂದ ಅತಿಥಿಗೆ ಅನ್ನದಾನ ಮಾಡದೆ ತಾನು ಉಂಡರೆ ಕುಂಭೀಪಾಕ ನರಕ ಲಭಿಸುತ್ತದೆ. ಅಲ್ಲಿ ನೂರು ವರ್ಷ ಕಾಲವಿದ್ದು ಚಂಡಾಲನಾಗಿ ವ್ಯಾಧಿಯುಕ್ತ ದರಿದ್ರ ಜನ್ಮ ಪಡೆಯುತ್ತಾನೆ. ಆದರಿಂದ ಇದು ಅತಿ ಸೂಕ್ಷ್ಮವಾದ ವಿಚಾರ. ಪರಮಸಂಕಟದ ಪರಿಸ್ಥಿತಿ. ನಾನೇನು ಹೇಳಲಿ? ಎರಡು ಧರ್ಮಗಳನ್ನು

ತೂಗಿ ನೋಡಿ ನಿರ್ಣಯಿಸಿ ಹೇಳುತ್ತೇನೆ. ಕೇಳು. ಹರಿಪಾದೋದಕವನ್ನು ಸೇವಿಸಿ ನೀರು ಕುಡಿದು ಉಪವಾಸದ ಫಲವನ್ನು ಕಾಪಾಡಿಕೊಳ್ಳು. ಏಕೆಂದರೆ ನೀರು ಕುಡಿಯುವುದರಿಂದ ಭೋಜನ ಮಾಡಿದಂತೆಯೂ ಆಗುತ್ತದೆ, ಮಾಡದಿದ್ದಂತೆಯೂ ಆಗುತ್ತದೆ.' ಹೀಗೆ ಹೇಳಿ ವಸಿಷ್ಠಮುನಿ ಸುಮ್ಮನಾದ. ರಾಜ ಹರಿಪಾದೋದಕವನ್ನು ಸೇವಿಸಿ ಹರಿಯ ಪಾದಕಮಲವನ್ನು ನೆನೆಯುತ್ತ ಸ್ವಲ್ಪ ನೀರು ಕುಡಿದ. ಅಷ್ಟರಲ್ಲಿ ಮಹಾಮುನಿ ದುರ್ವಾಸ ಬಂದ. ಸರ್ವಜ್ಞನಾದ ಆತ ಕುಪಿತನಾಗಿ ಜಡೆಯನ್ನು ಕಿತ್ತು ರಾಜನ ಮುಂದೆ ಎಸೆದ. ಒಡನೆ ಅಗ್ನಿಯಂತೆ ಜ್ವಲಿಸುತ್ತ ಮಹಾಭಯಂಕರನಾದ ಓರ್ವ ಪುರುಷ ಕತ್ತಿ ಹಿರಿದು ರಾಜನನ್ನು ಕೊಲ್ಲಲು ಬಂದ. ಆಗ ಕೋಟಿ ಸೂರ್ಯರಂತೆ ಹೊಳೆವ ವಿಷ್ಣುಚಕ್ರ ಆ ಕೃತ್ರಿಮ ಪುರುಷನನ್ನು ಕತ್ತರಿಸಿ ಮುನಿಯನ್ನು ಬೆನ್ನಟ್ಟಿತು. ಮುನಿ ಭಯವಿಹ್ವಲನಾಗಿ ಬ್ರಹ್ಮಾಂಡವೆಲ್ಲ ಧಾವಿಸತೊಡಗಿದ. ಬ್ರಹ್ಮನನ್ನು ಶರಣು ಹೊಂದಿದ. 'ಕಾಪಾಡು - ಕಾಪಾಡು' ಎನ್ನುತ್ತ ಬ್ರಹ್ಮನ ಆಸ್ಥಾನವನ್ನು ಹೊಕ್ಕ. ಬ್ರಹ್ಮನೆದ್ದು ಮುನಿಯ ಕ್ಷೇಮವನ್ನು ವಿಚಾರಿಸಿದ. ಮುನಿ ಎಲ್ಲವನ್ನೂ ಹೇಳಿದಾಗ ಬ್ರಹ್ಮನೂ ಭಯ ವಿಹ್ವಲನಾಗಿ ನಿಟ್ಟುಸಿರು ಬಿಡುತ್ತಹೇಳಿದ.

**ಬ್ರಹ್ಮ:-** ಹರಿದಾಸನಾದ ಅಂಬರೀಷನನ್ನು ಶಪಿಸಲು ಯಾರ ಬಲದಿಂದ ಉದ್ಯುಕ್ತನಾದೆ, ಮಗು? ಭಗವಂತನ ರಕ್ಷೆ ಇರುವಾಗ ಅವನನ್ನು ಕೊಲ್ಲುವವನು ಮೂಲೋಕದಲ್ಲಿ ಯಾರಿರುವನು? ಭಕ್ತ ಸಣ್ಣವನಿರಲಿ, ದೊಡ್ಡವನಿರಲಿ, ಅವನ ರಕ್ಷಣೆಗೆ ಭಕ್ತವತ್ಸಲನಾದ ಹರಿ ಸದಾ ಚಕ್ರವನ್ನಿಟ್ಟಿರುತ್ತಾನೆ. ವಿಷ್ಣುವಿಗೆ ಪ್ರಾಣಸಮನಾದ ಅವನ ಭಕ್ತನನ್ನು ಯಾರು ದ್ವೇಷಿಸುವನೋ ಅವನನ್ನು ವಿಷ್ಣು ಉಳಿಸುವುದಿಲ್ಲ. ಮಗು, ಬೇಗನೆ ಬೇರೆ ಕಡೆಹೋಗು. ಇಲ್ಲಿ ನಿಲ್ಲಬೇಡ. ಚಕ್ರ ನನ್ನನ್ನೂ ನಿನ್ನ ಜೊತೆಗೆ ನಾಶ ಮಾಡೀತು. ಬ್ರಹ್ಮಲೋಕವನ್ನೇನು, ಇಡಿ ಬ್ರಹ್ಮಾಂಡವನ್ನೆ ಕ್ಷಣದಲ್ಲಿ ಸುಡಬಲ್ಲುದು ವಿಷ್ಣುಚಕ್ರ. ತೇಜಸ್ಸಿನಲ್ಲಿ ವಿಷ್ಣುವಿಗೆ ಸಮಾನ. ಅದನ್ನು ಯಾರು ತಡೆಯಬಲ್ಲರು?

ಬ್ರಹ್ಮನ ಮಾತು ಕೇಳಿ ದುರ್ವಾಸ ಅಲ್ಲಿಂದ ಓಡಿ ಕೈಲಾಸಕ್ಕೆ ಹೋಗಿ ಶಿವನನ್ನು ಮೊರೆ ಹೊಕ್ಕ. 'ಕೃಪಾನಿಧಿಯೆ, ನನ್ನನ್ನು ಕಾಪಾಡು' ಎಂದ. ಸರ್ವಜ್ಞನಾದ ಶಿವ ಮುನಿಯ ಕ್ಷೇಮವನ್ನು ವಿಚಾರಿಸಲಿಲ್ಲ. ಜಗತ್ತಿನ ಸಂಹಾರಕನಾದ ಆತ ಹೇಳಿದ. 'ಬ್ರಾಹ್ಮಣೋತ್ತಮ, ತಾಳು, ನನ್ನ ಮಾತನ್ನು ಕೇಳು' ಎಂದ.

**ಶಿವ:-** ಸೃಷ್ಟಿಕರ್ತನ ಮೊಮ್ಮಗ ನೀನು. ವೇದವೇತ್ತನಾಗಿರುವಿ. ಸರ್ವಜ್ಞನಾಗಿರುವಿ. ಆದರೂ ಮೂರ್ಖನಂತೆ ವರ್ತಿಸುವಿ. ವೇದ ಪುರಾಣ ಇತಿಹಾಸಗಳಲ್ಲಿ ಎಲ್ಲೆಡೆ ವರ್ಣಿತನಾದ ಸರ್ವೇಶ್ವರನ್ನನ್ನು ಅರಿಯದ ಮೂಢನಂತಿರುವಿ. ನಾನು ಬ್ರಹ್ಮ ಇಂದ್ರ ಆದಿತ್ಯರು ವಸುಗಳು ಎಲ್ಲ ದೇವತೆಗಳು ಮುನಿಗಳು ಮನುಗಳು ಯಾರ ಹುಬ್ಬಿನ ಕುಣಿತದಿಂದಲೇ ಹುಟ್ಟುವೆವೂ ಮತ್ತು ಸಾಯುವೆವೋ ಆ ಹರಿಗೆ ಪ್ರಾಣಕ್ಕಿಂತ ಮಿಗಿಲಾದ ಭಕ್ತನನ್ನು ನೀನು ಯಾರ ಬಲದಿಂದ ಕೊಲ್ಲುವಿ? ನಾನು ಬ್ರಹ್ಮ ಲಕ್ಷ್ಮಿ ದುರ್ಗೆ ವಾಣಿ ರಾಧೆ ಇವರು ಯಾರೂ ಅವನಿಗೆ ಭಕ್ತರಿಗಿಂತ ಹೆಚ್ಚಿನವರಲ್ಲ. ಭಕ್ತರೆ ಎಲ್ಲರಿಗಿಂತ ಪ್ರಿಯರು. ಭಕ್ತರು ಸಣ್ಣವರಿರಲಿ ದೊಡ್ಡವರಿರಲಿ ಅವರನ್ನು

ಚಕ್ರದ ಮೂಲಕ ಸರ್ವಾಂತರಾತ್ಮನಾದ ಹರಿ ಕಾಪಾಡುತ್ತಾನೆ. ತೇಜಸ್ಸಿನಲ್ಲಿ ತನಗೆ ಸಮಾನವಾದ, ಯಾರಿಂದಲೂ ತಡೆಯಲಾಗದ ಚಕ್ರವನ್ನು ಭಕ್ತರ ರಕ್ಷಣೆಗೆಯಿಟ್ಟರೂ ಅದರಲ್ಲಿ ವಿಶ್ವಾಸವಿಡದೆ ತಾನೇ ರಕ್ಷಣೆಗೆ ಧಾವಿಸುತ್ತಾನೆ.

ತನ್ನ ಗುಣಗಳನ್ನು ನಾಮಗಳನ್ನು ಭಕ್ತರು ಹಾಡುತ್ತಿದ್ದರೆ ಹರಿಗೆ ಬಹಳ ಸಂಭ್ರಮ. ಭಕ್ತರ ಹಿಂದೆ ಹಿಂದೆ ನೆರಳಿನಂತೆ ಬರುತ್ತಾನೆ ಹರಿ. ಮಡದಿ ಎಂದರೆ ಲೋಕದಲ್ಲಿ ಪ್ರಾಣಕ್ಕಿಂತ ಮಿಗಿಲು. ಅವಳಿಗಿಂತ ಮಿಗಿಲು ಯಾರೂ ಇಲ್ಲ. ಆದರೆ ಮಡದಿ ಭಕ್ತರನ್ನು ದ್ವೇಷಿಸಿದ ಪಕ್ಷದಲ್ಲಿ ಅವಳನ್ನೂ ಬಿಡುವವನೆ ಶ್ರೀಹರಿ. ಅವನಿಗೆ ಎಲ್ಲರಿಗಿಂತಲೂ ತನ್ನ ಶರೀರಕ್ಕಿಂತಲೂ ಪ್ರಿಯರು ಬ್ರಾಹ್ಮಣರು. ಬ್ರಾಹ್ಮಣರಿಗಿಂತಲೂ ತನ್ನ ಪ್ರಾಣಕ್ಕಿಂತಲೂ ಪ್ರಿಯರು ಭಕ್ತರು. ಭಗವಂತನಿಗೆ ವಸ್ತುತಃ ಪ್ರಿಯನಾಗಲಿ ಅಪ್ರಿಯನಾಗಲಿ ಮೂರ್ಲೋಕದಲ್ಲಿಯೆ ಯಾರೂ ಇಲ್ಲ. ಯಾರು ಸಜ್ಜನನೋ ಅವನನ್ನು ಆದರಿಸುತ್ತಾನೆ, ಸದಾ ನೆನೆಯುತ್ತಾನೆ ಹರಿ.

**ಈಶ್ವರಸ್ಯ ಪ್ರಿಯಃ ಕೋ ವಾಽಪ್ರಿಯಃ ಕೋ ವಾ ಜಗತ್ತ್ರಯೇ ।**
**ಯಃ ಶಿಷ್ಟಸ್ತಂ ಭಜೇಚ್ಛಶ್ವದ್ಧ್ಯಾಯತೇ ಸತತಂ ಸದಾ ॥**

ಮಹಾಪ್ರಳಯದಲ್ಲಿ ಬ್ರಹ್ಮಾಂಡಗಳೆಲ್ಲ ನೀರಲ್ಲಿ ಮುಳುಗಿರಲು ಭಕ್ತರಿಗೆ ಯಾರಿಗೂ ನಾಶವಿಲ್ಲ.

**ಭಜ ಬ್ರಾಹ್ಮಣ ಗೋವಿಂದಂ ಸ್ಮರ ತಸ್ಯ ಪದಾಂಬುಜಂ ।**
**ಸರ್ವಾಪದೋ ವಿನಶ್ಯಂತಿ ಶ್ರೀಹರೇಃ ಸ್ಮರಣಾದಪಿ ॥**

ಮುನಿಯೆ, ನೀನು ಗೋವಿಂದನನ್ನು ಆರಾಧಿಸು. ಅವನ ಪಾದಕಮಲವನ್ನೆ ನೆನೆ. ಹರಿಯ ಸ್ಮರಣೆ ಮಾತ್ರದಿಂದಲೂ ಎಲ್ಲ ಆಪತ್ತುಗಳೂ ಪರಿಹಾರವಾಗುವುದು. ಬೇಗನೆ ವೈಕುಂಠಕ್ಕೆ ಹೋಗು. ವೈಕುಂಠಪತಿ ನಿನಗೆ ರಕ್ಷಕನಾಗುತ್ತಾನೆ. ಕರುಣಾಸಾಗರನಾದ ಆ ಪ್ರಭು ನಿನಗೆ ತಪ್ಪದೆ ಅಭಯ ನೀಡುತ್ತಾನೆ. ಶಿವ ಹೀಗೆ ಹೇಳುತ್ತಿದ್ದಂತೆಯೇ ಕೈಲಾಸವೆಲ್ಲ ಸುದರ್ಶನ ಚಕ್ರದ ತೇಜಸ್ಸಿನಿಂದ ತುಂಬಿತು. ಸೂರ್ಯನ ಬೆಳಕಿನಿಂದ ಭೂಮಿ ಎಲ್ಲ ಬೆಳಗುವಂತೆ ಚಕ್ರದ ಬೆಳಕಿನಿಂದ ಬೆಟ್ಟ ಬೆಳಗಿತು. ಕೈಲಾಸವಾಸಿಗಳು ಚಕ್ರದ ಪ್ರಖರವಾದ ಕಿರಣಗಳಿಂದ ಬೆಂದು 'ಕಾಪಾಡು ಕಾಪಾಡು' ಎನ್ನುತ್ತ ಶಂಕರನ ಬಳಿ ಶರಣಾಗತರಾದರು. ಪಾರ್ವತೀ ಸಹಿತನಾದ ಶಂಕರ ಅಸಹನೀಯ ತೇಜಸ್ಸಿನ ಚಕ್ರವನ್ನು ಕಂಡು ಸಂತುಷ್ಟನಾಗಿ ದುರ್ವಾಸನಿಗೆ ಆಶೀರ್ವದಿಸಿದ,

'ನಾನು ಬಹುಕಾಲದಿಂದ ಸಂಪಾದಿಸಿರುವ ತೇಜಸ್ಸು ತಪಸ್ಸುಗಳು ಸತ್ಯವಾಗಿದ್ದಲ್ಲಿ ಅಪರಾಧಗೈದು ಭೀತನಾಗಿರುವ ದುರ್ವಾಸ ನೆಮ್ಮದಿ ಹೊಂದಲಿ'.

ಪಾರ್ವತಿಯೂ ಮುನಿಗೆ ಆಶೀರ್ವದಿಸಿದಳು- 'ನನ್ನ ಪತಿಯ ಪುಣ್ಯಗಳು ಸತ್ಯವಾಗಿದ್ದಲ್ಲಿ ಶರಣಾಗತನಾದ ದುರ್ವಾಸಮುನಿ ನನ್ನ ಆಶೀರ್ವಾದದಿಂದ ಮಹಾಭಯದಿಂದ ಪಾರಾಗಿ ನೆಮ್ಮದಿ ಹೊಂದಲಿ.' ಹೀಗೆ ಪಾರ್ವತಿ ಕರುಣೆಯಿಂದ ನುಡಿದು ಸುಮ್ಮನಾದಳು. ಮುನಿ ಶಿವಪಾರ್ವತಿಯರಿಗೆ ನಮಿಸಿ ವೈಕುಂಠಕ್ಕೆ ಧಾವಿಸಿದ. ಮನೋವೇಗದಿಂದ ಧಾವಿಸುತ್ತ ವೈಕುಂಠ ಲೋಕವನ್ನು ಸೇರಿದರೂ ತನ್ನ ಹಿಂದೆಯೆ ಸುದರ್ಶನ ಬರುತ್ತಿದ್ದುದನ್ನು ಕಂಡು ಹರಿಯ ಅಂತಃಪುರವನ್ನೆ ಪ್ರವೇಶಿಸಿದ. ಅಲ್ಲಿ

ರತ್ನ ಸಿಂಹಾಸನದಲ್ಲಿ ಕುಳಿತಿದ್ದ ನೀಲವರ್ಣ ಚತುರ್ಭುಜ ಮನೋಹರ ರೂಪಿನ ಲಕ್ಷ್ಮೀರಮಣನನ್ನು ಕಂಡ. ಶಂಖಚಕ್ರಗದಾಪದ್ಮ ಧರಿಸಿದವ, ಪೀತಾಂಬರ ಉಟ್ಟವ. ರತ್ನಾಲಂಕಾರ ತೊಟ್ಟವ. ಮಂದಸ್ಮಿತದ ಸುಂದರ ಮೊಗದವ. ಹೊಳೆವ ಕಿರೀಟ ಹೊತ್ತು ಭಕ್ತರಿಗೆ ಅನುಗ್ರಹ ಮಾಡುತ್ತ ಪರಿಚಾರಕರಿಂದ ಬಿಳಿಚಾಮರಗಳಿಂದ ಬೀಸಿಕೊಳ್ಳುತ್ತ ಲಕ್ಷ್ಮೀಯ ಕೈಯ ಪಾದಸೇವೆಯನ್ನೂ ಸರಸ್ವತಿಯ ಮುಖದ ಸ್ತೋತ್ರವನ್ನೂ ಕೈಗೊಳ್ಳುತ್ತ ಸುನಂದ ನಂದ ಕುಮುದ ಪ್ರಚಂಡ ಮುಂತಾದ ಪಾರ್ಷದರಿಂದ ಸುತ್ತುವರಿಯಲ್ಪಟ್ಟ ಆ ಪ್ರಭುವನ್ನು ದುರ್ವಾಸ ಮುನಿ ಕಂಡು ದಂಡಪ್ರಣಾಮ ಮಾಡಿದ. ಸಾಮವೇದೋಕ್ತ ರೀತಿಯಿಂದ ಸ್ತೋತ್ರಗೈದ.

**ದುರ್ವಾಸ:-** ಓ ಕರುಣಾನಿಧಿ, ಕಮಲಾಕಾಂತ ಕಾಪಾಡು, ಕಾಪಾಡು. ದೀನಬಂಧು, ದೀನನಾಥ, ಕರುಣಾಸಾಗರ, ಪ್ರಭು! ವೇದ ವೇದಾಂಗ ನಿರ್ಮಾತನಾದ ಬ್ರಹ್ಮನಿಗೂ ಜನಕನಾದ, ಮೃತ್ಯುವಿಗೂ ಮೃತ್ಯುವಾದ, ಸಂಹಾರಕರ್ತನಿಗೂ ಸಂಹಾರಕನಾದ ಸರ್ವೇಶ ಸರ್ವಕಾರಣನಾದ ಮಹಾವಿಷ್ಣು, ಜಗದ್ ವೃಕ್ಷಕ್ಕೆ ಬೀಜಸ್ವರೂಪನಾದ ಹರಿಯೆ, ನನ್ನನ್ನು ಈ ಆಪತ್ ಸಮುದ್ರದಿಂದ ಕಾಪಾಡು, ಶರಣಾಗತರ ಶೋಕಾರ್ತರ ಭಯ ಕಳೆವ ಭಗವಂತ, ಭೀತನಾದ ನನ್ನನ್ನು ರಕ್ಷಿಸು. ನಾರಾಯಣ, ನಿನಗೆ ನಮಸ್ಕಾರ.

ವೇದಗಳಲ್ಲಿ ಮೊದಲಿಗೆ ಪ್ರತಿಪಾದ್ಯ ನೀನು. ನಿನ್ನನ್ನು ಬಣ್ಣಿಸುವಲ್ಲಿ ವೇದಗಳು ಸೋತಿವೆ. ಸರಸ್ವತಿ ಸೋತಿದ್ದಾಳೆ. ಇನ್ನು ಬೇರೆ ಜ್ಞಾನಿಗಳ ಪಾಡೇನು? ಶೇಷ ತನ್ನ ಸಾವಿರ ಮುಖಗಳಿಂದ ಶಿವ ಪಂಚಮುಖಗಳಿಂದ ಬ್ರಹ್ಮ ನಾಲ್ಕು ಮುಖಗಳಿಂದ ಸ್ತೋತ್ರ ಮಾಡಿದರೂ ಮುಗಿಯದು ನಿನ್ನ ಮಹಿಮೆ. ಹೀಗೆ ವೇದಗಳೂ ಸ್ಮೃತಿಕಾರರಾದ ಜ್ಞಾನಿಗಳೂ ಸರಸ್ವತಿಯೂ ನಿನ್ನನ್ನು ಪೂರ್ಣವಾಗಿ ಸ್ತೋತ್ರ ಮಾಡಲಾರರೆಂದ ಮೇಲೆ ನಾನು ಎಷ್ಟರವನು? ನಾನೇನು ಸ್ತೋತ್ರ ಮಾಡಬಲ್ಲೆ? ಬ್ರಹ್ಮನ ನೂರು ವರ್ಷದ ಆಯುಷ್ಯ ನಿನಗೆ ಕಣ್ಣು ಮುಚ್ಚಿ ತೆರೆಯುವಷ್ಟು ಕಾಲವೆಂದ ಮೇಲೆ ಅಂಥ ಅನಿರ್ವಚನೀಯ ಮಹಿಮೆಯವನಾದ ನಿನ್ನನ್ನು ನಾನೇನು ಸ್ತೋತ್ರ ಮಾಡಬಲ್ಲೆ? ಪ್ರಭು, ನನ್ನನ್ನು ಕಾಪಾಡು.' ಹೀಗೆ ಹೇಳುತ್ತ ದುರ್ವಾಸ ಹರಿಯ ಪಾದಕಮಲಗಳಿಗೆ ಎರಗಿದ. ಕಣ್ಣೀರಿಂದ ಅವುಗಳನ್ನು ತೊಳೆದ.

ದುರ್ವಾಸ ಮಾಡಿದ ಈ ಹರಿಸ್ತುತಿ ಜಗನ್ಮಂಗಲ, ಪುಣ್ಯದಾಯಕ. ಸಂಕಟದಲ್ಲಿದ್ದಾಗ ಭಕ್ತಿಯಿಂದ ಪಠಿಸಿದರೆ ನಾರಾಯಣ ಬೇಗನೆ ಬಂದು ಕಾಪಾಡುತ್ತಾನೆ. ರಾಜದ್ವಾರ, ಸ್ಮಶಾನ, ಕಾರಾಗಾರ, ಶತ್ರುಪೀಡೆ, ಕಳ್ಳರ ಕಾಟ, ಕ್ರೂರಮೃಗಭೀತಿ, ರಾಜಸೈನ್ಯದ ನಡುವೆ ಅಥವಾ ಸಮುದ್ರದ ಮಧ್ಯದಲ್ಲಿ ಈ ಸ್ತೋತ್ರವನ್ನು ನೆನೆದರೆ. ಸಾಕು, ಕಷ್ಟ ಪರಿಹಾರವಾಗುತ್ತದೆ. ಇದರಲ್ಲಿ ಸಂಶಯವಿಲ್ಲ.

**ನಾರಾಯಣಮುನಿ:-** ಮುನಿಯ ಸ್ತೋತ್ರವನ್ನು ಕೇಳಿ ಭಕ್ತವತ್ಸಲನಾದ ಭಗವಂತ ನಕ್ಕು ಅಮೃತದ ಮಳೆಗರೆವಂತೆ ಮಧುರವಾಗಿ ನುಡಿದ.

**ನಾರಾಯಣ:-** ಏಳು, ಏಳು, ಮುನಿಯೆ, ನನ್ನ ಅನುಗ್ರಹದಿಂದ ನಿನಗೆ ಸುಖವಾಗುವುದು. ಆದರೆ ನನ್ನ ಮಾತನ್ನು ಕೇಳು. ಅದರಿಂದ ಒಳ್ಳೆಯದಾಗುವುದು.

ಬೇರೆ ವಿಷಯಗಳಲ್ಲಿ ಜ್ಞಾನ ಶಾಸ್ತ್ರಗಳಿಂದ ಬರುತ್ತದೆ. ಶಾಸ್ತ್ರಗಳೆ ಮೂರ್ತಿಮತ್ತಾಗಿ ಬಂದಂತಿರುವ ಸಜ್ಜನರು ಎಲ್ಲೆಡೆ ಸಿಗುತ್ತಾರೆ. ಆದರೆ ವೇದವಿರುದ್ಧವಾದ ಕರ್ಮವನ್ನಾಚರಿಸುವುದು ಯಾರಿಗೂ ಒಳ್ಳೆಯದಲ್ಲ. ತಿಳಿದೂ ಆಚರಿಸಿದರೆ ಜೀವನ್ಮೃತನಿಗಿಂತ ಹೆಚ್ಚಿನ ಹೀನಸ್ಥಿತಿ ಬಂದೊದಗುವುದು. ವೇದಪುರಾಣ ಇತಿಹಾಸಗಳಲ್ಲಿ ಎಲ್ಲ ಕಡೆ ಎಲ್ಲರೂ ವಿಷ್ಣುಭಕ್ತರ ಮಹಿಮೆಗಳನ್ನು ಕೇಳುತ್ತಿದ್ದಾರೆ. ಭಕ್ತರು ನನಗೆ ಪ್ರಾಣಸಮ. ನಾನು ಭಕ್ತರಿಗೆ ಪ್ರಾಣಸಮ. ಅವರನ್ನು ದ್ವೇಷಿಸುವವನು ನನ್ನ ಪ್ರಾಣಗಳನ್ನೆ ಹಿಂಸಿಸುತ್ತಾನೆ. ಮಕ್ಕಳು ಮೊಮ್ಮಕ್ಕಳು ಹೆಂಡಿರು ರಾಜ್ಯ ಐಶ್ವರ್ಯಗಳೆಲ್ಲವನ್ನೂ ತೊರೆದು ಸದಾ ನನ್ನನ್ನೆ ನೆನೆಯುವ ಭಕ್ತರಿಗಿಂತ ಹೆಚ್ಚು ಪ್ರಿಯರು ನನಗೆ ಯಾರಿರುವರು? ನನಗೆ ಭಕ್ತರಿಗಿಂತ ಹೆಚ್ಚು ನನ್ನ ಪ್ರಾಣಗಳೂ ಅಲ್ಲ, ಲಕ್ಷ್ಮಿಯೂ ಅಲ್ಲ, ಶಂಕರನೂ ಅಲ್ಲ, ಭಾರತಿ, ಬ್ರಹ್ಮ ದುರ್ಗೆ ಗಣೇಶ ಇವರಾರೂ ಅಲ್ಲ, ಗೋಪಗೋಪಿಯರೂ ಅಲ್ಲ, ರಾಧೆಯೂ ಅಲ್ಲ. ನಾನು ಹೀಗೆ ಹೇಳುವುದು ನಿಜ, ವಾಸ್ತವ. ಕೇವಲ ಹೊಗಳಿಕೆಯಲ್ಲ. ಭಕ್ತರು ನನಗೆ ಪ್ರಾಣಕ್ಕಿಂತ ಹೆಚ್ಚಿನವರು. ನನ್ನನ್ನು ದ್ವೇಷಿಸುವ ಮೂಢರು ಜ್ಞಾನಹೀನರಾಗುತ್ತಾರೆ. ವಂಚಿತರಾಗುತ್ತಾರೆ, ಎಂದೂ ನನ್ನನ್ನರಿಯದೆ ನಿತ್ಯ ನರಕಭಾಗಿಗಳಾಗುತ್ತಾರೆ.

**ಯೇ ದ್ವಿಷಂತಿ ಚ ಮದ್ಭಕ್ತಾನ್ ಪ್ರಾಣಾನಾಮಧಿಕಂ ಪ್ರಿಯಾನ್।**
**ತೇಷಾಂ ಶಾಸ್ತಾತ್ವಹಂ ತೂರ್ಣಂ ಪರತ್ರ ನಿರಯಂ ಚಿರಂ ॥**

ಯಾರು ನನಗೆ ಪ್ರಾಣಕ್ಕಿಂತ ಮಿಗಿಲಾದ ಭಕ್ತರನ್ನು ದ್ವೇಷಿಸುವರೋ ಅವರಿಗೆ ಕೂಡಲೆ ನಾನು ಶಿಕ್ಷೆ ಮಾಡುತ್ತೇನೆ. ಪರಲೋಕದಲ್ಲಿಯೂ ಅವರಿಗೆ ನಿತ್ಯ ನರಕಶಿಕ್ಷೆ ಇರುತ್ತದೆ. ನಾನು ಸರ್ವಶಕ್ತ ಸರ್ವರಕ್ಷಕನೇ ಸರಿ. ಆದರೆ ಸ್ವತಂತ್ರನಲ್ಲ, ಭಕ್ತಪರಾಧೀನ. ಗೋಲೋಕದಲ್ಲಿ ದ್ವಿಭುಜ ರೂಪ, ವೈಕುಂಠದಲ್ಲಿ ಚತುರ್ಭುಜ ರೂಪ ಕೇವಲ ಶರೀರ ಮಾತ್ರ. ಪ್ರಾಣಗಳಿರುವುದು ಭಕ್ತರ ಬಳಿಯಲ್ಲಿ. ಭಕ್ತರು ಏನೇ ಕೊಡಲಿ ನಾನು ಸಂತೋಷದಿಂದ ಉಣ್ಣುತ್ತೇನೆ. ದ್ವೇಷಿಗಳು ಅಮೃತದಂಥ ಭಕ್ಷ್ಯ ನೀಡಿದರೂ ನಾನು ಉಣಲಾರೆ. ಅಂಬರೀಷ ಮಹಾರಾಜ ವಿರಕ್ತ. ಸರ್ವಪ್ರಾಣಿಗಳಿಗೆ ಹಿತಕರ, ದಯಾಶೀಲ, ಹಿಂಸೆಯನ್ನು ಒಲ್ಲದವ. ಅವನನ್ನು ಹಿಂಸಿಸಲು ನೀನು ಹೇಗೆ ಉದ್ಯುಕ್ತನಾದೆ?

**ದಯಾಂ ಕುರ್ವಂತಿ ಯೇ ಸಂತಃ ಸತತಂ ಸರ್ವಜಂತುಷಾಂ ।**
**ತಾನ್ ದ್ವಿಷಂತಿ ಚ ಯೇ ಮೂಢಾಸ್ತೇಷಾಂ ಹಂತಾಹಮೇವ ಚ॥**

ಸಜ್ಜನರು ಎಲ್ಲ ಪ್ರಾಣಿಗಳಲ್ಲಿಯೂ ಸದಾ ದಯೆದೋರುವವರು. ಅವರನ್ನು ದ್ವೇಷಿಸುವ ಮೂಢರಿಗೆ ನಾನೇ ಶಿಕ್ಷೆ ನೀಡುತ್ತೇನೆ. ಭಕ್ತರನ್ನು ಹಿಂಸಿಸುವವನು ನನಗೆ ಶತ್ರು. ಅವನನ್ನು ನಾನು ರಕ್ಷಿಸಲಾರೆ. ಆದರಿಂದ ನೀನು ಅಂಬರೀಷನ ಬಳಿಗೆ ಹೋಗು. ಅವನು ನಿನ್ನನ್ನು ಕಾಪಾಡುತ್ತಾನೆ.

**ನಾರಾಯಣಮುನಿ:-** ಹರಿಯ ಈ ಮಾತನ್ನು ಕೇಳಿ ದುರ್ವಾಸ ಭಯವಿಹ್ವಲನಾಗಿ ವಿಷಣ್ಣನಾಗಿ ಕೃಷ್ಣನ ಪಾದಕಮಲವನ್ನು ನೆನೆಯುತ್ತ ನಿಂತ. ಆಗ ಬ್ರಹ್ಮ, ಶಿವ ಪಾರ್ವತಿಯರು, ಧರ್ಮ, ಚಂದ್ರ ಮುಂತಾದ ದೇವತೆಗಳು ಮತ್ತು ಋಷಿಗಳು ಬಂದು ಭಕ್ತಿಯಿಂದ ರೋಮಾಂಚಗೊಂಡು ತಲೆಬಾಗಿ ಪರಮಾತ್ಮನನ್ನು ನಮಿಸಿ ಸ್ತುತಿಸಿದರು.

**ಬ್ರಹ್ಮ:**-ಸ್ವತಂತ್ರ ಪರಮಾತ್ಮಸ್ವರೂಪನೆ, ನಿರ್ಲಿಪ್ತನಾಗಿದ್ದು ಭಕ್ತರಲ್ಲಿ ಅನುಗ್ರಹ ಮಾಡುವವನೆ, ಭಕ್ತನಲ್ಲಿ ಅಪರಾಧ ಗೈದ ಈ ಬ್ರಾಹ್ಮಣೋತ್ತಮನನ್ನು ರಕ್ಷಿಸು.

**ಮಹದೇವ:**-ದೀನಬಂಧು, ಜಗನ್ನಾಥ, ಈಬ್ರಾಹ್ಮಣಜಗತ್ತಿನಿಂದಬಹಿರ್ಭೂತನಲ್ಲ. ಅಪರಾಧ ಮಾಡಿ ದೀನನಾಗಿ ಶರಣಾಗತನಾಗಿರುವ ಈತನನ್ನು ಕಾಪಾಡು.

**ಪಾರ್ವತಿ:**- ಅಂಬರೀಷನೆ ನಿಜವಾಗಿ ನಿನ್ನ ಭಕ್ತ, ದೇವತೆಗಳೂ ಅಲ್ಲ, ಋಷಿಗಳೂ ಅಲ್ಲ. ಅಪರಾಧ ಗೈದ ಬ್ರಾಹ್ಮಣನನ್ನು ಸರ್ವೇಶ್ವರನಾದ ನೀನು ರಕ್ಷಿಸು.

**ಧರ್ಮ:**- ಎಲ್ಲರಿಗೂ ತಂದೆ ನೀನು, ಕಾಪಾಡುವವ ನೀನು, ಅಪರಾಧಕ್ಕೆ ಶಿಕ್ಷೆ ಮಾಡುವ ಪ್ರಭು ನೀನು. ಒಂದು ಮಗುವಿಗಾಗಿ ಇನ್ನೊಂದು ಮಗುವನ್ನು ತಂದೆಯಾದವನು ಕೊಲ್ಲುವುದುಂಟೆ?

**ಇಂದ್ರ:**- ಎಲ್ಲ ಜೀವರಲ್ಲಿಯೂ ಕೃಪೆಯಿಂದ ಸಮವರ್ತಿಯಾಗಿರುವ ನೀನು ಈಗ ಬ್ರಾಹ್ಮಣನನ್ನು ಕಾಪಾಡು. ಅವನು ಅಪರಾಧದ ಫಲ ಉಂಡಿದ್ದಾನೆ.

**ರುದ್ರ:**- ಶಾಂತಿತಾಳು, ಉಚಿತವಾದುದನ್ನು ಮಾಡು. ಅಜ್ಞಾನಿಯಾದ ಬ್ರಾಹ್ಮಣ ಅಪರಾಧ ಗೈದಿದ್ದಾನೆ. ಅವನನ್ನು ಕಾಪಾಡು.

**ದಿಕ್ಪಾಲರು:**- ಬ್ರಾಹ್ಮಣ ಅಪರಾಧಗೈದರೆ ಅವನನ್ನು ಕೊಲ್ಲುವುದು ವೇದೋಕ್ತವಲ್ಲ. ಅಪರಾಧವನ್ನು ಪರಿಹರಿಸಿ ಯಾವಾಗಲೂ ಅವನನ್ನು ಕಾಪಾಡು.

**ಗ್ರಹಗಳು:**- ಯಾವ ಮೂಢ ವಿಷ್ಣುಭಕ್ತನನ್ನು ದ್ವೇಷಿಸುವನೋ ಅವನಲ್ಲಿ ಎಲ್ಲ ದೇವತೆಗಳೂ ಕುಪಿತರಾಗುತ್ತಾರೆ. ಅದರಿಂದ ನಾವು ಅವನಿಗೆ ಪೀಡೆ ಉಂಟುಮಾಡುತ್ತೇವೆ. ಬಳಿಕ ಅವನನ್ನು ನೀನೆ ಕಾಪಾಡಬೇಕು.

**ಮುನಿಗಳು:**-ಈಬ್ರಾಹ್ಮಣಪರಾಭವಹೊಂದಿದರೆನಾವೆಲ್ಲರೂಜೀವನ್ಮೃತರಂತಾಗುತ್ತೇವೆ. ನಮ್ಮ ಜಾತಿಯವನೇ ಆದ ಈತನಿಗೆ ಶಿಕ್ಷೆ ನೋಡಲು ನಮಗೆ ಲಜ್ಜೆಯಾಗುತ್ತದೆ.

**ಅತ್ರಿ:**- ನೀನೆ ನನಗೆ ಈತನನ್ನು ಮಗನನ್ನಾಗಿ ಕೊಟ್ಟವನು. ಈತ ಕೋಪಿಯಾದರು ಸದಾ ನಿನ್ನ ಸೇವಕನೆ. ನಿನ್ನ ತೇಜಸ್ಸಿನ ಬಲವಿದೆಯಾದ್ದರಿಂದ ಅವನು ಮೂಲೋಕದಲ್ಲಿ ಯಾರಿಗೂ ಭಯಪಡುವುದಿಲ್ಲ.

**ಲಕ್ಷ್ಮಿ:**- ಭಗವಂತನೆ, ಶರಣಾಗತನಾದ ಬ್ರಾಹ್ಮಣನನ್ನು ಕಾಪಾಡು. ಅಪರಾಧವನ್ನು ಕ್ಷಮಿಸು. ದೇವತೆಗಳೂ ಮುನಿಗಳೂ ಕೊಂಡಾಡುತ್ತಿದ್ದಾರೆ. ಬ್ರಾಹ್ಮಣನನ್ನು ಕೊಲ್ಲಬೇಡ.

**ಸರಸ್ವತಿ:**- ದೇವತೆಗಳಿಗೆ ತಂದೆ, ಅಭೀಷ್ಟದಾಯಕನು ನೀನೆ ಎಂದು ಶ್ರುತಿಯನ್ನು ಎಲ್ಲರಿಗೂ ಉಪದೇಶಿಸುತ್ತೇನೆ. ಭಗವಂತನೆ, ನೀನೆ ಎಲ್ಲರಿಗೂ ಪ್ರಭು, ಎಲ್ಲರನ್ನೂ ನೀನೆ ಕಾಪಾಡಬೇಕು.

**ಪಾರ್ಷದರು:**-ನಿನ್ನಸ್ಮರಣಮಾತ್ರದಿಂದಎಲ್ಲರಿಗೂಎಲ್ಲಬಗೆಯಮಂಗಳ ದೊರಕುವುದು. ಎಲ್ಲಆಪತ್ತುಗಳೂದೂರಾಗುವುವು. ಶರಣಾಗತನಾದಈತನನ್ನು ಕಾಪಾಡು.

**ವರ್ತಕರು:-** ಅಂಜನದಂತಿರುವ ದಾರಿದ್ರ್ಯವನ್ನೆ ನಾವು ಸದಾ ನಿನ್ನಲ್ಲಿ ಕೇಳುತ್ತೇವೆ. ಈಗ ನಾವು ಕೇಳುತ್ತೇವೆ, ಬ್ರಾಹ್ಮಣನನ್ನು ಕಾಪಾಡು ಎಂದು.

ಇವರ ಸ್ತೋತ್ರಗಳನ್ನು ಕೇಳಿ ಶರಣಾಗತವತ್ಸಲನಾದ ಹರಿ ನಕ್ಕು ಎಲ್ಲರಿಗೂ ಸಂತೋಷಕರವಾದ ಈ ಮಾತನ್ನು ನುಡಿದ

'ಎಲ್ಲರೂ ನನ್ನ ಈ ನೀತಿಯುಕ್ತ ಸುಖಕರ ಮಾತನ್ನು ಕೇಳಿ. ನೀವು ಹೇಳುವಂತೆ ಬ್ರಾಹ್ಮಣನನ್ನು ಕಾಪಾಡುವೆನು. ಆದರೆ ಈತ ವೈಕುಂಠದಿಂದ ಪುನಃ ಅಂಬರೀಷನ ಅರಮನೆಗೇ ಹೋಗಲಿ. ಅಲ್ಲಿ ಪಾರಣ ಮಾಡಿ ರಾಜನಿಗೆ ಸಂತೋಷ ಉಂಟುಮಾಡಲಿ. ಈತ ಅವನಲ್ಲಿ ಅತಿಥಿಯಾಗಿ ನಿರಪರಾಧಿಯಾದ ಆತನ್ನು ಶಪಿಸಲು ಉದ್ಯುಕ್ತನಾದ. ಆದರಿಂದ ರಕ್ಷಣಾರ್ಹನಾದ ಬ್ರಾಹ್ಮಣನನ್ನೂ ಸುದರ್ಶನ ಕೊಲ್ಲಲು ಹೊರಟಿತು. ಬ್ರಾಹ್ಮಣ ಭೀತನಾಗಿ ಒಂದು ವರ್ಷಕಾಲ ಪೂರ್ತಿ ಭೂ ಭ್ರಮಣ ಮಾಡುತ್ತಿದ್ದಾನೆ. ರಾಜಾಅಂಬರೀಷ ಪತ್ನೀಸಹಿತನಾಗಿ ದುಃಖದಿಂದ ಇಂದಿನವರೆಗೂ ಉಪವಾಸ ಕುಳಿತಿದ್ದಾನೆ. ನಾನೂ ಉಪವಾಸ ಕುಳಿತಿದ್ದೇನೆ. ಏಕೆಂದರೆ ಭಕ್ತ ಉಪವಾಸ ಕುಳಿತಿದ್ದಾನೆ. ಮಗು ಎದೆಹಾಲು ಕುಡಿಯದಿದ್ದರೆ ತಾಯಿ ಉಪವಾಸ ಕೂಡುವಂತೆ ಭಕ್ತ ಉಪವಾಸ ಕುಳಿತಿದ್ದರೆ ನಾನೂ ಉಪವಾಸ ಕೂಡುತ್ತೇನೆ. ಈಗ ನನ್ನ ಅನುಗ್ರಹದಿಂದ ದುರ್ವಾಸಮುನಿ ಸ್ವಸ್ಥನಾಗುತ್ತಾನೆ. ದಾರಿಯಲ್ಲಿ ಚಕ್ರ ಆತನಿಗೆ ಹಿಂಸೆ ಮಾಡುವುದಿಲ್ಲ. ಭಕ್ತರು ಉಂಡರೆ ನಾನೂ ನಿಶ್ಚಿಂತನಾಗಿ ಸುಖವಾಗಿ ಉಣ್ಣುತ್ತೇನೆ. ಭಕ್ತರು ಕೊಡುವ ತುತ್ತು ಅನ್ನ ನನಗೆ ಅಮೃತಕ್ಕೆ ಸಮಾನ. ಭಕ್ತರು ಅನ್ನ ನೀಡದಿದ್ದರೆ ಲಕ್ಷ್ಮಿ ಕೊಡುವ ಅನ್ನವನ್ನೂ ನಾನು ಉಣಲಾರೆ. ಲಕ್ಷ್ಮಿಯೂ ನನಗೆ ಅನ್ನ ನೀಡಲಾರಳು. ಹೇ ದುರ್ವಾಸ ಮುನಿ, ಹೋಗು, ರಾಜನ ಅರಮನೆಗೆ ಹೋಗು. ಎಲ್ಲ ದೇವ ದೇವಿಯರೂ ಮುನಿಗಳೂ ತಮ್ಮ ತಮ್ಮ ಲೋಕಗಳಿಗೆ ಹಿಂತಿರುಗಿರಿ.'

ಹೀಗೆ ಹೇಳಿ ಹರಿ ಸುಮ್ಮನಾಗಿ ತನ್ನ ಅಂತಃಪುರವನ್ನು ಪ್ರವೇಶಿಸಿದ. ಎಲ್ಲ ದೇವಾದಿಗಳೂ ಹರಿಯನ್ನು ನಮಿಸಿ ತಮ್ಮ ಲೋಕಗಳಿಗೆ ಹಿಂತಿರುಗಿದರು. ದುರ್ವಾಸನು ಮನೋವೇಗದಿಂದ ಅಂಬರೀಷನ ಅರಮನೆಗೆ ತೆರಳಿದ, ಜೊತೆಗೆ ಕೋಟಿ ಸೂರ್ಯರಂತೆ ಬೆಳಗುವ ಸುದರ್ಶನವೂ ಹೋಯಿತು.

ಒಂದು ವರ್ಷವಿಡೀ ಉಪವಾಸ ಮಾಡಿದ್ದ ರಾಜನಿಗೆ ಬಾಯಿ ಗಂಟಲು ಒಣಗಿತ್ತು. ದುರ್ವಾಸರನ್ನು ಕಂಡೊಡನೆ ಸಿಂಹಾಸನದಿಂದೆದ್ದು ಸಂಭ್ರಮದಿಂದ ನಮಿಸಿ ಆದರದಿಂದ ಮಿಷ್ಟಾನ್ನ ಉಣಿಸಿ ತಾನೂ ಉಂಡ. ಮುನಿ ಉಂಡು ಸಂತುಷ್ಟನಾಗಿ ಒಳ್ಳೆಯ ಆಶೀರ್ವಾದ ಮಾಡಿ ಹೊರಟು ಹೋದ. ಹೋಗುವಾಗ ದಾರಿಯಲ್ಲಿ ತನಗೆ ತಾನೆ ಅಚ್ಚರಿಯಿಂದ ಹೇಳಿಕೊಂಡ 'ವಿಷ್ಣು ಭಕ್ತರ ಮಹಿಮೆ ಏನಾಶ್ಚರ್ಯ! ಏನು ದುರ್ಲಭ!'

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಮುನಿಮೋಕ್ಷಣ ಪ್ರಸ್ತಾವವೆಂಬ ಇಪ್ಪತ್ತೈದನೆ ಅಧ್ಯಾಯ ಮುಗಿದುದು*

—o—

**ನಾರದ:-** ಮುನಿಯೇ, ದ್ವಾದಶೀಪಾರಣ ತ್ಯಾಗದ ದೋಷವನ್ನೂ ಅದರಿಂದ ದುರ್ವಾಸರಿಗಾದ ಪರಾಭವವನ್ನೂ ಹರಿ ಅಂಬರೀಷರಾಜನನ್ನು ರಕ್ಷಿಸಿದ ಬಗೆಯನ್ನೂ ನಿನ್ನಿಂದ ಕೇಳಿದ್ದಾಯಿತು. ಈಗ ಏಕಾದಶೀ ವ್ರತದ ವಿಧಾನವನ್ನು ಹೇಳು. ಅದನ್ನು ಎಲ್ಲರೂ ಕೇಳಬಯಸುತ್ತಾರೆ. ಅದು ಶ್ರುತಿಯಲ್ಲಿ ಉಕ್ತವಾಗಿದ್ದರೂ ಮತಭೇದವಿರುವುದರಿಂದ ಅದರ ಬಗ್ಗೆ ನಿಶ್ಚಯ ಯಾರಿಗೂ ಇರುವುದಿಲ್ಲ. ನಿಶ್ಚಯವಾಗಿ ಕೇಳಿತಿಳಿಯುವ ಆಸೆ ನನಗೆ.

**ನಾರಾಯಣ:-** ಈ ಏಕಾದಶೀ ವ್ರತ ದೇವತೆಗಳಿಗೂ ದುರ್ಲಭ. ಶ್ರೀಕೃಷ್ಣನಿಗೆ ಸಂತೋಷಕರವಾದ ಶ್ರೇಷ್ಠವಾದ ತಪಸ್ಸು ಇದು. ದೇವತೆಗಳಲ್ಲಿ ಕೃಷ್ಣ, ದೇವಿಯರಲ್ಲಿ ಪ್ರಕೃತಿ, ಆಶ್ರಮಗಳಲ್ಲಿ ಸಂನ್ಯಾಸ, ವಿಷ್ಣುಭಕ್ತರಲ್ಲಿ ಶಿವ, ಪೂಜ್ಯರುಗಳಲ್ಲಿ ಗಣೇಶ, ಜ್ಞಾನಿಗಳಲ್ಲಿ ಸರಸ್ವತಿ, ಶಾಸ್ತ್ರಗಳಲ್ಲಿ ವೇದ, ತೀರ್ಥಗಳಲ್ಲಿ ಗಂಗೆ, ತೇಜೋಮಯ ದ್ರವ್ಯಗಳಲ್ಲಿ ಬಂಗಾರ, ಜೀವಿಗಳಲ್ಲಿ ವಿಷ್ಣುಭಕ್ತರು, ಧನಗಳಲ್ಲಿ ವಿದ್ಯೆ, ಒಡನಾಡಿಗಳಲ್ಲಿ ಮಡದಿ, ಪ್ರಮಥರಲ್ಲಿ ರುದ್ರ, ಶ್ರೇಯಸ್ಸುಗಳಲ್ಲಿ ವಿವೇಕ, ಇಂದ್ರಿಯಗಳಲ್ಲಿ ಆತ್ಮ, ಚಂಚಲವಸ್ತುಗಳಲ್ಲಿ ಮನಸ್ಸು, ಹಿರಿಯರಲ್ಲಿ ಮಾತೆ, ಬಂಧುಗಳಲ್ಲಿ ಪತಿ, ಬಲಿಷ್ಠಗಳಲ್ಲಿ ದೈವ, ಬಂಧಕಗಳಲ್ಲಿ ಕಾಲ, ಮಿತ್ರರುಗಳಲ್ಲಿ ಸುಶೀಲ, ಶತ್ರುಗಳಲ್ಲಿ ರೋಗ, ಕೀರ್ತಿಶಾಲಿಗಳಲ್ಲಿ ಕೀರ್ತಿ, ಗೃಹಸ್ಥರಲ್ಲಿ ಗೃಹ, ಹಿಂಸಕರಲ್ಲಿ ದುರ್ಜನ, ದುಷ್ಟೆಯರಲ್ಲಿ ವ್ಯಭಿಚಾರಿಣಿ, ಹೊಳೆವ ವಸ್ತುಗಳಲ್ಲಿ ಸೂರ್ಯ, ಸಹನೆ ಉಳ್ಳವರಲ್ಲಿ ಭೂಮಿ, ಭಕ್ಷ್ಯಗಳಲ್ಲಿ ಅಮೃತ, ದಾಹಕ ವಸ್ತುಗಳಲ್ಲಿ ಬೆಂಕಿ, ಧನದಾತೃಗಳಲ್ಲಿ ಲಕ್ಷ್ಮಿ, ಪತಿವ್ರತೆಯರಲ್ಲಿ ಸತೀದೇವಿ, ಪ್ರಜಾಪತಿಗಳಲ್ಲಿ ಬ್ರಹ್ಮ, ನೀರ ಪ್ರವಾಹಗಳಲ್ಲಿ ಸಮುದ್ರ, ಶ್ರುತಿಗಳಲ್ಲಿ ಸಾಮ, ಛಂದಸ್ಸುಗಳಲ್ಲಿ ಗಾಯತ್ರಿ, ವೃಕ್ಷಗಳಲ್ಲಿ ಅಶ್ವತ್ಥ, ಪುಷ್ಪಗಳಲ್ಲಿ ತುಲಸಿ, ಮಾಸಗಳಲ್ಲಿ ಮಾರ್ಗಶೀರ್ಷ, ಋತುಗಳಲ್ಲಿ ವಸಂತ, ಆದಿತ್ಯರಲ್ಲಿ ಸೂರ್ಯ, ರುದ್ರರಲ್ಲಿ ಶಂಕರ, ವಸುಗಳಲ್ಲಿ ಭೀಷ್ಮ, ವರ್ಷಗಳಲ್ಲಿ ಭಾರತವರ್ಷ, ದೇವರ್ಷಿಗಳಲ್ಲಿ ನೀನು, ಬ್ರಹ್ಮರ್ಷಿಗಳಲ್ಲಿ ಭೃಗು, ರಾಜರುಗಳಲ್ಲಿ ರಾಮ, ಸಿದ್ಧರಲ್ಲಿ ಕಪಿಲ, ಜ್ಞಾನಿ ಯೋಗಿಗಳಲ್ಲಿ ಸನತ್ಕುಮಾರ, ಆನೆಗಳಲ್ಲಿ ಐರಾವತ, ಪಶುಗಳಲ್ಲಿ ಶರಭ, ಪರ್ವತಗಳಲ್ಲಿ ಹಿಮಾಲಯ, ಮಣಿಗಳಲ್ಲಿ ಕೌಸ್ತುಭ, ನದಿಗಳಲ್ಲಿ ಸರಸ್ವತಿ, ಗಂಧರ್ವರಲ್ಲಿ ಚಿತ್ರರಥ, ಯಕ್ಷರಲ್ಲಿ ಕುಬೇರ, ರಾಕ್ಷಸರಲ್ಲಿ ಸುಮಾಲಿ, ನಾರಿಯರಲ್ಲಿ ಶತರೂಪೆ, ಮನುಗಳಲ್ಲಿ ಸ್ವಾಯಂಭುವ, ಸುಂದರಿಯರಲ್ಲಿ ರಂಭೆ, ಮಾಯಿಗಳಲ್ಲಿ ಮಾಯೆ, ಹೇಗೋ, ಹಾಗೇ ವ್ರತಗಳಲ್ಲಿ ಏಕಾದಶಿ. ನಾಲ್ಕೂ ವರ್ಣದವರು ಆಚರಿಸಬೇಕಾದ ನಿತ್ಯಕರ್ಮ ಏಕಾದಶೀ ವ್ರತ. ವಿಷ್ಣುಭಕ್ತರಿಗೆ, ಬ್ರಾಹ್ಮಣರಿಗೆ ತತ್ರಾಪಿ ವಿಶೇಷವಾಗಿ ಯತಿಗಳಿಗೆ ವಿಹಿತ.

**ಸತ್ಯಂ ಸರ್ವಾಣಿ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।**
**ಸಂತ್ಯೇವೋದನಮಾಶ್ರಿತ್ಯ ಶ್ರೀಕೃಷ್ಣ ವ್ರತವಾಸರೇ॥**

ಬ್ರಹ್ಮಹತ್ಯಾದಿ ಸಕಲ ಪಾಪಗಳೂ ಏಕಾದಶೀವ್ರತದ ದಿನದಲ್ಲಿ ಅನ್ನವನ್ನು ಆಶ್ರಯಿಸಿ ಕೊಂಡಿರುವುದು ಸತ್ಯ. ಏಕಾದಶೀ ದಿನ ಉಣ್ಣುವವನು ಈ ಪಾಪಗಳನ್ನು ಉಂಡು ಅತಿ ಪಾತಕಿ ಎನಿಸುತ್ತಾನೆ. ನರಕ ಹೊಂದುತ್ತಾನೆ. ಏಕಾದಶಿಯ ಪ್ರಮಾಣಕ್ಕೆ ಅನುಗುಣವಾಗಿ ಹನ್ನೊಂದು ಯುಗಗಳ ಕಾಲ ಮಹಾಘೋರವಾದ ಕುಂಭೀಪಾಕದಲ್ಲಿ ಇದ್ದು ಬಳಿಕ ಚಂಡಾಲನಾಗಿ ಹುಟ್ಟುತ್ತಾನೆ. ಏಳುಜನ್ಮಗಳಲ್ಲಿ ವ್ಯಾಧಿಯಿಂದ ಬಳಲಿ ಪಾಪಮುಕ್ತನಾಗುತ್ತಾನೆ ಎಂದು ಬ್ರಹ್ಮನು ಹೇಳಿದ್ದಾನೆ. ಏಕಾದಶೀ ದಿನದಲ್ಲಿ ಉಂಡವನಿಗೆ ಇದು ದೋಷ. ದ್ವಾದಶಿ ಲಂಘನ ಮಾಡಿದರೆ ದೋಷವನ್ನು ಹಿಂದೆಯೆ ಹೇಳಿದ್ದೇನೆ. ದಶಮಿಯನ್ನು ಒಂದು ಕಲಾಮಾತ್ರದಷ್ಟಿದ್ದರೂ ಮೂಢನು ಅಜ್ಞಾನದಿಂದ ಲಂಘಿಸಿದರೆ ಲಕ್ಷ್ಮಿ ಅವನಿಗೆ ಶಾಪವಿತ್ತು ಅವನ ಮನೆಯಿಂದ ಹೊರಟು ಹೋಗುತ್ತಾಳೆ. ಇಹಲೋಕದಲ್ಲಿ ಅವನಿಗೆ ವಂಶಹಾನಿ, ಯಶೋಹಾನಿ. ಕೊನೆಯಲ್ಲಿ ನೂರು ಮನ್ವಂತರಕಾಲ ನರಕಯಾತನೆ. ಯಾವ ದಿನದಲ್ಲಿ ದಶಮೀಯುಕ್ತ ಏಕಾದಶಿ ಬರುವುದೋ ಅಂದು ಉಂಡು ಮರುದಿನ ದ್ವಾದಶಿಯಂದೇ ಉಪವಾಸ ಮಾಡಬೇಕು. ಆಗ ದ್ವಾದಶೀಲಂಘನದ ದೋಷವಿರುವುದಿಲ್ಲ.

ವಿಷ್ಣುಭಕ್ತರಾದ ಯತಿಗಳಿಗೂ ವಿಧವೆಯರಿಗೂ ಬ್ರಹ್ಮಚಾರಿಗಳಿಗೂ ಎಲ್ಲ ಏಕಾದಶಿಗಳಂದು ಉಪವಾಸ ಸಮಾನವೆಂದೂ, ಗೃಹಸ್ಥರಿಗೆ ಶುಕ್ಲಪಕ್ಷದ ಏಕಾದಶಿ ಅವಶ್ಯ ಉಪವಾಸಯೋಗ್ಯ, ಕೃಷ್ಣಪಕ್ಷದ ಏಕಾದಶಿ ಲಂಘನ ಮಾಡಿದರೆ ದೋಷವಿಲ್ಲವೆಂದೂ ಅವೈಷ್ಣವರು ತಿಳಿಯುತ್ತಾರೆ. ಶಯನೀ ಏಕಾದಶೀ, ಬೋಧಿನೀ ಏಕಾದಶಿಗಳ ನಡುವೆ ಕೃಷ್ಣಪಕ್ಷದ ಏಕಾದಶಿಗಳಲ್ಲಿ ಮಾತ್ರ ಗೃಹಸ್ಥನು ಉಪವಾಸ ಮಾಡಬೇಕು ಹೊರತು ಬೇರೆ ಕೃಷ್ಣಪಕ್ಷದ ಏಕಾದಶಿಗಳಲ್ಲಿ ಉಪವಾಸ ಕೂಡದು ಎನ್ನುತ್ತಾರೆ.

**ಶುಕ್ಲಾಮೇವ ತು ಕುರ್ವಂತಿ ಗೃಹಿಣೋ ವೈಷ್ಣವೇತರಾಃ ।**
**ಶಯನೀ ಬೋಧಿನೀ ಮಧ್ಯೇ ಯಾ ಕೃಷ್ಣೈಕಾದಶೀ ಭವೇತ್ ।**
**ಸೈವೋಪೋಷ್ಯಾ ಗೃಹಸ್ಥೇನ ನಾನ್ಯಾ ಕೃಷ್ಣಾ ಕದಾಚನ ॥**

ಈಗ ಏಕಾದಶೀ ವ್ರತದ ವಿಧಾನವನ್ನು ಹೇಳುತ್ತೇನೆ, ಕೇಳು. ದಶಮಿದಿವಸ ಪೂರ್ವಾಹ್ಣದಲ್ಲಿ ಹವಿಷ್ಯಾನ್ನ ಉಂಡು ಬಳಿಕ ರಾತ್ರಿ ಭೋಜನ ಮಾಡಬಾರದು. ರಾತ್ರಿ ಏಕಾಕಿಯಾಗಿ ದರ್ಭಾಸನದಲ್ಲಿ ಮಲಗಬೇಕು. ಮರುದಿನ ಬ್ರಾಹ್ಮಮೂಹೂರ್ತದಲ್ಲಿ ಎದ್ದು ಪ್ರಾತಃಕೃತ್ಯಗಳನ್ನು ಪೂರೈಸಿ ಸ್ನಾನಮಾಡಿ ವ್ರತೋಪವಾಸವನ್ನು ಸಂಕಲ್ಪಿಸಿ ಸಂಧ್ಯಾವಂದನ ತರ್ಪಣಗಳನ್ನೂ ನಿತ್ಯಪೂಜೆಯನ್ನೂ ಮುಗಿಸಿ ವ್ರತದ್ರವ್ಯಗಳನ್ನು ತಂದು ಕೃಷ್ಣನಿಗೆ ಷೋಡಶೋಪಚಾರಗಳನ್ನು ಸಮರ್ಪಿಸಬೇಕು.

ಆಸನ, ವಸ್ತ್ರ, ಪಾದ್ಯ, ಅರ್ಘ್ಯ, ಪುಷ್ಪ, ಅನುಲೇಪನ, ಧೂಪ, ದೀಪ, ನೈವೇದ್ಯ, ಯಜ್ಞೋಪವೀತ, ಭೂಷಣ, ಗಂಧ, ಸ್ನಾನೀಯ, ತಾಂಬೂಲ, ಮಧುಪರ್ಕ, ಪುನರಾಚಮನೀಯ - ಇವೇ ಆ ಷೋಡಶ ಉಪಚಾರಗಳು. ಮೊದಲಿಗೆ ಒಗೆದ ಬಟ್ಟೆ ಉಟ್ಟು ಆಸನದಲ್ಲಿ ಕುಳಿತು ಆಚಮನ ಮಾಡಿ ಹರಿಯನ್ನು ನಮಸ್ಕರಿಸಿ ಸ್ವಸ್ತಿವಾಚನ ಮಾಡಬೇಕು. ಧಾನ್ಯದ ಮೇಲೆ ಮಂಗಲಕಲಶಸ್ಥಾಪನ ಮಾಡಬೇಕು. ಗಣಪತಿ ಸೂರ್ಯ ಅಗ್ನಿ ವಿಷ್ಣು ಶಿವ ದುರ್ಗೆ - ಈ ಆರು ಮಂದಿ ದೇವತೆಗಳನ್ನು ಆವಾಹಿಸಿ ಪೂಜಿಸಿ

ನಮಿಸಿ ಹರಿಸ್ಮರಣಪೂರ್ವಕವಾಗಿ ವ್ರತವನ್ನು ಆಚರಿಸಬೇಕು. ಈ ಆರು ಮಂದಿ ದೇವತೆಗಳನ್ನು ಪೂಜಿಸದೆ ನಿತ್ಯ ನೈಮಿತ್ತಿಕ ಕರ್ಮವಾಚರಿಸಿದರೆ ನಿಷ್ಫಲವಾಗುವುದು. ಇದು ಕಾಣ್ವಶಾಖೋಕ್ತ ವ್ರತವಿಧಾನ. ಮುಂದೆ ಸಾಮವೇದೋಕ್ತ ಧ್ಯಾನದಿಂದ ಪರಾತ್ಪರನಾದ ಕೃಷ್ಣನನ್ನು ಧ್ಯಾನಿಸಿ ತಲೆಯ ಮೇಲೆ ಹೂವೇರಿಸಿ ಪುನಃ ಧ್ಯಾನಮಾಡಬೇಕು. ಸರ್ವಾಭೀಷ್ಟವಾದ ಗೋಪ್ಯವಾದ ಆ ಧ್ಯಾನಪ್ರಕಾರವನ್ನು ಕೇಳು. ಭಕ್ತರಿಗೆ ಪ್ರಾಣಕ್ಕಿಂತ ಅಧಿಕವಾದ ಆ ಧ್ಯಾನವನ್ನು ಅಭಕ್ತರಿಗೆ ಎಂದೂ ಹೇಳಬೇಡ.

'ಹೊಸ ಮೋಡದಂಥ ನೀಲವಾದ ಸುಂದರ ಶರೀರದವನು, ಶರತ್ಕಾಲದ ಚಂದ್ರನಂಥ ಸುಂದರ ಮುಖದವನು. ಶರತ್ಕಾಲದಲ್ಲಿ ಸೂರ್ಯೋದಯಕ್ಕೆ ಅರಳುವ ಕಮಲದ ಚೆಲುವನ್ನು ಧಿಕ್ಕರಿಸುವ ಕಣ್ಣಿನವನು, ತನ್ನ ಅವಯವಕಾಂತಿಯಿಂದ ರತ್ನಾಭರಣಕ್ಕೆ ಸೌಂದರ್ಯ ಹೆಚ್ಚಿಸುವವನು, ಗೋಪಿಯರ ಪ್ರಸನ್ನವಾದ ಕಟಾಕ್ಷಗಳಿಂದ ಸದಾ ವೀಕ್ಷಿಸಲ್ಪಡುವವನು, ಅವರ ಪ್ರಾಣಗಳಿಂದ ನಿರ್ಮಿತನಾದಂತಿರುವವನು, ರಾಸಮಂಡಲದಲ್ಲಿ ರಾಸವಿಹಾರಕ್ಕೆ ಉದ್ಯುಕ್ತನಾಗಿರುವವನು. ರಾಧೆಯ ಮುಖಚಂದ್ರಮನ ಸುಧೆಯನ್ನು ಪಾನ ಮಾಡಲು ಚಕೋರದಂತಿರುವವನು, ಕೌಸ್ತುಭಮಣಿಯಿಂದ ಹೊಳೆವ ವಕ್ಷಃಸ್ಥಳದವನು, ಪಾರಿಜಾತ ಪುಷ್ಪಗಳ ಮಾಲೆಗಳಿಂದ ವಿರಾಜಮಾನನಾಗಿರುವವನು, ಒಳ್ಳೆಯ ರತ್ನದಿಂದ ನಿರ್ಮಿತವಾದ ಕಿರೀಟದಿಂದ ಶೋಭಿಸುವವನು, ಕೈಯಲ್ಲಿ ಕೊಳಲನ್ನು ಹಿಡಿದವನು, ಸುರಾಸುರರಿಂದ ಪೂಜ್ಯನಾಗಿದ್ದು ಯಾರಿಗೂ ಧ್ಯಾನಕ್ಕೆ ನಿಲುಕದವನು, ಆರಾಧನೆಗೆ ವಶನಾಗದವನು, ಬ್ರಹ್ಮಾದಿವಂದ್ಯ, ಕಾರಣಗಳಿಗೂ ಕಾರಣ - ಇಂಥ ಪರಮಾತ್ಮನನ್ನು ಭಜಿಸುವೆನು. ಹೀಗೆ ಧ್ಯಾನ ಮಾಡಿ ಆವಾಹಿಸಿ ಹದಿನಾರು ಬಗೆಯ ಉಪಚಾರಗಳನ್ನು ಸಲ್ಲಿಸಬೇಕು. ಆಗ ಹೇಳಬೇಕಾದ ಮಂತ್ರಗಳು - ''ರತ್ನಖಚಿತವಾದ ಚಿತ್ರವಿಚಿತ್ರಯುಕ್ತವಾದ ಸ್ವರ್ಣಮಯ ಆಸನವನ್ನು ನೀಡುತ್ತೇನೆ. ಪರಮಾತ್ಮ, ಸ್ವೀಕರಿಸು. ವಿಶ್ವಕರ್ಮನಿರ್ಮಿತವಾದ ವಹ್ನಿಶುದ್ಧವಾದ ಅಮೂಲ್ಯ ವಸ್ತ್ರವನ್ನು ಸ್ವೀಕರಿಸು. ಪಾದ ಪ್ರಕ್ಷಾಳನೆಗೆ ಯೋಗ್ಯವಾದ ಸುಗಂಧಯುಕ್ತ ಶೀತಲ ಜಲವನ್ನು ಬಂಗಾರದ ಕಲಶದಲ್ಲಿ ತಂದಿದ್ದೇನೆ. ಕರುಣಾನಿಧಿಯೆ, ಸ್ವೀಕರಿಸು. ಪುಷ್ಪ ದೂರ್ವೆ ಚಂದನಗಳಿಂದ ಕೂಡಿದ, ಶಂಖಜಲಯುಕ್ತವಾದ ಪವಿತ್ರವಾದ ಈ ಅರ್ಘ್ಯವನ್ನು, ಭಕ್ತವತ್ಸಲ, ಸ್ವೀಕರಿಸು. ಚಂದನ ಅಗುರು ಯುಕ್ತವಾದ ಸುಗಂಧಭರಿತವಾದ, ನಿನಗೆ ತತ್‌ಕ್ಷಣವೆ ಸಂತೋಷ ತರುವ ಬಿಳಿ ಹೂವನ್ನು ಸ್ವೀಕರಿಸು. ಚಂದನ ಅಗುರು ಕಸ್ತೂರಿ ಕುಂಕುಮ ಲಾವಂಚಗಳಿಂದ ಮಾಡಿದ, ಎಲ್ಲರೂ ಬಯಸುವ ಅನುಲೇಪನವನ್ನು, ಕೃಷ್ಣ, ಸ್ವೀಕರಿಸು. ವೃಕ್ಷವಿಶೇಷದ ರಸರೂಪವಾಗಿದ್ದು ನಾನಾದ್ರವ್ಯ ಸಮನ್ವಿತವಾದ ಸುಗಂಧಯುಕ್ತ, ಸುಖಕರವಾದ ಈ ಧೂಪವನ್ನು ಸ್ವೀಕರಿಸು. ಹಗಲು ರಾತ್ರಿ ಪ್ರಕಾಶಿಸುವ, ಶ್ರೇಷ್ಠ ರತ್ನ ನಿರ್ಮಿತವಾದ, ಕತ್ತಲನ್ನು ಓಡಿಸುವ ಈ ದೀಪವನ್ನು ಸ್ವೀಕರಿಸು. ಸವಿಯಾದ ಸುಗಂಧ ಭರಿತವಾದ ನಾನಾ ಬಗೆಯ ಚೋಷ್ಯಾದಿ ಪವಿತ್ರ ದ್ರವ್ಯಗಳನ್ನು, ಹೇ ಸ್ವಾತ್ಮಾರಾಮನಾದ ಹರಿಯೆ, ಸ್ವೀಕರಿಸು. ಸಾವಿತ್ರೀಗ್ರಂಥಿಯುಕ್ತವಾದ ಬಂಗಾರದ ಎಳೆಗಳಿಂದ ವಿಶ್ವಕರ್ಮನಿರ್ಮಿತವಾದ ಯಜ್ಞೋಪವೀತವನ್ನು, ದೇವದೇವೇಶ, ಸ್ವೀಕರಿಸು. ಅಮೂಲ್ಯ ರತ್ನ ನಿರ್ಮಿತವಾಗಿದ್ದು ಕಾಂತಿಯಿಂದ ಹೊಳೆಯುವ ಸರ್ವಾವಯವ

ಭೂಷಣವನ್ನು, ಹೇ ನಂದನಂದನ, ಸ್ವೀಕರಿಸು. ಸರ್ವಮಂಗಳಕಾರ್ಯಗಳಲ್ಲಿ ಪ್ರಧಾನವಾಗಿ ಬೇಕಾಗಿರುವ ಮಂಗಲಪ್ರದವಾದ ಈ ಗಂಧವನ್ನು, ದೀನಬಂಧು, ಸ್ವೀಕರಿಸು. ನೆಲ್ಲಿ ಶ್ರೀಫಲ ಪತ್ರಗಳಿಂದ ಮಾಡಿದ, ಸರ್ವಲೋಕಗಳಿಗೆ ಅಪೇಕ್ಷಿತವಾದ ಮನೋಹರವಾದ ತೈಲವನ್ನು, ಭಗವಂತನೆ, ಸ್ವೀಕರಿಸು. ಕರ್ಪೂರಾದಿಗಳಿಂದ ಸುಗಂಧ ಭರಿತವಾದ, ಎಲ್ಲರಿಗೂ ಅಭೀಷ್ಟವಾದ ತಾಂಬೂಲವನ್ನು ನೀಡುತ್ತೇನೆ, ಪ್ರಭು, ಸ್ವೀಕರಿಸು. ಎಲ್ಲರಿಗೂ ಸುಖಕರವಾದ, ಒಳ್ಳೆಯ ರತ್ನಪಾತ್ರೆಯಲ್ಲಿ ತಂದಿಟ್ಟ ಸವಿಯಾದ ಮಧುಪರ್ಕವನ್ನು, ಗೋಪೀನಾಥ, ಸ್ವೀಕರಿಸು. ಸುಗಂಧಭರಿತವಾದ ಪವಿತ್ರವಾದ ನಿರ್ಮಲ ಗಂಗಾಜಲವನ್ನು ಪುನರಾಚಮನಕ್ಕೆ, ಮಧುಸೂದನ, ಸ್ವೀಕರಿಸು.''

- ಹೀಗೆ ಷೋಡಶೋಪಚಾರಗಳನ್ನು ನೀಡಿ, ''ನಾನಾ ಬಗೆಯ ಹೂಗಳಿಂದ ಪೋಣಿಸಿ ಬೆಳದಾರದಿಂದ ಕಟ್ಟಿದ ಭೂಷಣಗಳಲ್ಲಿ ಶ್ರೇಷ್ಠವಾದ ಮಾಲೆಯನ್ನು, ಪ್ರಭು, ಸ್ವೀಕರಿಸು'' ಎಂಬ ಮಂತ್ರದಿಂದ ಮತ್ತು ಮೂಲಮಂತ್ರದಿಂದ ಪುಷ್ಪಾಂಜಲಿ ನೀಡಿ ಕೈ ಮುಗಿದು ಹೀಗೆ ಸ್ತೋತ್ರ ಮಾಡಬೇಕು:

'ಹೇ ಕೃಷ್ಣ, ರಾಧಾರಮಣ, ಕರುಣಾಸಾಗರ, ಪ್ರಭು, ಘೋರ ಭಯಂಕರವಾದ ಸಂಸಾರಸಾಗರದಲ್ಲಿ ನನ್ನನ್ನು ಉದ್ಧರಿಸು. ನಾನು ನೂರಾರು ಜನ್ಮಗಳಲ್ಲಿ ಬಳಲಿ ಬಂದು ಉದ್ವೇಗಗೊಂಡಿದ್ದೇನೆ. ನನ್ನ ಕರ್ಮಪಾಶದ ಬಂಧನದಲ್ಲಿ ಕಟ್ಟು ಬಿದ್ದಿದ್ದೇನೆ, ಬಿಡಿಸು. ನಿನ್ನ ಪಾದಕಮಲಗಳಲ್ಲಿ ಮಣಿದ ಶರಣಾಗತನಾದ ನನ್ನನ್ನು ಈಕ್ಷಿಸು. ಭವ ಪಾಶ ಭಯದಿಂದ ಭೀತನಾಗಿ ಶರಣಾಗತನಾಗಿರುವ ನನ್ನನ್ನು ಕಾಪಾಡು. ಭಕ್ತಿ ಇಲ್ಲ, ಕ್ರಿಯೆ ಇಲ್ಲ, ವಿಧಿ ಇಲ್ಲ, ವಸ್ತು ಇಲ್ಲ, ಮಂತ್ರವಿಲ್ಲ. ಈ ಎಲ್ಲ ನ್ಯೂನತೆಗಳನ್ನು ಕಳೆದು ಪೂರ್ಣಗೊಳಿಸು. ವೇದೋಕ್ತ ವಿಧಿಯನ್ನರಿಯದಿರುವುದರಿಂದ ಕರ್ಮದಲ್ಲಿ ಅಂಗವೈಕಲ್ಯ ಬರಬಹುದು. ಅದು, ಶ್ರೀಹರಿ, ನಿನ್ನ ನಾಮೋಚ್ಚಾರಣೆಯಿಂದ ಪೂರ್ಣವಾಗುವುದು.' ಹೀಗೆ ಸ್ತೋತ್ರಮಾಡಿ ನಮಿಸಿ ವಿಪ್ರರಿಗೆ ದಕ್ಷಿಣೆ ನೀಡಿ ಮಹೋತ್ಸವ ಮಾಡಿ ಅಂದು ರಾತ್ರಿ ಜಾಗರಣ ಮಾಡಬೇಕು. ವ್ರತೋಪವಾಸ ಮಾಡಿ ರಾತ್ರಿ ನಿದ್ರೆ ಮಾಡಿದರೆ ವ್ರತಫಲದಲ್ಲಿ ಅರ್ಧಾಂಶ ಮಾತ್ರ ಲಭಿಸುವುದು. ಮರುದಿನ ದ್ವಾದಶಿ ಬೆಳಿಗ್ಗೆ ಒಮ್ಮೆ ಮಾತ್ರ ಭೋಜನ.

'ಹೇ ಅನ್ನವೆ, ನೀನು ಬ್ರಹ್ಮ ನಿರ್ಮಿಸಿದ ಪ್ರಾಣಿಗಳ ಪ್ರಾಣರೂಪನು. ವಿಷ್ಣು ರೂಪನೆ, ನೀನು ನನಗೆ ವ್ರತೋಪವಾಸಗಳ ಫಲವನ್ನು ನೀಡು' -

ಎಂಬ ಮಂತ್ರದಿಂದ ಹವಿಷ್ಯಾನ್ನ ಉಂಡು ಪಾರಣ ಮಾಡಬೇಕು. ಹೀಗೆ ಯಾರು ಭಕ್ತಿಯಿಂದ ಈ ವ್ರತವನ್ನು ಆಚರಿಸುವನೋ ತನ್ನನ್ನು ಮಾತ್ರವಲ್ಲದೆ ತನ್ನ ವಂಶದ ಹಿಂದಿನ ಮುಂದಿನ ಏಳು ತಲೆಮಾರಿನವರನ್ನೂ ಉದ್ಧರಿಸುವನು. ತಾಯಿ ಸೋದರ ಅತ್ತೆ ಮಾವ ಮಗಳು ಅಳಿಯ ಭೃತ್ಯರನ್ನೂ ಉದ್ಧರಿಸುವನು. ನಾರದ, ಇದು ಶ್ರೀಕೃಷ್ಣನ ವ್ರತ, ಸುಖಕರ, ಮೋಕ್ಷದಾಯಕ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಏಕಾದಶೀವ್ರತನಿರೂಪಣವೆಂಬ ಇಪ್ಪತ್ತಾರನೆ ಅಧ್ಯಾಯ ಮುಗಿದುದು*

**ನಾರಾಯಣ:-** ನಾರದ, ಕೇಳು, ಶ್ರೀಕೃಷ್ಣ ಗೋಪಿಯರ ವಸ್ತ್ರಾಪಹಾರ ಮಾಡಿ ವರ ನೀಡಿದ ಪ್ರಸಂಗವನ್ನೂ ಹೇಳುತ್ತೇನೆ. ಹೇಮಂತ ಋತುವಿನ ಮೊದಲನೆ ತಿಂಗಳಲ್ಲಿ ಗೋಪಿಯರು ಕೃಷ್ಣನನ್ನು ಪತಿಯನ್ನಾಗಿ ಪಡೆಯುವ ಬಯಕೆಯಿಂದ ಹವಿಷ್ಯಾನ್ನ ಉಣುತ್ತ ಪ್ರತಿದಿನ ಯಮುನಾ ತೀರದಲ್ಲಿ ಸ್ನಾನ ಮಾಡಿ ಮರಳಿಂದ ಪಾರ್ವತಿಯ ವಿಗ್ರಹವನ್ನು ಮಾಡಿ ಆವಾಹನ ಮಾಡಿ ಮಂತ್ರಪೂರ್ವಕಪೂಜೆ ಮಾಡಿದರು. ಚಂದನ ಅಗುರು ಕಸ್ತೂರಿ ಕುಂಕುಮ, ನಾನಾ ಬಗೆಯ ಹೂಮಾಲೆ ಧೂಪ ದೀಪ ನೈವೇದ್ಯ ವಸ್ತ್ರ, ನಾನಾ ಬಗೆಯ ಫಲ, ಮಣಿ ಮುತ್ತು ಹವಳಗಳಿಂದ ಅರ್ಚಿಸಿದರು. 'ಹೇ ದೇವಿ, ಜಗಜ್ಜನನಿ. ಸೃಷ್ಟಿಸ್ಥಿತಿಲಯಕಾರಿಣಿ, ನಂದಗೋಪನ ಕುಮಾರನನ್ನು ನಮಗೆ ಪತಿಯನ್ನಾಗಿ ನೀಡು.' - ಈ ಮಂತ್ರದಿಂದ ದೇವಿಯನ್ನು ಬೇಡಿ ಸಂಕಲ್ಪ ಮಾಡಿ ಮೂಲಮಂತ್ರದಿಂದ ಪೂಜಿಸಿದರು. ಆ ಮೂಲಮಂತ್ರ ಸಾಮವೇದೋಕ್ತ. ಅದರ ಶಕ್ತಿಗೆ ಎಂದೂ ಕುಂದಿಲ್ಲ.

'ಓಂ ಶ್ರೀ ದುರ್ಗಾಯೈ ಸರ್ವವಿಘ್ನವಿನಾಶಿನ್ಯೈ ನಮಃ' ಎಂಬುದೆ ಆ ಮಂತ್ರ. ಪುಷ್ಪಮಾಲೆ ನೈವೇದ್ಯ ಧೂಪ ದೀಪಗಳನ್ನು ಗೋಪಿಯರು ಈ ಮಂತ್ರದಿಂದ ಭಕ್ತಿಯಿಂದ ಕೊಟ್ಟರು. ಹವಳದ ಮಾಲೆಯಿಂದ ಈ ಮಂತ್ರವನ್ನು ಸಾವಿರಬಾರಿ ಜಪಿಸಿ ಸ್ತೋತ್ರ ಮಾಡಿ ನಮಿಸಿದರು.

'ಸರ್ವಮಂಗಳಗಳಿಗೆ ಮಾಂಗಲ್ಯ ನೀಡುವವಳೆ, ಸರ್ವಾಭೀಷ್ಟಪ್ರದೆ, ದೇವಿ, ಶಂಕರಪ್ರಿಯೆ, ನನಗೆ ನನ್ನ ಅಭೀಷ್ಟ ನೀಡು.' - ಹೀಗೆ ಹೇಳಿ ನಮಸ್ಕಾರ ಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನೂ ನೈವೇದ್ಯಗಳನ್ನೂ ನೀಡಿ ಮನೆಗೆ ಹೋಗುತ್ತಿದ್ದರು.

ನಾರದ, ಗೋಪಾಂಗನೆಯರು ಪಾರ್ವತಿಯನ್ನು ಭಕ್ತಿಯಿಂದ ಸ್ತುತಿಸಿದ ಉತ್ತಮವಾದ ಆ ಸ್ತೋತ್ರವನ್ನು ಕೇಳು. ಚಂದ್ರಸೂರ್ಯರಿಲ್ಲದೆ ಜಗತ್ತು ಬರಿ ಜಲಮಯವಾಗಿದ್ದಾಗ, ಕಪ್ಪಾದ ನೀರು ಚರಾಚರವನ್ನು ಆವರಿಸಿದ್ದಾಗ ಜಲಶಾಯಿಯಾದ ಹರಿ ಬ್ರಹ್ಮನಿಗೆ ಈ ಸ್ತೋತ್ರವನ್ನು ಉಪದೇಶಿಸಿದ. ಬಳಿಕ ನಿದ್ರೆ ಮಾಡಿದ. ಆಗ ನಾಭಿಕಮಲದಲ್ಲಿ ಕುಳಿತಿದ್ದ ಬ್ರಹ್ಮನನ್ನು ಮಧುಕೈಟಭರು ಪೀಡಿಸಿದರು. ಆಗ ಬ್ರಹ್ಮ ಮೂಲಪ್ರಕೃತಿಯನ್ನು ಹೀಗೆ ಸ್ತುತಿಸಿದ-

ಹೇ ದುರ್ಗೆ, ಶಿವೆ, ಅಭಯೆ, ಮಾಯೆ, ನಾರಾಯಣಿ, ಸನಾತನಿ, ಜಯೆ, ಸರ್ವಮಂಗಳೆ, ನಿನಗೆ ನಮಸ್ಕಾರ. ನನಗೆ ಮಂಗಳ ನೀಡು. ನಿನ್ನ **'ದುರ್ಗಾ'** ಎಂಬ ನಾಮದಲ್ಲಿ 'ದ'ಕಾರವು ನಾಶಕರವೆಂಬ ಅರ್ಥದಲ್ಲಿ ಇದೆ. ಉಕಾರ ವಿಘ್ನನಾಶ ಎಂಬ ಅರ್ಥದ್ದು. ರೇಫ ರೋಗಪರಿಹಾರಾರ್ಥಕ. 'ಗ' ಪಾಪ ಪರಿಹಾರಾರ್ಥಕ. ಕೊನೆಯ 'ಆ'

ಭೂಷಣವನ್ನು, ಹೇ ನಂದನಂದನ, ಸ್ವೀಕರಿಸು. ಸರ್ವಮಂಗಳಕಾರ್ಯಗಳಲ್ಲಿ ಪ್ರಧಾನವಾಗಿ ಬೇಕಾಗಿರುವ ಮಂಗಲಪ್ರದವಾದ ಈ ಗಂಧವನ್ನು, ದೀನಬಂಧು, ಸ್ವೀಕರಿಸು. ನೆಲ್ಲಿ ಶ್ರೀಫಲ ಪತ್ರಗಳಿಂದ ಮಾಡಿದ, ಸರ್ವಲೋಕಗಳಿಗೆ ಅಪೇಕ್ಷಿತವಾದ ಮನೋಹರವಾದ ತೈಲವನ್ನು, ಭಗವಂತನೆ, ಸ್ವೀಕರಿಸು. ಕರ್ಪೂರಾದಿಗಳಿಂದ ಸುಗಂಧ ಭರಿತವಾದ, ಎಲ್ಲರಿಗೂ ಅಭೀಷ್ಟವಾದ ತಾಂಬೂಲವನ್ನು ನೀಡುತ್ತೇನೆ, ಪ್ರಭು, ಸ್ವೀಕರಿಸು. ಎಲ್ಲರಿಗೂ ಸುಖಕರವಾದ, ಒಳ್ಳೆಯ ರತ್ನಪಾತ್ರೆಯಲ್ಲಿ ತಂದಿಟ್ಟ ಸವಿಯಾದ ಮಧುಪರ್ಕವನ್ನು, ಗೋಪೀನಾಥ, ಸ್ವೀಕರಿಸು. ಸುಗಂಧಭರಿತವಾದ ಪವಿತ್ರವಾದ ನಿರ್ಮಲ ಗಂಗಾಜಲವನ್ನು ಪುನರಾಚಮನಕ್ಕೆ, ಮಧುಸೂದನ, ಸ್ವೀಕರಿಸು.''

- ಹೀಗೆ ಷೋಡಶೋಪಚಾರಗಳನ್ನು ನೀಡಿ, ''ನಾನಾ ಬಗೆಯ ಹೂಗಳಿಂದ ಪೋಣಿಸಿ ಬಿಳಿದಾರದಿಂದ ಕಟ್ಟಿದ ಭೂಷಣಗಳಲ್ಲಿ ಶ್ರೇಷ್ಠವಾದ ಮಾಲೆಯನ್ನು, ಪ್ರಭು, ಸ್ವೀಕರಿಸು'' ಎಂಬ ಮಂತ್ರದಿಂದ ಮತ್ತು ಮೂಲಮಂತ್ರದಿಂದ ಪುಷ್ಪಾಂಜಲಿ ನೀಡಿ ಕೈ ಮುಗಿದು ಹೀಗೆ ಸ್ತೋತ್ರ ಮಾಡಬೇಕು:

'ಹೇ ಕೃಷ್ಣ, ರಾಧಾರಮಣ, ಕರುಣಾಸಾಗರ, ಪ್ರಭು, ಘೋರ ಭಯಂಕರವಾದ ಸಂಸಾರಸಾಗರದಲ್ಲಿ ನನ್ನನ್ನು ಉದ್ಧರಿಸು. ನಾನು ನೂರಾರು ಜನ್ಮಗಳಲ್ಲಿ ಬಳಲಿ ಬಂದು ಉದ್ವೇಗಗೊಂಡಿದ್ದೇನೆ. ನನ್ನ ಕರ್ಮಪಾಶದ ಬಂಧನದಲ್ಲಿ ಕಟ್ಟು ಬಿದ್ದಿದ್ದೇನೆ, ಬಿಡಿಸು. ನಿನ್ನ ಪಾದಕಮಲಗಳಲ್ಲಿ ಮಣಿದ ಶರಣಾಗತನಾದ ನನ್ನನ್ನು ಈಕ್ಷಿಸು. ಭವ ಪಾಶ ಭಯದಿಂದ ಭೀತನಾಗಿ ಶರಣಾಗತನಾಗಿರುವ ನನ್ನನ್ನು ಕಾಪಾಡು. ಭಕ್ತಿ ಇಲ್ಲ, ಕ್ರಿಯೆ ಇಲ್ಲ, ವಿಧಿ ಇಲ್ಲ, ವಸ್ತು ಇಲ್ಲ, ಮಂತ್ರವಿಲ್ಲ. ಈ ಎಲ್ಲ ನ್ಯೂನತೆಗಳನ್ನು ಕಳೆದು ಪೂರ್ಣಗೊಳಿಸು. ವೇದೋಕ್ತ ವಿಧಿಯನ್ನರಿಯದಿರುವುದರಿಂದ ಕರ್ಮದಲ್ಲಿ ಅಂಗವೈಕಲ್ಯ ಬರಬಹುದು. ಅದು, ಶ್ರೀಹರಿ, ನಿನ್ನ ನಾಮೋಚ್ಚಾರಣೆಯಿಂದ ಪೂರ್ಣವಾಗುವುದು.' ಹೀಗೆ ಸ್ತೋತ್ರಮಾಡಿ ನಮಿಸಿ ವಿಪ್ರರಿಗೆ ದಕ್ಷಿಣೆ ನೀಡಿ ಮಹೋತ್ಸವ ಮಾಡಿ ಅಂದು ರಾತ್ರಿ ಜಾಗರಣ ಮಾಡಬೇಕು. ವ್ರತೋಪವಾಸ ಮಾಡಿ ರಾತ್ರಿ ನಿದ್ರೆ ಮಾಡಿದರೆ ವ್ರತಫಲದಲ್ಲಿ ಅರ್ಧಾಂಶ ಮಾತ್ರ ಲಭಿಸುವುದು. ಮರುದಿನ ದ್ವಾದಶಿ ಬೆಳಿಗ್ಗೆ ಒಮ್ಮೆ ಮಾತ್ರ ಭೋಜನ.

'ಹೇ ಅನ್ನವೆ, ನೀನು ಬ್ರಹ್ಮ ನಿರ್ಮಿಸಿದ ಪ್ರಾಣಿಗಳ ಪ್ರಾಣರೂಪನು. ವಿಷ್ಣು ರೂಪನೆ, ನೀನು ನನಗೆ ವ್ರತೋಪವಾಸಗಳ ಫಲವನ್ನು ನೀಡು' -

ಎಂಬ ಮಂತ್ರದಿಂದ ಹವಿಷ್ಯಾನ್ನ ಉಂಡು ಪಾರಣ ಮಾಡಬೇಕು. ಹೀಗೆ ಯಾರು ಭಕ್ತಿಯಿಂದ ಈ ವ್ರತವನ್ನು ಆಚರಿಸುವನೋ ತನ್ನನ್ನು ಮಾತ್ರವಲ್ಲದೆ ತನ್ನ ವಂಶದ ಹಿಂದಿನ ಮುಂದಿನ ಏಳು ತಲೆಮಾರಿನವರನ್ನೂ ಉದ್ಧರಿಸುವನು. ತಾಯಿ ಸೋದರ ಅತ್ತೆ ಮಾವ ಮಗಳು ಅಳಿಯ ಭೃತ್ಯರನ್ನೂ ಉದ್ಧರಿಸುವನು. ನಾರದ, ಇದು ಶ್ರೀಕೃಷ್ಣನ ವ್ರತ, ಸುಖಕರ, ಮೋಕ್ಷದಾಯಕ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಏಕಾದಶೀವ್ರತನಿರೂಪಣವೆಂಬ ಇಪ್ಪತ್ತಾರನೆ ಅಧ್ಯಾಯ ಮುಗಿದುದು*

## ಗೋಪಿಕಾವಸ್ತ್ರಾಪಹರಣ

## ಅಧ್ಯಾಯ - ೨೭

**ನಾರಾಯಣ:-** ನಾರದ, ಕೇಳು, ಶ್ರೀಕೃಷ್ಣ ಗೋಪಿಯರ ವಸ್ತ್ರಾಪಹಾರ ಮಾಡಿ ವರ ನೀಡಿದ ಪ್ರಸಂಗವನ್ನೂ ಹೇಳುತ್ತೇನೆ. ಹೇಮಂತ ಋತುವಿನ ಮೊದಲನೆ ತಿಂಗಳಲ್ಲಿ ಗೋಪಿಯರು ಕೃಷ್ಣನನ್ನು ಪತಿಯನ್ನಾಗಿ ಪಡೆಯುವ ಬಯಕೆಯಿಂದ ಹವಿಷ್ಯಾನ್ನ ಉಣುತ್ತ ಪ್ರತಿದಿನ ಯಮುನಾ ತೀರದಲ್ಲಿ ಸ್ನಾನ ಮಾಡಿ ಮರಳಿಂದ ಪಾರ್ವತಿಯ ವಿಗ್ರಹವನ್ನು ಮಾಡಿ ಆವಾಹನ ಮಾಡಿ ಮಂತ್ರಪೂರ್ವಕಪೂಜೆ ಮಾಡಿದರು. ಚಂದನ ಅಗುರು ಕಸ್ತೂರಿ ಕುಂಕುಮ, ನಾನಾ ಬಗೆಯ ಹೂಮಾಲೆ ಧೂಪ ದೀಪ ನೈವೇದ್ಯ ವಸ್ತ್ರ, ನಾನಾ ಬಗೆಯ ಫಲ, ಮಣಿ ಮುತ್ತು ಹವಳಗಳಿಂದ ಅರ್ಚಿಸಿದರು. 'ಹೇ ದೇವಿ, ಜಗಜ್ಜನನಿ. ಸೃಷ್ಟಿಸ್ಥಿತಿಲಯಕಾರಿಣಿ, ನಂದಗೋಪನ ಕುಮಾರನನ್ನು ನಮಗೆ ಪತಿಯನ್ನಾಗಿ ನೀಡು.' - ಈ ಮಂತ್ರದಿಂದ ದೇವಿಯನ್ನು ಬೇಡಿ ಸಂಕಲ್ಪ ಮಾಡಿ ಮೂಲಮಂತ್ರದಿಂದ ಪೂಜಿಸಿದರು. ಆ ಮೂಲಮಂತ್ರ ಸಾಮವೇದೋಕ್ತ. ಅದರ ಶಕ್ತಿಗೆ ಎಂದೂ ಕುಂದಿಲ್ಲ.

'ಓಂ ಶ್ರೀ ದುರ್ಗಾಯೈ ಸರ್ವವಿಘ್ನವಿನಾಶಿನ್ಯೈ ನಮಃ' ಎಂಬುದೆ ಆ ಮಂತ್ರ. ಪುಷ್ಪಮಾಲೆ ನೈವೇದ್ಯ ಧೂಪ ದೀಪಗಳನ್ನು ಗೋಪಿಯರು ಈ ಮಂತ್ರದಿಂದ ಭಕ್ತಿಯಿಂದ ಕೊಟ್ಟರು. ಹವಳದ ಮಾಲೆಯಿಂದ ಈ ಮಂತ್ರವನ್ನು ಸಾವಿರಬಾರಿ ಜಪಿಸಿ ಸ್ತೋತ್ರ ಮಾಡಿ ನಮಿಸಿದರು.

'ಸರ್ವಮಂಗಳಗಳಿಗೆ ಮಾಂಗಲ್ಯ ನೀಡುವವಳೆ, ಸರ್ವಾಭೀಷ್ಟಪ್ರದೆ, ದೇವಿ, ಶಂಕರಪ್ರಿಯೆ, ನನಗೆ ನನ್ನ ಅಭೀಷ್ಟ ನೀಡು.' - ಹೀಗೆ ಹೇಳಿ ನಮಸ್ಕಾರ ಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನೂ ನೈವೇದ್ಯಗಳನ್ನೂ ನೀಡಿ ಮನೆಗೆ ಹೋಗುತ್ತಿದ್ದರು.

ನಾರದ, ಗೋಪಾಂಗನೆಯರು ಪಾರ್ವತಿಯನ್ನು ಭಕ್ತಿಯಿಂದ ಸ್ತುತಿಸಿದ ಉತ್ತಮವಾದ ಆ ಸ್ತೋತ್ರವನ್ನು ಕೇಳು. ಚಂದ್ರಸೂರ್ಯರಿಲ್ಲದೆ ಜಗತ್ತು ಬರಿ ಜಲಮಯವಾಗಿದ್ದಾಗ, ಕಪ್ಪಾದ ನೀರು ಚರಾಚರವನ್ನು ಆವರಿಸಿದ್ದಾಗ ಜಲಶಾಯಿಯಾದ ಹರಿ ಬ್ರಹ್ಮನಿಗೆ ಈ ಸ್ತೋತ್ರವನ್ನು ಉಪದೇಶಿಸಿದ. ಬಳಿಕ ನಿದ್ರೆ ಮಾಡಿದ. ಆಗ ನಾಭಿಕಮಲದಲ್ಲಿ ಕುಳಿತಿದ್ದ ಬ್ರಹ್ಮನನ್ನು ಮಧುಕೈಟಭರು ಪೀಡಿಸಿದರು. ಆಗ ಬ್ರಹ್ಮ ಮೂಲಪ್ರಕೃತಿಯನ್ನು ಹೀಗೆ ಸ್ತುತಿಸಿದ-

ಹೇ ದುರ್ಗೆ, ಶಿವೆ, ಅಭಯೆ, ಮಾಯೆ, ನಾರಾಯಣಿ, ಸನಾತನಿ, ಜಯೆ, ಸರ್ವಮಂಗಳೆ, ನಿನಗೆ ನಮಸ್ಕಾರ. ನನಗೆ ಮಂಗಳ ನೀಡು. ನಿನ್ನ **'ದುರ್ಗಾ'** ಎಂಬ ನಾಮದಲ್ಲಿ 'ದ'ಕಾರವು ನಾಶಕರವೆಂಬ ಅರ್ಥದಲ್ಲಿ ಇದೆ. ಉಕಾರ ವಿಘ್ನನಾಶ ಎಂಬ ಅರ್ಥದ್ದು. ರೇಫ ರೋಗಪರಿಹಾರಾರ್ಥಕ. 'ಗ' ಪಾಪ ಪರಿಹಾರಾರ್ಥಕ. ಕೊನೆಯ 'ಆ'

ಕಾರ ಶತ್ರುನಾಶಾರ್ಥಕ. ನಿನ್ನ ಸ್ಮರಣೆ, ನಿನ್ನ ನಾಮೋಚ್ಚಾರಣಗಳಿಂದ ದೈತ್ಯ, ವಿಘ್ನ, ರೋಗ, ಪಾಪ, ಶತ್ರುಗಳ ಪರಿಹಾರವಾಗುವುದರಿಂದ ನೀನು 'ದುರ್ಗಾ' ಎನಿಸಿರುವೆ. ಇನ್ನು 'ದುರ್ಗ' ಎಂದರೆ ಆಪತ್ತು. 'ಆ' ಎಂದರೆ ನಾಶ. ಆಪತ್ತನ್ನು ಕಳೆಯುವುದರಿಂದಲೂ 'ದುರ್ಗಾ' ಎನಿಸುವಿ. 'ದುರ್ಗ' ಎಂದು ಒಬ್ಬ ದೈತ್ಯನ ಹೆಸರಿದೆ. 'ಆ' ಎಂದರೆ ನಾಶ. ಆ ದೈತ್ಯನನ್ನು ಕೊಂದುದರಿಂದಲೂ ದುರ್ಗೆ ಎನಿಸುವಿ.

**'ಶಿವಾ'** ಎಂಬ ನಿನ್ನ ನಾಮದಲ್ಲಿ 'ಶ' ಕಾರಕ್ಕೆ ಕಲ್ಯಾಣ ಎಂದರ್ಥ. 'ಇ' ಎಂದರೆ ಉತ್ಕೃಷ್ಟ. 'ವಾ' ಎಂದರೆ ನೀಡುವವಳು. ಉತ್ಕೃಷ್ಟ ಮಂಗಳದಾಯಕಳಾದ್ದರಿಂದ 'ಶಿವಾ' ಎನಿಸಿರುವಿ. 'ಶಿವ' ಎಂದರೆ ಮೋಕ್ಷ. 'ಆ' ಎಂದರೆ ನೀಡುವವಳು. ಮೋಕ್ಷದಾಯಕಳಾದ್ದರಿಂದಲೂ 'ಶಿವಾ.'

**'ಅಭಯಾ'** ಎಂಬಲ್ಲಿ 'ಅಭಯ' ಎಂದರೆ ಭಯಪರಿಹಾರ. **'ಆ'** ದಾಯಕಳು. ಅಭಯ ನೀಡುವವಳು 'ಅಭಯಾ'.

**'ಮಾಯಾ'** ಎಂಬಲ್ಲಿ 'ಮಾ' ರಾಜ್ಯಲಕ್ಷ್ಮಿ. 'ಯಾ' ನೀಡುವವಳು. ಅಥವಾ 'ಮಾ' ಮೋಕ್ಷಸಂಪತ್ತು. 'ಯಾ' ಅದನ್ನು ನೀಡುವವಳು.

**'ನಾರಾಯಣೀ'** ಎಂದರೆ ನಾರಾಯಣನ ಅರ್ಧಾಂಗಭೂತಳು, ಅವನಿಗೆ ಸಮಾನಳು. ಸದಾ ಅವನ ಶರೀರದಲ್ಲಿರುವವಳು. ಆದರಿಂದ 'ನಾರಾಯಣೀ' ಎನಿಸುವಿ.

**'ಸನಾತನೀ'** ಎಂಬಲ್ಲಿ 'ಸನಾತನ' ಎಂದರೆ ನಿರ್ಗುಣ, ನಿತ್ಯ. ಸದಾ ನಿರ್ಗುಣಳೂ ನಿತ್ಯಳೂ ಆದ್ದರಿಂದ 'ಸನಾತನಿ'.

**'ಜಯಾ'** ಎಂಬಲ್ಲಿ ಜಯವೆಂದರೆ ಮಂಗಳ. 'ಆ' ಕಾರಕ್ಕೆ ದಾಯಕಳೆಂದರ್ಥ. ಜಯದಾಯಕಳಾದ್ದರಿಂದ 'ಜಯಾ' ಎನಿಸುವಿ.

**'ಸರ್ವಮಂಗಳಾ'** ಎಂಬಲ್ಲಿ 'ಸರ್ವಮಂಗಳ' ಎಂದರೆ ಸಂಪೂರ್ಣವಾದ ಐಶ್ವರ್ಯ. ಅದನ್ನು 'ಆ' ಕೊಡುವವಳು 'ಸರ್ವಮಂಗಳಾ' ಈ ಎಂಟು ನಾಮಗಳನ್ನು ನಾರಾಯಣನು ನಾಭಿಕಮಲದಲ್ಲಿದ್ದ ಬ್ರಹ್ಮನಿಗೆ ಉಪದೇಶಿಸಿದ್ದ. ಅದನ್ನೆ ಬ್ರಹ್ಮ ಉಚ್ಚರಿಸಿದ. ಆಗ ದುರ್ಗೆ ಅವನಿಗೆ ಶ್ರೀಕೃಷ್ಣಕವಚಮಂತ್ರ ನೀಡಿ ಅದೃಶ್ಯಳಾದಳು.

ತ್ರಿಪುರಾಸುರಸಂಗ್ರಾಮಕಾಲದಲ್ಲಿ ಈ ಕವಚದ ಪ್ರಭಾವದಿಂದಲೆ ಹರಿ ವೃಷಭರೂಪದಿಂದ ಪ್ರಾದುರ್ಭೂತನಾಗಿ ರಥಸಮೇತನಾದ ಶಂಕರನನ್ನು ತಲೆಯಿಂದ ಎತ್ತಿ ನಿಲ್ಲಿಸಿ ಅಭಯ ನೀಡಿದ. ಬ್ರಹ್ಮ ಶಂಕರನಿಗೆ ಸ್ತೋತ್ರವನ್ನೂ ಈ ಕವಚವನ್ನೂ ಉಪದೇಶಿಸಿದ. ಶಂಕರ ಈ ಸ್ತೋತ್ರ ಕವಚಗಳ ಬಲದಿಂದ ತ್ರಿಪುರರನ್ನು ಸಂಹರಿಸಿದ. ಸ್ತೋತ್ರದಿಂದ ಗೋಪಿಯರು ದುರ್ಗೆಯನ್ನು ಸ್ತುತಿಸಿ ಅದರ ಪ್ರಭಾವದಿಂದ ಕೃಷ್ಣನನ್ನು ಪತಿಯನ್ನಾಗಿ ಪಡೆದರು. ಗೋಪಕನ್ಯೆಯರು ಮಾಡಿದ ಈ ಸ್ತೋತ್ರ 'ಸರ್ವಮಂಗಲ' ಎಂಬ ಹೆಸರಿನದು. ಅಭೀಷ್ಟಾರ್ಥದಾಯಕ, ಸಕಲವಿಘ್ನನಿವಾರಕ. ಶಿವಭಕ್ತನಿರಲಿ, ವಿಷ್ಣುಭಕ್ತನಿರಲಿ, ಯಾರು ಈಸ್ತೋತ್ರವನ್ನು ಮೂರು ಸಂಧ್ಯಾಕಾಲಗಳಲ್ಲಿ ಭಕ್ತಿಯಿಂದ ಪಠಿಸುವನೋ ಅವನು ಎಲ್ಲ ಆಪತ್ತುಗಳಿಂದ

ಮುಕ್ತನಾಗುತ್ತಾನೆ. ರಾಜದ್ವಾರ, ಸ್ಮಶಾನ, ಕಾರಾಗಾರ, ಗುರುಶಾಪ, ಬ್ರಹ್ಮಶಾಪ, ಬಂಧುದ್ವೇಷ, ಸ್ಥಾನಭ್ರಂಶ, ಧನನಾಶ, ಜಾತಿನಾಶ, ಪತಿವಿಯೋಗ, ಪುತ್ರವಿಯೋಗ, ದುರ್ಜನರ ಸರ್ಪಗಳ ಭೀತಿ - ಎಲ್ಲ ಭಯ ಶೋಕ ಆಪತ್ತುಗಳಲ್ಲಿಯೂ ಈಸ್ತೋತ್ರದ ಸ್ಮರಣಮಾತ್ರದಿಂದ ಬಿಡುಗಡೆಯಾಗುವುದು. ಅಭೀಷ್ಟ ದೊರಕುವುದು ಸರ್ವೈಶ್ವರ್ಯ ಲಭಿಸುವುದು. ಇಹಲೋಕದಲ್ಲಿ ಸತತ ಹರಿಭಕ್ತಿ ಹರಿಸ್ಮರಣೆಗಳು, ಪರದಲ್ಲಿ ಹರಿದಾಸ್ಯ ಪಾರ್ವತಿಯ ಅನುಗ್ರಹದಿಂದ ಲಭ್ಯ.

ಗೋಪಿಯರು ಈ ಸ್ತೋತ್ರದಿಂದ ಒಂದು ತಿಂಗಳ ಕಾಲ ಪ್ರತಿನಿತ್ಯ ದೇವಿಯನ್ನು ಸ್ತುತಿಸಿದರು. ಒಂದು ತಿಂಗಳು ಪೂರ್ಣವಾದಾಗ ಕೊನೆಯ ದಿನದಲ್ಲಿ ಗೋಪಿಯರು ದಡದಲ್ಲಿ ಬಟ್ಟೆಗಳನ್ನಿಟ್ಟು ಸ್ನಾನಕ್ಕೆ ಇಳಿದರು. ನೀರಲ್ಲಿ ಆಟವಾಡುವ ಕುತೂಹಲ ಅವರಿಗೆ ಉಂಟಾಯಿತು. ಕೃಷ್ಣನಿಗೆ ತಮ್ಮ ಮನಸ್ಸನ್ನು ಅರ್ಪಿಸಿ ಆಟವಾಡಲು ತೊಡಗಿದರು. ಆಗ ಕೃಷ್ಣ ಗೋಪಾಲಕರೊಂದಿಗೆ ಬಂದು ಸೀರೆಗಳನ್ನು ಎತ್ತಿ ಮರದ ಕೊಂಬೆಗಳಲ್ಲಿಟ್ಟುಕೊಂಡು ದೂರದಲ್ಲಿ ನೋಡುತ್ತ ನಿಂತ.

ಶ್ರೀದಾಮ, ಸುದಾಮ, ವಸುದಾಮ, ಸುಬಲ, ಸುಪಾರ್ಶ್ವ, ಶುಭಾಂಗ, ಸುಂದರ, ಚಂದ್ರಭಾನ, ವೀರಮಾನ, ಸೂರ್ಯಭಾನ, ವಸುಭಾನ, ರತ್ನಭಾನ - ಇವರು ಹನ್ನೆರಡು ಮಂದಿ ಗೋಪಾಲಕರು, ಶ್ರೀಕೃಷ್ಣ ಬಲರಾಮರೂ ಸೇರಿದಂತೆ ಹದಿನಾಲ್ಕು ಮಂದಿ ಪ್ರಧಾನರು. ಇನ್ನು ಕೃಷ್ಣನ ಮಿತ್ರರಾದ ಗೋಪಾಲಕರು ಕೋಟಿಗಟ್ಟಲೆ ಇದ್ದರು. ಎಲ್ಲರೂ ವಸ್ತ್ರಗಳನ್ನೆತ್ತಿಕೊಂಡು ದೂರದಲ್ಲಿ ನಿಂತರು. ಕೃಷ್ಣನೂ ಕೆಲವು ಸೀರೆಗಳನ್ನು ಎತ್ತಿ ಗಂಟುಕಟ್ಟಿ ಈಚಲ ಮರದ ಮೇಲೇರಿ ಇಟ್ಟು ಗೋಪಿಯರನ್ನು ಕೂಗಿ ಕರೆದು ಹೇಳಿದ.

'ಗೋಪಿಯರೆ, ನಿಮ್ಮ ವ್ರತಕರ್ಮ ಹಾಳಾಯಿತು. ವ್ರತವನ್ನು ಸಂಕಲ್ಪಿಸಿ ವಿವಸ್ತ್ರರಾಗಿ ನೀರಲ್ಲಿ ಹೇಗೆ ಇಳಿದಿರಿ? ವ್ರತದಲ್ಲಿ ವಿವಸ್ತ್ರೆಯಾಗಿ ಸ್ನಾನ ಮಾಡುವವಳಿಗೆ ವರುಣ ಕುಪಿತನಾಗುತ್ತಾನೆ. ವರುಣಭೃತ್ಯರು ಅದರಿಂದ ನಿಮ್ಮ ಬಟ್ಟೆಗಳನ್ನು ಅಪಹರಿಸಿದ್ದಾರೆ. ಈಗ ವಿವಸ್ತ್ರೆಯರಾಗಿ ಹೇಗೆ ಮನೆಗೆ ಹೋಗುವಿರಿ? ವ್ರತದ ಗತಿ ಏನಾದೀತು? ವ್ರತದಿಂದ ಆರಾಧ್ಯಳಾದ ದೇವಿ ಈಗ ನಿಮ್ಮ ವ್ರತಕ್ಕೆ ಫಲವನ್ನು ಹೇಗೆ ನೀಡುವಳು?'

ಶ್ರೀಕೃಷ್ಣನ ಮಾತನ್ನು ಕೇಳಿ ಗೋಪಿಯರು ಚಿಂತಾಗ್ರಸ್ತರಾದರು ಯಮುನೆಯ ದಡವನ್ನು ಕಂಡರು. ಅಲ್ಲಿ ಸೀರೆಗಳಿರಲಿಲ್ಲ. ಪೂಜೆಯ ದ್ರವ್ಯಗಳೂ ಇರಲಿಲ್ಲ. ದುಃಖದಿಂದ ಅಳಲು ತೊಡಗಿದರು. 'ಎಲ್ಲಿ ಸೀರೆಗಳು? ಎಲ್ಲಿ ಪೂಜೆಯ ದ್ರವ್ಯಗಳು?' ಎಂದರು. ಕೈಮುಗಿದು ಭಕ್ತಿಯಿಂದ ವಿನಯಪೂರ್ವಕವಾಗಿ ಹೇಳಿದರು.

'ಪ್ರಭು, ನಮ್ಮ ಸೀರೆಗಳನ್ನು ಕೊಟ್ಟುಬಿಡು. ಅವುಗಳನ್ನು ಉಟ್ಟುಕೊಂಡು ವ್ರತವನ್ನು ಆಚರಿಸುವೆವು. ಪೂಜೆಯ ದ್ರವ್ಯಗಳನ್ನು ನಾವು ನಿನಗೆ ಕೊಟ್ಟಿಲ್ಲ. ಕೊಡದಿರುವಾಗ ಅವುಗಳನ್ನು ನೀನು ಸ್ವೀಕರಿಸುವುದು ಉಚಿತವಲ್ಲ. ಆದರೂ ಸ್ವೀಕರಿಸು. ನಾವು ಬೇರೆಯೆ ದ್ರವ್ಯಗಳಿಂದ ಪೂಜೆ ನಡೆಸುವೆವು.' ಅಷ್ಟರಲ್ಲಿ ಶ್ರೀದಾಮ

ತನ್ನ ಕೈಯಲ್ಲಿದ್ದ ಸೀರೆಗಂಟನ್ನು ಗೋಪಿಯರಿಗೆ ತೋರಿಸುತ್ತ ದೂರ ಓಡಲು ತೊಡಗಿದ. ಆತ ಸೀರೆಗಂಟನ್ನು ಹಿಡಿದುಕೊಂಡು ಓಡಿಹೋಗುತ್ತಿರುವುದನ್ನು ಕಂಡ ಗೋಪಿಯರು ಕುಪಿತರಾದರು. ಆ ಗೋಪಿಯರಲ್ಲಿ ಪ್ರಧಾನಳಾದ ರಾಧೆ ಹೇಳಿದಳು-

'ಸುಶೀಲೆ, ಶಶಿಕಲೆ, ಚಂದ್ರಮುಖಿ, ಮಾಧವಿ, ಕದಂಬಮಾಲೆ, ಕುಂತಿ, ಯಮುನೆ, ಸರ್ವಮಂಗಲೆ, ಪದ್ಮಮುಖಿ, ಸಾವಿತ್ರಿ, ಪಾರಿಜಾತೆ, ಜಾಹ್ನವಿ, ಸುಧಾಮುಖಿ, ಶುಭೆ, ಪದ್ಮೆ, ಗೌರಿ, ಸ್ವಯಂಪ್ರಭೆ, ಕಾಲಿ, ಕಮಲೆ, ದುರ್ಗೆ, ಸರಸ್ವತಿ, ಭಾರತಿ, ಅಪರ್ಣೆ, ರತಿ, ಗಂಗೆ, ಅಂಬಿಕೆ, ಸತಿ, ಸುಂದರಿ, ಕೃಷ್ಣಪ್ರಿಯೆ, ಮಧುಮತಿ, ಚಂಪೆ, ಚಂದನನಂದಿನಿ, ನೀವೆಲ್ಲರೂ ನೀರಿನಿಂದ ಎದ್ದು ಹೋಗಿ ಆ ಗೋಪಾಲಕನನ್ನು ಕಟ್ಟಿ ಎಳೆದು ತನ್ನಿ.'

ಗೋಪಿಯರೆಲ್ಲರೂ ರಾಧೆಯ ಆಜ್ಞೆಯಂತೆ ನೀರಿಂದ ಮೇಲೆ ಎದ್ದು ಕೈಯಿಂದ ಯೋನಿಯನ್ನು ಮುಚ್ಚಿಕೊಂಡು ಶ್ರೀದಾಮನ ಬಳಿಗೆ ಓಡಿದರು. ಈ ಪ್ರಧಾನ ಗೋಪಿಯರ ಸಹಚರಿಯರಾದ ಸಾವಿರಾರು ಗೋಪಿಯರೂ ಹಾಗೇ ಕೋಪದಿಂದ ಕಣ್ಣು ಕೆಂಪಗೆ ಮಾಡಿಕೊಂಡು ವೇಗದಿಂದ ಶ್ರೀದಾಮನನ್ನು ಬೆನ್ನಟ್ಟಿ ಓಡಿದರು. ಅವನು ಬೇರೆ ಗೋಪಾಲಕರೆಲ್ಲ ನಿಂತಲ್ಲಿಗೆ ಓಡಿ ಬಂದ. ಅವರೆಲ್ಲರನ್ನೂ ಗೋಪಿಯರು ಸುತ್ತುವರಿದರು. ಈಗ ಗೋಪಾಲಕರಿಗೆ ಭಯವಾಯಿತು. ಅವರೆಲ್ಲರೂ ತಮ್ಮ ಕೈಗಳಲ್ಲಿದ್ದ ಸೀರೆಗಂಟುಗಳನ್ನು ಕೃಷ್ಣನ ಕೈಗೇ ಕೊಟ್ಟರು. ಕೃಷ್ಣ ಅವೆಲ್ಲವನ್ನೂ ಮರಗಳ ಬೇರೆ ಬೇರೆ ಕೊಂಬೆಗಳಲ್ಲಿ ಇಟ್ಟು ಗೋಪಿಯರೊಡನೆ ಪರಿಹಾಸ ಮಾಡುತ್ತ ನುಡಿದ -

'ಗೋಪಿಯರೆ ನೀವು ಈಗ ನಗ್ನರಾಗಿರುವಿರಿ. ಏನು ಮಾಡಬಲ್ಲಿರಿ? ಸೀರೆಯನ್ನು ಬೇಡಲು ಕೈ ಮುಗಿಯಿರಿ. ನಿಮ್ಮ ನಾಯಕಿಯ ಬಳಿ ಇದನ್ನು ತಿಳಿಸಿರಿ. ಎಲ್ಲರೂ ಬೇಗನೆ ಬಂದು ಎರಡು ಕೈಗಳನ್ನು ಮುಗಿದೇ ಸೀರೆ ಕೊಡೆಂದು ಬೇಡಿರಿ. ಇಲ್ಲದಿದ್ದರೆ ನಾನು ಕೊಡಲಾರೆ. ನಿಮ್ಮ ನಾಯಕಿ ರಾಧೆ ಈಗ ಏನು ಮಾಡಬಲ್ಲಳು? ವ್ರತದಲ್ಲಿ ಆರಾಧ್ಯಳಾದ ದೇವಿಯಾದರೂ ಏನು ಮಾಡಬಲ್ಲಳು? ನಾನು ಹೇಳಿದ ಮಾತನ್ನೆಲ್ಲ ರಾಧೆಗೆ ಹೇಳಿರಿ.'

ಶ್ರೀಕೃಷ್ಣನ ಮಾತನ್ನು ಕೇಳಿ ಎಲ್ಲ ಗೋಪಕನ್ನಿಕೆಯರೂ ಕೃಷ್ಣನನ್ನು ಕೋಪದ ಕಡೆಗಣ್ಣ ನೋಟದಿಂದ ನೋಡಿ ರಾಧೆಯ ಬಳಿಗೆ ಹೋದರು. ಕೃಷ್ಣ ಹೇಳಿದುದನ್ನೆಲ್ಲ ನಿವೇದಿಸಿಕೊಂಡರು. ಅದನ್ನು ಕೇಳಿ ರಾಧೆ ನಕ್ಕಳು. ಅವಳಿಗೆ ಕೃಷ್ಣನನ್ನು ಸೇರುವ ಆಸೆ ಬಲಿಯಿತು. ಮೈ ರೋಮಾಂಚಗೊಂಡಿತು. ಆದರೂ ಲಜ್ಜೆಯಿಂದ ಕೃಷ್ಣನ ಬಳಿಗೆ ಹೋಗದೆ ನೀರಲ್ಲಿಯೆ ಯೋಗಾಸನ ಮಾಡಿ ಕೃಷ್ಣನ ಪಾದಕಮಲವನ್ನು ಧ್ಯಾನಿಸಿದಳು. ಕಣ್ಣೀರು ಸುರಿಸುತ್ತ ಭಾವಾತಿರೇಕದಿಂದ ಪ್ರಾಣೇಶನನ್ನು ಸ್ತುತಿಸಿದಳು -

'ಹೇ ಗೋಲೋಕನಾಥ, ಗೋಪೀನಾಥ, ನನ್ನ ನಾಥ, ಪ್ರಾಣಪ್ರಿಯ, ದೀನ ಬಂಧು, ದೀನನಾಥ, ಸರ್ವೇಶ್ವರ, ನಿನಗೆ ನಮಸ್ಕಾರ. ಗೋಪರೊಡೆಯ, ಗೋವುಗಳೊಡೆಯ, ಯಶೋದಾನಂದವರ್ಧನ, ನಂದಸುತ, ಸದಾನಂದ, ನಿತ್ಯಾನಂದ, ನಿನಗೆ ನಮಸ್ಕಾರ. ಇಂದ್ರನ ದರ್ಪ ಕಳೆದವನೆ, ಬ್ರಹ್ಮನ ದರ್ಪ ಕಳೆದವನೆ.

ಕಾಲಿಯಮರ್ದನನೆ, ಪ್ರಾಣನಾಥ, ಕೃಷ್ಣ, ನಿನಗೆ ನಮಸ್ಕಾರ. ಶಿವ ಅನಂತರಿಗೆ ಈಶ, ಬ್ರಹ್ಮನ ಈಶ, ಬ್ರಾಹ್ಮಣರೊಡೆಯ, ಪರಾತ್ಪರ ಬ್ರಹ್ಮಸ್ವರೂಪ ಬ್ರಹ್ಮಜ್ಞ ಬ್ರಹ್ಮಕಾರಣ, ನಿನಗೆ ನಮಸ್ಕಾರ. ಚರಾಚರ ಜಗದ್ ವೃಕ್ಷಕ್ಕೆ ಬೀಜರೂಪ, ಗುಣಾತೀತ, ಗುಣಾತ್ಮಕ, ಗುಣಬೀಜ, ಗುಣಾಧಾರ, ಗುಣೇಶ್ವರ, ನಿನಗೆ ನಮಸ್ಕಾರ. ಅಣಿಮಾದಿ ಸಿದ್ಧಿಗಳೊಡೆಯ, ಸಿದ್ಧಿಗೆ ಸಿದ್ಧಿಸ್ವರೂಪ, ತಪಸ್ವಿ, ತಪಸ್ಸುಗಳಿಗೆ ತಪೋರೂಪ ಬೀಜರೂಪ, ನಿನಗೆ ನಮಸ್ಕಾರ. ನಿರ್ವಚನೀಯ ಅನಿರ್ವಚನೀಯ ವಸ್ತುಗಳೆಲ್ಲ ನಿನ್ನ ಸ್ವರೂಪ, ನೀನು ಅವುಗಳಿಗೆ ಬೀಜ. ಸರ್ವಬೀಜನೆ, ನಿನಗೆ ನಮಸ್ಕಾರ. ನಾನು, ಸರಸ್ವತಿ, ಲಕ್ಷ್ಮಿ, ದುರ್ಗೆ, ಗಂಗೆ, ಸಾವಿತ್ರಿ ಎಲ್ಲರೂ ನಿನ್ನ ಪಾದಾರಾಧನೆಯಿಂದಲೆ ಲೋಕಪೂಜ್ಯೆಯರೆನಿಸಿದ್ದೇವೆ. ನಿನ್ನ ಭೃತ್ಯರ ಸ್ಪರ್ಶದಿಂದಲೂ ನಿನ್ನ ಧ್ಯಾನದಿಂದಲೂ ತೀರ್ಥಗಳು ಪವಿತ್ರವೆನಿಸಿವೆ. ಭಗವನ್ ನಿನಗೆ ನಮಸ್ಕಾರ.'

ರಾಧೆಯು ಮಾಡಿದ ಈ ಸ್ತೋತ್ರವನ್ನು ತ್ರಿಕಾಲಗಳಲ್ಲಿ ಯಾರು ಪಠಿಸುವನೋ ಅವನು ಹರಿಭಕ್ತಿಯನ್ನೂ ಹರಿದಾಸ್ಯವನ್ನೂ ರಾಧೆಯ ಲೋಕವನ್ನೂ ಹೊಂದುವನು. ಆಪತ್ತಿನಲ್ಲಿ ಪಠಿಸಿದರೆ ಸಂಪತ್ತು ಲಭಿಸುವುದು. ಬಹುಕಾಲದಿಂದ ಕಳೆದು ಹೋಗಿದ್ದ ವಸ್ತು ತಿರುಗಿ ಲಭಿಸುತ್ತದೆ. ಬಂಧುವೃದ್ಧಿ ಉಂಟಾಗುತ್ತದೆ. ಚಿಂತಾಗ್ರಸ್ತನಾದವ ಪಠಿಸಿದರೆ ಮನಸಿಗೆ ನೆಮ್ಮದಿ ಲಭಿಸುತ್ತದೆ. ಪತಿವಿಯೋಗ ಪುತ್ರವಿಯೋಗ ಮಿತ್ರವಿಯೋಗಗಳಲ್ಲಿ ಸಂಕಟಪ್ರಸಂಗದಲ್ಲಿ ಒಂದು ತಿಂಗಳ ಕಾಲ ಭಕ್ತಿಯಿಂದ ಪಠಿಸಿದರೆ ಅವರ ದರ್ಶನವಾಗುವುದು. ಮದುವೆಯಾಗದಿರುವ ಕನ್ಯೆ ಭಕ್ತಿಯಿಂದ ಒಂದು ವರ್ಷಕಾಲ ಈ ಸ್ತೋತ್ರ ಶ್ರವಣ ಮಾಡಿದರೆ ಶ್ರೀಕೃಷ್ಣನಂಥ ಸುಂದರನಾದ ಗುಣವಂತನಾದ ವರನನ್ನು ಹೊಂದುವಳು.

ನೀರಲ್ಲಿದ್ದು ಶ್ರೀಕೃಷ್ಣನ ಪಾದಕಮಲವನ್ನು ಧ್ಯಾನಿಸುತ್ತಿದ್ದ ರಾಧೆ ಹೀಗೆ ಸ್ತೋತ್ರಮಾಡಿ ಕಣ್ಣುತೆರೆದಾಗ ಜಗತ್ತೆಲ್ಲವೂ ಕೃಷ್ಣಮಯವಾಗಿ ಕಂಡಿತು. ಯಮುನೆಯ ತೀರವಿಡೀ ಸೀರೆಗಳಿಂದ ಮತ್ತು ಪೂಜಾದ್ರವ್ಯಗಳಿಂದ ತುಂಬಿತ್ತು. ಇದೇನು ಕನಸೆ? ಭ್ರಮೆಯೆ? ಎಂದುಕೊಂಡಳು ರಾಧೆ. ಯಾವ ಯಾವ ಸ್ಥಳಗಳಲ್ಲಿ ಯಾವ ಯಾವ ಸೀರೆಗಳು ಪೂಜಾ ದ್ರವ್ಯಗಳಿದ್ದುವೋ ಅಲ್ಲಿಯೆ ಎಲ್ಲವೂ ಇದ್ದುದನ್ನು ಗೋಪಿಯರು ಕಂಡರು. ಅವರೆಲ್ಲ ನೀರಿಂದ ಮೇಲೆ ಬಂದು ಸೀರೆಉಟ್ಟು ವ್ರತವನ್ನು ಮಾಡಿ ದೇವಿಯಿಂದ ವರ ಪಡೆದು ಮನೆಗಳಿಗೆ ಹಿಂತಿರುಗಿದರು.

**ನಾರದ:-** ವ್ರತದ ವಿಧಾನವೇನು? ಹೆಸರೇನು? ಅದರ ಫಲವೇನು? ಯಾವ ದ್ರವ್ಯಗಳನ್ನು ದಾನಮಾಡಬೇಕು? ದಕ್ಷಿಣೆ ಎಷ್ಟು ಕೊಡಬೇಕು? ವ್ರತದ ಕೊನೆಯಲ್ಲಿ ಏನಾಯಿತು? ವಿಸ್ತಾರವಾಗಿ ನಾರಾಯಣನ ಕಥೆಯನ್ನು ನನಗೆ ಹೇಳು.

**ನಾರಾಯಣ:-** ವ್ರತವಿಧಾನವನ್ನೆಲ್ಲ ಹೇಳುತ್ತೇನೆ, ಕೇಳು. ಇದಕ್ಕೆ ಗೌರೀವ್ರತವೆಂದು ಹೆಸರು. ಮಾರ್ಗಶೀರ್ಷಮಾಸದಲ್ಲಿ ಸ್ತ್ರೀಯರು ಮಾಡುತ್ತಾರೆ. ಕೆಲವೆಡೆ ಪುರುಷರೂ ಮಾಡುತ್ತಾರೆ. ಧರ್ಮ ಅರ್ಥ ಕಾಮ ಮೋಕ್ಷಗಳೆಲ್ಲವನ್ನೂ ಕೊಡುತ್ತದೆ ಈ ವ್ರತ. ಪತಿಸೌಭಾಗ್ಯವನ್ನು ಬಯಸುವವರಿಗೆ ಪತಿಸುಖವೂ ಲಭಿಸುತ್ತದೆ. ಕನ್ಯೆ

ಮಾರ್ಗಶೀರ್ಷ ಸಂಕ್ರಮಣದ ಹಿಂದಿನ ದಿನ ಉಪವಾಸ ಮಾಡಿ ಒಗೆದ ಬಟ್ಟೆ ಉಟ್ಟು ನಾನಾ ದ್ರವ್ಯಗಳಿಂದ ಗಣೇಶ ಸೂರ್ಯ ಅಗ್ನಿ ನಾರಾಯಣ ಶಿವ ದುರ್ಗೆಯರೆಂಬ ಆರು ದೇವತೆಗಳನ್ನು ಕಲಶದಲ್ಲಿ ಆವಾಹಿಸಿ ಪಂಚೋಪಚಾರಗಳಿಂದ ಪೂಜಿಸಿ ವ್ರತವನ್ನು ಆರಂಭಿಸಬೇಕು. ಕಲಶದ ಕೆಳಗಡೆ ಚೌಕಾಕಾರದ ಮಂಡಲ ಮಾಡಿ ಚಂದನ ಆಗುರು ಕಸ್ತೂರಿ ಕುಂಕುಮಗಳಿಂದ ಸಂಸ್ಕರಿಸಿ ಮರಳಿನಿಂದ ದಶಭುಜೆಯಾದ ದುರ್ಗೆಯನ್ನು ನಿರ್ಮಿಸಿ ಸಿಂದೂರ ಚಂದನ ಚಂದ್ರಗಳಿಂದ ಅಲಂಕರಿಸಿ ದೇವಿಯನ್ನು ಆವಾಹಿಸಬೇಕು. ಕೈಮುಗಿದು ಈ ಮಂತ್ರ ಹೇಳಿ ಪೂಜೆ ಪ್ರಾರಂಭಿಸಬೇಕು.

**ಹೇ ಗೌರಿ ಶಂಕರಾರ್ಧಾಂಗಿ ಯಥಾ ತ್ವಂ ಶಂಕರಪ್ರಿಯಾ ।**
**ತಥಾ ಮಾಂ ಕುರು ಕಲ್ಯಾಣಿ ಕಾಂತಕಾಂತಾಂ ಸುದುರ್ಲಭಾಂ ॥**

'ಗೌರಿ, ಶಂಕರನ ಅರ್ಧಾಂಗಿಯೆ, ನೀನು ಹೇಗೆ ಶಂಕರನಿಗೆ ಪ್ರಿಯೆ ಯಾಗಿರುವೆಯೋ ಹಾಗೇ ನನ್ನನ್ನೂ ಪತಿಗೆ ಪ್ರೀತಿಪಾತ್ರಳಾಗುವಂತೆ ಮಾಡು' ಈ ಮಂತ್ರವನ್ನು ಹೇಳಿ ಜಗಜ್ಜನನಿಯಾದ ದೇವಿಯನ್ನು ಧ್ಯಾನಿಸಬೇಕು. ಗೋಪ್ಯವಾದ, ಸರ್ವಾಭೀಷ್ಟದಾಯಕವಾದ ಸಾಮವೇದೋಕ್ತ ಧ್ಯಾನವನ್ನು ಹೇಳುತ್ತೇನೆ, ಕೇಳು. ಇದು ಮುನೀಂದ್ರರಿಗೂ ದುರ್ಲಭ. ಸಿದ್ಧರೂ ದುರ್ಗತಿಯನ್ನು ಕಳೆವ ದುರ್ಗೆಯನ್ನು ಈ ಧ್ಯಾನದಿಂದಲೇ ಒಲಿಸಿಕೊಳ್ಳುವರು.

'ಶಿವಪ್ರಿಯೆ ಶಿವೆ ಶಿವನ ವಕ್ಷಃಸ್ಥಳದಲ್ಲಿರುವವಳು. ಮಂದಹಾಸದಿಂದ ಪ್ರಸನ್ನವಾದ ಮುಖ ಉಳ್ಳವಳು. ಸುಂದರ ಕಣ್ಣಿನವಳು. ನವಯೌವನ ಸಂಪನ್ನೆ. ರತ್ನಾಭರಣ ಭೂಷಿತೆ, ರತ್ನ ಕಂಕಣ ಕೇಯೂರ ರತ್ನನೂಪುರಗಳಿಂದ ಭೂಷಿತಳು. ರತ್ನ ಕುಂಡಲಗಳಿಂದ ಹೊಳೆವ ಕಪೋಲದವಳು. ಜಾಜಿಯ ಮಾಲೆಯನ್ನು ತುರುಬಿನಲ್ಲಿಟ್ಟುಕೊಂಡಿದ್ದಾಳೆ. ಅದಕ್ಕೆ ದುಂಬಿಗಳು ಮುತ್ತುತ್ತಿವೆ. ಹಣೆಯಲ್ಲಿ ಸಿಂದೂರದ ತಿಲಕ, ಕಸ್ತೂರಿಯ ಬೊಟ್ಟು. ವಹ್ನಿಶುದ್ಧವಾದ ಸೀರೆ ಉಟ್ಟು ಮನೋಹರವಾದ ರತ್ನಕಿರೀಟ ತೊಟ್ಟಿದ್ದಾಳೆ. ಉತ್ತಮ ಮಣಿಗಳಿಂದ ಯುಕ್ತವಾದ ರತ್ನಮಾಲೆಯಿಂದ ಶೋಭಿಸುತ್ತಿದ್ದಾಳೆ. ಪಾರಿಜಾತದ ಹೂಮಾಲೆಗಳನ್ನು ಧರಿಸಿದ್ದಾಳೆ. ಪುಷ್ಟವಾದ ಸ್ತನನಿತಂಬಗಳಿಂದ ಕೂಡಿದ್ದು ನವಯೌವನ ಭರಿತಳಾಗಿ ಮನೋಹರಳಾಗಿರುವಳು. ಕೋಟಿ ಸೂರ್ಯರಂತೆ ಹೊಳೆಯುತ್ತಾಳೆ. ಬಿಂಬಫಲದಂಥ ಚೆಂದುಟಿಯವಳು. ಸಂಪಿಗೆಯ ಮೈ ಬಣ್ಣದವಳು. ಮುತ್ತಿನ ಸಾಲನ್ನು ಧಿಕ್ಕರಿಸುವ ದಂತ ಪಂಕ್ತಿ ಉಳ್ಳವಳು. ಶರತ್ಕಾಲದ ಚಂದ್ರನಂಥ ಮುಖದವಳು. ಭುಕ್ತಿ ಮುಕ್ತಿದಾಯಕಳು. ಬ್ರಹ್ಮಾದಿಗಳಿಂದ ಸ್ತೋತ್ರ ಮಾಡಿಸಿಕೊಳ್ಳುವವಳು. ಇಂಥ ದೇವಿಯನ್ನು ಭಜಿಸುವೆನು.'

ಹೀಗೆ ಧ್ಯಾನಿಸಿ ತಲೆಯ ಮೇಲೆ ಹೂವೇರಿಸಿ ಪುನಃ ಧ್ಯಾನ ಮಾಡಿ ಷೋಡಶೋಪಚಾರಗಳನ್ನು ನೀಡಿ ಹಿಂದೆ ಹೇಳಿದ ಸ್ತೋತ್ರ ಪಠಿಸಿ ನಮಿಸಬೇಕು. ಭಕ್ತಿಯಿಂದ ಕಥೆಯನ್ನು ಶ್ರವಣ ಮಾಡಬೇಕು.

**ನಾರದ:-** ನೀನು ಹೇಳಿದ ಈ ವ್ರತ, ವ್ರತವಿಧಾನ, ಫಲ, ಸ್ತೋತ್ರ ಎಲ್ಲವೂ ಅದ್ಭುತ. ಈಗ ಗೌರೀವ್ರತ ಕಥೆಯನ್ನು ಕೇಳಲು ಬಯಸುತ್ತೇನೆ. ವ್ರತವನ್ನು ಹಿಂದೆ

ಯಾರು ಆಚರಿಸಿದರು? ಯಾರಿಂದ ಇದು ಪ್ರಸಿದ್ಧಿ ಹೊಂದಿತು. ಇದನ್ನೆಲ್ಲ ವಿಸ್ತಾರವಾಗಿ ಹೇಳು.

**ನಾರಾಯಣ:-** ಕುಶಧ್ವಜನ ಮಗಳು ವೇದವತಿ. ಅವಳು ಪುಷ್ಕರ ಮಹಾತೀರ್ಥದಲ್ಲಿ ಈವ್ರತವನ್ನು ಮಾಡಿದಳು. ಸಮಾಪ್ತಿ ದಿವಸದಲ್ಲಿ ಜಗದಂಬೆ ಮೈದೋರಿದಳು. ಲಕ್ಷಯೋಗಿನೀ ಸಮೇತಳಾಗಿ ಕೋಟಿ ಸೂರ್ಯರಂತೆ ಬೆಳಗುತ್ತ ಬಂಗಾರದ ರಥದಲ್ಲಿ ಕುಳಿತಿದ್ದ, ಮಂದಹಾಸದಿಂದ ಪ್ರಸನ್ನಮುಖದವಳಾಗಿದ್ದ ಪರಮೇಶ್ವರಿ ವೇದವತಿಗೆ ಹೇಳಿದಳು. 'ನಿನ್ನ ವ್ರತದಿಂದ ಸಂತುಷ್ಟಳಾಗಿದ್ದೇನೆ. ಬೇಕಾದ ವರ ಕೇಳು, ಕೊಡುತ್ತೇನೆ.' ಪಾರ್ವತಿಯ ವಚನವನ್ನು ಕೇಳಿ ಅವಳನ್ನು ಕಂಡು ಕೈಮುಗಿದು ನಮಿಸಿ ಹೇಳಿದಳು ವೇದವತಿ -

'ದೇವಿ, ನನಗೆ ನಾರಾಯಣನನ್ನು ಪತಿಯನ್ನಾಗಿ ಮಾಡು. ಇದೇ ನನ್ನ ಅಭೀಷ್ಟ. ಬೇರೆ ವರದಲ್ಲಿ ನನಗೆ ಆಸೆ ಇಲ್ಲ. ನಾರಾಯಣನ ಪಾದದಲ್ಲಿ ದೃಢ ಭಕ್ತಿನೀಡು.' ವೇದವತಿಯ ಮಾತನ್ನು ಕೇಳಿ ನಕ್ಕು ಜಗದಂಬೆ ಬೇಗನೆ ರಥದಿಂದ ಕೆಳಗೆ ಇಳಿದು ಹೇಳಿದಳು.

'ನನಗೆ ಎಲ್ಲವೂ ಗೊತ್ತು. ನೀನು ಜಗದಂಬೆ ಲಕ್ಷ್ಮಿ. ಭಾರತದೇಶವನ್ನು ಪಾದಧೂಳಿಯಿಂದ ಪವಿತ್ರಗೊಳಿಸಲು ಬಂದಿರುವಿ. ನಿನ್ನ ಪಾದಕಮಲದೂಳಿನಿಂದ ಭೂಮಿ ಈಗಲೆ ಪವಿತ್ರವಾಗಿದೆ. ಎಲ್ಲ ತೀರ್ಥಗಳೂ ಪವಿತ್ರವಾಗಿವೆ. ನಿನ್ನ ಈ ವ್ರತಾಚರಣೆ ಕೇವಲ ಲೋಕಶಿಕ್ಷಣಕ್ಕಾಗಿ. ಪ್ರತಿ ಜನ್ಮದಲ್ಲಿಯೂ ನೀನು ನಾರಾಯಣನ ಮಡದಿಯೆ ಆಗಿರುತ್ತಿ. ಭೂಭಾರಹರಣಕ್ಕಾಗಿ ಹರಿ ಭೂಮಿಯಲ್ಲಿ ದಶರಥಪುತ್ರ ರಾಮನಾಗಿ ಅವತಾರಮಾಡಿ ರಾಕ್ಷಸರ ಸಂಹಾರ ಮಾಡಲಿರುವನು. ಸನಕಾದಿಗಳ ಶಾಪದಿಂದ ಭೂಮಿಗೆ ಬಿದ್ದ ಭಕ್ತರಾದ ಜಯವಿಜಯರನ್ನು ಉದ್ಧರಿಸುತ್ತಾನೆ. ತ್ರೇತಾಯುಗದಲ್ಲಿ ಅಯೋಧ್ಯೆಯಲ್ಲಿ ಈ ಅವತಾರವಾಗಲಿದೆ. ನೀನು ಮಿಥಿಲೆಗೆ ಹೋಗಿ ಶಿಶುರೂಪ ತಾಳು. ಅಯೋನಿಜೆಯಾದ ನಿನ್ನನ್ನು ಮಗಳನ್ನಾಗಿ ಪಡೆದು ಜನಕ ಮಹಾರಾಜ ನಿನ್ನನ್ನು ಸಾಕಲಿ. ನೀನು 'ಸೀತೆ' ಎನಿಸುವಿ. ರಾಮ ಮಿಥಿಲೆಗೆ ಹೋಗಿ ನಿನ್ನನ್ನು ವಿವಾಹವಾಗುತ್ತಾನೆ.' ಹೀಗೆ ಹೇಳಿ ವೇದವತಿಯನ್ನು ಆಲಿಂಗಿಸಿ ಪಾರ್ವತಿ ತನ್ನ ಲೋಕಕ್ಕೆ ಹೋದಳು. ವೇದವತಿ ಮಿಥಿಲೆಗೆ ಹೋಗಿ ಶಿಶುರೂಪ ತಾಳಿ ನೇಗಿಲ ಗೆರೆಯಲ್ಲಿ ಸುಖವಾಗಿ ಲೀಲೆಯಿಂದ ಮಲಗಿದಳು. ಜನಕ ಮಹಾರಾಜ ಅವಳನ್ನು ಕಂಡ. ಪುಟಕ್ಕಿಟ್ಟ ಚಿನ್ನದಂಥ ಮೈಬಣ್ಣದ ತೇಜಸ್ವಿನಿಯಾದ ದೇವಿಯನ್ನು ಕಂಡು ಎತ್ತಿ ಎದೆಗೆ ಒತ್ತಿಕೊಂಡ. ಆಗ ಆಕಾಶವಾಣಿ ಕೇಳಿಸಿತು - 'ಈಕೆ ಲಕ್ಷ್ಮಿ, ಅಯೋನಿಜೆಯಾಗಿ ನಿನ್ನ ಮಗಳೆನಿಸಿದ್ದಾಳೆ, ಸ್ವೀಕರಿಸು. ನಾರಾಯಣ ನಿನಗೆ ಅಳಿಯನಾಗುತ್ತಾನೆ.' ಈದೇವವಾಣಿಯನ್ನು ಕೇಳಿ ರಾಜ ಕನ್ಯೆಯನ್ನು ತನ್ನ ರಾಣಿಗೆ ಕೊಟ್ಟ. ಕನ್ಯೆ ಯೌವನವತಿ ಯಾದಾಗ ದಶರಥಪುತ್ರನಾದ ಮೂಲೋಕದೊಡೆಯನಾದ ಶ್ರೀರಾಮನನ್ನು ಪತಿಯನ್ನಾಗಿ ಪಡೆದಳು. ಇದು ಈ ವ್ರತದ ಪ್ರಭಾವ. ವಸಿಷ್ಠರು ಈ ವ್ರತವನ್ನು ಭೂಮಿಯಲ್ಲಿ ಪ್ರಸಿದ್ಧಿಗೆ ತಂದರು. ರಾಧೆ ಈ ವ್ರತವನ್ನು ಮಾಡಿ

ಶ್ರೀಕೃಷ್ಣನನ್ನು ಪತಿಯನ್ನಾಗಿ ಪಡೆದಳು. ಗೋಪಿಯರೂ ಅವನನ್ನು ಸೇರಿದರು. ಇದು ಗೌರೀವ್ರತದ ಕಥೆ. ಭಾರತದೇಶದಲ್ಲಿ ಯಾವ ಕನ್ಯೆ ಈ ವ್ರತವನ್ನು ಆಚರಿಸುವಳೋ ಅವಳು ಶ್ರೀಕೃಷ್ಣನಂಥ ಪತಿಯನ್ನು ಹೊಂದುವಳು. ಸತ್ಯಪರಾಯಣೆಯಾದ ಸೀತೆ ಯಾವ ಸ್ತೋತ್ರದಿಂದ ಕಮಲಾಕ್ಷನಾದ ರಾಮನನ್ನು ಪತಿಯಾಗಿ ಹೊಂದಿದಳೊ ಆ ಸ್ತೋತ್ರ ಕಣ್ವಶಾಖೆಯಲ್ಲಿ ಉಕ್ತವಾಗಿದೆ.

'ಶಕ್ತಿಸ್ವರೂಪಳೆ, ಸರ್ವರಿಗೂ ಸರ್ವರೀತಿಯಲ್ಲಿ ಆಧಾರಳಾಗಿರುವವಳೆ, ಗುಣವಂತಳೆ, ಸದಾ ಶಿವನಿಂದ ಯುಕ್ತಳಾಗಿರುವವಳೆ, ನನಗೆ ಪತಿಯನ್ನು ಅನುಗ್ರಹಿಸು, ನಿನಗೆ ನಮಸ್ಕಾರ. ಸೃಷ್ಟಿಸ್ಥಿತಿಲಯ ಕಾರಿಣಿ, ಸೃಷ್ಟಿಸ್ಥಿತಿಲಯ ಬೀಜಗಳಿಗೆ ಬೀಜರೂಪಳು. ಪತಿಮರ್ಮಜ್ಞೆ, ಪತಿವ್ರತಪರಾಯಣೆ, ಪತಿವ್ರತೆ, ನಿನಗೆ ನಮಸ್ಕಾರ. ಪತಿಯನ್ನು ನೀಡು. ಸರ್ವಮಂಗಳಗಳಿಗೆ ಮಂಗಳದಾಯಕಳು, ಸರ್ವಮಂಗಳ ಯುಕ್ತಳು, ಸರ್ವಮಂಗಳ ಬೀಜಳು. ಸರ್ವಮಂಗಳೆ, ಸರ್ವ ಪ್ರಿಯೆ, ಸರ್ವಬೀಜೆ, ಸರ್ವ ಅಶುಭನಾಶಿನಿ, ಸರ್ವೇಶ್ವರಿ, ಸರ್ವಜನನಿ, ಶಂಕರಪ್ರಿಯೆ, ಪರಮಾತ್ಮಸ್ವರೂಪೆ, ನಿತ್ಯಸ್ವರೂಪೆ, ಸನಾತನಿ, ಸಾಕಾರೆ, ನಿರಾಕಾರೆ, ಸರ್ವರೂಪೆ, ಹಸಿವು ಬಾಯಾರಿಕೆ ಬಯಕೆ ದಯೆ ಶ್ರದ್ಧೆ ನಿದ್ರೆ ತಂದ್ರೆ ಸ್ಮೃತಿ ಕ್ಷಮೆ, ಇವೆಲ್ಲವೂ ನಿನ್ನ ಕಲೆಗಳು. ಲಜ್ಜೆ ಮೇಧೆ ತುಷ್ಟಿ ಪುಷ್ಟಿ ಶಾಂತಿ ಸಂಪತ್ತು ಸಮೃದ್ಧಿ ಇವೆಲ್ಲವೂ ನಿನ್ನ ಕಲೆಗಳು. ದೃಷ್ಟಾದೃಷ್ಟ ಸ್ವರೂಪಳು, ಅವುಗಳಿಗೆ ಬೀಜರೂಪಳು, ಫಲದಾಯಕಳು. ಎಲ್ಲರಿಗೂ ಅನಿರ್ವಚನೀಯಳು. ಮಹಾಮಾಯೆ, ಶಿವೆ, ಶಂಕರಸೌಭಾಗ್ಯಯುಕ್ತೆ, ಸೌಭಾಗ್ಯದಾಯಿನಿ, ನಿನಗೆ ನಮಸ್ಕಾರ. ಹರಿಯನ್ನು ಪತಿಯನ್ನಾಗಿ ಕೊಡು, ಸೌಭಾಗ್ಯವನ್ನು ನೀಡು'

ಈ ಸ್ತೋತ್ರದಿಂದ ಸ್ತುತಿಸಿ ವ್ರತಸಮಾಪ್ತಿದಿನದಲ್ಲಿ ಶಿವೆಯನ್ನು ನಮಿಸುವವರು ಹರಿಯನ್ನು ಪತಿಯನ್ನಾಗಿ ಪಡೆಯುವರು. ಇಹದಲ್ಲಿ ಪತಿಸುಖ ಹೊಂದಿ ಕೊನೆಯಲ್ಲಿ ದಿವ್ಯ ವಿಮಾನವನ್ನೇರಿ ಕೃಷ್ಣನ ಸನ್ನಿಧಿಯನ್ನು ಸೇರುವರು.

ಸಮಾಪ್ತಿದಿನದಲ್ಲಿ ರಾಧೆ ಗೋಪಿಯರೊಂದಿಗೆ ದೇವಿಯನ್ನು ನಮಿಸಿ ಸ್ತೋತ್ರಮಾಡಿ ವ್ರತವನ್ನು ಪೂರ್ಣಗೊಳಿಸಿದಳು. ಬ್ರಾಹ್ಮಣರಿಗೆ ಸಾವಿರ ಗೋವುಗಳನ್ನೂ ನೂರಾರು ಚಿನ್ನದ ನಾಣ್ಯಗಳನ್ನೂ ದಕ್ಷಿಣೆಯಾಗಿ ಕೊಟ್ಟಳು. ಸಾವಿರ ಬ್ರಾಹ್ಮಣರಿಗೆ ಭೋಜನ ಮಾಡಿಸಿದಳು. ವಾದ್ಯಘೋಷ ಮಾಡಿಸಿದಳು. ಭಿಕ್ಷುಕರಿಗೆ ಧನವನ್ನಿತ್ತಳು. ಆಗ ದುರ್ಗತಿಯನ್ನು ಕಳೆವ ದುರ್ಗೆ ಆವಿರ್ಭವಿಸಿದಳು. ಬ್ರಹ್ಮತೇಜಸ್ಸಿನಿಂದ ಹೊಳೆಯುತ್ತ ಆಕಾಶದಿಂದ ಕೆಳಗೆ ಇಳಿದಳು. ನೂರಾರು ಯೋಗಿನಿಯರಿಂದ ಕೂಡಿದ್ದು ಮಂದಹಾಸಯುಕ್ತ ಪ್ರಸನ್ನಮುಖ ಉಳ್ಳವಳಾಗಿ ಸಿಂಹದ ಮೇಲೇರಿ ಕುಳಿತಿದ್ದಳು. ಹತ್ತು ಬಾಹುಗಳುಳ್ಳವಳು, ರತ್ನಾಲಂಕಾರಭೂಷಿತೆ. ರಾಧೆಯನ್ನು ಆಲಿಂಗಿಸಿಕೊಂಡು ನಿನ್ನ ಅಭೀಷ್ಟಸಿದ್ಧಿಯಾಗುವುದೆಂದು ಆಶೀರ್ವದಿಸಿದಳು. ನಮಸ್ಕರಿಸಿದ ಎಲ್ಲ ಗೋಪಿಯರಿಗೂ ವರ ನೀಡಿದಳು. ನಗುಮೊಗದಿಂದ ರಾಧೆಗೆ ಹೀಗೆ ಹೇಳಿದಳು -

'ರಾಧೆ, ಸರ್ವೇಶ್ವರನಿಗೆ ಪ್ರಾಣಕ್ಕಿಂತ ಅಧಿಕಳಾಗಿರುವವಳೆ, ಜಗದಂಬೆ, ನೀನು ಮಾಯೆಯಿಂದ ಮನುಷ್ಯರೂಪಳಾಗಿ ಲೋಕಶಿಕ್ಷಣಕ್ಕಾಗಿ ಈ ವ್ರತವನ್ನು ಮಾಡಿರುವೆ. ಗೋಲೋಕನಾಥನನ್ನು, ಗೋಲೋಕವನ್ನು ಶ್ರೀಶೈಲವನ್ನು ರಾಸಮಂಡಲವನ್ನು ದಿವ್ಯ ಮನೋಹರವಾದ ವೃಂದಾವನವನ್ನು ಸ್ತ್ರೀಯರ ಮನವನ್ನು ಕದಿವ ರತಿಚೋರನಾದ ಕೃಷ್ಣನ ಚರಿತೆಯನ್ನು ಅವನ ಕಾಮಶಾಸ್ತ್ರಪಾಂಡಿತ್ಯವನ್ನು ನೆನೆಯುತ್ತಿರುವೆ ತಾನೆ? ನೀನು ಕೃಷ್ಣನ ಅರ್ಧಾಂಗದಿಂದ ಬಂದವಳು, ತೇಜಸ್ಸಿನಿಂದ ಕೃಷ್ಣನಿಗೆ ಸಮಳು. ನಾವು ಎಲ್ಲ ದೇವಿಯರೂ ನಿನ್ನ ಅಂಶಕಲಾ ಸ್ವರೂಪರು. ನೀನು ಹೇಗೆ ಮನುಷ್ಯಳೆನಿಸುವೆ? ನೀನು ಹರಿಗೆ ಪ್ರಾಣ. ಹರಿ ನಿನಗೆ ಪ್ರಾಣ. ನಿಮ್ಮಿಬ್ಬರಿಗೆ ಭೇದವಿಲ್ಲವೆಂದು ವೇದ ಹೇಳುತ್ತದೆ. ಅರವತ್ತು ಸಾವಿರ ವರ್ಷಕಾಲ ತಪಸ್ಸು ಮಾಡಿದರೂ ಬ್ರಹ್ಮನಿಗೆ ನಿನ್ನ ಪಾದಕಮಲಗಳನ್ನು ಕಾಣುವುದಾಗಲಿಲ್ಲ. ಕೃಷ್ಣನ ಇಚ್ಛೆಯಂತೆ ನೀನು ಗೋಪೀ ರೂಪ ಧರಿಸಿ ಭೂಮಿಗೆ ಬಂದಿರುವೆ. ಮನುವಂಶ ಸಂಭೂತನಾದ ಸುಯಜ್ಞ ಮಹಾರಾಜ ನಿನ್ನ ಅನುಗ್ರಹದಿಂದ ಗೋಲೋಕವನ್ನು ಪಡೆದ. ನಿನ್ನ ಮಂತ್ರಕವಚದ ಬಲದಿಂದ ಪರಶುರಾಮ ಇಪ್ಪತ್ತೊಂದು ಬಾರಿ ಭೂಮಿಯಲ್ಲಿ ಸುತ್ತಿ ಕ್ಷತ್ರಿಯರನ್ನು ನಾಶಪಡಿಸಿದ. ಶಂಕರನಿಂದ ಈ ಮಂತ್ರವನ್ನು ಉಪದೇಶಪಡೆದು ಪುಷ್ಕರದಲ್ಲಿ ಸಿದ್ಧಿಹೊಂದಿ ಕಾರ್ತವೀರ್ಯಾರ್ಜುನನನ್ನು ಕೊಂದ. ದರ್ಪದಿಂದ, ಮಹಾತ್ಮನಾದ ಗಣೇಶನ ದಂತವನ್ನು ಮುರಿದ. ನಾನು ಉದ್ಧತಳಾದಾಗ ಕೋಪದಿಂದ ನನ್ನನ್ನು ಭಸ್ಮ ಮಾಡಲು ಸಮರ್ಥನಾಗಿದ್ದರೂ ನನ್ನಲ್ಲಿ ಪ್ರೀತಿಯಿಂದ ರಕ್ಷಣೆ ನೀಡಿದ. ಅಂಥ ನೀನು ಮನುಷ್ಯಳೆನಿಸುವುದು ಹೇಗೆ? ಪ್ರತಿ ಕಲ್ಪದಲ್ಲಿ ಪ್ರತಿ ಜನ್ಮದಲ್ಲಿ ಕೃಷ್ಣ ನಿನ್ನ ಪತಿ. ಅದರಿಂದ ಲೋಕಹಿತಕ್ಕಾಗಿಯೆ ನೀನು ಈವ್ರತವನ್ನಾಚರಿಸಿರುವೆ. ಜಗನ್ಮಾತೆಯಾದ ನೀನು ಶ್ರೀದಾಮನ ಶಾಪದಿಂದ ಭೂಮಿಯ ಭಾರವನ್ನು ಇಳಿಸಲೆಂದೆ ಬಂದಿರುವೆ. ಅಯೋನಿಜೆ, ಜನನ ಮರಣ ಜರೆಗಳನ್ನು ಕಳೆವವಳು, ಕಲಾವತಿಯ ಪುತ್ರಿ, ನೀನು ಹೇಗೆ ಮನುಷ್ಯಳೆನಿಸುವೆ? ಮೂರು ತಿಂಗಳು ಕಳೆದಾಗ ಚೈತ್ರಮಾಸದಲ್ಲಿ ನಿರ್ಮಲರಾತ್ರಿಯ ಏಕಾಂತದ ರಾಸಮಂಡಲದಲ್ಲಿ ವೃಂದಾವನ ವನದಲ್ಲಿ ಎಲ್ಲ ಗೋಪಿಯರೊಡನೆ ನೀನು ಆನಂದದಿಂದ ಕೃಷ್ಣನೊಡನೆ ವಿಹರಿಸಲಿರುವೆ. ಬ್ರಹ್ಮ ಬರೆದಿರುವುದೇ ಹಾಗೆ. ಕಲ್ಪ ಕಲ್ಪದಲ್ಲಿಯೂ ಭೂಮಿಯಲ್ಲಿ ಕೃಷ್ಣನೊಡನೆ ನೀನು ವಿಹರಿಸುವುದನ್ನು ಯಾರು ತಡೆಯಬಲ್ಲರು? ನಾನು ಶಿವನಿಗೆ ಹೇಗೆ ಪ್ರೀತಿಪಾತ್ರಳೊ ಹಾಗೇ ನೀನು ಹರಿಗೆ ಪ್ರೀತಿ ಪಾತ್ರಳು, ಸೌಭಾಗ್ಯವತಿ ಎನಿಸು. ಹಾಲಲ್ಲಿ ಬಿಳುಪು, ಬೆಂಕಿಯಲ್ಲಿ ಶಾಖ, ಮಣ್ಣಿನಲ್ಲಿ ಕಂಪು, ನೀರಲ್ಲಿ ತಂಪು ಹೇಗೋ ಹಾಗೇ ಕೃಷ್ಣನಲ್ಲಿ ನೀನಿರುವೆ. ದೇವತೆಗಳಲ್ಲಿ ಮನುಷ್ಯರಲ್ಲಿ ಗಂಧರ್ವರಲ್ಲಿ ರಾಕ್ಷಸರಲ್ಲಿ ನಿನ್ನನ್ನು ಮೀರಿಸಬಲ್ಲ ಸೌಭಾಗ್ಯವತಿ ಹಿಂದೆ ಇರಲಿಲ್ಲ, ಮುಂದೂ ಇಲ್ಲ. ಪರಾತ್ಪರ, ಗುಣಾತೀತ, ಬ್ರಹ್ಮಾದಿ ವಂದಿತನಾದ ಕೃಷ್ಣ ನನ್ನ ವರದಿಂದ ಸ್ವತಃ ನಿನ್ನ ಅಧೀನನಾಗುವನು. ಬ್ರಹ್ಮ ಅನಂತ ಶಿವರಿಗೆ ಆರಾಧ್ಯನಾದ, ಸರ್ವಯೋಗಿಗಳಿಗೂ ಧ್ಯಾನಕ್ಕೆ ನಿಲುಕದ, ಆರಾಧನೆಗೆ ಒಲಿಯದ ಹರಿ ನಿನ್ನ ವಶನಾಗುತ್ತಾನೆ. ನೀನೆ ಭಾಗ್ಯವತಿ. ಸ್ತ್ರೀಜಾತಿಯಲ್ಲಿ ನಿನ್ನನ್ನು ಮೀರಿಸುವವರಿಲ್ಲ. ಕೊನೆಯಲ್ಲಿ ಕೃಷ್ಣನೊಂದಿಗೆ ನೀನು ಗೋಲೋಕಕ್ಕೆ ಹೋಗುವಿ.'

ಹೀಗೆ ಹೇಳಿ ಪಾರ್ವತಿ ಅಂತರ್ಧಾನಳಾದಳು. ಅಷ್ಟರಲ್ಲಿ ಶ್ರೀಕೃಷ್ಣ ರಾಧೆಯ ಬಳಿಗೆ ಬಂದ. ರಾಧೆ ಶ್ಯಾಮಸುಂದರನಾದ ಆ ಬಾಲಕೃಷ್ಣನನ್ನು ಕಂಡು ಅವನ ಅದ್ಭುತ ಸುಂದರ ರೂಪಕ್ಕೆ ಮನ ಸೋತು ಮೈಮರೆತಳು. ಪೀತಾಂಬರ ಉಟ್ಟು ರತ್ನಾಭರಣಗಳನ್ನು ತೊಟ್ಟು, ಮೊಣಕಾಲಿನವರೆಗೆ ಇಳಿಬಿಟ್ಟ ವನಮಾಲೆ ಧರಿಸಿ ಮೈಯೆಲ್ಲ ಚಂದನ ಲೇಪಿಸಿಕೊಂಡು ಶರತ್‌ಕಾಲದ ಚಂದ್ರನಂಥ ಮುಖದಲ್ಲಿ ಮಂದಹಾಸ ಸೂಸುತ್ತ ದಾಳಿಂಬದ ಬೀಜದಂಥ ಹಲ್ಲುಗಳಿಂದ ಕಮಲದಂಥ ಕಣ್ಣುಗಳಿಂದ ಕೊಳಲು ಲೀಲಾಕಮಲಗಳನ್ನು ಹಿಡಿದ ಕೈಗಳಿಂದ, ರತ್ನಕಿರೀಟ ಧರಿಸಿದ ಶಿರದಿಂದ ಶೋಭಿಸುತ್ತ ನಿಂತಿದ್ದಾನೆ, ಕೃಷ್ಣ. ಗುಣಾತೀತ, ವೇದಗಳಿಗೂ ನಿಲುಕದವ, ಬ್ರಹ್ಮ ಅನಂತ ಶಿವಾದಿಗಳಿಗೆ ಸ್ತುತ್ಯ, ಅವ್ಯಕ್ತ, ನಾಶರಹಿತ, ಜ್ಯೋತಿಃಸ್ವರೂಪ, ಸನಾತನ, ಮಂಗಳಕರ, ಮಂಗಳಾಶ್ರಯ, ಮಂಗಳ ದಾಯಕ, ಮಂಗಳ ಸ್ವರೂಪ. ಅವನನ್ನು ನೋಡಿ ಸಂಭ್ರಮದಿಂದ ನಮಿಸಿ ರಾಧೆ ಲಜ್ಜೆಯಿಂದ ಮುಖವನ್ನು ಸೆರಗಿಂದ ಮರೆಮಾಡಿದಳು. ಕೃಷ್ಣ ಮತ್ತೂ ಮತ್ತೂ ಅವಳನ್ನು ನೋಡುತ್ತ ಎಲ್ಲ ಗೋಪಿಯರ ಸಂಮುಖದಲ್ಲಿ ನುಡಿದ-

**ಕೃಷ್ಣ:-** ರಾಧೆ, ನೀನು ನನಗೆ ಪ್ರಾಣಕ್ಕಿಂತ ಹೆಚ್ಚು. ನಿನ್ನ ಬಯಕೆ ಏನು. ನನ್ನಲ್ಲಿ ಕೇಳಿಕೊಳ್ಳು. ಗೋಪಿಯರೆ, ನೀವೂ ನಿಮ್ಮ ಅಭೀಷ್ಟಗಳನ್ನು ಕೇಳಿಕೊಳ್ಳಿರಿ.

ಕೃಷ್ಣನ ಮಾತನ್ನು ಕೇಳಿ ಸಂತುಷ್ಟರಾದ ರಾಧೆ ಮತ್ತು ಗೋಪಿಯರು ಎಲ್ಲ ಅಭೀಷ್ಟಗಳಿಗೆ ಕಲ್ಪವೃಕ್ಷದಂತಿರುವ ಕೃಷ್ಣನಲ್ಲಿ ಕೇಳಿಕೊಂಡರು.

**ರಾಧೆ:-** ಪ್ರಭು, ನಿನ್ನ ಪಾದಕಮಲಗಳಲ್ಲಿ ನನ್ನ ಮನ ದುಂಬಿಯಂತೆ ಸದಾ ಆಸಕ್ತವಾಗಿರಲಿ. ಭಕ್ತಿರಸವನ್ನು ಪಾನ ಮಾಡುತ್ತಿರಲಿ. ನನ್ನ ಪ್ರಾಣೇಶ್ವರ ನೀನು. ಜನ್ಮ ಜನ್ಮಗಳಲ್ಲಿ ಪತಿಯಾಗು. ನಿನ್ನ ಪಾದಕಮಲಗಳಲ್ಲಿ ದುರ್ಲಭವಾದ ಭಕ್ತಿ ನೀಡು. ಹಗಲೂ ಇರುಳೂ ಎಚ್ಚರದಲ್ಲಿಯೂ ಕನಸಿನಲ್ಲಿಯೂ ನನ್ನ ಮನ ನಿನ್ನನ್ನೆ ನೆನೆಯುತ್ತಿರಲಿ. ನಿನ್ನ ಸ್ಮರಣೆಯಲ್ಲಿಯೆ ಮುಳುಗಿರಲಿ. ಇದೇ ನನ್ನ ಬಯಕೆ.

**ಗೋಪಿಯರು:-** ರಾಧೆಗೆ ಹೇಗೋ ಹಾಗೇ ನಮಗೂ ನೀನು ಪ್ರಾಣನಾಥ. ಪ್ರತಿ ಜನ್ಮದಲ್ಲಿ ನೀನು ನಮಗೆ ಪತಿಯಾಗು, ನಮನ್ನು ಕಾಪಾಡು.

ಅವರ ಮಾತನ್ನು ಕೇಳಿ ಕೃಷ್ಣ 'ತಥಾಸ್ತು' ಎಂದ. ಸಹಸ್ರದಳಗಳುಳ್ಳ ಲೀಲಾ ಕಮಲವನ್ನೂ ಜಾಜಿಯ ಹೂಮಾಲೆಯನ್ನೂ ಪ್ರೀತಿಯಿಂದ ರಾಧೆಗೆ ನೀಡಿದ. ಗೋಪಿಯರಿಗೂ ಮಾಲೆಗಳನ್ನೂ ಹೂಗಳನ್ನೂ ಕೊಟ್ಟ. ನಕ್ಕು ನುಡಿದ.

**ಕೃಷ್ಣ:-** 'ಮೂರು ತಿಂಗಳುಗಳು ಕಳೆದ ಬಳಿಕ ವೃಂದಾವನದ ರಾಸ ಮಂಡಲದಲ್ಲಿ ನನ್ನೊಡನೆ ವಿಹಾರ ಮಾಡಿರಿ. ನನ್ನಂತೆಯೆ ನೀವು. ನಮ್ಮಲ್ಲಿ ಭೇದವಿಲ್ಲವೆಂದು ಶ್ರುತಿ ಸಾರುತ್ತಿದೆ. ನಾನು ನಿಮಗೆ ಪ್ರಾಣ. ನೀವು ನನಗೆ ಪ್ರಾಣ. ನೀವು ಮಾಡಿದ ವ್ರತ ಕೇವಲ ಲೋಕಶಿಕ್ಷಣದಿಂದ ಸಾರ್ಥಕವಾಗಿದೆ. ಸ್ವಾರ್ಥದ ಸಾಧನೆಯಿಂದಲ್ಲ. ನನ್ನ ಜೊತೆಗೇ ಗೋಲೋಕದಿಂದ ಬಂದವರು ನೀವು. ನನ್ನ ಜೊತೆಗೇ ಹಿಂತಿರುಗುವಿರಿ. ಈಗ ನೀವು ನಿಮ್ಮ ಮನೆಗಳಿಗೆ ಹಿಂತಿರುಗಿರಿ. ಜನ್ಮ ಜನ್ಮಗಳಲ್ಲಿಯೂ ನೀವು ನನಗೆ ಪ್ರಾಣಕ್ಕಿಂತ ಹೆಚ್ಚಾಗಿರುತ್ತೀರಿ.'

ಹೀಗೆ ಹೇಳಿ ಕೃಷ್ಣ ಯಮುನಾತೀರದಲ್ಲಿ ನಿಂತ. ಗೋಪಿಯರು ಪ್ರೀತಿಯಿಂದ ಅವನ ಮುಖಚಂದ್ರಮನನ್ನು ಕಾಂತಿಯನ್ನು ಕಣ್ಣುಗಳೆಂಬ ಚಕೋರಗಳಿಂದ ಪುನಃ ಪುನಃ ಪಾನ ಮಾಡಿದರು. ಕೃಷ್ಣನಿಗೆ ಜಯವಾಗಲೆಂದು ಪುನಃ ಪುನಃ ಹೇಳುತ್ತ ತಮ್ಮ ಮನೆಗಳಿಗೆ ಹಿಂತಿರುಗಿದರು. ಕೃಷ್ಣನೂ ಗೋಪಬಾಲಕರೊಡನೆ ಪ್ರಸನ್ನನಾಗಿ ಮನೆಗೆ ಹೊರಟುಹೋದ. ಇದು ಸರ್ವಲೋಕಕ್ಕೆ ಹಿತಕರವಾದ ಗೋಪೀವಸ್ತ್ರಾಪಹಾರದ ಪರಮಂಗಳ ಕಥೆ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಗೋಪಿಕಾವಸ್ತ್ರಹರಣ ಪ್ರಸ್ತಾವವೆಂಬ ಇಪ್ಪತ್ತೇಳನೆ ಅಧ್ಯಾಯ ಮುಗಿದುದು*



## ರಾಸಕ್ರೀಡೆ

**ಅಧ್ಯಾಯ - ೨೮**

**ನಾರದ:-** ಮೂರು ತಿಂಗಳು ಕಳೆದ ಬಳಿಕ ಗೋಪಿಯರಿಗೆ ಯಾವ ರೀತಿಯಲ್ಲಿ ಕೃಷ್ಣನ ಅಂಗಸಂಗ ದೊರಕಿತು? ವೃಂದಾವನ ಹೇಗಿತ್ತು? ರಾಸಮಂಡಲ ಹೇಗಿತ್ತು? ಕೃಷ್ಣನೊಬ್ಬ, ಗೋಪಿಯರು ಬಹಳ. ವಿಹಾರ ಹೇಗೆ ನಡೆಯಿತು? ಇದನ್ನು ಕೇಳಲು ಕುತೂಹಲ ಉಂಟಾಗುತ್ತಿದೆ. ಹರಿಯ ರಾಸಲೀಲೆ ಪುರಾಣಕಥೆಗಳೆಲ್ಲವುಗಳ ಸಾರಭೂತವಾಗಿವೆ. ಭೂಮಿಯಲ್ಲಿ ಕೃಷ್ಣನು ಆಡಿದ ಲೀಲೆ ಎಲ್ಲವೂ ಕೇಳಲು ಮಧುರವಾಗಿರುತ್ತವೆ.

**ನಾರಾಯಣ:-** ಒಮ್ಮೆ ಕೃಷ್ಣ ರಾತ್ರಿ ಶುಕ್ಲಪಕ್ಷದ ತ್ರಯೋದಶಿಯ ಪೂರ್ಣ ಚಂದ್ರ ಉದಿಸುತ್ತಿದ್ದಂತೆ ವೃಂದಾವನವನ್ನು ಪ್ರವೇಶಿಸಿದ. ವನದಲ್ಲಿ ಎಲ್ಲೆಡೆ ಯೂಥಿಕ ಮಾಲತಿ ಕುಂದ ಮಾಧವೀ ಹೂಗಳ ಕಂಪು ಹರಡಿತ್ತು. ದುಂಬಿಗಳ ಝೇಂಕಾರ ಮನೋಹರವಾಗಿತ್ತು. ಹೊಸ ಚಿಗುರೆಲೆಗಳನ್ನು ತಿಂದು ಕೋಗಿಲೆಗಳು ಹಾಡುತ್ತಿದ್ದುವು. ಚಂದನ ಅಗುರು ಕಸ್ತೂರಿ ಕುಂಕುಮಗಳ ಸುಗಂಧವೂ ಹರಡಿತ್ತು. ಕರ್ಪೂರಯುಕ್ತ ತಾಂಬೂಲ ಮುಂತಾದ ಭೋಗದ್ರವ್ಯಗಳೂ ಇದ್ದುವು. ಸಂಪಿಗೆ ಹೂಗಳಿಂದ ಕಸ್ತೂರಿ ಚಂದನಗಳಿಂದ ರತಿಶಯ್ಯೆಗಳು ನಿರ್ಮಿತವಾಗಿದ್ದುವು. ರತ್ನ ದೀಪಗಳು ಬೆಳಗುತ್ತಿದ್ದುವು. ಧೂಪದ ಸುಗಂಧ ಹಬ್ಬಿತ್ತು. ನಾನಾ ಬಗೆಯ ಹೂಗಳ ಮಾಲೆಗಳು ವರ್ತುಲವಾದ ರಾಸಮಂಡಲವನ್ನು ಅಲಂಕರಿಸಿದ್ದುವು. ಹೂದೋಟವೆಲ್ಲ ಹೂಗಳಿಂದ ತುಂಬಿತ್ತು. ಈಜುಕೊಳಗಳು ಹಂಸಕಾರಂಡವಾದಿ ಹಕ್ಕಿಗಳಿಂದ ನಿನದಿತವಾಗಿದ್ದುವು. ಸುರತದ ಶ್ರಮ ಕಳೆಯಬಲ್ಲ ಶುದ್ಧಸ್ಫಟಿಕದಂತೆ ನಿರ್ಮಲವಾದ ತಂಪಾದ ನೀರಿನಿಂದ ತುಂಬಿದ್ದುವು. ಮನೋಹರವಾದ ಬಾಳೆ ದಿಂಡುಗಳಿಂದ ಮೊಸರು ಬಿಳಿಧಾನ್ಯ ಅರಳು ಮುಂತಾದವುಗಳಿಂದ ವೃಂದಾವನ ಅಲಂಕರಿಸಲ್ಪಟ್ಟಿತ್ತು. ಸಿಂದೂರ ಚಂದನಯುಕ್ತವಾದ, ಮಾವಿನ ತಳಿರುಗಳಿಂದ ಕೂಡಿದ, ಹೂಮಾಲೆ ತೆಂಗಿನ ಕಾಯಿಗಳಿಂದಲೂ ಅಲಂಕೃತವಾದ ಮಂಗಳಕಲಶಗಳಿಂದ ತುಂಬಿತ್ತು.

ಶ್ರೀಕೃಷ್ಣ ಈ ರಾಸಮಂಡಲವನ್ನು ಕಂಡು ಆನಂದದಿಂದ ನಕ್ಕು ಕುತೂಹಲದಿಂದ ಕೊಳಲೂದಿದ. ಅದು ಗೋಪಿಯರಲ್ಲಿ ಶೃಂಗಾರಭಾವನೆಯನ್ನು ಕೆರಳಿಸಿತು. ರಾಧೆ ಅದನ್ನು ಕೇಳಿದೊಡನೆ ಮೈಮರೆತಳು. ಮೋಟು ಮರದಂತೆ ನಿಶ್ಚೇಷ್ಟಳಾದಳು. ಕೃಷ್ಣನ ಧ್ಯಾನದಲ್ಲಿ ಅವಳ ಮನಸ್ಸು ನಿಶ್ಚಲವಾಯಿತು. ಕ್ಷಣದಲ್ಲಿ ಎಚ್ಚೆತ್ತು ಪುನಃ ಆ ಕೊಳಲಗಾನವನ್ನು ಆಲಿಸಿದಳು. ಉದ್ವಿಗ್ನತೆಯಿಂದ ಎದ್ದು ನಿಂತಳು. ಮನೆಯ ಆವಶ್ಯಕ ಕೆಲಸಗಳನ್ನು ಬದಿಗಿಟ್ಟು ಬೇಗನೆ ಹೊರಗೆ ಬಂದು ನಾಲ್ಕು ದಿಕ್ಕುಗಳನ್ನೂ ದಿಟ್ಟಿಸಿ ನೋಡಿ ಕೃಷ್ಣನ ಪಾದಕಮಲವನ್ನು ಧ್ಯಾನಿಸುತ್ತ ಧ್ವನಿ ಬಂದ ಕಡೆಗೆ ಹೆಜ್ಜೆ ಹಾಕುತ್ತ ನಡೆದಳು. ಬೇರೆ ಗೋಪಿಯರೂ ಹೀಗೇ ಕೊಳಲಿನ ಧ್ವನಿಗೆ ಮೈ ಮರೆತು ಮನೆಗೆಲಸಗಳನ್ನು ಬಿಟ್ಟು ಓಡಿ ಬಂದರು. ರಾಧೆಯ ಪ್ರಿಯಸಖಿಯರು ಸುಶೀಲೆ ಮುಂತಾದವರು ಮೂವತ್ತಮೂರು ಮಂದಿ. ಅವರ ಹಿಂದೆ ಅವರಂತೆಯೆ ವಯಸ್ಸು ರೂಪ ಗುಣಗಳಿಂದ ಶೋಭಿತರಾದ ಸಖಿಯರು ಸಾವಿರಾರು ಮಂದಿ ಗೋಪಿಯರು ವೃಂದಾವನವನ್ನು ಹೊಕ್ಕರು. ಸುಶೀಲೆಗೆ ಸಖಿಯರು ಹದಿನಾರುಸಾವಿರ. ಚಂದ್ರಮುಖಿಗೂ ಹದಿನಾರುಸಾವಿರ. ಮಾಧವಿಗೆ ಹನ್ನೊಂದುಸಾವಿರ. ಕದಂಬಮಾಲೆಗೆ ಹದಿಮೂರುಸಾವಿರ. ಕುಂತಿಗೆ ಹತ್ತುಸಾವಿರ. ಯಮುನೆಗೆ ಹದಿನಾಲ್ಕುಸಾವಿರ. ಜಾಹ್ನವಿಗೆ ಒಂಬತ್ತುಸಾವಿರ. ಪದ್ಮಮುಖಿಗೆ ಒಂಬತ್ತುಸಾವಿರ. ಸಾವಿತ್ರಿಗೆ ಹದಿನೈದುಸಾವಿರ. ಪಾರಿಜಾತೆಗೆ ಹತ್ತುಸಾವಿರ. ಸ್ವಯಂಪ್ರಭೆಗೆ ಏಳುಸಾವಿರ. ಸುಧಾಮುಖಿಗೆ ಹದಿನಾಲ್ಕುಸಾವಿರ. ಶುಭೆಗೆ ಹದಿನಾಲ್ಕುಸಾವಿರ. ಪದ್ಮೆಗೆ ಹದಿನಾಲ್ಕುಸಾವಿರ. ಗೌರಿಗೆ ಹದಿನಾಲ್ಕುಸಾವಿರ. ಸರ್ವಮಂಗಳೆಗೆ ಹದಿನಾರುಸಾವಿರ ಕಾಲೀಗೆ ಹದಿನಾರುಸಾವಿರ, ಕಮಲೆಗೆ ಹದಿಮೂರುಸಾವಿರ. ದುರ್ಗೆಗೆ ಹದಿನಾರುಸಾವಿರ, ಸರಸ್ವತಿಗೆ ಹದಿಮೂರುಸಾವಿರ, ಭಾರತಿಗೆ ಹತ್ತುಸಾವಿರ. ಅಪರ್ಣೆಗೆ ಹದಿನಾಲ್ಕುಸಾವಿರ, ರತಿಗೆ ಹತ್ತುಸಾವಿರ. ಗಂಗೆಗೆ ಹದಿನಾಲ್ಕುಸಾವಿರ, ಅಂಬಿಕೆಗೆ ಹದಿನೆರುಸಾವಿರ, ಸತಿಗೆ ಹದಿಮೂರುಸಾವಿರ. ನಂದಿನಿಗೆ ಹತ್ತುಸಾವಿರ, ಸುಂದರಿಗೆ ಹದಿಮೂರುಸಾವಿರ. ಕೃಷ್ಣ ಪ್ರಿಯೆಗೆ ಹದಿನಾರುಸಾವಿರ. ಮಧುಮತಿಗೆ ಹದಿನಾರುಸಾವಿರ. ಚಂಪೆಗೆ ಹದಿಮೂರುಸಾವಿರ, ಚಂದನೆಗೆ ಹದಿನಾರುಸಾವಿರ.

ಒಬ್ಬಳು ಗೋಪಿ ಮಾಲೆ ತಂದಳು. ಇನ್ನೊಬ್ಬಳು ಚಂದನ ತಂದಳು. ಇನ್ನೊಬ್ಬಳು ಚಾಮರ ತಂದಳು. ಮತ್ತೊಬ್ಬಳು ಕಸ್ತೂರಿ ತಂದಳು, ಮತ್ತೊಬ್ಬಳು ಕುಂಕುಮ ತಂದಳು. ಹೀಗೇ ತಾಂಬೂಲ ಪೀತಾಂಬರಾದಿಗಳನ್ನು ಗೋಪಿಯರು ತಂದು ರಾಧೆಯನ್ನು ಸಿಂಗರಿಸಿದರು. ಜೊತೆಗೇ ಹರಿನಾಮ ಜಪಿಸುತ್ತ ಎಲ್ಲರೂ ರಾಸಮಂಡಲವನ್ನು ಸೇರಿದರು.

ವೃಂದಾವನ ಚಂದ್ರನ ಬೆಳದಿಂಗಳಲ್ಲಿ ಸ್ವರ್ಗಕ್ಕಿಂತ ಮನೋಹರವಾಗಿತ್ತು. ಹೂವಿನ ಸುವಾಸನೆಯಿಂದ ತುಂಬಿ ನಿರ್ಜನವಾಗಿದ್ದು ನಾರಿಯರಿಗೆ ಶೃಂಗಾರ ಭಾವವನ್ನು ಉದ್ದೀಪನಗೊಳಿಸುತ್ತಿತ್ತು. ಮುನಿಗಳ ಮನವನ್ನೂ ಕದಡುವಂತಿತ್ತು. ಕೋಗಿಲೆಯ ಧ್ವನಿ ಕೇಳಿಬರುತ್ತಿತ್ತು. ಭ್ರಮರಗಳ ಕಲರವವೂ ಮಧುರವಾಗಿತ್ತು. ಭ್ರಮರಗಳೂ ಹೂಗಳ ಮಕರಂದವನ್ನು ಹೀರಿ ಭ್ರಮರಿಯರ ಸಂಗದಲ್ಲಿ ಮದವೇರಿ

ಹುಚ್ಚಾಗಿದ್ದುವು. ಇಂಥ ಮಂಗಳಕ್ಷಣದಲ್ಲಿ ರಾಧೆ ರಾಸಮಂಡಲವನ್ನು ಪ್ರವೇಶಿಸಿದಳು. ಅವಳ ಜೊತೆಗೇ ಎಲ್ಲ ಗೋಪಿಯರೂ ಕೃಷ್ಣನ ಪಾದಕಮಲ ಧ್ಯಾನಮಾಡುತ್ತ ಪ್ರವೇಶಿಸಿದರು. ದೂರದಿಂದಲೆ ರಾಧೆಯನ್ನು ಕೃಷ್ಣ ಕಂಡು ಅನುರಾಗದಿಂದ ಇದಿರುಗೊಂಡ. ಸಖಿಯರ ನಡುವೆ ರತ್ನಾಭರಣಭೂಷಿತಳಾಗಿ ದಿವ್ಯವಸ್ತ್ರ ಉಟ್ಟು ಗಜಗಮನೆಯಾಗಿ ಅಡಿ ಇಡುತ್ತ ಮುನಿಗಳ ಮನಸ್ಸನ್ನೂ ಸೂರೆಗೊಳ್ಳುವಂತೆ ಕಡೆಗಣ್ಣಿಂದ ಕೃಷ್ಣನನ್ನು ವೀಕ್ಷಿಸುತ್ತ ಬರುತ್ತಾಳೆ, ರಾಧೆ, ಅವಳ ಮೈಬಣ್ಣ ಸಂಪಿಗೆ ಹೂವಿನಂತೆ, ಮುಖಕಾಂತಿ ಚಂದ್ರನಂತೆ, ಜಾಜಿಮಾಲೆಯನ್ನು ತುರುಬಿನಲ್ಲಿಟ್ಟುಕೊಂಡು ಅತಿ ಮನೋಹರರೂಪಿನಿಯಾದ ಆಕೆ ಶ್ಯಾಮಸುಂದರನಾದ ಬಾಲಕೃಷ್ಣನನ್ನು ಕಂಡಳು. ಅವನೂ ನವಯೌವನಸಂಪನ್ನ. ರತ್ನಾಭರಣ ಭೂಷಿತ. ಕೋಟಿ ಮನ್ಮಥರ ಲಾವಣ್ಯದಿಂದ ಮನೋಹರ. ಪ್ರಾಣಾಧಿಕಳಾದ ರಾಧೆಯನ್ನು ಕಡೆಗಣ್ಣಿಂದ ನೋಡುತ್ತಿದ್ದಾನೆ. ಅನುಪಮವಾದ ಪರಮಾದ್ಭುತ ರೂಪ ಅವನದು. ವಿಚಿತ್ರವೇಷ. ಅವನನ್ನು ಪುನಃ ಪುನಃ ಕಾಣುತ್ತಾಳೆ, ಲಜ್ಜೆಯಿಂದ ಮುಖ ಮರೆಸಿಕೊಳ್ಳುತ್ತಾಳೆ, ರಾಧೆ. ಶೃಂಗಾರ ಭಾವದಿಂದ ಪೀಡಿತಳಾಗಿ ಮೈಮರೆಯುತ್ತಾಳೆ, ರೋಮಾಂಚಗೊಳ್ಳುತ್ತಾಳೆ. ಕೃಷ್ಣನೂ ಮೈಮರೆಯುತ್ತಾನೆ, ಬೀಳುವುದಿಲ್ಲ. ಮೋಟುಮರದಂತೆ ನಿಲ್ಲುತ್ತಾನೆ. ಕೈಯಿಂದ ಕೊಳಲು ಬೀಳುತ್ತದೆ, ಕ್ರೀಡಾಕಮಲ ಬೀಳುತ್ತದೆ, ಉತ್ತರೀಯ ಜಾರುತ್ತದೆ. ನವಿಲಗರಿಯೂ ಜಾರುತ್ತದೆ. ಕ್ಷಣದಲ್ಲಿ ಆತ ಎಚ್ಚೆತ್ತುಕೊಂಡು ರಾಧೆಯ ಬಳಿಗೆ ಬರುತ್ತಾನೆ. ಅವಳನ್ನು ಎದೆಗೆ ತಬ್ಬಿಕೊಂಡು ಮುದ್ದಿಡುತ್ತಾನೆ. ಅವನ ಸ್ಪರ್ಶ ಮಾತ್ರದಿಂದ ಎಚ್ಚೆತ್ತುಕೊಂಡ ರಾಧೆ ಪ್ರಾಣೇಶ್ವರನನ್ನು ಆಲಂಗಿಸಿ ಚುಂಬಿಸುತ್ತಾಳೆ. ಕೃಷ್ಣ ರಾಧೆಯ ಮನವನ್ನು, ರಾಧೆ ಕೃಷ್ಣನ ಮನವನ್ನು ಅಪಹರಿಸುತ್ತಾರೆ. ರಸಿಕನಾದ ಶ್ರೀಕೃಷ್ಣ ರಸಿಕ ರಾಧೆಯೊಡನೆ ರತಿಮಂದಿರವನ್ನು ಪ್ರವೇಶಿಸಿದ. ರತ್ನದೀಪಗಳು ರತ್ನದ ಕನ್ನಡಿಗಳು ಸಂಪಿಗೆ ಹೂವಿನ ಹಾಸಿಗೆಗಳು ಕರ್ಪೂರದ ತಾಂಬೂಲಗಳು ಇವುಗಳಿಂದ ಕೂಡಿದ ಆ ಮಂದಿರದಲ್ಲಿ ರಾಧೆಯೊಂದಿಗೆ ಕೃಷ್ಣ ಆನಂದದಿಂದ ವಾಸಮಾಡಿದ. ರಾಧೆ ನೀಡಿದ ತಾಂಬೂಲವನ್ನು ಕೃಷ್ಣ ಮೆದ್ದ. ಕೃಷ್ಣ ನೀಡಿದ ತಾಂಬೂಲವನ್ನು ರಾಧೆ ಮೆದ್ದಳು. ಅರ್ಧ ಜಗಿದ ತಾಂಬೂಲವನ್ನು ಕೃಷ್ಣ ರಾಧೆಗೆ ಕೊಟ್ಟಾಗ ಅವಳು ನಗುತ್ತ ಭಕ್ತಿಯಿಂದ ಅದನ್ನೂ ಮೆದ್ದಳು. ರಾಧೆಯು ಅರ್ಧ ಜಗಿದ ತಾಂಬುಲವನ್ನು ಕೃಷ್ಣ ಬೇಡಿದ. ಅವಳು ಕೊಡಲಿಲ್ಲ. ಭಯಗೊಂಡು ಕಾಲಿಗೆ ಬಿದ್ದಳು. ಬಳಿಕ ಕೃಷ್ಣ ರಾಧೆಯೊಡನೆ ರತಿತಲ್ಪದಲ್ಲಿ ಮಲಗಿದ. ರಸಿಕ ಚಕ್ರವರ್ತಿಯಾದ ಕೃಷ್ಣ ಕಾಮಶಾಸ್ತ್ರೋಕ್ತರೀತಿಯಿಂದ ರಾಧೆಯನ್ನು ಆಲಂಗಿಸಿ ಚುಂಬಿಸಿದ. ಇಬ್ಬರೂ ಕಾಮಶಾಸ್ತ್ರದಲ್ಲಿ ವಿಚಕ್ಷಣರು. ಅವರ ರತಿಯುದ್ಧಕ್ಕೆ ವಿರಾಮವೆ ಇಲ್ಲದಂತಾಯಿತು. ಹೀಗೇ ಮನೆಮನೆಗಳಲ್ಲಿ ಕೃಷ್ಣ ಬೇರೆ ಬೇರೆ ರೂಪಗಳಿಂದ ಗೋಪಿಯರನ್ನು ತೃಪ್ತಿಪಡಿಸಿದ. ಬಳಿಕ ಉದ್ಯಾನಗಳಲ್ಲಿ ವಿಹಾರ ನಡೆಯಿತು. ಬಳಿಕ ನೀರಾಟ. ನೀರಿಂದ ಎದ್ದು ಬಟ್ಟೆ ಹಾಕಿಕೊಂಡು ರತ್ನದ ಕನ್ನಡಿಗಳಲ್ಲಿ ಮುಖಕಮಲಗಳನ್ನು ನೋಡುತ್ತ ಚಂದನ ಅಗುರು ಕಸ್ತೂರಿ ದ್ರವ್ಯಗಳನ್ನು ಹೂಮಾಲೆಗಳನ್ನೂ ತೊಟ್ಟು ಸಿಂಗರಿಸಿಕೊಂಡರು. ರಾಸಮಂಡಲದಲ್ಲಿ ಶೃಂಗಾರರಸಪೂರ್ಣವಾಗಿ ವಿಹರಿಸಿದರು.

ಈ ರಾಸಲೀಲೆಯನ್ನು ಕಾಣಲು ಎಲ್ಲ ದೇವತೆಗಳೂ ತಮ್ಮ ಸತಿಯರೊಡನೆ ಬಂಗಾರದ ರಥಗಳಲ್ಲಿ ಬಂದರು. ಶೃಂಗಾರರಸಾನುಭವದಲ್ಲಿ ರೋಮಾಂಚಗೊಂಡು ಮೈಮರೆತರು. ಋಷಿಮುನಿಗಳೂ ಸಿದ್ಧರೂ ಪಿತೃಗಳೂ ವಿದ್ಯಾಧರರೂ ಗಂಧರ್ವರೂ ಯಕ್ಷರಾಕ್ಷಸಕಿನ್ನರರೂ ತಮ್ಮ ಪ್ರೇಯಸಿಯರೊಡನೆ ದಿವ್ಯ ರಥಗಳಲ್ಲಿ ಬಂದರು. ಅವರ ರಥಗಳು ಸುವರ್ಣಮಯ, ರತ್ನ ಖಚಿತ, ಶ್ವೇತಚಾಮರಯುಕ್ತ, ರತ್ನಮಯ ಚಕ್ರಗಳಿಂದ ಕೂಡಿದ್ದವು. ಮನೋವೇಗದಿಂದ ಚಲಿಸುವ ರತ್ನಕಲಶ ಶೋಭಿತವಾದ ದಿವ್ಯರಥದಲ್ಲಿ ಪಾರ್ವತೀ ಸಹಿತನಾದ ಶಿವನು ಬಂದ. ಅವನ ಎಡಭಾಗದಲ್ಲಿ ಮಹಾಕಾಲ, ಬಲ ಪಾರ್ಶ್ವದಲ್ಲಿ ನಂದಿಕೇಶ್ವರ. ಮುಂಭಾಗದಲ್ಲಿ ಕಾರ್ತಿಕೇಯ ಗಣೇಶರು. ಪಿಂಗಲಾಕ್ಷ ಮುಂತಾದ ಪಾರ್ಷದರೂ ಕ್ಷೇತ್ರಪಾಲಾದಿಗಳೂ ಅಷ್ಟಭೈರವರೂ ಸುತ್ತುವರಿದಿದ್ದರು. ಶಿವನ ಎದೆಯಲ್ಲಿ ದುರ್ಗೆ ನಗುಮೊಗದಿಂದ ಕಡೆಗಣ್ಣ ನೋಟ ಹರಿಸುತ್ತ ಕುಳಿತಿದ್ದಳು.

ಸರಸ್ವತೀ ಸಮೇತನಾಗಿ ಬ್ರಹ್ಮನೂ ಬಂಗಾರದ ರಥದಲ್ಲಿ ಬಂದು ನಿಂತ. ಅವನ ಎಡಭಾಗದಲ್ಲಿ ಸಪ್ತರ್ಷಿಗಳು, ಬಲಭಾಗದಲ್ಲಿ ಸನಕಾದಿಗಳು. ಕರ್ಮಸಾಕ್ಷಿಯಾದ ಧರ್ಮನೂ ಬಂಗಾರದ ರಥದಲ್ಲಿ ಬಂದ. ಅವನ ಎದೆಯಲ್ಲಿ ನಗುಮೊಗದ ಮೂರ್ತಿ ದೇವಿ ಕುಳಿತಿದ್ದಳು. ಸುತ್ತಲೂ ಬ್ರಹ್ಮತೇಜದಿಂದ ಹೊಳೆವ ಪಾರ್ಷದರಿದ್ದರು. ಹೀಗೇ ಶಚೀ ಸಹಿತನಾದ ದೇವೇಂದ್ರ, ರೋಹಿಣೀ ಸಮೇತನಾದ ಚಂದ್ರ, ಸ್ವಾಹಾ ಸಹಿತನಾದ ಅಗ್ನಿ, ಸಂಜ್ಞಾಸಹಿತನಾದ ಸೂರ್ಯ, ರತಿ ಸಮೇತನಾದ ಮನ್ಮಥ, ಎಲ್ಲ ಗ್ರಹಗಳೂ ದಿಕ್ಪಾಲಕರೂ ಹೆಂಡಂದಿರೊಡನೆ ಬಂದು ಆಕಾಶದಲ್ಲಿ ನಿಂತು ರಾಸಮಂಡಲದಲ್ಲಿ ನಡೆವ ಈ ರಾಸಲೀಲೆಯನ್ನು ಕಂಡು ಆನಂದದಿಂದ ಮೈಮರೆತರು. ಚಂದನರಸದ ಮತ್ತು ಹೂಗಳ ಮಳೆಗರೆದರು. ಕಸ್ತೂರೀ ಯುಕ್ತ ಹೂಮಾಲೆಗಳನ್ನು ಎಸೆದರು.

ರಾಧೆ ಕೆಲವು ಗೋಪಿಯರಿಗೆ ಹೂ ಬಿಡಿಸಲು ಆದೇಶಿಸಿದಳು. ಕೆಲವರಿಗೆ ಮಾಲೆ ಕಟ್ಟಲು, ಕೆಲವರಿಗೆ ತಾಂಬೂಲ ಸಿದ್ಧ ಪಡಿಸಲು, ಕೆಲವರಿಗೆ ಚಂದನರಸ ತಯಾರಿಸಲು ಆಜ್ಞೆಮಾಡಿದಳು. ಆ ಮಾಲೆ ಚಂದನರಸ ತಾಂಬೂಲಗಳನ್ನು ರಾಧೆ ಕೃಷ್ಣನಿಗೆ ಇತ್ತಳು. ಕೆಲವು ಗೋಪಿಯರನ್ನು ಹಾಡಲು, ಕೆಲವರನ್ನು ಮೃದಂಗಾದಿಗಳನ್ನು ನುಡಿಸಲು, ಆಜ್ಞೆ ಮಾಡಿದಳು. ಹೀಗೆ ಕೃಷ್ಣನೊಡನೆ ರಾಧೆ ವಿಹಾರಮಾಡಿದಳು. ಪುಷ್ಪೋದ್ಯಾನಗಳಲ್ಲಿ ಸರೋವರಗಳಲ್ಲಿ ಗಿರಿಕಂದರಗಳಲ್ಲಿ ನದನದಿಗಳಲ್ಲಿ ಎಲ್ಲ ಏಕಾಂತ ಪ್ರದೇಶಗಳಲ್ಲಿ ಗೋಪಿಯರು ಕೃಷ್ಣನೊಡನೆ ವಿಹರಿಸಿದರು.

ಭಾಂಡೀರ ಶ್ರೀವನ ಕದಂಬವನ ತುಲಸೀವನ ಕುಂದವನ ಚಂಪಕವನ ನಿಂಬವನ ಮಧುವನ ಜಂಬೀರವನ ನಾಲಿಕೇರವನ ಪೂಗವನ ಕದಲೀವನ ಬದರೀವನ ಬಿಲ್ವವನ ನಾರಿಂಗವನ ಅಶ್ವತ್ಥವನ ವಂಶವನ ದಾಡಿಮವನ ಮಂದಾರವನ ತಾಲವನ ಚೂತವನ ಕೇತಕೀವನ ಅಶೋಕವನ ಖರ್ಜೂರವನ ಆಮ್ರವನ ಜಂಬೂವನ ಶಾಲವನ ಕಂಟಕವನ ಪದ್ಮವನ ಜಾತಿವನ ನ್ಯಗ್ರೋಧವನ ಶ್ರೀಖಂಡವನ ಕೇಸರವನ - ಹೀಗೆ

ಮೂವತ್ತಮೂರು ಬಗೆಯ ವನಗಳಲ್ಲಿ ಈ ವಿಹಾರ ನಡೆಯಿತು. ಒಂದು ತಿಂಗಳಲ್ಲಿ ಮೂವತ್ತು ದಿನವೂ ಹಗಲು ರಾತ್ರಿ ವಿಹಾರಮಾಡಿದರೂ ಅವರಿಗೆ ತೃಪ್ತಿಯಾಗಲಿಲ್ಲ.

**ನ ಕಾಮಿನೀನಾಂ ಕಾಮಶ್ಚ ಶೃಂಗಾರೇಣ ನಿವರ್ತತೇ।**
**ಅಧಿಕಂ ವರ್ಧತೇ ಶಶ್ವತ ಯಥಾಗ್ನಿರ್ಘೃತಧಾರಯಾ॥**

ಕಾಮಿನಿಯರ ಕಾಮ ಶೃಂಗಾರದಿಂದ ಬತ್ತುವುದಿಲ್ಲ. ಇನ್ನೂ ಹೆಚ್ಚುತ್ತದೆ. ತುಪ್ಪದ ಧಾರೆಯಿಂದ ಬೆಂಕಿಯ ಜ್ವಾಲೆ ಹೇಗೆ ಹೆಚ್ಚುವುದೋ ಹಾಗೆ!

ದೇವದೇವಿಯರು ಮುನಿಗಳು ಎಲ್ಲರೂ ಈ ರಾಸಲೀಲೆಯನ್ನು ಕಂಡು ವಿಸ್ಮಿತರಾಗಿ ಹೊಗಳಿದರು. ಕಾಮಾಗ್ನಿಯಿಂದ ದಗ್ಧರಾದ ದೇವಿಯರು ಶೃಂಗಾರ ಲಾಲಸೆಯಿಂದ ಭಾರತದೇಶದಲ್ಲಿ ರಾಜರುಗಳ ಮನೆಮನೆಗಳಲ್ಲಿ ಜನ್ಮ ತಳೆದರು.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ರಾಸಕ್ರೀಡಾ ಪ್ರಸ್ತಾವವೆಂಬ ಇಪ್ಪತ್ತೆಂಟನೆ ಅಧ್ಯಾಯ ಮುಗಿಯಿತು.*



## ಅಷ್ಟಾವಕ್ರಮುನಿ ಮೋಕ್ಷ

ಅಧ್ಯಾಯ - ೨೯

**ನಾರಾಯಣ:-** ಬಳಿಕ ಅತಿ ಪ್ರೌಢೆಯರಾದ ಗೋಪಿಯರು ಕಾಮಮತ್ತರಾಗಿ ಕೃಷ್ಣನನ್ನು ಪತಿಯೆಂದು ಕಾಣದಾದರು. ಕೆಲವರು ದರ್ಪದಿಂದ ಕೃಷ್ಣ, ನನಗೆ ಹೂ ಮಾಲೆ ಕಟ್ಟಿಕೊಡು ಎಂದರು, ಕೆಲವರು ನನಗೆ ಸೀರೆ ಉಡಿಸು ಎಂದರು. ಕೆಲವರು ತಿಲಕವಿಡು ಎಂದರು. ಕೆಲವರು ನನಗೆ ತಲೆ ಬಾಚಿ ಕಟ್ಟು ಎಂದರು, ಕೆಲವರು ಕಾಮಕೇಳಿಗೆ ಕಣ್‌ಸನ್ನೆಯಿಂದ ಕರೆದರು. ಕೆಲವರು ಉಟ್ಟ ಪೀತಾಂಬರವನ್ನು ಸೆಳೆದರು. ಕೆಲವರು ಅಂಗಾಲಿಗೆ ಅಲಕ್ತಕ ಹಚ್ಚು ಎಂದರು. ಕೆಲವರು ಕಪೋಲದಲ್ಲಿ ಪತ್ರಾವಳಿ ರಚಿಸು ಎಂದರು. ಗೋಪಿಯರೆಲ್ಲ ಹೀಗೆ ಮತ್ತರಾದುದನ್ನು ಕಂಡು ಕೃಷ್ಣ ರಾಧೆಯೊಡನೆ ಅಂತರ್ಧಾನ ಹೊಂದಿದ. ಅವಳೊಡನೆ ಪರ್ವತಗಳಲ್ಲಿ ದ್ವೀಪಗಳಲ್ಲಿ ನದೀತೀರಗಳಲ್ಲಿ ಪುಷ್ಪೋದ್ಯಾನಗಳಲ್ಲಿ ವಿಹರಿಸಿದ. ಶ್ರೀಗಂಧದ ಗಾಳಿ ಬೀಸುವ ಮಲಯ ಪರ್ವತಕ್ಕೆ ಹೋಗಿ ಅಲ್ಲಿ ಹೂವಿನ ಹಾಸಿಗೆಯಲ್ಲಿ ರಾಧೆಯೊಡನೆ ರಮಿಸಿದ. ಸುಖಸಂಭೋಗದಿಂದ ಮೈಮರೆತ. ರಾಧೆ ರೋಮಾಂಚಗೊಂಡು ಕೃಷ್ಣನನ್ನು ಆಲಿಂಗಿಸಿದಳು. ಕೃಷ್ಣ ಅವಳೊಡನೆ ಸರೋವರದಲ್ಲಿ ನೀರಾಟವಾಡಿದ. ಎರಡು ಸಹಸ್ರದಳ ಪದ್ಮವನ್ನು ಕಿತ್ತು ಒಂದನ್ನು ರಾಧೆಗೆ ನೀಡಿದ. ಇನ್ನೊಂದನ್ನು ತಾನು ಧರಿಸಿದ. ಚಂದನ ಅಗುರುಕಸ್ತೂರಿ ಕುಂಕುಮ ರಸವನ್ನು ತನ್ನ ಮೈಗೆ ಪೂಸಿಕೊಂಡು ರಾಧೆಯ ಮೈಗೂ ಬಳಿದ. ಬಳಿಕ ಕೇತಕೀ ವನದ ಬಳಿಯಲ್ಲಿರುವ ಎತ್ತರದ ಆಲದ ಮರವನ್ನು ಕಂಡ. ಬುಡದಲ್ಲಿ ಅದು ಯೋಜನ ಪರ್ಯಂತ ವಿಸ್ತಾರವೂ ಆಗಿತ್ತು. ಒಳ್ಳೆಯ ನೆರಳು ಕೊಡುತ್ತಿತ್ತು. ಅಲ್ಲಿ ಹೂವಿನ ಕಂಪು ಹೊತ್ತು ತಂಪಾಗಿ ಬೀಸುವ

ಗಾಳಿಯನ್ನು ಸೇವಿಸುತ್ತ ರಾಧೆಯೊಡನೆ ಕುಳಿತ. ವಿಚಿತ್ರ ಸುಂದರ ಪುರಾಣಕತೆಯನ್ನು ರಾಧೆಗೆ ಹೇಳಿದ. ಅಷ್ಟರಲ್ಲಿ ಅಲ್ಲಿ ಒಬ್ಬ ಮುನಿ ಗೋಚರನಾದ. ಅವನಿಗೆ ಧ್ಯಾನದಲ್ಲಿ ಕೃಷ್ಣ ಮರೆಯಾಗಿದ್ದ. ಹೊರಗೆ ದಿಟ್ಟಿಸಿ ನೋಡಿದಾಗ ಕೃಷ್ಣ ಗೋಚರಿಸಿದುದರಿಂದ ಅವನ ಬಳಿಗೇ ನಡೆದು ಬರುತ್ತಿದ್ದ. ಅವನ ಮೈ ಎಲ್ಲ ವಕ್ರ, ಕಪ್ಪುಬಣ್ಣ, ಕುಳ್ಳಗಿದ್ದ. ದಿಗಂಬರನಾಗಿದ್ದ. ಹೆಸರು ಅಷ್ಟಾವಕ್ರ. ಬ್ರಹ್ಮತೇಜಸ್ಸಿನಿಂದ ಜ್ವಲಿಸುತ್ತಿದ್ದ. ಇದೇನು ಬ್ರಹ್ಮತೇಜವೇ ರೂಪು ತಳೆದು ಬಂದಿತೆ ಎನ್ನುವಂತಿತ್ತು ಅವನ ಆಕಾರ. ಅವನು ಭಕ್ತಿಯಿಂದ ಕೈ ಮುಗಿದು ತಲೆ ಬಾಗಿದ. ರಾಧೆ ನೋಡಿ ನಗಲು ತೊಡಗಿದಳು. ಕೃಷ್ಣ ತಡೆದ. ಅವನ ಪ್ರಭಾವದ ಬಗ್ಗೆ ಹೇಳಿದ. ಮುನಿ ನಮಿಸಿ ಕೃಷ್ಣನನ್ನು ಸ್ತುತಿಸಿದ. ಆ ಸ್ತೋತ್ರ ಹಿಂದೆ ಶಂಕರ ಅವನಿಗೆ ಉಪದೇಶಿಸಿದ ಸ್ತೋತ್ರವಾಗಿತ್ತು -

**ಅಷ್ಟಾವಕ್ರ:-** ಹೇ ಗುಣಾತೀತ, ಗುಣಾಧಾರ, ಗುಣಬೀಜ, ಗುಣಾತ್ಮಕ, ಗುಣೇಶ, ಗುಣಬೀಜ, ಗುಣಾಯನ, ನಿನಗೆ ನಮಸ್ಕಾರ. ಸಿದ್ಧಿಸ್ವರೂಪ, ಸಿದ್ಧ್ಯಂಶ, ಸಿದ್ಧಿ ಬೀಜ, ಪರಾತ್ಪರ, ಸಿದ್ಧಿ ಸಿದ್ಧ, ಗುಣಾಧೀಶ, ಸಿದ್ಧ ಗುರು, ನಿನಗೆ ನಮಸ್ಕಾರ. ವೇದ ಬೀಜ, ವೇದಜ್ಞ, ವೇದಿ, ವೇದವೇತ್ತ, ವೇದಜ್ಞೇಯ ನಿನಗೆ ನಮಸ್ಕಾರ, ಬ್ರಹ್ಮ ಅನಂತ ಈಶ ಶೇಷ ಇಂದ್ರ ಧರ್ಮಾದಿಗಳಿಗೆ ಒಡೆಯ, ಸರ್ವ, ಸರ್ವೇಶ, ಬೀಜರೂಪ, ನಿನಗೆ ನಮಸ್ಕಾರ. ಪ್ರಕೃತಿ, ಪ್ರಾಕೃತ, ಪ್ರಜ್ಞ, ಪ್ರಕೃತೀಶ, ಪರಾತ್ಪರ, ಸಂಸಾರ ವೃಕ್ಷ, ತದ್ಬೀಜ, ಫಲರೂಪ ನಿನಗೆ ನಮಸ್ಕಾರ. ಸೃಷ್ಟಿಸ್ಥಿತಿಲಯ ಬೀಜ, ಸೃಷ್ಟಿ ಸ್ಥಿತಿಲಯಕಾರಣ, ಮಹಾವಿರಾಡ್‌ವೃಕ್ಷಬೀಜ, ರಾಧಾರಮಣ, ನಿನಗೆ ನಮಸ್ಕಾರ. ನೀನೊಂದು ವೃಕ್ಷ. ಪ್ರಕೃತಿಯೆ ಅಂಕುರ. ಬ್ರಹ್ಮ ವಿಷ್ಣು ಮಹೇಶ್ವರರು ಮೂರು ಕೊಂಬೆಗಳು. ವೇದಾದಿಗಳು ಶಾಖೋಪಶಾಖೆಗಳು, ತಪಸ್ಸುಗಳು ಹೂಗಳು. ಈ ವೃಕ್ಷಕ್ಕೆ ಆಧಾರವು ನಿರಾಧಾರ ಸರ್ವಾಧಾರನಾದ ನೀನೆ. ತೇಜೋರೂಪ, ನಿರಾಕಾರ, ಪ್ರತ್ಯಕ್ಷಾಗೋಚರ, ಸರ್ವಾಕಾರ, ಸ್ವೇಚ್ಛಾಮಯ ನಿನಗೆ ನಮಸ್ಕಾರ.'

ಹೀಗೆ ಹೇಳಿ ಅಷ್ಟಾವಕ್ರಮುನಿ ಕೃಷ್ಣನ ಪಾದಕಮಲಗಳಲ್ಲಿ ಬಿದ್ದು ಅಸುನೀಗಿದ. ಕೃಷ್ಣ ರಾಧೆಯರಿಬ್ಬರೂ ನೋಡುತ್ತಿದ್ದಂತೆ ಮುನಿಯ ಯೋಗಬಲದಿಂದ ಶರೀರ ಬಿದ್ದಿತು, ಒಂದು ತೇಜಸ್ಸು ಎದ್ದಿತು. ಜ್ವಲಿಸುವ ಬೆಂಕಿಯ ಜ್ವಾಲೆಯಂತಿದ್ದ ಆ ತೇಜಸ್ಸು ಸಪ್ತತಾಲಪ್ರಮಾಣಕ್ಕೆ ಮೇಲೆದ್ದು ಸುತ್ತಲೂ ಪ್ರದಕ್ಷಿಣೆ ಮಾಡಿ ಕೃಷ್ಣನ ಪಾದಕಮಲಗಳಲ್ಲಿ ಸೇರಿಹೋಯಿತು.

ಅಷ್ಟಾವಕ್ರನು ಮಾಡಿದ ಈ ಸ್ತೋತ್ರವನ್ನು ಬೆಳಿಗ್ಗೆ ಎದ್ದು ಯಾರು ಪಠಿಸುವನೋ ಅವನು ಮೋಕ್ಷವನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಅದರಿಂದ ಮುಮುಕ್ಷುಗಳಿಗೆ ಈ ಸ್ತೋತ್ರರಾಜಪ್ರಾಣಕ್ಕಿಂತ ಅಧಿಕ. ಹರಿ ಹಿಂದೆ ವೈಕುಂಠದಲ್ಲಿ ಶಂಕರನಿಗೆ ಉಪದೇಶಿಸಿದ್ದ ಸ್ತೋತ್ರ ಇದು.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ*
*ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ*
*ಮುನಿಮೋಕ್ಷಣ ಪ್ರಸ್ತಾವ ಎಂಬ ಇಪತ್ತೊಂಬತ್ತನೆ ಅಧ್ಯಾಯ ಮುಗಿಯಿತು.*

**ನಾರದ:-** ಮಹಾಮುನಿ, ರಹಸ್ಯ ವೃತ್ತಾಂತವನ್ನು ಕೇಳಿದ್ದೇನೆ. ಎಂಥ ಅದ್ಭುತ! ಮುನಿ ಸತ್ತಾಗ ಕೃಷ್ಣನೇನು ಮಾಡಿದ, ಅದನ್ನೂ ಹೇಳು.

**ನಾರಾಯಣ:-** ಮುನಿ ಸತ್ತುದನ್ನು ಕಂಡು ಕೃಷ್ಣ ಅವನ ಶವವನ್ನು ತಬ್ಬಿ ಕೊಂಡು ಸಾಮಾನ್ಯ ಮಾನವನಂತೆ ಗಟ್ಟಿಯಾಗಿ ಅತ್ತುಬಿಟ್ಟ. ವಜ್ರದಂತೆ ಕಠಿನವಾದ ಬಾಹುಗಳಿಂದ ಬಿಗಿಯಾಗಿ ತಬ್ಬಿಕೊಂಡಾಗ ಆ ಶವದಿಂದ ಬೂದಿ ಹೊರಗೆ ಬಂದಿತು. ಏಕೆಂದರೆ ಮಹಾತ್ಮನಾದ ಮುನಿಯ ಶರೀರದೊಳಗೆ ರಕ್ತ ಮಾಂಸ ಅಸ್ಥಿಗಳೆ ಇರಲಿಲ್ಲ. ಅರವತ್ತು ಸಾವಿರ ವರ್ಷ ನಿರಾಹಾರನಾಗಿ ತಪಸ್ಸು ಮಾಡಿದ್ದರಿಂದ ಜ್ವಲಿಸಿದ ಜಾಠರಾಗ್ನಿಯಿಂದ ರಕ್ತ ಮಾಂಸ ಅಸ್ಥಿ ಎಲ್ಲವೂ ಸುಟ್ಟು ಬೂದಿಯಾಗಿದ್ದುವು. ಅವನಿಗೆ ಬಾಹ್ಯದ ಪರಿವೆಯೆ ಇರಲಿಲ್ಲ, ಹರಿಪಾದ ಕಮಲಗಳಲ್ಲಿಯೆ ಮನಸ್ಸನ್ನು ಇರಿಸಿದ್ದ. ಶ್ರೀಕೃಷ್ಣ ಚಂದನ ಕಾಷ್ಠದಿಂದ ಚಿತೆಯನ್ನು ನಿರ್ಮಿಸಿ ಶವವನ್ನಿಟ್ಟು ಅದರ ಮೇಲೆ ಕಟ್ಟಿಗೆಯನ್ನಿಟ್ಟು ಬೆಂಕಿಕೊಟ್ಟ. ಅದು ಉರಿದಾಗ ಒಂದು ಕ್ಷಣ ಪ್ರಭು ಶ್ರೀಕೃಷ್ಣ ಮೈಮರೆತು ನಿಂತ. ದೇವಲೋಕದಲ್ಲಿ ದುಂದುಭಿ ಮೊಳಗಿತು. ಆಕಾಶದಿಂದ ಪುಷ್ಪ ವೃಷ್ಟಿಯಾಯಿತು. ಗೋಲೋಕದಿಂದ ಒಂದು ದಿವ್ಯ ರತ್ನಮಯ ರಥ ಬಂದಿಳಿಯಿತು. ಅದರಲ್ಲಿದ್ದ ಸಮಾನರೂಪದ ಹರಿಪಾರ್ಷದರು ರಾಧಾಕೃಷ್ಣರಿಗೆ ನಮಿಸಿ ಸೂಕ್ಷ್ಮದೇಹ ಧಾರಿಯಾಗಿ ನಿಂತಿದ್ದ ಅಷ್ಟಾವಕ್ರನಿಗೂ ನಮಿಸಿ ಅವನನ್ನು ರಥದಲ್ಲಿ ಕೂಡಿಸಿ ಗೋಲೋಕಕ್ಕೆ ಒಯ್ದರು. ಹೀಗೆ ಮುನಿ ಹೊರಟುಹೋದಾಗ ರಾಧೆ ವಿಸ್ಮಿತಳಾಗಿ ಕೃಷ್ಣನನ್ನು ಕೇಳಿದಳು.

**ರಾಧೆ:-** ನಾಥ, ಈ ಮುನಿ ಯಾರು? ಎಲ್ಲ ಅವಯವಗಳಲ್ಲಿ ಈತನಿಗೆ ವಕ್ರತೆ ಹೇಗೆ? ಬಹಳ ಕುಳ್ಳಾಗಿದ್ದಾನೆ. ಕುರೂಪಿ, ಆದರೆ ತೇಜಸ್ವಿ! ಅವನ ದೇಹದಿಂದ ಬೂದಿ ಹೇಗೆ ಹೊರಗೆ ಬಂದಿತು? ಅವನ ತೇಜಸ್ಸು ನಿನ್ನ ಪಾದಕಮಲದಲ್ಲಿ ಲೀನವಾಯಿತು! ದಿವ್ಯರಥದಲ್ಲಿ ಕುಳಿತು ಗೋಲೋಕವನ್ನೂ ಆತ ಸೇರಿದ. ಇದು ಆಶ್ಚರ್ಯ. ಆತ್ಮಾರಾಮನಾದ ನೀನೂ ಅವನಿಗಾಗಿ ಅತ್ತೆ! ಕಣ್ಣಲ್ಲಿ ನೀರು ತುಂಬಿ ಕೊಂಡು ನೀನು ಅವನಿಗೆ ಅಂತ್ಯಸಂಸ್ಕಾರ ನಡೆಸಿದೆ! ಎಲ್ಲವನ್ನೂ ಬಿಡಿಸಿ ಹೇಳು.' ರಾಧೆಯ ಮಾತನ್ನು ಕೇಳಿ ಕೃಷ್ಣ ಬೇರೆಯೆ ಯುಗದ ಕಥೆಯನ್ನು ಹೇಳಲು ತೊಡಗಿದ.

**ಶ್ರೀಕೃಷ್ಣ:-** ಅಷ್ಟಾವಕ್ರನ ವೃತ್ತಾಂತ ಗೋಪ್ಯವಾದುದು. ಮುಂದೆ ಎಂದಾದರೂ ಬಲ್ಲವರ ಮುಖದಿಂದ ಅದನ್ನು ನೀನು ಕೇಳಬಹುದು. ಅವನ ಖ್ಯಾತಿ ಮೂಲೋಕದಲ್ಲಿ ಹಬ್ಬಿದೆ. ಮೂಲೋಕ ಅವನ ಯಶಸ್ಸಿನಿಂದ ತುಂಬಿದೆ.

ಕೃಷ್ಣನ ಮಾತನ್ನು ಕೇಳಿ ರಾಧೆಗೆ ನಿರಾಸೆಯಾಯಿತು. ಒಣಗಿದ ಗಂಟಲಿಂದ ಬಲುಕಷ್ಟದಿಂದ ನುಡಿದಳು.

**ರಾಧೆ:-** ಬಾಯಾರಿದವನಿಗೆ ಅಮೃತಸಮುದ್ರದಿಂದಲೆ ತೃಪ್ತಿಯಾಗದಿದ್ದರೆ ಸಣ್ಣ ಹಳ್ಳದ ನೀರಿಂದ ತೃಪ್ತಿಯಾಗುವುದೇನು? ನೀನು ವೇದಗಳಿಗೂ

ವೇದೋಪದೇಶಕರಿಗೂ ಜನಕನಾದ ಮಹಾ ವಿಷ್ಣುವಿಗೂ ಪ್ರಭು. ನಿನ್ನ ಹೊರತು ಇನ್ನಾರು ಹೇಳುವವರು?

ರಾಧೆಯ ಮಾತನ್ನು ಕೇಳಿ ಸಂತುಷ್ಟನಾಗಿ ಗೋಪ್ಯವಾದ ಅದ್ಭುತವಾದ ವೃತ್ತಾಂತವನ್ನು ಬಣ್ಣಿಸಿದ -

**ಶ್ರೀಕೃಷ್ಣ:-** ಪ್ರಿಯೆ, ಪುರಾತನ ಇತಿಹಾಸವೊಂದನ್ನು ಹೇಳುತ್ತೇನೆ ಕೇಳು. ಅದರ ಶ್ರವಣದಿಂದ ಕಥನದಿಂದ ಸಕಲಪಾಪಗಳೂ ಪರಿಹಾರವಾಗುತ್ತವೆ. ಮಹಾವಿಷ್ಣುವಿನ ನಾಭಿಕಮಲದಿಂದ ನನ್ನ ಅಂಶಭೂತನಾದ ಬ್ರಹ್ಮ ಪ್ರಾದುರ್ಭವಿಸಿದ. ಅವನಿಗೆ ನಾಲ್ವರು ಮಾನಸ ಪುತ್ರರು ಜನಿಸಿದರು, ಸನಕ ಸನಂದನ ಸನಾತನ ಸನತ್ಕುಮಾರ ಎಂದು. ಇವರು ಎಲ್ಲರೂ ನಾರಾಯಣಪರರು, ಬ್ರಹ್ಮತೇಜಸ್ಸಿನಿಂದ ಜ್ವಲಿಸುವವರು. ಅಜ್ಞಾನಿಗಳಾದ ಐದು ವರ್ಷದ ಬೆತ್ತಲೆ ಮಕ್ಕಳಂತಿರುವವರು. ಅವರಿಗೆ ಬಾಹ್ಯದ ಪರಿವೆಯೆ ಇಲ್ಲ. ಬ್ರಹ್ಮಜ್ಞಾನ ಸಂಪನ್ನರು. ಬ್ರಹ್ಮ ಅವರಿಗೆ 'ಮಕ್ಕಳೆ ನೀವು ಸೃಷ್ಟಿ ಮಾಡಿರಿ' ಎಂದು ಆಜ್ಞಾಪಿಸಿದ. ಅವರು ಆಆಜ್ಞೆಯಂತೆ ನಡೆಯಲಿಲ್ಲ. ತಪಸ್ಸಿಗೆ ಹೊರಟುಹೋದರು. ಬ್ರಹ್ಮನಿಗೆ ಖೇದ ಉಂಟಾಯಿತು. ತಂದೆಯ ಮಾತನ್ನು ಮಗ ಕೇಳದಿದ್ದರೆ ದುಃಖವಾಗುವದು ಸಹಜ. ಬಳಿಕ ಬ್ರಹ್ಮ ತನ್ನ ಅಂಗಗಳಿಂದ ಪುತ್ರರನ್ನು ಸೃಜಿಸಿದ. ಅತ್ರಿ, ಪುಲಸ್ತ್ಯ ಪುಲಹ ಮರೀಚಿ ಭೃಗು ಅಂಗಿರ ಕ್ರತು ವಸಿಷ್ಠ ವೋಢು ಕಪಿಲ ಆಸುರಿ ಕವಿ ಶಂಕು ಶಂಖ ಪಂಚಶಿಖ ಪ್ರಚೇತ ಇವರೆ ಆ ಬ್ರಹ್ಮಪುತ್ರರು. ಎಲ್ಲರೂ ತಪೋಧನರು, ವೇದವೇದಾಂಗವೇತ್ತರು. ಬ್ರಹ್ಮತೇಜಸ್ಸಿನಿಂದ ಜ್ವಲಿಸುವವರು. ಬಹುಕಾಲ ತಪಸ್ಸು ಮಾಡಿ ಬ್ರಹ್ಮನ ಆಜ್ಞೆಯಂತೆ ಸೃಷ್ಟಿ ಮಾಡಿದರು. ಎಲ್ಲರೂ ಮದುವೆಯಾಗಿ ಸಂಸಾರ ಹೂಡಿದರು. ಅವರಿಗೆ ಮಕ್ಕಳು ಮೊಮ್ಮಕ್ಕಳು ಜನಿಸಿದರು. ಈ ಮುನಿವಂಶದ ಕಥೆ ಸುಂದರ, ಪುಣ್ಯಕರ. ಇರಲಿ. ಪ್ರಕೃತ ವಿಷಯವನ್ನು ಕೇಳು. ಪ್ರಚೇತನ ಮಗನೆ ಅಸಿತ. ಅವನು ಪತ್ನೀ ಸಹಿತನಾಗಿ ಒಂದು ಸಹಸ್ರ ದಿವ್ಯ ವರ್ಷಕಾಲ ತಪಸ್ಸು ಮಾಡಿದ. ಆದರೆ ಮಕ್ಕಳಾಗಲಿಲ್ಲ. ಪ್ರಾಣತ್ಯಾಗಕ್ಕೆ ಹೊರಟ. ಆಗ ಅಶರೀರ ವಾಣಿ ಕೇಳಿಸಿತು. 'ಏಕೆ ಪ್ರಾಣತ್ಯಾಗ ಮಾಡುವೆ? ಶಿವನ ಬಳಿಗೆ ಹೋಗು. ಅವನಿಂದ ಮಂತ್ರೋಪದೇಶ ಪಡೆದು ಸಿದ್ಧಿಯನ್ನು ಸಂಪಾದಿಸು. ಮಂತ್ರಾಧಿಷ್ಠಾತ್ರಿಯಾದ ದೇವಿ ಮೈದೋರಿ ವರ ನೀಡುವಳು. ನಿನಗೆ ಪುತ್ರ ಜನಿಸುತ್ತಾನೆ.' ಇದನ್ನು ಕೇಳಿ ಮುನಿ ಶಿವನ ಬಳಿಗೆ ಹೋಗಿ ಭಕ್ತಿಯಿಂದ ಕೈಮುಗಿದು ತಲೆಬಾಗಿ ಸ್ತುತಿಸಿದ -

**ಅಸಿತ:-** ಜಗದ್ಗುರು, ನಿನಗೆ ನಮಸ್ಕಾರ. ನೀನು ಶಿವ, ಶಿವದ, ಯೋಗೀಂದ್ರರಿಗೆ ಯೋಗೀಂದ್ರ, ಗುರುಗಳಿಗೆ ಗುರು. ಮೃತ್ಯುವಿಗೆ ಮೃತ್ಯು, ಮೃತ್ಯುಸಂಸಾರ ನಾಶಕ, ಮೃತ್ಯುಬೀಜ, ಮೃತ್ಯುಂಜಯ, ನಿನಗೆ ನಮಸ್ಕಾರ. ಕಾಲರೂಪ, ಕಾಲೇಶ, ಕಾಲಾತೀತ, ಕಾಲ ಕಾಲ, ಗುಣಾತೀತ ಗುಣಾಧಾರ ಗುಣಬೀಜ ಗುಣಾತ್ಮಕ, ಗುಣೇಶ, ಗುಣಿಬೀಜ ಗುಣಿಗುರು ಬ್ರಹ್ಮಸ್ವರೂಪ ಬ್ರಹ್ಮಜ್ಞ ಬ್ರಹ್ಮಭಾವತತ್ಪರ, ಬ್ರಹ್ಮಬೀಜ. ನಿನಗೆ ನಮಸ್ಕಾರ.

ಹೀಗೆ ಸ್ತುತಿಸಿ, ಅಸಿತ ಮುನಿ ನಮಿಸಿ ದೀನನಾಗಿ ಕಣ್ಣೀರು ತುಂಬಿ ಮೈ ರೋಮಾಂಚಗೊಂಡು ನಿಂತ. ಒಂದು ವರ್ಷಕಾಲ ಹವಿಷ್ಯಾನ್ನ ಉಂಡು

ಈಶಿವಸ್ತುತಿಯನ್ನು ಭಕ್ತಿಯಿಂದ ಯಾರು ಪಠಿಸುವನೋ ಅವನು ವಿಷ್ಣುಭಕ್ತ ಜ್ಞಾನಿ ಚಿರಜೀವಿಯಾದ ಪುತ್ರನನ್ನು ಪಡೆಯುತ್ತಾನೆ. ದರಿದ್ರ ಧನಿಕನಾಗುತ್ತಾನೆ. ಮೂಕ ಪಂಡಿತನಾಗುತ್ತಾನೆ. ಭಾರ್ಯೆ ಇಲ್ಲದವನು ಸುಶೀಲೆಯಾದ ಪತಿವ್ರತೆಯಾದ ಭಾರ್ಯೆಯನ್ನು ಪಡೆಯುತ್ತಾನೆ. ಈ ಲೋಕದಲ್ಲಿ ಸುಖವಾಗಿದ್ದು ಕೊನೆಯಲ್ಲಿ ಶಿವ ಸನ್ನಿಧಿಯನ್ನು ಪಡೆಯುತ್ತಾನೆ. ಈ ಸ್ತೋತ್ರವನ್ನು ಹಿಂದೆ ಬ್ರಹ್ಮ ಪ್ರಚೇತಸನಿಗೆ ಉಪದೇಶಿಸಿದ್ದ, ಪ್ರಚೇತ ಅಸಿತನಿಗೆ ಉಪದೇಶಿಸಿದ್ದ.

ಈ ಸ್ತೋತ್ರವನ್ನು ಕೇಳಿ ಶಿವ ನುಡಿದ -

**ಶಿವ:-** ಮುನಿಯೆ, ತಾಳು, ನಿನ್ನ ಬಯಕೆ ಏನೆಂದು ನಾನು ತಿಳಿದಿದ್ದೇನೆ. ನಿನಗೆ ನನ್ನ ಅಂಶದಿಂದ ನನಗೆ ಸಮಾನನಾದ ಒಬ್ಬ ಪುತ್ರ ಜನಿಸುತ್ತಾನೆ. ಅದಕ್ಕೆ ಅನುಪಮವಾದ ದುರ್ಲಭವಾದ ಮಂತ್ರವನ್ನು ನಿನಗೆ ಉಪದೇಶಿಸುವೆನು.

ಹೀಗೆ ಹೇಳಿ ಶಿವ ಅದೇ ನಿನ್ನ ಷೋಡಶಾಕ್ಷರ ಮಂತ್ರವನ್ನು ಉಪದೇಶಿಸಿದ. ಸ್ತೋತ್ರ, ಪೂಜಾವಿಧಾನ, ಅದ್ಭುತವಾದ ಸಂಸಾರವಿಜಯವೆಂಬ ಕವಚಗಳನ್ನು ಉಪದೇಶಿಸಿ 'ದೇವಿ ನಿನಗೆ ಪ್ರತ್ಯಕ್ಷಳಾಗುವಳು' ಎಂದು ವರವನ್ನೂ ಕೊಟ್ಟ. ಅಸಿತ ಅಲ್ಲಿಂದ ಹೊರಟುಹೋಗಿ ನೂರು ವರ್ಷಕಾಲ ಮಂತ್ರವನ್ನು ಜಪಿಸಿದ. ನೀನು ಪ್ರತ್ಯಕ್ಷಳಾಗಿ ಅವನಿಗೆ ವರವಿತ್ತೆ, 'ನಿನಗೆ ಮಹಾಜ್ಞಾನಿಯಾದ ಪುತ್ರ ಜನಿಸುವನು' ಎಂದು. ಹೀಗೆ ವರನೀಡಿ ನೀನು ಗೋಲೋಕಕ್ಕೆ ನನ್ನ ಬಳಿಗೆ ಬಂದೆ. ಮುಂದೆ ಅಸಿತ ಮುನಿಗೆ ಶಿವಾಂಶದಿಂದ ಮನ್ಮಥನಂಥ ಸುಂದರನಾದ, ಬ್ರಹ್ಮಿಷ್ಠನಾದ, ದೇವಲನೆಂಬ ಮಗ ಜನಿಸಿದ. ದೇವಲ ಸುಯಜ್ಞರಾಜನ ಮಗಳಾದ ರತ್ನಮಾಲಾವತಿಯನ್ನು ಮದುವೆಯಾಗಿ ಅವಳೊಡನೆ ನೂರು ವರ್ಷಕಾಲ ವಿಹರಿಸಿದ. ಕೊನೆಯಲ್ಲಿ ಅವನಿಗೆ ವೈರಾಗ್ಯ ಮೂಡಿತು. ಎಲ್ಲವನ್ನೂ ತೊರೆದು ಹರಿಸ್ಮರಣ ಮಾಡುತ್ತ ಒಂದು ರಾತ್ರಿ ಹಾಸಿಗೆಯಿಂದ ಎದ್ದು ತಪಸ್ಸಿಗಾಗಿ ಗಂಧಮಾದನ ಪರ್ವತಕ್ಕೆ ತೆರಳಿದ. ಅವನ ಮಡದಿ ಎಚ್ಚೆತ್ತು ನೋಡಿದಾಗ ಪತಿ ಇಲ್ಲದುದನ್ನು ಕಂಡು ದುಃಖದಿಂದ ಅತ್ತಳು. ವಿರಹಾಗ್ನಿಯಲ್ಲಿ ಬೆಂದಳು. ಅವಳ ಮನಸ್ಸು ಎಸರಿಟ್ಟ ಧಾನ್ಯದ ಕಾಳಿನಂತೆ ಕತಕತನೆ ಕುದಿಯುತ್ತಿತ್ತು. ಅನ್ನವನ್ನು ತೊರೆದು ಪ್ರಾಣತ್ಯಾಗ ಮಾಡಿದಳು. ಅವಳ ಮಗ ಅವಳಿಗೆ ಅಂತ್ಯಕ್ರಿಯೆ ನಡೆಸಿದ. ಇತ್ತ ದೇವಲಮುನಿ ಗಂಧಮಾದನ ಪರ್ವತದಲ್ಲಿ ಸಹಸ್ರದಿವ್ಯ ವರ್ಷಕಾಲ ಜಿತೇಂದ್ರಿಯನಾಗಿ ತಪಸ್ಸನ್ನು ಆಚರಿಸಿದ. ದೈವಾತ್ ರಂಭೆ ಅವನನ್ನು ಕಂಡಳು. ಅವಳು ಶೃಂಗಾರ ಲೋಲುಪಳು. ಅವನು ಮನ್ಮಥನಂತೆ ಸುಂದರ. ನಿರ್ಜನ ಪ್ರದೇಶದಲ್ಲಿ ಮೂಲೋಕದ ಮನವನ್ನು ಸೂರೆಗೊಳ್ಳುವ ವೇಷ ಧರಿಸಿ ಅವನ ಬಳಿ ಬಂದು ನುಡಿದಳು -

**ರಂಭೆ:-** ಮುನಿಯೆ, ನಿನ್ನ ಈ ಕಠೋರ ತಪಸ್ಸನ್ನು ತೊರೆದು ಸುಖದಾಯಕಳಾದ ನನ್ನೊಡನೆ ರಮಿಸು. ನೀನು ಭೂಲೋಕದ ಸುಂದರ ಪುರುಷರಲ್ಲೆಲ್ಲ ಸುಂದರ. ನಾನು ಸ್ವತಃ ಮೆಚ್ಚಿ ಬಂದ ಹೆಣ್ಣು. ಪ್ರೌಢನಾದ ನೀನು ಪ್ರೌಢೆಯಾದ ನನ್ನನ್ನು ಸೇರಿದರೆ ಅಂಥ ನವಸಂಗಮ ಬೇರೆ ದುರ್ಲಭ. ರಾಜರುಗಳು ಭಾರತದೇಶದಲ್ಲಿ ಯಜ್ಞ ಮಾಡುವುದು ಸ್ವರ್ಗಕ್ಕಾಗಿ ಸ್ವರ್ಗಸುಖಕ್ಕಾಗಿ. ಸ್ವರ್ಗಸುಖದ ಸಾರವೆ ನಮ್ಮಂಥ ಅಪ್ಸರೆಯರ ಸಂಗ. ನಮ್ಮ ಮುಖಕಮಲವನ್ನು ಕಂಡು ಯಾರು ತಾನೆ ಸುಖಪಡಲಾರರು? ಸುಖಗಳಲ್ಲೆಲ್ಲ ಶ್ರೇಷ್ಠ ಸ್ತ್ರೀಸುಖ. ಮುನಿಗಳಿಗೂ ಅದು ಅಭೀಷ್ಟ.

ಏಕಾಂತದಲ್ಲಿ ಈ ರಸಿಕಳ ಸುಖಸಂಭೋಗ ಸಿಗುವುದು ಅತ್ಯಂತ ದುರ್ಲಭ. ದೇವನಿರಲಿ, ಮಾನವನಿರಲಿ, ಗಂಧರ್ವನಿರಲಿ, ರಾಕ್ಷಸನಿರಲಿ ಒಮ್ಮೆ ರಂಭೆಯ ಒಡನಾಟ ಮಾಡದಿದ್ದರೆ ಅವನಿಗೆ ಸ್ತ್ರೀಸುಖವೇನೆಂಬುದೆ ಗೊತ್ತಿಲ್ಲ ಎನ್ನಬೇಕು. ಏಕಾಂತದಲ್ಲಿ ಒಲಿದು ಬಂದ ಹೆಣ್ಣನ್ನು ನಿರಾಕರಿಸುವವನು ಶರೀರದಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ವರ್ಷಕಾಲ ಕುಂಭೀಪಾಕದಲ್ಲಿ ವಾಸಮಾಡುತ್ತಾನೆ. ಇದು ಅವಳ ವಧೆ ಮಾಡಿದಂತೆಯೆ. ಅದರಿಂದ ಸ್ತ್ರೀವಧ ಪಾಪಕ್ಕೆ ಪಕ್ಕಾಗುತ್ತಾನೆ. ಅವಳ ಶಾಪದಿಂದ ನಶಿಸುತ್ತಾನೆ. ಮೋಹಿನೀ ಶಾಪದಿಂದ ಬ್ರಹ್ಮ ಮೂಲೋಕದಲ್ಲಿ ಅಪೂಜ್ಯನೆನಿಸಿದ್ದಾನೆ. ಒಲಿದು ಬಂದರೂ ಬೇಡವೆನ್ನುವವನನ್ನು ಹೆಣ್ಣು ಎಷ್ಟು ಕೋಪದಿಂದ ನೋಡುವ ಳೆಂದರೆ ಅಷ್ಟು ಕೋಪದಿಂದ ಅವಳು ಸ್ವಾಮಿ ಪುತ್ರ ಬಂಧುವಧೆ ಮಾಡುವವನನ್ನೂ ನೋಡಲಾರಳು. ಹೆಣ್ಣು ತನ್ನ ಪ್ರಿಯಕರನನ್ನು ಎಲ್ಲಕ್ಕಿಂತ ಹೆಚ್ಚು ಪ್ರೀತಿಸುವಳು. ಅವನು ಬೇಡವೆಂದರೆ ಕೊಲ್ಲಲೂ ಹಿಂಜರಿಯಲಾರಳು. ಹಿಂಸ್ರಮೃಗಗಳಿಗಿಂತಲೂ ಹೆಚ್ಚು ಕ್ರೂರಳಾಗುವಳು. ಪ್ರತಿ ಜನ್ಮದಲ್ಲಿಯೂ ಪ್ರತೀಕಾರಕ್ಕೆ ಎಳಸುವಳು. ಅದರಿಂದ ನೀನು ತಪಸ್ಸನ್ನು ಬಿಡು, ತಪಸ್ಸಿನ ಫಲವನ್ನು ಉಣ್ಣು. ಏಕಾಂತದಲ್ಲಿ ಅರಸಿ ಬಂದ ನನ್ನನ್ನು ಹಿಡಿದು ಚಿರಕಾಲ ರಮಿಸು.

ರಂಭೆಯ ಈಮಾತನ್ನು ಕೇಳಿ ದೇವಲ ಭಯಭೀತನಾದ. ಹಿತಕರವಾದ ಸತ್ಯವಾದ ಮಾತನ್ನು ಹೇಳಿದ-

**ದೇವಲ:-** ರಂಭೆ, ನಾನು ಹೇಳುವುದನ್ನು ಕೇಳು. ಅದು ವೇದದ ಸಾರ. ಬ್ರಾಹ್ಮಣರಿಗೆ ಕುಲಧರ್ಮೋಚಿತ. ವಿಹಿತಕಾಲದಲ್ಲಿ ತನ್ನ ಪತ್ನಿಯಲ್ಲಿ ರಮಿಸುವುದು ಬ್ರಾಹ್ಮಣರಿಗೆ ವಿಹಿತವಾದ ಧರ್ಮ. ಹಾಗೆ ಮಾಡುವ ಬ್ರಾಹ್ಮಣನಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಎಲ್ಲೆಡೆ ಆದರ ಲಭಿಸುವುದು. ಬ್ರಾಹ್ಮಣ ಕ್ಷತ್ರಿಯ ವೈಶ್ಯರು ಯಾರು ಪರಸ್ತ್ರೀ ಸಂಸರ್ಗ ಮಾಡುವರೋ ಅವರಿಗೆ ಲೋಕದಲ್ಲಿ ಆದರವಿಲ್ಲ. ಅವರ ಮನೆಯಿಂದ ಲಕ್ಷ್ಮಿ ಕುಪಿತಳಾಗಿ ಹೊರಟುಹೋಗುವಳು. ಈ ಲೋಕದಲ್ಲಿ ಅವನು ಯಾವ ಕರ್ಮದಲ್ಲಿಯೂ ಅರ್ಹನಾಗುವುದಿಲ್ಲ. ಪರದಲ್ಲಿಯೂ ನೂರುವರ್ಷಕಾಲ ಅಂಧಕೂಪದಲ್ಲಿ ವಾಸಮಾಡಬೇಕಾಗುವುದು. ಒಲಿದು ಬಂದ ಹೆಣ್ಣನ್ನು ಕೂಡುವುದು ಗೃಹಸ್ಥನ ಧರ್ಮ ಹೊರತು ತಪಸ್ವಿಯ ಧರ್ಮವಲ್ಲ. ತನ್ನ ಮಡದಿ ಬಯಸಿ ಬಂದಾಗ ನಿರಾಕರಿಸಿದರೆ ಗೃಹಸ್ಥ ಅವಳ ಶಾಪಕ್ಕೆ ಒಳಗಾಗುತ್ತಾನೆ. ಜಗತ್ತಿನ ಸೃಷ್ಟಿಕರ್ತನಾದ ಬ್ರಹ್ಮನೂ ವಿರಕ್ತನಲ್ಲ, ಅವನಿಗೆ ಮಡದಿ ಇದ್ದಾಳೆ. ಅಂಥವರಿಗೆ ಸ್ತ್ರೀತ್ಯಾಗದಿಂದ ದೋಷ ಬರಬಹುದು, ನಮ್ಮಂಥ ಸನ್ಯಾಸಿಗಳಿಗೆ ಅಲ್ಲ. ತನ್ನ ಭಾರ್ಯೆಯನ್ನು ತೊರೆದು ಪರಸ್ತ್ರೀಯನ್ನು ಸೇರುವವನು ಯಶಸ್ಸನ್ನೂ ಧನವನ್ನು ಕಳೆದುಕೊಂಡು ಜೀವನ್ಮೃತನೆನಿಸುವನು. ಯಶಸ್ಸನ್ನು ಕಳೆದುಕೊಂಡವನ ಬದುಕೇ ವ್ಯರ್ಥ. ಅವನಿಗೆ ಸಂಪತ್ತಿನಿಂದೇನು, ರಾಜ್ಯಸುಖದಿಂದೇನು? ನಾನು ಸ್ತ್ರೀಸುಖ ಒಲ್ಲದವ, ವೃದ್ಧ. ನನ್ನಿಂದ ನಿನಗೇನು ಪ್ರಯೋಜನ? ಹೋಗು, ಸುಂದರನಾದ ಯುವಕನನ್ನು ಅರಸಿ ಹೋಗು, ತಾಯಿ!'

ಈ ಮಾತನ್ನು ಕೇಳಿ ರಂಭೆ ಕುಪಿತಳಾದಳು. ಕೋಪದಿಂದ ಅವಳ ತುಟಿ ನಡುಗಿತು, ಅವಳು ಹೇಳಿದಳು. -

**ರಂಭೆ:-** ಒಳ್ಳೆಯ ಸಂಪಿಗೆ ಹೂವಿನ ಮೈಬಣ್ಣದವನು, ಮನ್ಮಥನಂಥ ಸುಂದರ. ತಪಃಪ್ರಭಾವದಿಂದ ಶೋಭಿಸುತ್ತಿರುವೆ. ಹೆಣ್ಣಿಗೆ ಒಪ್ಪಿಗೆಯಾಗುವ ವೇಷದವ. ಇಂಥ ನಿನ್ನನ್ನು ಬಿಟ್ಟು ನಾನು ಯಾರನ್ನು ಸೇರಲಿ? ನಿನಗಿಂತ ಹೆಚ್ಚಿನ ಗಂಡು ಇನ್ನು ಯಾರಿದ್ದಾನೆ? ನಿನ್ನಂಥವರನ್ನು ತೊರೆದು ಯಾವ ಹೆಣ್ಣುತಾನೆ ಬದುಕಿರಬಲ್ಲಳು? ನಾನು ಬಯಕೆಯ ಬೆಂಕಿಯಲ್ಲಿ ಬೆಂದು ಹೋಗುತ್ತಿದ್ದೇನೆ. ಬೇಗ ಬಾ. ಮನ್ಮಥ ನನ್ನನ್ನು ಆನೆ ಬಾಳೆದಿಂಡನ್ನು ಮುರಿಯುವಂತೆ ಮುರಿಯುತ್ತಿದ್ದಾನೆ. ನೀ ಬಾರದಿದ್ದರೆ ಶಾಪ ನೀಡುತ್ತೇನೆ. ಹೇಳು, ನಿನಗೆ ನಾನು ಬೇಕೆ? ಇಲ್ಲ, ನನ್ನ ಶಾಪ ಬೇಕೆ? ನನ್ನ ಬೆಂದ ಈ ಪ್ರಾಣ ಮನ ಶರೀರಗಳಿಗೆ ನವ ಶೃಂಗಾರಾಮೃತಪಾನ ಒಂದೇ ಸೂಕ್ತವಾದ ಚಿಕಿತ್ಸೆ. ಅಂತರಂಗದ ಆಳದಿಂದ ದುಃಖಾರ್ತನಾಗಿ ಯಾರೇ ಆಗಲಿ ಶಪಿಸಿದರೆ ಆ ಶಾಪವನ್ನು ನಿವಾರಿಸಲು ಜಗತ್ಪತಿಯಾದ ಬ್ರಹ್ಮನೂ ಶಕ್ತನಲ್ಲ.

ಅಷ್ಟಾವಕ್ರ ರಂಭೆಯ ಮಾತನ್ನು ಕೇಳಿ ಧ್ಯಾನತತ್ಪರನಾದ. ಏನೂ ಹೇಳದೆ ಮೌನವಾದ. ರಂಭೆಗೆ ಕೋಪ ತಡೆಯದಾಯಿತು. ಶಾಪವಿತ್ತಳು - 'ವಕ್ರಚಿತ್ತನಾದ ಬ್ರಾಹ್ಮಣ, ನಿನ್ನ ಶರೀರದ ಸರ್ವಾವಯವಗಳೂ ವಕ್ರವಾಗಲಿ. ಕಾಡಿಗೆಯಂತೆ ಕಪ್ಪಾಗಲಿ. ರೂಪ ಯೌವನಗಳು ಹಾಳಾಗಲಿ. ವಿಕೃತ ಆಕಾರದಿಂದ ಮೂಲೋಕದಲ್ಲಿ ಜುಗುಪ್ಸೆಗೊಳಗಾಗಲಿ. ನೀನು ಹಿಂದೆ ಮಾಡಿದ ತಪಸ್ಸೆಲ್ಲವೂ ತಕ್ಷಣವೆ ನಷ್ಟವಾಗಲಿ.'

ಹೀಗೆ ಶಾಪವಿತ್ತು ರಂಭೆ ಮನ್ಮಥನ ಲೋಕಕ್ಕೆ ನಡೆದಳು. ಇತ್ತ ಮುನಿಗೆ ಹರಿಯ ಸ್ವರೂಪ ಕಾಣದಾಯಿತು. ಪಾದಕಮಲವಿರಹದಿದ ಆತ ಉದ್ವಿಗ್ನನಾದ. ತನ್ನ ಮೈ ವಿಕಾರ ಹೊಂದಿದ್ದನ್ನೂ ಪೂರ್ವಪುಣ್ಯ ನಶಿಸಿದುದನ್ನೂ ಕಂಡು ಶೋಕದಿಂದ ಬೆಂಕಿಯಲ್ಲಿ ಆತ್ಮಾರ್ಪಣೆ ಮಾಡಲು ಹೊರಟ. ನಾನು ಅವನನ್ನು ಕಂಡು ವರವಿತ್ತು ದಿವ್ಯಜ್ಞಾನದಿಂದ ಬೋಧಿಸಿ ಸಂತಯಿಸಿದೆ. ಆಗ ಆತ ಶಾಂತನಾದ. ಅವನ ಎಂಟು ಅಂಗಗಳು ವಕ್ರವಾಗಿದ್ದರಿಂದ ಅಷ್ಟಾವಕ್ರನೆಂದೇ ಅವನನ್ನು ನಾನು ಕರೆದೆ. ನನ್ನಾಜ್ಞೆಯಂತೆ ಆತ ಮಲಯ ಪರ್ವತಕ್ಕೆ ಬಂದು ಅರವತ್ತು ಸಾವಿರ ವರ್ಷ ತಪಸ್ಸು ಮಾಡಿದ. ತಪಸ್ಸಿನ ಕೊನೆಯಲ್ಲಿ ನಾನು ಅವನಿಗೆ ಈಗ ಮುಕ್ತಿ ನೀಡಿದ್ದೇನೆ. ಅವನು ಇನ್ನು ಎಲ್ಲಕ್ಕೂ ಲಯ ಬಂದರೂ ತಾನು ಲಯ ಹೊಂದುವುದಿಲ್ಲ. ಬಹುಕಾಲ ತಪಸ್ಸು ಮಾಡುತ್ತಿದ್ದುದರಿಂದ ಜಠರಾಗ್ನಿ ಜ್ವಲಿಸಿತು. ಆಹಾರವನ್ನೆ ಸ್ವೀಕರಿಸದಿದ್ದುದರಿಂದ ಅವನ ಶರೀರದ ಒಳಗೆ ಎಲ್ಲವನ್ನೂ ಅಗ್ನಿ ಸುಟ್ಟು ಬೂದಿ ಮಾಡಿತ್ತು. ನಾನು ಈ ಮಲಯ ಪರ್ವತಕ್ಕೆ ಬಂದುದು ಅವನಿಗಾಗಿಯೆ. ಅವನನ್ನು ಮೀರಿಸುವ ಭಕ್ತಿ ಹಿಂದೆ ಇರಲಿಲ್ಲ ಮುಂದೆ ಬರುವುದೂ ಇಲ್ಲ. ಹೀಗೆ ಬ್ರಹ್ಮನ ಮರಿಮೊಮ್ಮಗನಾದ ಮುನಿಯೂ ಬ್ರಹ್ಮನಂತೆಯೆ ಅಪ್ಸರೆಯ ಶಾಪದಿಂದ ಬಳಲಿದ. ನಾರದ, ಇದು ರಹಸ್ಯವಾದ ಸುಖಕರವಾದ ಕಥೆ. ಇನ್ನೇನು ಕೇಳಲು ಬಯಸುವೆ?

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣ ನಾರದಸಂವಾದದಲ್ಲಿ ರಾಧಾಪ್ರಶ್ನೆಯಲ್ಲಿ ಅಷ್ಟಾವಕ್ರನಿಗೆ ರಂಭಾಶಾಪವೆಂಬ ಮೂವತ್ತನೆ ಅಧ್ಯಾಯ ಮುಗಿದುದು*

—o—

**ರಾಧೆ:-** ನಾಥ, ಎಂಥ ಆಶ್ಚರ್ಯದ ಕಥೆ ಇದು! ಈಗ ಬ್ರಹ್ಮನಿಗೆ ಶಾಪ ಹೇಗೆ ಬಂದಿತೆಂದು ಕೇಳಬಯಸುತ್ತೇನೆ. ಬ್ರಹ್ಮ ಮೂಲೋಕದ ಸೃಷ್ಟಿಕರ್ತ, ಆಜ್ಞೆನೀಡುವವ, ತಪಸ್ಸಿಗೆ ಫಲದಾಯಕ. ಅವನು ಅಪ್ಸರೆಯ ಶಾಪದಿಂದ ಅಪೂಜ್ಯನೆನಿಸಿದುದು ಹೇಗೆ?

**ಶ್ರೀಕೃಷ್ಣ:-** ರೈವತ ಮನ್ವಂತರದಲ್ಲಿ ಸುಚಂದ್ರನೆಂಬ ಮಹಾರಾಜ ವಿಷ್ಣುಭಕ್ತ, ಜ್ಞಾನಿ, ಪರಮಧಾರ್ಮಿಕ. ಅವನು ತಪಸ್ಸು ಮಾಡಲು ಈ ಮಲಯ ಪರ್ವತಕ್ಕೇ ಬಂದ. ಸಾವಿರ ವರ್ಷಕಾಲ ತಪಸ್ಸು ಮಾಡಿದ. ಕಠೋರ ತಪಸ್ಸಿನಿಂದ ಅವನ ಶರೀರ ಜರ್ಜರಿತವಾಯಿತು. ಹುತ್ತದಿಂದ ಆವರಿಸಲ್ಪಟ್ಟಿತು. ಆಗ ಕೃಪಾನಿಧಿಯಾದ ಬ್ರಹ್ಮ ವರ ಕೊಡಲು ಬಂದ. ನನ್ನ ದೇಹದಿಂದ ಹೊರಟ ನೀರನ್ನು ಅವನು ಕಮಂಡಲುವಿನಲ್ಲಿ ಇಟ್ಟುಕೊಂಡಿದ್ದ. ಅದನ್ನು ಎತ್ತಿ ನಾನು ಉಪದೇಶಿಸಿದ ಮಂತ್ರದಿಂದ ಅವನ ಮೇಲೆ ಪ್ರೋಕ್ಷಣ ಮಾಡಿದ. ಅದರ ಸ್ಪರ್ಶದಿಂದ ರಾಜನೆದ್ದು ಭಕ್ತಿಯಿಂದ ನಮಿಸಿದ. ಬ್ರಹ್ಮ ನುಡಿದ, 'ರಾಜನೆ, ನಿನಗೆ ಅಭೀಷ್ಟವಾದ ವರವನ್ನು ಕೇಳು.' ಆಗ ರಾಜ ನನ್ನ ಪಾದದಲ್ಲಿ ಭಕ್ತಿಯನ್ನೂ ನನ್ನ ದಾಸ್ಯವನ್ನೂ ಬೇಡಿದ. ಕೃಪೆಯಿಂದ ಬ್ರಹ್ಮ ಆವರವನ್ನು ನೀಡುತ್ತ ಮನ್ಮಥನಂತೆ ಚೆಲುವಿನ ಕಾಂತಿ ಬೀರುತ್ತನಿಂತ. ಅಷ್ಟರಲ್ಲಿ ಆಕಾಶದಿಂದ ನೂರಾರು ಸೂರ್ಯರ ಪ್ರಭೆಯಿಂದ ಬೆಳಗುವ ದಿವ್ಯ ರಥ ಬಂದು ಇಳಿದುದನ್ನು ರಾಜ ಕಂಡ. ಆರಥದ ಪ್ರಕಾಶದಿಂದ ಹತ್ತುದಿಕ್ಕುಗಳು ಬೆಳಗುತ್ತಿದ್ದುವು. ರಥಕ್ಕೆ ನೂರು ಚಕ್ರಗಳಿದ್ದುವು. ಅಮೂಲ್ಯರತ್ನದ ವಿಚಿತ್ರ ಕಲಶಗಳಿದ್ದುವು. ಮುತ್ತು ಮಾಣಿಕ್ಯ ವಜ್ರಗಳ ಮಾಲೆಗಳ ಅಲಂಕಾರವಿತ್ತು. ರತ್ನಕನ್ನಡಿಗಳೂ ಹೊಳೆಯುತ್ತಿದ್ದುವು. ದಿವ್ಯವಸ್ತ್ರಗಳೂ ಬಿಳಿ ಚಾಮರಗಳೂ ಇದ್ದುವು. ಪಾರಿಜಾತ ಹೂಗಳ ಮಾಲೆಗಳಿಂದ ಅಲಂಕೃತವಾಗಿದ್ದು ನಾನಾ ಆಶ್ಚರ್ಯಕರ ಚಿತ್ರಗಳಿಂದ ಕೂಡಿತ್ತು. ಆ ರಥದಲ್ಲಿ ದಿವ್ಯರತ್ನಾಭರಣ ಭೂಷಿತರಾದ ಪೀತಾಂಬರಧಾರಿಗಳಾದ ಚಂದನಾಗುರುಲಿಪ್ತರಾದ ಚತುರ್ಭುಜರಾದ ಶ್ಯಾಮಲವರ್ಣದ ವಿಷ್ಣುದೂತರು ತುಂಬಿದ್ದರು. ರಾಜ ಅವರನ್ನು ಕಂಡು ನಮಿಸಿದ. ಒಡನೆ ಅವನ ಶಿರಸ್ಸಿನ ಮೇಲೆ ಪುಷ್ಪವೃಷ್ಟಿಯಾಯಿತು. ಸ್ವರ್ಗದಲ್ಲಿ ಆನಕ ದುಂದುಭಿಗಳು ಮೊಳಗಿದುವು. ದೇವತೆಗಳು ಮುನಿಗಳು ಸಿದ್ಧರು ರಾಜನನ್ನು ಹರಸುತ್ತ ಪ್ರಶಂಸೆ ಮಾಡಿದರು. ರಾಜ ವಿಷ್ಣುದೂತರನ್ನು ಧ್ಯಾನಿಸಿ ಅವರಂತೆಯೆ ಆಕಾರ ತಳೆದ. ಅವನನ್ನು ದೂತರು ತಮ್ಮ ರಥದಲ್ಲಿ ಕೂಡಿಸಿ ನನ್ನ ಬಳಿಗೆ ಕರೆತಂದರು. ಅಂದಿನಿಂದ ಆತ ನನ್ನ ಬಳಿಯೆ ದೂತನಾಗಿ ಇದ್ದಾನೆ.

ಇತ್ತ ತನ್ನ ಲೋಕಕ್ಕೆ ಹಿಂತೆರಳುತ್ತಿದ್ದ ಬ್ರಹ್ಮನನ್ನು ದಾರಿಯಲ್ಲಿ ಹೂವಿನ ಚಂದನದ ಗಾಳಿಯಿಂದ ಕೂಡಿದ ಹೂವಿನ ಉದ್ಯಾನದಲ್ಲಿ ಮೋಹಿನಿ ಕಂಡಳು. ಒಡನೆ ಅವಳು ಶೃಂಗಾರಭಾವದಲ್ಲಿ ಮೈಮರೆತಳು. ಕಡೆಗಣ್ಣ ನೋಟದಿಂದ ವೀಕ್ಷಿಸಿ ಮುಗುಳುನಗು ನಕ್ಕು ಮುಖವನ್ನು ಮರೆ ಮಾಡಿಕೊಂಡಳು. ಅವಳ ಮೈ ಸಂಪಿಗೆ

ಹೂವಿನ ಬಣ್ಣದ್ದು. ಸ್ಥಿರ ಯೌವನದಿಂದ ಕೂಡಿದ್ದು. ಶರತ್ಕಾಲದ ಹುಣ್ಣಿಮೆಯ ಚಂದ್ರನಂಥ ಮುಖ. ಪುಷ್ಟವಾದ ಸ್ತನ ನಿತಂಬಗಳು. ತೆಳುವಾದ ಸೀರೆ ಉಟ್ಟಿದ್ದಳು. ರತ್ನಾಲಂಕಾರಗಳನ್ನು ತೊಟ್ಟಿದ್ದಳು. ಒಂದು ಕಡೆಗಣ್ಣ ನೋಟದಿಂದಲೆ ಮೂಲೋಕವನ್ನು ಮೋಹಗೊಳಿಸುವಂಥವಳು. ಮದ್ದಾನೆಯ ಮೆಲುನಡಿಗೆ. ಮೈಯೆಲ್ಲ ರೋಮಾಂಚಿತವಾಗಿತ್ತು. ಒಮ್ಮೆ ಅವಳನ್ನು ಕಂಡ ಬ್ರಹ್ಮ ಹರಿಸ್ಮರಣೆ ಮಾಡಿ ಹಾಗೇ ಹೊರಟು ಹೋದ. ಅವನು ಆತ್ಮಾರಾಮ, ಜಿತೇಂದ್ರಿಯ. ಅದರಿಂದ ಅವನಲ್ಲಿ ಶೃಂಗಾರ ಭಾವವೇನೂ ಉದಿಸಲಿಲ್ಲ. ಅವನು ತನ್ನ ಲೋಕವನ್ನು ಸೇರಿದ.

ಇತ್ತ ಮೋಹಿನಿ ಹಗಲು ರಾತ್ರಿ ಕನಸಿನಲ್ಲಿಯೂ ಬ್ರಹ್ಮನನ್ನೆ ನೆನೆದಳು. ಬೇರೆ ಎಲ್ಲ ಪ್ರಣಯಿಗಳನ್ನು ಮರೆತಳು. ಹರಿಯನ್ನೂ ನೆನೆಯಲಿಲ್ಲ. ಎದ್ದರೆ ಕೂತರೆ ಮಲಗಿದರೆ ಮನಸಿನಲ್ಲಿ ಬ್ರಹ್ಮನದೇ ಧ್ಯಾನ. ಆಗ ರಂಭೆ ಮನ್ಮಥಲೋಕಕ್ಕೆ ಹೋಗುತ್ತಿದ್ದವಳು ಆ ದಾರಿಯಾಗಿ ಬಂದು ಮೋಹಿನಿಯನ್ನು ಕಂಡಳು. ಮೋಹಿನಿಯ ಗಂಟಲು ಬಾಯಿ ಒಣಗಿದ್ದುದನ್ನು ಕಂಡು ಅವಳು ಏನೋ ಕಾರಣವಿದೆ ಎಂದು ಊಹಿಸಿ ಆಶ್ಚರ್ಯದಿಂದ ಕೇಳಿದಳು.

**ರಂಭೆ:-** ಮೋಹಿನಿ, ಮೂಲೋಕದ ಮನವನ್ನು ಮೋಹಗೊಳಿಸಬಲ್ಲ ನೀನು ಏಕೆ ಹೀಗಿರುವೆ? ಹೇಳು, ಬೇಗ ಹೇಳು, ನಾನು ರಂಭೆ, ಎಚ್ಚೆತ್ತುಕೊಳ್ಳು. ಯಾರನ್ನು ಬಯಸುತ್ತಿರುವೆ? ನಿನಗೆ ಬೇಕಾದವನನ್ನು ನೀನು ಸೇರು. ನೀನು ಅಪ್ಸರೆ. ಎಲ್ಲ ಪುರುಷರನ್ನೂ ಕೂಡ ಬಲ್ಲೆ. ನಾವು ಕುಲಸ್ತ್ರೀಯರೇನಲ್ಲ. ಎಲ್ಲರಿಗೂ ಮೂಲೋಕದಲ್ಲಿ ಇಂದ್ರಿಯಸುಖದ ಬಗ್ಗೆ ವ್ಯಗ್ರತೆ ಇದೆ. ಜೀವಿಗಳಿಗೆ ಪ್ರಾಣ ಹೋಗುತ್ತಿರುವಾಗ ಲಜ್ಜೆಗೆ ಎಲ್ಲಿ ಅವಕಾಶ? ಮೂಲೋಕದಲ್ಲಿ ಎಲ್ಲರಿಗೂ ತಮ್ಮ ಬದುಕು ಮುಖ್ಯ. ಅದಕ್ಕಿಂತ ಹೆಚ್ಚಿನದು ಏನಿಲ್ಲ. ಪತಿಯಲ್ಲಿ ಮಕ್ಕಳಲ್ಲಿ ಬಂಧುಗಳಲ್ಲಿ ಸ್ನೇಹ ಪ್ರೀತಿ ತನ್ನ ಸಂಬಂಧ ಪ್ರಯುಕ್ತವಾದುದು. ತನ್ನ ಸಂಬಂಧವಿರುವಷ್ಟು ಕಾಲ ಅವರಲ್ಲಿ ಪ್ರೀತಿ ಇರುತ್ತದೆ.

**ಕಾಂತೇಽಪತ್ಯೇ ಸ್ವ ಬಂಧೌ ಚ ಸ್ನೇಹೋ ಯಃ ಸ್ವಾತ್ಮ ಹೇತುಕಃ ।**
**ಸಂಬಂಧಃ ಸ್ವಾತ್ಮನೋ ಯಾವತ್ ತಾವತ್ ಸ್ನೇಹೋಽಸ್ತಿ ತತ್ರ ಹಿ ॥**

ಯಾರು ಯಾರನ್ನು ಪ್ರೀತಿಸುತ್ತಾರೋ ಅವರ ಪ್ರಾಣ ಅವರಲ್ಲಿರುತ್ತದೆ. ನೋಡು, ನಾನು ಮನ್ಮಥನ ಲೋಕಕ್ಕೆ ಹೋಗುತ್ತಿದ್ದೇನೆ. ನನ್ನ ಪ್ರಾಣ ಅವನಲ್ಲಿದೆ. ಗೆಳತಿಯಾದ ನನ್ನೊಡನೆ ಆಲೋಚನೆ ಮಾಡಿ ಆ ಪ್ರಿಯಕರನನ್ನು ಸೇರು. ಒಳ್ಳೆ ಬಟ್ಟೆ ಹಾಕಿಕೊಳ್ಳು, ತಲೆಬಾಚಿ ಕಟ್ಟಿಕೊಳ್ಳು, ಒಳ್ಳೆಯ ವೇಷ ತೊಡು. ಮುನಿಗಳ ಮನಸ್ಸನ್ನೂ ಸೂರೆಗೊಳ್ಳುವಂತೆ ವೇಷ ತೊಡು. ಅವನನ್ನು ಮೋಹಗೊಳಿಸು. ಅವನ ಎದೆಯನ್ನು ಕಲಕುವ ಮಾತುಗಳನ್ನಾಡು. ಆದರೆ ನಿನ್ನ ಆತ್ಮಗೌರವ ಕಾಪಾಡಿಕೊಳ್ಳು. ಸ್ತ್ರೀಜಾತಿಯ ಸ್ವಭಾವ ಗೌರವ ಕಾಪಾಡು. ಸಂಭೋಗದ ಆಸೆಯನ್ನು ವ್ಯಕ್ತವಾಗಿ ಹೇಳಿಕೊಳ್ಳಬೇಡ. ತನ್ನಲ್ಲಿ ಅನುರಕ್ತನಾಗಿ ಬಂದಿರುವ ಪ್ರಿಯಕರನಿಗಾಗಲಿ, ಋಜು ಸ್ವಭಾವದ ಸಖಿಗಾಗಲಿ ಹೊರತು ಇನ್ನಾರಿಗೂ ಎಂದೂ ತನ್ನ ಬಯಕೆಯನ್ನು ಹೇಳಿಕೊಳ್ಳಬಾರದು. ಎದೆಯೊಳಗಿನ ಅಭಿಪ್ರಾಯವನ್ನು ಜಾಣ್ಮೆಯಿಂದ ವ್ಯಕ್ತಪಡಿಸಬೇಕು. ಇಲ್ಲದಿದ್ದರೆ

ಅಪಹಾಸ್ಯಕ್ಕೀಡಾಗುವ ಪ್ರಸಂಗ. ಅದು ಮರಣಕ್ಕೂ ಕಾರಣವಾಗಬಹುದು.'

ರಂಭೆಯ ಮಾತನ್ನು ಕೇಳಿ ಮೋಹಿನಿ ತನ್ನ ಹದ್ಗತವನ್ನು ಲಜ್ಜೆಯಿಂದ ಅವಳ ಮುಂದೆ ಹೇಳಿಕೊಂಡಳು.

**ಮೋಹಿನಿ:-** ರಂಭೆ, ನಿರ್ಜನ ಪ್ರದೇಶದಲ್ಲಿ ಚತುರ್ಮುಖನನ್ನು ಕಂಡಂದಿನಿಂದ ನನ್ನ ಮನಸ್ಸು ಬಯಕೆಯ ಬೆಂಕಿಯಲ್ಲಿ ಬೇಯುತ್ತಿದೆ. ಈಗ ನನಗೆ ಕನಸು ಎಚ್ಚರಗಳೊಳಗೆ ಭೇದವಿಲ್ಲದಾಗಿದೆ. ನನ್ನ ಪ್ರಾಣಗಳು ಅವನ ಆಲಿಂಗನಕ್ಕೆ ಹಾತೊರೆಯುತ್ತಿವೆ. ಕ್ಷಣವಿಲಂಬವಾದರೆ ನಿಲ್ಲಲಾರವು. ಹೊರಟು ಹೋಗುವುವು. ಇದಕ್ಕೆ ಸಂಶಯವಿಲ್ಲ. ಬಯಕೆಯ ಬೆಂಕಿಯಲ್ಲಿ ಬಂಗಾರದಂಥ ನನ್ನ ಮೈ ಸುಡುತ್ತಿದೆ. ಆಹಾರವಿಲ್ಲದೆ ಕಮರಿಹೋಗುತ್ತಿದೆ. ನಡೆಯಲಾರೆ ಕೂಡಲಾರೆ ಮಲಗಲಾರೆ. ಈ ಅಪ್ಸರೆಯ ಜಾತಿಗೇ ಧಿಕ್ಕಾರ, ವಿಶೇಷವಾಗಿ ನನಗೇ ಧಿಕ್ಕಾರ. ರಂಭೆ, ಈಗ ನಾನೇನು ಮಾಡಲಿ, ಹೇಳು. ಲಜ್ಜೆಯನ್ನು ಬಿಡಲೆ, ಶರೀರವನ್ನೆ ಬಿಡಲೆ? ಎರಡರಲ್ಲಿ ಯಾವುದನ್ನು ಬಿಡಲಿ ಹೇಳು.

ಮೋಹಿನಿಯ ಮಾತನ್ನು ಕೇಳಿ ರಂಭೆ ನಕ್ಕು ಹಿತವಾದ ನೀತಿಯುಕ್ತವಾದ ಮಾತನ್ನಾಡಿದಳು.

**ರಂಭೆ:-** ಇದು ಹೀಗೊ? ಆಶ್ಚರ್ಯ! ಮೋಹಿನಿ, ನಿನ್ನ ಶೋಕಕಾರಣವನ್ನೆಲ್ಲ ನಾನು ದೂರ ಮಾಡುತ್ತೇನೆ. ಸರಿಯಾದ ಉಪಾಯ ಹೇಳುತ್ತೇನೆ, ಕೇಳು. ಭಯಪಡಬೇಡ. ಬ್ರಹ್ಮ ಜಿತೇಂದ್ರಿಯರಲ್ಲೆಲ್ಲ ಮೊದಲಿಗ. ಸಾಕ್ಷಾತ್ ನಾರಾಯಣ ಸ್ವರೂಪ. ಮನ್ಮಥನ ಸಹಾಯವಿಲ್ಲದೆ ಯಾರು ತಾನೆ ಅವನನ್ನು ಗೆಲ್ಲಲು ಸಾಧ್ಯ? ಪುಷ್ಕರದಲ್ಲಿ ತಪಸ್ಸು ಮಾಡಿ ಮನ್ಮಥನನ್ನು ಒಲಿಸಿಕೊಳ್ಳು, ಹೋಗು. ಹೆಣ್ಣುಗಳಲ್ಲಿ ಅವನು ಬಹಳ ದಯಾಳು. ಬೇಗನೆ ಮೈದೋರುತ್ತಾನೆ.

ಹೀಗೆ ಹೇಳಿ ರಂಭೆ ಮನ್ಮಥಲೋಕಕ್ಕೆ ನಡೆದಳು. ಮೋಹಿನಿ ಪುಷ್ಕರದಲ್ಲಿ ತಪಸ್ಸು ಮಾಡಿ ಮನ್ಮಥನ ಅನುಗ್ರಹ ಪಡೆದು ಅವನೊಂದಿಗೆ ಬ್ರಹ್ಮಲೋಕಕ್ಕೆ ಹೋದಳು. ಅಲ್ಲಿ ನಿರ್ಜನ ಪ್ರದೇಶದಲ್ಲಿ ಬ್ರಹ್ಮನನ್ನು ಕಂಡು ಅವನನ್ನು ಮೋಹಗೊಳಿಸಲು ಯತ್ನಿಸಿದಳು. ಹಾಡಿದಳು ಕುಣಿದಳು. ನನ್ನ ಗುಣಗಾನ ಮಾಡುತ್ತ ಭಕ್ತರಿಗೆ ಮನ ಮೋಹಕವಾಗುವ ರೀತಿಯಲ್ಲಿ ಸಂಗೀತ ಹಾಡಿದಳು. ಬ್ರಹ್ಮ ಆ ಮಧುರವಾದ ಸಂಗೀತವನ್ನು ಕೇಳಿ ಮೈಮರೆತ. ಮೈಯೆಲ್ಲ ರೋಮಾಂಚಗೊಂಡ, ಕಣ್ಣುಗಳಲ್ಲಿ ನೀರು ತುಂಬಿಕೊಂಡ. ಬ್ರಹ್ಮ ಮಾರು ಹೋದನೆಂದು ತಿಳಿದು ಮೋಹಿನಿ ಸಂತುಷ್ಟಳಾದಳು. ಸ್ವಲ್ಪ ಶೃಂಗಾರಭಾವವನ್ನು ವ್ಯಕ್ತಮಾಡಿದಳು. ಮೈ ಮಾಟ ತೋರಿದಳು, ಮುಗುಳುನಗು ನಕ್ಕು ಹುಬ್ಬು ಕುಣಿಸಿದಳು. ಕಾಮ ಪರವಶರಾದವರಿಗೆ ಲಜ್ಜೆ ಎಲ್ಲಿ ಇರುತ್ತದೆ? ಅವಳ ಭಾವವನ್ನು ಅರಿತು ಬ್ರಹ್ಮ ತಲೆ ತಗ್ಗಿಸಿದ. ಅವಳಿಗೆ ಬಹುಮಾನವಿತ್ತು ಹರಿಸ್ಮರಣೆ ಮಾಡುತ್ತ ಸುಮ್ಮನೆ ಕುಳಿತ. ಬ್ರಹ್ಮನ ಅಭಿಪ್ರಾಯವನ್ನು ತಿಳಿದು ಮೋಹಿನಿ ನಿರಾಶಳಾದಳು. ಅವಳ ಪ್ರಯತ್ನ ವಿಫಲಗೊಂಡಿತು. ಗಂಟಲು ನಾಲಿಗೆ ಒಣಗಿದುವು. ಕಾಮಿತಪ್ರದನಾದ ಕಾಮನನ್ನೆ ಸ್ತುತಿಸಿದಳು.

**ಮೋಹಿನಿ:-** ಎಲ್ಲರ ಇಂದ್ರಿಯಗಳಿಗೆ ನಿಯಾಮಕ, ಹರಿಯ ಮಾನಸಪುತ್ರ, ಕರ್ಮಬೀಜ, ಕರ್ಮೋದ್ಭವನಾದ ಮನ್ಮಥನಿಗೆ ನಮಸ್ಕಾರ. ನೀನೆ ಎಲ್ಲರ ಜೀವ, ಜ್ಞಾನರೂಪಿ ಮಹೇಶ್ವರನೂ ನೀನೆ. ಜಗತ್ತಿನ ಸೃಷ್ಟಿಕರ್ತ ಬ್ರಹ್ಮನೂ ನೀನೆ. ಅವನಿಂದ ಉದ್ಭವಿಸಿದವನೂ ನೀನೆ. ಎಲ್ಲ ಶರೀರಗಳಲ್ಲಿ ಸೃಷ್ಟಿಯೂ ನೀನೆ. ಯೋಗಿಗಳಲ್ಲಿ ದೃಷ್ಟಿಯೂ ನೀನೆ. ಜಗತ್ತಿಗೆ ಸಾಧ್ಯ ನೀನೆ, ದುರಾರಾಧ್ಯನೂ ನೀನೆ, ದುರ್ನಿವಾರ್ಯನೂ ನೀನೆ, ನಿನ್ನನ್ನು ಗೆಲ್ಲುವರಿಲ್ಲ, ನೀನೆ ಎಲ್ಲರನ್ನೂ ಗೆಲ್ಲುವೆ, ಎಲ್ಲ ಜೀವಿಗಳಿಗೆ ಮನೋಹರ, ರತಿಬೀಜ, ರತಿಸ್ವಾಮಿ, ರತಿಪ್ರಿಯ. ನಿನಗೆ ನಮಸ್ಕಾರ. ಸದಾ ಸ್ತ್ರೀಯರಲ್ಲಿರುವೆ, ಸ್ತ್ರೀಗೆ ಪ್ರಾಣಕ್ಕಿಂತ ಮಿಗಿಲಾಗಿರುವೆ. ಸ್ತ್ರೀಯೆ ನಿನಗೆ ವಾಹಕ. ಸ್ತ್ರೀಯೆ ನಿನಗೆ ಅಸ್ತ್ರ, ಸ್ತ್ರೀಯೆ ನಿನಗೆ ಬಂಧು. ಪತಿಯ ಒಲುಮೆ ತರುವವ ನೀನು. ಸಕಲ ಸೌಂದರ್ಯ ಉಳ್ಳವ ನೀನು, ಗುಣಾಶ್ರಯ, ಸುಗಂಧ ಮಾರುತ ನಿನ್ನ ಒಡನಾಡಿ, ವಸಂತ ನಿನ್ನ ಗೆಳೆಯ. ನೀನು ಸದಾ ಸ್ತ್ರೀಯೋನಿಯಲ್ಲಿದ್ದು ಸ್ತ್ರೀ ದರ್ಶನದಿಂದ ಬೆಳೆಯುವವ, ಪ್ರೌಢರಾದ ವಿರಹಿಗಳಿಗೆ ಪ್ರಾಣಾಂತಕನಾಗಿರುವವ, ನಿನಗೆ ನಮಸ್ಕಾರ. ಯಾರಲ್ಲಿ ನಿನಗೆ ಕೃಪೆ ಇಲ್ಲವೋ ಅವರಲ್ಲಿ ಜ್ಞಾನ ನಾಶವಾಗುತ್ತದೆ. ನಿನ್ನನ್ನು ಊಹಿಸಿ ತಿಳಿಯಲಾಗದು. ಭಕ್ತರಲ್ಲಿ ದಯಾಸಾಗರ ನೀನು. ನೀನು ಲೀಲಾ ಮಾತ್ರದಿಂದ ತಪಸ್ವಿಗಳ ತಪಸ್ಸಿಗೆ ವಿಘ್ನ ಮಾಡಬಲ್ಲೆ. ಮುಕ್ತರ ಮನಸ್ಸಿನಲ್ಲಿಯೂ ಬಯಕೆ ಮೂಡಿಸಬಲ್ಲೆ. ಹೇ ಪಂಚಬಾಣ, ನಿನಗೆ ನಮಸ್ಕಾರ.

ಮೋಹಿನಿ ಹೀಗೆ ಬ್ರಹ್ಮನ ಮುಂದೆ ಮನ್ಮಥನನ್ನು ಸ್ತೋತ್ರಗೈದು ತಲೆಬಾಗಿ ಧ್ಯಾನಮಗ್ನಳಾಗಿ ನಿಂತಳು. ರಾಧೆ, ಈ ಮನೋಹರವಾದ ಸ್ತೋತ್ರ ಮಾಧ್ಯಂದಿನ ಶಾಖೆಯಲ್ಲಿ ಉಕ್ತವಾಗಿದೆ. ಹಿಂದೆ ಗಂಧಮಾದನ ಬೆಟ್ಟದಲ್ಲಿ ದುರ್ವಾಸ ಮುನಿ ಮೋಹಿನಿಗೆ ಈಸ್ತೋತ್ರವನ್ನು ಉಪದೇಶಿಸಿದ್ದ. ಇದು ಮಹಾ ಪುಣ್ಯಕರ. ಭಕ್ತಿಯಿಂದ ಪಠಿಸಿದರೆ ಅಭೀಷ್ಟ ಲಾಭವಾಗುವುದು. ಕಳಂಕ ದೂರವಾಗುವುದು. ಅವನಲ್ಲಿ ಕಾಮ ಚೇಷ್ಟೆಮಾಡಲಾರ. ಆತ ಆರೋಗ್ಯ ಸಂಪತ್ತುಗಳಿಂದ ಕೂಡಿ ಮನ್ಮಥನಂತೆ ಕಾಂತಿ ಪಡೆಯುತ್ತಾನೆ. ಮೂಲೋಕವನ್ನು ಮೋಹಗೊಳಿಸಬಲ್ಲ ಸುಂದರಿಯಾದ ಪತಿವ್ರತೆಯಾದ ಪತ್ನಿಯನ್ನು ಪಡೆಯುತ್ತಾನೆ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಮೋಹಿನೀಸ್ತೋತ್ರವರ್ಣನವೆಂಬ ಮೂವತ್ತೊಂದನೆ ಅಧ್ಯಾಯ ಮುಗಿಯಿತು.*

## ಅಧ್ಯಾಯ - ೩೨

**ಶ್ರೀಕೃಷ್ಣ:-** ಮೋಹಿನಿಯ ಸ್ತೋತ್ರವನ್ನು ಕೇಳಿ ಮನ್ಮಥ ಸಂತುಷ್ಟನಾದ. ಆಕಾಶದಲ್ಲಿ ನಿಂತು ಬಿಲ್ಲಿಗೆ ಬಾಣ ಹೂಡಿದ. ಅದು ಮಂತ್ರಪೂತವಾದ ಮಹಾ ಅಸ್ತ್ರ. ಅದನ್ನು ಮನ್ಮಥ ತಂದೆಯಾದ ಬ್ರಹ್ಮನ ಎದೆಗೇ ಎಸೆದ. ಬ್ರಹ್ಮ ವಿಚಲಿತನಾದ. ಬಯಕೆ ತುಂಬಿದ ಕಣ್ಣಿಂದ ಒಂದು ಕ್ಷಣ ಮೋಹಿನಿಯನ್ನು ವೀಕ್ಷಿಸಿದ. ಒಡನೆ ಎಚ್ಚೆತ್ತುಕೊಂಡು ಹರಿಸ್ಮರಣ ಮಾಡಿ ಸುಮ್ಮನಾದ. ಇದು ಮನ್ಮಥನ ಕೃತ್ಯವೆಂದು ಮನದೊಳಗೇ ಚಿಂತಿಸಿ ಅವನು ತನ್ನ ಮಗನಾಗಿದ್ದರೂ ಕೋಪಪರವಶನಾಗಿ ಶಪಿಸಿದ.

'ಹೇ ಮನ್ಮಥ, ಯೌವನದಿಂದ ಉನ್ಮತ್ತನಾಗಿರುವೆ, ಐಶ್ವರ್ಯ ದರ್ಪದಿಂದ ಮೂಢನಾಗಿರುವೆ. ನಿನಗೆ ತಂದೆಯಾದ ನನ್ನಲ್ಲಿ ಅಪರಾಧ ಗೈದುದರಿಂದ ನಿನಗೆ ದರ್ಪಭಂಗವಾಗಲಿ.'

ಮನ್ಮಥನ ಪ್ರಯತ್ನ ವಿಫಲವಾಯಿತು, ಜೊತೆಗೆ ಶಾಪದ ಭಯ ಉಂಟಾಯಿತು. ಅದರಿಂದ ಗಂಟಲು ನಾಲಿಗೆ ಒಣಗಿಸಿಕೊಂಡು ವಸಂತನೊಂದಿಗೆ ಬೇಗನೆ ಹೊರಟು ಹೋದ. ಇತ್ತ ಕಾಮಾತುರಳಾಗಿ ನಗು ಮೊಗದಿಂದ ಕಡೆಗಣ್ಣಿಂದ ತನ್ನನ್ನೆ ವೀಕ್ಷಿಸುತ್ತ ನಿಂತಿದ್ದ ಮೋಹಿನಿಗೆ ಬ್ರಹ್ಮ ನುಡಿದ.

**ಬ್ರಹ್ಮ:-** ತಾಯಿ, ಮೋಹಿನಿ, ಹೊರಟು ಹೋಗು. ಇಲ್ಲಿ ನಿನ್ನ ಯತ್ನ ಫಲಿಸಲಾರದು. ನಿನ್ನ ಭಾವವನ್ನು ನಾನು ಅರಿತಿದ್ದೇನೆ. ಆದರೆ ಈ ಕೆಲಸಕ್ಕೆ ನಾನು ಯೋಗ್ಯನಲ್ಲ. ವೇದದಲ್ಲಿ ನಿಷಿದ್ಧವಾದ ಕರ್ಮವನ್ನು ನಾನೆಂದೂ ಮಾಡಲಾರೆ. ವೇದ ಉಪದೇಶಿಸುವವನು ಸ್ವತಃ ನಾನು. ಧರ್ಮ ಅಧರ್ಮ ವ್ಯವಸ್ಥೆ ಮಾಡುವವನು ನಾನು. ನಾನು ನಿನ್ನನ್ನು ಕೂಡಿದರೆ ಅದಕ್ಕಿಂತ ಹೆಚ್ಚಿನ ಅಕೀರ್ತಿಕರ ನಿಂದ್ಯಕರ್ಮ ಬೇರೆ ಯಾವುದು ಇದ್ದೀತು? ಅನುರಾಗ ಯುಕ್ತರಾದ ಪುರುಷರು ಬಯಸಿ ಬಂದ ಹೆಣ್ಣನ್ನು ಬಿಡದಿರುವುದು ಧರ್ಮವಾದರೂ ತಪಸ್ವಿಗಳು ಸದಾ ಪರಿತ್ಯಾಗವನ್ನೆ ಮಾಡಬೇಕು. ವಿಶೇಷವಾಗಿ ವೇಶ್ಯೆಯರನ್ನು ಎಲ್ಲರೂ ಬಿಡಬೇಕು. ಅವರು ಧನ ಆಯುಷ್ಯ ಪ್ರಾಣ ಯಶಸ್ಸುಗಳನ್ನು ಕಳೆವವರು. ದುಃಖ ತರುವವರು. ಸ್ವಾರ್ಥ ಸಾಧಿಸಿಕೊಳ್ಳುವವರು. ಪರರ ಕಾರ್ಯ ಕೆಡಿಸುವವರು. ಎಲ್ಲ ಹಿಂಸಕ ಜಂತುಗಳಿಗಿಂತ ಕ್ರೂರರು. ಎಲ್ಲ ಆಪತ್ತುಗಳಿಗೆ ಬೀಜರೂಪರು. ಲೋಭದಿಂದ ಮೈತ್ರಿ ಮಾಡಿ ಕೊಂಡರೆ ಅದು ಮಿಂಚಿನಂತೆ ಜಲಲಿಪಿಯಂತೆ ಒಂದು ಕ್ಷಣ ಮಾತ್ರ. ಪರದ್ರೋಹದಿಂದ ಗಳಿಸಿದ ಸಂಪತ್ತಿನಂತೆ ವೇಶ್ಯೆಯಲ್ಲಿ ಮಾಡುವ ಪ್ರೇಮ. ಅವಳನ್ನು ನಂಬಿದರೆ ಪದೇ ಪದೇ ಆಪತ್ತು. ನೀನು ರೂಪವತಿ, ಕಾಮುಕರಾದ ಯುವಕರಿಗೆ ಸಂಪದ್ರೂಪಳಾಗಿರಬಹುದು. ಆದರೆ ತಪಸ್ವಿಗಳಿಗೆ ವಿಷದಂತೆ ಘೋರಳು. ಅಪ್ಸರೆಯರಲ್ಲಿ ಶ್ರೇಷ್ಠಳು, ಸ್ಥಿರಯೌವನವತಿ, ಕಾಮುಕರಾದ ಯುವಕರಿಗೇ ಯೋಗ್ಯಳು. ಅವರನ್ನೇ ಬೇಟೆಯಾಡು ಹೋಗು. ನೀನು ಪ್ರೌಢೆಯಾದ ಹೆಣ್ಣು. ಪ್ರೌಢನಾದ ಯುವಕನನ್ನು ಅರಸು. ಪ್ರೌಢ

ಹೆಣ್ಣು ಪ್ರೌಢಗಂಡಿನೊಡನೆ ಕೂಡಿದರೇ ಸರಿಯಾಗುವುದು. ನಾನು ವೃದ್ಧ, ಮುಪ್ಪಿಂದ ಬಳಲುತ್ತಿದ್ದೇನೆ. ತಪಸ್ವಿ, ವಿಷ್ಣುಭಕ್ತ, ಬ್ರಾಹ್ಮಣ, ಅಸ್ವತಂತ್ರ ಪರಾಧೀನ. ವೇಶ್ಯೆಯಲ್ಲಿ ಅಪ್ಸರೆಯಲ್ಲಿ ನನಗೆ ಎಲ್ಲಿಯ ಆಸಕ್ತಿ? ಮಗಳೆ, ನಾನು ನಿನ್ನ ತಂದೆ. ಜಗತ್ತಿಗೆ ಸೃಷ್ಟಿಕರ್ತನಾದ್ದರಿಂದ ನಿನಗೂ ತಂದೆ. ಆದರಿಂದ ನನ್ನನ್ನು ಬಿಟ್ಟು ಮನ್ಮಥ ಚಂದ್ರ ಜಯಂತ ನಲಕೂಬರ, ಅಶ್ವಿಗಳು, ಬುಧ, ದೈತ್ಯರು ಇವರನ್ನು ಸೇರು. ಇವರೆಲ್ಲ ಸುಂದರರು, ಕಾಮಶಾಸ್ತ್ರ ಪ್ರವೀಣರು. ರತಿ ಕರ್ಮ ವಿಶಾರದರು. ಅವರನ್ನು ಬಿಟ್ಟು ನನ್ನನ್ನು ಬಯಸುವ ನೀನು ಮುಗ್ಧೆ, ಪ್ರೌಢೆಯಲ್ಲ.

ಸಂಭೋಗಕ್ಕೆ ಯಾವಾಗಲೂ ಗಂಡು ಹೆಣ್ಣನ್ನು ಬೇಡುತ್ತಾನೆ. ಹಾಗೆ ಹೆಣ್ಣು ಗಂಡನ್ನು ಬೇಡುವುದೆಂದರೆ ಇದು ವಿಪರೀತ ವಿಡಂಬನೆಯೆ ಸರಿ. ಎಲ್ಲ ರತ್ನಗಳಲ್ಲಿ ಸ್ತ್ರೀರತ್ನವೆ ದುರ್ಲಭ. ಪುರುಷ ಸ್ವಯಂ ಅವಳನ್ನು ಬೇಡಬೇಕು. ಹೊರತು, ಅವಳು ಪುರುಷನನ್ನಲ್ಲ. ಒಲ್ಲದ ಗಂಡಿನ ಬಳಿಗೆ ಹೆಣ್ಣು ಬಯಸಿ ಬಂದರೆ ಅವಳು ಹೆಣ್ಣಿನ ಜಾತಿಗೇ ಅಪಮಾನ ಮಾಡಿದಂತೆ. ಅವಳಿಗೆ ಧಿಕ್ಕಾರ. ರತ್ನ ದೂರವಿದ್ದರೆ ದುರ್ಲಭವಿದ್ದರೆ ಬೆಲೆ ಹೆಚ್ಚು, ಸ್ವತಃ ಲಭ್ಯವಾಗುತ್ತಿದ್ದರೆ ಬೆಲೆ ಕಡಿಮೆಯಾಗುವುದು. ಆದರಿಂದ ಪುರುಷನೆ ಸ್ತ್ರೀಯನ್ನು ಅರಸಿ ಬರಬೇಕು. ಸ್ತ್ರೀ ಪುರುಷನನ್ನಲ್ಲ. ಲೋಕಾಚಾರದಲ್ಲಾಗಲಿ ವೇದದಲ್ಲಾಗಲಿ ಸ್ತ್ರೀ ಪರಪುರುಷನನ್ನು ಬಯಸುವುದು ಕಂಡಿಲ್ಲ. ತನ್ನ ಸಂಪತ್ತನ್ನು ಶಾಸ್ತ್ರೋಕ್ತ ವಿಧ್ಯನುಸಾರವಾಗಿ ಯೋಗ್ಯಕಾಲದಲ್ಲಿ ಅನುಭವಿಸುವವನೆ ಲೋಕದಲ್ಲಿ ಪೂಜ್ಯನೆನಿಸುತ್ತಾನೆ. ಪರರ ಸಂಪತ್ತನ್ನು ಬಯಸುವವನೆ ಪೂಜ್ಯತೆಯನ್ನು ಕಳೆದುಕೊಳ್ಳುತ್ತಾನೆ. ಮೋಹಿನಿ, ಕೇಳು, ಮೂಲೋಕದಲ್ಲಿ ಯಾರು ಯಾರಿಗೆ ಶತ್ರು? ತನ್ನ ಇಂದ್ರಿಯವೇ ತನಗೆ ಶತ್ರು. ಪರರು ಶತ್ರುವಾಗಲು ತನ್ನ ಇಂದ್ರಿಯವೆ ನಿಮಿತ್ತ. ವೇದೋಕ್ತವಾದ ಸದಾಚಾರ ನಡೆಸುತ್ತಿದ್ದರೆ ಜಗತ್ತಿಗೆ ಜಗತ್ತೇ ಮಿತ್ರವೆನಿಸುವುದು. ವೇದವಿರುದ್ಧ ಆಚರಣೆಯಿಂದ ಮಿತ್ರನೂ ಶತ್ರುವಾಗುವನು. ವೇದೋಕ್ತವನ್ನು ಆಚರಿಸುವವನಲ್ಲಿ ಹರಿ ತುಷ್ಟನಾಗುವನು. ಹರಿ ತುಷ್ಟನಾದಾಗ ಜಗತ್ತೇ ತುಷ್ಟವಾಗುವುದು. ಹರಿ ರುಷ್ಟನಾದರೆ ಜಗತ್ತೇ ಶತ್ರುವಾಗುವುದು.

**ವೇದೋಕ್ತಂ ಕೃತವಂತಂ ಚ ಹರಿಸ್ತುಷ್ಟೋ ದಿವಾನಿಶಂ ।**
**ಹರೌ ತುಷ್ಟೇ ಜಗತ್ ತುಷ್ಟಂ ತಸ್ಮಿನ್ ರುಷ್ಟೇ ಭವೇದ್ ರಿಪುಃ ॥**

ಸ್ವತಃ ವೇಶ್ಯಾಜಾತಿ ಎಲ್ಲಿದೆ? ಪತಿವ್ರತಾ ಜಾತಿ ಎಲ್ಲಿದೆ? ತಮ್ಮ ತಮ್ಮ ಕರ್ಮಾಚರಣೆಯಿಂದ ಎಲ್ಲ ಜಾತಿ ನಿರ್ಮಾಣವಾಗುವುದು. ಪ್ರಕೃತಿಯ ಅಂಶದಿಂದ ಸ್ತ್ರೀ ಜಾತಿಯನ್ನು ನಾರಾಯಣ ನಿರ್ಮಾಣ ಮಾಡಿದ. ಅವರಲ್ಲಿ ದುಃಶೀಲೆಯಾದ ಸ್ತ್ರೀ ವೇಶ್ಯೆ, ಸುಶೀಲೆಯಾದ ಸ್ತ್ರೀ ಪತಿವ್ರತೆ ಎನಿಸುವಳು.' ಬ್ರಹ್ಮ ಹೀಗೆ ಹೇಳಿ ಸುಮ್ಮನಾದಾಗ ಮೋಹಿನಿಗೆ ಕೋಪದಿಂದ ತುಟಿ ಅದುರಿತು. ಅವಳು ಹೇಳಿದಳು-

**ಮೋಹಿನಿ:-** ಸೃಷ್ಟಿಕರ್ತನೆ, ನೀನು ಹೇಳುವುದೆಲ್ಲ ನನಗೆ ತಿಳಿದೇ ಇದೆ. ಆದರೆ ನೀನು ಎಷ್ಟು ನೀತಿ ಬೋಧಿಸಿದರೂ ನನ್ನ ಮನಸ್ಸು ಸ್ಥಿರವಾಗುವುದಿಲ್ಲ. ಅದು ನಿನ್ನನ್ನು ಒಂದು ಕ್ಷಣ ಕಂಡಂದಿನಿಂದ ನಿನ್ನಲ್ಲೆ ನೆಲೆಸಿದೆ. ನಿನ್ನ ಮುಖದರ್ಶನ ಮಾತ್ರದಿಂದ

ನನಗೆ ಬೇರೆ ಎಲ್ಲ ಕಾಮುಕ ಪುರುಷರೂ ಮರೆತುಹೋಗಿದ್ದಾರೆ. ಕಾಮಾಗ್ನಿಯಿಂದ ಬೇಯುತ್ತಿದ್ದ ಶರೀರವನ್ನು ನಾನು ತ್ಯಾಗಮಾಡಲು ಹೊರಟಾಗ ರಂಭೆ ತಡೆದಳು. ಅದರಿಂದ ಮನ್ಮಥನ ಸಹಾಯ ಪಡೆದು ನಾನು ನಿನ್ನ ಬಳಿಗೆ ಬಂದೆ. ಅವನು ವಿಫಲನಾಗಿ ನಿನ್ನ ಶಾಪದ ಸುಡಿ ಕೇಳಿ ವಸಂತನೊಂದಿಗೆ ಹೊರಟುಹೋದ. ನಾನು ಮಾತ್ರ ನೀನೆಷ್ಟು ಆಕ್ಷೇಪಿಸಿದರೂ ಇಲ್ಲಿಂದ ಕದಲಲು ಅಶಕ್ತಳಾಗಿರುವೆ. ನನ್ನ ಸರ್ವಾಂಗಗಳಲ್ಲಿ ಜಡತ್ವ ಉಂಟಾಗಿದೆ. ದಯಾಸಾಗರ, ನನ್ನಲ್ಲಿ ದಯೆದೋರು. ಕೊಲ್ಲಬೇಡ. ನಿನ್ನ ಅಪ್ಪುಗೆಯೊಂದರಿಂದಲೆ ನನ್ನ ಎಲ್ಲ ತಾಪ ಪರಿಹಾರವಾಗುವುದು. ನೀನು ಸೃಷ್ಟಿಕರ್ತ. ನಾನು ವೇಶ್ಯೆ. ಎಲ್ಲವೂ ಕರ್ಮಾಧೀನ. ಸಜ್ಜನರು ಅದರಲ್ಲಿ ಗರ್ವಪಡುವುದಿಲ್ಲ. ಕರ್ಮಾಧೀನವಾಗಿ ಒಬ್ಬ ವಾಹನವೇರುತ್ತಾನೆ, ಇನ್ನೊಬ್ಬ ಹೊರುತ್ತಾನೆ. ರಾಜ ಕಂದಾಯ ತೆಗೆದುಕೊಳ್ಳುತ್ತಾನೆ, ಪ್ರಜೆಗಳು ಕೊಡುತ್ತಾರೆ. ಒಬ್ಬ ಸಿಂಹಾಸನವೇರುತ್ತಾನೆ, ಇನ್ನೊಬ್ಬ ಸಾಮಾನ್ಯ ಮನುಷ್ಯನಾಗಿರುತ್ತಾನೆ. ಕೆಲವರು ಕುದುರೆಯನ್ನೋ ಆನೆಯನ್ನೋ ಏರಿ ಪ್ರಯಾಣ ಮಾಡುತ್ತಾರೆ. ಕೆಲವರು ಪರರ ವಾಹನವನ್ನು ಹೊರುತ್ತಾರೆ. ಪಾಪಕರ್ಮದಿಂದ ಕೆಲವರು ಹಂದಿಯಾಗಿ ಹುಟ್ಟುತ್ತಾರೆ. ಪುಣ್ಯಾತ್ಮರು ಕೆಲವರು ಶಚೀಪುತ್ರರಾಗಿಯೋ ನಿನ್ನ ಪುತ್ರರಾಗಿಯೋ ಹುಟ್ಟುತ್ತಾರೆ. ಕೆಲವರು ಹರಿಭಕ್ತಿ ಮಾಡಿ ಅವನ ಪಾರ್ಷದರಾಗುತ್ತರೆ. ಕೆಲವರು ದುರದೃಷ್ಟವಶಾತ್ ಮಲದಲ್ಲಿ ಕ್ರಿಮಿಗಳಾಗಿ ಹುಟ್ಟುತ್ತಾರೆ. ಕೆಲವರು ಸ್ವರ್ಗ ಪಡೆದರೆ ಕೆಲವರು ನರಕದಲ್ಲಿ ಮಲಮೂತ್ರ ಕುಂಡಗಳಲ್ಲಿ ನರಳುತ್ತಾರೆ. ಕೆಲವರು ಬ್ರಾಹ್ಮಣರಾಗಿ ಕ್ಷತ್ರಿಯರಾಗಿ ವೈಶ್ಯರಾಗಿ ಕೆಲವರು ಶೂದ್ರರಾಗಿ ಮ್ಲೇಚ್ಛಜಾತಿಗಳಾಗಿ ಕರ್ಮಾನುಸಾರ ಹುಟ್ಟುತ್ತಾರೆ. ಕೆಲವರು ಮೂರ್ಖರಾಗಿ ಅಂಧರಾಗಿ ಅಂಗವಿಕಲರಾಗಿ ಹುಟ್ಟಿದರೆ ಕೆಲವರು ಜ್ಞಾನಿಗಳಾಗಿ ಶಿಷ್ಯವರ್ಗಗಳಿಗೆ ಶಾಸ್ತ್ರ ಬೋಧಿಸುತ್ತಾರೆ, ಗುರುಮುಖದಿಂದ ಅಧ್ಯಯನ ಮಾಡಿ ಸರ್ವಜ್ಞರೆನಿಸುತ್ತಾರೆ. ಒಬ್ಬಳು ಪೂರ್ವಪುಣ್ಯದಿಂದ ಪತಿವ್ರತೆಯಾಗಿ ಇಹದಲ್ಲಿಯೂ ಪರದಲ್ಲಿಯೂ ಪೂಜ್ಯಳೆನಿಸುತ್ತಾಳೆ, ಇನ್ನೊಬ್ಬಳು ವೇಶ್ಯೆಯಾಗಿ ದೇಹವಿಕ್ರಯ ಮಾಡಿ ಅನ್ನ ಉಣ್ಣುತ್ತಾಳೆ. ನಾನೂ ಹಾಗೇ ಒಬ್ಬಳು ವೇಶ್ಯೆ. ಸ್ವರ್ಗಲೋಕದ ವೇಶ್ಯೆ. ದೇವತೆಗಳಿಗೆ ಬೇಕಾದವಳು. ಅವರು ನನ್ನನ್ನು ಆದರಿಸುತ್ತಾರೆ. ಸ್ವಭಾವಾನುಸಾರ ಮನಸ್ಸಿರುತ್ತದೆ. ಕರ್ಮಾನುಸಾರ ಸ್ವಭಾವ. ಫಲಾನುಸಾರ ಕರ್ಮಮಾಡುತ್ತೇವೆ. ಎಲ್ಲಕ್ಕೂ ಕಾರಣ ಶ್ರೀಹರಿ. ಎಲ್ಲರಿಗೂ ಕರ್ಮದ್ವಾರಾ ಫಲ ನೀಡುವವನು ಅವನೆ. ಎಲ್ಲರಿಗಿಂತ ಪ್ರಬಲ ಆಕರ್ಮರೂಪಿ ಜನಾರ್ದನ. ನನ್ನನ್ನೇಕೆ ಆಕ್ಷೇಪಿಸುವೆ? ಏಕೆ ತೆಗಳುವೆ? ಸೃಷ್ಟಿಕರ್ತನಾದ ನಿನ್ನ ಪಾದಕಮಲವನ್ನು ನೋಡಲು ಬಂದೆ. ಯೋಗಿಗಳು ಯಾರ ಪಾದಗಳನ್ನು ಸ್ವಪ್ನದಲ್ಲಿಯೂ ಕಾಣಲಾರರೋ ಅಂಥ ನಿನ್ನನ್ನು ಪತಿಯನ್ನಾಗಿ ಮಾಡಿಕೊಳ್ಳಲು ಸ್ವತಃ ಬಯಸಿ ಬಂದಿದ್ದೇನೆ. ಒಬ್ಬನನ್ನು ಸೇರಿ ಹೆಣ್ಣು ಇಹದಲ್ಲಿಯೂ ಪರದಲ್ಲಿಯೂ ಅಸ್ಪೃಶ್ಯಳೆನಿಸಬಹುದು. ಇನ್ನೊಬ್ಬನ ಪಾದ ಧೂಳಿಯನ್ನು ಸೇವಿಸಿ ಕೀರ್ತಿವಂತಳಾಗಿ ಬೆಳಗಬಹುದು.

ಹೀಗೆ ಹೇಳಿ ಮೋಹಿನಿ ವೇಗದಿಂದ ಧಾವಿಸಿ ಬ್ರಹ್ಮನೆದುರು ಬಂದು ನಿಂತಳು. ಪ್ರಪಂಚದ ಸೃಷ್ಟಿಕರ್ತ ಅಪ್ಸರೆಯ ಭಯದಿಂದ ನಡುಗಿದ. ಅಪ್ಸರೆ ಮುಗುಳು ನಗುತ್ತ

ಓರೆಗಣ್ಣಿಂದ ನೋಡಿ ಶೃಂಗಾರ ಭಾವವನ್ನು ವ್ಯಕ್ತ ಮಾಡಿದಳು. ಕಾಮಬಾಣ ಪೀಡಿತಳಾಗಿ ಅಂಗಾಗ ಪ್ರದರ್ಶಿಸಿದಳು. ಅಷ್ಟರಲ್ಲಿ ಸರ್ವಜ್ಞನಾದ ಮನ್ಮಥ ಆವಿರ್ಭವಿಸಿ ಬ್ರಹ್ಮನ ಮೇಲೆ ಸಮ್ಮೋಹನ, ಸಮುದ್ವೇಗ, ಸ್ತಂಭನ, ಉನ್ಮಾದನ, ಚೇತನಹರಣ ಎಂಬ ಐದೂ ಬಾಣಗಳನ್ನು ಎಸೆದ. ಸ್ವಯಂ ಅಂತರಿಕ್ಷದಲ್ಲಿ ನಿಂತು ವಸಂತ ಕೋಗಿಲೆ ದುಂಬಿ ಗಂಧಮಾರುತ ಮುಂತಾದ ಭೃತ್ಯರನ್ನು ಬ್ರಹ್ಮನನ್ನು ಪರವಶಗೊಳಿಸಲು ಆದೇಶಿಸಿದ. ತಾನೂ ಬ್ರಹ್ಮನ ಅಂತರಂಗವನ್ನು ಹೊಕ್ಕು ಕಾಮವಿಕಾರ ಉಂಟುಮಾಡಿದ. ಬ್ರಹ್ಮನ ಬಳಿ ಕೋಗಿಲೆಗಳು ಹಾಡಿದುವು. ದುಂಬಿಗಳು ಧ್ವನಿಗೈದುವು. ಗಂಧಮಾರುತ ತಂಪಾಗಿ ಮೆಲ್ಲನೆ ಬೀಸಿತು. ವಸಂತ ಪ್ರಸನ್ನನಾಗಿ ಎಲ್ಲೆಡೆ ಸಂಚರಿಸಿದ. ಬ್ರಹ್ಮನ ಮೈ ಎಲ್ಲ ರೋಮಾಂಚಿತವಾಯಿತು. ಮೋಹಿನಿ ಇನ್ನೂ ನಗುತ್ತ ಓರೆಗಣ್ಣಿಂದ ನೋಡುತ್ತಿದ್ದಳು. ಬ್ರಹ್ಮ ಎಲ್ಲವನ್ನೂ ತಿಳಿದ. ಮನಸ್ಸು ಅವನ ವಶದಲ್ಲಿ ನಿಲ್ಲದಂತಾಯಿತು. ಭಯದಿಂದ ಆತ ಹರಿಯನ್ನು ನೆನೆದ. ಹೃದಯಕಮಲದಲ್ಲಿ ನೆಲೆಸಿದ್ದ ಕೃಷ್ಣನನ್ನು ಮನಸ್ಸಿನಲ್ಲಿಯೆ ಸ್ತುತಿಸಿದ. ದ್ವಿಭುಜ, ಮುರಲೀಧಾರಿ, ಪೀತಾಂಬರ ಉಟ್ಟವ. ಸ್ಥಿರಯೌವನಶಾಲಿ, ಅತಿ ಸುಂದರರೂಪಿ, ರತ್ನಾಲಂಕಾರಭೂಷಣಾಢ್ಯನಾದ ನಗುಮೊಗದ ಅಶ್ಯಾಮಸುಂದರನನ್ನು ಬ್ರಹ್ಮ ಹೀಗೆ ಸ್ತುತಿಸಿದ -

**ಬ್ರಹ್ಮ:-** ಹರಿಯೆ, ನನ್ನನ್ನು ಕಾಪಾಡು ಕಾಪಾಡು, ದುಷ್ಕೀರ್ತಿಯ ಜಲದಿಂದ ತುಂಬಿದ ಬಹು ಸಂಕಟಮಯವಾದ ಅಪಾರ ಕಾಮಸಾಗರದಲ್ಲಿ ಮುಳುಗಿದ್ದೇನೆ. ಭಕ್ತಿಯನ್ನು ಅದು ಮರೆಸುತ್ತದೆ. ಆಪತ್ತಿಗೆ ಸೋಪಾನ ರೂಪವಾಗಿದೆ. ಅತಿ ನಿರ್ಮಲವಾದ ಜ್ಞಾನಚಕ್ಷುವನ್ನೂ ಕುರುಡಾಗಿಸುತ್ತದೆ. ಜನನ ತರಂಗಗಳಿಂದ ಕೂಡಿದೆ. ಸ್ತ್ರೀ ಎಂಬ ಮೊಸಳೆಗಳಿಂದ ತುಂಬಿದೆ. ರತಿಯ ಪ್ರವಾಹದಿಂದ ಕೂಡಿದೆ, ಆಳವಾಗಿದೆ, ಭಯಂಕರವಾಗಿದೆ. ಮೊದಲಿಗೆ ಅಮೃತದಂತಿದ್ದರೂ ಕೊನೆಯಲ್ಲಿ ವಿಷರೂಪವಾಗಿದೆ. ಯಮಪಟ್ಟಣ ಪ್ರವೇಶಕ್ಕೆ ಮುಕ್ತದ್ವಾರಮಾಡಿಕೊಡುತ್ತದೆ. ಬುದ್ಧಿ ಎಂಬ ನೌಕೆಯಿಂದ ನೀನು ನಮ್ಮನ್ನು ದಾಟಿಸು. ನೀನು ಸ್ವಯಂ ನಾವಿಕ. ಹೇ ಮಧುಸೂದನ, ಪ್ರಸನ್ನನಾಗು. ನನ್ನಂತೆ ಎಷ್ಟು ಮಂದಿ ಹೀಗೆ ದುಃಖ ಪಡುವರೊ! ಇದು ಕರ್ಮಭೂಮಿಯಲ್ಲ, ಬ್ರಹ್ಮಲೋಕ, ಆದರೂ ನನಗೆ ಈಕಾಮೋಪಭೋಗದಲ್ಲಿ ಆಸಕ್ತಿ ಇಲ್ಲ. ಏಕೆಂದರೆ ಅದು ನಿನ್ನ ಭಕ್ತಿಯನ್ನು ಮರೆಮಾಡುತ್ತದೆ. ಹೇ ನಾಥ, ಕರುಣಾಸಾಗರ, ದೀನ ಬಂಧು, ಕೃಪೆ ಮಾಡು. ನನಗೆ ಇಂಥ ಕೆಟ್ಟ ಕನಸನ್ನು ತೋರಿಸಬೇಡ.'

ಹೀಗೆ ಹೇಳಿ ಬ್ರಹ್ಮ ಸುಮ್ಮನಾದ. ನನ್ನ ಪಾದಕಮಲಗಳನ್ನು ಧ್ಯಾನಿಸುತ್ತ ಕುಳಿತ. ಬ್ರಹ್ಮ ಮಾಡಿದ ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸುವವನೂ ಕೇಳುವವನೂ ವಿಷಯಭೋಗದಲ್ಲಿ ಮಗ್ನನಾಗುವುದಿಲ್ಲ. ನನ್ನ ಮಾಯೆಯನ್ನು ಗೆದ್ದು ಉತ್ತಮ ಜ್ಞಾನ ಪಡೆಯುತ್ತಾನೆ. ಭಕ್ತಿಯುಕ್ತನಾಗಿ ನನ್ನ ಶ್ರೇಷ್ಠ ಭಕ್ತನೆನಿಸುತ್ತಾನೆ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ರಾಧಾಪ್ರಶ್ನದಲ್ಲಿ ಬ್ರಹ್ಮ ಮೋಹಿನೀ ಸಂವಾದದ ಶ್ರೀಕೃಷ್ಣಸ್ತೋತ್ರವೆಂಬ ಮೂವತ್ತೆರಡನೆ ಅಧ್ಯಾಯ ಮುಗಿದುದು*

## ಮೋಹಿನೀ ಶಾಪ, ಬ್ರಹ್ಮನ ದರ್ಪಭಂಗ

ಅಧ್ಯಾಯ - ೩೩

**ಶ್ರೀಕೃಷ್ಣ:-** ಬ್ರಹ್ಮ ಹರಿಯನ್ನು ಸ್ತುತಿಸಿ ಕಾಮಾಸಕ್ತಮನಸ್ಸೆಂಬ ಮದ್ದಾನೆಯನ್ನು ನಾನಿತ್ತ ದಿವ್ಯ ಜ್ಞಾನಾಂಕುಶದಿಂದ ನಿಯಂತ್ರಿಸಿ ಮೋಹಿನಿಯ ಬಳಿ ನಿಂತ. ಮೋಹಿನಿ ಅವನಿಗೆ ಅಪಹಾಸದ ಮಾತನ್ನಾಡತೊಡಗಿದಳು.

**ಮೋಹಿನಿ:-** ನಾರಿಯ ಇಂಗಿತವನ್ನರಿತೊಡನೆ ಸ್ವತಃ ಮನದಲ್ಲಿ ಹುಚ್ಚಾಗಿ ಬಂದು ಸೆಳೆದು ಸಂಭೋಗ ಮಾಡುವ ಪುರುಷನೆ ಉತ್ತಮ. ನಾರಿಯ ಅಭಿಪ್ರಾಯ ಸ್ಫುಟವಾಗಿದ್ದರೂ ಅವಳ ಒತ್ತಾಯಕ್ಕೆ ಯಾರು ರಮಿಸಲು ಒಪ್ಪುವನೋ ಅವನು ಮಧ್ಯಮ. ಕಾಮಾರ್ತಳಾಗಿ ಪುನಃ ಪುನಃ ಬೇಡಿದರೂ ಏಕಾಂತದಲ್ಲಿ ಅವಳನ್ನು ಯಾರು ಕೂಡುವುದಿಲ್ಲವೋ ಅವನು ನಪುಂಸಕ. ಪುರುಷನೇ ಅಲ್ಲ. ಗೃಹಸ್ಥನಿರಲಿ, ತಪಸ್ವಿ ಇರಲಿ, ಕಾಮಾಸಕ್ತನಿರಲಿ, ತಾನಾಗಿ ಬಂದ ಹೆಣ್ಣನ್ನು ಪರಿತ್ಯಜಿಸುವವನು ಇಹದಲ್ಲಿ ಪೂಜ್ಯತೆಯನ್ನು ಕಳೆದುಕೊಳ್ಳುವನು, ಪರದಲ್ಲಿ ನರಕಭಾಗಿಯಾಗುವ ಅವನ ಕಾಂತಿ ರೂಪ ಬುದ್ಧಿ ಎಲ್ಲವೂ ನಶಿಸುವುದು, ನಾರಿಯ ಶಾಪದಿಂದ ಬೇಗನೆ ನಪುಂಸಕನಾಗುವನು. ಆದರಿಂದ ಎದ್ದೇಳು ಜಗನ್ನಾಥ, ದುಸ್ತರವಾದ ಘೋರ ಭಯಾನಕವಾದ ಕಾಮಸಾಗರದಲ್ಲಿ ಮುಳುಗಿದ ನನ್ನನ್ನು ಪಾರು ಮಾಡು. ನೀನು ನಾವಿಕ. ಅತ್ಯಂತ ನಿರ್ಜನ ಪ್ರದೇಶದಲ್ಲಿ ಸರ್ವಜಂತು ರಹಿತವಾಗಿದ್ದು ಸುಗಂಧ ಮಾರುತ ಬೀಸುವ, ಕೋಗಿಲೆಯ ಧ್ವನಿಯಿಂದ ಮನೋಹರವಾದ ಸ್ಥಳದಲ್ಲಿ ಸದಾ ನಿನ್ನಲ್ಲೆ ಮನಸಿಟ್ಟು ಜನ್ಮಜನ್ಮದಲ್ಲಿ ನಿನ್ನ ದಾಸಿಯಾಗಿರುವ ನನ್ನನ್ನು ರತಿಕ್ರೀಡೆ ಎಂಬ ಅಮೂಲ್ಯರತ್ನರೂಪವಾದ ಹಣದಿಂದ ತಡಮಾಡದೆ ಬೆಲೆಗೆ ಕೊಂಡುಕೊಳ್ಳು, ನಿನ್ನವಳನ್ನಾಗಿಸಿಕೊಳ್ಳು.

ಮೋಹಿನಿ ಹೀಗೆ ಹೇಳಿ ಕಾಮಪರವಶಳಾಗಿ ನಗುತ್ತ ಬ್ರಹ್ಮನು ಉಟ್ಟ ವಸ್ತ್ರವನ್ನು ಹಿಡಿದು ಸೆಳೆದಳು. ಬ್ರಹ್ಮ ಭಯಪಟ್ಟು ಅವಳಿಗೆ ಮಧುರವಾಗಿ ವಿನಯದಿಂದ ಪುನಃ ಹೇಳತೊಡಗಿದ.

**ಬ್ರಹ್ಮ:-** ಮೋಹಿನಿ, ನನ್ನ ಮಾತನ್ನು ಕೇಳು. ಅದರಲ್ಲಿ ನಿನ್ನ ಹಿತವಿದೆ. ಮೂಲೋಕದ ಸ್ತ್ರೀ ಜಾತಿಗೇ ಅವಮಾನಕರವಾದ ಈ ನಿನ್ನ ಪ್ರಯತ್ನವನ್ನು ಬಿಟ್ಟು ಬಿಡು. ತಾಯಿ ನಿನ್ನ ಮಗನಾದ ನನ್ನನ್ನು ಬಿಟ್ಟುಬಿಡು. ನಾನು ವೃದ್ಧ. ಕಾಮದಲ್ಲಿ ಆಸಕ್ತಿ ಇಲ್ಲದವ. ನಿನಗೆ ಯೋಗ್ಯನಾದ ರಸಿಕನಾದ ಒಬ್ಬ ಯುವಕನನ್ನು ನೋಡಿಕೊಳ್ಳು.

ಬ್ರಹ್ಮ ಹೀಗೆ ಹೇಳುತ್ತಿದ್ದಂತೆ ಮೋಹಿನಿ ಪುನಃ ಬಟ್ಟೆಗೆ ಕೈ ಹಾಕಿದಳು. ಆದರೆ ಅಷ್ಟರಲ್ಲಿಯೆ ಅಲ್ಲಿಗೆ ಬ್ರಹ್ಮತೇಜಸ್ಸಿನಿಂದ ಜ್ವಲಿಸುವ ಮುನಿಗಳೆಲ್ಲರೂ ಬಂದರು. ಅತ್ರಿ ಪುಲಸ್ತ್ಯ ಪುಲಹ ವಸಿಷ್ಠ ಕ್ರತು ಅಂಗಿರ ಭೃಗು ಮರೀಚಿ ಕಪಿಲ ವೋಢು

ಪಂಚಶಿಖ ರುಚಿ ಆಸುರಿ ಪ್ರಚೇತ ಶುಕ್ರ ಬೃಹಸ್ಪತಿ ಉತಥ್ಯ ಕರಕ ಕಣ್ವ ಕಶ್ಯಪ ಗೌತಮ ಸನಕ ಸನಂದ ಕರ್ದಮ ಸನಾತನ ಸನತ್ಕುಮಾರ ಶಾತಾತಪ ಪಿಪ್ಪಲ ಶಂಕು ಶುಕ ಪರಾಶರ ಮಾರ್ಕಂಡೇಯ ಲೋಮಶ ಮೃಕಂಡು ಚ್ಯವನ ದುರ್ವಾಸ ಜರತ್ಕಾರು ಆಸ್ತೀಕ ವಿಭಾಂಡಕ ಋಷ್ಯಶೃಂಗ ಭರದ್ವಾಜ ವಾಮದೇವ ಕೌಶಿಕ - ಇವರೆಲ್ಲರೂ ಬಂದುದನ್ನು ಕಂಡು ಮೋಹಿನಿ ಲಜ್ಜೆಯಿಂದ ಬ್ರಹ್ಮನನ್ನು ಬಿಟ್ಟಳು. ಅವನ ಎಡಪಾರ್ಶ್ವದಲ್ಲಿ ಕುಳಿತಳು. ಮುನಿಗಳೆಲ್ಲರೂ ಬ್ರಹ್ಮನನ್ನು ಭಕ್ತಿಯಿಂದ ತಲೆಬಾಗಿ ನಮಿಸಿದರು. ಅವೆಲ್ಲರಿಗೂ ಆಶೀರ್ವದಿಸಿ ಕುಳ್ಳಿರಿಸಿದ ಬ್ರಹ್ಮ. ಆ ಮುನಿಗಳ ನಡುವೆ ತಾರೆಗಳ ನಡುವೆ ಚಂದ್ರನಂತೆ ಬ್ರಹ್ಮ ಶೋಭಿಸಿದ. ಮುನಿಗಳು ಕೇಳಿದರು, 'ಈ ಅಪ್ಸರೆ ನಿನ್ನ ಬಳಿ ಏಕೆ? ಎಂದು. ಅದಕ್ಕೆ ಬ್ರಹ್ಮ ಸ್ತ್ರೀಜಾತಿಯ ಮಾನವನ್ನು ಕಾಪಾಡುವುದಕ್ಕಾಗಿ ಹೇಳಿದ -

**ಬ್ರಹ್ಮ:-** ಅಪೂರ್ವವಾದ ಸಂಗೀತ ನಾಟ್ಯಗಳನ್ನು ಬಹು ಹೊತ್ತು ಪ್ರದರ್ಶಿಸಿ ಆಯಾಸಗೊಂಡಿದ್ದಾಳೆ. ಮಗಳು ತಂದೆಯ ಬಳಿ ಇರುವಂತೆ ನನ್ನ ಬಳಿ ಇದ್ದಾಳೆ, ಅಷ್ಟೇ!

ಹೀಗೆ ಹೇಳಿ ಬ್ರಹ್ಮ ನಕ್ಕ. ಎಲ್ಲವನ್ನೂ ತಿಳಿದಿರುವ ಮುನಿಗಳೂ ನಕ್ಕರು. ಇದು ತನಗೆ ಆದ ಮಹಾ ಅಪಮಾನವೆಂದು ಮೋಹಿನಿ ಮೈಯೆಲ್ಲ ನಡುಗಿದಳು. ಮುಖ ಗಂಟಿಕ್ಕಿದಳು. ಅವಳ ಕಣ್ಣು ಕೋಪದಿಂದ ಕೆಂಪಾದುವು. ತುಟಿಗಳು ಅದುರಿದುವು. ಸಭೆಯ ಮಧ್ಯದಲ್ಲಿ ಎದ್ದುನಿಂತು ಎಲ್ಲರೆದುರಿಗೆ ಬ್ರಹ್ಮನನ್ನು ಕೂಗಿ ಕರೆದು ಕೋಪದಿಂದ ಮೃತ್ಯುಕನ್ಯೆಯಂತೆ ನುಡಿದಳು.

**ಮೋಹಿನಿ:-** ಬ್ರಹ್ಮನೆ, ನೀನು ಜಗನ್ನಾಥ, ವೇದೋಪದೇಶಕ, ವೇದವಿಹಿತ ಕರ್ಮ ಯಾವುದು, ಯಾವುದು ವೇದನಿಂದಿತವಾದುದು ನಿನ್ನ ಮನಸಿನಿಂದ ನೀನು ವಿಚಾರಮಾಡು. ಮಗಳನ್ನು ಮೋಹಿಸಿದ ನೀನು ನರ್ತಕಿಯನ್ನು ಅವಮಾನ ಪಡಿಸುವೆಯ? ಪರಮಾತ್ಮ ನನ್ನನ್ನು ಸರ್ವರ ಸಂಗ ಮಾಡುವ ಅಪ್ಸರೆಯನ್ನಾಗಿ ಸೃಷ್ಟಿಸಿದ. ದೈವಾತ್ ನಾನು ವಿನಯದಿಂದ ದಾಸಿಯಂತೆ ಶರಣಾಗತಳಾಗಿ ಬಂದೆ. ನೀನು ಅಹಂಕಾರದಿಂದ ನನ್ನನ್ನು ಅವಮಾನ ಪಡಿಸಿದೆ. ಆದರಿಂದ ನೀನು ಲೋಕದಲ್ಲಿ ಅಪೂಜ್ಯನೆನಿಸು. ಬೇಗನೆ ನಿನ್ನ ದರ್ಪವನ್ನು ಹರಿ ಮುರಿಯುತ್ತಾನೆ. ಕೇಳು ನನ್ನ ಮಾತನ್ನು. ಯಾರು ಸದಾ ನಿನ್ನನ್ನೆ ಸ್ತೋತ್ರ ಮಾಡುವನೋ ಅವನಿಗೆ ವಿಘ್ನಗಳು ಬರುತ್ತವೆ. ಅವನು ಅಪಹಾಸಕ್ಕೆ ಈಡಾಗುತ್ತಾನೆ. ಎಲ್ಲ ದೇವತೆಗಳಿಗೆ ವರ್ಷವರ್ಷ ಪೂಜೆ ನಡೆಯುತ್ತದೆ. ನಿನಗೆ ಮಾತ್ರ ಹಾಗೆ ಪೂಜೆ ನಡೆಯದು. ಈ ಕಲ್ಪದಲ್ಲಾಗಲಿ ಬೇರೆ ಕಲ್ಪದಲ್ಲಾಗಲಿ, ಈ ಜನ್ಮದಲ್ಲಾಗಲಿ ಬೇರೆ ಜನ್ಮದಲ್ಲಾಗಲಿ ಪುನಃ ಪೂಜೆ ಸಿಗಲಾರದು. ಹೋದ ಪೂಜೆ ಹೊರಟೇ ಹೋಯಿತೆಂದು ತಿಳಿ.

ಹೀಗೆ ಹೇಳಿ ಮೋಹಿನಿ ಮನ್ಮಥನ ಲೋಕಕ್ಕೆ ನಡೆದಳು. ಮನ್ಮಥನೊಡನೆ ರಮಿಸಿ ಕಾಮತಾಪವನ್ನು ಪರಿಹರಿಸಿಕೊಂಡಳು. ಬಳಿಕ ಎಚ್ಚೆತ್ತು ಅಳಲು ತೊಡಗಿದಳು- 'ನನಗೆ ಅತಿ ಪ್ರಿಯನಾದ ಬ್ರಹ್ಮನನ್ನು ನಾನು ಹೇಗೆ ಶಪಿಸಿದೆನೊ!'

ಇತ್ತ ಮುನಿಗಳು ಮೋಹಿನಿ ಹೊರಟು ಹೋದ ಬಳಿಕ ಬಹಳ ದುಃಖಿಸಿದರು. ಸ್ವಯಂ ಬ್ರಹ್ಮನೂ ತಲೆ ತಗ್ಗಿಸಿ ಕುಳಿತು ನಡುಗುತ್ತಿದ್ದ. ಮುನಿಗಳು ಹೇಳಿದರು, 'ಶ್ರೀ ಹರಿಯನ್ನು ಶರಣಾಗು. ನಿನಗೆ ಇದೇ ಉಪಾಯ'. ಹೀಗೆ ಹೇಳಿ ಹೊರಟು ಹೋದರು. ಬ್ರಹ್ಮ ನನ್ನದೇ ಇನ್ನೊಂದು ಮೂರ್ತಿಯಾದ ಕಮಲಾಕಾಂತನಾದ ನಾರಾಯಣನ ಬಳಿಗೆ ಹೋಗಿ ಬಾಡಿದ ಮುಖದಿಂದ ನಮಿಸಿದ. ಒಣಗಿದ ಗಂಟಲು ನಾಲಿಗೆಗಳಿಂದ ನಡೆದ ವೃತ್ತಾಂತವನ್ನು ನಿವೇದಿಸಿಕೊಂಡ. ದೀನಬಂಧು ದಯಾಸಿಂಧು ಸಕಲ ಆಪತ್ ಪರಿಹಾರಕನಾದ ನಾರಾಯಣ ನಕ್ಕು ನುಡಿದ.

**ನಾರಾಯಣ:-** ಬ್ರಹ್ಮ, ನೀನು ಸ್ವಯಂ ವೇದವೇತ್ತನಾಗಿರುವಿ. ಜ್ಞಾನಿಗಳ ಗುರುಗಳಿಗೆ ಗುರುವೆನಿಸಿರುವಿ. ಆದರೆ ನೀನೀಗ ಮಾಡಿದ ಕರ್ಮ ಇನ್ನಾರೂ ಮಾಡಿಲ್ಲ. ಸ್ತ್ರೀಜಾತಿ ಪ್ರಕೃತಿಯ ಅಂಶ. ಜಗತ್ತಿಗೆ ಬೀಜರೂಪ. ಸ್ತ್ರೀಯರಿಗೆ ಮಾಡಿದ ಅಪಮಾನ ಪ್ರಕೃತಿಗೇ ಮಾಡಿದ ಅಪಮಾನ. ನಿನ್ನ ಲೋಕವೂ ಶ್ರೇಷ್ಠ ಪುಣ್ಯಕ್ಷೇತ್ರವಾದ ಭಾರತ ಭೂಮಿ ಏನಲ್ಲ. ಕ್ರೀಡಾ ಕ್ಷೇತ್ರ. ಅಲ್ಲಿ ಏನು ನಿನ್ನ ಇಂದ್ರಿಯನಿಗ್ರಹ? ಭಾರತ ಭೂಮಿಯಲ್ಲಿಯೂ ದೈವಾತ್ ಒಬ್ಬಳು ಕಾಮಾರ್ತಳಾಗಿ ಸ್ವಯಂ ಏಕಾಂತದಲ್ಲಿ ಬಂದರೆ ಜಿತೇಂದ್ರಿಯರು ಬಿಡುವಂತಿಲ್ಲ. ಬಿಟ್ಟರೆ ಪರದಲ್ಲಿ ನರಕ ಲಭಿಸುತ್ತದೆ. ಅವಳು ದುಃಖಾರ್ತಳಾಗುತ್ತಾಳೆ. ಶಾಪನೀಡುತ್ತಾಳೆ. ಆದರೆ ತನ್ನ ಪತ್ನಿಯನ್ನು ತೊರೆದು ಅನ್ಯ ಸ್ತ್ರೀಯನ್ನು ಲೋಭದಿಂದಲೋ ಸುಖದಾಸೆಯಿಂದಲೋ ಪರಿಗ್ರಹಿಸಿದರೆ ಅವನು ಅಧಮನೆನ್ನುವಲ್ಲಿ ಸಂಶಯವಿಲ್ಲ. ಅವನು ತನ್ನ ವಂಶದ ಹಿಂದಿನ ಹತ್ತು ಮುಂದಿನ ಹತ್ತು ತಲೆಮಾರಿನವರನ್ನು ನರಕದಲ್ಲಿ ಬೀಳಿಸಿ ತಾನೂ ಬೀಳುತ್ತಾನೆ. ಯಾವ ಹೆಣ್ಣು ತನ್ನ ಪತಿಯನ್ನು ತೊರೆದು ಪರಪುರುಷನನ್ನು ಕಾಮಿಸುವಳೋ ಅವಳು ಕುಲಸ್ತ್ರೀ ಎನಿಸುವುದಿಲ್ಲ. ಉಪಾಯದಿಂದ ಪರಪುರುಷನನ್ನು ಯಾವ ಕುಲಸ್ತ್ರೀ ವಶೀಕರಿಸಿಕೊಳ್ಳುವಳೊ ಅವಳು ಚಂದ್ರಸೂರ್ಯರಿರುವಷ್ಟು ಕಾಲವೂ ನರಕದಲ್ಲಿ ಬೀಳುವಳು. ಆದರೆ ಹಾಗೆ ಮಾಡುವ ಅಪ್ಸರೆ ಅದು ಅವಳ ಕುಲಧರ್ಮವಾದ್ದರಿಂದ ಸ್ವರ್ಗವನ್ನೆ ಹೊಂದುವಳು. ಅವಳನ್ನು ಅವಮಾನಿಸಿದ ಪುರುಷನೇ ಅಪರಾಧಿ ಎನಿಸುತ್ತಾನೆ. ಅದರಿಂದ ನೀನು ಅಪ್ಸರೆಯ ಶಾಪದಿಂದ ಮುಕ್ತನಾಗಲು ಒಂದು ಉಪಾಯ ಮಾಡುತ್ತೇನೆ. ಒಂದು ಕ್ಷಣ ಇರು.'

ಅಷ್ಟರಲ್ಲಿ ಒಬ್ಬ ದ್ವಾರಪಾಲಕ ಹರಿಯ ಮುಂದೆ ಬಂದು ನಿಂತು ತಲೆಬಾಗಿ ನುಡಿದ.

**ದ್ವಾರಪಾಲಕ:-** ಬೇರೆ ಬ್ರಹ್ಮಾಂಡದ ಅಧಿಪತಿಯಾದ ದಶಮುಖ ಬ್ರಹ್ಮ ದ್ವಾರದಲ್ಲಿ ನಿಂತಿದ್ದಾನೆ. ಮಹಾ ಭಕ್ತನಾದ ಆತ ತಮ್ಮ ದರ್ಶನವನ್ನು ಬಯಸಿದ್ದಾನೆ.

ದ್ವಾರಪಾಲನ ಮಾತು ಕೇಳಿ ಹರಿ ಅವನಿಗೆ ಒಳಗೆ ಬರಲು ಅನುಮತಿ ನೀಡಿದ. ಆತ ಬಂದು ಭಕ್ತಿಯಿಂದ ಸ್ತೋತ್ರಗೈದ. ಅವನು ಮಾಡಿದ ಸ್ತೋತ್ರಗಳು ಅತಿ ವಿಚಿತ್ರಗಳಾಗಿದ್ದುವು. ಚತುರ್ಮುಖನೆಂದೂ ಅವುಗಳನ್ನು ಕೇಳಿರಲಿಲ್ಲ. ಸ್ತೋತ್ರ ಮಾಡಿ ಆ ದಶಮುಖಬ್ರಹ್ಮ ವಿಷ್ಣುವಿನಾಜ್ಞೆಯಿಂದ ಚತುರ್ಮುಖನನ್ನು ಹಿಂದೆ ಹಾಕಿ ಕುಳಿತ. ನಾರಾಯಣ ದ್ವಾರಪಾಲಕನಿಗೆ ಬಂದ ಅತಿಥಿಗಳನ್ನು ಒಳಗೆ ಕಳುಹಿಸೆಂದು ಆದೇಶಿಸಿದ.

ಆಗ ಶತಮುಖಬ್ರಹ್ಮ ಬಂದು ಯಾರೂ ಕೇಳಿರದ ನಿಗೂಢ ಅತಿ ಸುಂದರ ದಿವ್ಯ ಸ್ತೋತ್ರಗಳಿಂದ ಸ್ತೋತ್ರಮಾಡಿ ದಶಮುಖ ಚತುರ್ಮುಖರಿಗಿಂತಲೂ ಮುಂದೆ ಸಭೆಯಲ್ಲಿ ಕುಳಿತ. ಅಷ್ಟರಲ್ಲಿ ಇನ್ನೊಂದು ಬ್ರಹ್ಮಾಂಡಾಧಿಪತಿಯಾದ ಸಹಸ್ರಮುಖ ಬ್ರಹ್ಮ ಬಂದು ಯಾರೂ ಕೇಳಿರದ ಶ್ರೇಷ್ಠವಾದ ಸ್ತೋತ್ರಗಳಿಂದ ಸ್ತೋತ್ರ ಮಾಡಿ ಎಲ್ಲರಿಗಿಂತ ಮುಂದೆ ಕುಳಿತ. ಹರಿ ಆ ಎಲ್ಲ ಬ್ರಹ್ಮರಿಂದಲೂ ಕ್ರಮವಾಗಿ ವಾರ್ತೆಗಳನ್ನು ಕೇಳಿ ವಿಚಾರಿಸಿದ. ಆಗ ಚತುರ್ಮುಖನಿಗೆ ಅವರನ್ನು ಕಂಡು ದರ್ಪಭಂಗವಾಯಿತು. ಆತ ಹಿಂದೆ ದರ್ಪದಿಂದ ತನ್ನನ್ನು ವಿಷ್ಣುಸದೃಶನೆಂದು ತಿಳಿದಿದ್ದ. ಇನ್ನೂ ಬೇರೆ ಬ್ರಹ್ಮಾಂಡಗಳಲ್ಲಿದ್ದ ಬೇರೆ ಬ್ರಹ್ಮರನ್ನು ಹರಿ ತೋರಿಸಲಿಲ್ಲ. ಏಕೆಂದರೆ ಅಷ್ಟರಲ್ಲಿಯೆ ಚತುರ್ಮುಖ ದರ್ಪ ಕಳೆದುಕೊಂಡು ಸೋತು ಮೃತತುಲ್ಯನಂತಾಗಿದ್ದ. ನೋಡಿ ಕನಿಕರದಿಂದ ಹರಿ ಅಷ್ಟಕ್ಕೇ ನಿಲ್ಲಿಸಿದ. ವಸ್ತುತಃ ನಾರಾಯಣನ ಮೈಯಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ಸಂಖ್ಯೆಯಲ್ಲಿ ಬ್ರಹ್ಮಾಂಡಗಳಿವೆ, ಬ್ರಹ್ಮರಿದ್ದಾರೆ. ಬೇರೆ ಬ್ರಹ್ಮರೆಲ್ಲರೂ ಹರಿಯನ್ನು ನಮಿಸಿ ಹೊರಟು ಹೋದಾಗ ಚತುರ್ಮುಖನಿಗೆ ಜ್ಞಾನೋದಯವಾಯಿತು, ತಾನು ಆಳುವ ಪ್ರದೇಶ ಎಷ್ಟು ಸೀಮಿತವಾದುದು ಎಂದು. ಆತ ಲಜ್ಜೆಯಿಂದ ತಲೆಬಾಗಿ ಹರಿಯನ್ನು ವಂದಿಸಿದ. ಹರಿ ಕೇಳಿದ, 'ಬ್ರಹ್ಮ ನೀನೀಗ ಸ್ವಪ್ನದಂತೆ ಅದ್ಭುತ ಒಂದನ್ನು ಕಂಡೆ ತಾನೆ?' ಬ್ರಹ್ಮನೆಂದ, 'ಪ್ರಭು, ಭೂತ ಭವ್ಯ ಭವಿಷ್ಯವೆಲ್ಲವನ್ನೂ ಕಂಡೆ. ಎಲ್ಲ ನಿನ್ನ ಮಾಯೆ' ಹೀಗೆ ಹೇಳಿ ಬ್ರಹ್ಮ ಸಭೆಯಲ್ಲಿ ಲಜ್ಜಿತನಾಗಿ ಕುಳಿತ. ಸರ್ವಾಂತರ್ಯಾಮಿ ಹರಿ ಅವನಿಗೆ ಒಂದು ಉಪಾಯವನ್ನು ನಿರ್ಮಿಸಿದ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ*
*ನಾರಾಯಣನಾರದಸಂವಾದದಲ್ಲಿ ಮೋಹಿನೀಶಾಪ ಬ್ರಹ್ಮದರ್ಪಭಂಗವೆಂಬ*
*ಮೂವತ್ತಮೂರನೆ ಅಧ್ಯಾಯ ಮುಗಿದುದು*

—o—

**ಶ್ರೀಕೃಷ್ಣ:-** ಇದೇ ಸಮಯದಲ್ಲಿ ವೈಕುಂಠಕ್ಕೆ ಶಂಕರ ವೃಷಭವಾಹನನಾಗಿ ಬಂದ. ವಿಭೂತಿ ಬಳಿದುಕೊಂಡು ನಾಗಯಜ್ಞೋಪವೀತ ಧರಿಸಿ ವ್ಯಾಘ್ರಚರ್ಮ ಉಟ್ಟು ತ್ರಿಶೂಲ ಪಟ್ಟಿಶ ಖಟ್ವಾಂಗ ಹಿಡಿದು ಆತ ಬಂದಿದ್ದ. ಕೈಯಲ್ಲಿ ರತ್ನನಿರ್ಮಿತವಾದ ಸ್ವರಯಂತ್ರವನ್ನೂ ಹಿಡಿದಿದ್ದ. ವಾಹನದಿಂದ ಇಳಿದು ಭಕ್ತಿಯಿಂದ ಕಮಲಾಕಾಂತನನ್ನು ನಮಿಸಿ ಎಡಬದಿಯಲ್ಲಿ ಕುಳಿತ. ಎಲ್ಲ ಮುನಿಗಳು ಇಂದ್ರಾದಿದೇವತೆಗಳು ಆದಿತ್ಯರು ವಸುಗಳು ರುದ್ರರು ಮನುಗಳು ಸಿದ್ಧರು ಚಾರಣರು ಮುಂತಾದವರೂ ಬಂದರು. ಮೈಯೆಲ್ಲ ರೋಮಾಚಗೊಂಡು ಪುರುಷೋತ್ತಮನನ್ನು ಸ್ತುತಿಸಿದರು. ಶಿವನನ್ನೂ ಎಲ್ಲರೂ ತಲೆಬಾಗಿ ನಮಿಸಿದರು.

ಆಗ ಶಂಕರ ಸಂಗೀತವನ್ನು ಹಾಡಿದ. ಸ್ವರಯಂತ್ರಸಹಿತವಾಗಿ ತಾಲಬದ್ಧವಾಗಿ ನಮ್ಮಿಬ್ಬರ ರಾಸಲೀಲೆಯ ಕುರಿತು ಸುಂದರವಾಗಿ ಸಮಯೋಚಿತ ರಾಗದಿಂದ ಹಾಡಿದ. ಎಲ್ಲರೂ ಕೇಳಿ ಮೈಮರೆತರು. ಎಲ್ಲರೂ ರುದ್ರರೂಪರಾದರು. ನಾರಾಯಣ ಲಕ್ಷ್ಮಿಯರೂ ರುದ್ರರೂಪ ತಾಳಿದರು. ವೈಕುಂಠವೆಲ್ಲ ಜಲಮಯವಾಯಿತು. ಆಗ ನಾನು ಎಲ್ಲರ ಮೂರ್ತಿಗಳನ್ನು ನಿರ್ಮಿಸಿದೆ. ಅದೇ ಆಕಾರ ಅದೇ ಆಯುಧ ಅದೇ ವಾಹನ ಭೂಷಣಗಳು. ಅವರನ್ನು ವೈಕುಂಠದ ನಾಲ್ಕು ದ್ವಾರಗಳಲ್ಲಿ ನಿಲ್ಲಿಸಿದೆ. ಆಗ ಆ ಜಲಕ್ಕೆ ಅಧಿಷ್ಠಾತ್ರಿದೇವಿ ಬಂದಳು. ದೇವತೆಗಳ ಮೈಯಿಂದ ಬಂದುದರಿಂದ **ಸುರನದಿ** ಎನಿಸಿದಳು. ಅವಳು ಮುಮುಕ್ಷುಗಳಿಗೆ ಮುಕ್ತಿಯನ್ನೂ ಭಕ್ತರಿಗೆ ಹರಿಭಕ್ತಿಯನ್ನೂ ಕೊಡುವಳು. ಪಾಪಿಗಳ ಕೋಟಿ ಜನ್ಮಾರ್ಜಿತವಾದ ವಿವಿಧ ಪಾಪಗಳನ್ನು ತನ್ನ ಸಂಪರ್ಕ ಹೊಂದಿದ ವಾಯುವಿನ ಸ್ಪರ್ಶಮಾತ್ರದಿಂದಲೆ ಕಳೆಯುವಳು. ಇನ್ನು ದರ್ಶನ ಸ್ಪರ್ಶನಗಳಿಗೆ ಫಲವನ್ನೇನು ಹೇಳಲಿ? ಸ್ನಾನದ ಫಲವನ್ನು ಏನು ಹೇಳಲಿ? ಭೂಮಿಯಲ್ಲಿ ಎಲ್ಲ ತೀರ್ಥಗಳಿಗಿಂತ ಶ್ರೇಷ್ಠ ಪುಷ್ಕರ. ಅದೂ ಕೂಡ ಗಂಗೆಯ ಹದಿನಾರನೆ ಒಂದಂಶಕ್ಕೆ ಸಮವಲ್ಲ. ಭಗೀರಥ ಭೂಮಿಗೆ ಇಳಿಸಿದುದರಿಂದ **ಭಾಗೀರಥಿ** ಎನಿಸಿದಳು. ಭೂಮಿಗೆ ಬಂದುದರಿಂದ **ಗಂಗೆ** ಎನಿಸಿದಳು. ಜಹ್ನುಮುನಿ ಕೋಪದಿಂದ ಕುಡಿದು ಜಾನುವಿನಿಂದ ಹೊರಗೆ ಬಿಟ್ಟುದರಿಂದ ಜಹ್ನುಕನ್ಯೆ ಎನಿಸಿ **ಜಾಹ್ನವಿ** ಎಂದು ಪ್ರಸಿದ್ಧಳಾದಳು. ಒಬ್ಬ ವಸು ಭೀಷ್ಮನಾಗಿ ಗಂಗೆಯಲ್ಲಿ ಅವತರಿಸಿದ. ಅದರಿಂದ ಅವಳು **ಭೀಷ್ಮಜನನಿ** ಎನಿಸಿದಳು. ಮೂರು ಪ್ರವಾಹಗಳಿಂದ ಸ್ವರ್ಗಭೂಮಿ ಅತಲ ಲೋಕಗಳಲ್ಲಿ ನನ್ನಾಜ್ಞೆಯಿಂದ ಹರಿಯುತ್ತ **ತ್ರಿಪಥಗಾ** ಎನಿಸಿದಳು. ಮುಖ್ಯಪ್ರವಾಹ ಸ್ವರ್ಗದಲ್ಲಿ ಹರಿಯುತ್ತಿದೆ. **ಮಂದಾಕಿನೀ** ಎಂದು ಹೆಸರು. ಅದರ ವಿಸ್ತಾರ ಹತ್ತುಸಾವಿರಯೋಜನ. ಅಗಲ ಒಂದು ಯೋಜನ. ಹಾಲಿನಂತೆ ಬಿಳಿಯಾದ ನೀರು. ಉನ್ನತ ತರಂಗಗಳಿವೆ. ವೈಕುಂಠದಿಂದ ಬ್ರಹ್ಮಲೋಕಕ್ಕೂ ಅಲ್ಲಿಂದ ಸ್ವರ್ಗಕ್ಕೂ ಹರಿದು ಬಂದಿದೆ. ಸ್ವರ್ಗದಿಂದ ಹಿಮಾಲಯದ ಮಾರ್ಗವಾಗಿ ಭೂಮಿಗೆ ಇಳಿದು ಲವಣಸಮುದ್ರವನ್ನು ಸೇರುತ್ತದೆ. ಇದು **ಅಲಕನಂದಾ** ಎನಿಸಿದೆ. ಸ್ಫಟಿಕದಂತೆ

ಸ್ವಚ್ಛವಾದುದು ಇದರ ನೀರು. ಬಹು ವೇಗ ಉಳ್ಳದ್ದು. ಪಾಪಿಗಳ ಪಾಪವೆಂಬ ಉರುವಲನ್ನು ಸುಡುವ ಬೆಂಕಿಯಂತಿದೆ ಈ ನೀರು. ಸಗರ ಪುತ್ರರಿಗೆ ಮೋಕ್ಷನೀಡಿದೆ. ವೈಕುಂಠಕ್ಕೆ ಹೋಗುವವರಿಗೆ ಸೋಪಾನದಂತಿದೆ. ಅದರಿಂದ ಮರಣಕಾಲದಲ್ಲಿ ಸಜ್ಜನರಿಗೆ ಮೊದಲಿಗೆ ಪಾದಗಳಿಗೆ ಪ್ರೋಕ್ಷಣೆ ಮಾಡಿ ಬಾಯಲ್ಲಿ ಈ ನೀರನ್ನು ಸುರಿಯುತ್ತಾರೆ. ಗಂಗೆ ಎಂಬ ಸೋಪಾನ ಮಾರ್ಗದಿಂದಲೆ ಸಜ್ಜನರು ಬ್ರಹ್ಮಲೋಕ ಪರ್ಯಂತ ಏರುತ್ತಾರೆ. ಮೈಯಲ್ಲಿರುವ ರೋಮ ಸಂಖ್ಯೆಯಷ್ಟು ವರ್ಷ ವಿಷ್ಣುಲೋಕದಲ್ಲಿ ಸುಖಪಡುತ್ತಾರೆ. ಬಳಿಕ ಪುಣ್ಯಕರ್ಮಿಗಳ ಮನೆಯಲ್ಲಿ ಭಾರತದೇಶದಲ್ಲಿ ಹುಟ್ಟಿ ನಿಶ್ಚಲ ಭಕ್ತಿ ಪಡೆದು ನನ್ನ ಪಾರ್ಷದರಾಗುತ್ತಾರೆ. ದ್ವಿಜರು ಮರಣ ಹೊಂದಿದಾಗ ಅವರ ಶವವನ್ನು ಶೂದ್ರರು ಹೊತ್ತು ಒಯ್ದರೆ ಅವರು ಎಷ್ಟು ಹೆಜ್ಜೆಗಳನ್ನಿಡುವರೋ ಅಷ್ಟು ವರ್ಷ ಮೃತನಿಗೆ ನರಕವಾಸ. ಅದರಿಂದ ಅಂಥವರಿಗೂ ಗಂಗೆ ಉಪಕಾರ ಮಾಡುತ್ತಾಳೆ. ಕರುಣಾಮಯಿಯಾದ ಅವಳು ಕ್ರಮವಾಗಿ ಮುಕ್ತಿ ತಂದೀಯುತ್ತಾಳೆ. ಮೊದಲಿಗೆ ಭಾರತದೇಶದಲ್ಲಿ ಪುಣ್ಯಕರ್ಮಿಗಳ ಮನೆಯಲ್ಲಿ ಹುಟ್ಟುವಂತೆ ಮಾಡಿ ಮೂರು ಜನ್ಮಗಳಲ್ಲಿ ನಿಶ್ಚಿತವಾಗಿ ವೈಕುಂಠವನ್ನು ದೊರಕಿಸುತ್ತಾಳೆ. ಶುದ್ಧಿಗಾಗಿ ಯಾತ್ರೆ ಮಾಡಿ ಗಂಗಾಸ್ನಾನ ಮಾಡುವುದರಿಂದ ಎಷ್ಟು ಹೆಜ್ಜೆ ನಡೆದಿರುವನೋ ಅಷ್ಟು ವರ್ಷಗಳ ಕಾಲ ವೈಕುಂಠದಲ್ಲಿ ವಾಸಮಾಡುತ್ತಾನೆ.

**ಕಲೌ ಪಂಚಸಹಸ್ರಾಬ್ದಂ ಸ್ಥಿತಿಸ್ತಸ್ಯಾಶ್ಚ ಭಾರತೇ ।**
**ತಸ್ಯಾಂ ಚ ವಿದ್ಯಮಾನಾಯಾಂ ಕಃ ಪ್ರಭಾವಃ ಕಲೇರಹೋ ॥**
**ಕಲೌ ದಶಸಹಸ್ರಾಣಿ ವರ್ಷಾಣಿ ಪ್ರತಿಮಾ ಮಮ।**
**ತಿಷ್ಠಂತಿ ಚ ಪುರಾಣಾನಿ ಪ್ರಭಾವಸ್ತತ್ರ ಕಃ ಕಲೇಃ ॥**

ಕಲಿಯುಗದಲ್ಲಿ ಐದುಸಾವಿರ ವರ್ಷಗಳ ಕಾಲ ಗಂಗೆ ಭಾರತದೇಶದಲ್ಲಿ ಹರಿಯುವಳು. ಅವಳು ಹರಿಯುತ್ತಿರುವಾಗ ಕಲಿಯ ಪ್ರಭಾವವೇನು? ಕಲಿಯುಗದಲ್ಲಿ ಹತ್ತು ಸಾವಿರ ವರ್ಷಕಾಲ ಹರಿಯ ಪ್ರತಿಮೆಗಳಿರುತ್ತವೆ. ಪುರಾಣಗಳೂ ಇರುತ್ತವೆ. ಆಗ ಕಲಿಯ ಪ್ರಭಾವವೇನು?

ಅತಲಕ್ಕೆ ಹೋಗುವ ಗಂಗಾ ಪ್ರವಾಹಕ್ಕೆ **ಭೋಗವತಿ** ಎಂದು ಹೆಸರು. ಅದರ ನೀರು ನೊರೆಯಂತೆ. ಬಲುವೇಗ ಉಳ್ಳದ್ದು. ಅಮೂಲ್ಯ ರತ್ನಗಳಿಗೆ ಮಣಿಗಳಿಗೆ ಆಕರವಾಗಿರುತ್ತದೆ. ಅದರ ತೀರದಲ್ಲಿ ನಾಗಕನ್ಯೆಯರು ವಿಹರಿಸುತ್ತಾರೆ. ಸ್ವಯಂ ಗಂಗೆ ವೈಕುಂಠದ ಸುತ್ತಲೂ ಸಾವಿರಯೋಜನ ಅಗಲ, ಲಕ್ಷಯೋಜನ ಉದ್ದಕ್ಕೆ ಹರಿಯುತ್ತಾಳೆ. ಅವಳು ನನ್ನ ಮಗಳು, ಪ್ರಳಯದಲ್ಲಿಯೂ ಅವಳಿಗೆ ಅಳಿವಿಲ್ಲ. ಅವಳ ತೀರ ನಾನಾ ರತ್ನಗಳಿಗೆ ಆಕರ, ಮನೋಹರ. ಇದು ಜಾಹ್ನವೀ ಜನ್ಮದ ಪುಣ್ಯಕಥೆ, ಮತ್ತು ಮೋಹಿನೀ ಶಾಪಕ್ಕೆ ಪ್ರತಿಯಾಗಿ ಬ್ರಹ್ಮನ ಪ್ರತೀಕಾರ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ*
*ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ*
*ಜಾಹ್ನವೀಜನ್ಮಪ್ರಸ್ತಾವವೆಂಬ ಮೂವತ್ತನಾಲ್ಕನೆ ಅಧ್ಯಾಯ ಮುಗಿಯಿತು*

**ಶ್ರೀಕೃಷ್ಣ**:-ನಾರಾಯಣಕೃಪೆಯಿಂದಗಂಗೆಯನ್ನುನೋಡಿಪುನಃಬ್ರಹ್ಮನಿಗೆನುಡಿದ.

**ನಾರಾಯಣ**:- ಬ್ರಹ್ಮ ಏಳು, ನಿನಗೆ ಒಳ್ಳೆಯದಾಗಲಿ. ಅಪ್ಸರೆಯ ಶಾಪಕ್ಕೊಳಗಾದ ನೀನು ಈ ಗಂಗೆಯಲ್ಲಿ ಸ್ನಾನ ಮಾಡಿ ಶುದ್ಧನಾಗು. ನೀನು ಸ್ವತಃ ಶುದ್ಧನೆ. ಆದರೆ ನಿನ್ನ ಸ್ಪರ್ಶವನ್ನು ಎಲ್ಲ ತೀರ್ಥಗಳೂ ಬಯಸುತ್ತವೆ. ನಿನ್ನ ಶಾಪವೂ ದೂರವಾಗುತ್ತದೆ. ಅದರಿಂದ ಸ್ನಾನಮಾಡು. ಪ್ರಕೃತಿಗೆ ಅಪರಾಧ ಮಾಡಿದ್ದರಿಂದ ನಿನಗೆ ಶಾಪ ಬಂದಿತು. ಅಹಂಕಾರವೆ ಎಲ್ಲರಿಗೂ ಪಾಪಬೀಜ, ಅಮಂಗಳಕರ. ಆದರಿಂದ ಸ್ನಾನ ಮಾಡಿ ಗೋಲೋಕಕ್ಕೆ ಹೋಗು ಅಲ್ಲಿ ಪ್ರಕೃತಿಯ ಅಂಶಳಾದ ಮಂಗಳದಾಯಕಳಾದ ಸರಸ್ವತಿಯನ್ನು ಪಡೆಯುವೆ. ಆ ಮೂಲಕ ಸೃಷ್ಟಿಬೀಜ ರೂಪಳಾದ ಪ್ರಕೃತಿಯನ್ನು ಸೇವಿಸುವೆ. ಏನಾಶ್ಚರ್ಯ! ಕಲ್ಪಾಂತ ಪರ್ಯಂತ ನೀನು ತಪಸ್ಸು ಮಾಡಿರುವೆ. ಆದರೆ ನಿನಗೆ ಅಪ್ಸರೆಯ ಶಾಪದಿಂದಾಗಿ ನಿನ್ನ ಮಂತ್ರವನ್ನು ಯಾರೂ ಸ್ವೀಕರಿಸುವುದಿಲ್ಲ ಎಂದಾಯಿತು.

ಹೀಗೆ ನಾರಾಯಣನ ಆಜ್ಞೆಯನ್ನು ಸ್ವೀಕರಿಸಿ ಬ್ರಹ್ಮ ಗಂಗಾಸ್ನಾನ ಮಾಡಿ ಗೋಲೋಕಕ್ಕೆ ಬಂದು ನನ್ನನ್ನು ನಮಿಸಿದ. ಮುನಿಗಳೂ ದೇವತೆಗಳೂ ನನ್ನ ನಿರ್ಮಲಯಶಸ್ಸನ್ನು ಗಾನಮಾಡುತ್ತ ತಮ್ಮ ಲೋಕಗಳಿಗೆ ಹೋದರು. ಬ್ರಹ್ಮ ಗೋಲೋಕದಲ್ಲಿ ಸರ್ವವಿದ್ಯಾಧಿದೇವಿಯಾಗಿ ನನ್ನ ಮುಖದಿಂದ ಉದಿಸಿದ್ದ ಸರಸ್ವತಿಯನ್ನು ಹೊಂದಿ ಸಂತುಷ್ಟನಾಗಿ ಪುನಃ ತನ್ನ ಬ್ರಹ್ಮಲೋಕಕ್ಕೆ ಹಿಂತಿರುಗಿದ.

ಬ್ರಹ್ಮಲೋಕದ ಪ್ರಜೆಗಳು ಸರಸ್ವತಿಯನ್ನು ಕಂಡು ಆಶ್ಚರ್ಯ ಭರಿತರಾದರು. ಅವಳು ಅತ್ಯಂತ ಸುಂದರಿ. ಶುಭ್ರವರ್ಣದವಳು, ನಗುಮೊಗದವಳು. ಅವಳ ಮುಖ ಚಂದ್ರನಂತೆ, ಕಣ್ಣು ಕಮಲಗಳಂತೆ. ತುಟಿಗಳು ತೊಂಡೆ ಹಣ್ಣಿನಂತೆ. ದಂತಪಂಕ್ತಿ ಮುತ್ತಿನ ಸಾಲಿನಂತೆ. ರತ್ನದ ಬಳೆ ಕಾಲ್ಗೆಜ್ಜೆಗಳಿಂದ, ರತ್ನ ಕುಂಡಲಗಳಿಂದ, ರತ್ನಹಾರಗಳಿಂದ ಶೋಭಿಸುವವಳು. ಬಿಳಿಸೀರೆಯುಟ್ಟ ನವಯುವತಿ. ಪುಷ್ಟವಾದ ಸ್ತನ ನಿತಂಬಗಳುಳ್ಳವಳು. ಕೈಗಳಲ್ಲಿ ವೀಣೆ ಪುಸ್ತಕ ಜ್ಞಾನಮುದ್ರೆ ವರಗಳನ್ನು ಹಿಡಿದಿದ್ದಾಳೆ. ಪ್ರಜೆಗಳು ಆನಂದದಿಂದ ಬ್ರಹ್ಮ ಸರಸ್ವತಿಯರಿಗೆ ಪುರಪ್ರವೇಶ ಮಾಡಿಸಿದರು. ಬ್ರಹ್ಮ ಅವಳೊಡನೆ ಹಗಲು ರಾತ್ರಿ ವಿಹಾರ ಮಾಡಿದ. ಸುಖ ಭೋಗದಲ್ಲಿ ಮಗ್ನನಾದ.

**ನಾರಾಯಣ**:- ಶ್ರೀಕೃಷ್ಣನ ಈ ಮಾತನ್ನು ಕೇಳಿ ರಾಧೆ ಪುನಃ ಕೇಳಿದಳು.

**ರಾಧೆ**:- ಬ್ರಹ್ಮ ತಾನಾಗಿ ಬಂದ ಅಪ್ಸರೆಯನ್ನು ತಿರಸ್ಕರಿಸಲು ಏನು ಕಾರಣ? ಅವಳು ಬ್ರಹ್ಮನ ಬಳಿಗೆ ಬಂದುದು ಕರ್ಮಕ್ಷೇತ್ರದಲ್ಲಿ ಅಲ್ಲ. ಬ್ರಹ್ಮ ಕರ್ಮಗಳಿಗೆ

ಫಲದಾತ. ಅವನಿಗೆ ಇಷ್ಟೂ ತಿಳಿಯದೆ? ತಾನಾಗಿ ಬಂದ ಹೆಣ್ಣನ್ನು ನಿರಾಕರಿಸಿದರೆ ಹೆಣ್ಣಿಗೆ ಬಹಳ ಹಿಂಸೆಯಾಗುತ್ತದೆ. ಇದನ್ನು ತಿಳಿದೂ ಬ್ರಹ್ಮ ಮೋಹಿನಿಯನ್ನು ಹೇಗೆ ನಿರಾಕರಿಸಿದ?

**ನಾರಾಯಣ:-** ರಾಧೆಯ ಮಾತನ್ನು ಕೇಳಿ ಕೃಷ್ಣ ನಕ್ಕು ಪಾದ್ಮಕಲ್ಪದ ವೃತ್ತಾಂತವನ್ನು ಹೇಳಿದ.

**ಶ್ರೀಕೃಷ್ಣ:-** ರಾಧೆ ಕೇಳು, ಹಿಂದಿನ ವೃತ್ತಾಂತ ಒಂದನ್ನು ಹೇಳುತ್ತೇನೆ. ಇದು ಗೋಪ್ಯವಾದುದು. ಎಲ್ಲರಿಗೂ ಹೇಳತಕ್ಕದಲ್ಲ. ಒಮ್ಮೆ ಬ್ರಹ್ಮನಿಗೆ ನಾನು ಸೃಷ್ಟಿ ಮಾಡೆಂದು ಆಜ್ಞಾಪಿಸಿದೆ. ಆಗ ಅವನು ಮನಸಿನಿಂದ ಬ್ರಹ್ಮತೇಜಸ್ಸಿನಿಂದ ಜ್ವಲಿಸುವ ಪುತ್ರರನ್ನು ಸೃಜಿಸಿದ. ಸನಕ ಸನಂದ ಸನಾತನ ಸನತ್ಕುಮಾರ ವೋಢು ಕವಿ ಪಂಚಶಿಖ ಅಸಿತ ಕಪಿಲ ಸಿದ್ಧ - ಇವರೆಲ್ಲ ಐದು ವರ್ಷದ ಬಾಲಕರು. ನೀವು ಸೃಷ್ಟಿ ಮಾಡಿರೆಂದು ಬ್ರಹ್ಮ ಆಜ್ಞಾಪಿಸಿದಾಗ ಇವರು ತಂದೆಯ ಆಜ್ಞೆಗೆ ಬೆಲೆ ಕೊಡದೆ ನನ್ನ ಅರ್ಚನೆ ಮಾಡಲು ತಪಸ್ಸಿಗೆ ಹೊರಟರು. ಬ್ರಹ್ಮ ಕುಪಿತನಾಗಿ ಪುನಃ ಬೇರೆ ಮಕ್ಕಳನ್ನು ಕೋಪದಿಂದಲೇ ಹುಟ್ಟಿಸಿದ. ಅವರೇ ಏಕಾದಶ ರುದ್ರರು. ಅವರ ರೂಪ ಭಯಂಕರ ಮತ್ತು ಅವರು ಅಳುತ್ತಿದ್ದರು. ಅದರಿಂದ ರುದ್ರರೆನಿಸಿದರು. ಬಳಿಕ ಬ್ರಹ್ಮ ತನ್ನ ಮೈಯಿಂದ ವಸಿಷ್ಠ ಪುಲಹ ಕ್ರತು ಅಂಗಿರಸ ಭೃಗು ಅತ್ರಿ ಪುಲಸ್ತ್ಯ ದಕ್ಷ ಕರ್ದಮ ಮರೀಚಿ ಇವರನ್ನು ಸೃಜಿಸಿ ಸೃಷ್ಟಿ ಮಾಡಿರೆಂದು ಆಜ್ಞಾಪಿಸಿ ಪುನಃ ಒಬ್ಬ ಮಗನನ್ನೂ ಮಗಳನ್ನೂ ಹುಟ್ಟಿಸಿದ. ಅವರೆ ಮನ್ಮಥ ಮತ್ತು ರತಿ. ಈ ರತಿ ಹದಿನಾರರ ಹರೆಯದ ಕನ್ಯೆ. ಮನ್ಮಥನೂ ತೇಜಸ್ವಿ. ಆತ್ಮಾರಾಮ, ನನ್ನ ಕಲಾಂಶಭೂತ, ಮನೋಹರ ರೂಪದವ.

**ಬ್ರಹ್ಮ** ಮನ್ಮಥನಿಗೆ ನುಡಿದ - ಸ್ತ್ರೀ ಪುರುಷರು ಒಂದಾಗಿ ವಿಹರಿಸಲಿ ಎಂಬ ಉದ್ದೇಶದಿಂದ ನಾನು ನಿನ್ನನ್ನು ಹುಟ್ಟಿಸಿದ್ದೇನೆ. ಎಲ್ಲರ ಹೃದಯದಲ್ಲಿ ನೀನು ನೆಲೆಸುವಿ. ಸಂಮೋಹನ, ಸಮುದ್ವೇಗ, ಸ್ತಂಭನ, ಉನ್ಮಾದನ, ಚೇತನಹರಣ ಎಂಬ ಐದು ಬಾಣಗಳನ್ನು ನಾನು ನಿನಗೆ ಕೊಡುತ್ತೇನೆ. ನಿನ್ನನ್ನು ಯಾರೂ ತಡೆದುಕೊಳ್ಳಲಾಗದಂತೆ ವರವನ್ನೂ ಕೊಡುತ್ತೇನೆ.

ಬ್ರಹ್ಮ ಹೀಗೆ ಹೇಳಿ ಬಾಣಗಳನ್ನೂ ವರವನ್ನೂ ಕೊಟ್ಟು ಮಗಳನ್ನು ನೋಡಿ ಅವಳಿಗೂ ವರ ನೀಡಲು ಉದ್ಯುಕ್ತನಾದ. ಆದರೆ ಅಷ್ಟರಲ್ಲಿ ಮನ್ಮಥ ತನ್ನ ಬಾಣಗಳನ್ನು ಪರೀಕ್ಷಿಸಬೇಕೆಂದು ಬ್ರಹ್ಮನ ಮೇಲೆ ಎಸೆದ. ಮಂತ್ರಪೂತವಾದ ಆ ಬಾಣಗಳನ್ನು ಯಾರಿಗೂ ತಡೆದುಕೊಳ್ಳಲಾಗದು. ಅದರಿಂದ ಬ್ರಹ್ಮನೂ ಅದರ ಆಘಾತಕ್ಕೆ ಸಿಲುಕಿ ಮೈ ಮರೆತ. ಕ್ಷಣದಲ್ಲಿ ಎಚ್ಚೆತ್ತು ತನ್ನ ಮುಂದೆ ನಿಂತಿದ್ದ ಮಗಳನ್ನು ಕಂಡ. ಅವಳ ಸಂಗ ಮಾಡಲು ಬಯಸಿದ. ಅವಳು ಭಯದಿಂದ ಓಡಿದಳು. ಹಿಂದಿನಿಂದ ಬ್ರಹ್ಮ ಬೆನ್ನಟ್ಟಿ ಬಂದ. ಅವಳು ತಪಸ್ವಿಗಳಾದ ಸೋದರರನ್ನು ಮೊರೆಹೊಕ್ಕಳು. ಅವರು ರತಿಯನ್ನು ತಮ್ಮ ಬಳಿ ನಿಲ್ಲಿಸಿಕೊಂಡು ತಂದೆಯಾದ ಬ್ರಹ್ಮನಿಗೆ ಕೋಪದಿಂದ ಹೇಳಿದರು.

**ಋಷಿಗಳು:-** ಅಯ್ಯೋ, ತಂದೆ, ಇದೇನು ಕುಕೃತ್ಯವನ್ನು ಮಾಡುತ್ತಿರುವೆ? ನೀನು ಜಗತ್ತಿಗೆ ವಿಧಾತ, ನೀಚಕರ್ಮ ಮಾಡುತ್ತಿರುವೆ. ಸಜ್ಜನರು ಪರಸ್ತ್ರೀಯನ್ನು

ತಾಯಿಯಂತೆ ಕಾಣುವರು. ಮಗಳು ಮಾತೃವರ್ಗದಲ್ಲಿಯೆ ಸೇರುತ್ತಾಳೆ. ಗುರುಪತ್ನಿ, ರಾಜಪತ್ನಿ, ವಿಪ್ರಪತ್ನಿ, ಭ್ರಾತೃಪತ್ನಿ, ಸುತಪತ್ನಿ, ಮಿತ್ರಪತ್ನಿ, ಅವರ ಮಾತೆ, ತಂದೆ ತಾಯಿಗಳ ಮಾತೆ, ಅತ್ತೆ, ಮಗಳು, ತನ್ನ ಮಾತೆ, ಮಲತಾಯಿ, ಸೋದರಿ, ಕಾಮಧೇನು, ಇಷ್ಟದೇವತೆಯ ಪತ್ನಿ, ದಾದಿ, ಅನ್ನ ಉಣಿಸುವವಳು, ಗರ್ಭಧಾತ್ರಿ, ಭಯದಿಂದ ರಕ್ಷಿಸಿದವನ ಪತ್ನಿ- ಇವರೆಲ್ಲರೂ ಮಾತೆಯರು. ಕನ್ಯಾದಾತ, ಅನ್ನದಾತ, ಜ್ಞಾನದಾತ, ಅಭಯದಾತ, ಜನ್ಮದಾತ, ಮಂತ್ರದಾತ, ಜ್ಯೇಷ್ಠ ಭ್ರಾತ - ಇವರೆಲ್ಲ ಪಿತರು. ಯಾರು ಈ ಮಾತಾ ಪಿತರನ್ನು ಭೋಗಕ್ಕೆ ಬಯಸುವರೋ ಅವರು ಬ್ರಹ್ಮನ ಆಯಷ್ಯದಷ್ಟು ಕಾಲ ನರಕದಲ್ಲಿ ವಾಸಮಾಡುವರು. ಅವರನ್ನು ಯಮದೂತರು ಕತ್ತಲ ಬಾವಿಗೆ ತಳ್ಳಿ ಹೊಡೆಯುತ್ತಾರೆ, ಮಲಮೂತ್ರ ಉಣಿಸುತ್ತಾರೆ. ಬ್ರಹ್ಮ, ನೀನೆ ಸೃಷ್ಟಿಕರ್ತ, ಯಮನಿಗೆ ಆಜ್ಞೆಗೈಯುವವ. ಅಂಥವನು ನೀನು ಮಗಳನ್ನು ಮೋಹಿಸುವೆಯ? ಹೋಗು ನಮ್ಮ ಮುಂದೆ ಇರಬೇಡ, ದೂರ ಹೋಗು. ತಂದೆ ಎಂದು ನಿನ್ನನ್ನು ಬಿಡುತ್ತಿದ್ದೇವೆ. ಇಲ್ಲದಿದ್ದರೆ ನಿನ್ನನ್ನು ಭಸ್ಮ ಮಾಡಲು ನಾವು ಶಕ್ತರು. ಹಿರಿಯರು ಸಾವಿರ ತಪ್ಪು ಮಾಡಿದರು ಕಿರಿಯರು ಸಹಿಸಬೇಕು. ಎಲ್ಲ ಹಿಂಸಕರನ್ನು ಹಿಂಸಿಸಬಹುದು. ತಮ್ಮ ಹಿರಿಯರನ್ನಲ್ಲ. ಹಿರಿಯರು ಸರ್ವಸ್ವವನ್ನು ಅಪಹರಿಸಲಿ, ಶಪಿಸಲಿ, ನಿಷ್ಠುರರಾಗಿರಲಿ, ಸಜ್ಜನರು ಅವರನ್ನು ನಿಂದಿಸುವುದಿಲ್ಲ, ಭಕ್ತಿಯಿಂದ ನಮಿಸುತ್ತಾರೆ. ಗುರುಹಿರಿಯರೆಂದರೆ ದೈವಕ್ಕಿಂತ ಮೇಲು. ಅವರನ್ನು ದ್ವೇಷಿಸುವವರು, ನಿಂದಿಸುವವರು ನರಕಕೂಪದಲ್ಲಿ ಚಂದ್ರಸೂರ್ಯರಿರುವಷ್ಟು ಕಾಲ ವಾಸ ಮಾಡುವವರು. ಹೀಗೆ ಹೇಳಿ ಮುನಿಗಳು ಬ್ರಹ್ಮನ ಪಾದಕಮಲಗಳಲ್ಲಿ ನಮಿಸಿದರು. ಎಲ್ಲವೂ ದೈವಾಧೀನ ವೆಂದು ಶಾಂತ ಮನಸ್ಸಿನಿಂದ ತಮ್ಮ ಕರ್ಮಗಳಲ್ಲಿ ನಿರತರಾದರು.

ಬ್ರಹ್ಮ ನಾಚಿ ಶರೀರತ್ಯಾಗ ಮಾಡಲು ಉದ್ಯುಕ್ತನಾದ. ಪ್ರಾಣಾಯಾಮ ಮಾಡಿ ಯೋಗಬಲದಿಂದ ಷಟ್‌ಚಕ್ರಗಳನ್ನು ಭೇದಿಸಿ ಬ್ರಹ್ಮರಂಧ್ರದ ಮೂಲಕ ಹೊರಗೆ ಬಂದು ಶರೀರವನ್ನು ತ್ಯಾಗಮಾಡಿದ. ಮನಸ್ಸಿನಿಂದ ಶ್ರೀ ಹರಿಯನ್ನು ಸ್ಮರಿಸಿ ನಮಿಸಿದ. ನನ್ನ ಮನಸ್ಸು ಪರದ್ರವ್ಯದಲ್ಲಿ ಆಸೆಪಡಬಾರದು. ಅದರಿಂದಾಗುವ ಅಪಯಶಸ್ಸು ಪ್ರಾಣತ್ಯಾಗ ದುಃಖಕ್ಕಿಂತ ಹೆಚ್ಚು ದುಃಖ ಉಂಟುಮಾಡುವುದು. ಹೀಗೆ ಹೇಳುತ್ತ ಬ್ರಹ್ಮ ಪರಮಾತ್ಮನಲ್ಲಿ ಲೀನನಾದ. ತಂದೆಯ ಮರಣವನ್ನು ಕಂಡು ವಿಲಾಪ ಮಾಡಿ ಯೋಗದಿಂದ ಅವಳೂ ಶರೀರ ತ್ಯಾಗ ಮಾಡಿದಳು. ಪರಮಾತ್ಮನಲ್ಲಿ ಲೀನಳಾದಳು. ತಂದೆಯೂ ತಂಗಿಯೂ ಮಡಿದುದನ್ನು ಕಂಡು ಶ್ರೀಹರಿಯನ್ನೆ ಕೋಪದಿಂದ ಸ್ಮರಿಸಿದರು. ಮುನಿಗಳು. ಆಗ ನಾರಾಯಣ ಕರುಣೆಯಿಂದ ಬಂದು ಇಬ್ಬರನ್ನೂ ಬದುಕಿಸಿದ. ಬ್ರಹ್ಮ ಹರಿಯ ಮುಂದೆ ನಿನ್ನಲ್ಲಿ ನನಗೆ ಸದಾ ಭಕ್ತಿ ಇರಲಿ ಎಂದು ಬೇಡುತ್ತ ನಿಂತ. ಅವನ ಬೇಸರವನ್ನು ಕಂಡು ಹರಿ ಮಧುರವಾಗಿ ನುಡಿದ.

**ನಾರಾಯಣ:-** ಬ್ರಹ್ಮ, ನಾಚಿಕೆಯನ್ನು ಬಿಡು. ಕೀರ್ತಿ ಅಪಕೀರ್ತಿಗಳು ಮಾನ ಅಪಮಾನಗಳು ಮಹಾತ್ಮರಿಗೂ ಅಲ್ಪರಿಗೂ ಕರ್ಮಾನುಸಾರ ಬಂದೇ ಬರುವುವು. ಎಲ್ಲಕ್ಕಿಂತ ಕರ್ಮವೆ ಪ್ರಬಲ. ಅದರಿಂದ ಸದಾ ಸತ್ಕರ್ಮವನ್ನೆ ಮಾಡಬೇಕು. ದುಷ್ಕರ್ಮದಿಂದ ಅಪಕೀರ್ತಿ. ಸತ್ಕರ್ಮದಿಂದ ನಿರ್ಮಲ ಕೀರ್ತಿ. ಪರಸ್ತ್ರೀಯರನ್ನೂ

ಪರವಸ್ತುಗಳನ್ನೂ ಅಪಕೀರ್ತಿಯ ಸ್ಥಾನಗಳೆಂದೂ ದುಃಖಕಾರಣಗಳೆಂದೂ ಬಿಟ್ಟು ಬಿಡಬೇಕು. ನೀನು ನಿನ್ನ ಮನಸ್ಸನ್ನು ನನ್ನಲ್ಲಿ ಇಡು. ಆಗ ಪರವಸ್ತುಗಳಲ್ಲಿ ಬಯಕೆ ಮೂಡುವುದಿಲ್ಲ. ಸ್ತ್ರೀ ಎಂದರೆ ಸರ್ವರಿಗೂ ಮೋಹಕಾರಿಣಿಯಾದ ನನ್ನ ಮಾಯೆ. ಸ್ವಾತ್ಮಾರಾಮನಾದ ಪುರುಷನನ್ನು ಅವಳು ಅನಾಯಾಸವಾಗಿ ಮೋಹಗೊಳಿಸಬಲ್ಲಳು. ಭೋಗಾಸಕ್ತ ಜನರು ಅವಳ ಸ್ತನವೆಂಬ ಮಾಂಸಪಿಂಡದಲ್ಲಿಯೂ ಎಂಜಲಿಂದ ಅಶುಚಿಯಾದ ತುಟಿಗಳಲ್ಲಿಯೂ ಸುಖಕಾಣಲು ಬಯಸುವರು. ಅವಳ ಸ್ತನ ಮುಖ ನಿತಂಬಗಳು ಕಾಮದೇವಾಲಯಗಳು. ಧರ್ಮಭೀರುಗಳಾದ ಸಜ್ಜನರು ಅವುಗಳ ದರ್ಶನ ಮಾಡುವುದಿಲ್ಲ. ಪರಸ್ತ್ರೀಯನ್ನು ಬಯಸುವವರಲ್ಲಿ ಏನು ಧರ್ಮ, ಏನು ಯಶಸ್ಸು, ಏನು ಪ್ರತಿಷ್ಠೆ, ಏನು ತಪಸ್ಸು, ಏನು ಬುದ್ಧಿ, ಏನು ವಿದ್ಯೆ, ಏನು ಧನ, ಉಳಿಯುತ್ತದೆ? ಇಹದಲ್ಲಿಯೂ ಅವರಿಗೆ ಅಪಯಶಸ್ಸು, ಪರದಲ್ಲಿಯೂ ನರಕ. ದುಃಖಕಾರಣವನ್ನು ಸುಖಕಾರಣವೆಂದು ಭ್ರಮಿಸಿ ಅವರು ದುರ್ದೈವದಿಂದ ಪರಸ್ತ್ರೀಯಲ್ಲಿ ಉತ್ಸಾಹದಿಂದ ಆಸಕ್ತಿ ತಾಳುವರು. ಹರಿಪಾದಕಮಲ ಸ್ಮರಣೆ ಮಾಡುವವರು ಉತ್ತಮರು. ಸತ್ಕರ್ಮನಿರತರು ಮಧ್ಯಮರು, ಪರಸ್ತ್ರೀಲೋಲುಪರು ಅಧಮರು. ಪರವಸ್ತುಗಳನ್ನು ಆಶಿಸುವವನಿಗೆ, ವಿಶೇಷವಾಗಿ ಪರಸ್ತ್ರೀ, ಪರರ ಹೊನ್ನು ಮಣ್ಣುಗಳಲ್ಲಿ ಆಸೆಪಡುವವನಿಗೆ ಸದಾ ಆಪತ್ತು ಕಾದಿರುತ್ತದೆ. ದೈವಾತ್ ಪರಸ್ತ್ರೀಯನ್ನು ಕಂಡರೆ ಹರಿಸ್ಮರಣೆಯಿಂದ ಪಾಪಪರಿಹಾರ. ಪರರ ಹೊನ್ನನ್ನು ಮುಟ್ಟಿದರೆ ಕೈತೊಳೆದುಕೊಂಡರೆ ಶುದ್ಧಿ.

ತಮ್ಮ ಭಾರ್ಯೆಯರಲ್ಲಿಯೂ ಸಜ್ಜನರು ಭೋಗಲಾಲಸೆಯಿಂದ ಸದಾ ಆಸಕ್ತರಾಗುವುದಿಲ್ಲ. ಏಕೆಂದರೆ ಅದರಲ್ಲಿ ಕ್ಷಯಾದಿ ವ್ಯಾಧಿಗಳು, ತತ್ವಜ್ಞಾನ ಹಾನಿ, ಲೋಕನಿಂದೆಗಳ ಭಯಕ್ಕೆ ಅವಕಾಶವಿದೆ. ಅದರಿಂದ ತಪಸ್ವಿಗಳು ತಪಸ್ಸಿನಲ್ಲಿ, ಪಂಡಿತರು ಶಾಸ್ತ್ರಚರ್ಚೆಯಲ್ಲಿ, ಯೋಗಿಗಳು ಯೋಗಾಭ್ಯಾಸದಲ್ಲಿ, ವೈದಿಕರು ವೇದಾರ್ಥಗಳಲ್ಲಿ, ಪತಿವ್ರತೆಯರು ಪತಿ ಸೇವೆಯಲ್ಲಿ, ಗೃಹಸ್ಥರು ಗೃಹಕಾರ್ಯಗಳಲ್ಲಿ ನಿರತರಾಗಿರುತ್ತಾರೆ. ವಿಷಯಭೋಗಾಸಕ್ತರು ವಿಷಯಪದಾರ್ಥಗಳಲ್ಲಿ ಆಸಕ್ತರಾಗುತ್ತಾರೆ. ನನ್ನ ಭಕ್ತರು ನನ್ನ ಆರಾಧನೆಯಲ್ಲಿ ನಿರತರಾಗುತ್ತಾರೆ. ಇವರೆಲ್ಲರೂ ವೇದೋಕ್ತಾಚರಣೆಯಲ್ಲಿದ್ದರೆ ಲೋಕದಲ್ಲಿ ಪ್ರಶಂಸಾರ್ಹರೆನಿಸುತ್ತಾರೆ. ವೇದವಿರುದ್ಧವಾಗಿ ನಡೆದರೆ ನಿಂದಾರ್ಹರಾಗುತ್ತಾರೆ. ಸನ್ಮಾರ್ಗದಲ್ಲಿ ಇರುವವರನ್ನು ಎಲ್ಲರೂ ಪ್ರಶಂಸಿಸುತ್ತಾರೆ, ದುರ್ಮಾರ್ಗಿಗಳನ್ನು ಪಾಮರರೂ ನಿಂದಿಸುತ್ತಾರೆ. ಬ್ರಹ್ಮ, ನಿನಗೆ ಎಂದೂ ಪರವಸ್ತುವಿನಲ್ಲಿ ಬಯಕೆ ಮೂಡದಂತೆ ವರವಿತ್ತಿದ್ದೇನೆ. ನನ್ನ ಪಾದಕಮಲಸ್ಮರಣೆ ನಿನಗೆ ಸಕಲ ವಿಘ್ನ ನಿವಾರಕವೆನಿಸುವುದು. ನಿನ್ನ ಮಗಳನ್ನು ಕಾಮದೇವನಿಗೆ ಮದುವೆ ಮಾಡಿಕೊಡು. ಅವಳು ರತಿಗೆ ಅಧಿಷ್ಠಾತ್ರಿ ದೇವತೆ, ರತಿ ಎಂದೇ ಪ್ರಸಿದ್ಧಳಾಗುವಳು. ಹೀಗೆ ಹೇಳಿ ಬ್ರಹ್ಮನನ್ನು ಸಂತೈಸಿ ಹರಿ ವೈಕುಂಠಕ್ಕೆ ತೆರಳಿದ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಮೂವತ್ತೈದನೆ ಅಧ್ಯಾಯ ಮುಗಿಯಿತು*

# ಶ್ರೀಕೃಷ್ಣನಿಂದ ಶಂಕರನ ಪ್ರಶಂಸೆ

## ಅಧ್ಯಾಯ - ೩೬

**ರಾಧೆ:-** ಈ ನಿಯಮಕ್ಕೆ ಅನುಸಾರವಾಗಿಯೆ ಬ್ರಹ್ಮ ಮೋಹಿನಿಯನ್ನು ನಿರಾಕರಿಸಿದ. ಹಾಗಾದರೆ ಅವನು ಅಪ್ಸರೆಯ ಶಾಪದಿಂದ ಏಕೆ ಅಪೂಜ್ಯನೆನಿಸಿದ? ಹರಿ ಅವನ ದರ್ಪಭಂಗವನ್ನೇಕೆ ಮಾಡಿದ?

**ಶ್ರೀಕೃಷ್ಣ:-** ಬ್ರಹ್ಮ ಬಹುಕಾಲ ತಪಸ್ಸು ಮಾಡಿ ಉತ್ತಮ ವರವನ್ನು ಸಂಪಾದಿಸಿ ನಾನಾ ವಿಧವಾದ ಸೃಷ್ಟಿಮಾಡಿ ವಿಧಾತನೆನಿಸಿದ. ಎಲ್ಲರಿಗೂ ತಪಸ್ಸಿಗೆ ಫಲದಾತನೆನಿಸಿದ. ಎಲ್ಲರಿಗೂ ನಿಯಾಮಕನಾದ. ತನ್ನನ್ನು ಸರ್ವಶಕ್ತನೆಂದು ಬಗೆದು ಮಹಾಗರ್ವ ಹೊಂದಿದ. ಬ್ರಹ್ಮಾಂಡದಲ್ಲಿ ಎಲ್ಲ ಕಡೆ ಗರ್ವ ಬರುವವರೆಗೆ ಮಾತ್ರ ಉನ್ನತಿ ಲಭಿಸುತ್ತದೆ. ಆದರಿಂದ ನಾನು ಅವನ ಗರ್ವಭಂಗ ಮಾಡಿದೆ. ಬ್ರಹ್ಮಾಂಡದಲ್ಲಿ ಯಾರು ಯಾರಿಗೆ ಮಹಾದರ್ಪ ಉಂಟಾಗುವುದೋ ಅವೆಲ್ಲವನ್ನೂ ತಿಳಿವ ಸರ್ವೇಶ್ವರನಾದ ನಾನು ಅವರಿಗೆ ಶಾಸ್ತಿ ಮಾಡುವೆನು. ಮೊದಲಿಗೆ ನಾನು ಬ್ರಹ್ಮನ ದರ್ಪಮುರಿದ ವೃತ್ತಾಂತವನ್ನು ನೀನು ಕೇಳಿರುವೆ. ಇದೇ ರೀತಿ ಶಂಕರ, ಪಾರ್ವತಿ, ಚಂದ್ರ, ಸೂರ್ಯ, ಅಗ್ನಿ, ದುರ್ವಾಸ, ಧನ್ವಂತರಿಗಳಿಗೆ ನಾನು ದರ್ಪಭಂಗ ಮಾಡಿದ್ದನ್ನು ಕ್ರಮವಾಗಿ ಹೇಳುತ್ತೇನೆ, ಕೇಳು. ಅಲ್ಪರೆ ಇರಲಿ ಮಹಾತ್ಮರೆ ಇರಲಿ ಯಾರಿಗೆ ದರ್ಪ ಉಂಟಾಗುವುದೋ ಅವರಿಗೆ ದರ್ಪಭಂಗ ಮಾಡುತ್ತೇನೆ.

ಕೃಷ್ಣನ ಮಾತನ್ನು ಕೇಳಿ ರಾಧೆಯ ಗಂಟಲು ನಾಲಿಗೆ ಒಣಗಿತು. ಭಯಗೊಂಡು ಕಷ್ಟದಿಂದ ಕೇಳಿದಳು.

**ರಾಧೆ:-** ಯಾರಿಗೆಹೇಗೆದರ್ಪಉಂಟಾಯಿತು? ಅದನ್ನು ನೀನುಹೇಗೆಮುರಿದೆ, ಹೇಳು.

**ಕೃಷ್ಣ:-** ಬ್ರಹ್ಮನಿಗೆ ದರ್ಪಭಂಗವಾದುದನ್ನು ನೀನು ಕೇಳಿರುವೆ. ಈಗ ಇನ್ನುಳಿದವರ ದರ್ಪಭಂಗದ ಬಗ್ಗೆಯೂ ಹೇಳುತ್ತೇನೆ ಕೇಳು. ಶಿವ ಲೋಕಸಂಹಾರಕ, ನನ್ನ ಅಂಶ. ತೇಜಸ್ಸಿನಲ್ಲಿ ನನಗೆ ಸಮ. ಜ್ಞಾನದಿಂದಲೂ ಗುಣದಿಂದಲೂ ಪೂರ್ಣ. ಯೋಗೀಂದ್ರರ ಗುರುಗಳಿಗೂ ಗುರುವಾದ ಅವನನ್ನು ಯೋಗಿಗಳು ಧ್ಯಾನಿಸುತ್ತಾರೆ. ಜ್ಞಾನಾನಂದ ಸ್ವರೂಪನಾಗಿದ್ದಾನೆ. ಅವನ ಕಥೆಯನ್ನು ಕೇಳು. ಅವನು ಅರವತ್ತು ಸಾವಿರ ವರ್ಷಕಾಲ ಹಗಲು ರಾತ್ರಿ ತಪಸ್ಸು ಮಾಡಿ ನನ್ನ ಕಲೆಯಿಂದ ಪೂರ್ಣನಾಗಿ ನನಗೆ ಸಮನಾಗಿದ್ದಾನೆ. ತಪಸ್ಸಿನ ತೇಜಸ್ಸಿನಿಂದ ತೇಜೋರಾಶಿಯಾಗಿದ್ದಾನೆ. ಕೋಟಿ ಸೂರ್ಯರ ಪ್ರಭಾವವನ್ನು ಹೊಂದಿ ಭಕ್ತರಿಗೆ ಕಲ್ಪವೃಕ್ಷನೆನಿಸಿದ್ದಾನೆ. ಯೋಗೀಂದ್ರರು ಅವನ ತೇಜಸ್ಸನ್ನು ಧ್ಯಾನಿಸುತ್ತ ತಮ್ಮೊಳಗೆ ಅವನ ಅತಿ ಸುಂದರ ರೂಪವನ್ನು ಕಾಣುತ್ತಾರೆ. ಶುದ್ಧ ಸ್ಫಟಿಕದಂತೆ ಹೊಳೆಯುವ ರೂಪ. ಐದು ಮುಖಗಳು. ಪ್ರತಿಯೊಂದರಲ್ಲಿಯೂ ಮೂರು ಕಣ್ಣುಗಳು. ತ್ರಿಶೂಲ ಪಟ್ಟಿಕಗಳನ್ನು ಹಿಡಿದಿದ್ದಾನೆ. ಹುಲಿಚರ್ಮ ತೊಟ್ಟಿದ್ದಾನೆ. ಬಿಳಿಕಮಲ ಮಣಿಮಾಲೆ ಹಿಡಿದು ತನ್ನನ್ನೆ ಧ್ಯಾನಿಸುತ್ತಾನೆ.

ನಗುಮೊಗದವನು. ಚಂದ್ರಶೇಖರ. ಬಂಗಾರದಂತೆ ಹೊಳೆವ ಜಟಾಜೂಟವನ್ನು ಧರಿಸಿದ್ದಾನೆ. ಮೂಲೋಕದ ಭಕ್ತರಲ್ಲಿ ಅನುಗ್ರಹ ಮಾಡುತ್ತಿದ್ದಾನೆ. ಆದರಿಂದ ತಾನೆ ಸಮರ್ಥನೆಂದು ತಿಳಿದು ಎಲ್ಲರಿಗೂ ಅವರು ಬಯಸಿದುದನ್ನೆಲ್ಲ ಕಲ್ಪವೃಕ್ಷದಂತೆ ಕೊಡುತ್ತಾನೆ. ಯಾರು ಏನೇ ಬಯಸಲಿ ಅದನ್ನು ಕೊಡುತ್ತ ತಾನು ವರ ಕೊಡುವುದರಲ್ಲಿ ಬಲು ಸಮರ್ಥನೆಂದು ದರ್ಪಹೊಂದಿದ. ಒಮ್ಮೆ ವೃಕನೆಂಬ ದೈತ್ಯ ಶಿವನನ್ನು ಒಲಿಸಲು ತಪಗೈದ. ಕೇದಾರದಲ್ಲಿ ಒಂದು ವರ್ಷಕಾಲ ಹಗಲೂ ಇರುಳೂ ಆತ ತಪಸ್ಸು ಮಾಡುತ್ತಿದ್ದಾಗ ನಿತ್ಯವೂ ಶಿವ ಅವನ ಬಳಿಗೆ ಹೋಗಿ ಅಭೀಷ್ಟ ವರವನ್ನು ಕೊಡುವೆನೆಂದ. ಆದರೆ ವೃಕ ವರವನ್ನು ಕೇಳಲಿಲ್ಲ. ವರ್ಷದ ಕೊನೆಯಲ್ಲಿ ಶಂಕರ ಅವನ ಮುಂದೆ ಸ್ಥಿರವಾಗಿ ನಿಂತ. ಭಕ್ತಿಪಾಶದ ಕಟ್ಟಿನಲ್ಲಿ ಸಿಲುಕಿ ಒಂದು ಕ್ಷಣವೂ ದೂರಹೋಗಲು ಅಸಮರ್ಥನಾದ. ದೈತ್ಯನಿಗೆ ಸರ್ವಐಶ್ವರ್ಯವನ್ನು ಸರ್ವಸಿದ್ಧಿಯನ್ನು ಭುಕ್ತಿ ಮುಕ್ತಿಗಳನ್ನೂ ಹರಿಪದವನ್ನೂ ಕೊಡಲು ಶಿವ ಸಿದ್ಧನಾಗಿದ್ದರೂ ದೈತ್ಯ ಏನೂ ಬೇಡವೆಂದ. ತನ್ನ ಪಾದಕಮಲವನ್ನು ಧ್ಯಾನಿಸುತ್ತಲೆ ಕುಳಿತ. ಶಿವನಿಗೆ ಭಯವಾಯಿತು. ಏನೂ ಬೇಡದೆ ನಿಶ್ಚಲವಾಗಿ ಆತ ಕುಳಿತುದನ್ನು ಕಂಡು ಪ್ರೇಮವಿಹ್ವಲನಾಗಿ ಕಣ್ಣೀರು ಸುರಿಸಿದ. ಅತ್ತುಬಿಟ್ಟ. ಅಳುವ ಧ್ವನಿಗೆ ಅಸುರನಿಗೆ ಧ್ಯಾನಭಂಗವಾಯಿತು. ಇದಿರಿಗೆ ಸಾಕ್ಷಾತ್ ಸರ್ವಸಂಪತ್ ಪ್ರದಾಯಕನಾದ ಶಿವ ನಿಂತಿದ್ದುದನ್ನು ಕಂಡ. ನನ್ನ ಮಾಯೆಯಿಂದ ಒಂದು ವರವನ್ನು ಬೇಡಿದ - 'ನಾನು ಯಾರ ತಲೆಯ ಮೇಲೆ ಕೈ ಇಡುವೆನೋ ಅವನು ಸುಟ್ಟು ಬೂದಿಯಾಗಲಿ' 'ಆಗಲಿ' ಎಂದ ಶಿವ. ಅಸುರ ಶಿವನ ತಲೆಯ ಮೇಲೆಯೆ ಕೈ ಇಡಲು ಬಂದ. ಶಿವ ಓಡಲು ತೋಡಗಿದ. ಮೃತ್ಯುಂಜಯನಿಗೆ ಮೃತ್ಯುಭಯ! ಕೈಯ ಡಮರು ಕೆಳಗೆ ಬಿದ್ದಿತು, ಹುಲಿಚರ್ಮ ಜಾರಿತು, ದಿಗಂಬರನಾಗಿ ಹತ್ತು ದಿಕ್ಕುಗಳಲ್ಲಿ ಧಾವಿಸಿದ ಶಿವ. ಆದರೂ ಅಸುರನನ್ನು ಕೊಲ್ಲಲಾರ. ಭಕ್ತವತ್ಸಲನಾದ್ದರಿಂದ ಭಕ್ತನಲ್ಲಿ ಕರುಣೆ!

**ದುಷ್ಟಾನುಸಾರಂ ಸಾಧುಶ್ಚ ನ ಕರೋತಿ ಕದಾಚನ ।**

ಪ್ರಾಣ ಹೋದರೂ ಸರಿಯೆ ಸಜ್ಜನರು ಎಂದೂ ದುಷ್ಟರಂತೆ ನಡೆಯಲಾರರು! ಸಜ್ಜನರು ತಮಗೆ ಹಿಂಸೆ ಮಾಡುವವರಿಗೆ ಪ್ರತಿಹಿಂಸೆ ಮಾಡಬಲ್ಲರು. ಆದರೆ ಎಲ್ಲರಿಗೆ ಅಲ್ಲ. ಹೆಂಡತಿ ಮಕ್ಕಳು ಸೇವಕರನ್ನು ಹೊರತು ಉಳಿದವರಿಗೆ ಮಾತ್ರ. ಆದರಿಂದ ಶಿವ ಅಸುರನನ್ನು ತನ್ನ ಮೃತ್ಯುವೆಂದೇ ಭಾವಿಸಿ ಭಯದಿಂದ ಓಡಿದ. ಅವನ ಅಹಂಕಾರ ಅಳಿಯಿತು. ನನ್ನನ್ನೇ ನೆನೆನೆನೆದು ಶರಣು ಬಂದ. ಭಯ ವಿಹ್ವಲನಾಗಿ ಗಂಟಲು ಬಾಯಿ ಒಣಗಿಸಿಕೊಂಡು 'ಹರಿ, ಹರಿ, ಕಾಪಾಡು' ಎಂದು ಜಪಿಸುತ್ತ ನನ್ನ ಬಳಿ ಬಂದ ಶಿವನನ್ನು ಸಂತೈಸಿ ಅಸುರನನ್ನು ಮಾಯೆಯಿಂದ ವಂಚಿಸಿ ಅವನ ತಲೆಯ ಮೇಲೆಯೆ ಅವನು ಕೈ ಇಟ್ಟುಕೊಳ್ಳುವಂತೆ ಮಾಡಿದೆ. ಒಡನೆ ಅವನು ಸುಟ್ಟು ಬೂದಿಯಾದ. ಆಗ ದೇವತೆಗಳು ಮುನಿಗಳು ಸಿದ್ಧರು ಮನುಗಳು ಎಲ್ಲರೂ ನನ್ನನ್ನು ಕೊಂಡಾಡಿದರು. ಶಿವ ಲಜ್ಜಿತನಾದ. ಅವನ ದರ್ಪ ಚೂರುಚೂರಾಯಿತು. ಅವನನ್ನು ಸಂತೈಸಿ ಕಳಿಸಿಕೊಟ್ಟೆ. ಇನ್ನೊಮ್ಮೆ ರುದ್ರನಿಗೆ ಅಹಂಕಾರ ಬಂದಿತು. ಸರ್ವ ಲೋಕಗಳಿಗೆ ಲಯಕಾರಕ ತಾನು ಎಂದುಕೊಂಡು, ಯಾರು ಈ ತ್ರಿಪುರಾಸುರ? ಅವನೊಬ್ಬ ಬೆಂಕಿಗೆ ಬೀಳುವ ಪತಂಗದ ಹುಳು! ಎಂದು

ನಾನು ಕೊಟ್ಟಿದ್ದ ಶೂಲವನ್ನೂ ನನ್ನ ಕವಚವನ್ನೂ ಬಿಟ್ಟು ಯುದ್ಧ ಮಾಡಲು ಹೊರಟ. ಬಹುಕಾಲ ಯುದ್ಧ ನಡೆಯಿತು. ಒಂದು ವರ್ಷಕಾಲ ಹಗಲಿರುಳು ಹೋರಾಡಿದರೂ ಇಬ್ಬರಲ್ಲಿ ಯಾರೊಬ್ಬರೂ ಗೆಲ್ಲಲಿಲ್ಲ. ಇಬ್ಬರೂ ಸಮಾನರಾಗಿದ್ದರು. ನೆಲದಲ್ಲಿ ಯುದ್ಧ ಮಾಡಿ ಮಾಯೆಯಿಂದ ಅಸುರ ಐವತ್ತು ಕೋಟಿ ಯೋಜನದೆತ್ತರಕ್ಕೆ ಹಾರಿದ. ಶಿವನೂ ಹಾಗೇ ಹಾರಿದ. ಆಶ್ರಯವಿಲ್ಲದೆಯೆ ನಿಂತು ಇಬ್ಬರೂ ಒಂದು ತಿಂಗಳಕಾಲ ಹೋರಾಡಿದರು. ಅಸುರ ಶಿವನ ಅಸ್ತ್ರಶಸ್ತ್ರಗಳನ್ನೂ ತುಂಡರಿಸಿದ. ರಥವನ್ನೂ ಮುರಿದ. ಶಿವ ಕೋಪದಿಂದ ಅಸುರನನ್ನು ಮುಷ್ಟಿಯಿಂದ ಹೊಡೆದ. ವಜ್ರಮುಷ್ಟಿಪ್ರಹಾರದಿಂದ ಅಸುರ ತಕ್ಷಣ ಮೂರ್ಛಿತನಾದ. ಆದರೆ ಕ್ಷಣದಲ್ಲಿ ಚೇತರಿಸಿಕೊಂಡು ಎದ್ದು ಶಿವನನ್ನು ರಥ ಸಮೇತ ಎತ್ತಿ ನೆಲಕ್ಕೆ ಎಸೆದ. ದೇವತೆಗಳೂ ಮುನಿಗಳೂ ಭೀತರಾಗಿ 'ಕೃಷ್ಣ! ಕಾಪಾಡು' ಎಂದರು! ಶಿವ ಭಯಕಾರಣನಾದ ನನ್ನನ್ನೆ ನಿರ್ಭೀತನಾಗಿ ಸ್ಮರಿಸಿದ. ನಾನು ಉಪದೇಶಿಸಿದ್ದ ಸ್ತೋತ್ರವನ್ನು ಭಕ್ತಿಯಿಂದ ಈ ಸಂಕಟಕಾಲದಲ್ಲಿ ಸ್ತುತಿಸಿದ. ಆಗ ನಾನು ಬೇಗನೆ ಒಂದು ಅಂಶದಿಂದ ವೃಷಭ ರೂಪವನ್ನು ತಾಳಿ ನೆಲಕ್ಕೆ ಬೀಳುತ್ತಿದ್ದ ಶಿವನನ್ನು ಕೊಂಬುಗಳಿಂದ ಧರಿಸಿದೆ. ಅವನಿಗೆ ನನ್ನ ಕವಚವನ್ನೂ ಅರಿಮರ್ದನವೆಂಬ ಶೂಲವನ್ನೂ ಕೊಟ್ಟೆ. ಆಗ ಆತ ಅತ್ಯುಚ್ಚವಾದ ಆಶ್ರಯರಹಿತವಾದ ಸ್ಥಾನಕ್ಕೆ ಏರಿ ಅಸುರನನ್ನು ನಾನಿತ್ತ ಶೂಲದಿಂದ ಇರಿದು ಕೊಂದ. ತನ್ನ ದರ್ಪವನ್ನು ಮುರಿದ ನನ್ನನ್ನು ಲಜ್ಜೆಯಿಂದ ಪುನಃ ಪುನಃ ಸ್ತುತಿಸಿದ. ದೇವತೆಗಳೂ ಮುನಿಗಳೂ ತ್ರಿಪುರಾಸುರ ನೆಲದಲ್ಲಿ ಬಿದ್ದು ಚೂರು ಚೂರಾದುದನ್ನು ಕಂಡು ಶಿವನನ್ನು ಕೊಂಡಾಡಿದರು.

ನನಗೆ ಶಿವನಿಗಿಂತ ಹೆಚ್ಚು ಪ್ರಿಯ ಮೂಲೋಕದಲ್ಲಿಯೆ ಇಲ್ಲ. ನನಗೆ ಮನಃ ಸ್ವರೂಪನು ಬ್ರಹ್ಮ, ಜ್ಞಾನರೂಪ ಶಿವ. ಬುದ್ಧಿರೂಪಳು ದುರ್ಗೆ. ನಿದ್ರಾದಿಗಳು ಎಲ್ಲರೂ ಪ್ರಕೃತ್ಯಂಶರಾದ ಶಕ್ತಿಗಳು. ವಾಗಧಿಷ್ಠಾತ್ರಿ ಸರಸ್ವತಿ. ಹರ್ಷರೂಪ ಕಲ್ಯಾಣಾಧಿಪತಿ ಗಣಪತಿ. ಪರಮಾರ್ಥರೂಪ ಧರ್ಮ. ಭಕ್ತಿ ಅಗ್ನಿ. ನನ್ನ ಸರ್ವೈಶ್ವರ್ಯಾಧಿದೇವಿ, ಗೋಲೋಕವಾಸಿಗಳೆಲ್ಲರ ಪ್ರಾಣಾಧಿಷ್ಠಾತ್ರಿ, ನನ್ನ ಪ್ರಾಣಕ್ಕಿಂತ ಅಧಿಕಳು ನೀನು. ಗೋಪಾಂಗನೆಯರು ನಿನ್ನ ಅಂಶಭೂತರು ನನಗೆ ಪ್ರಿಯರು. ಗೋಲೋಕವಾಸಿಗಳಾದ ಗೋಪರೆಲ್ಲರೂ ನನ್ನ ರೋಮ ಕೂಪದಿಂದ ಉದ್ಭವಿಸಿದರು. ನನ್ನ ತೇಜಃಸ್ವರೂಪನು ಸೂರ್ಯ. ವಾಯುಗಳು ನನ್ನ ಪ್ರಾಣರು. ವರುಣ ಜಲಾಧಿದೇವ. ಪೃಥಿವಿ ನನ್ನ ಮಲೋದ್ಭೂತಳು. ಮನ್ಮಥ ನನ್ನ ಮನಸಿನಿಂದ ಉದ್ಭವಿಸಿದವ. ಇಂದ್ರಾದಿ ದೇವತೆಗಳೆಲ್ಲರೂ ನನ್ನ ಅಂಶಾಂಶಗಳಿಂದ ಉದ್ಭೂತರು. ಮಹದಾದಿಗಳು ಸೃಷ್ಟಿ ಬೀಜಗಳು. ಅವುಗಳಿಗೂ ಬೀಜಭೂತನು ನಾನು. ಜೀವ ನನಗೆ ಪ್ರತಿಬಿಂಬ. ಕರ್ಮಭೋಗ ಯೋಗ್ಯ. ನಾನು ಸಾಕ್ಷಿ. ನಿರ್ಲಿಪ್ತ. ಯಾವ ಕರ್ಮದ ಲೇಪವೂ ನನಗಿಲ್ಲ. ಭಕ್ತರ ಧ್ಯಾನಕ್ಕಾಗಿ ಸ್ವೇಚ್ಛಾಮಯವಾದ ಶರೀರವನ್ನು ತಾಳುವೆನು. ರಾಧೆ, ಇದು ನಾನು ಶಿವನ ದರ್ಪವನ್ನು ಕಳೆದ ಕಥೆ, ಇನ್ನು ಪಾರ್ವತಿಯ ದರ್ಪವನ್ನು ಕಳೆದ ಕಥೆಯನ್ನು ಕೇಳು.

**ರಾಧೆ:-** ಭಗವನ್, ಸರ್ವತತ್ವಜ್ಞ, ಸರ್ವಬೀಜ, ಸನಾತನ, ನನ್ನ ಸಂದೇಹವನ್ನು ಪರಿಹರಿಸು. ಶಿವ ಸರ್ವಜ್ಞಾನಾಧಿದೇವ. ಸರ್ವತತ್ವವೇತ್ತ. ಮೃತ್ಯುಂಜಯ. ನಿನಗೆ ಸಮಾನನಾದ ಮಹಾತ್ಮ. ಆತ ವಿಭೂತಿ ಧರಿಸಿ ದಿಗಂಬರನಾಗಿ ಜಟಾಧಾರಿ,

ನಾಗಭೂಷಣನಾಗಿ ಏಕೆ ತಿರುಗುತ್ತಾನೆ? ಏಕೆ ಪಂಚಮುಖ, ತ್ರಿಣೇತ್ರನಾಗಿದ್ದಾನೆ? ಒಳ್ಳೆಯ ಒಂದು ವಾಹನವನ್ನು ಬಿಟ್ಟು ಎತ್ತಿನ ಮೇಲೆ ಏಕೆ ಸಂಚರಿಸುತ್ತಾನೆ? ಒಳ್ಳೆಯ ಬಟ್ಟೆಯನ್ನು ಬಿಟ್ಟು ಹುಲಿಯ ಚರ್ಮವನ್ನೇಕೆ ಉಡುತ್ತಾನೆ? ಪಾರಿಜಾತವನ್ನು ಬಿಟ್ಟು ಧತ್ತೂರವನ್ನೇಕೆ ಧರಿಸುತ್ತಾನೆ? ಚಂದನ ಅಗುರು ಕಸ್ತೂರಿ ಮತ್ತು ಪರಿಮಳ ಪುಷ್ಪಗಳನ್ನು ಬಿಟ್ಟು ಬಿಲ್ವಪತ್ರವನ್ನೂ ಬಿಲ್ವ ಕಾಷ್ಠಲೇಪನ್ನೂ ಏಕೆ ಬಯಸುತ್ತಾನೆ? ಕಿರೀಟವಿಟ್ಟುಕೊಳ್ಳದೆ ಜಟೆಯನ್ನೇಕೆ ಧರಿಸುತ್ತಾನೆ? ದಿವ್ಯಲೋಕವನ್ನು ಬಿಟ್ಟು ಸ್ಮಶಾನದಲ್ಲಿರಲು ಏಕೆ ಬಯಸುತ್ತಾನೆ? ಇವೆಲ್ಲವನ್ನೂ ವಿಸ್ತಾರವಾಗಿ ಕೇಳಲು ಬಯಸುತ್ತೇನೆ. ನನಗೆ ಬಹಳ ಕುತೂಹಲ ಉಂಟಾಗಿದೆ.

**ಶ್ರೀಕೃಷ್ಣ:-** ಅರವತ್ತು ಸಾವಿರ ವರ್ಷಗಳ ಕಾಲ ಮಹೇಶ್ವರ ತಪಸ್ಸು ಮಾಡಿ ನನ್ನನ್ನು ಧ್ಯಾನಿಸಿದ. ಆಗ ನಾನು ಅವನ ಮುಂದೆ ಮೈದೋರಿ ನಿಂತೆ. ಆತ ನನ್ನ ಮನೋಹರ ಅನಿರ್ವಚನೀಯ ಶ್ಯಾಮಸುಂದರ ಕಿಶೋರರೂಪವನ್ನು ಎರಡು ಕಣ್ಣುಗಳಿಂದ ನೋಡಿದಷ್ಟೂ ತೃಪ್ತಿ ಕಾಣದಾದ. ಎವೆಯಿಕ್ಕದೆ ನೋಡಿ ಭಕ್ತ್ಯುದ್ರೇಕದಿಂದ ಪ್ರೇಮ ವಿಹ್ವಲನಾಗಿ ಅಳತೊಡಗಿದ, 'ಸಾವಿರ ಮುಖದ ಅನಂತ, ನಾಲ್ಕು ಮುಖದ ಬ್ರಹ್ಮ ನಿನ್ನನ್ನು ಬಹು ಕಣ್ಣುಗಳಿಂದ ನೋಡಿ ಬಹು ಮುಖಗಳಿಂದ ಕೊಂಡಾಡುತ್ತಿರುವಾಗ ನಾನು ಒಂದು ಮುಖದಿಂದ ಏನು ಸ್ತುತಿಸಬಲ್ಲೆ, ಎರಡು ಕಣ್ಣುಗಳಿಂದ ಏನು ನೋಡಬಲ್ಲೆ?' ಎಂದು ಮನಸಿನಲ್ಲಿ ಹೇಳಿಕೊಂಡ. ಆಗ ಅವನಿಗೆ ನಾಲ್ಕು ಮುಖಗಳು ಉಂಟಾದುವು. ಮೊದಲಿನ ಒಂದು ಮುಖ ಸಹಿತವಾಗಿ ಐದು ಮುಖಗಳಾದುವು. ಪ್ರತಿಯೊಂದು ಮುಖವೂ ಮೂರು ಕಣ್ಣುಗಳಿಂದ ಶೋಭಿಸಿದುವು. ಅದರಿಂದ ಆತ ಪಂಚಮುಖ, ತ್ರಿಣೇತ್ರನೆನಿಸಿದ. ಅವನ ಮೂರುಕಣ್ಣುಗಳು ತ್ರಿಗುಣ ಸ್ವರೂಪವಾಗಿವೆ. ಸತ್ವಾಂಶದ ಕಣ್ಣಿಂದ ಅವನು ಸಾತ್ವಿಕರನ್ನು ನೋಡುತ್ತಾನೆ. ರಾಜಸ ಕಣ್ಣಿಂದ ರಾಜಸರನ್ನೂ, ತಾಮಸ ಕಣ್ಣಿಂದ ತಾಮಸರನ್ನೂ ನೋಡುತ್ತಾನೆ. ಆ ತಾಮಸ ಕಣ್ಣಿಂದ ಲಯಕಾಲದಲ್ಲಿ ಕೋಪದ ಬೆಂಕಿ ಉದ್ಭವಿಸುತ್ತದೆ. ಅದು ಕೋಟಿ ತಾಳ ಪ್ರಮಾಣದಷ್ಟು ಗಾತ್ರದ್ದು, ಕೋಟಿ ಸೂರ್ಯರ ಪ್ರಕಾಶ. ಮೂಲೋಕವನ್ನು ಸುಡಲು ನಾಲಿಗೆ ಚಾಚಿರುತ್ತದೆ.

ಶಿವ ವಿಭೂತಿ ಧರಿಸುವುದೇಕೆ ಎಂದರೆ ಅದು ಸತೀದೇವಿಯ ಸಂಸ್ಕಾರದ ಭಸ್ಮ. ಪ್ರೀತಿಯಿಂದ ಅದನ್ನು ಮೈಗೆಲ್ಲ ಬಳಿದುಕೊಳ್ಳುತ್ತಾನೆ, ಅವಳ ಅಸ್ಥಿ ಮಾಲೆಯನ್ನೂ ತೊಡುತ್ತಾನೆ. ಸ್ವಾತ್ಮಾರಾಮನಾಗಿದ್ದರೂ ಪೂರ್ಣ ಒಂದು ವರ್ಷ ಸತಿಯ ಶವವನ್ನು ಹೊತ್ತು ತಿರುಗಿ ತಿರುಗಿ ಅತ್ತಿದ್ದ ಆತ. ಅವಳ ಒಂದೊಂದು ಅಂಗ ಎಲ್ಲೆಲ್ಲಿ ಬಿದ್ದಿತೋ ಅಲ್ಲೆಲ್ಲ ಸಿದ್ಧಪೀಠಗಳಾದುವು. ಅಲ್ಲಿ ಬೇಗನೆ ಮಂತ್ರಸಿದ್ಧಿ ದೊರಕುವುದು. ಶವದ ಅವಶೇಷವಾದ ಭಸ್ಮವನ್ನು ಎದೆಗೆ ಬಳಿದುಕೊಂಡು ಸಿದ್ಧಿಕ್ಷೇತ್ರದಲ್ಲಿ ಮೂರ್ಛಿತನಾಗಿ ಆತ ಬಿದ್ದಾಗ ನಾನು ಹೋಗಿ ಅವನನ್ನು ಸಂತೈಸಿ ಶೋಕಪರಿಹಾರಕವಾದ ದಿವ್ಯ ತತ್ವಜ್ಞಾನವನ್ನು ನೀಡಿದೆ. ಆಗ ಆತ ಸಮಾಧಾನ ಪಟ್ಟು ತನ್ನ ಲೋಕಕ್ಕೆ ತೆರಳಿದ. ಎರಡನೆಯದಾದ ಪಾರ್ವತೀ ರೂಪದಲ್ಲಿ ಆಸತೀದೇವಿಯನ್ನೆ ತಿರುಗಿ ಪಡೆದ. ತಪಸ್ಸು ಮಾಡುವಾಗ ಧರಿಸಿದ್ದ ಜಟೆಯನ್ನೆ ಈಗಲೂ ಧರಿಸಿದ್ದಾನೆ. ಕೇಶ ಸಂಸ್ಕಾರದಲ್ಲಾಗಲಿ

ಮೈಯನ್ನು ಸಿಂಗರಿಸಿಕೊಳ್ಳುವುದರಲ್ಲಾಗಲಿ ಅವನಿಗೆ ಆಸಕ್ತಿ ಇಲ್ಲ. ಯೋಗಿ ಆತ. ಚಂದನ ಕೆಸರುಗಳನ್ನೂ ರತ್ನ ಕಲ್ಲುಗಳನ್ನೂ ಸಮನಾಗಿ ಕಾಣುವವನು. ಗರುಡ ದ್ವೇಷಿಗಳಾದ ನಾಗರು ಶಿವನನ್ನು ಮೊರೆ ಹೊಕ್ಕರು. ಅದರಿಂದ ಶಿವ ಕರುಣೆಯಿಂದ ಅವರನ್ನು ಮೈಯಲ್ಲಿ ಧರಿಸಿದ. ವಾಹನವಾದ ವೃಷಭ ನಾನೆ. ಬೇರೆ ಯಾವ ಎತ್ತೂ ಅವನನ್ನು ಹೊರಲಾರದು. ತ್ರಿಪುರಾಸುರಸಂಹಾರಕಾಲದಲ್ಲಿ ನನ್ನ ಅಂಶದಿಂದ ಉದ್ಭೂತವಾದ ಎತ್ತು ಅದು. ಪಾರಿಜಾತಾದಿ ಪುಷ್ಪವನ್ನೂ ಪರಿಮಳಯುಕ್ತ ಚಂದನಾದಿಗಳನ್ನೂ ಶಿವ ನನಗೇ ಸಮರ್ಪಿಸಿ ಅದರಲ್ಲಿ ಆಸಕ್ತಿಯನ್ನು ತೊರೆದಿದ್ದಾನೆ. ಅದರಿಂದ ಗಂಧವಿಲ್ಲದ ದತ್ತೂರದಲ್ಲಿಯೂ ಬಿಲ್ವಕಾಷ್ಠ ಲೇಪನದಲ್ಲಿಯೂ ತೃಪ್ತಿಪಡುತ್ತಾನೆ. ಯೋಗಾಭ್ಯಾಸಕ್ಕೆ ಅನುಕೂಲವೆಂದು ಹುಲಿಚರ್ಮವನ್ನು ಬಯಸುತ್ತಾನೆ. ದಿವ್ಯಲೋಕದಲ್ಲಿ ದಿವ್ಯ ಆಸನದಲ್ಲಿ ಜನಗಳ ಮಧ್ಯದಲ್ಲಿ ಇರಲು ಅವನಿಗೆ ಮನಸ್ಸಿಲ್ಲ. ಸ್ಮಶಾನದಲ್ಲಿ ಏಕಾಂತದಲ್ಲಿ ಕುಳಿತು ಹಗಲಿರುಳು ನನ್ನನ್ನೆ ಧ್ಯಾನಿಸುತ್ತಾನೆ. ಅವನು ನನ್ನ ರೂಪದಲ್ಲಿ ಮನಸ್ಸನ್ನು ನಿಲ್ಲಿಸಿ ಆಬ್ರಹ್ಮಸ್ತಂಬಪರ್ಯಂತ ಸಕಲವನ್ನೂ ಏಕಕಾಲದಲ್ಲಿ ನನ್ನಲ್ಲಿ ಕಾಣುತ್ತಾನೆ. ಬ್ರಹ್ಮನ ಪತನವಾದರೂ ಶಿವನಿಗೆ ಒಂದು ಕ್ಷಣವಾಗಿರುತ್ತದೆ. ಅವನ ಆಯುಷ್ಯದ ಪ್ರಮಾಣವನ್ನು ನಾನೂ ತಿಳಿದಿಲ್ಲ. ಜ್ಞಾನವನ್ನೂ ಶೂಲವನ್ನೂ ನನ್ನ ತೇಜಸ್ಸಿನ ಬಲದಿಂದ ಶಿವ ಧರಿಸುತ್ತಾನೆ. ನಾನು ಹೊರತು ಇನ್ನಾರೂ ಅವನನ್ನು ಪರಾಭವಗೊಳಿಸಲಾರರು. ಅವನು ನನಗೆ ಪ್ರಾಣಕ್ಕಿಂತ ಪ್ರಿಯ. ಅವನಿಗಿಂತ ಹೆಚ್ಚು ಪ್ರಿಯನಾದವನು ನನಗೆ ಬೇರೆ ಯಾರೂ ಇಲ್ಲ. ಎಲ್ಲ ಬ್ರಹ್ಮಾಂಡವನ್ನೂ ಆವರಿಸುವ ನನ್ನ ಮಾಯೆ ಶಿವನನ್ನು ನಡುಗಿಸುತ್ತದೆ ಹೊರತು ಮೋಹಗೊಳಿಸಲಾರದು. ನಾನು ಗೋಲೋಕದಲ್ಲಿರುವುದಿಲ್ಲ, ವೈಕುಂಠದಲ್ಲಿರುವುದಿಲ್ಲ, ನಿನ್ನ ಎದೆಯಲ್ಲಿಯೂ ಇಲ್ಲ, ಪ್ರೇಮ ಪಾಶಬದ್ಧನಾಗಿ ಸದಾ ಶಿವನ ಹೃದಯದಲ್ಲಿಯೆ ಇರುತ್ತೇನೆ. ಅವನು ತನ್ನ ಐದು ಮುಖಗಳಿಂದ ಸದಾ ನನ್ನ ಯಶೋಗಾನವನ್ನು ಸುಸ್ವರವಾಗಿ ಹಾಡುತ್ತಾನೆ. ಅದರಿಂದ ಒಂದು ಹುಬ್ಬಿನ ಕುಣಿತದಿಂದ ಅನೇಕ ಬ್ರಹ್ಮಾಂಡಗಳನ್ನು ನಿರ್ಮಿಸಿ ನಾಶಗೊಳಿಸಬಲ್ಲ ನಾನು ಅವನ ಬಳಿ ಇರುತ್ತೇನೆ. ಶಿವನಿಗಿಂತ ಹೆಚ್ಚಿನ ಯೋಗಿ ಇನ್ನಿಲ್ಲ. ದಿವ್ಯ ಜ್ಞಾನದಿಂದ ಹುಬ್ಬಿನ ಕುಣಿತದಿಂದಲೇ ಮೃತ್ಯು ಕಾಲಾದಿಗಳನ್ನು ಸೃಜಿಸಿ ನಾಶಗೊಳಿಸಬಲ್ಲ ಆತ. ನನ್ನ ಭಕ್ತಿಯನ್ನೂ ದಾಸ್ಯವನ್ನೂ ಮುಕ್ತಿಯನ್ನೂ ಸರ್ವ ಸಂಪತ್ತನ್ನೂ ಸರ್ವಸಿದ್ಧಿಯನ್ನೂ ಕೊಡಬಲ್ಲ. ಐದು ಮುಖಗಳಿಂದ ನನ್ನ ನಾಮ ಸಂಕೀರ್ತನ ಮಾಡುತ್ತ ಸದಾ ನನ್ನ ರೂಪವನ್ನು ಧ್ಯಾನಿಸುವ ಶಿವನಂಥ ಭಕ್ತನಿನ್ನೊಬ್ಬ ಇಲ್ಲ. ನಾನು, ಸುದರ್ಶನ, ಶಿವ ಈ ಮೂವರು ತೇಜಸ್ಸಿನಲ್ಲಿ ಸಮಾನರು. ಸೃಷ್ಟಿಕರ್ತನಾದ ಬ್ರಹ್ಮನೂ ನಮಗೆ ಸಮನಲ್ಲ. ಇದು ಶಿವನ ನಿರ್ಮಲ ಯಶೋಗಾನ. ಆದರೂ ಅವನ ದರ್ಪಭಂಗ ಮಾಡಬೇಕಾಯಿತು. ಇನ್ನೇನು ಕೇಳಲು ಬಯಸುವಿ, ರಾಧೆ?

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಶ್ರೀಕೃಷ್ಣ ಕೃತ ಶಂಕರ ಪ್ರಶಂಸೆ ಎಂಬ ಮೂವತ್ತಾರನೆ ಅಧ್ಯಾಯ ಮುಗಿದುದು*

—○—

**ರಾಧೆ:-** ಇಂಥ ಸರ್ವೇಶ್ವರ ಮಹಾತ್ಮನಾದ ಶಿವನ ನೈವೇದ್ಯವೇಕೆ ಪ್ರಶಸ್ತವಲ್ಲ?

**ಶ್ರೀಕೃಷ್ಣ:-** ದೇವಿ, ಕೇಳು. ಒಂದು ಪುರಾತನ ಇತಿಹಾಸವನ್ನು ಹೇಳುತ್ತೇನೆ. ಅದು ಪಾಪವೆಂಬ ಉರುವಲನ್ನು ಸುಡುವ ಬೆಂಕಿ. ಒಮ್ಮೆ ಸನತ್ಕುಮಾರನು ವೈಕುಂಠಕ್ಕೆ ಹೋಗಿ ನಾರಾಯಣನ ದರ್ಶನ ಮಾಡಿದ. ಆಗ ತಾನೆ ನಾರಾಯಣನ ಆರೋಗಣೆಯಾಗಿತ್ತು. ಮುನಿ ಭಕ್ತಿಯಿಂದ ನಮಿಸಿ ಗೋಪ್ಯವಾದ ಸ್ತೋತ್ರಗಳಿಂದ ಸ್ತುತಿಸಿದ. ಸಂತುಷ್ಟನಾದ ಹರಿ ಅವನಿಗೆ ನೈವೇದ್ಯ ಶೇಷವನ್ನು ನೀಡಿದ. ಒಡನೆ ಮುನಿ ಅಲ್ಲಿಯೆ ಸ್ವಲ್ಪ ನೈವೇದ್ಯವನ್ನುಂಡು ಉಳಿದುದನ್ನು ಹಾಗೇ ಇಟ್ಟುಕೊಂಡ, ದುರ್ಲಭವಾದ ವಿಷ್ಣುನೈವೇದ್ಯವನ್ನು ತನ್ನ ಬಂಧುಗಳೂ ಉಣಲಿ ಎಂದು. ಬಳಿಕ ಸಿದ್ಧಾಶ್ರಮದಲ್ಲಿ ಶಿವನಿಗೆ ಅದನ್ನಿತ್ತ. ಅದು ಕೈಗೆ ದೊರೆತೊಡನೆ ಭಕ್ತ್ಯುದ್ರೇಕದಿಂದ ಪೂರ್ತಿ ಉಂಡ, ಶಿವ. ಉಂಡು ಆನಂದದಿಂದ ಕುಣಿದ. ಮೈ ರೋಮಾಂಚಗೊಂಡು ಕಣ್ಣುಗಳಲ್ಲಿ ಆನಂದಬಾಷ್ಪ ಸುರಿಸಿದ. ರಾಗ ತಾಳ ಲಯ ಬದ್ಧವಾಗಿ ಐದು ಮುಖಗಳಲ್ಲಿ ನನ್ನ ಮಹಿಮೆಯನ್ನು ಹಾಡಿದ. ಆಗ ಕೈಯಿಂದ ಡಮರು ಕೆಳಗೆ ಬಿದ್ದಿತು. ಉಟ್ಟ ಹುಲಿತೊವಲು ಜಾರಿತು. ಕೊನೆಗೆ ಮೈಮರೆತು ತಾನೆ ಬಿದ್ದ. ಹೃದಯಕಮಲದಲ್ಲಿ ಅತಿಮನೋಹರವಾದ ನನ್ನ ರೂಪವನ್ನು ಧ್ಯಾನಿಸಿದ. ಆಗ ಪಾರ್ವತಿ ಬಂದಳು. ಶಿವನ ಆ ಸ್ಥಿತಿಯನ್ನು ಕಂಡು ಎಲ್ಲವನ್ನೂ ಕೇಳಿ ತಿಳಿದಳು. ಕುಮಾರ ನಡೆದುದೆಲ್ಲವನ್ನೂ ಬಣ್ಣಿಸಿ ಹೇಳಿದ. ದೇವಿ ಕೇಳಿ ಕುಪಿತಳಾದಳು. ಅವಳ ತುಟಿ ಅದುರಿತು. ಶಿವನಿಗೆ ಶಾಪ ಕೊಡಲು ಉದ್ಯುಕ್ತಳಾದಳು. ಶಿವ ಎದ್ದು ಕೈಮುಗಿದು ಪಾರ್ವತಿಗೆ ಬಗೆ ಬಗೆಯಿಂದ ಸಮಾಧಾನದ ಮಾತುಗಳನ್ನು ಹೇಳಿ ಹೊಗಳಿದ. ಆ ಸ್ತುತಿಯನ್ನು ಕೇಳಿ ದೇವಿ ಅವನಿಗೆ ಶಾಪ ನೀಡದೆ ಅವನ ನೈವೇದ್ಯವು ಲೋಕದಲ್ಲಿ ಅಗ್ರಾಹ್ಯವೆನಿಸುವಂತೆ ಶಪಿಸಿದಳು. ಸರ್ವಸಂಹಾರಕನಾದ ಶಿವ ನಡುಗಿದ. ದೇವಿ ನುಡಿದಳು.

**ಪಾರ್ವತಿ:-** ನೀನು ಜಗತ್ತನ್ನು ಪಾಲಿಸುವವ, ಪೋಷಿಸುವವ, ವಿಶೇಷವಾಗಿ ನನಗೆ ಪತಿ. ನಾಲ್ಕು ವೇದಗಳಿಗೆ ಜನಕ, ಉಪದೇಶಕ. ಭಕ್ತರಿಗೆ ಮುಕ್ತಿದಾಯಕ. ಸರ್ವ ಸಂಪತ್ಪ್ರದ. ನೀನೇ ನೀತಿಯನ್ನು ಪಾಲಿಸದಿದ್ದರೆ ಇನ್ನು ಧರ್ಮರಕ್ಷಣೆ ಮಾಡುವವರು ಯಾರು? ನಾನು ಸದಾ ನಿನ್ನ ರಕ್ಷಣೆಯಲ್ಲಿ ಇರುವವಳು, ಭಕ್ತಿಯಿಂದ ನಿನ್ನ ಸೇವೆ ಮಾಡುವವಳು. ನನಗೆ ಹರಿನಿರ್ಮಾಲ್ಯ ಭಕ್ಷಣದ ಅವಕಾಶವಿಲ್ಲದಂತೆ ಮಾಡಿ ನೀನೆ ಪೂರ್ತಿ ಉಂಡೆ.

**ಕಿಂಚಿತ್ ಶುದ್ಧಂ ಹಿರಣ್ಯೇನ ಕಿಂಚಿದ್ ವಸ್ತು ಚ ವಾಯುನಾ ।**
**ಕಿಂಚಿತ್ ಪ್ರಕ್ಷಾಲನೇನೈವ ಸರ್ವಂ ವಿಷ್ಣೋರ್ನಿವೇದನಾತ್ ॥**

ಕೆಲವು ಪದಾರ್ಥಗಳಿಗೆ ನಾವು ಅವನ್ನು ಕ್ರಯಕ್ಕೆ ಕೊಂಡುಕೊಂಡ ಮಾತ್ರಕ್ಕೇ ಶುದ್ಧಿಯಾಗುತ್ತದೆ. ಇನ್ನು ಕೆಲವು ಪದಾರ್ಥಗಳು ಗಾಳಿಯ ಸಂಪರ್ಕದಿಂದ ಶುದ್ಧವಾಗುತ್ತವೆ. ಕೆಲವು ನೀರಿಂದ ತೊಳೆದಾಗ ಶುದ್ಧವಾಗುತ್ತವೆ. ಆದರೂ ಬಳಿಕ ಅವೆಲ್ಲವನ್ನೂ ವಿಷ್ಣುವಿಗೆ ನಿವೇದಿಸಿದಾಗಲೆ ಅತ್ಯಂತ ಪವಿತ್ರವಾಗುತ್ತವೆ.

ವಿಷ್ಣೋರ್ನಿವೇದಿತಾನ್ನೇನ ಯಷ್ಟವ್ಯಾ: ಸರ್ವದೇವತಾ: ।
ಪಿತರೋಽತಿಥಯಶ್ಚೈವಮಿತಿ ವೇದೇಷು ನಿಶ್ಚಿತಂ ॥

ವಿಷ್ಣುನೈವೇದ್ಯವನ್ನೆ ಎಲ್ಲದೇವತೆಗಳಿಗೂ ಪಿತೃಗಳಿಗೂ ಅತಿಥಿಗಳಿಗೂ ನೀಡ ಬೇಕೆಂಬುದು ವೇದಗಳ ಸಿದ್ಧಾಂತ.

ಅಮೃತಂ ಸರ್ವವಸ್ತೂನಾಮಿಷ್ಟಂ ಸಾರಂ ಸುದುರ್ಲಭಂ ।
ವಿಷ್ಣೋರ್ನಿವೇದಿತಾನ್ನಸ್ಯ ಕಲಾಂ ನಾರ್ಹತಿ ಷೋಡಶೀಂ ॥

ಅಮೃತವು ಎಲ್ಲ ಮಧುರ ಪದಾರ್ಥಗಳಲ್ಲಿ ಶ್ರೇಷ್ಠ, ದುರ್ಲಭ, ನಿಜ. ಆದರೆ ವಿಷ್ಣುನೈವೇದ್ಯದ ಹದಿನಾರನೆ ಒಂದಂಶಕ್ಕೆ ಸಮಾನವಾಗಲಾರದು.

ಹಂತ್ಯಕಾಲಿಕ ಮೃತ್ಯುಂ ತದಮೃತಂ ಮೂಢರಂಜನಂ ।
ನೈವೇದ್ಯಂ ಚ ಹರೇರೇವ ಹರಿತುಲ್ಯಂ ಕರೋತ್ಯಹೋ ॥

ಅಮೃತವು ಅಕಾಲಮೃತ್ಯುವನ್ನು ಮಾತ್ರ ತಡೆಯಬಲ್ಲುದು. ಮೂಢಜನರಿಗೆ ಇಷ್ಟವಾಗುವುದು. ವಿಷ್ಣುನೈವೇದ್ಯ ಹಾಗಲ್ಲ. ವಿಷ್ಣುಸಾರೂಪ್ಯವನ್ನೆ ತಂದೀತು. ಸಜ್ಜನರ ಸಹವಾಸದಲ್ಲಿ ಅಕಸ್ಮಾತ್ ವಿಷ್ಣುನೈವೇದ್ಯ ಉಂಡರೂ ಅರವತ್ತು ಸಾವಿರ ವರ್ಷಗಳ ತಪಸ್ಸಿನ ಫಲ ಸಿಕ್ಕೀತು. ಇನ್ನು ತಾನೇ ಹರಿಗೆ ನೈವೇದ್ಯವಿಟ್ಟು ಉಂಡರೆ ಎಂಥ ತಪಸ್ಸಿನ ಫಲ! ವಿಷ್ಣುಸಾರೂಪ್ಯವೆ ದೊರಕೀತು. ಇದನ್ನು ಹಿಂದೆ ಪುಷ್ಕರದಲ್ಲಿ ಮುನಿಗಳ ಗೋಷ್ಠಿಯಲ್ಲಿ ನಿನ್ನ ಮುಖದಿಂದಲೆ ಕೇಳಿದ್ದೇನೆ. ನಾನು ಬಹುಕಾಲ ತಪಸ್ಸು ಮಾಡಿ ನಿನ್ನನ್ನು ಪತಿಯನ್ನಾಗಿ ಪಡೆದೆ. ಅಂಥ ನೀನು ವಿಷ್ಣುಪ್ರಸಾದದಿಂದ ನನ್ನನ್ನು ವಂಚಿತಳನ್ನಾಗಿ ಮಾಡಬಹುದೆ? ನನಗೆ ವಿಷ್ಣುನೈವೇದ್ಯವನ್ನು ನೀಡದುದರ ಫಲವಾಗಿ ನಾನು ನಿನಗೆ ಶಾಪ ನೀಡುತ್ತೇನೆ, ಇಂದಿನಿಂದ ಲೋಕದಲ್ಲಿ ಯಾರು ನಿನ್ನ ನೈವೇದ್ಯವನ್ನು ಉಣ್ಣುವರೋ ಅವರು ನಾಯಿಯ ಜನ್ಮ ಹೊಂದುತ್ತಾರೆ.'

ಪಾರ್ವತಿ ಹೀಗೆ ಹೇಳುತ್ತ ಶಿವನ ಮುಂದೆ ಅತ್ತಳು. ಅವಳ ದೃಷ್ಟಿ ಶಿವನ ಕಂಠದ ಮೇಲೆ ಬಿದ್ದಾಗ ಅದು ನೀಲವಾಯಿತು. ಶಿವ ನೀಲಕಂಠನೆನಿಸಿದ. ಶಿವ ದೇವಿಯನ್ನು ಎದೆಗೆ ತಬ್ಬಿಕೊಂಡು ನಯವಾದ ಹೊಗಳಿಕೆ ಮಾತುಗಳಿಂದ ಅವಳ ಮುನಿಸನ್ನು ಕಳೆದ. ಕೈಯಿಂದ ಅವಳ ಕಣ್ಣೀರನ್ನು ಒರೆಸಿ ಸಂತೈಸಿದ. ದೇವಿ ನುಡಿದಳು, 'ವಿಷ್ಣು ನೈವೇದ್ಯವಿಲ್ಲದ ಈಶರೀರವನ್ನು ನಾನು ತ್ಯಾಗಮಾಡುವೆನು. ಜನ್ಮ ಮರಣ ಜರೆಗಳನ್ನು ಕಳೆಯುವ ನಿನ್ನ ನೈವೇದ್ಯವನ್ನೂ ನಾನು ಈಗ ನಿಷಿದ್ಧಗೊಳಿಸಿ ಬಿಟ್ಟೆ. ಇನ್ನು ನಾನು ಶರೀರವನ್ನು ಹೇಗೆ ಧರಿಸಬಲ್ಲೆ?'

ಹೀಗೆ ಹೇಳಿ ದೇವಿ ಶರೀರತ್ಯಾಗ ಮಾಡಲು ಹೊರಟಾಗ ಶಿವ ಹೆದರಿ ಅವಳ ಮುಂದೆ ಸವಿ ನುಡಿ ನುಡಿದ -

**ಶಿವ:-** ದೇವಿ ತಾಳು, ನನ್ನ ತಪ್ಪುಗಳನ್ನು ಮನ್ನಿಸು. ನಾನು ನಿನ್ನ ದಾಸ, ತಪಸ್ಸಿನಿಂದ ನೀನು ನನ್ನನ್ನು ಕೊಂಡಿರುವೆ. ನನ್ನಲ್ಲಿ ಕೃಪೆ ಮಾಡು. ನೀನು ಬ್ರಹ್ಮ ವಿಷ್ಣು ಮಹೇಶ್ವರರಿಗೆ ಜನನಿ. ಗೋಲೋಕಾಧಿಪತಿಯಾದ ನಿರ್ಗುಣನಾದ ಕೃಷ್ಣನ ಸರ್ವಶಕ್ತಿ ಸ್ವರೂಪಳು, ಸದಾ ಸಹಚರಿಯಾಗಿರುವವಳು. ನಿರಾಕಾರಳಾಗಿದ್ದು ಸ್ವೇಚ್ಛೆಯಿಂದ ಸಾಕಾರಳಾಗಿರುವೆ. ಆ ಕೃಷ್ಣನ ಕೃಪೆಯಿಂದ ನೀನು ನನ್ನೆದೆಯಲ್ಲಿ ನೆಲೆಸುತ್ತಿರುವೆ. ಸರ್ವ ಬೀಜ ಸ್ವರೂಪಳು, ಮಹಾಮಾಯೆ. ಸರ್ವಸಿದ್ಧಿದಾಯಕಳು, ಮುಕ್ತಿದಾಯಕಳು, ಕೃಷ್ಣಭಕ್ತಿದಾಯಕಳು. ನೀನು ಶರೀರತ್ಯಾಗ ಮಾಡುವುದು ಶ್ರೀ ಹರಿಯ ಚಿತ್ತಕ್ಕೆ ಬಂದಿದ್ದರೆ, ಸರಿ, ನಾನೇನೂ ಮಾಡಲಾರೆ, ನಿರ್ಗುಣಳಾದ ನೀನು ಶರೀರ ತ್ಯಾಗಮಾಡಿ ನಿರ್ಗುಣನನ್ನೆ ಪಡೆ.'

ಶಿವನ ಈ ಮಾತನ್ನು ಕೇಳಿ ದೇವಿ ಪ್ರಸನ್ನಳಾಗಿ ಅವನನ್ನು ನಮಿಸಿದಳು. ಶಿವ ದೇವಿಯನ್ನು ಸ್ತುತಿಸಿದ ಈ ಸ್ತೋತ್ರವನ್ನು ಪಠಿಸಿದರೆ ಆಪತ್ತಿನಲ್ಲಿ ಸಿಲುಕಿದವರು ಆಪತ್ತಿನಿಂದ ಮುಕ್ತರಾಗುತ್ತಾರೆ. ಇಷ್ಟಮಿತ್ರರೊಳಗೆ ವೈಮನಸ್ಯದ ಪ್ರಸಕ್ತಿ ದೂರವಾಗುವುದು. ಪರಸ್ಪರ ಪ್ರೀತಿಯೆ ಹೆಚ್ಚುವುದು. ಪಾರ್ವತಿ ಸಂತುಷ್ಟಳಾಗಿ ಅವರ ಮನೆಗಳಲ್ಲಿ ಸ್ಥಿರವಾಗಿ ನೆಲೆಸುವಳು.

**ಕೃಷ್ಣ:-** ಶಿವನ ಮಾತಿನಿಂದ ಸಮಾಧಾನಗೊಂಡ ದೇವಿ ಗಂಗಾಸ್ನಾನ ಮಾಡಿ ನನಗೆ ಮಿಷ್ಟಾನ್ನ ನೈವೇದ್ಯ ಸಿದ್ಧಪಡಿಸಿದಳು. ಶಿವನೂ ಸ್ನಾನಮಾಡಿ ಹೃದಯದಲ್ಲಿರುವ ನನ್ನನ್ನು ಧ್ಯಾನಿಸಿ ಭಕ್ತಿಯಿಂದ ಸ್ತುತಿಸಿದ. ನಾನು ಉಂಡು ನೈವೇದ್ಯ ಶೇಷವನ್ನು ಅವನಿಗೆ ನೀಡಿದೆ. ಪಾರ್ವತಿ ಶಿವನೊಂದಿಗೆ ಆ ನೈವೇದ್ಯವನ್ನು ಉಂಡು ಸಂತುಷ್ಟಳಾದಳು. ಶಿವನನ್ನು ಕೊಂಡಾಡಿ ಭಕ್ತಿಯಿಂದ ಪುನಃ ಪುನಃ ನಮಿಸಿದಳು. ಇದು ಶಿವನ ನಿರ್ಮಾಲ್ಯಕ್ಕೆ ಬಂದ ಶಾಪದ ವೃತ್ತಾಂತ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಹರನಿರ್ಮಾಲ್ಯ ಶಾಪ ಪ್ರಸಂಗವೆಂಬ ಮೂವತ್ತೇಳನೆ ಅಧ್ಯಾಯ ಮುಗಿಯಿತು.*

—o—

## ಪಾರ್ವತಿಯ ಜನ್ಮ

ಅಧ್ಯಾಯ - ೩೮

**ಶ್ರೀಕೃಷ್ಣ:-** ದೇವಿ, ಶಿವನ ದರ್ಪಭಂಗದ ವೃತ್ತಾಂತವನ್ನು ಕೇಳಿರುವಿ. ಈಗ ಪಾರ್ವತಿಯ ದರ್ಪಭಂಗದ ಬಗ್ಗೆ ಹೇಳುತ್ತೇನೆ, ಕೇಳು. ಎಲ್ಲದೇವತೆಗಳ ತೇಜಸ್ಸಿನಿಂದ ಜಗದಂಬೆ ಆವಿರ್ಭವಿಸಿ, ಕಮನೀಯ ಮನೋಹರ ಕಾಮಿನೀ ರೂಪು ತಳೆದು ಮಹಾದಾನವರನ್ನು ಮಡುಹಿ ದೇವಸಮೂಹವನ್ನು ಕಾಪಾಡಿದಳು. ಬಳಿಕ ದಕ್ಷನ ಮಡದಿಯಲ್ಲಿ ಜನ್ಮ ತಳೆದು ಶಿವನನ್ನು ಮದುವೆಯಾಗಿ ಸದಾ ಪರಮಭಕ್ತಿಯಿಂದ ಪತಿಸೇವೆ ಮಾಡಿದಳು. ಆದರೆ ದೈವಾತ್ ಶಿವನಿಗೂ ದಕ್ಷನಿಗೂ ವೈಮನಸ್ಯ ಉಂಟಾಯಿತು. ನಿರರ್ಥಕವಾಗಿ ಕಲಹ ತಲೆದೋರಿತು. ದಕ್ಷನು ಕೋಪದಿಂದ ಒಂದು ಯಜ್ಞ ಮಾಡಲು ಆರಂಭಿಸಿ ಅದಕ್ಕೆ ಶಿವನನ್ನು ಹೊರತು ಬೇರೆ ಎಲ್ಲ ದೇವತೆಗಳನ್ನೂ ಆಹ್ವಾನಿಸಿದ. ಎಲ್ಲ ದೇವತೆಗಳೂ ಬಂದರು. ಶಿವ ಕೋಪದಿಂದ, ಅಭಿಮಾನದಿಂದ ಬಾರದೇ ಇದ್ದ. ಸತೀದೇವಿ ತಂದೆಯ ಮೇಲಿನ ಮೋಹದಿಂದ ಪತಿಯನ್ನು ನಾನಾ ಬಗೆಯಿಂದ ಒಪ್ಪಿಸಲು ಯತ್ನಿಸಿದಳು. ಆದರೆ ಅದು ಫಲಿಸಲಿಲ್ಲ. ಶಿವ ತನ್ನ ನಿರ್ಧಾರದಿಂದ ಸ್ವಲ್ಪವೂ ಕದಲದಿದ್ದಾಗಿ ದೇವಿ ತಾನೇ ಚಂಚಲ ಮನಸ್ಸಿನಿಂದಲೆ ತಂದೆಯ ಮನೆಗೆ ಬಂದಳು. ತಂದೆ ಅವಳೊಡನೆ ಒಂದು ಮಾತನ್ನೂ ಆಡಲಿಲ್ಲ. ಅವಳ ಅಭಿಮಾನಕ್ಕೆ ಪೆಟ್ಟು ತಗುಲಿತು. ದರ್ಪಭಂಗವಾಯಿತು. ತಂದೆ ಮಾಡಿದ ಪತಿನಿಂದೆಯನ್ನೂ ಕೇಳಿ ಸಹಿಸದೆ ಶರೀರತ್ಯಾಗ ಮಾಡಿದಳು.

ದೇವಿ, ಇದು ಸತೀದೇವಿಯ ದರ್ಪಭಂಗದ ಕಥೆ, ಇನ್ನು ಅವಳ ಜನ್ಮಾಂತರವನ್ನೂ ಆಜನ್ಮದಲ್ಲಿ ನಡೆದ ದರ್ಪಭಂಗವನ್ನೂ ಹೇಳುತ್ತೇನೆ, ಕೇಳು.

ಸತೀದೇವಿ ಬೇಗನೆ ಹಿಮಾಲಯನ ಮಡದಿ ಮೇನೆಯಲ್ಲಿ ಜನ್ಮ ತಳೆದಳು. ಇತ್ತ ಶಿವ ಸತಿಯ ಚಿತಾಭಸ್ಮವನ್ನು ಮೈಗೆಲ್ಲ ಬಳಿದುಕೊಂಡು, ಅಸ್ಥಿಯ ಮಾಲೆ ಹಾಕಿಕೊಂಡು ಪ್ರೇಮದಿಂದ ಸತಿಯನ್ನೆ ನೆನೆನೆನೆಯುತ್ತ ಎಲ್ಲೆಡೆ ಸುತ್ತಿದ. ಮೇನೆ ದೇವಿಯನ್ನು ಹಡೆದಳು. ದೇವಿ ಅತ್ಯಂತ ಮನೋಹರಳಾಗಿ ಸರ್ವಗುಣ ಭರಿತಳಾಗಿ ಬೆಳೆದಳು. ಬ್ರಹ್ಮನ ಸೃಷ್ಟಿಯಲ್ಲಿ ಅವಳಿಗೆ ಹೋಲಿಕೆಯೆ ಇರಲಿಲ್ಲ. ಯಾವ ದೇವತಾಸ್ತ್ರೀಯೂ ಅವಳ ಹದಿನಾರನೆ ಒಂದಂಶಕ್ಕೆ ಸಮಾನಳೆನಿಸಲಿಲ್ಲ. ಶುಕ್ಲಪಕ್ಷದ ಚಂದ್ರನಂತೆ ಪ್ರವರ್ಧಮಾನಳಾಗಿ ಯೌವನದಲ್ಲಿ ಕಾಲಿಟ್ಟಾಗ ಅವಳಿಗೆ ಆಕಾಶವಾಣಿ ನುಡಿಯಿತು, 'ಉಗ್ರವಾದ ತಪಸ್ಸು ಮಾಡಿ ಶಿವನನ್ನು ಪತಿಯನ್ನಾಗಿ ಪಡೆ. ತಪಸ್ಸು ಮಾಡದೆ ಅವನನ್ನು ಪಡೆಯಲಾರೆ.'

ಯೌವನದ ದರ್ಪದಿಂದ ದೇವಿ ಈ ಅಶರೀರವಾಣಿಗೆ ಬೆಲೆ ಕೊಡದೆ ನಕ್ಕುಬಿಟ್ಟಳು. 'ನನ್ನ ಹಿಂದಿನ ಜನ್ಮದ ಭಸ್ಮ ಅಸ್ಥಿಗಳನ್ನು ಧರಿಸಿರುವ ಶಿವ ಈಜನ್ಮದಲ್ಲಿ ಪ್ರೌಢೆಯಾಗಿ ಬೆಳೆದುನಿಂತ ನನ್ನನ್ನು ಹೇಗೆ ಸ್ವೀಕರಿಸದೆ ಬಿಡಬಲ್ಲ? ವಿರಹಶೋಕದ

ಬೆಂಕಿಯಲ್ಲಿ ಬೆಂದು ಬ್ರಹ್ಮಾಂಡದಲ್ಲೆಲ್ಲ ಸುತ್ತಿದವನು ಪರಮ ಸುಂದರಿಯಾಗಿ ಲಭ್ಯಳಾಗಿರುವ ನನ್ನನ್ನು ಹೇಗೆ ಉಪೇಕ್ಷಿಸಬಲ್ಲ? ನನ್ನ ನಿಮಿತ್ತವಾಗಿ ದಕ್ಷನ ಯಜ್ಞವನ್ನು ಭಂಗ ಮಾಡಿದವನು ಜನ್ಮಜನ್ಮಗಳಲ್ಲಿ ಸತಿಯಾಗಿರುವ ನನ್ನನ್ನು ಹೇಗೆ ಸ್ವೀಕರಿಸದಿರಲಾರ?' ಹೀಗೆ ಆಲೋಚಿಸುತ್ತ ಸರ್ವರೂಪಗುಣ ಭರಿತೆ ತಾನೆಂದು ಅತಿ ದರ್ಪದಿಂದ ತಪಸ್ಸು ಮಾಡದೆ ಇದ್ದಳು. ತನ್ನನ್ನು ಮೀರಿಸುವ ಸ್ತ್ರೀಯೇ ಇಲ್ಲವೆಂದು ಅಭಿಮಾನದಿಂದ ಬೀಗಿ, ತಪಸ್ಸಿಲ್ಲದೆಯೇ ನನ್ನ ಹೆಸರು ಕೇಳಿದ ಮಾತ್ರಕ್ಕೆ ಶಿವ ತನ್ನನ್ನು ಸ್ವೀಕರಿಸುತ್ತಾನೆ ಎಂದುಕೊಂಡು ಸಖಿಯರೊಡನೆ ಹಗಲು ರಾತ್ರಿ ಆಟವಾಡುತ್ತ ಕಾಲ ಕಳೆದಳು. ಒಮ್ಮೆ ಪರ್ವತರಾಜನ ಬಳಿಗೆ ಒಬ್ಬ ದೂತ ಬಂದು ಕೈ ಮುಗಿದು ಮಧುರವಾಗಿ ನುಡಿದ-

'ಪರ್ವತರಾಜ, ಎದ್ದೇಳು, ಎದ್ದೇಳು, ಅಕ್ಷಯವಟದ ಬಳಿಗೆ ಹೋಗು. ಅಲ್ಲಿಗೆ ವೃಷಭವಾಹನ ಮಹಾದೇವ ಗಣಗಳೊಂದಿಗೆ ಬಂದಿದ್ದಾನೆ. ಅತೀಂದ್ರಿಯನಾದ ಆದೇವೋತ್ತಮನನ್ನು ಭಕ್ತಿಯಿಂದ ತಲೆಬಾಗಿ ಮಧು ಪರ್ಕಾದಿಗಳನ್ನಿತ್ತು ಪೂಜಿಸು. ಆತ ಸಿದ್ಧಿ ಸ್ವರೂಪ, ಸಿದ್ಧೇಶ. ಯೋಗೀಂದ್ರರ ಗುರುಗಳಿಗೆ ಗುರು. ಮೃತ್ಯುಂಜಯ, ಕಾಲನಿಗೆ ಕಾಲ, ಬ್ರಹ್ಮರೂಪವಾದ ಜ್ಯೋತಿ, ಸನಾತನ ಪರಮಾತ್ಮಸ್ವರೂಪ, ಸಗುಣನೂ ಹೌದು, ನಿರ್ಗುಣನೂ ಹೌದು, ಭಕ್ತರ ಧ್ಯಾನಕ್ಕಾಗಿ ನಿರ್ಮಲ ಶರೀರವನ್ನು ಧರಿಸಿದವ ಸರ್ವೇಶ್ವರ.'

ದೂತನ ಮಾತನ್ನು ಕೇಳಿ ಪರ್ವತರಾಜ ಸಂತುಷ್ಟನಾಗಿ ಮಧುಪರ್ಕಾದಿಗಳನ್ನು ಹಿಡಿದು ಶಂಕರನ ಬಳಿಗೆ ಹೊರಟ. ದೇವಿ ದೂತನ ಮಾತನ್ನು ಕೇಳಿ ಮುಖ ಕಣ್ಣುಗಳನ್ನು ಅರಳಿಸಿಕೊಂಡು ಅಂತರಂಗದಲ್ಲಿ ಮಹೇಶ್ವರ ತನಗಾಗಿಯೆ ಬಂದಿದ್ದಾನೆ ಎಂದುಕೊಂಡಳು. ಒಳ್ಳೆಯ ವೇಷ ಉತ್ತಮವಸ್ತ್ರಗಳನ್ನು ಧರಿಸಿ ಮನೋಹರವಾದ ರತ್ನಾಭರಣಗಳನ್ನೂ ಚಂದನಯುಕ್ತವಾದ ಪಾರಿಜಾತಮಾಲೆಗಳನ್ನೂ ತೊಟ್ಟು ಶಂಕರನಿಗಾಗಿಯೂ ಮಾಲೆಗಳನ್ನು ಸಿದ್ಧ ಪಡಿಸಿಕೊಂಡಳು. ರತ್ನಸಿಂಹಾಸನದಲ್ಲಿ ಕುಳಿತು ಕನ್ನಡಿಯಲ್ಲಿ ಮುಖ ನೋಡಿಕೊಂಡಳು. ಕಸ್ತೂರಿಯ ಮತ್ತು ಸಿಂಧೂರದ ಬೊಟ್ಟನ್ನಿಟ್ಟುಕೊಂಡಳು. ನಸುಗೆಂಪಿನ ಕಣ್ಣುಗಳಿಗೆ ಕಾಡಿಗೆ ಇಟ್ಟಳು. ಆಗ ಅದು ಶರತ್ಕಾಲದ ಮಧ್ಯಾಹ್ನದಲ್ಲಿ ಹಾರುವ ದುಂಬಿಗಳ ಸಾಲಿನಂತಾಯಿತು. ಪಕ್ವವಾದ ತೊಂಡೆ ಹಣ್ಣಿನಂಥ ಕೋಮಲವಾದ ತುಟಿಗಳನ್ನು ತಾಂಬೂಲರಾಗ ಯುಕ್ತವನ್ನಾಗಿ ಮಾಡಿದಳು. ಕಪೋಲಗಳಲ್ಲಿ ರತ್ನಕುಂಡಲಗಳು ಬೆಳಗಿದಾಗ ಸೂರ್ಯೋದಯದಿಂದ ಬೆಳಗುವ ಮೇರು ಶಿಖರಗಳಂತೆ ಆ ಕಪೋಲಗಳು ಕಂಡುವು. ದಂತಪಂಕ್ತಿಗಳು ಮುತ್ತಿನ ಸಾಲುಗಳಂತೆ ಹೊಳೆಯುತ್ತಿದ್ದುವು. ಮೂಗಿನ ಮೇಲಿನ ಮೂಗುತಿ ಮೇರುವಿನ ಮೇಲೆ ಶೋಭಿಸುವ ದೇವಗಂಗೆಯಂತೆ ಕಾಣುತ್ತಿತ್ತು. ಕಪ್ಪಾದ ಕೂದಲಿನ ಮೇಲೆ ಜಾಜಿ ಹೂಮಾಲೆ ಮೋಡಗಳ ನಡುವೆ ಹಾರುವ ಬಿಳಿ ಕೊಕ್ಕರೆಗಳ ಸಾಲಿನಂತಿತ್ತು. ಬಂಗಾರದಂತೆ ಹೊಳೆವ ವಕ್ಷಃಸ್ಥಳದಲ್ಲಿ ರತ್ನಹಾರ ಕಸ್ತೂರಿ ಕುಂಕುಮಗಳಿಂದ ಶೋಭಿಸುವ, ಸಂಪಿಗೆ ಬಣ್ಣದ, ಬೋರೆ ಹಣ್ಣಿನ ಗಾತ್ರದ ಸ್ತನಗಳು ಒಪ್ಪುತ್ತಿದ್ದುವು.

ತೆಳುವಾದ ನಡು, ಆಳವಾದ ನಾಭಿ, ರಮ್ಯವಾದ ಉದರ, ಬಾಳೆಕಂಬಗಳಂಥ ತೊಡೆಗಳು, ಅಲಕ್ತಕ ಹಚ್ಚಿ ರತ್ನದ ಗೆಜ್ಜೆ ತೊಟ್ಟು ರಾಜಹಂಸದಂತೆ ಅಡಿಯಿಡುವ ನೆಲದಾವರೆಯನ್ನು ಹೋಲುವ ಪಾದಗಳು; ಬಂಗಾರದಂತೆ ಹೊಳೆವ, ಕೋಮಲವಾದ, ಕೈಬಳೆ ತೋಳ್ಬಳೆಗಳಿಂದೊಪ್ಪುವ ಬಾಹುಗಳು. ಕೈಗಳಲ್ಲಿ ಲೀಲಾಕಮಲಗಳನ್ನು ಹಿಡಿದಳು. ರತ್ನದ ಉಂಗುರ ತೊಟ್ಟಳು. ಹೀಗೆ ದೇವಿ ತನ್ನನ್ನು ಸಿಂಗರಿಸಿಕೊಂಡು ಕನ್ನಡಿಯಲ್ಲಿ ನೋಡಿ ಶಂಕರನನ್ನು ನೆನೆದಳು. ಅವನ ಪಾದಕಮಲಗಳನ್ನು ಧ್ಯಾನಿಸಿದಳು. ತಂದೆ ತಾಯಿಗಳನ್ನಾಗಲಿ ಬಂಧುವರ್ಗದವರನ್ನಾಗಲಿ ಸೋದರನನ್ನಾಗಲಿ ಈ ನಡುವೆ ಒಂದಿಷ್ಟೂ ನೆನೆಯಲಿಲ್ಲ, ಶಿವನನ್ನೇ ನೆನೆದಳು.

ಪರ್ವತರಾಜ ಶಿವನ ದರ್ಶನ ಮಾಡಿದ. ಆಗ ಶಿವ ಗಂಗೆಯಲ್ಲಿ ಮಿಂದು ಕೈಯಲ್ಲಿ ಜಪಮಾಲೆ ಹಿಡಿದು ನನ್ನ ನಾಮವನ್ನು ಜಪಿಸುತ್ತಿದ್ದ. ಪುಟ್ಟಕ್ಕಿಟ್ಟ ಚಿನ್ನದಂತೆ ಹೊಳೆವ ಜಟೆಗಳನ್ನು ಹೊತ್ತು ನಾಗಯಜ್ಞೋಪವೀತ ಸರ್ಪಭೂಷಣಗಳಿಂದ ಅಲಂಕೃತನಾಗಿದ್ದ. ಹುಲಿಚರ್ಮ ಉಟ್ಟು ಮೈಗೆ ವಿಭೂತಿ ಬಳಿದುಕೊಂಡಿದ್ದ. ಶುದ್ಧ ಸ್ಫಟಿಕದಂಥ ಮೈ ಬಣ್ಣ. ಕೋಟಿ ಸೂರ್ಯರಂತೆ ಹೊಳೆಯುತ್ತಿತ್ತು. ಮೂರುಕಣ್ಣಿನ ಐದು ಮುಖಗಳಿಂದ ಕೂಡಿದ್ದು ಶೂಲಪಾಣಿಯಾಗಿ ವೃಷಭವಾಹನನಾಗಿ ಮೆರೆಯುತ್ತಿದ್ದ. ಸುತ್ತಲೂ ಬ್ರಹ್ಮತೇಜಸ್ಸಿನಿಂದ ಹೊಳೆವ ರುದ್ರರಿದ್ದರು. ಎಡದಲ್ಲಿ ಮಹಾಕಾಲ, ಬಲದಲ್ಲಿ ನಂದಿಕೇಶ್ವರ, ಮುಂದೆ ಭೂತ ಪ್ರೇತ ಪಿಶಾಚ ಕೂಷ್ಮಾಂಡ ಬ್ರಹ್ಮರಾಕ್ಷಸ ಬೇತಾಳ ಕ್ಷೇತ್ರಪಾಲ ಭೈರವರು. ಸನಕ ಸನಂದನ ಕುಮಾರ ಸನಾತನ ಜೈಗೀಷವ್ಯ ದೇವಲ ಕಣಾದ ಗೌತಮ ಪಿಪ್ಪಲಾದ ಕಣಖನ ವೋಢು ಪಂಚಶಿಖ ಕಠ ಜಾಜಲಿ ಕರಖ ಕರ್ಣ ಲೋಮಶ ಕಾತ್ಯಾಯನ ಪಾಣಿನಿ ಶಂಖ ದುರ್ವಾಸ ಶಾತಾತಪ ಪಾರಿಭದ್ರ ಅಷ್ಟಾವಕ್ರ ಮರುದ್ವವ ಮುಂತಾದ ಮುನಿಗಳು. ಪರ್ವತರಾಜ ಇವರನ್ನು ನಮಿಸಿದ. ಶಿವನ ಮುಂದೆ ಕೈ ಜೋಡಿಸಿ ತಲೆಬಾಗಿ ದಂಡಪ್ರಣಾಮ ಗೈದ. ಬಹಳ ಭಕ್ತಿಯಿಂದ ಪಾದ ಕಮಲಗಳನ್ನು ಹಿಡಿದು ಕಣ್ಣಲ್ಲಿ ನೀರುದುಂಬಿ ಮೈರೋಮಾಂಚಗೊಂಡು ತಲೆಬಾಗಿದ. ಹಿಂದಿನ ಬ್ರಾಹ್ಮದಿನದಲ್ಲಿ ಪುಷ್ಕರದಲ್ಲಿ ಸೂರ್ಯಗ್ರಹಣವಾದಾಗ ಧರ್ಮ ಉಪದೇಶಿಸಿದ್ದ ಸ್ತೋತ್ರದಿಂದ ಹಿಮಾಲಯನು ಶಿವನನ್ನು ಹೀಗೆ ಸ್ತುತಿಸಿದ -

'ನೀನೆ ಸೃಷ್ಟಿಕರ್ತನಾದ ಬ್ರಹ್ಮ. ನೀನೆ ಪಾಲಕನಾದ ವಿಷ್ಣು. ನೀನೆ ಮಂಗಳದಾಯಕನಾದ ಶಿವ. ನೀನೆ ಸರ್ವಸಂಹಾರಕಾರಕನಾದ ಅನಂತ. ನೀನೆ ನಿರ್ಗುಣನಾದ ಈಶ್ವರ, ಜ್ಯೋತಿರೂಪ, ಸನಾತನ, ಪ್ರಕೃತಿಯ ಆಚೆ ಇರುವವ, ಭಕ್ತರ ಧ್ಯಾನಕ್ಕಾಗಿ ನಾನಾ ರೂಪ ತಾಳುವವ. ಯಾರಿಗೆ ಯಾವ ರೂಪ ಇಷ್ಟವೋ ಆ ರೂಪವನ್ನು ಧರಿಸುವಿ. ಸೃಷ್ಟಿಜನಕ, ಸರ್ವ ತೇಜಗಳ ಆಧಾರನಾದ ಸೂರ್ಯ ನೀನೆ. ತಂಪಾದ ಕಿರಣಗಳಿಂದ ಸಸ್ಯಗಳನ್ನು ಕಾಪಾಡುವ ಚಂದ್ರ ನೀನೆ. ವಾಯು ವರುಣರೂ ನೀನೆ. ಸರ್ವದಾಹಕ ಅಗ್ನಿ ನೀನೆ. ದೇವರಾಜ ಇಂದ್ರನೂ ನೀನೆ. ಕಾಲ ಮೃತ್ಯು ಯಮ ಮೃತ್ಯುಂಜಯ ಮೃತ್ಯುಮೃತ್ಯು ಕಾಲಕಾಲ ಯಮಾಂತಕರೂ ನೀನೆ. ವೇದ ವೇದಾಂಗ ಪಾರಂಗತನಾಗಿದ್ದು ವೇದಕರ್ತನೂ ವೇದವೂ ಆಗಿರುವವ ನೀನೆ. ಜ್ಞಾನಿಗಳಿಗೆ ಜನಕ,

ಗುರುವಾಗಿದ್ದು ಜ್ಞಾನಿಯಾಗಿರುವೆ. ಮಂತ್ರ, ಜಪ, ತಪ, ಅವುಗಳಿಗೆ ಫಲ ನೀಡುವವ ನೀನೆ. ನೀನೆ ವಾಕ್, ವಾಗ್ದೇವಿ ನೀನೆ. ಅವಳಿಗೆ ಜನಕನೂ ಗುರುವೂ ನೀನೆ. ನಿನ್ನನ್ನು ಸ್ತೋತ್ರ ಮಾಡಲು ಯಾರು ಶಕ್ತರು?' ಹೀಗೆ ಹೇಳಿ ಹಿಮಾಲಯ ಶಿವನ ಕಾಲು ಹಿಡಿದು ನಿಂತ. ಶಿವ ನಂದಿಯ ಬೆನ್ನಿಂದ ಕೆಳಗೆ ಇಳಿದು ಸ್ತೋತ್ರವನ್ನು ಸ್ವೀಕರಿಸಿದ.

ಮಹಾ ಪುಣ್ಯಕರವಾದ ಈ ಸ್ತೋತ್ರವನ್ನು ಮೂರು ಹೊತ್ತು ಪಠಿಸುವವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಸಂಸಾರಸಾಗರದ ಎಲ್ಲ ಭಯಗಳೂ ಪರಿಹಾರವಾಗುವುವು. ಪುತ್ರನಿಲ್ಲದವನಿಗೆ ಒಂದು ತಿಂಗಳ ಸ್ತೋತ್ರಪಾಠದಿಂದ ಪುತ್ರಲಾಭ. ಭಾರ್ಯೆ ಇಲ್ಲದವನಿಗೆ ಸುಶೀಲೆಯಾದ ಸುಂದರಿಯಾದ ಭಾರ್ಯೆ ದೊರಕುವಳು. ಬಹುಕಾಲದಿಂದ ಕಳೆದುಹೋಗಿದ್ದ ವಸ್ತು ಬೇಗನೆ ದೊರಕುವುದು. ರಾಜ್ಯಭ್ರಷ್ಟನಾದವನಿಗೆ ರಾಜ್ಯಲಾಭ. ಕಾರಾಗಾರ, ಸ್ಮಶಾನಗಳಲ್ಲಿ, ಶತ್ರುಮಧ್ಯದಲ್ಲಿ, ಅತಿ ಸಂಕಟಕಾಲದಲ್ಲಿ, ಆಳದ ನೀರಲ್ಲಿ, ನೌಕೆ ಒಡೆದ ಕಾಲದಲ್ಲಿ, ವಿಷ ಭಕ್ಷಣಕಾಲದಲ್ಲಿ, ಯುದ್ಧ ಕಾಲದಲ್ಲಿ, ಹಿಂಸ್ರ ಮೃಗಜಂತುಗಳ ಮಹಾಭಯ ಬಂದ ಕಾಲದಲ್ಲಿ, ಈ ಸ್ತೋತ್ರಪಠನದಿಂದ ಶಿವನ ಅನುಗ್ರಹವಾಗುತ್ತದೆ, ಸರ್ವ ಭಯ ನಿವಾರಣೆಯಾಗುತ್ತದೆ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ಪಾರ್ವತೀಗರ್ವಭಂಗಪ್ರಸ್ತಾವವೆಂಬ ಮೂವತ್ತೆಂಟನೆ ಅಧ್ಯಾಯ ಮುಗಿಯಿತು.*

—o—

## ಅಧ್ಯಾಯ - ೩೯

ಹಿಮಾಲಯನು ಹೀಗೆ ಶಿವನನ್ನು ಸ್ತುತಿಸಿ ಅವನ ಎದುರಿಗೆ ದೂರದಲ್ಲಿ ನಿಂತು ಬಳಿಕ ಅವನ ಅನುಜ್ಞೆ ಪಡೆದು ಮಧುಪರ್ಕಾದಿಗಳನ್ನು ಭಕ್ತಿಯಿಂದ ನೀಡಿದ. ಮುನಿಗಳನ್ನೂ ಶಂಕರನ ಪರಿವಾರದವರನ್ನೂ ಪೂಜಿಸಿದ. ಮೇನಕೆಯೂ ಸ್ತ್ರೀಯರೊಂದಿಗೆ ಬಂದು ಆಲದ ಮರದ ಬುಡದಲ್ಲಿ ಚಂದ್ರಶೇಖರನಾದ ಶಂಕರನನ್ನು ಕಂಡಳು. ಮಂದಹಾಸದಿಂದ ಅರಳಿದ ಮೊಗದವನು, ಹುಲಿದೊವಲನ್ನುಟ್ಟವನು, ನಕ್ಷತ್ರಗಳ ನಡುವೆ ಚಂದ್ರನಂತೆ ಮುನಿಗಳ ನಡುವೆ ಬ್ರಹ್ಮತೇಜದಿಂದ ಬೆಳಗುವವನು. ಬಹು ಆಹ್ಲಾದಕರವಾದ ರೂಪದಿಂದ ಕೋಟಿ ಮನ್ಮಥರಂತೆ ಕಾಣುವವನು. ನವಯೌವನ ಭರಿತ ಸುಂದರರೂಪದಿಂದ ಹೆಣ್ಣುಗಳ ಮನವನ್ನು ಕದಿವವನು, ಕಾಮಾತುರರಿಗೆ ಕಾಮನಂತೆ, ಪತಿವ್ರತೆಯರಿಗೆ ಮಗುವಿನಂತೆ ಕಾಣುವವನು. ವೈಷ್ಣವರಿಗೆ ಮಹಾವಿಷ್ಣು, ಶೈವರಿಗೆ ಸದಾಶಿವ, ಶಾಕ್ತರಿಗೆ ಶಕ್ತಿ, ಸೌರರಿಗೆ ಸೂರ್ಯ, ದುಷ್ಟರಿಗೆ ಯಮ, ಶಿಷ್ಟರಿಗೆ ರಕ್ಷಕ, ಕಾಲನಿಗೆ ಕಾಲ, ಮೃತ್ಯುವಿಗೆ ಭಯಾನಕ ಮೃತ್ಯುಮೃತ್ಯು ಇವನೆ. ಅವನಿಗೆ ಹುಲಿದೊವಲೆ ಉತ್ತಮ ವಸ್ತ್ರ, ವಿಭೂತಿಯೆ ಚಂದನ, ಹಾವುಗಳೆ ಸುಂದರ ಹೂಮಾಲೆಗಳು, ವಿಷವೆ ಕಸ್ತೂರಿ. ಜಟೆಯೆ ಸುಂದರ ಕೇಶಪಾಶ. ಗಂಗೆಯ ಪ್ರವಾಹವೇ ಜಾಜಿಯ ಹೂಮಾಲೆ. ಅಸ್ಥಿಮಾಲೆಯೆ ರತ್ನಮಾಲೆ. ಧತ್ತೂರವೆ ಸಂಪಿಗೆ. ಐದು ಮೊಗಗಳು ತಾವರೆಗಣ್ಣಿಂದ ಕೂಡಿ ಶರತ್ಕಾಲದ ಹುಣ್ಣಿಮೆಚಂದ್ರನಂತೆ ಬೆಳಗುವುವು. ಈ ಎಲ್ಲ ವಿಪರೀತ ಸೌಂದರ್ಯವನ್ನು ಕಂಡು ಮೇನೆ ಸಂತುಷ್ಟಳಾದಳು. ಅವಳ ಜೊತೆಗೆ ಬಂದ ಸ್ತ್ರೀಯರಲ್ಲಿ ಕೆಲವರು ಶಿವನನ್ನು ಕಂಡು ಮೋಹಗೊಂಡರು. ರೋಮಾಂಚಗೊಂಡು ಬಿಟ್ಟಕಣ್ಣುಗಳಿಂದ ನೋಡಿದರು. ಕೆಲವರು ಅತಿ ಕಾಮಾತುರರಾಗಿ ಮೈಮರೆತರು. ತಮ್ಮ ಪತಿಗಳನ್ನು ಅನಾದರಿಸಿ ಶಿವನನ್ನೆ ಹೊಗಳಿದರು. ಮನಸ್ಸಿನಲ್ಲಿಯೆ ಶಿವನನ್ನು ಆಲಿಂಗಿಸಿಕೊಂಡರು, ಚುಂಬಿಸಿದರು. ನಮ್ಮ ಪತಿಗಳೂ ಹೀಗೆ ಇರುತ್ತಿದ್ದರೆ ನಾವೆಷ್ಟು ಸುಖ ಪಡುತ್ತಿದ್ದೆವು ಎಂದುಕೊಂಡರು. ಕೆಲವರು ಶಿವನನ್ನು ಕಂಡು ನಾಚಿ ಸೆರಗಿಂದ ಮುಖಮುಚ್ಚಿ ಕಡೆಗಣ್ಣಿಂದ ಪುನಃಪುನಃ ನೋಡಲು ತೊಡಗಿದರು. ನಾವು ಮನೆಗೇ ಹೋಗಲಾರೆವು, ಇಲ್ಲಿಯೆ ಇದ್ದು ಸದಾ ಶಿವನ ಮುಖಚಂದ್ರಮನನ್ನೆ ನೋಡುವೆವು. ಅಥವಾ ಅಗ್ನಿಪ್ರವೇಶ ಮಾಡಿ ಮುಂದಿನ ಜನ್ಮದಲ್ಲಾದರೂ ಶಿವನ ಮಡದಿಯರಾಗುವೆವು ಎಂದರು. ಆ ಪಾರ್ವತಿಯ ಪುಣ್ಯವೇ ಪುಣ್ಯ. ಅವಳಿಗೆ ಈ ಶಿವ ಪತಿಯಾಗಲಿದ್ದಾನೆ! ಎಂದರು. ಮೇನೆಯೂ ಹಿಮಾಲಯನೂ ಶಿವನನ್ನು ಪೂಜಿಸಿ ಅರಮನೆಗೆ ತೆರಳಿದರು.

ಏಕಾಂತದಲ್ಲಿ ಹಿಮಾಲಯನು ಮೇನೆಯೊಡನೆ ಮಾತನಾಡಿಕೊಂಡು ದುರ್ಗೆಯನ್ನು ಶಿವನ ಸನ್ನಿಧಿಗೆ ಕಳಿಸಿದ. ದೇವಿ ಒಳ್ಳೆಯ ವೇಷಭೂಷಣಗಳನ್ನು ಧರಿಸಿ ಸಖಿಯರೊಡನೆ ಅನುರಾಗ ತುಂಬಿದ ಎದೆಯಲ್ಲಿ ಆನಂದಗೊಂಡು ಶಿವನ ಬಳಿಗೆ

ನಡೆದಳು. ಶಾಂತನಾಗಿ ಪ್ರಸನ್ನಮುಖದಿಂದಿದ್ದ ಶಿವನಿಗೆ ನಗುತ್ತ ಏಳು ಪ್ರದಕ್ಷಿಣೆಗಳನ್ನು ಮಾಡಿ ನಮಿಸಿದಳು. ಶಿವ 'ಅನನ್ಯಭಾವದಿಂದ ಪ್ರೀತಿಮಾಡುವ ಜ್ಞಾನಿಯಾದ ಸುಂದರನಾದ ಪತಿಯನ್ನು ಹೊಂದು' ಎಂದು ಹರಸಿದ. 'ಒಳ್ಳೆಯ ಪತಿಯನ್ನು ಹೊಂದಿ ಸೌಭಾಗ್ಯವತಿ ಎನಿಸುವಿ. ನಾರಾಯಣನಂಥ ಮಗನನ್ನೂ ಪಡೆಯುವಿ. ಮೂಲೋಕದಲ್ಲಿ ಪೂಜ್ಯಳೆನಿಸುವಿ. ಏಳು ಪ್ರದಕ್ಷಿಣೆ ಮಾಡಿರುವುದರಿಂದ ಏಳು ಜನ್ಮದಲ್ಲಿಯೂ ನಿನ್ನಲ್ಲಿ ಸಂತುಷ್ಟನಾಗಿ ಅಭೀಷ್ಟಗಳನ್ನು ನೀಡುವೆನು.

**ತೀರ್ಥೇ ಕಾಂತೇಽಭೀಷ್ಟದೇವೇ ಗುರೌ ಮಂತ್ರೇ ತಥೌಷಧೇ।**
**ಆಸ್ಥಾ ಚ ಯಾದೃಶೀ ಯಾಸಾಂ ಸಿದ್ಧಿಸ್ತಾಸಾಂ ಚ ತಾದೃಶೀ॥**

ತೀರ್ಥಕ್ಷೇತ್ರಗಳಲ್ಲಿ ಪತಿಯಲ್ಲಿ ಇಷ್ಟದೇವತೆಯಲ್ಲಿ ಗುರುವಿನಲ್ಲಿ ಮಂತ್ರದಲ್ಲಿ ಮತ್ತು ಔಷಧದಲ್ಲಿ ಯಾರಿಗೆ ಯಾವ ಬಗೆಯ ನಿಷ್ಠೆ ಇರುವುದೋ ಅವರಿಗೆ ಅದೇ ಬಗೆಯ ಸಿದ್ಧಿಯೂ ದೊರಕುತ್ತದೆ'.

ಹೀಗೆ ಹೇಳಿ ಶಿವ ಕೂಡಲೆ ಹುಲಿಚರ್ಮದ ಮೇಲೆ ಯೋಗಾಸನದಲ್ಲಿ ಕುಳಿತು ಧ್ಯಾನ ಮಾಡಲು ತೊಡಗಿದ. ದೇವಿ ಅವನ ಕಾಲು ತೊಳೆದು ಆ ನೀರನ್ನು ಕುಡಿದಳು. ನಿರ್ಮಲವಾದ ವಸ್ತ್ರ, ವಿಶ್ವಕರ್ಮ ನಿರ್ಮಿತವಾದ ರತ್ನಸಿಂಹಾಸನ, ಕಂಚಿನ ಪಾತ್ರೆಯಲ್ಲಿಟ್ಟ ಅಪೂರ್ವ ನೈವೇದ್ಯ, ಗಂಗಾಜಲಯುಕ್ತವಾದ ಅರ್ಘ್ಯ, ಪರಿಮಳದ ಕಸ್ತೂರಿ ಕುಂಕುಮ ಯುಕ್ತ ಗಂಧ, ಜಾಜಿಹೂಮಾಲೆಗಳನ್ನು ಅರ್ಪಿಸಿ ಭಕ್ತಿಯಿಂದ ಪೂಜಿಸಿದಳು. ಪುಷ್ಪವೃಷ್ಟಿಗೈದಳು. ಬಂಗಾರದ ತಟ್ಟೆಯಲ್ಲಿ ಮಧುರವಾದ ಅಮೃತವನ್ನಿತ್ತಳು. ಉತ್ತಮವಾದ ಧೂಪ, ರತ್ನದೀಪ, ಸುವರ್ಣದ ಯಜ್ಞೋಪವೀತ, ಸುಗಂಧಭರಿತವಾದ ತಂಪಾದ ಕುಡಿವ ನೀರು, ರತ್ನಾಭರಣಗಳು ಇವನ್ನು ನೀಡಿದಳು. ಚಿನ್ನದ ಕೊಂಬಿನ ದುರ್ಲಭವಾದ ಕಾಮಧೇನುವನ್ನಿತ್ತಳು. ಸ್ನಾನದ ಪವಿತ್ರ ಜಲವನ್ನಿತ್ತಳು. ಮನೋಹರವಾದ ತಾಂಬೂಲವನ್ನಿತ್ತಳು. ಹೀಗೆ ಷೋಡಶೋಪಚಾರಗಳನ್ನು ಸಲ್ಲಿಸಿ ಪುನಃ ಪುನಃ ನಮಸ್ಕರಿಸಿದಳು. ಹೀಗೇ ಪ್ರತಿದಿನ ಭಕ್ತಿಯಿಂದ ಶಿವನನ್ನು ಪೂಜಿಸಿ ದೇವಿ ಅರಮನೆಗೆ ನಡೆದಳು.

ಅಪ್ಸರೆಯರ ಮುಖದಿಂದ ಈ ವಾರ್ತೆಯನ್ನು ದೇವೇಂದ್ರ ಕೇಳಿ ಆನಂದದಿಂದ ಕುಣಿದ. ಬೇಗನೆ ದೂತನಿಂದ ಮನ್ಮಥನನ್ನು ಕರೆಸಿಕೊಂಡ. ಇಂದ್ರನ ಆಜ್ಞೆಯಂತೆ ಕಾಮದೇವ ಅಮರಾವತಿಗೆ ಬಂದು ಇಂದ್ರನಾದೇಶದಂತೆ ಶಿವಪಾರ್ವತಿಯರಿದ್ದಲ್ಲಿಗೆ ನಡೆದ. ಐದು ಬಾಣಗಳನ್ನು ಹಿಡಿದು ಶಿವೆಯೊಡನಿದ್ದ ಶಿವನಿಗೆ ಎಸೆದ. ಆದರೆ ಅಮೋಘವಾದ ಆ ಬಾಣಗಳು ಆಕಾಶದಂತೆ ನಿರ್ಲಿಪ್ತನಾದ ಶಿವನಲ್ಲಿ ವ್ಯರ್ಥವಾದುವು. ಮೃತ್ಯುಂಜಯನಾದ ಆ ಶಿವನನ್ನು ಕಂಡು ಕಾಮದೇವ ಭಯದಿಂದ ನಡುಗಿದ. ಭಯ ವಿಹ್ವಲತೆಯಿಂದ ಇಂದ್ರಾದಿ ದೇವತೆಗಳನ್ನು ನೆನೆದ. ದೇವತೆಗಳೆಲ್ಲರೂ ಬಂದು ಶಿವನ ಕೋಪಕ್ಕೆ ನಡುಗುತ್ತ ಸ್ತೋತ್ರ ಮಾಡಿದರು. ಆದರೆ ಶಿವನ ಹಣೆಯಿಂದ ಬೆಂಕಿ ಪ್ರಳಯಾಗ್ನಿಯಂತೆ ಉರಿದು ಬಂದು ಆಕಾಶದಲ್ಲಿ ಬಲು ಎತ್ತರಕ್ಕೆ ಹಾರಿ ವೇಗದಿಂದ ಕೆಳಗಿಳಿದು ಮನ್ಮಥನ ಮೇಲೆ ಬಿದ್ದಿತು. ಕ್ಷಣದಲ್ಲಿ ಮನ್ಮಥ ಸುಟ್ಟು ಬೂದಿಯಾದ.

ದೇವತೆಗಳೆಲ್ಲರೂ ವಿಷಣ್ಣರಾದರು. ಪಾರ್ವತಿ ಮುಖ ತಗ್ಗಿಸಿದಳು. ಶಿವನ ಮುಂದೆ ರತಿ ಬಹುವಾಗಿ ವಿಲಾಪಮಾಡಿದಳು. ದೇವತೆಗಳೆಲ್ಲರೂ ನಡುಗುತ್ತ ಸ್ತೋತ್ರ ಮಾಡಿದರು. ರತಿಯನ್ನು ಸಂತೈಸುತ್ತ ತಾವು ಕಣ್ಣೀರಿಟ್ಟರು. 'ಅಮ್ಮ, ಒಂದಿಷ್ಟು ಬೂದಿಯನ್ನು ಹಿಡಿದುಕೊಂಡು ಜೋಪಾನವಾಗಿಡು. ಭಯಪಡಬೇಡ. ಮನ್ಮಥನನ್ನು ನಾವು ತಿರುಗಿ ಬದುಕುವಂತೆ ಮಾಡುತ್ತೇವೆ. ನಿನಗೆ ನಿನ್ನ ಪ್ರಿಯಕರ ಪುನಃ ಸಿಗುತ್ತಾನೆ. ಶಿವನ ಕೋಪ ಶಾಂತವಾದ ಬಳಿಕ ಒಂದು ಸುದಿನದಲ್ಲಿ ಆತ ಬದುಕಿ ಬಂದೇ ಬರುತ್ತಾನೆ,' ಎಂದರು.

ರತಿ ವಿಲಾಪ ಮಾಡುವುದನ್ನು ಕಂಡು ಪಾರ್ವತಿ ಮೂರ್ಛೆ ಹೊಂದಿದಳು. ಎದ್ದು ಅತೀಂದ್ರಿಯನಾದ ಗುಣಾತೀತನಾದ ಚಂದ್ರಶೇಖರನನ್ನು ಸ್ತುತಿಸಿದಳು. ಶಿವ ಅಳುತ್ತಿದ್ದ ಪಾರ್ವತಿಯನ್ನು ಹಾಗೇ ಬಿಟ್ಟು ತನ್ನ ಸ್ಥಾನಕ್ಕೆ ಹಿಂತಿರುಗಿದ. ಆಗಲೆ ದೇವಿಯ ದರ್ಪ ಶಮನಗೊಂಡಿತ್ತು. ರೂಪ ಯೌವನಗಳ ದರ್ಪವನ್ನು ದೇವಿ ತೊರೆದುಬಿಟ್ಟಳು. ಅವಳಿಗೆ ಸಖಿಯರ ಮುಂದೆ ಮುಖ ತೋರಿಸಲು ಲಜ್ಜೆಯಾಯಿತು. ದೇವತೆಗಳು ರತಿಯನ್ನು ಸಂತೈಸಿ ಶಿವನಿಗೆ ದಂಡಪ್ರಣಾಮ ಮಾಡಿ ಶೋಕೋದ್ವೇಗದಿಂದ ತಮ್ಮ ಲೋಕಗಳಿಗೆ ಹಿಂತಿರುಗಿದರು. ಶೋಕ ಭಯಗಳಿಂದ ವಿಹ್ವಲಳಾದ ರತಿ ಕೋಪದ ಕೆಂಗಣ್ಣ ಶಿವನನ್ನು ನಮಿಸಿ ತನ್ನ ಲೋಕಕ್ಕೆ ಹೋದಳು. ಪಾರ್ವತಿ ಲಜ್ಜೆಗೊಂಡು ಅರಮನೆಗೆ ಹೊಗದೆ ಸಖಿಯರ ಮಾತಿಗೂ ಕಿವಿಗೊಡದೆ ತಪಸ್ಸಿಗಾಗಿ ಕಾಡಿಗೇ ತೆರಳಿದಳು. ತಾಯಿ ಬೇಡವೆಂದರೂ ಕೇಳದೆ ಗಂಗಾ ತೀರದ ಅರಣ್ಯದಲ್ಲಿ ಬಹುಕಾಲ ತಪಸ್ಸು ಮಾಡಿ ಶಿವನನ್ನು ಹೊಂದಿದಳು. ಶಿವನ ವರದಿಂದ ರತಿ ಮನ್ಮಥನನ್ನು ಪುನಃ ಪಡೆದಳು.

ರಾಧೆ, ಇದು ಪಾರ್ವತೀ ದರ್ಪಭಂಗದ ಕಥೆ. ಇನ್ನೇನು ಕೇಳಲು ಬಯಸುವೆ?

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ರಾಧಾಕೃಷ್ಣ ಸಂವಾದದಲ್ಲಿ ಪಾರ್ವತೀದರ್ಪಭಂಗವೆಂಬ ಮೂವತ್ತೊಂಬತ್ತನೆ ಅಧ್ಯಾಯ ಮುಗಿದುದು*

—o—

**ರಾಧೆ:-** ಪ್ರಭು, ಇದು ವಿಚಿತ್ರವಾದ ಅಪೂರ್ವ ಕಥೆಯೆ ಸರಿ. ಸುಂದರವಾಗಿದೆ, ಕರ್ಣಮಧುರವಾಗಿದೆ. ರಹಸ್ಯವಾಗಿದ್ದು ಉದ್ಬೋಧಕವೂ ಆಗಿದೆ. ಅದನ್ನು ನೀನು ಬಹು ಸಂಕ್ಷೇಪವಾಗಿ ಹೇಳಿರುವಿ. ವಿಸ್ತಾರವಾಗಿ ಹೇಳು. ಪಾರ್ವತಿ ಯಾವ ಯಾವ ಕಠೋರ ತಪಸ್ಸುಗಳನ್ನು ಮಾಡಿದಳು? ಏನೇನು ವರಪಡೆದು ಶಿವನನ್ನು ಹೊಂದಿದಳು? ರತಿ ಹೇಗೆ ಮನ್ಮಥನನ್ನು ಬದುಕಿ ಬರುವಂತೆ ಮಾಡಿದಳು? ಪಾರ್ವತಿ ಶಿವರ ವಿವಾಹ, ಮುಂದೆ ಅವರ ವಿಹಾರಗಳನ್ನೂ ವರ್ಣಿಸು. ಅದು ಪಾಪಿಗಳ ಪಾಪಮೋಚಕ, ದುಃಖಿಗಳ ದುಃಖಪರಿಹಾರಕ. ದಂಪತಿಗಳಿಗೆ ವಿಯೋಗವಾಯಿತೆಂಬುದು ಸ್ತ್ರೀಯರಿಗೆ ಕೇಳಲು ಕರ್ಣಕಠೋರ. ಅದರಿಂದ ಪುನಃ ಶಿವಪಾರ್ವತಿಯರು ಒಂದುಗೂಡಿದ ವೃತ್ತಾಂತವನ್ನು ಕೇಳುವ ಆಸೆ ನನಗೆ.

**ಅಗ್ನಿಜ್ವಾಲಾ ವಿಷಜ್ವಾಲಾ ಕ್ಷಮಾ ಸೋಢುಂ ಚ ಯೋಷಿತಃ ।**
**ದಂಪತೀವಿರಹಜ್ವಾಲಾ ನ ಶ್ರೋತುಂ ಚ ಕ್ಷಣಂ ಕ್ಷಮಾ ॥**

'ಅಗ್ನಿಜ್ವಾಲೆಯನ್ನಾಗಲಿ ವಿಷಜ್ವಾಲೆಯನ್ನಾಗಲಿ ಹೆಣ್ಣು ಸಹಿಸಬಲ್ಲಳು. ದಂಪತಿಗಳ ವಿರಹಜ್ವಾಲೆಯನ್ನು ಕೇಳಿ ಒಂದು ಕ್ಷಣ ಸಹಿಸಲಾರಳು.' ರಾಧೆಯ ಮಾತನ್ನು ಕೇಳಿ ಶ್ರೀಕೃಷ್ಣ ವಿಸ್ತಾರವಾಗಿ ಹೇಳಲು ತೊಡಗಿದ. ಆಗ ಅವನ ಹೃದಯದಲ್ಲಿ ಚಿಂತೆ ಕಾಡುತ್ತಿತ್ತು ಯಾರೋ ದಂಪತಿಗಳ ವಿರಹದ ಕಥೆಯನ್ನು ಕೇಳಿ ಸಹಿಸಲಾರದ ಈ ರಾಧೆ ಇನ್ನು ನೂರು ವರ್ಷಕಾಲ ನನ್ನನ್ನು ಬಿಟ್ಟು ಹೇಗೆ ಇರಬಲ್ಲಳು ಎಂದು. ಹೀಗೆ ಮನಸ್ಸಿನಲ್ಲಿ ಯೋಚಿಸುತ್ತಲೆ ಕೃಪಾಸಮುದ್ರನಾದ **ಕೃಷ್ಣ ಕೃಪೆಯಿಂದ ಹೇಳತೊಡಗಿದ.**

'ಪ್ರಾಣಾಧಿಕಳಾದ ರಾಧೆಯೆ, ಕೇಳು. ಆಲದ ಮರದ ಬುಡದಿಂದ ಶಿವ ಹೊರಟು ಹೋದಾಗ ಪಾರ್ವತಿ ತಪಸ್ಸಿಗೆ ಹೋದಳು. ಪುನಃ ಪುನಃ ತಾಯಿತಂದೆಗಳು ಎಷ್ಟು ತಡೆದರೂ ಅವಳು ನಿಲ್ಲಲಿಲ್ಲ. ಗಂಗಾತೀರಕ್ಕೆ ಹೋಗಿ ಮೂರು ಹೊತ್ತು ಸ್ನಾನ ಮಾಡಿ ನಾನು ಉಪದೇಶಿಸಿದ ಮಂತ್ರವನ್ನು ಜಪಿಸಿದಳು. ಒಂದು ವರ್ಷ ಪೂರ್ತಿ ಉಪವಾಸವಿದ್ದು ಭಕ್ತಿಯಿಂದ ಕಠೋರವಾದ ತಪಸ್ಸನ್ನಾಚರಿಸಿದಳು. ಬೇಸಗೆಯಲ್ಲಿ ಸುತ್ತಲೂ ಉರಿವ ಬೆಂಕಿಯ ನಡುವೆ ಸತತವಾಗಿ ಜಪಿಸಿದಳು. ಮಳೆಗಾಲದಲ್ಲಿ ಸ್ಮಶಾನದಲ್ಲಿ ಯೋಗಾಸನ ಹಾಕಿ ಮಳೆಯಲ್ಲಿ ತೊಯ್ದುಕೊಂಡು ಜಪಿಸಿದಳು. ಚಳಿಗಾಲದಲ್ಲಿ ನೀರ ನಡುವೆ ತಪಸ್ಸು ಮಾಡಿದಳು. ಹೀಗೆ ಒಂದು ವರ್ಷ ತಪಸ್ಸು ಮಾಡಿದರೂ ಶಿವಪ್ರಾಪ್ತಿಯಾಗಲಿಲ್ಲ. ಹತಾಶಳಾಗಿ ಅಗ್ನಿಪ್ರವೇಶ ಮಾಡಲು ಉದ್ಯುಕ್ತಳಾದಳು. ತಪಸ್ಸಿನಿಂದ ಅತ್ಯಂತ ಕೃಶಳಾಗಿದ್ದು ಅಗ್ನಿಕುಂಡಕ್ಕೆ ಹಾರಲು ಯತ್ನಿಸುತ್ತಿದ್ದ ದೇವಿಯನ್ನು ಕಂಡು ಕರುಣಾಸಮುದ್ರನಾದ ಶಿವ ಅವಳ ಬಳಿಗೆ ಬಂದ.

ಸಣ್ಣ ವಟು ರೂಪದಿಂದ ಶಿವ ಬಂದ. ದಂಡ ಛತ್ರಗಳನ್ನು ಹಿಡಿದು ಬ್ರಹ್ಮ ವರ್ಚಸ್ಸಿನಿಂದ ಪ್ರಜ್ವಲಿಸುತ್ತ ಬಂದ. ಬಿಳಿ ಬಟ್ಟೆಯುಟ್ಟು ಉಜ್ವಲವಾದ ತಿಲಕವಿಟ್ಟುಕೊಂಡು ಜಟೆಯಿಂದ ಶೋಭಿಸುತ್ತ ಕೈಯಲ್ಲಿ ಕಮಲಮಣಿಮಾಲೆ ಹಿಡಿದು ಪ್ರಸನ್ನನಾಗಿ ಬಂದ. ನಿರ್ಜನವಾದ ಅರಣ್ಯದಲ್ಲಿ ಬಾಲಕನನ್ನು ಕಂಡು ದೇವಿ ಪ್ರೀತಿಯಿಂದ ಮಾತನಾಡಿಸಿದಳು. ಅವನ ತೇಜಸ್ಸಿನಿಂದ ದೇವಿಯ ತಪಸ್ಸು ನಿಂತೇ ಹೋಗಿತ್ತು. 'ಮಗು! ನೀನಾರು' ಎಂದಳು. ಮನಸಿನಲ್ಲಿಯೆ ಅವನನ್ನು ಅಪ್ಪಿ ಮುದ್ದಿಡಲು ಬಯಸಿದಳು. ಶಿವ ಅವಳ ಮಾತನ್ನು ಕೇಳಿ ಮಧುರವಾಗಿ ಕಿವಿಗೆ ಅಮೃತದಂತಿದ್ದ ಮಾತುಗಳನ್ನಾಡಿದ.

**ಶಿವ:-** ನಾನು ಮನ ಬಂದಂತೆ ಸಂಚರಿಸುವ ತಪಸ್ವಿ ಬಾಲಕ. ಇರಲಿ ನೀನಾರು? ಸುಂದರಿಯಾಗಿರುವಿ. ಕಾಡಿನಲ್ಲಿ ತಪಸ್ಸು ಮಾಡುತ್ತಿರುವಿ. ಯಾರ ಕುಲದಲ್ಲಿ ಬಂದಿರುವಿ? ಯಾರ ಮಗಳು? ಏನು ನಿನ್ನ ಹೆಸರು? ತಪಸ್ಸಿಗೆ ಫಲ ಕೊಡಬಲ್ಲದೇವಿ ನೀನು ಏಕೆ ತಪಸ್ಸು ಮಾಡುತ್ತಿರುವೆ? ನಿನ್ನನ್ನು ಕಂಡರೆ ತಪಸ್ಸೇ ಮೈ ತಳೆದು ನಿಂತಂತಿರುವೆ. ಪ್ರಾಯಃ ತಪಸ್ಸೆಂದರೆ ಹೀಗಿರುತ್ತದೆ ಎಂದು ಲೋಕಕ್ಕೆ ತಿಳಿಸಲು ತಪಸ್ಸು ಮಾಡುತ್ತಿರುವೆ. ನೀನು ಮೂಲಪ್ರಕೃತಿಯೆ ಸರಿ. ಭಕ್ತರಿಗೆ ಧ್ಯಾನಕ್ಕೆ ಅನುಕೂಲವಾಗಲೆಂದು ರೂಪು ತಳೆದು ಭಾರತದಲ್ಲಿ ಜನಿಸಿರುವಿ. ಅಥವಾ ಮೂಲೋಕದ ಸಂಪದ್ರೂಪಳಾದ ಲಕ್ಷ್ಮಿಯೆ ನೀನು? ಸಾವಿತ್ರಿಯೆ? ಸರಸ್ವತಿಯೆ? ಎಲ್ಲ ವಿದ್ಯೆಗಳಲ್ಲಿ ಪ್ರಕಟಮಾಡಲು ಸ್ವೇಚ್ಛೆಯಿಂದ ಅವತರಿಸಿದವಳೆ? ಇವರೊಳಗೆ ನೀನಾರೆಂದು ನಾನು ಊಹಿಸಲು ಶಕ್ತನಲ್ಲ. ನೀನು ಯಾರೇ ಆಗಿರಲಿ, ನನ್ನಲ್ಲಿ ಸಂತುಷ್ಟಳಾಗು. ನೀನು ಸಂತುಷ್ಟಳಾದರೆ ಪರಮೇಶ್ವರ ಸಂತುಷ್ಟನಾಗುತ್ತಾನೆ.

**ಪತಿವ್ರತಾಯಾಂ ತುಷ್ಟಾಯಾಂ ತುಷ್ಟೋ ನಾರಾಯಣಃ ಸ್ವಯಂ**
**ತುಷ್ಟೇ ನಾರಾಯಣೇ ದೇವೇ ಶಶ್ವತ್ ತುಷ್ಟಂ ಜಗತ್ರಯಂ।**
**ತರುಮೂಲೇಷು ಸಿಕ್ತೇಷು ಶಾಖಾಃ ಸಿಕ್ತಾ ಯಥಾ ಪ್ರಿಯೇ ॥**

ಪತಿವ್ರತೆಯಾದ ಹೆಣ್ಣು ಸಂತುಷ್ಟಳಾದರೆ ನಾರಾಯಣ ಸಂತುಷ್ಟನಾಗುತ್ತಾನೆ. ನಾರಾಯಣ ಸಂತುಷ್ಟನಾದರೆ ಮೂಲೋಕ ಸಂತುಷ್ಟವಾಗುತ್ತದೆ. ಮರದ ಬೇರು ನೀರುಂಡರೆ ರೆಂಬೆಗಳೂ ನೀರುಣ್ಣುತ್ತವೆ ತಾನೆ?

ಬಾಲಕನ ಮಾತನ್ನು ಕೇಳಿ ದೇವಿ ನಕ್ಕು ಮಧುರವಾಗಿ ನುಡಿದಳು.

**ಪಾರ್ವತಿ:-** ನಾನು ವೇದಮಾತೆಯಲ್ಲ, ಲಕ್ಷ್ಮಿಯಲ್ಲ, ಸರಸ್ವತಿಯಲ್ಲ. ನಾನು ಭಾರತದೇಶದಲ್ಲಿ ಹಿಮಾಲಯ ಪರ್ವತರಾಜನ ಕನ್ನಿಕೆಯಾಗಿ ಜನಿಸಿದವಳು. ಹಿಂದೆ ನಾನು ದಕ್ಷಪುತ್ರಿಯಾಗಿ ಜನಿಸಿ ಶಿವನ ಅರ್ಧಾಂಗಿಯಾಗಿದ್ದೆ. ಪತಿನಿಂದೆಯನ್ನು ಕೇಳಿ ಸಹಿಸದೆ ಯೋಗಬಲದಿಂದ ಶರೀರತ್ಯಾಗಮಾಡಿ ಪುನಃ ಹುಟ್ಟಿದ್ದೇನೆ. ಈಜನ್ಮದಲ್ಲಿಯೂ ಪುಣ್ಯವಶದಿಂದ ನನಗೆ ಶಿವನೊಮ್ಮೆ ದೊರೆತ. ಆದರೆ ಆತ ನನ್ನನ್ನು ಬಿಟ್ಟು ಹೋದ. ಮನ್ಮಥನನ್ನು ಸುಟ್ಟು ಹೊರಟು ಹೋದ. ಅವನು ಹೋದಂದಿನಿಂದ ನಾನು ದುಃಖದಿಂದ ತಂದೆಯ ಮನೆಯನ್ನು ತೊರೆದು ಈಅರಣ್ಯಕ್ಕೆ

ಬಂದು ಗಂಗಾತೀರದಲ್ಲಿ ಕಠೋರವಾದ ತಪಸ್ಸು ಮಾಡಿದೆ. ಆದರೂ ಪ್ರಾಣವಲ್ಲಭನನ್ನು ಪಡೆಯಲಾಗಲಿಲ್ಲ. ಆದರಿಂದ ಹತಾಶಳಾಗಿ ಅಗ್ನಿಪ್ರವೇಶ ಮಾಡಲು ಹೊರಟೆ. ನಿನ್ನನ್ನು ಕಂಡು ಕ್ಷಣಕಾಲ ನಿಂತಿದ್ದೇನೆ. ನೀನಿನ್ನು ಹೋಗಬಹುದು. ಪ್ರಳಯಾಗ್ನಿ ಜ್ವಾಲೆಯಂಥ ಈ ಬೆಂಕಿಯೊಳಗೆ ಹಾರಿ ಮುಂದಿನ ಜನ್ಮದಲ್ಲಿಯಾದರೂ ಪ್ರಿಯಕರ ಪ್ರಾಣೇಶ್ವರನಾದ ಶಿವನನ್ನು ಪಡೆಯುವೆನು.' ಹೀಗೆ ಹೇಳುತ್ತ ದೇವಿ ಬ್ರಹ್ಮಚಾರಿ ತಡೆಯುತ್ತಿದ್ದಂತೆಯೆ ಬೆಂಕಿಗೆ ಹಾರಿದಳು. ಆದರೆ ಬೆಂಕಿ ಚಂದನದಂತೆ ತಂಪಾಯಿತು. ಶಿವ ಪುನಃ ಕೇಳಿದ.

**ಶಿವ:-** ಅಹೋ ಏನಾಶ್ಚರ್ಯ! ಎಂಥ ತಪಸ್ಸು ನಿನ್ನದು? ಶರೀರ ಬೆಂಕಿಯಿಂದ ಸುಡಲಿಲ್ಲ, ನಿನ್ನಿಷ್ಟವೂ ಸಿದ್ಧಿಸಲಿಲ್ಲ! ಮಂಗಳ ಸ್ವರೂಪನಾದ ಆಶಿವನನ್ನು ಹೊಂದಲು ಬಯಸುವಿ. ಆದರೆ ಶರೀರವಿಲ್ಲದ ಅವನನ್ನು ಮದುವೆಯಾಗಿ ಅದೇನು ಇಷ್ಟವನ್ನು ಪಡೆಯಬಲ್ಲೆ? ನೀನೀಗ ಬಯಸುತ್ತಿರುವುದು ಸಂಹಾರ ಮೂರ್ತಿಯನ್ನು. ಸರ್ವಸಂಹಾರಕನಾದ ಪತಿಯನ್ನು ಯಾವ ಸ್ತ್ರೀ ಬಯಸಿಯಾಳು? ಇನ್ನು ಮೋಕ್ಷದ ಬಯಕೆಯಿಂದ ಶಿವನನ್ನು ಮದುವೆಯಾಗುವೆಯಾದರೆ ಅದೂ ಯುಕ್ತವಲ್ಲ. ಸರ್ವರಿಗೂ ಮುಕ್ತಿ ನೀಡುವ ನೀನು ತಪಸ್ಸು ಏಕೆ ಮಾಡಬೇಕು? 'ಶಿವ' ಶಬ್ದಕ್ಕೆ ಮಂಗಲ ಮೋಕ್ಷ ಸಂಹಾರಕ ಎಂದು ಮೂರು ಅರ್ಥಗಳಿವೆ. ಬೇರೆ ಅರ್ಥ ಕಾಣುವುದಿಲ್ಲ. ವೇದದಲ್ಲಿ ಹೇಳಿಲ್ಲ. ಸಂಹಾರಕರ್ತನನ್ನು ಮದುವೆಯಾದರೆ ನಿನ್ನ ಆಪತಿ ಸರ್ವಲೋಕ ಭಯಂಕರನಾಗಿರುತ್ತಾನೆ. ನಿನಗೆ ಮೋಕ್ಷವಿಲ್ಲವಾಗುತ್ತದೆ. ಹರಿಸ್ಮರಣೆಯೊಂದೇ ಅಮೋಘ, ಸರ್ವಮಂಗಳಪ್ರದ. ನೀನು ಬೇಗನೆ ತಂದೆಯ ಮನೆಗೇ ಹೋಗು. ಅಲ್ಲಿ ಶಂಕರನನ್ನು ಕಾಣುವೆ. ನಿನ್ನ ತಪಸ್ಸು ಫಲಿಸುತ್ತದೆ. ಹಾಗೆ ನಾನು ನಿನ್ನನ್ನು ಹರಸುತ್ತಿದ್ದೇನೆ.

ಹೀಗೆ ಹೇಳಿ ಬ್ರಹ್ಮಚಾರಿ ಅದೃಶ್ಯನಾದ. ದೇವಿ 'ಮಹಾದೇವ!' ಎಂದು ಜಪಿಸುತ್ತ ತಂದೆಯ ಮನೆಗೆ ಹೋದಳು. ಅವಳ ಆಗಮನದ ವಾರ್ತೆಯನ್ನು ಕೇಳಿ ಮೇನಕೆ ಮತ್ತು ಹಿಮಾಲಯರು ಆನಂದ ತುಂದಿಲರಾಗಿ ದಿವ್ಯವಾದ ವಾಹನವನ್ನು ಮುಂದಿಟ್ಟುಕೊಂಡು ಮಂಗಳಕಲಶಗಳನ್ನು ರಾಜಬೀದಿಗಳಲ್ಲಿರಿಸಿ ಬಾಳೆ ಕಂಬಗಳಿಂದ ಅಲಂಕರಿಸಿ ಅರಳುಗರಿಕೆ ಫಲಪುಷ್ಪ ದೀಪಗಳನ್ನು ಹಿಡಿದ ಸುವಾಸಿನೀ ಸ್ತ್ರೀಯರೊಡನೆ ಬ್ರಾಹ್ಮಣರು ಮುನಿಗಳು ಬ್ರಹ್ಮಚಾರಿಗಳು ನಟಿಯರು ನರ್ತಕಿಯರು ಆನೆಗಳು ಮಂಗಳಾಷ್ಟಕ ಪಠಿಸುವ ಪುರೋಹಿತರು ಇವರಿಂದ ಕೂಡಿಕೊಂಡು ನಾನಾ ಪ್ರಕಾರದ ಮಂಗಳವಾದ್ಯ ಶಂಖಧ್ವನಿಗಳೊಂದಿಗೆ ಸಿಂದೂರ ಚಂದನಗಳಿಂದ ಸುಗಂಧಭರಿತವಾದ ಬೀದಿಗಳಲ್ಲಿ ದೇವಿಯನ್ನು . ಇದಿರುಗೊಂಡರು. ದೇವಿ ತಂದೆತಾಯಿಗಳ ಆನಂದ ಸಂಭ್ರಮ ಸಡಗರಗಳನ್ನು ನೋಡಿ ಸಂತೋಷದಿಂದ ಅವರನ್ನು ವಂದಿಸಿದಳು. ಅವರು ಆನಂದ ಬಾಷ್ಪ ಸುರಿಸುತ್ತ 'ಮಗೂ! ಮಗೂ!' ಎನ್ನುತ್ತ ಹರಸಿ ಆಲಿಂಗಿಸಿಕೊಂಡರು. ಅವಳನ್ನು ರಥದಲ್ಲಿ ಕುಳ್ಳಿರಿಸಿ ಅರಮನೆಗೆ ಕರೆದೊಯ್ದರು. ಸ್ತ್ರೀಯರು ಅವಳಿಗೆ ಆರತಿ ಎತ್ತಿದರು. ಬ್ರಾಹ್ಮಣರು ಆಶೀರ್ವದಿಸಿದರು. ಹಿಮಾಲಯ ಅವರಿಗೆ ದಕ್ಷಿಣೆ ನೀಡಿದ, ಸ್ವಸ್ತಿವಾಚನ ಮಾಡಿಸಿದ. ಬಳಿಕ ಮಗಳೊಡನೆ ತಂದೆ ತಾಯಿಗಳು ಆನಂದದಿಂದ ವಾಸಮಾಡಿದರು.

ಒಮ್ಮೆ ಹಿಮಾಲಯನು ತಪಸ್ಸಿಗಾಗಿ ಗಂಗಾತೀರಕ್ಕೆ ಹೋಗಿದ್ದಾಗ ಇತ್ತ ಅರಮನೆಯ ಅಂಗಳದಲ್ಲಿ ಮೇನೆ ಪಾರ್ವತಿಯೊಡನೆ ನಿಂತಿದ್ದಳು. ಅಲ್ಲಿಗೆ ಒಬ್ಬ ನರ್ತನ ಗಾಯನ ಮಾಡುವ ಭಿಕ್ಷುಕ ಬಂದ. ಆತ ಬಹಳ ವೃದ್ಧನಾಗಿದ್ದ. ಮೈಗೆ ವಿಭೂತಿ ಬಳಿದುಕೊಂಡಿದ್ದ. ಬೆನ್ನ ಮೇಲೆ ಬಟ್ಟೆಯ ಗಂಟು. ನನ್ನ ಗುಣಗಾನಮಾಡುತ್ತ ಮನೋಜ್ಞವಾಗಿ ಕುಣಿಯುತ್ತ ಶೃಂಗವಾದ್ಯ ಡಮರುಗಳನ್ನು ಮೊಳಗಿಸಿದ. ಅಲ್ಲಿಗೆ ನಗರದ ಎಳೆಯ ಹುಡುಗ ಹುಡುಗಿಯರು ವೃದ್ಧರು ಯುವಕರು ಯುವತಿಯರು ವೃದ್ಧ ಸ್ತ್ರೀಯರು ಎಲ್ಲರೂ ಬಂದು ಭಿಕ್ಷುಕನ ಹಾಡಿಗೆ ಮೈಮರೆತರು. ಪಾರ್ವತಿಯೂ ಮೈಮರೆತು ಕಣ್ಣುಮುಚ್ಚಿ ಹೃದಯದಲ್ಲಿ ಶಂಕರನನ್ನು ಕಂಡಳು. ಹುಲಿದೊವಲನ್ನುಟ್ಟು ವಿಭೂತಿ ಬಳಿದುಕೊಂಡು ಅಸ್ಥಿಮಾಲೆ ನಾಗಯಜ್ಞೋಪವೀತಗಳಿಂದ ಶೋಭಿಸುವ ಪ್ರಸನ್ನವದನನಾದ ಪಂಚವಕ್ತ್ರ ತ್ರಿಲೋಚನನಾದ ಆಶಿವ 'ಬೇಕಾದ ವರವನ್ನು ಕೇಳು' ಎಂದ. ಹೃದಯದಲ್ಲಿಯೆ ದೇವಿ ಅವನಿಗೆ ನಮಿಸಿ 'ನನಗೆ ಪತಿಯಾಗು' ಎಂದು ವರ ಕೇಳಿಕೊಂಡಳು. ಶಿವ ಅದೇ ವರವನ್ನು ನೀಡಿ ಅಂತರ್ಧಾನನಾದ. ಹೀಗೆ ಹೃದಯದಲ್ಲಿ ಕಂಡ ಶಿವ ಅಲ್ಲಿಂದ ಮರೆಯಾದಾಗ ದೇವಿ ಎಚ್ಚೆತ್ತು ಕಣ್ತೆರೆದು ಭಿಕ್ಷುಕನು ಇನ್ನೂ ಹಾಡುತ್ತ ಕುಣಿಯುತ್ತಿದ್ದುದನ್ನು ಕಂಡಳು. ಕೊನೆಯಲ್ಲಿ ಮೇನಕೆ ಭಿಕ್ಷುಕನಿಗೆ ಬಹುಮಾನವಾಗಿ ಬಂಗಾರದ ಪಾತ್ರೆಗಳಲ್ಲಿ ರತ್ನಗಳನ್ನು ತುಂಬಿ ಕೊಡಲು ಹೋದಳು. ಆದರೆ ಭಿಕ್ಷುಕ 'ನನಗೆ ದೇವಿಯನ್ನು ಮದುವೆ ಮಾಡಿಕೊಡು!' ಎಂದ. ತಿರುಗಿ ಹಾಡುತ್ತ ಕುಣಿಯ ತೊಡಗಿದ. ಮೇನಕೆ ಕುಪಿತಳಾದಳು. ಭಿಕ್ಷುಕನನ್ನು ಹೊರಗೆ ತಳ್ಳಲು ಆಜ್ಞೆಮಾಡಿದಳು. 'ಮೂಲೋಕದೊಡೆಯನಾದ ಶಿವನಿಗೆ ರಾಣಿಯಾಗಲಿರುವ ತನ್ನ ಮಗಳನ್ನು ಯಾರೊ ಒಬ್ಬ ಭಿಕ್ಷುಕ ತನಗೆ ನೀಡೆಂದು ಸಲ್ಲದ ಮಾತುಗಳನ್ನಾಡುತ್ತಿದ್ದಾನೆ!' ಎಂದಳು.

ಅಷ್ಟರಲ್ಲಿ ಹಿಮಾಲಯನು ಗಂಗಾತೀರದಲ್ಲಿ ನಾರಾಯಣನ ಆರಾಧನೆ ಮಾಡಿ ಅರಮನೆಗೆ ಹಿಂತಿರುಗಿದ. ಆ ಮೂರ್ತಿಯ ಧ್ಯಾನಕ್ಕೆ ವಿಚ್ಛೇದವಾಯಿತೆಂದು ಅವನಿಗೆ ಶೋಕ. ಇತ್ತ ಮೇನೆಯ ಮುಖದಿಂದ ನಡೆದ ಸಂಗತಿಯನ್ನು ತಿಳಿದಾಗ ಕೋಪವೂ ಉಂಟಾಯಿತು. ಅವನೂ ಭಿಕ್ಷುಕನನ್ನು ಹೊರಗೆ ಹಾಕಲು ಭಟರಿಗೆ ಆಜ್ಞೆಮಾಡಿದ. ಭಟರು ಭಿಕ್ಷುಕನ ಬಳಿಗೇ ಹೋಗಲು ಅಶಕ್ತರಾದರು. ತನ್ನ ತೇಜಸ್ಸಿನಿಂದ ಆತ ಜ್ವಲಿಸುತ್ತಿದ್ದ. ಆಕಾಶದಂತೆ ಕೈಗೆ ಸಿಗುತ್ತಿರಲಿಲ್ಲ. ಕ್ಷಣದಲ್ಲಿ ಭಿಕ್ಷುಕ ಸುಂದರ ಚತುರ್ಭುಜಾಕಾರದಿಂದ ಹಿಮಾಲಯನಿಗೆ ಕಾಣಿಸಿಕೊಂಡ. ಪೀತಾಂಬರ ಉಟ್ಟ, ಶ್ರೀಗಂಧ ಬಳಿದ ಮೈಯ, ಕಿರೀಟ ಕುಂಡಲಗಳಿಂದೊಪ್ಪುವ ನಗುಮೊಗದ ಆರೂಪ ಹಿಮಾಲಯನಿಗೆ ಧ್ಯಾನಕಾಲದಲ್ಲಿ ಕಂಡು ಬಂದ ರೂಪವೆ ಆಗಿತ್ತು. ಪೂಜಾಕಾಲದಲ್ಲಿ ಯಾವ ಹೂವುಗಳನ್ನು ಅವನು ಅರ್ಪಿಸಿದ್ದನೊ ಅವೇ ಹೂವುಗಳು ಈತನ ಶಿರಸ್ಸಿನಲ್ಲಿ ಶೋಭಿಸುತ್ತಿದ್ದುವು. ಇನ್ನೊಂದು ಕ್ಷಣದಲ್ಲಿ ದ್ವಿಭುಜ ಮುರಲೀಧರರೂಪ. ನವಿಲಗರಿ ರತ್ನಾಭರಣ ವನಮಾಲೆಗಳಿಂದ ಒಪ್ಪುವ, ಶ್ರೀಗಂಧ ಬಳಿದ ಮೈಯ ಶ್ಯಾಮಲವರ್ಣದ ಬಾಲ ಗೋಪಾಲರೂಪ. ಮರುಕ್ಷಣದಲ್ಲಿ ಬಿಳಿಬಣ್ಣದ ಚಂದ್ರಶೇಖರರೂಪ. ಹುಲಿ ದೊವಲನ್ನುಟ್ಟು, ಮೈಗೆ ವಿಭೂತಿ ಬಳಿದುಕೊಂಡು, ಶೂಲಪಟ್ಟಿ ಅಸ್ಥಿಮಾಲೆ ನಾಗ

ಯಜ್ಞೋಪವೀತ ಡಮರು ಕೊಂಬುಗಳನ್ನು ಹಿಡಿದು ಬಿಳಿ ಕಮಲಮಣಿಮಾಲೆಯಿಂದ ಹರಿನಾಮ ಜಪಿಸುವ ಪ್ರಸನ್ನ ಪಂಚವಕ್ತ್ರ ತ್ರಿಲೋಚನ ರೂಪ. ಮರುಕ್ಷಣದಲ್ಲಿ ಸ್ಫಟಿಕಾಕ್ಷ ಮಾಲೆ ಹಿಡಿದು ಹರಿನಾಮ ಜಪಿಸುವ ಸೃಷ್ಟಿಕರ್ತೃ ಚತುರ್ಮುಖ ರೂಪ. ಒಡನೆ ಬ್ರಹ್ಮತೇಜಸ್ಸಿನಿಂದ ಹೊಳೆವ ಸೂರ್ಯರೂಪ. ಅಗ್ನಿರೂಪ. ಚಂದ್ರರೂಪ. ಕ್ಷಣದಲ್ಲಿ ನಿರಾಕಾರ ತೇಜೋರೂಪ. ಹೀಗೆ ಇಚ್ಛೆ ಬಂದಂತೆ ನಾನಾ ರೂಪ ತಳೆಯುವ ಭಿಕ್ಷುಕನನ್ನು ಕಂಡು ಹಿಮಾಲಯ ಆನಂದದಿಂದ ಪುಳಕಿತನಾಗಿ ಆನಂದಬಾಷ್ಪ ಸುರಿಸುತ್ತ ದಂಡಪ್ರಣಾಮ ಗೈದ. ಭಕ್ತಿಯಿಂದ ಪ್ರದಕ್ಷಿಣೆಮಾಡಿ ಪುನಃ ಪುನಃ ಪ್ರಣಾಮ ಮಾಡಿದ. ಬಳಿಕ ವಿಷ್ಣುಮಾಯೆಯಿಂದ ಎಲ್ಲವನ್ನೂ ಮರತು ಬರಿ ಭಿಕ್ಷುಕನೆಂದು ಕಂಡು 'ನಿನಗೇನು ಬೇಕು?' ಎಂದ. ಭಿಕ್ಷುಕ 'ನಿನ್ನ ಮಗಳನ್ನು ಕೊಡು' ಎಂದ. ಇನ್ನೇನೂ ಬೇಡವೆಂದ. ಹಿಮಾಲಯ ವಿಷ್ಣುಮಾಯೆಯಿಂದ ಮೋಹಿತನಾಗಿ ಮಗಳನ್ನು ಕೊಡಲು ಒಪ್ಪಲಿಲ್ಲ. ಭಿಕ್ಷುಕ ಅದೃಶ್ಯನಾದ.

ಈಗ ಹಿಮಾಲಯ ಮೇನಕೆಯರಿಗೆ ಜ್ಞಾನೋದಯವಾಯಿತು. 'ನಮಗೆ ಹಾಡುಹಗಲಲ್ಲಿ ಸ್ವಪ್ನದಂತೆ ಜಗದೀಶನ ದರ್ಶನವಾಯಿತು. ನಮ್ಮನ್ನು ಆತ ವಂಚಿಸಿ ಹೊರಟು ಹೋದ!' ಅವರ ಭಕ್ತಿಯನ್ನು ಕಂಡು ದೇವತೆಗಳು ಚಿಂತಾಕ್ರಾಂತರಾದರು. ಏಕಾಂತಭಕ್ತಿಯಿಂದ ಹಿಮಾಲಯನು ಕನ್ಯಾದಾನ ಮಾಡಿದರೆ ಒಡನೆ ಅವನು ಮುಕ್ತನಾಗುತ್ತಾನೆ. ಅನಂತರತ್ನಾಧಾರನಾದ ಆ ಪರ್ವತರಾಜ ಮುಕ್ತನಾಗಿ ಭೂಮಿಯನ್ನು ತೊರೆದು ಹೋದರೆ ಭೂಮಿಗೆ 'ರತ್ನಗರ್ಭಾ' ಎಂಬ ಹೆಸರು ಸುಳ್ಳಾದೀತು. ಸ್ಥಾವರತ್ವವನ್ನು ತೊರೆದು ದಿವ್ಯರೂಪದಿಂದ ಶಿವನಿಗೆ ಕನ್ಯಾದಾನ ಮಾಡಿ ವಿಷ್ಣುಲೋಕವನ್ನೇ ಸೇರುತ್ತಾನೆ. ನಾರಾಯಣನ ಸಾರೂಪ್ಯವನ್ನು ಪಡೆಯುತ್ತಾನೆ. ಅವನ ಪಾರ್ಷದನಾಗಿ ಹರಿದಾಸನೆನಿಸುತ್ತಾನೆ.

ವೇದಜ್ಞ, ಪ್ರತಿಗ್ರಹರಹಿತ, ಸಂಧ್ಯಾ ಯಜ್ಞ ವೇದಪಾಠಗಳನ್ನು ಆಚರಿಸುವವ, ಸತ್ಯವಾದಿ - ಇಂಥ ಬ್ರಾಹ್ಮಣನಿಗೆ ಕನ್ಯಾದಾನ ಮಾಡಿದರೆ ಹತ್ತು ನೀರಿನ ಬಾವಿಗಳನ್ನು ನಿರ್ಮಿಸಿದ ಫಲ. ಪ್ರತಿಗ್ರಹ ಮಾಡುತ್ತ ಸಂಧ್ಯಾ ಆಚರಿಸದ ಮೂರ್ಖಬ್ರಾಹ್ಮಣನಿಗೆ ಕನ್ಯಾದಾನ ಮಾಡಿದರೂ ಅರ್ಧಾಂಶ ಫಲವಿದೆ. ಪಾಪಾಚಾರನಿರತನಾದ ಚಂಡಾಲ ತುಲ್ಯನಾದ ವರನಿಗೆ ಕನ್ಯಾದಾನ ಮಾಡಿದರೆ ನರಕಪ್ರಾಪ್ತಿ. ವಿಷ್ಣುಭಕ್ತ, ಜ್ಞಾನಿ, ಸತ್ಯವಾದಿ, ಜಿತೇಂದ್ರಿಯನಾದ ವಿಪ್ರನಿಗೆ ಕನ್ಯಾದಾನ ಮಾಡಿದರೆ ಇಪ್ಪತ್ತು ಬಾವಿಗಳನ್ನು ನಿರ್ಮಾಣ ಮಾಡಿದ ಫಲ. ಅರವತ್ತುಸಾವಿರ ವರ್ಷಕಾಲ ದಿವ್ಯರೂಪದಿಂದ ವಿಷ್ಣುಲೋಕದಲ್ಲಿ ಸುಖಪಡುತ್ತಾನೆ. ಶೀಲವತಿಯಾದ ಕನ್ಯೆಯನ್ನು ಹರನಿಗಾಗಲಿ ಹರಿಗಾಗಲಿ ಕೊಟ್ಟರೆ ನಾರಾಯಣನ ಸಾರೂಪ್ಯ ದೊರಕುತ್ತದೆ. ವಿಷ್ಣುಭಕ್ತ ವಿಷ್ಣುಪ್ರೀತಿಗಾಗಿ ಕನ್ಯಾದಾನ ಮಾಡಿದರೆ ಹರಿದಾಸ್ಯಲಾಭ. ಹೀಗೆ ಆಲೋಚಿಸಿ ದೇವತೆಗಳು ಮಂತ್ರಾಲೋಚನೆ ಮಾಡಿ ಹಿಮಾಲಯನ ಅರಮನೆಗೆ ಬೃಹಸ್ಪತಿಯನ್ನು ಕಳಿಸಲು ನಿರ್ಧರಿಸಿದರು. ಬೃಹಸ್ಪತಿಯ ಬಳಿಯಲ್ಲಿ ಅರಿಕೆ ಮಾಡಿಕೊಂಡರು - 'ಹಿಮಾಲಯನ ಬಳಿಗೆ ಹೋಗಿ ಶಿವನಿಂದೆ ಮಾಡು. ಆದರೂ ಶಿವನನ್ನು ಹೊರತು

ಇನ್ನಾರನ್ನೂ ಪಾರ್ವತಿ ವರಿಸುವುದಿಲ್ಲ. ಹೀಗಾಗಿ ಇಚ್ಛೆ ಇಲ್ಲದೆಯೆ ಮಗಳನ್ನು ಶಿವನಿಗೆ ನೀಡಿ ಅದರ ಪುಣ್ಯದಿಂದ ನಿಧಾನವಾಗಿ ಮುಕ್ತಿಪಡೆಯಲಿ. ತತ್ಕಾಲದಲ್ಲಿ ಅವನು ಭೂಮಿಯ ಮೇಲೇ ಇರಲಿ. ಅನಂತರತ್ನಾಧಾರನಾದ ಅವನನ್ನು ಭಾರತದಲ್ಲಿ ಇರುವಂತೆ ನೀನೇ ಮಾಡಬೇಕು.'

ಇದನ್ನು ಕೇಳಿ ಬೃಹಸ್ಪತಿ ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡ. ಅವನು ಹೇಳಿದ-

'ದೇವತೆಗಳೆ, ನನ್ನ ಮಾತನ್ನು ಕೇಳಿ. ನೀವು ಸ್ವಾರ್ಥಸಾಧಕರು. ಶಿವ ಕೇಶವರನ್ನು ಬ್ರಾಹ್ಮಣ ಗುರು ಪತಿವ್ರತೆಯರನ್ನು, ಪತಿ ಬ್ರಹ್ಮಚಾರಿ ಯತಿಗಳನ್ನು, ದೇವತೆಗಳನ್ನು ನಿಂದೆ ಮಾಡುವ ಪಾಪಿಗಳು ಸೂರ್ಯಚಂದ್ರರಿರುವಷ್ಟು ಕಾಲ ಕಾಲಸೂತ್ರ ನರಕದಲ್ಲಿ ನರಳುತ್ತಾರೆ. ಸೃಷ್ಟಕರ್ತನಾದ ಬ್ರಹ್ಮ, ಶಿವ, ದುರ್ಗೆ, ಲಕ್ಷ್ಮಿ, ಸರಸ್ವತಿ, ಗೀತಾ, ತುಲಸಿ, ಗಂಗಾ, ವೇದ, ವೇದಮಾತೆ, ವ್ರತ, ತಪಸ್ಸು, ಪೂಜೆ, ಮಂತ್ರ, ಮಂತ್ರೋಪದೇಶಕ ಗುರು - ಇವರನ್ನು ನಿಂದೆ ಮಾಡುವವನು ಬ್ರಹ್ಮನ ಆಯುಷ್ಯದ ಅರ್ಧದಷ್ಟು ಕಾಲ ಅಂಧಕೂಪದಲ್ಲಿ ಬೀಳುವನು. ವಿಷ್ಣುವನ್ನು ನಿಂದಿಸುತ್ತ ಅವನಿಗೆ ತಾನು ಸಮನೆನ್ನುವವನು ವಿಷ್ಣುಭಕ್ತಿಯನ್ನು ಪುರಾಣವನ್ನು ರಾಧೆಯನ್ನು ಗೋಪಿಯರನ್ನು ಬ್ರಾಹ್ಮಣರನ್ನು ನಿಂದಿಸುವವನು ನರಕದಲ್ಲಿ ಬ್ರಹ್ಮನ ಪೂರ್ಣ ಆಯುಷ್ಯದಷ್ಟು ಕಾಲ ನರಳುತ್ತಾನೆ. ಅದರಿಂದ ನೀವೆ ಯಾರಾದರೂ ಹಿಮಾಲಯನ ಬಳಿಗೆ ಹೋಗಿ ಈ ಕೆಲಸವನ್ನು ಸಾಧಿಸಿಕೊಳ್ಳಿರಿ. ಬ್ರಹ್ಮನ ಪ್ರೇರಣೆಯಿಂದ ದಕ್ಷ ಶಿವನಿಗೆ ಮಗಳನ್ನಿತ್ತು ಶಿವನಿಂದೆ ಮಾಡಿದರೂ ಪಾಪವನ್ನು ಹೊಂದಲಿಲ್ಲ. ಪರಮೈಶ್ವರ್ಯವನ್ನೆ ಹೊಂದಿದ. ಇಚ್ಛೆಯಿಲ್ಲದೆ ಮಗಳನ್ನು ಕೊಟ್ಟದ್ದರಿಂದ ಪೂರ್ಣಫಲದ ನಾಲ್ಕನೆ ಒಂದಂಶವನ್ನು ಮಾತ್ರ ಪಡೆದ. ಅದರಿಂದಲೆ ಸಾರೂಪ್ಯವನ್ನು ಪಡೆಯದೆ ತುಚ್ಛವಾದ ಸ್ವರ್ಗ ಸುಖವನ್ನೇ ಪಡೆದ. ಹಾಗೇ ನಿಮ್ಮ ಪ್ರಯತ್ನದಿಂದ ಹಿಮಾಲಯನೂ ಇಚ್ಛೆ ಇಲ್ಲದೆಯೆ ಕನ್ಯಾದಾನ ಮಾಡಿ ಭಾರತದಲ್ಲಿ ಸುಖವಾಗಿ ವಾಸಮಾಡಲಿ. ಭಕ್ತಿಯಿಂದ ಕನ್ಯಾದಾನ ಮಾಡಿದರೆ ಒಡನೆ ಮೋಕ್ಷ ಪಡೆಯುತ್ತಾನೆ. ನನಗೆ ನೀವು ಇದೊಂದು ಉಪಕಾರ ಮಾಡಿರಿ. ನೀವೇ ಯಾರಾದರೊಬ್ಬರು ಹಿಮಾಲಯನ ಮುಂದೆ ಶಿವನಿಂದೆ ಮಾಡಿರಿ. ಬಳಿಕ ಸಪ್ತರ್ಷಿಗಳು ಅರುಂಧತಿಯನ್ನು ಮುಂದೆ ಮಾಡಿಕೊಂಡು ಹಿಮಾಲಯನ ಬಳಿಗೆ ಹೋಗಿ ಹಿತವನ್ನು ಬೋಧಿಸಲಿ. ಮುಂದೆ ಪಾರ್ವತಿ ಹರನನ್ನೇ ವರಿಸುತ್ತಾಳೆ. ಇಚ್ಛೆ ಇಲ್ಲದೆಯೆ ಹಿಮಾಲಯನೂ ಮಗಳ ಮಾತಿನಂತೆ ಅವಳನ್ನು ಹರನಿಗೇ ಕೊಡುತ್ತಾನೆ.' ಹೀಗೆ ಹೇಳಿ ಬೃಹಸ್ಪತಿ ತಪಸ್ಸಿಗಾಗಿ ಗಂಗಾ ತೀರಕ್ಕೆ ತೆರಳಿದ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ನಲ್ವತ್ತನೆ ಅಧ್ಯಾಯ ಮುಗಿದುದು*

—○—

## ಅನರಣ್ಯ ರಾಜನ ವೃತ್ತಾಂತ



**ಶ್ರೀಕೃಷ್ಣ:-** ಆಗ ದೇವತೆಗಳು ಜಗತ್ಪತಿಯಾದ ಬ್ರಹ್ಮನ ಬಳಿಗೆ ಹೋಗಿ ನಿವೇದನ ಮಾಡಿಕೊಂಡರು.

**ದೇವತೆಗಳು:-** ನಿನ್ನ ಸೃಷ್ಟಿಯಲ್ಲಿ ಹಿಮಾಲಯ ರತ್ನಾಧಾರ. ಅವನು ಮೋಕ್ಷ ಪಡೆದರೆ ಭೂಮಿ ರತ್ನಗರ್ಭೆ ಎನಿಸುವುದೆಂತು? ಈಗ ಹಿಮಾಲಯ ಮಗಳನ್ನು ಭಕ್ತಿಯಿಂದ ಶಿವನಿಗೆ ನೀಡಿದರೆ ನಾರಾಯಣನ ಸಾರೂಪ್ಯವನ್ನು ಹೊಂದುವುದರಲ್ಲಿ ಸಂಶಯವಿಲ್ಲ. ಅದರಿಂದ ನೀನು ಹಿಮಾಲಯನ ಮುಂದೆ ಶಿವನನ್ನು ನಿಂದಿಸಬೇಕು. ಅವನಿಗೆ ಶಿವನಲ್ಲಿ ತಿರಸ್ಕಾರಬುದ್ಧಿ ಉಂಟುಮಾಡಬೇಕು. ಇದಕ್ಕೆ ನಿನ್ನ ಹೊರತು ಇನ್ನಾರೂ ಶಕ್ತರಲ್ಲ. ದೇವತೆಗಳ ಮಾತನ್ನು ಕೇಳಿ ಬ್ರಹ್ಮ ಮಧುರವಾಗಿ ನುಡಿದ.

**ಬ್ರಹ್ಮ:-** ಬಲು ದುಷ್ಕರ ಶಿವನಿಂದೆ. ನಾನು ಅದನ್ನು ಮಾಡಲು ಶಕ್ತನಲ್ಲ. ಅದು ಸಂಪತ್ತಿಗೆ ವಿನಾಶಕರ. ವಿಪತ್ತಿಗೆ ಬೀಜರೂಪ. ಅದಕ್ಕೆ ನೀವು ಶಿವನನ್ನೇ ಕಳಿಸಿರಿ. ಅವನು ತನ್ನ ನಿಂದೆಯನ್ನು ತಾನೆ ಮಾಡಲಿ.

**ಪರನಿಂದಾ ವಿನಾಶಾಯ ಸ್ವನಿಂದಾ ಯಶಸೇ ಪರಂ**
ಪರನಿಂದೆ ವಿನಾಶಕ್ಕೆ ದಾರಿಯಾದರೂ ಸ್ವನಿಂದೆ ಯಶಸ್ಸಿಗೇ ಕಾರಣವಾಗುತ್ತದೆ.

ಬ್ರಹ್ಮನ ಮಾತನ್ನು ಕೇಳಿ ದೇವತೆಗಳು ಬೇಗನೆ ಕೈಲಾಸಕ್ಕೆ ಹೋಗಿ ಶಿವನನ್ನು ಸ್ತೋತ್ರಮಾಡಿದರು. ಕರುಣಾಸಮುದ್ರನಾದ ಆತನ ಮುಂದೆ ಎಲ್ಲವನ್ನೂ ಹೇಳಿ ಕೊಂಡರು. ಶಿವ ನಕ್ಕು ಅವರಿಗೆ ಆಶ್ವಾಸನೆ ನೀಡಿ ಹಿಮಾಲಯನ ಬಳಿಗೆ ನಡೆದ. ದೇವತೆಗಳು ಮುದಗೊಂಡು ತಮ್ಮ ಲೋಕಕ್ಕೆ ತೆರಳಿದರು. ಇಷ್ಟಸಿದ್ಧಿಯಾಯಿತೆಂದರೆ ಮುದವಾಗುವುದು, ಇಲ್ಲದಿದ್ದರೆ ದುಃಖವಾಗುವುದು ತಾನೆ!

ಹಿಮಾಲಯನು ಪಾರ್ವತಿಯೊಂದಿಗೆ ಬಂಧುವರ್ಗಪರಿವೃತನಾಗಿ ಓಲಗ ಶಾಲೆಯಲ್ಲಿದ್ದ. ಅಲ್ಲಿಗೆ ಬ್ರಾಹ್ಮಣರೂಪದಿಂದ ಶಿವ ಬಂದ. ದಂಡ ಛತ್ರಗಳನ್ನು ಹಿಡಿದು ಕೈಯಲ್ಲಿ ಸ್ಫಟಿಕ ಮಾಲೆಯನ್ನೂ ಕೊರಳಲ್ಲಿ ಶಾಲಗ್ರಾಮವನ್ನೂ ಧರಿಸಿದ್ದ. ಬಿಳಿಬಟ್ಟೆ. ಉಜ್ವಲವಾದ ತಿಲಕ. ಅವನನ್ನು ಕಂಡೊಡನೆ ಹಿಮಾಲಯ ಸಪರಿವಾರನಾಗಿ ಎದ್ದು ನಿಂತು ನೆಲದ ಮೇಲೆ ಭಕ್ತಿಪೂರ್ವಕ ದಂಡಪ್ರಣಾಮ ಮಾಡಿದ. ವಿಪ್ರರೂಪದಿಂದ ಬಂದ ಪ್ರಾಣೇಶನನ್ನು ದೇವಿಯೂ ನಮಿಸಿದಳು. ಬ್ರಾಹ್ಮಣ ಎಲ್ಲರಿಗೂ ಆಶೀರ್ವದಿಸಿ ಆಸನದಲ್ಲಿ ಕುಳಿತ. ಹಿಮಾಲಯ ನೀಡಿದ ಮಧುಪರ್ಕಾದಿ ಉಪಚಾರಗಳನ್ನು ಪ್ರೀತಿಯಿಂದ ಸ್ವೀಕರಿಸಿದ. ಕುಶಲಪ್ರಶ್ನ ಪೂರ್ವಕವಾಗಿ ಯಾರು ನೀನೆಂದು ಕೇಳಿದ, ಹಿಮಾಲಯ. ಬ್ರಾಹ್ಮಣ ಹೇಳತೊಡಗಿದ.

**ಬ್ರಾಹ್ಮಣ:-** ನಾನು ಗುರುವಿನ ಅನುಗ್ರಹದಿಂದ ಸರ್ವಜ್ಞನಾಗಿದ್ದು ಎಲ್ಲೆಡೆ ಮನೋವೇಗದಿಂದ ತಿರುಗುವವನು. ನೀನು ನಿನ್ನ ಮಗಳನ್ನು ಶಿವನಿಗೆ ಕೊಡುವಿ

ಎಂದು ತಿಳಿದೆ. ಲಕ್ಷ್ಮಿಯಂತಿರುವ ಈ ನಿನ್ನ ಮಗಳನ್ನು ಕುಲಶೀಲ ಪರಿಚಯವಿಲ್ಲದವನಿಗೆ, ನಿರಾಶ್ರಯ ಅಸಂಗ ನಿರ್ಗುಣನಿಗೆ, ಸ್ಮಶಾನದಲ್ಲಿ ಓಡಾಡುವ ಭೂತನಾಥನಿಗೆ ಕೊಡುವಿಯಂತೆ! ಅವನು ದಿಗಂಬರ, ಹಾವುಗಳನ್ನು ಸುತ್ತಿಕೊಂಡವ, ಬೂದಿ ಬಳಿದುಕೊಂಡವ. ಅವನಿಗೆ ಬಂಧುಗಳಿಲ್ಲ, ಧನಸಂಪತ್ತಿಲ್ಲ, ಚಿನ್ನದ ಬಣ್ಣದ ಜಟೆಯನ್ನು ಹೊತ್ತಿದ್ದಾನೆ. ಅವನ ವಯಸ್ಸು ಗೊತ್ತಿಲ್ಲ. ಬಹಳ ವೃದ್ಧ, ಭಿಕ್ಷುಕ. ಅವನಿಗಿಂತ ಹೆಚ್ಚು ಅನುರೂಪನಾದ ಸತ್ಪಾತ್ರ ನಾರಾಯಣನಿದ್ದಾನೆ. ಅವನು ಜ್ಞಾನಿಗಳಲ್ಲಿ ಶ್ರೇಷ್ಠ. ಒಳ್ಳೆಯ ಕುಲದವ. ನೀನು ಶಿವನಿಗೆ ಮಗಳನ್ನು ಕೊಡುತ್ತಿರುವಿಯೆಂದು ಕೇಳಿದರೆ ಜನರು ಹಾಸ್ಯ ಮಾಡಬಹುದು. ನೀನು ಲಕ್ಷ ಪರ್ವತಗಳಿಗೆ ಅಧಿರಾಜ. ಅವನಿಗೆ ಒಬ್ಬನೂ ಬಂಧು ಇಲ್ಲ. ಇಂಥವನಿಗೆ ಮಗಳನ್ನು ಕೊಡುವ ಮೊದಲು ನಿನ್ನ ಬಂಧುಗಳ ಒಪ್ಪಿಗೆಯನ್ನು ಕೇಳು, ಮೇನಕೆಯನ್ನು ಕೇಳು. ಪಾರ್ವತಿಯನ್ನು ಬಿಟ್ಟು ಇನ್ನೆಲ್ಲರನ್ನೂ ಕೇಳು. ಏಕೆಂದರೆ ರೋಗಿಗೆ ಔಷಧ ರುಚಿಸುವುದಿಲ್ಲ, ಅಪಥ್ಯ ರುಚಿಸುತ್ತದೆ.

ಹೀಗೆ ಹೇಳಿ ಬ್ರಾಹ್ಮಣ ಬೇಗನೆ ಸ್ನಾನ ಮಾಡಿ ಭೋಜನವನ್ನು ತೀರಿಸಿ ಹೊರಟು ಹೋದ. ಬ್ರಾಹ್ಮಣನ ಮಾತನ್ನು ಕೇಳಿದ ಮೇಲೆ ಮೇನೆ ಹೃದಯದಲ್ಲಿ ದುಃಖಗೊಂಡಳು. ಕಣ್ಣೀರು ಸುರಿಸುತ್ತ ಹಿಮಾಲಯನ ಮುಂದೆ ಹೇಳಿದಳು-

**ಮೇನಕೆ:-** ನಾಥ, ನಾನು ಹೇಳುವುದನ್ನು ಕೇಳು, ಅದರಿಂದ ಮುಂದೆ ಒಳ್ಳೆಯದಾಗುತ್ತದೆ. ಬೇರೆ ಪರ್ವತಗಳೊಡನೆ ಸಮಾಲೋಚಿಸು. ನಾನಂತೂ ಮಗಳನ್ನು ಶಿವನಿಗೆ ಕೊಡಲಾರೆ. ಅನ್ನ ನೀರು ಬಿಟ್ಟು ವಿಷ ಕುಡಿದು ಸಾಯುವೆ. ಅಥವಾ ಪಾರ್ವತಿಯನ್ನು ಕುತ್ತಿಗೆಗೆ ಕಟ್ಟಿಕೊಂಡು ಘೋರ ಅರಣ್ಯಕ್ಕೆ ಹೋಗುವೆ.'

ಹೀಗೆ ಹೇಳಿ ಮೇನೆ ಪಾರ್ವತಿಯನ್ನು ಕರೆದುಕೊಂಡು ಕೋಪಗೃಹಕ್ಕೆ ಹೋದಳು. ನಿರಾಹಾರಳಾಗಿ ನೆಲದ ಮೇಲೆ ಮಲಗಿದಳು. ಆಗ ವಸಿಷ್ಠ ತನ್ನ ಸೋದರರೊಂದಿಗೆ ಅಲ್ಲಿಗೆ ಬಂದ. ಅರುಂಧತಿಯೂ ಬಂದಳು. ಹಿಮಾಲಯ ಅವರೆಲ್ಲರಿಗೂ ನಮಿಸಿ ಎಲ್ಲರಿಗೂ ಸ್ವರ್ಣಸಿಂಹಾಸನವನ್ನು ನೀಡಿದ. ಷೋಡಶೋಪಚಾರಗಳಿಂದ ಪೂಜಿಸಿದ. ಮುನಿಗಳೆಲ್ಲರೂ ಸಭೆಯಲ್ಲಿ ಸುಖಾಸನದಲ್ಲಿ ಕುಳಿತಿದ್ದಂತೆ ಅರುಂಧತಿ ಮೇನೆ ಪಾರ್ವತಿಯರಿದ್ದಲ್ಲಿಗೆ ನಡೆದಳು. ಅಲ್ಲಿ ಶೋಕದಿಂದ ಮೈಮರೆತು ನೆಲದಲ್ಲಿ ಮಲಗಿದ್ದ ಮೇನೆಯನ್ನು ನೋಡಿ ನಿಧಾನವಾಗಿ ಹಿತನುಡಿ ನುಡಿದಳು.

**ಅರುಂಧತಿ:-** ಮೇನಕೆ, ಎದ್ದೇಳು. ನಾನು ಬಂದಿದ್ದೇನೆ, ಅರುಂಧತಿ-ಪಿತೃಗಳ ಮಾನಸಕನ್ಯೆ. ಬ್ರಹ್ಮನ ಸೊಸೆ.

ಅರುಂಧತಿಯ ಧ್ವನಿಯನ್ನು ಕೇಳಿ ಮೇನಕೆ ತಟ್ಟನೆ ಎದ್ದಳು. ಲಕ್ಷ್ಮಿಯಂತೆ ತೇಜಸ್ವಿನಿಯಾದ ಅರುಂಧತಿಗೆ ತಲೆ ಬಾಗಿ ನಮಿಸಿ ಹೇಳಿದಳು.

**ಮೇನಕೆ:-** ನಾವು ನಿಜವಾಗಿ ಪುಣ್ಯವಂತರು. ಸೃಷ್ಟಿಕರ್ತನ ಸೊಸೆ ವಸಿಷ್ಠರ ಪತ್ನಿ ನಮ್ಮ ಮನೆಗೆ ಇಂದು ಬಂದಿದ್ದಾಳೆ. ದೇವಿ, ಇದು ನಿನ್ನ ಮನೆ, ನಾವು ನಿನ್ನ ದಾಸಿಯರು. ನೀನು ಬಂದುದು ನಮ್ಮ ಬಹು ಪುಣ್ಯಗಳ ಫಲ.

ಹೀಗೆ ಹೇಳುತ್ತ ಮೇನಕೆ ಪಾದ್ಯವನ್ನು ನೀಡಿ ಸ್ವರ್ಣ ಸಿಂಹಾಸನದಲ್ಲಿ ಕುಳ್ಳಿರಿಸಿದಳು. ಪಾರ್ವತಿಯೊಡನೆ ಮಿಷ್ಟಾನ್ನ ಭೋಜನ ಮಾಡಿಸಿದಳು. ಬಳಿಕ ಅರುಂಧತಿ ಶಿವನ ಬಗ್ಗೆ ಮೇನಕೆಗೆ ಸರಿಯಾದ ತಿಳಿವಳಿಕೆ ಕೊಟ್ಟು ವಿವಾಹ ಸಂಬಂಧವನ್ನು ಕೂಡಿಸಿದಳು. ಇತ್ತ ಮುನಿಗಳೂ ಹಿಮಾಲಯನಿಗೆ ನೀತಿಯನ್ನು ಹೇಳುತ್ತ ವಿವಾಹ ಸಂಬಂಧ ನಡೆಯುವಂತೆ ಬೋಧನೆ ಮಾಡಿದರು.

**ಋಷಿಗಳು:-** ಪರ್ವತರಾಜ, ನಮ್ಮ ಮಾತನ್ನು ಕೇಳು. ಅದರಿಂದ ಒಳ್ಳೆಯದೇ ಆಗುತ್ತದೆ. ಶಿವನಿಗೆ ಪಾರ್ವತಿಯನ್ನು ಮದುವೆ ಮಾಡಿಕೊಡು. ಲಯಮೂರ್ತಿಗೆ ಮಾವನೆನಿಸು. ಅವನು ಕನ್ಯೆಯನ್ನು ಬೇಡುವವನಲ್ಲ. ನೀನೆ ಪ್ರಯತ್ನಪಟ್ಟು ಅವನನ್ನು ಒಪ್ಪಿಸು. ಅವನು ಯೋಗಿ. ಮದುವೆಗೆ ಒಪ್ಪುವುದಿಲ್ಲ. ಆದರೆ ಬ್ರಹ್ಮನ ಪ್ರಾರ್ಥನೆಯಿಂದ ನಿನ್ನ ಮಗಳನ್ನು ಪರಿಗ್ರಹಿಸುತ್ತಾನೆ. ಮಗಳ ತಪಸ್ಸಿಗೆ ಒಲಿದು ಮದುವೆಗೆ ಸಮ್ಮತಿಯನ್ನೂ ನೀಡಿದ್ದಾನೆ. ಈ ಎರಡು ಕಾರಣದಿಂದ ಅವನು ನಿನ್ನ ಮಗಳನ್ನು ಮದುವೆಯಾಗುತ್ತಾನೆ.

ಋಷಿಗಳ ಮಾತನ್ನು ಕೇಳಿ ಹಿಮಾಲಯ ನಕ್ಕು ಹೇಳತೊಡಗಿದ. ಸ್ವಲ್ಪ ಭಯವೂ ಇದ್ದುದರಿಂದ ವಿನಯ ಪೂರ್ವಕವಾಗಿಯೆ ನುಡಿದ.

**ಹಿಮಾಲಯ:-** ಶಿವನಲ್ಲಿ ರಾಜವೈಭವ ಒಂದೂ ಕಾಣುತ್ತಿಲ್ಲವಲ್ಲ! ಒಂದು ಮನೆ ಇಲ್ಲ. ಸಂಪತ್ತು ಇಲ್ಲ. ಬಂಧು ಜನರು ಯಾರೂ ಇಲ್ಲ. ಅತ್ಯಂತ ನಿರ್ಲಿಪ್ತನಾದ ಯೋಗಿಗೆ ಕನ್ಯೆಯನ್ನು ನಾನು ಹೇಗೆ ಕೊಡಲಿ? ನೀವು ತಿಳಿದವರು, ಬ್ರಹ್ಮನ ಪುತ್ರರು. ಹೇಳಿ.

**ನಾನುರೂಪಾಯ ಪುತ್ರಾಯ ಪಿತಾ ಕನ್ಯಾಂ ದದಾತಿ ಚೇತ್ ।**
**ಕಾಮಾಲ್ಲೋಭಾದ್‌ಭಯಾನ್ಮೋಹಾತ್ ಶತಾಬ್ದಂನರಕಂವ್ರಜೇತ್॥**

ಅನುರೂಪನಲ್ಲದ ವರನಿಗೆ ತಂದೆ ಮಗಳನ್ನು ಕಾಮಲೋಭ ಭಯ ಮೋಹಗಳಿಗೊಳಗಾಗಿ ಕೊಟ್ಟರೆ ನೂರುವರ್ಷಕಾಲ ನರಕವಾಸ ಲಭಿಸುತ್ತದೆ. ನಾನು ಇಷ್ಟಪಟ್ಟು ಮಗಳನ್ನು ಶಿವನಿಗೆ ಕೊಡಲಾರೆ. ಇನ್ನು ಈ ವಿಷಯದಲ್ಲಿ ಯುಕ್ತಾಯುಕ್ತ ವಿಚಾರವನ್ನು ಋಷಿಗಳು ನೀವು ಮಾಡಬೇಕು. ಹಿಮಾಲಯನ ಮಾತನ್ನು ಕೇಳಿ ವಸಿಷ್ಠ ಮುನಿ ನುಡಿದ -

**ವಸಿಷ್ಠ:-** ಮಾತು ಲೋಕದಲ್ಲಾಗಲಿ ವೇದದಲ್ಲಾಗಲಿ ಮೂರು ಬಗೆಯಾಗಿದೆ. ಶಾಸ್ತ್ರಬಲ್ಲವನೆ ನಿರ್ಮಲವಾದ ಜ್ಞಾನಚಕ್ಷುವಿನಿಂದ ಎಲ್ಲವನ್ನೂ ಅರಿತುಕೊಳ್ಳಬಲ್ಲ. ಕೆಲವು ಮಾತು ಕೇಳಲು ಸುಂದರವಾಗಿರುತ್ತದೆ, ಆದರೆ ಅಸತ್ಯವಾಗಿದ್ದು ಕೊನೆಯಲ್ಲಿ ಅಹಿತಕಾರಕವಾಗಿರುತ್ತದೆ. ಇಂಥ ಮಾತುಗಳನ್ನು ಶತ್ರು ನುಡಿಯುತ್ತಾನೆ. ಕೆಲವು ಮಾತು ಕೇಳಲು ಮಧುರವಾಗಿರದೆ ಕೊನೆಯಲ್ಲಿ ಹಿತಕರವಾಗಿರುತ್ತದೆ. ಇವನ್ನು ದಯಾಳುಗಳಾದ ಧರ್ಮಶೀಲರು ಆಡುತ್ತಾರೆ. ಇನ್ನು ಕೆಲವು ಮಾತು ಕೇಳುವಾಗ ಮಾತ್ರವಲ್ಲ ಸದಾಕಾಲ ಸುಖಕರವೇ ಆಗಿರುತ್ತದೆ. ಸತ್ಯವೂ ಹಿತಕರವೂ ಆಗಿರುತ್ತದೆ. ಇಂಥ ಮಾತು ಸರ್ವಶ್ರೇಷ್ಠ. ಪರ್ವತರಾಜ, ಈ ಮೂರು ಬಗೆಯ ಮಾತುಗಳಲ್ಲಿ ನಿನಗೆ ಯಾವ ಮಾತನ್ನು ಹೇಳಲಿ? ಹೇಳು. ಶಿವನಿಗೆ ಬಾಹ್ಯ ಸಂಪತ್ತು ಇಲ್ಲ ನಿಜ. ಆದರೆ

ಅವನು ದೇವಾಧಿಪತಿ. ಸದಾ ತತ್ವಜ್ಞಾನ ಸಮುದ್ರದಲ್ಲಿ ಮುಳುಗಿರುವವ. ಬಾಹ್ಯವಾದ ಸಂಪತ್ತು ವೈಭವವೆಲ್ಲ ಮಿಂಚಿನ ಬಳ್ಳಿಯಂತೆ ಚಂಚಲ. ಆತ್ಮಾರಾಮನಾಗಿ ಸದಾ ಆನಂದಮಗ್ನನಾಗಿರುವವನಿಗೆ ಈ ಅಶಾಶ್ವತ ಸಂಪತ್ತಿನಲ್ಲಿ ಎಲ್ಲಿಯ ಮೋಹ? ಗೃಹಸ್ಥನು ತನ್ನ ಮಗಳನ್ನು ರಾಜ್ಯ ಸಂಪತ್ತುಗಳುಳ್ಳವನಿಗೇ ಕೊಡುತ್ತಾನೆ. ಏನೂ ಇಲ್ಲದವನಿಗೆ ಕೊಟ್ಟರೆ ಅವನು ಕನ್ಯೆಯ ಹತ್ಯೆ ಮಾಡಿದಂತೆಯೆ ಸರಿ. ಆದರೆ ಶಿವ ಯಾವ ರಾಜನಿಗೂ ಕಡಿಮೆಯವನಲ್ಲ. ಕುಬೇರನೆ ಅವನ ಕಿಂಕರನಾಗಿರುವನೆಂದ ಮೇಲೆ ಅವನು ದರಿದ್ರನೆಂದು ಯಾರು ಹೇಳಬಲ್ಲರು? ನಿರ್ಗುಣನಾದ ಪರಮಾತ್ಮ, ಪ್ರಕೃತಿಯಿಂದಾಚೆ ಇರುವವ, ಸರ್ವೇಶ್ವರ, ನಿರ್ಲಿಪ್ತ, ಎಲ್ಲ ಜಂತುಗಳೊಳಗಿರುವವ. ನಿರಾಕಾರನಾದರೂ ಸ್ವೇಚ್ಛೆಯಿಂದ ಸಾಕಾರನಾಗುವವ. ಸೃಷ್ಟಿಸ್ಥಿತಿಲಯಗಳಿಗಾಗಿ ಬ್ರಹ್ಮ ವಿಷ್ಣು ಶಿವ ಎಂಬ ಮೂರು ರೂಪ ತಾಳುವನು. ಬ್ರಹ್ಮಲೋಕದಲ್ಲಿ ಬ್ರಹ್ಮ, ಕ್ಷೀರಸಾಗರದಲ್ಲಿ ವಿಷ್ಣು, ಕೈಲಾಸದಲ್ಲಿ ಶಿವ ಇವರೆಲ್ಲರೂ ಕೃಷ್ಣನ ವಿಭೂತಿಗಳು. ಶ್ರೀಕೃಷ್ಣನೂ ಎರಡು ರೂಪ ತಾಳಿದ್ದಾನೆ. ವೈಕುಂಠದಲ್ಲಿ ಚತುರ್ಭುಜರೂಪ, ಗೋಲೋಕದಲ್ಲಿ ದ್ವಿಭುಜರೂಪ. ಅವನ ಅಂಶಗಳೆ ಬ್ರಹ್ಮ ವಿಷ್ಣು ಮಹೇಶ್ವರರು. ಕೆಲವು ದೇವತೆಗಳು ಅವನ ಕಲೆಗಳು. ಇನ್ನು ಕೆಲವರು ಕಲಾಂಶರು. ಶ್ರೀಕೃಷ್ಣ ಸೃಷ್ಟಿಗೆ ತೊಡಗಿ ಮೊದಲಿಗೆ ಪ್ರಕೃತಿಯನ್ನು ನಿರ್ಮಿಸಿದ. ಅವಳಲ್ಲಿ ವೀರ್ಯಾಧಾನ ಮಾಡಿದ. ಅದರಿಂದ ಗರ್ಭ ಉದಿಸಿತು. ಅದರ ಮಧ್ಯದಲ್ಲಿ ಮಹಾ ವಿರಾಟ್ ಪುರುಷ ಜನಿಸಿದ. ಅವನು ಮಹಾವಿಷ್ಣು. ಕೃಷ್ಣನ ಷೋಡಶ ಅಂಶರೂಪ. ಅವನು ನೀರಲ್ಲಿ ಮಲಗಿದಾಗ ನಾಭಿಕಮಲದಿಂದ ಜನಿಸಿದವ ಬ್ರಹ್ಮ. ಬ್ರಹ್ಮನ ಹಣೆಯಿಂದ ಉದಿಸಿದವ ಶಿವ. ಮಹಾವಿಷ್ಣುವಿನ ವಾಮಪಾರ್ಶ್ವದಿಂದ ಉದಿಸಿದವ ವಿಷ್ಣು. ಇವರೆಲ್ಲರೂ ಪ್ರಾಕೃತಿಕರು. ಕೃಷ್ಣನ ಪ್ರಕೃತಿಯಿಂದ ನಾಲ್ವರೂ ಜನಿಸಿದರು. ಲೀಲೆಯಿಂದ ಸೃಷ್ಟಿಗಾಗಿ ಅಂಶದಿಂದ ಬಹುರೂಪ ತಾಳಿದವರು. ಕೃಷ್ಣನ ವಾಮಪಾರ್ಶ್ವದಿಂದ ಬಂದವಳು ರಾಧೆ, ರಾಸೇಶ್ವರಿ. ಮುಖದಿಂದ ಬಂದವಳು ವಾಣಿ, ವಾಗ್ದೇವತೆ. ವಕ್ಷಃಸ್ಥಲದಿಂದ ಬಂದವಳು ಲಕ್ಷ್ಮಿ, ಸರ್ವ ಸಂಪತ್ ಸ್ವರೂಪಿಣಿ. ದೇವತೆಗಳ ತೇಜಸ್ಸುಗಳಲ್ಲಿ ಉದ್ಭೂತಳಾದವಳು ಪಾರ್ವತಿ. ಎಲ್ಲ ದಾನವರನ್ನು ಕೊಂದು ದೇವತೆಗಳಿಗೆ ಸಂಪತ್ತನ್ನು ಕೊಟ್ಟವಳು. ಹಿಂದಿನ ಕಲ್ಪದಲ್ಲಿ ಅವಳು ದಕ್ಷನ ಮಡದಿಯ ಗರ್ಭದಲ್ಲಿ ಸತಿ ಎಂಬ ಹೆಸರಿಂದ ಜನಿಸಿದಳು. ಅವಳನ್ನು ದಕ್ಷ ಶಿವನಿಗೆ ನೀಡಿದ. ಅವಳು ಪತಿನಿಂದೆಯನ್ನು ಕೇಳಿ ಯೋಗಬಲದಿಂದ ಶರೀರ ತ್ಯಾಗಮಾಡಿದಳು. ನಿನ್ನ ಪತ್ನಿ ಮೇನಕೆ ಪಿತೃಗಳ ಮಾನಸಕನ್ಯೆ. ಅವಳ ಉದರದಲ್ಲಿ ಈಗ ಜಗದಂಬೆ ಹುಟ್ಟಿ ಬಂದಿದ್ದಾಳೆ. ಅದರಿಂದ ಅವಳು ಶಿವೆ, ಶಿವನ ಪತ್ನಿ. ಜನ್ಮಜನ್ಮಗಳಲ್ಲಿಯೂ, ಕಲ್ಪಕಲ್ಪಗಳಲ್ಲಿಯೂ ಅವಳು ಹಾಗೇ. ಅವಳಿಗೆ ಪೂರ್ವಜನ್ಮಸ್ಮರಣೆ ಇದೆ. ಸರ್ವಜ್ಞಳು, ಸಿದ್ಧಿದಾಯಕಳು, ಸಿದ್ಧಿರೂಪಳು. ಅವಳ ಎಲುವು ಚಿತಾಭಸ್ಮಗಳನ್ನು ಇಂದಿಗೂ ಶಿವ ಭಕ್ತಿಯಿಂದ ಧರಿಸುತ್ತಾನೆ. ನೀನು ಸ್ವೇಚ್ಛೆಯಿಂದ ಪಾರ್ವತಿಯನ್ನು ಶಿವನಿಗೆ ಕೊಡುವೆಯಾದರೆ ಕೊಡು. ಇಲ್ಲದಿದ್ದರೆ ಅವಳು ಸ್ವತಃ ತನ್ನ ಪತಿಯನ್ನು ಸೇರುವುದನ್ನು ನೀನೆ ನೋಡುವೆ. ಹಿಂದಿನಿಂದ ಯಾರಿಗೆ ಯಾರು ಹೆಂಡತಿಯೋ ಅವಳು ಅವನನ್ನೆ ಪತಿಯಾಗಿ ಪಡೆಯುತ್ತಾಳೆ. ಇದು ವಿಧಿನಿಯಮ. ಯಾರೂ ಇದನ್ನು ಮೀರಲಾರರು.

ಶಿವ ಈ ವಿವಾಹದಲ್ಲಿಯೆ ಸ್ವತಃ ಉತ್ಸುಕನಲ್ಲ, ತತ್ವಜ್ಞಾನಿ, ಸ್ವಾತ್ಮಾರಾಮ ಆತ. ದೇವತೆಗಳೆಲ್ಲರೂ ತಾರಕಾಸುರನಿಂದ ಪೀಡಿತರಾಗಿ ಶಿವನನ್ನು ಸ್ತುತಿಸಿದರು. ದೇವತೆಗಳಿಗಾಗುವ ಪೀಡೆಯನ್ನು ಕಂಡು ಬ್ರಹ್ಮ ಪ್ರಾರ್ಥಿಸಿದಾಗ ಕೃಪಾಳುವಾದ ಶಿವ ದೇವಸಭೆಯಲ್ಲಿ ತನ್ನ ಒಪ್ಪಿಗೆ ಇತ್ತ. ಅವರ ಮುಂದೆ ಒಪ್ಪಿಗೆ ಕೊಟ್ಟ ಮೇಲೆ ನಿನ್ನ ಮಗಳು ತಪಸ್ಸು ಮಾಡುವಲ್ಲಿಗೆ ಬ್ರಾಹ್ಮಣಬಾಲಕನಾಗಿ ಬಂದು ಅವಳಿಗೆ ವರ ನೀಡಿ ತನ್ನ ಲೋಕಕ್ಕೆ ಹಿಂತಿರುಗಿದ. ಅಲ್ಲಿಗೆ ಎಲ್ಲ ಇಂದ್ರಾದಿದೇವತೆಗಳು ನಾರಾಯಣ ಬ್ರಹ್ಮ ಧರ್ಮ ಋಷಿಮುನಿಗಳು ಗಂಧರ್ವರು ಯಕ್ಷರಾಕ್ಷಸರು ಎಲ್ಲರೂ ಸಮಾಲೋಚನೆಗಾಗಿ ಬಂದರು. ಬಳಿಕ ನಮ್ಮನ್ನು ಬೇಗನೆ ನಿನ್ನ ಬಳಿಗೆ ಕಳಿಸಿದರು. ಪರ್ವತರಾಜ, ನಮಗೆ ನಿನ್ನನ್ನು ಒಪ್ಪಿಸುವುದರಲ್ಲಿ ಬಹಳ ಸಂತೋಷವಿದೆ. ಏಕೆಂದರೆ ಅದರಿಂದ ಸರ್ವಕಾಲದಲ್ಲಿಯೂ ಸುಖ ನೀಡಬಲ್ಲ ಒಂದು ಶುಭಕಾರ್ಯ ಸಿದ್ಧಿಸುತ್ತಿದೆ. ನೀನು ಇಚ್ಛೆಪಟ್ಟು ಶಿವೆಯನ್ನು ಶಿವನಿಗೆ ಕೊಡದಿದ್ದಲ್ಲಿ ವಿವಾಹ ಆಗದಿರಲಾರದು. ಶಿವ ನಾರಾಯಣನೊಂದಿಗೆ ರತ್ನಖಚಿತವಾದ ರಥದಲ್ಲಿ ಬರುತ್ತಾನೆ. ದೇವೋತ್ತಮ, ಯೋಗೀಂದ್ರವರೇಣ್ಯ. ಜ್ಞಾನಿಗಳಿಗೆ ಗುರು, ಆದಿ ಮಧ್ಯಾಂತರಹಿತ. ನಿರ್ವಿಕಾರ, ಜನನರಹಿತ. ಅವನು ಶಿವೆಗೆ ತಪೋವನದಲ್ಲಿಯೆ ವರನೀಡಿದ್ದಾನೆ. ಈಶ್ವರನ ಮಾತು ಎಂದೂ ಸುಳ್ಳಾಗದು, ವ್ಯರ್ಥವಾಗದು.

**ಬ್ರಹ್ಮಾದಿಸ್ತಂಬಪರ್ಯಂತಂ ಸರ್ವಂ ನಶ್ವರಮಸ್ಥಿರಂ ।**
**ಅಹೋ ಪ್ರತಿಜ್ಞಾ ದುರ್ಲಂಘ್ಯಾ ಸಾಧೂನಾಮವಿನಾಶಿನೀ ॥**

ಬ್ರಹ್ಮನಿಂದ ಹಿಡಿದು ಒಂದು ಹುಲ್ಲು ಕಡ್ಡಿಯವರೆಗೂ ಎಲ್ಲವೂ ನಶ್ವರ, ಅಸ್ಥಿರ. ಆದರೆ ಸಜ್ಜನರ ಮಾತು ಎಂದೂ ಅನುಲ್ಲಂಘನೀಯ, ಅವಿನಾಶಿ. ಒಬ್ಬ ಇಂದ್ರ ಪರ್ವತಗಳ ರೆಕ್ಕೆಗಳನ್ನು ಅನಾಯಾಸವಾಗಿ ಕಡಿದ. ವಾಯು ಮೇರುವಿನ ಶಿಖರವನ್ನು ಮುರಿದ. ದೇವತೆಗಳ ಮುಂದೆ ಹೋರಾಡಬಲ್ಲವರು ಪರ್ವತಗಳಲ್ಲಿ ಯಾರಿರುವರು? ಮರುತ್ತುಗಳು ಬೀಸಿ ಒಗೆದರೆ ಪರ್ವತಗಳೆಲ್ಲ ಕ್ಷಣದಲ್ಲಿ ಸಮುದ್ರದಲ್ಲಿ ಬೀಳುವುವು.

**ಏಕಾರ್ಥೇ ಯದಿ ಶೈಲೇಂದ್ರ ಸರ್ವಸಂಪದ್ ವಿನಶ್ಯತಿ ।**
**ಸರ್ವಾನ್ ರಕ್ಷತಿ ತದ್ ದತ್ವಾ ವಿನಾ ಚ ಶರಣಾಗತಂ ॥**

ಒಬ್ಬನಿಗಾಗಿ ಎಲ್ಲರ ಸಂಪತ್ತು ನಾಶವಾಗುವಂತಿದ್ದರೆ ಆ ಒಬ್ಬನನ್ನು ಬಿಟ್ಟುಕೊಟ್ಟು ಎಲ್ಲರ ರಕ್ಷಣೆ ಮಾಡಬೇಕಾಗುತ್ತದೆ. ಆದರೆ ಈ ನಿಯಮದಂತೆ ಶರಣಾಗತನಾದ ವ್ಯಕ್ತಿಯನ್ನು ಮಾತ್ರ ಬಿಟ್ಟುಕೊಡುವಂತಿಲ್ಲ. ಏಕೆಂದರೆ ಶರಣಾಗತನ ರಕ್ಷಣೆಗಾಗಿ ಪ್ರಾಣವನ್ನೂ ಕೊಡಲು ಸಿದ್ಧನಿರಬೇಕು. ಮಕ್ಕಳು ಹೆಂಡತಿ ಸಂಪತ್ತೆಲ್ಲವನ್ನೂ ಕೊಡಲು ಸಿದ್ಧನಿರಬೇಕೆಂದು ನೀತಿ ಬಲ್ಲವರು ಹೇಳುತ್ತಾರೆ.

ಅನರಣ್ಯನೆಂಬ ರಾಜ ತನ್ನ ಮಗಳನ್ನು ಮುನಿಗೆ ಕೊಟ್ಟು ಬ್ರಹ್ಮಶಾಪದಿಂದ ಮುಕ್ತನಾಗಿ ಎಲ್ಲ ಸಂಪತ್ತನ್ನೂ ರಕ್ಷಿಸಿಕೊಂಡ. ಏಕೆಂದರೆ ಅವನನ್ನು ಸಕಾಲದಲ್ಲಿ ನೀತಿಶಾಸ್ತ್ರಜ್ಞರು ಎಚ್ಚರಿಸಿ ಬ್ರಹ್ಮಶಾಪವನ್ನು ತಪ್ಪಿಸಿದರು. ಪರ್ವತರಾಜ, ನೀನೂ ಕೂಡ ಹೀಗೆ ಶಿವನಿಗೆ ಮಗಳನ್ನಿತ್ತು ಎಲ್ಲ ಬಂಧುವರ್ಗವನ್ನೂ ಕಾಪಾಡು. ದೇವತೆಗಳ ಪ್ರೀತಿಯನ್ನೂ ಸಂಪಾದಿಸು.

ವಸಿಷ್ಠನ ಮಾತನ್ನು ಕೇಳಿ ಪರ್ವತರಾಜ ಅನರಣ್ಯರಾಜನ ವೃತ್ತಾಂತವನ್ನು ಕೇಳಿದ.

**ಹಿಮಾಲಯ:-** ಅನರಣ್ಯರಾಜ ಯಾರ ವಂಶದಲ್ಲಿ ಜನಿಸಿದವ? ಅವನು ಹೇಗೆ ಮಗಳನ್ನು ಕೊಟ್ಟು ಸರ್ವ ಸಂಪತ್ತುಗಳನ್ನು ರಕ್ಷಿಸಿಕೊಂಡ?

**ವಸಿಷ್ಠ:-** ಅನರಣ್ಯ ಮನುವಂಶದಲ್ಲಿ ಜನಿಸಿದ ರಾಜ. ಚಿರಂಜೀವಿ. ಧರ್ಮಶೀಲ, ವಿಷ್ಣುಭಕ್ತ. ಜಿತೇಂದ್ರಿಯ. ಬ್ರಹ್ಮಪುತ್ರನಾದ ಸ್ವಾಯಂಭುವಮನು. ಹಿಂದೆ ಧರ್ಮದಿಂದ ಎಪ್ಪತ್ತೊಂದು ಯುಗಗಳ ಕಾಲ ರಾಜ್ಯವಾಳಿದ. ಬಳಿಕ ಪತ್ನಿ ಶತರೂಪೆಯೊಂದಿಗೆ ವೈಕುಂಠಕ್ಕೆ ಹೋಗಿ ಹರಿದಾಸ್ಯವನ್ನು ಪಡೆದ. ಬಳಿಕ ಸ್ವಾರೋಚಿಷ ಮನುವಿನ ರಾಜ್ಯಭಾರ. ಅವನ ಬಳಿಕ ಉತ್ತಮ, ತಾಮಸ, ರೈವತ, ಚಾಕ್ಷುಷ, ಶ್ರಾದ್ಧದೇವರು ಕ್ರಮವಾಗಿ ರಾಜ್ಯವಾಳಿದರು. ಸೂರ್ಯತನಯನಾದ ಸಾವರ್ಣಿ ಎಂಟನೆಯ ಮನು. ಅವನು ಹಿಂದೆ ಚೈತ್ರವಂಶದಲ್ಲಿ ಜನಿಸಿದ ರಾಜಾ ಸುರಥನಾಗಿದ್ದ. ಒಂಬತ್ತನೆಯವನು ದಕ್ಷಸಾವರ್ಣಿ. ಹತ್ತನೆಯವನು ಬ್ರಹ್ಮಸಾವರ್ಣಿ. ಹನ್ನೊಂದನೆಯವನು ಧರ್ಮಸಾವರ್ಣಿ. ಬಳಿಕ ರುದ್ರಸಾವರ್ಣಿ, ದೇವಸಾವರ್ಣಿ ಇಂದ್ರಸಾವರ್ಣಿ ಇವರು ಕ್ರಮವಾಗಿ ರಾಜ್ಯವಾಳಿದರು. ಹೀಗೆ ಹದಿನಾಲ್ಕು ಮಂದಿ ಮನುಗಳು ಆಗಿ ಹೋದರೆ ಬ್ರಹ್ಮನಿಗೆ ಒಂದು ಹಗಲು ಕಳೆಯುತ್ತದೆ. ಇವರಲ್ಲಿ ಇಂದ್ರಸಾವರ್ಣಿಯ ವೃತ್ತಾಂತವನ್ನು ಹೇಳುತ್ತೇನೆ ಕೇಳು.

ಇಂದ್ರಸಾವರ್ಣಿ ಒಬ್ಬ ಶ್ರೇಷ್ಠ ಮನು, ವಿಷ್ಣುಭಕ್ತ, ಧರ್ಮದಿಂದ ಎಪ್ಪತ್ತೊಂದು ಯುಗಗಳಲ್ಲಿ ರಾಜ್ಯಭಾರ ಮಾಡಿದ. ಅವನು ತನ್ನ ಮಗನಾದ ಸುಚಂದ್ರನಿಗೆ, ಸುಚಂದ್ರ ಶ್ರೀನಿಕೇತುವಿಗೆ, ಶ್ರೀನಿಕೇತು ಪುರೀಷತರುವಿಗೆ, ಪುರೀಷತರು ಗೋಕಾಮುಖನಿಗೆ, ಗೋಕಾಮುಖ ವೃದ್ಧಶ್ರವನಿಗೆ, ವೃದ್ಧಶ್ರವ ಭಾನುವಿಗೆ, ಭಾನು ಪುಂಡರೀಕನಿಗೆ, ಪುಂಡರೀಕ ಜಿಹ್ವಲನಿಗೆ, ಜಿಹ್ವಲ ಶೃಂಗಿಗೆ, ಶೃಂಗಿ ಭೀಮನಿಗೆ, ಭೀಮ ಯಶಶ್ಚಂದ್ರನಿಗೆ, ಯಶಶ್ಚಂದ್ರ ವರೇಣ್ಯನಿಗೆ, ವರೇಣ್ಯ ಪುರಾರಣ್ಯನಿಗೆ, ಪುರಾರಣ್ಯ ವರಾರಣ್ಯನಿಗೆ, ವರಾರಣ್ಯ ಮಂಗಲಾರಣ್ಯನಿಗೆ ಹೀಗೆ ರಾಜ್ಯವಿತ್ತು ಕಾಡಿಗೆ ತಪಸ್ಸಿಗಾಗಿ ಹೋದರು. ಈ ಮಂಗಲಾರಣ್ಯ ತಪಸ್ವಿ, ಜ್ಞಾನಿ. ಆದರೆ ಆತನಿಗೆ ಮಕ್ಕಳಿರಲಿಲ್ಲ. ಪುಷ್ಕರದಲ್ಲಿ ತಪಸ್ಸು ಮಾಡಿ ಶಿವವರದಿಂದ ವೈಷ್ಣವನಾದ ಅನರಣ್ಯನನ್ನು ಮಗನನ್ನಾಗಿ ಪಡೆದ. ಅವನಿಗೆ ರಾಜ್ಯವನ್ನಿತ್ತು ತಪಸ್ಸಿಗಾಗಿ ಕಾಡನ್ನು ಸೇರಿದ. ಅನರಣ್ಯ ಶ್ರೇಷ್ಠರಾಜನಾಗಿ ಸಪ್ತದ್ವೀಪಗಳನ್ನಾಳಿದ. ಭೃಗುವಿನ ಪೌರೋಹಿತ್ಯದಲ್ಲಿ ನೂರು ಯಾಗಗಳನ್ನು ಮಾಡಿದ. ಆದರೆ ಇಂದ್ರಪದವಿ ನಶ್ವರ ತುಚ್ಛವೆಂದು ಅದನ್ನು ಬಿಟ್ಟುಬಿಟ್ಟ. ಅನಾಯಾಸವಾಗಿ ಇಂದ್ರನನ್ನೂ ಬಲಿಯನ್ನೂ ಗೆದ್ದ. ಉಜ್ವಲ ಪರಾಕ್ರಮದಿಂದ ಮಹಾದೈತ್ಯರನ್ನೂ ಪರಾಭವಗೊಳಿಸಿದ. ಅವನಿಗೆ ನೂರು ಮಂದಿ ಗಂಡುಮಕ್ಕಳು, ಒಬ್ಬಳು ಹೆಣ್ಣು ಮಗು. ಅವಳು ಪದ್ಮಾ. ಪದ್ಮಾಲಯೆಯಾದ ಲಕ್ಷ್ಮಿಗೆ ಸಮಾನವಾದ ಸೌಂದರ್ಯ ಅವಳದು. ಅವಳು ಯೌವನಕ್ಕೆ ಕಾಲಿಟ್ಟಾಗ ಯೋಗ್ಯ ವರನ ಅನ್ವೇಷಣೆಗಾಗಿ ರಾಜ ಚಾರರನ್ನು ಕಳಿಸಿದ. ಆದರೆ ಪಿಪ್ಪಲಾದನೆಂಬ ಮುನಿ ಒಮ್ಮೆ ತನ್ನಾಶ್ರಮಕ್ಕೆ ಬರುತ್ತಿದ್ದಾಗ ದಾರಿಯಲ್ಲಿ ಒಂದು ನಿರ್ಜನ ಅರಣ್ಯದಲ್ಲಿ ಒಬ್ಬ ಗಂಧರ್ವ ಸ್ತ್ರೀಯರ ನಡುವೆ ಶೃಂಗಾರಸಾಗರದಲ್ಲಿ ಮುಳುಗಿದ್ದುದನ್ನು ಕಂಡ.

ಕಾಮಸುಖದಿಂದ ಮತ್ತನಾಗಿ ಹಗಲು-ರಾತ್ರಿಗಳ ಭೇದವನ್ನೆ ತಿಳಿಯದೆ ಮೈಮರೆತಿದ್ದ ಆ ಗಂಧರ್ವನನ್ನು ನೋಡಿದಾಗ ಮುನಿಗೂ ಕಾಮಭಾವನೆ ಜಾಗೃತವಾಯಿತು.

ಪಿಪ್ಪಲಾದ ತಾನು ವಿವಾಹವಾಗಬೇಕೆಂದು ಬಯಸಿದ. ಪುಷ್ಪಭದ್ರಾ ನದಿಯಲ್ಲಿ ಸ್ನಾನಕ್ಕೆ ಹೋದಾಗ ಅಲ್ಲಿ ಪದ್ಮೆಯನ್ನು ಕಂಡ. ಸಾಕ್ಷಾತ್ ಲಕ್ಷ್ಮಿಯಂತಿದ್ದ ಅವಳನ್ನು ನೋಡಿ ಸಮೀಪದ ಜನರಲ್ಲಿ ಈಕ ಯಾರು ಯಾರ ಮಗಳೆಂದು ವಿಚಾರಿಸಿದ. ಜನರು ಹೇಳಿದರು 'ಈಕೆ ಅನರಣ್ಯರಾಜನ ಕುಮಾರಿ,' ಎಂದು. ಮುನಿ ಸ್ನಾನಮಾಡಿ ಇಷ್ಟದೇವತೆಯಾದ ರಾಧಾರಮಣನನ್ನು ಪೂಜಿಸಿ ಅನರಣ್ಯನ ಓಲಗಶಾಲೆಗೆ ಕನ್ಯಾಭಿಕ್ಷೆ ಬೇಡಲು ಹೋದ. ರಾಜ ಅವನನ್ನು ಬೇಗನೆ ನಮಿಸಿ ಭಯಭಕ್ತಿಗಳಿಂದ ಮಧುಪರ್ಕಾದಿಗಳನ್ನಿತ್ತ. ಮುನಿ ಎಲ್ಲವನ್ನೂ ಸ್ವೀಕರಿಸಿ ಕೊನೆಗೆ ಕನ್ಯೆಯನ್ನು ಬೇಡಿದ. ರಾಜನಿಗೆ ಏನು ಹೇಳಬೇಕೆಂಬುದು ತೋಚದಂತಾಯಿತು. ಮೌನವಾಗಿ ನಿಂತ. ಮುನಿ ಪುನಃ ಬೇಡಿದ, 'ರಾಜನೆ, ನಿನ್ನ ಮಗಳನ್ನು ಕೊಡು, ಇಲ್ಲದಿದ್ದರೆ ಇಡಿ ರಾಜ್ಯವನ್ನು ಸುಟ್ಟು ಬೂದಿ ಮಾಡುತ್ತೇನೆ.' ಎಂದ. ಮುನಿಯ ಬ್ರಹ್ಮತೇಜಸ್ಸಿಗೆ ರಾಜನ ಪರಿವಾರದವರೆಲ್ಲ ನಡುಗಿದರು. ರಾಜ ಮುಪ್ಪಿನಿಂದ ಬಳಲುವ ವೃದ್ಧ ಮುನಿಯನ್ನು ನೋಡುತ್ತ ಕಣ್ಣೀರು ಸುರಿಸಿದ. ರಾಣಿಯರೆಲ್ಲರೂ ದಿಕ್ಕುತೋಚದೆ ಕಣ್ಣೀರು ಸುರಿಸಿದರು. ಪದ್ಮೆಯ ತಾಯಿ ಮಹಾರಾಣಿ ಶೋಕಾಕುಲತೆಯಿಂದ ಮೂರ್ಛಿತಳಾದಳು. ಆಗ ನೀತಿಶಾಸ್ತ್ರಜ್ಞನಾದ ಒಬ್ಬ ಪಂಡಿತ ರಾಜನಿಗೆ ಹಿತವನ್ನು ಬೋಧಿಸಿದ. ರಾಣಿಗೂ ರಾಜಕುಮಾರಿಗೂ ಉಪದೇಶಿಸಿದ. 'ಇಂದಲ್ಲ, ನಾಳೆಯಾದರೂ ಕುಮಾರಿಯನ್ನು ಮದುವೆ ಮಾಡಿಕೊಡಲೇ ಬೇಕು ತಾನೆ! ಈ ಬ್ರಾಹ್ಮಣನನ್ನು ಬಿಟ್ಟು ಬೇರೆ ಯಾರಿಗೆ ಕೊಡುವಿ? ಬ್ರಾಹ್ಮಣನಿಗಿಂತ ಬೇರೆ ಸತ್ಪಾತ್ರ ಮೂಲೋಕದಲ್ಲಿ ಇಲ್ಲ. ಒಬ್ಬಳು ಮಗಳನ್ನು ಬ್ರಾಹ್ಮಣನಿಗೆ ಕೊಟ್ಟು ಎಲ್ಲ ಸಂಪತ್ತನ್ನು ಉಳಿಸಿಕೊಳ್ಳು. ಇಲ್ಲದಿದ್ದರೆ ಒಬ್ಬಳು ಮಗಳಿಗಾಗಿ ಸರ್ವಸಂಪತ್ತು ಕೈಬಿಟ್ಟು ಹೋದೀತು. ಶರಣಾಗತನನ್ನು ಬಿಟ್ಟುಕೊಡಲಾಗದು. ಬೇರೆ ಯಾವುದನ್ನಾದರೂ ಬಿಟ್ಟುಕೊಟ್ಟು ಎಲ್ಲವನ್ನೂ ಉಳಿಸಿಕೊಳ್ಳುವುದು ಸರಿಯಾದ ನೀತಿ.'

ರಾಜ ಪಂಡಿತನ ಮಾತನ್ನು ಕೇಳಿ ಬಹಳ ಅತ್ತು ಅತ್ತು ಕನ್ಯೆಯನ್ನು ಅಲಂಕರಿಸಿ ಮುನಿಗೆ ದಾನ ಮಾಡಿದ. ಮುನಿ ಅವಳನ್ನು ಮದುವೆಯಾಗಿ ಸಂತೋಷದಿಂದ ತನ್ನ ಕುಟೀರಕ್ಕೆ ಬಂದ. ರಾಜ ಶೋಕದಿಂದ ಎಲ್ಲವನ್ನೂ ಪರಿತ್ಯಾಗಮಾಡಿ ತಪಸ್ಸಿಗೆ ಹೊರಟು ಹೋದ. ರಾಣಿ ಅತ್ತ ಪತಿಯನ್ನೂ ಇತ್ತ ಮಗಳನ್ನೂ ಕಳೆದುಕೊಂಡು ದುಃಖ ಸಹಿಸದೆ ಪ್ರಾಣತ್ಯಾಗ ಮಾಡಿದಳು. ರಾಜ ಹೊರಟುಹೋದ ಬಳಿಕ ಪುತ್ರ ಪೌತ್ರರು ದುಃಖದಿಂದ ರಾಜ್ಯಭಾರ ಮಾಡಿದರು. ರಾಜ ತಪಸ್ಸು ಮಾಡಿ ರಾಧಾರಮಣನನ್ನು ಒಲಿಸಿಕೊಂಡು ಗೋಲೋಕವನ್ನು ಸೇರಿದ. ರಾಜನ ಜ್ಯೇಷ್ಠಪುತ್ರ ಕೀರ್ತಿಮಂತ ರಾಜನಾದ. ಮಕ್ಕಳಂತೆ ಪ್ರಜೆಗಳನ್ನು ಪಾಲಿಸಿದ.

*ಇಲ್ಲಿಗೆ ಶ್ರೀಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ನಲವತ್ತೊಂದನೆ ಅಧ್ಯಾಯ ಮುಗಿಯಿತು.*

—o—

## ಧರ್ಮನಿಗೆ ಪತಿವ್ರತೆಯ ಶಾಪ

ಅಧ್ಯಾಯ - ೪೨

**ವಸಿಷ್ಠ:-** ಅನರಣ್ಯನ ಮಗಳು ಪದ್ಮೆ ಭಕ್ತಿಯಿಂದ ಪತಿಯಾದ ಪಿಪ್ಪಲಾದನನ್ನು ಸೇವಿಸಿದಳು. ಮನೋವಾಕ್ಕಾಯಗಳಿಂದಲೂ ನಾರಾಯಣನನ್ನು ಲಕ್ಷ್ಮೀ ಹೇಗೋ ಹಾಗೆ ಸೇವಿಸಿದಳು. ಒಂದು ದಿನ ಅವಳು ಗಂಗಾ ಸ್ನಾನಕ್ಕೆ ಹೊರಟಿದ್ದಳು. ದಾರಿಯಲ್ಲಿ ಧರ್ಮ ಅವಳನ್ನು ಕಂಡು, ರಾಜವೇಷದಿಂದ ಒಳ್ಳೆಯ ರಥದಲ್ಲಿ ಕುಳಿತು ಬಂದ. ರತ್ನಾಭರಣ ಭೂಷಿತನಾಗಿ ನವಯೌವನದ ಕಾಂತಿಯಿಂದ ಕಾಮದೇವನಂತೆ ಕಾಣುತ್ತಿದ್ದ ಅವನು ಸುಂದರಿಯಾದ ಪದ್ಮೆಯನ್ನು ಅವಳ ಮನೋಗತವನ್ನು ತಿಳಿಯುವುದಕ್ಕಾಗಿ ಮಾತನಾಡಿಸಿದ.

**ಧರ್ಮ:-** ಓ ಸುಂದರಿ, ನೀನು ಲಕ್ಷ್ಮಿಯಂತೆ ಶೋಭಿಸುವೆ. ಯೌವನ ತುಂಬಿದ ಕಾಮಿನಿ ನೀನು ರಾಜರಿಗೆ ಯೋಗ್ಯಳಾಗಿರುವೆ. ಮುಪ್ಪಿನಿಂದ ಬಳಲುವ ಆ ವೃದ್ಧಮುನಿಯೊಡನೆ ನೀನೇನೂ ಶೋಭಿಸುವುದಿಲ್ಲ. ಚಂದನ ಅಗುರುಗಳ ಲೇಪ ಧರಿಸಿ ರಾಜನ ಎದೆಯಲ್ಲಿ ಶೋಭಿಸತಕ್ಕವಳು ನೀನು. ಇನ್ನೇನು ಬೇಗನೆ ಸಾಯಲಿರುವ ತಪೋನಿರತನಾದ ಬ್ರಾಹ್ಮಣನನ್ನು ಬಿಡು. ಇಕೋ, ನಾನಿದ್ದೇನೆ ಮಹಾರಾಜ. ರತಿಶೂರ, ಕಾಮಾತುರ.

ಹೆಣ್ಣಿಗೆ ಸೌಂದರ್ಯ ಪೂರ್ವಜನ್ಮದ ಪುಣ್ಯದಿಂದ ಲಭಿಸುತ್ತದೆ. ಆಸೌಂದರ್ಯವೆಲ್ಲವೂ ರಸಿಕನ ಆಲಿಂಗನ ಸಿಕ್ಕರೇ ಸಫಲವಾಗುತ್ತದೆ. ನಾನು ಸಾವಿರಾರು ಸುಂದರಿಯರನ್ನು ಆಳುವವ. ಕಾಮಶಾಸ್ತ್ರವಿಶಾರದ ನನ್ನನ್ನು ನಿನ್ನ ದಾಸನನ್ನಾಗಿ ಮಾಡಿಕೊ. ಅವರೆಲ್ಲರನ್ನೂ ನಾನು ಬಿಟ್ಟುಬಿಡುತ್ತೇನೆ. ಏಕಾಂತದ ಪರ್ವತ ನದ ನದಿ ಪುಷ್ಪೋದ್ಯಾನಗಳಲ್ಲಿ ಮಲಯ ಚಂದನಾರಣ್ಯಗಳಲ್ಲಿ ನಾನು ನಿನ್ನೊಡನೆ ವಿಹಾರ ಮಾಡುವೆನು. ಕಾಮಜ್ವರದಿಂದ ಸುಟ್ಟು ಹೋಗುವ ಹೆಣ್ಣಿಗೂ ಉಪಶಮನ ಮಾಡಬಲ್ಲವನು ನಾನು. ನನ್ನೊಡನೆ ವಿಹರಿಸು. ನಿನ್ನ ಜನ್ಮ ಸಾರ್ಥಕ ಮಾಡಿಕೊ.

ಹೀಗೆ ಹೇಳಿ ಧರ್ಮ ರಥದಿಂದಿಳಿದು ಅವಳನ್ನು ಕೈಯಲ್ಲಿ ಹಿಡಿಯಲು ಉದ್ಯುಕ್ತನಾದ. ಪತಿವ್ರತೆಯಾದ ಪದ್ಮೆ ಹೇಳಿದಳು.

**ಪದ್ಮೆ:-** ದೂರ ಹೋಗು, ದೂರ ಹೋಗು, ಓ ಪಾಪಿಯಾದ ದುಷ್ಟ ರಾಜ! ನನ್ನನ್ನು ಕಾಮದೃಷ್ಟಿಯಿಂದ ಕಂಡರೆ ಕ್ಷಣದಲ್ಲಿ ಸುಟ್ಟು ಬೂದಿಯಾಗುವೆ. ತಪಸ್ಸಿನಿಂದ ಪವಿತ್ರವಾದ ಶರೀರ ಉಳ್ಳ ಮುನಿಶ್ರೇಷ್ಠ ಪಿಪ್ಪಲಾದನನ್ನು ಬಿಟ್ಟು, ಹೆಣ್ಣಿಗೆ ಮನ ಸೋಲುವ ಲಂಪಟನಾದ ನಿನ್ನನ್ನು ನಾನು ಸೇರುವೆನೆ? ಸ್ತ್ರೀಲಂಪಟನ ಸ್ಪರ್ಶ ಮಾತ್ರದಿಂದಲೆ ಎಲ್ಲ ಪುಣ್ಯ ನಾಶವಾಗುತ್ತದೆ. ಸ್ತ್ರೀಜಿತನಿಗಿಂತ ಹೆಚ್ಚಿನ ಪಾಪಿ ಭೂಮಿಯಲ್ಲಿಯೆ ಇಲ್ಲ. ತಾಯಿಯಂತೆ ಕಾಣಬೇಕಾಗಿರುವ ನನ್ನನ್ನು ಹೆಂಡತಿಯಂತೆ ಕಾಣುವ ನಿನಗೆ ನನ್ನ ಶಾಪದಿಂದ ಕ್ಷಯ ಉಂಟಾಗಲಿ.

ಪತಿವ್ರತೆಯ ಈ ಶಾಪವನ್ನು ಕೇಳಿದೊಡನೆ ಧರ್ಮ ರಾಜವೇಷವನ್ನು ತೊರೆದು ನಿಜರೂಪದಿಂದ ನಿಂತು ನಡುಗುತ್ತ ಹೇಳಿದ-

**ಧರ್ಮ:-** ಅಮ್ಮ, ನಾನು ಪರಸ್ತ್ರೀಯನ್ನು ತಾಯಿಯೆಂದು ಕಾಣುವ ಧರ್ಮಜ್ಞರ ಗುರುಗಳಿಗೆ ಗುರುವೆನಿಸುವ ಧರ್ಮಪುರುಷ. ನಿನ್ನ ಮನೋಗತವನ್ನು ಅರಿಯುವುದಕ್ಕೆ ಬಂದೆ. ನಿಮ್ಮಂಥ ಪತಿವ್ರತೆಯರ ಮನಸ್ಸು ನನಗೆ ಗೊತ್ತು. ಆದರೂ ದೈವ ಪ್ರೇರಣೆಯಿಂದ ಹೀಗೆ ನಿನ್ನನ್ನು ಪರೀಕ್ಷಿಸಿದೆ. ಅದಕ್ಕೆ ನೀನು ಸರಿಯಾದ ಶಿಕ್ಷೆಯನ್ನೆ ನೀಡಿರುವೆ. ಇದು ಉಚಿತವೆ. ವಿರುದ್ಧವಲ್ಲ. ಮಾರ್ಗ ತಪ್ಪಿ ನಡೆವವನಿಗೆ ಶಿಕ್ಷೆಯಾಗಬೇಕೆಂಬುದು ಪರಮಾತ್ಮ ಮಾಡಿದ ನಿಯಮ. ಧರ್ಮಾಧರ್ಮ ಕಾಲಾಕಾಲಗಳನ್ನು ತಿಳಿವ, ಬ್ರಹ್ಮನಿಗೂ ಕರ್ತವ್ಯವನ್ನು ವಿಧಿಸುವ ಆಕೃಷ್ಣನಿಗೆ ನಮಸ್ಕಾರ. ಕಾಲದಲ್ಲಿ ಸಂಹಾರಕನಾದ ಶಿವನನ್ನೂ ಸಂಹಾರಮಾಡುವ ಮತ್ತು ಅನಾಯಾಸದಿಂದ ಬ್ರಹ್ಮಾಂಡ ಸೃಷ್ಟಿಮಾಡುವ ಆ ಕೃಷ್ಣನಿಗೆ ನಮಸ್ಕಾರ. ಒಬ್ಬನನ್ನು ಶತ್ರುವನ್ನಾಗಲಿ ಮಿತ್ರನನ್ನಾಗಲಿ ಮಾಡಬಲ್ಲ, ಪ್ರೀತಿಯನ್ನಾಗಲಿ ಕಲಹವನ್ನಾಗಲಿ ಉಂಟುಮಾಡಬಲ್ಲ, ಸೃಷ್ಟಿನಾಶಗಳೆರಡನ್ನೂ ಮಾಡಬಲ್ಲ ಕೃಷ್ಣನಿಗೆ ನಮಸ್ಕಾರ. ಶಾಪವರಗಳನ್ನೂ ಸುಖದುಃಖಗಳನ್ನೂ ಸಂಪತ್ತು ವಿಪತ್ತುಗಳನ್ನೂ ನೀಡುವ ಕೃಷ್ಣನಿಗೆ ನಮಸ್ಕಾರ. ಪ್ರಕೃತಿ, ಮಹಾವಿಷ್ಣು, ಬ್ರಹ್ಮ ವಿಷ್ಣು ಮಹೇಶ್ವರರನ್ನು ಸೃಷ್ಟಿಸಿದ ಕೃಷ್ಣನಿಗೆ ನಮಸ್ಕಾರ. ಹಾಲು ಬೆಳ್ಳಗೆ, ನೀರು ತಂಪು, ಬೆಂಕಿ ಬಿಸಿಯಾಗುವಂತೆ ಮಾಡಿದ ಕೃಷ್ಣನಿಗೆ ನಮಸ್ಕಾರ. ತೇಜಸ್ಸನ್ನು ಸೃಷ್ಟಿಸಿದ ತೇಜೋರೂಪ, ಗುಣಶ್ರೇಷ್ಠನಾಗಿದ್ದೂ ನಿರ್ಗುಣನೆನಿಸಿದ ಕೃಷ್ಣನಿಗೆ ನಮಸ್ಕಾರ. ಸರ್ವಕಾರಣ, ಸರ್ವಾಂತರಾತ್ಮ, ಸರ್ವರಿಗೆ ಬಂಧು ಹೀಗೆ ಸರ್ವವೂ ಆಗಿರುವ ಕೃಷ್ಣನಿಗೆ ನಮಸ್ಕಾರ. ಹೀಗೆ ಹೇಳಿ ಜಗದ್ಗುರುವಾದ ಧರ್ಮ ಪದ್ಮೆಯ ಮುಂದೆ ನಿಂತ. ಅವಳು ಕೂಡಲೆ ಹೇಳಿದಳು-

**ಪದ್ಮೆ:-** ನೀನು ಸರ್ವಕರ್ಮಸಾಕ್ಷಿ, ಸರ್ವಾಂತರಾತ್ಮ, ಸರ್ವಜ್ಞ, ಸರ್ವತತ್ವವೇತ್ತ. ದಾಸಿಯಾದ ನನ್ನ ಮನೋಗತವನ್ನರಿಯಲು ಇದೇನು ವಿಡಂಬನೆ ಮಾಡಿಬಿಟ್ಟೆ? ನಾನು ನಿನ್ನಲ್ಲಿ ಮಾಡಿದುದು ಮಹಾಪರಾಧವಾಯಿತು. ನಾನು ಹೆಣ್ಣಿನ ಸ್ವಭಾವಕ್ಕೆ ಅನುಗುಣವಾಗಿ ಅಜ್ಞಾನದಿಂದ ಕೋಪದಿಂದ ಶಾಪಕೊಟ್ಟುಬಿಟ್ಟೆ. ಆ ಶಾಪಕ್ಕೆ ಏನು ವ್ಯವಸ್ಥೆ ಎಂದು ಯೋಚಿಸುತ್ತಿದ್ದೇನೆ. ಏಕೆಂದರೆ,

**ಆಕಾಶೋಽಸೌ ದಿಶಃ ಸರ್ವಾ ಯದಿ ನಶ್ಯಂತಿ ವಾಯವಃ ।**
**ತಥಾಪಿ ಸಾಧ್ವೀಶಾಪಸ್ತು ನ ನಶ್ಯತಿ ಕದಾಚನ ॥**

ಆಕಾಶ ದಿಕ್ಕು ವಾಯುಗಳೆಲ್ಲವೂ ನಾಶಹೊಂದಿದರೂ ಪತಿವ್ರತೆಯ ಶಾಪವೆಂದೂ ಇಲ್ಲವಾಗುವುದಿಲ್ಲ. ನೀನು ನಾಶಹೊಂದಿದರೆ ಈ ಸೃಷ್ಟಿ ಎಲ್ಲವೂ ನಾಶಹೊಂದುವುದು. ನನಗೆ ಈಗ ಏನು ಮಾಡಬೇಕೆಂಬುದೇ ತೋಚುತ್ತಿಲ್ಲ. ಆದರೂ ನಾನು ಒಂದು ವ್ಯವಸ್ಥೆಯನ್ನು ಹೇಳುತ್ತೇನೆ. ಸತ್ಯಯುಗದಲ್ಲಿ ನೀನು ಹುಣ್ಣಿಮೆಯ ಚಂದ್ರನಂತೆ ಪೂರ್ಣವಾಗಿ ಹಗಲೂ ರಾತ್ರಿಯೂ ಸದಾ ಬೆಳಗುತ್ತಿರುವಿ. ತ್ರೇತಾಯುಗದಲ್ಲಿ ಕಾಲಂಶ ಕ್ಷಯವಾಗುತ್ತದೆ. ದ್ವಾಪರದಲ್ಲಿ ಅರ್ಧಾಂಶ ಕ್ಷಯ. ಕಲಿಯುಗದಲ್ಲಿ ಮೂರು

ಪಾದವೂ ಶಿಥಿಲವಾಗುತ್ತದೆ. ಪುನಃ ಸತ್ಯಯುಗ ಬಂದಾಗ ಪೂರ್ಣವಾಗಿ ನಾಲ್ಕೂ ಪಾದಗಳಿಂದ ಯುಕ್ತನಾಗುವೆ.

ಸತ್ಯಯುಗದಲ್ಲಿ ನೀನು ಸರ್ವವ್ಯಾಪಕನಾಗಿರುವೆ. ಬೇರೆ ಯುಗಗಳಲ್ಲಿ ಅಲ್ಲಲ್ಲಿ ಕೆಲವೆಡೆ ಮಾತ್ರ ನೀನಿರುವೆ. ನಿನಗೆ ಆಧಾರವಾಗುವ ಸ್ಥಾನಗಳನ್ನು ಹೇಳುತ್ತೇನೆ ಕೇಳು. ವೈಷ್ಣವರಾದ ಎಲ್ಲ ಯತಿ ಬ್ರಹ್ಮಚಾರಿ ಪತಿವ್ರತೆಯರು, ಜ್ಞಾನಿಗಳಾದ ವಾನಪ್ರಸ್ಥ ಭಿಕ್ಷುಗಳು, ಧರ್ಮಶೀಲರಾದ ರಾಜರು, ಒಳ್ಳೆಯ ವೈಶ್ಯರು, ದ್ವಿಜಸೇವೆ ಮಾಡುತ್ತ ಸತ್ಸಂಸರ್ಗದಲ್ಲಿರುವ ಶೂದ್ರರು ಇವರಲ್ಲೆಲ್ಲ ನೀನು ಸದಾ ಪೂರ್ಣವಾಗಿರುವೆ. ಪ್ರತಿಯುಗದಲ್ಲಿಯೂ ಇವರು ನಿನಗೆ ಆಧಾರರಾಗಿರುತ್ತಾರೆ. ಅಶ್ವತ್ಥ, ವಟ, ಬಿಲ್ವ, ತುಲಸಿ, ಚಂದನಗಳಿರುವಲ್ಲಿ, ದೀಕ್ಷೆ, ಪರೀಕ್ಷೆ, ಶಪಥ ಸ್ಥಳಗಳಲ್ಲಿ, ದನಗಳ ಕೊಟ್ಟಿಗೆ, ಗೋಸಂಚಾರ ಪ್ರದೇಶಗಳಲ್ಲಿ ದೇವಪೂಜೆಗೆ ಯೋಗ್ಯವಾದ ಹೂಗಳಲ್ಲಿ, ಮರಗಳಲ್ಲಿ, ದೇವಾಲಯ, ತೀರ್ಥಕ್ಷೇತ್ರ, ಸಜ್ಜನರ ಮನೆಗಳು, ವೇದ ವೇದಾಂಗ ಶ್ರವಣದ ಸ್ಥಾನಗಳು, ಶ್ರೀಕೃಷ್ಣನ ಗುಣನಾಮಸಂಕೀರ್ತನೆ ಇರುವ ಸ್ಥಳಗಳು ವ್ರತ ಪೂಜೆ ತಪಸ್ಸು ನಡೆವ ಸ್ಥಳಗಳು ನ್ಯಾಯಾಲಯ ಯಜ್ಞಶಾಲೆ ಸಾಕ್ಷಿ ನೀಡುವ ಸ್ಥಳಗಳು ಗೋವುಗಳು ಇಲ್ಲಿ ಎಲ್ಲ ಕಡೆ ನೀನು ಕ್ಷೀಣತೆ ಹೊಂದದೆ ಪೂರ್ಣವಾಗಿರುವಿ. ಬೇರೆ ಕಡೆಗಳಲ್ಲಿ ನಿನಗೆ ಕ್ಷೀಣತೆ ಉಂಟಾಗುತ್ತದೆ.

ವೇಶ್ಯೆಯರು, ನರಹಂತಕರು, ಮೂರ್ಖರು, ದುಷ್ಟರು, ದೇವಗುರು ಬ್ರಾಹ್ಮಣ ಬಂಧು ಮಿತ್ರರ ಧನವನ್ನು ಅಪಹರಿಸುವವರು, ಧೂರ್ತರು, ಕಳ್ಳರು, ಇರುವಲ್ಲಿ ನಿನಗೆ ಕ್ಷೀಣತೆ ಉಂಟಾಗುತ್ತದೆ. ವೇಶ್ಯಾವಾಟಿಕೆಗಳು, ಜೂಜು ಮದ್ಯಪಾನ ಕಲಹಗಳು ನಡೆವ ಸ್ಥಳಗಳು, ಸಾಲಗ್ರಾಮ ಸಜ್ಜನ ತೀರ್ಥ ಪುರಾಣಗಳಿಲ್ಲದ ಸ್ಥಳಗಳು ಇವುಗಳಲ್ಲಿ ನಿನಗೆ ಕ್ಷೀಣತೆ. ಕಳ್ಳರಿಗೆ ಸಹಾಯ ಮಾಡುವವರು, ಹಣಕ್ಕಾಗಿ ಅರ್ಚಕವೃತ್ತಿ ಪೌರೋಹಿತ್ಯ ಮಾಡುವವರು ಜೀವಹಿಂಸೆಯಿಂದ ಉಪಜೀವನ ಮಾಡುವವರು, ಪತಿಗಳನ್ನು ನಿಂದಿಸುವ ಸ್ತ್ರೀಯರು, ದೀಕ್ಷೆ ಸಂಧ್ಯೋಪಾಸನೆ ವಿಷ್ಣುಭಕ್ತಿ ಇಲ್ಲದ ಪುರುಷರು, ತಮ್ಮನ್ನೂ ತಮ್ಮ ಕನ್ಯೆಯರನ್ನೂ ತಮ್ಮ ಹೆಂಡಂದಿರನ್ನೂ ಮಾರಿ ಹಣ ಗಳಿಸುವವರು ಸಾಲಿಗ್ರಾಮ ದೇವಪ್ರತಿಮೆ ಗ್ರಂಥ ಭೂಮಿಗಳನ್ನು ಮಾರುವವರು ಮಿತ್ರದ್ರೋಹಿಗಳು ಕೃತಘ್ನರು ಸತ್ಯ ವಿಶ್ವಾಸಘಾತಿಗಳು, ಶರಣಾಗತರನ್ನು ಆಶ್ರಿತರನ್ನು ಪಾಲಿಸದಿರುವವರು, ಸದಾ ಸುಳ್ಳಾಡುವವರು, ಭೂಮಿ ಅಪಹಾರ ಮಾಡುವವರು, ಕಾಮ ಕ್ರೋಧ ಲೋಭಗಳಿಗೊಳಗಾಗಿ ಸುಳ್ಳುಸಾಕ್ಷಿ ನೀಡುವವರು, ಪುಣ್ಯಕರ್ಮ ಮಾಡದವರು ಪುಣ್ಯಕರ್ಮವನ್ನು ವಿರೋಧಿಸುವವರು, ಇವರಲ್ಲಿ ನೀನಿರಕೂಡದು. ಪ್ರಭು, ನನ್ನ ಮಾತು ಈ ರೀತಿಯಲ್ಲಿ ಸತ್ಯವಾಗುತ್ತದೆ. ಇನ್ನು ನಾನು ಪತಿಸೇವೆಗಾಗಿ ಮನೆಗೆ ಹೋಗುತ್ತೇನೆ. ಹೀಗೆ ಪದ್ಮೆಯಾಡಿದ ಮಾತನ್ನು ಕೇಳಿ ಧರ್ಮರಾಜ ಪ್ರಸನ್ನನಾಗಿ ನುಡಿದ.

**ಧರ್ಮ:-** ಪದ್ಮೆ, ನೀನು ಧನ್ಯೆ. ಪತಿಭಕ್ತಳಾಗಿರುವಿ. ನಿನಗೆ ಸದಾ ಒಳ್ಳೆಯದಾಗಲಿ. ನೀನು ನನ್ನನ್ನು ರಕ್ಷಿಸಿರುವಿ. ಅದರಿಂದ ನಿನಗೆ ನಾನು ವರ ನೀಡುತ್ತಿದ್ದೇನೆ. ನಿನ್ನ ಪತಿ ಯುವಕನಾಗಲಿ, ರತಿಶೂರನಾಗಲಿ. ರೂಪಶಾಲಿ ಗುಣಶಾಲಿ

ಸ್ಥಿರಯೌವನ ಉಳ್ಳವನಾಗಲಿ. ನೀನೂ ಪರಮೈಶ್ವರ್ಯ ಸ್ಥಿರಯೌವನವತಿಯಾಗು. ನಿನ್ನ ಪತಿ ಮಾರ್ಕಂಡೇಯನಿಂದ ದೀರ್ಘಾಯುಷ್ಯವನ್ನೂ ಕುಬೇರನಿಂದ ಧನವನ್ನೂ ಇಂದ್ರನಿಂದ ಐಶ್ವರ್ಯವನ್ನೂ ಪಡೆದು ಶಿವನಂತೆ ವಿಷ್ಣುಭಕ್ತನೂ ಆಗಲಿ. ಕಪಿಲನಿಂದ ಸಿದ್ಧಿಯನ್ನೂ ಪಡೆಯಲಿ. ನೀನು ಬದುಕಿರುವಷ್ಟೂ ಕಾಲ ಪತಿಸೌಭಾಗ್ಯವುಳ್ಳವಳಾಗಿ ಬದುಕು. ನಿನ್ನ ಮನೆ ಕುಬೇರನ ಭವನಕ್ಕಿಂತ ಮೇಲೆನಿಸಲಿ. ಗುಣವಂತರೂ ಚಿರಜೀವಿಗಳೂ ನಿನ್ನ ಪತಿಗಿಂತ ಶ್ರೇಷ್ಠರೂ ಆದ ಹತ್ತುಮಂದಿ ಮಕ್ಕಳ ತಾಯಾಗು.'

ಹೀಗೆ ಹೇಳಿದ ಧರ್ಮರಾಜನಿಗೆ ಪದ್ಮೆ ಪ್ರದಕ್ಷಿಣೆ ನಮಸ್ಕಾರಗಳನ್ನು ಅರ್ಪಿಸಿ ತನ್ನ ಮನೆಗೆ ಹೋದಳು. ಧರ್ಮರಾಜನೂ ಅವಳಿಗೆ ವರವಿತ್ತು ತನ್ನ ಲೋಕಕ್ಕೆ ಹಿಂತಿರುಗಿದ. ಪ್ರತಿ ಸಭೆಗಳಲ್ಲಿಯೂ ಪತಿವ್ರತೆಯನ್ನು ಹೊಗಳಿದ. ಪದ್ಮೆ ಯುವಕನಾದ ತನ್ನ ಪತಿಯೊಂದಿಗೆ ಏಕಾಂತದಲ್ಲಿ ಬಹುಕಾಲ ರಮಿಸಿದಳು. ಪತಿಗಿಂತ ಶ್ರೇಷ್ಠರಾದ ಸತ್ಪುತ್ರರಿಗೆ ಜನ್ಮವಿತ್ತಳು.

ಪರ್ವತರಾಜ, ಇದು ಹಿಂದಿನ ಇತಿಹಾಸ. ಅನರಣ್ಯನು ತನ್ನ ಮಗಳನ್ನು ಕೊಟ್ಟು ಎಲ್ಲ ಸಂಪತ್ತನ್ನೂ ಉಳಿಸಿಕೊಂಡ. ನೀನೂ ಹಾಗೆ ಮಗಳನ್ನು ಶಿವನಿಗೆ ಕೊಟ್ಟು ನಿನ್ನ ಎಲ್ಲ ಸಂಪತ್ತನ್ನೂ ಬಂಧುವರ್ಗವನ್ನೂ ಕಾಪಾಡಿಕೊಳ್ಳು. ಒಂದು ವಾರ ಕಳೆದ ಮೇಲೆ ಲಗ್ನಾಧಿಪನಾದ ಚಂದ್ರನು ಲಗ್ನದಲ್ಲಿ ಬುಧನೊಂದಿಗೆ ಇರುವಾಗ, ಮಾರ್ಗಶೀರ್ಷ ಸೋಮವಾರ ದಿನದಲ್ಲಿ, ಎಲ್ಲ ಶುಭಗ್ರಹರ ದೃಷ್ಟಿ ಇದ್ದು ಪಾಪಗ್ರಹರ ದೃಷ್ಟಿಯಿಂದ ರಹಿತವಾದ ಸತ್ಸಂತತಿಕಾರಕವಾದ ಪತಿಸೌಭಾಗ್ಯದಾಯಕವಾದ ಅವೈಧವ್ಯಪ್ರದವಾದ ಮುಹೂರ್ತದಲ್ಲಿ, ಅತ್ಯಂತ ಪ್ರೀತಿಯನ್ನು ಸತತವಾಗಿ ಹರಿಸುವ ಪರಾತ್ಪರನಾದ ಶಿವನಿಗೆ ಕನ್ಯಾದಾನ ಮಾಡಿ ಕೃತಾರ್ಥನಾಗು. ಜಗನ್ಮಾತೆಯನ್ನು ಜಗತ್‌ಪಿತನಿಗೆ ಕೊಡು. ಹಿಂದಿನ ಕಲ್ಪದಲ್ಲಿ ಅವಳು ದೇವತೆಗಳ ರಕ್ಷಣೆಗಾಗಿ ದೇವತೆಗಳ ತೇಜೋರಾಶಿಯಿಂದ ಹತ್ತು ದಿಕ್ಕುಗಳನ್ನು ಬೆಳಗುತ್ತ ಆವಿರ್ಭವಿಸಿದಳು. ಅವಳ ತೇಜಸ್ಸಿನಿಂದ ದೈತ್ಯರು ಕೆಲವರು ಸುಟ್ಟುಹೋದರು, ಪಲಾಯನ ಮಾಡಿದರು, ಪಾತಾಳವನ್ನು ಸೇರಿದರು, ಮೂರ್ಛಿತರಾದರು, ಹುಲ್ಲನ್ನು ಕಚ್ಚಿಕೊಂಡು ಶಿವನ ಮುಂದೆ ಶರಣಾಗತರಾದರು. ಕೆಲವರು ಸ್ತಂಭಿತರಾದರು, ಕೆಲವರು ಬಹುಕಾಲ ದೇವಿಯೊಡನೆ ಯುದ್ಧಮಾಡಿ ಸತ್ತು ಸ್ವರ್ಗಕ್ಕೆ ಹೋದರು. ಹೀಗೆ ದೇವತೆಗಳಿಗೆ ಯಾರೂ ಶತ್ರುಗಳಿಲ್ಲದಂತಾಯಿತು.

ಕೃಷ್ಣನಾಜ್ಞೆಯಂತೆ ದೇವಿ ಇನ್ನೊಂದು ಕಲ್ಪದಲ್ಲಿ ದಕ್ಷಕನ್ಯೆಯಾಗಿ ಅವತರಿಸಿದಳು. ದಕ್ಷ ವಿಧಿವತ್ತಾಗಿ ಮಗಳನ್ನು ಶಿವನಿಗೆ ಮದುವೆ ಮಾಡಿಕೊಟ್ಟ. ಆದರೆ ದೈವಾತ್ ಬ್ರಹ್ಮನ ಯಜ್ಞದಲ್ಲಿ ದೇವತೆಗಳ ಸಭೆಯ ನಡುವೆ ಅವನಿಗೂ ಶಿವನಿಗೂ ದೊಡ್ಡ ಕಲಹ ಪ್ರಾರಂಭವಾಯಿತು. ಬ್ರಹ್ಮನನ್ನು ನಮಸ್ಕರಿಸಿ ಶಿವ ಕೋಪದಿಂದ ಹೊರಟುಹೋದ. ದಕ್ಷನೂ ಕುಪಿತನಾಗಿ ತನ್ನ ಪರಿವಾರದೊಂದಿಗೆ ತನ್ನ ಮನೆಗೆ ನಡೆದ. ಅಳಿಯನ ಮೇಲಿನ ಕೋಪದಿಂದ ಅವನನ್ನು ಅವಮಾನಿಸುವುದಕ್ಕೆ ಒಂದು ಯಜ್ಞವನ್ನು ಪ್ರಾರಂಭಿಸಿದ. ಮತ್ಸರದಿಂದ ಶಿವನಿಗೆ ಹವಿರ್ಭಾಗ ನೀಡಲಿಲ್ಲ. ಸತಿ ತಂದೆಯನ್ನು ಕೋಪದ ಕೆಂಗಣ್ಣಿನಿಂದ ನೋಡಿ ನಿಂದಿಸಿ ದುಃಖ ತುಂಬಿದ

ಹೃದಯದಿಂದ ಎದ್ದು ತಾಯಿಯ ಬಳಿಗೆ ಹೋದಳು. ತ್ರಿಕಾಲಜ್ಞಳಾದ ಅವಳು ಮುಂದೆ ಆಗಲಿರುವ ಎಲ್ಲ ಭವಿಷ್ಯವನ್ನೂ ನುಡಿದಳು. ಇನ್ನು ಮುಂದೆ ಯಜ್ಞಭಂಗ ನಡೆಯುತ್ತದೆ. ತಂದೆಗೆ ಪರಾಭವ ಉಂಟಾಗುತ್ತದೆ. ದೇವತೆಗಳು, ಮುನಿಗಳು, ಋತ್ವಿಜರು ಮತ್ತು ಪರ್ವತಗಳೆಲ್ಲರೂ ಯಜ್ಞಶಾಲೆಯಿಂದ ಪಲಾಯನ ಮಾಡುವರು. ಶಿವನ ಸೈನ್ಯಕ್ಕೆ ಜಯ ಲಭಿಸುತ್ತದೆ. ತಾನು ಮರಣ ಹೊಂದುತ್ತಾಳೆ. ಪತಿಯಾದ ಶಿವ ಶೋಕದಿಂದ ಎಲ್ಲೆಡೆ ತಿರುಗುತ್ತಾನೆ. ನೇತ್ರಸರೋವರ ನಿರ್ಮಿಸುತ್ತಾನೆ. ಹರಿ ಸಂತೈಸುತ್ತಾನೆ. ತಾನು ಇನ್ನೊಂದು ಶರೀರದಿಂದ ಪಾರ್ವತಿಯಾಗಿ ಜನಿಸುತ್ತಾಳೆ. ಪುನಃ ಶಿವನನ್ನು ಹೊಂದಿ ವಿಹರಿಸುತ್ತಾಳೆ. ಇತ್ಯಾದಿ ಭವಿಷ್ಯಗಳನ್ನು ನುಡಿದ ಸತಿ ತನ್ನ ತಾಯಿಯೂ ಸೋದರಿಯರೂ ತಡೆದರೂ ಲಕ್ಷ್ಯ ಕೊಡದೆ ದುಃಖದಿಂದ ಯೋಗ ಬಲದಿಂದ ಅದೃಶ್ಯಳಾದಳು. ಸತಿ ಗಂಗಾತೀರದಲ್ಲಿ ಶಿವನನ್ನು ಸ್ಮರಿಸಿ ಅವನ ಪಾದ ಕಮಲವನ್ನು ಮನಸ್ಸಿನಲ್ಲಿ ಪೂಜಿಸಿ ಶರೀರವನ್ನು ತೊರೆದು ಗಂಧಮಾದನ ಪರ್ವತದ ತಪ್ಪಲಿನಲ್ಲಿದ್ದ ಹಿಂದೆ ಸರ್ವದೈತ್ಯ ಸಂಹಾರಮಾಡಿದ್ದ ತನ್ನ ಇನ್ನೊಂದು ಶರೀರವನ್ನು ಪ್ರವೇಶಿಸಿದಳು. ದೇವತೆಗಳೆಲ್ಲರೂ ಹಾಹಾಕಾರ ಮಾಡಿದರು. ಶಿವಸೇನೆಗಳು ದಕ್ಷ ಯಜ್ಞವನ್ನು ಧ್ವಂಸಮಾಡಿ ಎಲ್ಲರನ್ನೂ ಪರಾಭವ ಗೊಳಿಸಿ ಶೋಕಾತುರತೆಯಿಂದ ಬೇಗನೆ ಶಿವನ ಬಳಿ ಎಲ್ಲ ವೃತ್ತಾಂತವನ್ನೂ ತಿಳಿಸಿದುವು. ಶಿವ ಅದನ್ನು ಕೇಳಿ ಶೋಕದಿಂದ ಮೂರ್ಛಿತನಾದ. ಕ್ಷಣದಲ್ಲಿ ಎದ್ದು ಗಂಗಾ ತೀರದಲ್ಲಿ ದೇವಿಯ ಶರೀರವಿದ್ದಲ್ಲಿಗೆ ನಡೆದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರದನಾರಾಯಣಸಂವಾದದಲ್ಲಿ ಸತೀದೇಹತ್ಯಾಗವೆಂಬ ನಲವತ್ತೆರಡನೆ ಅಧ್ಯಾಯ ಮುಗಿಯಿತು.*

—o—

**ನಾರಾಯಣ:-** ಮಹಾದೇವ ಗಂಗಾತೀರದಲ್ಲಿ ಬಿದ್ದಿದ್ದ ಸತಿಯ ಮನೋಹರವಾದ ಶರೀರವನ್ನು ಕಂಡ. ಅವಳ ಮುಖಕಮಲವಿನ್ನೂ ಬಾಡಿರಲಿಲ್ಲ. ಪುಟಕ್ಕಿಟ್ಟ ಚಿನ್ನದಂತೆ ಮೈಯ ಕಾಂತಿ ಹೊಳೆಯುತ್ತಿತ್ತು. ಬಿಳಿ ಬಟ್ಟೆ ಉಟ್ಟು ತೇಜಸ್ಸಿನಿಂದ ಪ್ರಜ್ವಲಿಸುತ್ತಿದ್ದಳು. ಅಕ್ಷಮಾಲೆ ಕೈಯಲ್ಲಿ ಇತ್ತು. ಅಂಥ ಶರೀರವನ್ನು ನೋಡಿ ಶಿವ ವಿರಹಾಗ್ನಿಯಿಂದ ಬೆಂದು ಮೂರ್ಛಿತನಾದ. ಪತ್ನೀವಿಯೋಗವೆಂಬುದು ಮಹಾದುಃಖಕರ. ಸ್ವಾತ್ಮಾರಾಮ ಪರಾತ್ಪರ ವೇದಬೀಜ ಯೋಗೀಂದ್ರರ ಗುರುಗಳಿಗೆ ಗುರುವಾದ ಶಿವನನ್ನೂ ಪೀಡಿಸಿತು. ಬಳಿಕ ಕ್ಷಣದಲ್ಲಿ ಎಚ್ಚರಗೊಂಡು ಸತಿಯ ಮುಖ ಕಮಲವನ್ನು ದಿಟ್ಟಿಸುತ್ತ ಕಣ್ಣೀರು ಸುರಿಸುತ್ತ ದೀನನಾಗಿ ನುಡಿದ, ದೀನರ ದೈನ್ಯವನ್ನು ಕಳೆವ ದೀನರಕ್ಷಕನಾದ ಶಿವ.

**ಶಂಕರ:-** ಸತಿ, ಪ್ರಾಣೇಶ್ವರಿ, ಪ್ರಿಯೆ, ಮಂಗಳೆ ಎದ್ದೇಳು. ನಾನು ಶಂಕರ, ಬಂದಿದ್ದೇನೆ. ನಿನ್ನ ಪತಿ ನಿನ್ನ ಸಮೀಪಕ್ಕೆ ಬಂದಿದ್ದೇನೆ. ನೋಡು ನನ್ನನ್ನು. ನಾನು ಮಂಗಳಪ್ರದ, ಸರ್ವಸಂಪದ್ರೂಪ, ಸಿದ್ಧಿದಾಯಕ, ಸರ್ವಾತ್ಮ, ಸರ್ವೇಶ್ವರ, ಶಿವ, ಆದರೆ ನೀನಿಲ್ಲದೆ ನಾನು ಶವತುಲ್ಯನಾಗಿದ್ದೇನೆ. ಸರ್ವಶಕ್ತಿ ಸ್ವರೂಪಳಾದ ನೀನು ಜೊತೆಗಿದ್ದರೆ ಮಾತ್ರ ನಾನು ಶಕ್ತ. ನೀನಿಲ್ಲದಿದ್ದರೆ ಶಕ್ತಿಹೀನ. ಯಾವ ಕೆಲಸದಲ್ಲಿಯೂ ನಿಶ್ಚೇಷ್ಟನಾಗಿ ಶವ ಸಮಾನನಾಗುತ್ತೇನೆ. ಯಾರು ಶಕ್ತಿಯನ್ನು ತಿಳಿಯದೆ ಜ್ಞಾನಹೀನನಾಗಿ ನಿಂದಿಸುವನೋ ಅವನನ್ನು ಪರಿತ್ಯಜಿಸುವುದು ಉಚಿತ. ನನ್ನನ್ನು ನೀನು ಹೇಗೆ ಪರಿತ್ಯಜಿಸುವಿ? ನಾನು ಬ್ರಹ್ಮ ವಿಷ್ಣು ಇವರೆಲ್ಲರೂ ನಿನ್ನ ದಾಸರು. ಒಮ್ಮೆ ನಕ್ಕು ಕಟಾಕ್ಷದಿಂದ ನೋಡಿ ಮಾತನಾಡು. ಮಧುರ ನುಡಿಯಿಂದ ಮಧುರವಾದ ನೋಟದಿಂದ ನನ್ನ ಈ ಬೆಂದ ಶರೀರಕ್ಕೆ ಅಮೃತ ಸೇಚನೆ ಮಾಡು. ದೂರದಿಂದ ನನ್ನನ್ನು ಕಂಡರೂ ಪ್ರೀತಿಯಿಂದ ನಗುತ್ತ ಮಾತನಾಡುವವಳು ಈಗ ನಾನು ವಿಲಾಪಗೈಯುತ್ತಿದ್ದರೂ ಅದೇಕೆ ಕುಪಿತಳಾದವಳಂತೆ ಮೌನವಾಗಿರುವೆ? ಪ್ರಾಣಕ್ಕಿಂತ ಹೆಚ್ಚಿನವಳೆ, ಏಳು. ಅಳುತ್ತಿರುವ ನನ್ನನ್ನು ನೋಡಲಾರೆಯ? ನನ್ನ ಪ್ರಾಣಗಳನ್ನು ಸೆಳೆದು ಹೋಗಬೇಡ, ಸುಂದರಿ, ಜಗದಂಬೆ, ಪರಾತ್ಪರೆ, ಪ್ರಾಣಾಧಾರೆ, ಎದ್ದೇಳು. ಪತಿವ್ರತೆಯೆ ಎದ್ದೇಳು. ಈಗ ಏಕೆ ನನ್ನ ಸೇವೆ ಮಾಡಲೊಲ್ಲೆ? ವ್ರತಭಂಗವನ್ನು ಹೇಗೆ ಮಾಡುವಿ?'

ಹೀಗೆ ಹೇಳಿ ಶಿವ ವಿರಹಾತುರನಾಗಿ ಪ್ರಿಯೆಯ ಶರೀರವನ್ನು ಎದೆಗೆ ಒತ್ತಿಕೊಂಡು ಚುಂಬಿಸಿದ. ತುಟಿಗೆ ತುಟಿ ಎದೆಗೆ ಎದೆ ತಾಕಿಸಿ ಪುನಃ ಪುನಃ ಅಪ್ಪಿ ಮುದ್ದಿಸಿ ಪುನಃ ಮೂರ್ಛೆ ಹೊಂದಿದ; ಪುನಃ ಎಚ್ಚೆತ್ತು ಶೋಕದಿಂದ ವೇಗವಾಗಿ ಎದ್ದು ಸತಿಯನ್ನೆತ್ತಿಕೊಂಡು ಎದೆಗೆ ಒತ್ತಿ ಉನ್ಮತ್ತನಾಗಿ ಓಡಿದ, ಜ್ಞಾನಿಗಳ ಗುರುಗಳಿಗೆ ಗುರುವಾದ ಶಿವ. ಸಪ್ತದ್ವೀಪ ಸಪ್ತಸಾಗರ ಲೋಕಾಲೋಕಪರ್ವತಗಳಲ್ಲಿ ತಿರುಗಿದ. ಶತಶೃಂಗಗಿರಿಯ ಪಾರ್ಶ್ವದಲ್ಲಿ ಜಂಬುದ್ವೀಪದಲ್ಲಿ ಭಾರತದಲ್ಲಿ ಅಕ್ಷಯವಟದಲ್ಲಿ

ಗಂಗಾತೀರದಲ್ಲಿ ಎಲ್ಲೆಡೆ ಗಟ್ಟಿಯಾಗಿ ಅಳುತ್ತ 'ಪತಿವ್ರತೆ!' ಎನ್ನುತ್ತ ಕಣ್ಣೀರು ಸುರಿಸಿದ. ಆ ಕಣ್ಣೀರಿಂದಲೆ ಒಂದು ಸರೋವರ ನಿರ್ಮಾಣವಾಯಿತು. ಅದಕ್ಕೆ ನೇತ್ರ ಸರೋವರವೆಂದೇ ಹೆಸರು. ಎರಡು ಯೋಜನ ವಿಸ್ತಾರವಾದ ಪುಣ್ಯತೀರ್ಥ. ಮುನಿಗಳಿಗೆ ಮನೋಹರವಾದ ತಪಸ್ಸಿನ ಸ್ಥಳ. ಅಲ್ಲಿ ಸ್ನಾನ ಮಾಡುವ ಮಾನವರಿಗೆ ಪುನರ್ಜನ್ಮವಿಲ್ಲ. ನೂರು ಜನ್ಮಗಳ ಪಾಪ ಒಮ್ಮೆ ಸ್ನಾನ ಮಾಡಿದರೆ ಪರಿಹಾರವಾಗುತ್ತದೆ. ಮನುಷ್ಯಶರೀರವನ್ನು ತೊರೆದು ಅವರು ಹರಿಪದವನ್ನು ಸೇರುತ್ತಾರೆ.

ಪುನಃ ಶಿವನು ವಿರಹಾತುರನಾಗಿ ಪೂರ್ಣವಾಗಿ ಒಂದು ವರ್ಷಕಾಲ ಭೂಮಂಡಲದಲ್ಲಿ ಸುತ್ತಿದ. ಸತೀದೇಹದ ಅನೇಕ ಅಂಗಗಳು ಅಲ್ಲಲ್ಲಿ ಬಿದ್ದು ಆಸ್ಥಳಗಳು ಅಭೀಷ್ಟದಾಯಕ ಸಿದ್ಧಪೀಠವಾದುವು. ಉಳಿದ ಅಂಗಗಳಿಗೆ ಶಿವ ಸಂಸ್ಕಾರಮಾಡಿದ. ಅಸ್ಥಿ ಮಾಲೆಯನ್ನು ಕಂಠಾಭರಣವನ್ನಾಗಿ ಮಾಡಿಕೊಂಡ. ಭಸ್ಮವನ್ನು ಭಕ್ತಿಯಿಂದ ನಿತ್ಯವೂ ಮೈಗೆ ಬಳಿದುಕೊಂಡ. 'ಸತಿ, ಪ್ರಾಣೇಶ್ವರಿ!' ಎನ್ನುತ್ತ ಮೂರ್ಛಿತನಾದ. ಪರಮಾತ್ಮನನ್ನೂ ಮರೆತ. ಸ್ವಾತ್ಮಾರಾಮ ಪೂರ್ಣಕಾಮನಾದ ಶಿವ ವಿರಹಜ್ವರದಿಂದ ನಿಶ್ಚೇಷ್ಟನಾಗಿ ಪರ್ವತದ ಬಳಿಯ ವಟಮೂಲದಲ್ಲಿ ಬಿದ್ದಿದ್ದುದನ್ನು ಕಂಡು ದೇವತೆಗಳು ಆಶ್ಚರ್ಯದಿಂದ ಬಳಿಗೆ ಬಂದರು. ನಾರಾಯಣ ರತ್ನ ವಿಮಾನದಿಂದ ಬಂದಿಳಿದ. ಪೀತಾಂಬರಧಾರಿ ಚತುರ್ಭುಜ ವನಮಾಲಾ ಭೂಷಿತ ರತ್ನಾಭರಣಾಲಂಕೃತ ಲಕ್ಷ್ಮೀಕರಾರ್ಚಿತ ಪಾದಕಮಲನಾದ ನಾರಾಯಣ ತನ್ನ ಪಾರ್ಷದರಿಂದೊಡಗೂಡಿ ಅಲ್ಲಿಗೆ ಬಂದಿದ್ದ. ಬ್ರಹ್ಮ ಶೇಷ ಧರ್ಮ ಉಳಿದ ಎಲ್ಲ ದೇವತೆಗಳು ಮುನಿಗಳು ಎಲ್ಲರೂ ಲಕ್ಷ್ಮೀಕಾಂತನನ್ನು ನಮಿಸಿ ಸಭೆಯಲ್ಲಿ ನೆರೆದರು. ಮೂರ್ಛಿತನಾಗಿದ ಶಿವನನ್ನು ಹರಿ ಎದೆಗೆ ಅಪ್ಪಿಕೊಂಡು ಸಂತೈಸಿದ.

**ಶ್ರೀಹರಿ:-** ಸ್ವಾತ್ಮಾರಾಮನಾದ ಶಿವನೆ, ನನ್ನ ಮಾತನ್ನು ಕೇಳು. ಇದು ಹಿತಕಾರಿ. ಅಧ್ಯಾತ್ಮಗರ್ಭಿತ. ದುಃಖಶೋಕನಿವಾರಕ. ನೀನು ಅಧ್ಯಾತ್ಮವಿದ್ಯಾಬೀಜನಾಗಿರುವಿ. ಜ್ಞಾನ ನಿಧಿಯಾಗಿರುವಿ. ಸರ್ವಜ್ಞನಾಗಿರುವಿ. ಆದರೂ ನಿನಗೆ ಬೋಧಿಸುತ್ತೇನೆ. ಏಕೆಂದರೆ ಪ್ರಾಣಸಂಕಟ ಸಮಯದಲ್ಲಿ ಕೆಲವೊಮ್ಮೆ ಅಜ್ಞರೂ ಸುಜ್ಞರಿಗೆ ಬುದ್ಧಿ ಹೇಳಬೇಕಾಗಬಹುದು. ಇದು ಲೋಕವ್ಯವಹಾರದಲ್ಲಿ ಕಂಡಿದೆ. ಸುಖದುಃಖಗಳಿಗೆ ಕಾರಣ ಮಾಯಾಶ್ರಿತವಾದ ತ್ರಿಗುಣಗಳು. ಆ ವಿಷ್ಣುಮಾಯೆ ಬಲವತ್ತರವಾಗಿದ್ದು ಗುಣಬದ್ಧರನ್ನು ಬಾಧಿಸುತ್ತದೆ. ದುಃಖ ಶೋಕ ಭಯವೆಲ್ಲವೂ ದುರ್ದಿನದಲ್ಲಿ ಬರುತ್ತವೆ. ದುರ್ದಿನ ಕಳೆದು ಸುದಿನ ಬಂದಾಗ ಅವು ಎಲ್ಲಿ? ಹರ್ಷ ಐಶ್ವರ್ಯ ದರ್ಪಗಳೇ ಸದಾ ಆಗ ಇರುತ್ತದೆ. ಇವೆಲ್ಲವೂ ಸ್ವಪ್ನದಂತೆ ಅಸ್ಥಿರ. ಆದರಿಂದ ಜ್ಞಾನವನ್ನು ತಂದುಕೊಳ್ಳು. ಎಚ್ಚೆತ್ತುಕೊಳ್ಳು. ನಿನಗೆ ಒಳ್ಳೆಯದಾಗುತ್ತದೆ. ನೀನು ಸತಿಯನ್ನು ಪಡೆಯುವೆ, ಇದು ನಿಶ್ಚಿತ. ನೀರು ಸದಾ ತಂಪಾಗಿರುವಂತೆ, ಅಗ್ನಿ ಸದಾ ದಾಹಕವಾಗಿರುವಂತೆ, ಸೂರ್ಯ ಸದಾ ತೇಜಸ್ವಿಯಾಗಿರುವಂತೆ, ಪೃಥಿವಿ ಸದಾ ಗಂಧವತಿಯಾಗಿರುವಂತೆ ನೀನು ಸದಾ ದೇವಿಯಿಂದ ಯುಕ್ತನೆ ಇರುವೆ.'

ಈ ಮಾತನ್ನು ಕೇಳಿ ಶಿವ ಸ್ವಲ್ಪ ಕಣ್ಣು ತೆರೆದು ಹೇಳತೊಡಗಿದ.

**ಶಿವ:-** ಯಾರು ನೀನು? ನಿನ್ನ ಬಳಿ ಇವರು ಯಾರು? ನಿನ್ನ ಹೆಸರೇನು? ಇವರ ಹೆಸರುಗಳೇನು? ನಾನು ಯಾರು? ನನಗೆ ನೀನು ಯಾರು? ಈ ಸೇವಕರೆಲ್ಲ ಏಕೆ ಬಂದರು? ನೀನೆಲ್ಲಿಗೆ ಹೋಗುತ್ತಿರುವೆ? ನಾನೆಲ್ಲಿಗೆ ಹೋಗಲಿ? ಇವರೆಲ್ಲ ಎಲ್ಲಿಗೆ ಹೊರಟಿದ್ದಾರೆ?

ಈ ಮಾತುಗಳನ್ನು ಕೇಳಿ ಹರಿಯೂ ಅವನ ಪರಿವಾರದವರೂ ಕಣ್ಣೀರು ಸುರಿಸಿದರು. ಕಣ್ಣೀರಿಂದ ಶಿವನನ್ನು ತೋಯಿಸಿದರು. ಹರಿಹರರ ಕಣ್ಣೀರು ಸೇರಿ ಅಲ್ಲಿ ಒಂದು ದೊಡ್ಡ ಸರೋವರವೆ ನಿರ್ಮಾಣವಾಯಿತು. ಅದು ಲೋಕಪಾವನ ತೀರ್ಥವೆನಿಸಿತು. ಭಾರತದಲ್ಲಿ ಅಸ್ತಾಚಲದ ಆಚೆ ಅಕ್ಷಯವಟದ ಬಳಿ ಆ ಸ್ಥಳ ತಪಸ್ಸಿನ ಕ್ಷೇತ್ರ, ಮುಕ್ತಿಬೀಜವೆನಿಸಿತು. ಬಳಿಕ ಹರಿ ಊರ್ಧ್ವರೇತಸ್ಕರಾದ ಮುನಿಗಳಿಗೂ ದೇವತೆಗಳಿಗೂ ಕೇಳಿಸುವಂತೆ ಪುನಃ ಹರನಿಗೆ ಉಪದೇಶಿಸಿದ.

**ಶ್ರೀಹರಿ:-** ಶಂಕರ, ಜ್ಞಾನಾನಂದ, ಸನಾತನ, ಜ್ಞಾನನಿಧಿಯೆ, ಶೋಕದಿಂದ ಜ್ಞಾನವನ್ನು ಮರೆತಿತ್ತಿದ್ದಿ. ಸಂಸಾರದಲ್ಲಿ ಹೀಗೆ ಸುದಿನ ದುರ್ದಿನಗಳು ಒಂದೇ ಬರುತ್ತವೆ. ಅವು ಸುಖ ದುಃಖಗಳಿಗೆ ಕಾರಣಗಳು. ಸುಖದಿಂದ ಹರ್ಷ ದರ್ಪ ಕಾರ್ಯ ಪ್ರಮಾದ ರಾಗ ಐಶ್ವರ್ಯಕಾಮನೆ ದ್ವೇಷ ಎಲ್ಲವೂ ನಿರಂತರ ಬರುತ್ತವೆ. ದುಃಖದಿಂದ ಶೋಕದಿಂದ ಉದ್ವೇಗ ಭಯಗಳು ನಿತ್ಯ ಬರುತ್ತವೆ. ಅವುಗಳ ಬೀಜವನ್ನು ನಾಶ ಮಾಡಿದರೆ ಅವುಗಳು ನಾಶ ಹೊಂದುತ್ತವೆ. ಸುದಿನ ದುರ್ದಿನಗಳು ಎಲ್ಲವೂ ಕರ್ಮದಿಂದ ಬರುತ್ತವೆ. ಆ ಕರ್ಮ ತಪಸ್ಸಿನಿಂದ ಉಂಟಾಗುತ್ತದೆ. ತಪಸ್ಸು ಸ್ವಭಾವದಿಂದ ಸ್ವಭಾವ ಅಭ್ಯಾಸದಿಂದ ಅಭ್ಯಾಸ ಸಂಸರ್ಗದಿಂದ, ಸಂಸರ್ಗ ಪುಣ್ಯದಿಂದ. ಪುಣ್ಯಕ್ಕೂ ಬೀಜ ಚಂಚಲವಾದ ಮನಸ್ಸು. ಮನಸ್ಸು ಸರ್ವೇಂದ್ರಿಯಗಳಲ್ಲಿ ಮೊದಲನೆಯದು; ನನ್ನ ಅಂಶ. ಎಲ್ಲಕ್ಕೂ ಜನಕ ನಾನು. ಬ್ರಹ್ಮ ಒಂದೇ ಬೇರೆಬೇರೆ ಗುಣದಿಂದ ಬೇರೆಬೇರೆಯಾಗುತ್ತದೆ. ಅದು ಸಗುಣವೂ ಹೌದು ನಿರ್ಗುಣವೂ ಹೌದು. ಮಾಯಾಶ್ರಿತನೆ ಸಗುಣ. ಮಾಯಾತೀತ ನಿರ್ಗುಣ. ಸ್ವೇಚ್ಛಾಮಯನಾದ್ದರಿಂದ ಆಪರಮಾತ್ಮ ತಾನೆ ಸ್ವೇಚ್ಛೆಯಿಂದ ನಾನಾ ರೂಪ ತಾಳುತ್ತಾನೆ. ಅವನ ಇಚ್ಛಾಶಕ್ತಿಯೆ ಪ್ರಕೃತಿ. ಅದು ನಿತ್ಯ. ಸರ್ವಸೃಷ್ಟಿಗೆ ಮೂಲ. ಕೆಲವರು ಸನಾತನ ಬ್ರಹ್ಮಜ್ಯೋತಿ ಒಂದೇ ಎನ್ನುವರು. ಕೆಲವರು ಬ್ರಹ್ಮ ದ್ವಿವಿಧವೆನ್ನುವರು. ಪ್ರಕೃತಿ ಪುರುಷರಿಬ್ಬರೂ ಬ್ರಹ್ಮ ಎಂದು. ಒಂದು ಎನ್ನುವವರು ಆ ಒಂದು ಬ್ರಹ್ಮ ಪ್ರಕೃತಿ ಪುರುಷರಿಗಿಂತ ಬೇರೆಯೆ, ಅವರಿಂದಾಚೆ ಇರುತ್ತದೆ ಎನ್ನುತ್ತಾರೆ. ಆಬ್ರಹ್ಮನಿಂದ ಈ ಪ್ರಕೃತಿ ಪುರುಷರ ಉತ್ಪತ್ತಿ.

ಒಂದು ಬ್ರಹ್ಮ ಸ್ವೇಚ್ಛೆಯಿಂದ ಪ್ರಕೃತಿಪುರುಷರೂಪಗಳಿಂದ ಎರಡಾಗುತ್ತದೆ. ಆಪ್ರಕೃತಿ ಇಚ್ಛಾಶಕ್ತಿರೂಪವಾಗಿದೆ. ಸರ್ವಶಕ್ತಿಗೆ ಜನನಿಯಾಗಿದೆ ಅದರಲ್ಲಿ ಆಸಕ್ತನಾದವನು ಸಗುಣ, ಸಾಶರೀರ, ಪ್ರಾಕೃತನೆನಿಸುತ್ತಾನೆ. ಅನಾಸಕ್ತನಾದವನು ಅಶರೀರಿ, ನಿರಂಕುಶ, ಸರ್ವಾತ್ಮ, ಸರ್ವಾಧಾರ, ಸನಾತನ, ನಿತ್ಯ ಸರ್ವೇಶ್ವರ ಸರ್ವಸಾಕ್ಷಿಯಾದ ಭಗವಂತ. ಅವನು ಫಲದಾಯಕನಾಗಿ ಎಲ್ಲೆಡೆ ಇದ್ದಾನೆ. ಶರೀರ ದ್ವಿವಿಧ-ನಿತ್ಯ ಮತ್ತು ಪ್ರಾಕೃತ ಎಂದು. ನಿತ್ಯ ನಾಶರಹಿತವಾಗಿದೆ. ಪ್ರಾಕೃತ ನಶ್ವರವಾಗಿದೆ.

ನಾನೂ ನೀನೂ ಭಗವಂತರು. ನಮಗೆ ಅನಿತ್ಯಶರೀರವಿಲ್ಲ. ನಮ್ಮ ಅಂಶಭೂತರಿಗೆ ಪ್ರಾಕೃತ ಶರೀರವಿದೆ. ಆದರೆ ಅವು ನಷ್ಟವಾಗಿರುತ್ತವೆ. ನನ್ನ ಅಂಶಭೂತರು ವಿಷ್ಣುರೂಪರು. ನಿನ್ನ ಅಂಶಭೂತರು ರುದ್ರಾದಿಗಳು. ನನಗೆ ಎರಡು ರೂಪಗಳು. ಚತುರ್ಭುಜನಾಗಿ ಲಕ್ಷ್ಮೀ ಸಮೇತನಾಗಿ ಪರಿವಾರದೊಂದಿಗೆ ವೈಕುಂಠದಲ್ಲಿರುವ ರೂಪ ಒಂದು. ದ್ವಿಭುಜನಾಗಿ ರಾಧೆ ಮತ್ತು ಗೋಪಿಯರೊಡನೆ ಗೋಲೋಕದಲ್ಲಿರುವ ರೂಪವಿನ್ನೊಂದು. ಹೀಗೆ ಎರಡು ರೂಪಗಳನ್ನು ಹೇಳುವವರ ಮತದಲ್ಲಿ ಎರಡೂ ಪ್ರಧಾನಗಳೇ. ಪುರುಷ ಸದಾ ನಿತ್ಯ. ಪ್ರಕೃತಿಯೂ ನಿತ್ಯ. ಅವರಿಬ್ಬರೂ ಸದಾ ಒಂದಾಗಿರುತ್ತಾರೆ. ಎಲ್ಲರಿಗೂ ಜನಕರು. ಸ್ವೇಚ್ಛೆಯಿಂದ ಸಶರೀರರೂ ಅಶರೀರರೂ ಆಗುತ್ತಾರೆ. ಪುರುಷನಿಗೆ ಹೇಗೆ ಪ್ರಾಧಾನ್ಯವೋ ಹಾಗೇ ಪ್ರಕೃತಿಗೂ ಪ್ರಾಧಾನ್ಯವಿದೆ. ಸತಿಯನ್ನು ಬಯಸುವಿಯಾದರೆ ಪ್ರಕೃತಿಯನ್ನು ಸ್ತುತಿಸು. ನೀನು ಹಿಂದೆ ದುರ್ವಾಸನಿಗೆ ಉಪದೇಶಿಸಿದ ದಿವ್ಯವಾದ ಕಣ್ವಶಾಖೋಕ್ತವಾದ ಸ್ತೋತ್ರದಿಂದಲೇ ಜಗಜ್ಜನನಿಯನ್ನು ಕೊಂಡಾಡು. ನನ್ನಾಶೀರ್ವಾದದಿಂದ ನಿನಗೆ ಶುಭವಾಗಲಿ, ಶೋಕಪರಿಹಾರವಾಗಲಿ. ಅನರ್ಥಕಾರಣವಾದ ಸ್ತ್ರೀವಿರಹಸಂತಾಪ ದೂರವಾಗಲಿ.

ಹೀಗೆ ಹೇಳಿ ಲಕ್ಷ್ಮೀರಮಣ ಸುಮ್ಮನಾದ. ಶಿವ ಪ್ರಕೃತಿಯನ್ನು ಸ್ತುತಿಸಲು ತೊಡಗಿದ. ಸ್ನಾನ ಮಾಡಿ ಶ್ರೀಕೃಷ್ಣನನ್ನೂ ಬ್ರಹ್ಮನನ್ನೂ ಭಕ್ತಿಯಿಂದ ನಮಿಸಿ ಕೈಮುಗಿದು ಮೈ ರೋಮಾಂಚಗೊಂಡು ಪ್ರಕೃತಿಯನ್ನು ಸ್ತುತಿಸಿದ.

**ಮಹೇಶ್ವರ:-** 'ಓಂ ನಮಃ ಪ್ರಕೃತ್ಯೈ' ಬ್ರಾಹ್ಮಿ, ಬ್ರಹ್ಮಸ್ವರೂಪೆ, ಸನಾತನಿ, ಪ್ರಸನ್ನಳಾಗು. ಪರಮಾತ್ಮಸ್ವರೂಪೆ, ಪರಮಾನಂದ ರೂಪಿಣಿ, ಭದ್ರೆ, ಭದ್ರಪ್ರದೆ, ದುರ್ಗೆ, ದುರ್ಗಘ್ನೆ, ದುರ್ಗನಾಶಿನಿ, ಭವಾರ್ಣವದಲ್ಲಿ ನೌಕೆಯಂತಿರುವವಳೆ, ನನ್ನನ್ನು ಅನುಗ್ರಹಿಸು. ಸರ್ವಸ್ವರೂಪೆ, ಸರ್ವೇಶಿ ಸರ್ವಬೀಜಸ್ವರೂಪಿಣಿ, ಸರ್ವಾಧಾರೆ, ಸರ್ವವಿದ್ಯೆ, ಜಯಪ್ರದೆ ನನ್ನನ್ನು ಅನುಗ್ರಹಿಸು. ಸರ್ವಮಂಗಲರೂಪೆ, ಸರ್ವಮಂಗಲದಾಯಿನಿ. ಸಮಸ್ತ ಮಂಗಲಾಧಾರೆ, ಸರ್ವಮಂಗಳೆ ಪ್ರಸನ್ನಳಾಗು. ನಿದ್ರೇ, ತಂದ್ರೇ, ಕ್ಷಮೇ, ಶ್ರದ್ಧೇ, ತುಷ್ಟಿ ಪುಷ್ಟಿ ಸ್ವರೂಪಿಣಿ, ಲಜ್ಜೆ, ಮೇಧೆ, ಬುದ್ಧಿರೂಪೆ, ಭಕ್ತವತ್ಸಲೆ, ವೇದಸ್ವರೂಪೆ, ವೇದಕಾರಣಿ, ವೇದದಾಯಿನಿ, ಸರ್ವವೇದಾಂಗರೂಪೆ, ವೇದಮಾತೆ, ಪ್ರಸನ್ನಳಾಗು. ದಯೆ, ಜಯೆ, ಮಹಾಮಾಯೆ, ಜಗದಂಬೆ, ಕ್ಷಾಂತೆ, ಶಾಂತೆ, ಸರ್ವಾಂತೆ, ಕ್ಷುತ್‌ಪಿಪಾಸಾ ಸ್ವರೂಪಿಣಿ, ಪ್ರಸನ್ನಳಾಗು. ಲಕ್ಷ್ಮೀನಾರಾಯಣನ ತೊಡೆಯಲ್ಲಿ ಬ್ರಹ್ಮನೆದೆಯಲ್ಲಿ ನನ್ನ ತೊಡೆಯಲ್ಲಿ ಕುಳಿರುವ ವಿಷ್ಣುಮಾಯೆ, ಭಾರತಿ, ಮಹಾಮಾಯೆ, ಪ್ರಸನ್ನಳಾಗು. ಕಲಾಕಾಷ್ಠಾ ಸ್ವರೂಪೆ, ದಿವಾರಾತ್ರಿಸ್ವರೂಪಿಣಿ, ಪರಿಣಾಮಪ್ರದೆ, ದೀನವತ್ಸಲೆ, ದೇವಿ, ಪ್ರಸನ್ನಳಾಗು. ಸರ್ವಶಕ್ತಿಕಾರಣೆ, ಕೃಷ್ಣನ ಪ್ರಾಣಾಧಿಕೆ, ಕೃಷ್ಣ ಪೂಜಿತೆ, ಕೃಷ್ಣವಕ್ಷಃಸ್ಥಳದಲ್ಲಿರುವ ರಾಧೆ, ಪ್ರಸನ್ನಳಾಗು. ಯಶಃ ಸ್ವರೂಪೆ, ಯಶಸ್ಕಾರಣೆ, ಯಶಃಪ್ರದೆ, ಸರ್ವದೇವೀ ಸ್ವರೂಪೆ, ನಾರೀರೂಪ ವಿಧಾಯಿನಿ, ಸಮಸ್ತಕಾಮಿನೀರೂಪೆ ಪ್ರಸನ್ನಳಾಗು, ಸರ್ವಸಂಪತ್ ಸ್ವರೂಪೆ, ಸರ್ವಸಂಪತ್ಪ್ರದೆ, ಸರ್ವ ಸಂಪತ್ಕಾರಣೆ, ಪರಮಾನಂದೆ, ಪ್ರಸನ್ನಳಾಗು. ಸರ್ವಜಗದಾಧಾರೆ, ರತ್ನಾಧಾರೆ, ವಸುಂಧರೆ, ಚರಾಚರಸ್ವರೂಪೆ ಪ್ರಸನ್ನಳಾಗು.

ಯೋಗಸ್ವರೂಪೆ, ಯೋಗೀಶೆ, ಯೋಗದೆ, ಯೋಗಕಾರಣೆ, ಯೋಗಾಧಿಷ್ಠಾತ್ರಿ ದೇವೇಶಿ, ಸಿದ್ಧಿಯೋಗಿನಿ ಪ್ರಸನ್ನಳಾಗು. ಸರ್ವಸಿದ್ಧಿಸ್ವರೂಪೆ, ಸರ್ವಸಿದ್ಧಿಪ್ರದಾಯಿನಿ, ಸರ್ವಸಿದ್ಧಿಕಾರಣೆ, ಸಿದ್ಧೇಶ್ವರಿ, ಪ್ರಸನ್ನಳಾಗು. ಸರ್ವಶಾಸ್ತ್ರವ್ಯಾಖ್ಯಾನವೂ ಮತಭೇದದಿಂದ ಇದೆ. ಅದರಿಂದ ಪರಮೇಶ್ವರಿ, ನಾನು ಹೇಳಿದುದನ್ನೆಲ್ಲ ಕ್ಷಮಿಸು. ಕೆಲವರು ಪ್ರಕೃತಿಗೆ ಪ್ರಾಧಾನ್ಯವನ್ನು ಹೇಳುತ್ತಾರೆ. ಕೆಲವರು ಪುರುಷನಿಗೆ ಪ್ರಾಧಾನ್ಯವನ್ನು ಹೇಳುತ್ತಾರೆ. ಕೆಲವರು ಈ ಮತ ಭೇದಕ್ಕೆ ವ್ಯಾಖ್ಯಾನಭೇದ ಕಾರಣವೆನ್ನುತ್ತಾರೆ.

ಮಹಾವಿಷ್ಣುವಿನ ನಾಭಿಯಲ್ಲಿ ಕಮಲದಿಂದ ಉದ್ಭವಿಸಿದ ಬ್ರಹ್ಮನನ್ನು ಮಹಾದೈತ್ಯರಾದ ಮಧುಕೈಟಭರು ಕೊಲ್ಲಲು ಬಂದರು. ಅವರನ್ನು ನೋಡಿ ಬ್ರಹ್ಮ ನಿನ್ನನ್ನು ಸ್ತುತಿಸಿದಾಗ ಅವನನ್ನು ರಕ್ಷಿಸಲು, ದೈತ್ಯರನ್ನು ಕೊಲ್ಲಲು ನೀನು ಗೋವಿಂದನನ್ನು ಎಚ್ಚರಗೊಳಿಸಿದೆ. ನಿನ್ನ ಶಕ್ತಿಯಿಂದ ಆತ ಆ ಮಹಾದೈತ್ಯರನ್ನು ಕೊಂದ. ನೀನಿಲ್ಲದೆ ಆ ಸರ್ವೇಶ್ವರನೂ ಅಶಕ್ತನೆನಿಸುತ್ತಾನೆ. ಹಿಂದೆ ತ್ರಿಪುರಸಂಗ್ರಾಮದಲ್ಲಿ ಆಕಾಶದಿಂದ ನಾನು ಬಿದ್ದಾಗ ನೀನು ವಿಷ್ಣುವಿನೊಂದಿಗೆ ನನ್ನ ರಕ್ಷಣೆಗೆ ಬಂದೆ. ಈಗ ನಾನು ವಿರಹಾಗ್ನಿಯಿಂದ ಬೇಯುತ್ತಿದ್ದೇನೆ. ನನ್ನನ್ನು ಕಾಪಾಡು. ನಿನ್ನ ದರ್ಶನವಿತ್ತು ನನ್ನನ್ನು ದಾಸನನ್ನಾಗಿ ಮಾಡಿಕೊಳ್ಳು.'

ಹೀಗೆ ಶಿವ ಸ್ತೋತ್ರ ಮಾಡಿದಾಗ ಆಕಾಶದಲ್ಲಿ ರತ್ನರಥದಲ್ಲಿ ಶತಭುಜಳಾದ ದೇವಿ ಮೈದೋರಿದಳು. ಪುಟಕ್ಕಿಟ್ಟ ಚಿನ್ನದಂತೆ ಹೊಳೆವ ಮೈಕಾಂತಿ. ರತ್ನಾಭರಣಾಲಂಕೃತೆ. ಮಂದಹಾಸಯುಕ್ತ ಪ್ರಸನ್ನಮುಖದವಳು. ಜಗನ್ಮಾತೆ ಸತೀದೇವಿ. ಅವಳನ್ನು ನೋಡಿ ಶಿವ ವಿರಹದುಃಖದಿಂದ ಪುನಃ ಸ್ತುತಿಸಿದ. ಅಳುತ್ತ ವಿರಹದುಃಖವನ್ನು ಹೇಳಿಕೊಂಡ. ತನ್ನ ಮೈಮೇಲಿರುವ ಅಸ್ಥಿಮಾಲೆಯನ್ನೂ ಭಸ್ಮವನ್ನೂ ತೋರಿದ. ನಾನಾ ಬಗೆಯಿಂದ ದೇವಿಯನ್ನು ಒಲಿಸಿಕೊಂಡ. ನಾರಾಯಣ ಬ್ರಹ್ಮ ಧರ್ಮ ಶೇಷ ದೇವರ್ಷಿಗಳು ಎಲ್ಲರೂ 'ದೇವಿ ಶಿವನನ್ನು ಕಾಪಾಡು!' ಎಂದರು. ದೇವಿ ಸಂತುಷ್ಟಳಾಗಿ ತನ್ನ ಪ್ರಾಣಪ್ರಿಯನಾದ ಶಿವನಿಗೆ ಹೀಗೆ ನುಡಿದಳು-

**ಪ್ರಕೃತಿ:-** ಮಹಾದೇವ, ತಾಳು. ನೀನು ನನಗೆ ಪ್ರಾಣಕ್ಕಿಂತ ಅಧಿಕನಾದ ಸ್ವಾಮಿ, ಜನ್ಮಜನ್ಮದಲ್ಲಿಯೂ ಪತಿ. ನಾನು ಹಿಮಾಲಯನ ಮಡದಿಯಲ್ಲಿ ಜನ್ಮ ತಳೆದು ನಿನ್ನ ಪತ್ನಿಯಾಗುವೆನು. ವಿರಹ ತಾಪವನ್ನು ಬಿಟ್ಟುಬಿಡು.

ಹೀಗೆ ಹೇಳಿ ದೇವಿ ಅಂತರ್ಧಾನಳಾದಳು. ಲಜ್ಜೆಯಿಂದ ತಲೆಬಾಗಿದ್ದ ಶಿವನನ್ನು ದೇವತೆಗಳು ಸಂತೈಸಿ ಹೊರಟುಹೋದರು. ಶಿವ ಸಂತುಷ್ಟನಾಗಿ ಕೈಲಾಸಕ್ಕೆ ತೆರಳಿದ. ಸಪರಿವಾರನಾಗಿ ವಿರಹತಾಪವನ್ನು ಮರೆತು ಆನಂದದಿಂದ ನರ್ತಿಸಿದ. ಶಿವನು ಮಾಡಿದ ಈ ಪ್ರಕೃತಿಸ್ತೋತ್ರವನ್ನು ಪಠಿಸುವವನಿಗೆ ಜನ್ಮಜನ್ಮಗಳಲ್ಲಿಯೂ ಪತ್ನೀವಿಯೋಗ ವಾಗುವುದಿಲ್ಲ. ಈ ಲೋಕದಲ್ಲಿ ಸುಖವನ್ನು ಅನುಭವಿಸಿ ಶಿವಮಂದಿರಕ್ಕೆ ಹೋಗುತ್ತಾನೆ. ಧರ್ಮ ಅರ್ಥ ಕಾಮ ಮೋಕ್ಷಗಳನ್ನೂ ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಶಂಕರ ಶೋಕಾಪನೋದನವೆಂಬ ನಲವತ್ತಮೂರನೆ ಅಧ್ಯಾಯ ಮುಗಿಯಿತು.*

**ಶ್ರೀಕೃಷ್ಣ:**- ವಸಿಷ್ಠರ ಮಾತನ್ನು ಕೇಳಿ ಹಿಮಾಲಯನೂ ಅವನ ಪರಿವಾರದವರೂ ಬಹಳ ವಿಸ್ಮಿತರಾದರು. ಪಾರ್ವತಿ ಮನದೊಳಗೇ ನಕ್ಕಳು. ಅರುಂಧತಿಯೂ ಮೇನೆಯನ್ನು ಸಂತೈಸಿದಳು. ನಿರಾಹಾರಳಾಗಿ ಅಳುತ್ತಿದ್ದ ಅವಳು ಶೋಕವನ್ನು ತೊರೆದು ಸಂತೋಷಗೊಂಡಳು. ಅರುಂಧತಿಗೆ ಭೋಜನ ನೀಡಿ ತಾನೂ ಉಂಡಳು. ಎಲ್ಲ ಮಂಗಳಕಾರ್ಯಗಳನ್ನೂ ಸಂತೋಷದಿಂದ ನಡೆಸಿದಳು. ವಸಿಷ್ಠರು ಹೇಳಿದಂತೆ ಹಿಮಾಲಯ ವಿವಾಹಸಿದ್ಧತೆಯನ್ನು ಮಾಡಿ ನಾನಾ ಸ್ಥಳಗಳಿಗೆ ಬೇಗನೆ ಪತ್ರವನ್ನು ಕಳಿಸಿದ. ಲಗ್ನಪತ್ರಿಕೆಯನ್ನು ಶಿವನಿಗೆ ಕಳಿಸಿಕೊಟ್ಟ.

ಅಕ್ಕಿ ಅವಲಕ್ಕಿ ಎಣ್ಣೆ ತುಪ್ಪ ಮೊಸರು ಬೆಲ್ಲ ಹಾಲು ಬೆಣ್ಣೆ ಉಪ್ಪು ಸಕ್ಕರೆ ಉಂಡೆ, ಗೋದಿಹಿಟ್ಟಿನಿಂದ ತುಪ್ಪದಲ್ಲಿ ಕರಿದ ತಿಂಡಿಗಳು, ನಾನಾ ಬಗೆಯ ಉಡಿಗೆ ತೊಡಿಗೆಗಳು, ಮಹಾರತ್ನಗಳು ಹವಳ ಚಿನ್ನ ಬೆಳ್ಳಿ ಹೀಗೆ ಎಲ್ಲ ವಸ್ತುಗಳನ್ನು ಸಿದ್ಧಪಡಿಸಿ ಶುಭದಿನದಲ್ಲಿ ಮಂಗಳ ಕಾರ್ಯಗಳನ್ನು ಪ್ರಾರಂಭಿಸಿದ. ಪಾರ್ವತಿಗೆ ಮಂಗಳ ಸ್ನಾನಮಾಡಿಸಿ ಜೋಡಿ ವಸ್ತ್ರ ಉಡಿಸಿದರು ಸಖಿಯರು. ರತ್ನಾಭರಣಗಳಿಂದ ಅಲಂಕರಿಸಿದರು. ಕನ್ನಡಿ ತೋರಿಸಿದರು. ಅಂಗಾಲುಗಳಿಗೆ ಅಲಕ್ತಕ ಹಚ್ಚಿದರು. ಕಪೋಲಗಳಲ್ಲಿ ಪತ್ರಾವಳಿ ರಚಿಸಿದರು. ಕಣ್ಣುಗಳಿಗೆ ಕಾಡಿಗೆ ಇಟ್ಟರು. ತಲೆಕೂದಲು ಬಾಚಿ ಹೆಣೆದು ಜಾಜಿಯ ಹೂಮಾಲೆ ಮುಡಿದರು.

ಅಷ್ಟರಲ್ಲಿ ದೇವತೆಗಳು ಶಿವನನ್ನು ರತ್ನರಥದಲ್ಲಿ ಕರೆತಂದರು. ಹಿಮಾಲಯ ಅವರನ್ನು ಇದಿರುಗೊಳ್ಳಲು ಎಲ್ಲ ಪರ್ವತರನ್ನೂ ಕಳಿಸಿದ. ಬ್ರಾಹ್ಮಣರನ್ನೂ ಕಳಿಸಿದ. ವಿವಾಹದ ಅಂಗಣವನ್ನು ಬಾಳೆಕಂಬಗಳಿಂದ ಅಲಂಕರಿಸಿದ. ಮಾವಿನ ಚಿಗುರಿನಿಂದ, ಫಲ ಪುಷ್ಪ ಕಲಶ ಚಂದನ ಅಗುರು ಕಸ್ತೂರಿ ಜಾಜಿ ಹೂಮಾಲೆ ಮುಂತಾದವುಗಳಿಂದ ಸಜ್ಜುಗೊಳಿಸಿದ. ದೇವತೆಗಳನ್ನು ನಮಿಸಿ ರತ್ನಸಿಂಹಾಸನ ನೀಡಿದ. ಗರುಡನ ಹೆಗಲಿಂದ ಚತುರ್ಭುಜನಾದ ನಾರಾಯಣ ಪಾರ್ಷದರಿಂದೊಡಗೂಡಿ ಇಳಿದು ಬಂದು ರತ್ನಸಿಂಹಾಸನದಲ್ಲಿ ಕುಳಿತ. ಅವನಿಗೆ ಬಿಳಿ ಚಾಮರಗಳನ್ನು ಬೀಸಿದರು ಸೇವಕರು. ದೇವೋತ್ತಮರೂ ಮುನೀಶ್ವರರೂ ಅವನನ್ನು ಸ್ತುತಿಸಿದರು. ಅವನ ಬಳಿಯಲ್ಲಿ ದೇವತೆಗಳೊಂದಿಗೆ ಬ್ರಹ್ಮ ಕುಳಿತ. ಅಷ್ಟರಲ್ಲಿ ಶಿವ ರಥದಿಂದ ಇಳಿದು ರತ್ನಾಸನದಲ್ಲಿ ನಿಂತು ಹಿಮಾಲಯನ ಅರಮನೆಯನ್ನು ವೀಕ್ಷಿಸಿದ. ಅವನನ್ನು ಕಾಣಲು ಹಿಮಾಲಯನ ನಗರದ ಪ್ರಜೆಗಳೆಲ್ಲರೂ ಬಂದಿದ್ದರು. ವೃದ್ಧರೂ ಬಾಲಕರೂ ಯುವಕ ಯುವತಿಯರೂ ವಸ್ತ್ರಾಭರಣಭೂಷಿತರಾಗಿ ಬಂದಿದ್ದರು.

ಸಂಭ್ರಮದಿಂದ ಕೆಲವು ಸ್ತ್ರೀಯರು ಕೈಯಲ್ಲಿ ಕಾಡಿಗೆ ಹಿಡಿದುಕೊಂಡು ಬಂದಿದ್ದರು. ಕೆಲವರ ಕೈಯಲ್ಲಿ ಪೀತಾಂಬರ. ಕೆಲವರ ಕೈಯಲ್ಲಿ ಸಿಂದೂರ, ಕೆಲವರ ಕೈಯಲ್ಲಿ ಬಾಚಣಿಗೆ ಇನ್ನೂ ಇದ್ದಿತು. ಕೆಲವರು ಏನೂ ಸಿಂಗರಿಸಿಕೊಳ್ಳದೇ

ಬಂದಿದ್ದರು. ಕೆಲವರು ಸ್ವಲ್ಪವೇ ಸಿಂಗರಿಸಿಕೊಂಡಿದ್ದರು. ಕೆಲವರು ಮಾತ್ರ ಪೂರ್ತಿ ಸಿಂಗರಿಸಿಕೊಂಡಿದ್ದರು. ಎಲ್ಲರೂ ಅಚ್ಚರಿಯಿಂದ ಓಡಿಬಂದಿದ್ದರು. ಋಷಿಕನ್ನಿಕೆಯರು ದೇವಕನ್ನಿಕೆಯರು ನಾಗಕನ್ನಿಕೆಯರು ಗಂಧರ್ವಕನ್ಯೆಯರು ಪರ್ವತಕನ್ಯೆಯರು ರಾಜಕುಮಾರಿಯರು ರಂಭೆ ಮೊದಲಾದ ಅಪ್ಸರೆಯರು ಎಲ್ಲರೂ ಬಂದರು. ಮೇನೆ ಎಲ್ಲ ಸ್ತ್ರೀಯರೊಂದಿಗೆ ವರನಾದ ಶಂಕರನನ್ನು ಕಂಡಳು.

ಶಂಕರ ಸಂಪಿಗೆಯಂಥ ಮೈಬಣ್ಣದಿಂದ ಹೊಳೆಯುತ್ತಿದ್ದ. ಮೂರು ಕಣ್ಣಿನ ಒಂದು ಮುಖ. ರತ್ನಾಭರಣಗಳಿಂದ ಚಂದನಾಗುರುಕಸ್ತೂರಿ ಕುಂಕುಮಗಳಿಂದ, ಮಾಲತೀಮಾಲೆಯಿಂದ, ರತ್ನಕಿರೀಟದಿಂದ, ತೆಳುವಾದ ಅಮೂಲ್ಯ ಜೋಡಿ ವಸ್ತ್ರಗಳಿಂದ ಅಲಂಕೃತನಾಗಿದ್ದ. ಕಣ್ಣಿಗೆ ಕಾಡಿಗೆ ಹಚ್ಚಿಕೊಂಡಿದ್ದ. ಕೈಯಲ್ಲಿ ರತ್ನಕನ್ನಡಿ ಇದ್ದಿತು. ಅತ್ಯಂತ ಸುಂದರ, ತರುಣ, ಸರ್ವಾಲಂಕಾರಭೂಷಿತ, ಅನುಪಮ ರೂಪವನ್ನು ನಾರಾಯಣನಾಜ್ಞೆಯಿಂದ ಶಿವ ತೋರಿದ್ದ. ಯೋಗಸ್ವರೂಪ ಯೋಗೇಶ, ಯೋಗೀಂದ್ರರ ಗುರುಗಳ ಗುರು, ಸ್ವೇಚ್ಛಾಮಯ ಗುಣಾತೀತ ಸನಾತನ ಬ್ರಹ್ಮಜ್ಯೋತಿ ಗುಣಭೇದದಿಂದ ರೂಪಭೇದ ಧರಿಸುವವ, ಅನಂತ, ರೂಪರಹಿತ, ಸಂಸಾರವನ್ನು ದಾಟಿಸುವವ, ಸೃಷ್ಟಿಸ್ಥಿತಿಲಯಕಾರಿ, ಸರ್ವಾಧಾರ ಸರ್ವಬೀಜ ಸರ್ವೇಶ ಸರ್ವಜೀವನ ಸಾಕ್ಷಿರೂಪ, ನಿರೀಹ, ಪರಮಾನಂದ ಅಕ್ಷರ ಆದ್ಯಂತ ಮಧ್ಯರಹಿತ ಸರ್ವಾದ್ಯ ಸರ್ವರೂಪ, ಇಂಥ ಅಳಿಯನನ್ನು ಮೇನೆ ನೋಡಿ ಶೋಕವನ್ನು ತೊರೆದು ಮುದಗೊಂಡಳು. ಯುವತಿಯರೆಲ್ಲ 'ಪಾರ್ವತಿ ಭಾಗ್ಯವಂತೆ, ಧನ್ಯಳು, ಧನ್ಯಳೆಂದು' ಪ್ರಶಂಸೆ ಮಾಡಿದರು. ಶಿವನ ರೂಪ ಕಂಡು ಮೋಹಗೊಂಡ ಕೆಲವು ತರುಣಿಯರು ಸ್ತಂಭಿತರಾಗಿ ಮೌನತಳೆದರು. ಕೆಲವರು ಬಿಟ್ಟಕಣ್ಣುಗಳಿಂದ ನೋಡುತ್ತ ಮೈ ಮರೆತರು. ಕೆಲವರು ತಮ್ಮ ಪತಿಗಳ ರೂಪವನ್ನು ತೆಗಳಿದರು. ಕೆಲವರು ಶಿವನನ್ನು ಹೊಂದಲು ಬಯಸಿದರು. ಕೆಲವರು ಅನುರಾಗ ಹೆಚ್ಚಿ ಮೈ ರೋಮಾಂಚಗೊಂಡು ಕಣ್ಣೀರು ಸುರಿಸಿದರು. ಗಂಧರ್ವರು ಹಾಡಿದರು. ಅಪ್ಸರೆಯರು ಕುಣಿದರು. ಎಲ್ಲ ದೇವತೆಗಳೂ ಆನಂದ ಪಟ್ಟರು. ವಾದಕರು ನಾನಾ ವಾದ್ಯಗಳನ್ನು ಮಧುರವಾಗಿ ನುಡಿಸಿದರು. ಆಗ ಹಿಮಾಲಯನ ಅಂತಃಪುರದ ಪರಿಚಾರಿಕೆ ಪಾರ್ವತಿಯನ್ನು ಹೊರಗೆ ಕರೆತಂದಳು. ರತ್ನ ಸಿಂಹಾಸನದಲ್ಲಿ ಕುಳ್ಳಿರಿಸಿದಳು. ಕಸ್ತೂರೀ ಸಿಂದೂರ ಬಿಂದುಗಳಿಂದ, ರತ್ನಹಾರ ರತ್ನ ಕೇಯೂರ ವಲಯ ಕಂಕಣಗಳಿಂದ ಧ್ವನಿಗೈವ ಕಾಲಗೆಜ್ಜೆಗಳಿಂದ ಅಮೂಲ್ಯ ವಿಚಿತ್ರ ಜೋಡಿವಸ್ತ್ರಗಳಿಂದ ರತ್ನಕುಂಡಲಗಳಿಂದ ರತ್ನದರ್ಪಣ ಕ್ರೀಡಾಕಮಲಗಳಿಂದ ಅಲಂಕೃತಳಾದ ಚಂದನಾಗುರು ಕಸ್ತೂರಿ ಕುಂಕುಮಗಳನ್ನು ಬಳಿದುಕೊಂಡಿದ್ದ, ಬೇರೆಯವರು ತಡೆದರೂ ಲಕ್ಷ್ಯಕೊಡದೆ ಶಿವನನ್ನೆ ದಿಟ್ಟಿಸುತ್ತಿದ್ದ ಪಾರ್ವತಿಯನ್ನು ಎಲ್ಲರೂ ನೋಡಿ ಆನಂದಿಸಿದರು. ಶಿವನೂ ಅವಳನ್ನೆ ಕಡೆಗಣ್ಣಿಂದ ನೋಡುತ್ತಿದ್ದ. ನೋಡಿ ತನ್ನ ವಿರಹಶೋಕವನ್ನು ದೂರ ಮಾಡಿಕೊಳ್ಳುತ್ತಿದ್ದ. ದೇವಿಯನ್ನು ನೋಡುತ್ತಿದ್ದರೆ ಶಿವನಿಗೆ ಎಲ್ಲವೂ ಮರೆತು ಹೋಗುತ್ತಿತ್ತು. ಮೈ ನವಿರೇಳುತ್ತಿತ್ತು. ಕಣ್ಣಲ್ಲಿ ಆನಂದ ಬಾಷ್ಪ ಸುರಿಯುತ್ತಿತ್ತು. ಆಗ

ಪರ್ವತರಾಜ ಪುರೋಹಿತನೊಂದಿಗೆ ಬಂದು ವಸ್ತ್ರ ಚಂದನ ಆಭರಣಗಳನ್ನಿತ್ತು ವರಪೂಜೆ ಮಾಡಿದ. ಪಾದ್ಯಾದಿಗಳನ್ನೂ ದಿವ್ಯ ಪರಿಮಳಯುಕ್ತ ಮಾಲೆಗಳನ್ನೂ ನೀಡಿದ. ಬಳಿಕ ವೇದಮಂತ್ರ ಪೂರ್ವಕವಾಗಿ ಕನ್ಯಾದಾನ ಮಾಡಿದ. ಬಳುವಳಿಯಾಗಿ ನಾನಾ ರತ್ನಗಳು ರತ್ನಪಾತ್ರೆಗಳು ಲಕ್ಷಗೋವುಗಳು ಸಾವಿರಾರು ಆನೆಗಳು, ಮೂವತ್ತು ಲಕ್ಷ ಕುದುರೆಗಳು, ಲಕ್ಷ ದಾಸಿಯರು, ನೂರು ಮಂದಿ ಬ್ರಾಹ್ಮಣವಟುಗಳು, ನೂರು ರತ್ನರಥಗಳು, ಮುಂತಾದವುಗಳೊಡನೆ ಪಾರ್ವತಿಯನ್ನು ಹಿಮಾಲಯ ಆನಂದದಿಂದ ನೀಡಿದ. 'ಶುಭವಾಗಲಿ' ಎನ್ನುತ್ತ ಶಂಕರ ಸ್ವೀಕರಿಸಿದ. ಬಳಿಕ ಹಿಮಾಲಯ ಶಿವನನ್ನು ಮಾಧ್ಯಂದಿನ ಶಾಖೋಕ್ತವಾದ ಈ ಸ್ತೋತ್ರದಿಂದ ಸ್ತುತಿಸಿದ.

**ಹಿಮಾಲಯ:-** ದಕ್ಷಯಜ್ಞ ಭಂಗಮಾಡಿದ ಶಿವನೆ ಪ್ರಸನ್ನನಾಗು. ನೀನು ನರಕಸಮುದ್ರದಿಂದ ದಾಟಿಸುವವ. ಸರ್ವಾತ್ಮರೂಪ, ಸರ್ವೇಶ, ಪರಮಾನಂದ ವಿಗ್ರಹ, ಗುಣಾರ್ಣವ, ಗುಣಾತೀತ, ಗುಣಯುಕ್ತ, ಗುಣೇಶ್ವರ, ಗುಣಬೀಜ, ಮಹಾಭಾಗ, ಗುಣಿಗಳಲ್ಲಿ ಶ್ರೇಷ್ಠ, ಯೋಗಾಧಾರ, ಯೋಗರೂಪ, ಯೋಗಜ್ಞ, ಯೋಗಕಾರಣ, ಯೋಗೀಶ, ಯೋಗಿಬೀಜ, ಯೋಗಿಗುರು, ಪ್ರಳಯಕಾರಣ, ಸೃಷ್ಟಿಕಾರಣ, ಸ್ಥಿತಿಕಾರಣ, ದುರ್ನಿವಾರ್ಯ, ದುರಾರಾಧ್ಯ, ಆಶುತೋಷ, ಕಾಲ ಸ್ವರೂಪ, ಕಾಲೇಶ, ಕಾಲ ಫಲದಾಯಕ, ಕಾಲಬೀಜ, ಕಾಲಘ್ನ, ಕಾಲಪಾಲಕ, ಶಿವಸ್ವರೂಪ, ಶಿವದ, ಶಿವಬೀಜ, ಶಿವಾಶ್ರಯ, ಶಿವಭೂತ, ಶಿವಪ್ರಾಣ, ಪರಮಾಶ್ರಯ, ಪ್ರಸನ್ನನಾಗು. ಹೀಗೆ ಹಿಮಾಲಯ ಶಿವನನ್ನು ಸ್ತುತಿಸಿದ. ದೇವತೆಗಳೂ ಮುನಿಗಳೂ ಹಿಮಾಲಯನನ್ನು ಪ್ರಶಂಸಿಸಿದರು.

ಹಿಮಾಲಯ ಮಾಡಿದ ಈ ಸ್ತೋತ್ರವನ್ನು ಪಠಿಸಿದರೆ ಶಿವ ಅವನಿಗೆ ಎಲ್ಲ ಅಭೀಷ್ಟಗಳನ್ನೂ ನೀಡುತ್ತಾನೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರದನಾರಾಯಣಸಂವಾದದಲ್ಲಿ ಪಾರ್ವತೀಸಂಪ್ರದಾನವೆಂಬ ನಲವತ್ತನಾಲ್ಕನೆ ಅಧ್ಯಾಯ ಮುಗಿಯಿತು.*

—o—

## ಶಂಕರವಿವಾಹ

## ಅಧ್ಯಾಯ - ೪೫

**ಶ್ರೀಕೃಷ್ಣ:-** ಬಳಿಕ ವೇದೋಕ್ತವಿಧಾನದಿಂದ ಶಿವ ವಹ್ನಿಪ್ರತಿಷ್ಠೆಯನ್ನು ಮಾಡಿ ಪಾರ್ವತಿಯನ್ನು ಎಡಕ್ಕಿಟ್ಟುಕೊಂಡು ವಿವಾಹಹೋಮ ಮಾಡಿದ. ಬ್ರಾಹ್ಮಣರಿಗೆ ದಕ್ಷಿಣೆಯಾಗಿ ನೂರುನೂರು ಸುವರ್ಣ ನಾಣ್ಯಗಳನ್ನಿತ್ತ. ಹಿಮಾಲಯದ ನಗರಸ್ತ್ರೀಯರು ದಂಪತಿಗಳಿಗೆ ಆರತಿ ಎತ್ತಿದರು. ವರನ ಬಿಡಾರದಲ್ಲಿ ಕುಳಿತಿದ್ದ ಶಂಕರನ ಬಳಿಗೆ ಸರಸ್ವತೀ ಲಕ್ಷ್ಮೀ ಸಾವಿತ್ರೀ ಮುಂತಾದ ದೇವತಾಸ್ತ್ರೀಯರು ಬಂದರು. ರತ್ನಾಭರಣ ಭೂಷಿತ, ಚಂದನ ಅಗುರು ಕಸ್ತೂರಿ ಕುಂಕುಮಲಿಪ್ತ, ಅಪೂರ್ವ ಸೂಕ್ಷ್ಮವಸ್ತ್ರಧಾರಿಯಾದ ಸಂಪಗೆಬಣ್ಣದ ಮೈಯ, ನವಯೌವನದ ಸುಂದರಾಂಗನಾದ ಆ ಶಿವನನ್ನು ಕಂಡು ಸರಸ್ವತಿ, ಲಕ್ಷ್ಮಿ, ಸಾವಿತ್ರಿ, ಗಂಗೆ, ರತಿ, ಅದಿತಿ, ಶಚಿ, ಲೋಪಾಮುದ್ರೆ, ಅರುಂಧತಿ, ಅಹಲ್ಯೆ, ತುಲಸಿ, ಸ್ವಾಹೆ, ರೋಹಿಣಿ, ವಸುಂಧರೆ, ಶತರೂಪೆ, ಸಂಜ್ಞೆ ಎಂಬ ಹದಿನಾರು ಮಂದಿ ಪತಿವ್ರತಾಸ್ತ್ರೀಯರೂ ಬೇರೆ ದೇವಕನ್ಯೆ, ನಾಗಕನ್ಯೆ ಮುನಿಕನ್ಯೆಯರೂ ಮಧುರವಾಗಿ ಅಮೃತದಂಥ ಮಾತುಗಳನ್ನಾಡಿದರು.

**ಸರಸ್ವತಿ:-** ಮಹಾದೇವ, ನಿನ್ನ ಪ್ರಾಣಾಧಿಕೆಯಾದ ಸತಿ ಪುನಃ ದೊರೆತಿದ್ದಾಳೆ. ಇನ್ನು ಅವಳ ಮುಖಚಂದ್ರಮನನ್ನು ನೋಡುತ್ತ ನಿನ್ನ ವಿರಹಸಂತಾಪವನ್ನು ಬಿಟ್ಟು ಬಿಡು. ಸದಾ ಆಲಿಂಗಿಸಿಕೊಂಡು ಕಾಲ ಕಳೆ. ನಿಮಗೆ ಇನ್ನು ಎಂದೂ ವಿಯೋಗವಾಗದಿರಲೆಂದು ನಾನು ಹರಸುತ್ತೇನೆ.

**ಲಕ್ಷ್ಮೀ:-** ದೇವೇಶ, ನಾಚಿಕೊಳ್ಳಬೇಡ. ಸತಿಯನ್ನಾಲಿಂಗಿಸಿಕೊಳ್ಳು. ಈಗ ಇನ್ನೆಲ್ಲಿ ಲಜ್ಜೆಗೆ ಅವಕಾಶ? ಅವಳಲ್ಲದೆ ಇದ್ದರೆ ನಿನ್ನ ಪ್ರಾಣವೆ ಹೋಗುತ್ತದೆ.

**ಸಾವಿತ್ರಿ:-** ಶಂಭು, ಸತಿಗೆ ಅನ್ನವನ್ನು ಬೇಗನೆ ಉಣಿಸು. ನೀನು ಉಣ್ಣು. ಆಚಮನ ಮಾಡಿ ಕರ್ಪೂರಯುಕ್ತವಾದ ತಾಂಬೂಲವನ್ನು ಅವಳಿಗೆ ನೀಡು.

**ಗಂಗೆ:-** ಶಿವನೆ, ಬಂಗಾರದ ಬಾಚಣಿಗೆ ಹಿಡಿದು ಸತಿಯ ತಲೆಗೂದಲನ್ನು ಬಾಚು. ಇದು ತಾನೆ ಸತಿಗೆ ಪತಿಸೌಭಾಗ್ಯ? ಇದಕ್ಕಿಂತ ಹೆಚ್ಚಿನ ಸುಖ ಅವಳಿಗೆ ಏನಿದೆ?

**ರತಿ:-** ದೇವ, ಅತಿದುರ್ಲಭಳಾದ ಸುಂದರಿಯಾದ ಪಾರ್ವತಿಯನ್ನು ಸ್ವೀಕರಿಸಿರುವಿ. ನನ್ನ ಪ್ರಾಣೇಶ್ವರನನ್ನು ವ್ಯರ್ಥವಾಗಿ ಏಕೆ ಸುಟ್ಟು ಬೂದಿಮಾಡಿದೆ? ಮನ್ಮಥನನ್ನು ಬದುಕಿಸು. ಸತಿಯೊಡನೆ ಮನ್ಮಥಲೀಲೆಯನ್ನು ನಡೆಸು. ನನ್ನ ವಿರಹತಾಪವನ್ನು ಪರಿಹರಿಸು. ದಂಪತಿಗಳ ವಿರಹದುಃಖ ಏನೆಂಬುದು ನಿನಗೆ ಗೊತ್ತೇ ಇದೆ. ಆದರೂ ನನ್ನ ಪತಿಯನ್ನು ಕೋಪದಿಂದ ಸುಟ್ಟಿರುವೆ.

ಹೀಗೆ ಹೇಳುತ್ತ ರತಿ, ತನ್ನ ಸೆರಗಿನಲ್ಲಿ ಕಟ್ಟಿಕೊಂಡಿದ್ದ ಮನ್ಮಥನ ಭಸ್ಮವನ್ನು ಶಿವನ ಕೈಯಲ್ಲಿಟ್ಟು, 'ಶಂಭೋ, ನಾಥ ನಾಥ!' ಎಂದು ಅಳಲು ತೊಡಗಿದಳು.

ರತಿಯ ರೋದನವನ್ನು ಕೇಳಿ ಕರುಣಾಸಾಗರನಾದ ಹರಿ ಬಂದ. ಬ್ರಹ್ಮ ಧರ್ಮ ಮುಂತಾದ ದೇವತೆಗಳೂ ಬಂದರು. ಶಿವ ಒಡನೆ ಪೀಠದಿಂದೆದ್ದು 'ಆಜ್ಞೆ ಮಾಡು' ಎಂದಾಗ ಹರಿ ನುಡಿದ, 'ಶಿವ, ಮನ್ಮಥನನ್ನು ಬದುಕಿಸು.' ಹೀಗೆ ಹೇಳಿ ಹರಿ ಹೊರಟುಹೋದ. ದೇವಸ್ತ್ರೀಯರೂ ಬಹುವಿನಯದಿಂದ ಶಿವನನ್ನು ಕೇಳಿಕೊಂಡರು. ಶಿವ ತನ್ನ ಅಮೃತಕಟಾಕ್ಷದಿಂದ ಭಸ್ಮವನ್ನು ವೀಕ್ಷಿಸಿದ. ಆಗ ಆ ಭಸ್ಮದಿಂದ ಮನ್ಮಥನೆದ್ದು ಬಂದ. ಅವನನ್ನು ಕಂಡು ರತಿ ಶಿವನನ್ನು ನಮಿಸಿದಳು. ಮನ್ಮಥನೂ ಶಿವನನ್ನು ನಮಿಸಿ ಸ್ತೋತ್ರಮಾಡಿ, ಹೊರಗೆ ಹೋಗಿ ಹರಿಯನ್ನೂ ಬೇರೆ ದೇವತೆಗಳನ್ನೂ ನಮಿಸಿದ. ದೇವತೆಗಳು ಅವನನ್ನು ಹರಸಿದರು. ಕಾಲಕಾಲಕ್ಕೆ ವಿನಾಶ ರಕ್ಷೆಗಳು ಆಗುತ್ತಲೆ ಇರುತ್ತವೆ, ಯಾರು ತಡೆಯಬಲ್ಲರು ಎನ್ನುತ್ತ ಸಂತೈಸಿದರು. ಇತ್ತ ಹಿಮಾಲಯನು ನಾರಾಯಣ ಮುಂತಾದ ದೇವತೆಗಳಿಗೆ ಭಕ್ತಿಯಿಂದ ಭೋಜನ ನೀಡಿದ. ಶಿವನೂ ತನ್ನ ಎಡದಲ್ಲಿ ಪಾರ್ವತಿಯನ್ನು ಕುಳ್ಳಿರಿಸಿಕೊಂಡು ಅವಳೊಡನೆ ಮಿಷ್ಟಾನ್ನ ಉಂಡ. ಬಳಿಕ ದೇವಸ್ತ್ರೀಯರು ನಗುತ್ತ ಶಿವನ ಮುಂದೆ ನುಡಿದರು.

**ಅದಿತಿ:-** ಶಚಿ, ಭೋಜನದ ಕೊನೆಯಲ್ಲಿ ದಂಪತಿಗಳಿಗೆ ಕೈ ತೊಳೆಯಲು ನೀರುಕೊಡು.

**ಶಚಿ:-** ಸತಿಯ ಶವವನ್ನು ಎದೆಗೆ ಅಪ್ಪಿಕೊಂಡು ವಿಲಾಪ ಮಾಡುತ್ತ ಎಲ್ಲೆಡೆ ತಿರುಗಿದ ಶಿವ ಬಹುಕಾಲಾನಂತರ ಈಗ ಅವಳನ್ನು ತಿರುಗಿ ಪಡೆದಿದ್ದಾನೆ.

**ಅರುಂಧತಿ:-** ಶಿವನೆ, ಸತಿಯನ್ನು ನಿನಗೆ ಕೊಟ್ಟವಳು ನಾನು. ಏಕೆಂದರೆ ಮೇನೆ ತಾನು ಕೊಡಲಾರೆ ಎಂದುಕೊಂಡಿದ್ದಳು. ನಾನಾ ಬಗೆಯಿಂದ ಅವಳನ್ನು ನಾನು ಒಪ್ಪಿಸಬೇಕಾಯಿತು. ಈಗ ನೀನು ಸತಿಯೊಡನೆ ಯಥೇಚ್ಛ ವಿಹಾರ ಮಾಡು.

**ಅಹಲ್ಯೆ:-** ವೃದ್ಧನಾಗಿದ್ದ ನೀನು ಈಗ ಬಹಳ ಯುವಕನಾಗಿರುವೆ. ಅದರಿಂದ ಮೇನೆ ಮಗಳನ್ನು ಕೊಡಲು ಒಪ್ಪಿದಳು.

**ತುಲಸಿ:-** ಸತಿಯನ್ನುಒಮ್ಮೆ ಬಿಟ್ಟವನು, ಕಾಮನನ್ನು ಸುಟ್ಟವನು ವಸಿಷ್ಠರನ್ನು ಹೇಗೆ ಹಿಮಾಲಯನ ಬಳಿಗೆ ಕಳಿಸಿದೆ?

**ಸ್ವಾಹೆ:-** ಮಹಾದೇವ, ಹೆಣ್ಣುಮಕ್ಕಳ ಮಾತಿನಂತೆ ನೀನು ನಡೆಯಬೇಕು. ವಿವಾಹದಲ್ಲಿ ಹೆಣ್ಣುಮಕ್ಕಳ ಮಾತೇ ಮುಖ್ಯವಾಗಿ ನಡೆಯಬೇಕಾಗುವುದು.

**ರೋಹಿಣಿ:-** ಕಾಮಶಾಸ್ತ್ರವಿಶಾರದನಾದ ನೀನು ಪಾರ್ವತಿಯ ಬಯಕೆಯನ್ನು ತೀರಿಸು. ನೀನೂ ಕಾಮಿನೀಕಾಮಸಾಗರದ ಪಾರವನ್ನು ಸೇರು.

**ವಸುಂಧರೆ:-** ಹಸಿದವನಿಗೆ ಅನ್ನವಿಲ್ಲದಿದ್ದರೆ ತೃಪ್ತಿ ಇಲ್ಲ. ಹೆಣ್ಣಿಗೆ ತೃಪ್ತಿ ಯಾವುದರಿಂದಾಗುವುದೋ ಅದನ್ನು ಮಾಡು.

**ಸಂಜ್ಞೆ:-** ಕಾಮಾತುರಳಾದ ಹೆಣ್ಣಿನ ಬಯಕೆ ನಿನಗೆ ಗೊತ್ತು. ಸತಿಗೆ ಇನ್ನೂ ಪತಿಸಂಗಮದ ಅನುಭವವಾಗಿಲ್ಲ.

**ಶತರೂಪೆ:-** ಸಖಿ, ಶಿವನನ್ನು ಪಾರ್ವತಿಯೊಡನೆ ಬೇಗನೆ ರತ್ನದೀಪ ತಾಂಬೂಲಗಳಿಂದ ಸಜ್ಜಿತವಾದ ರತಿಶಯ್ಯೆಗೆ ಕಳಿಸು.

ಸ್ತ್ರೀಯರ ಮಾತುಗಳನ್ನು ಕೇಳಿದ ನಿರ್ವಿಕಾರಿ ಭಗವಾನ್ ಶಿವ ನುಡಿದ.

**ಶಂಕರ:-** ದೇವಿಯರೆ, ಇಂಥ ಮಾತುಗಳನ್ನೆಲ್ಲ ನನ್ನ ಮುಂದೆ ಆಡಬೇಡಿ. ನೀವು ಜಗನ್ಮಾತೆಯರು. ಮಗನ ಮುಂದೆ ತಾಯಂದಿರು ಆಡುವ ಮಾತು ಇದಲ್ಲ.

ಇದನ್ನು ಕೇಳಿ ದೇವತಾಸ್ತ್ರೀಯರು ಲಜ್ಜಿತರಾಗಿ ಚಿತ್ರದಲ್ಲಿ ಬರೆದ ಬೊಂಬೆಗಳಂತೆ ಸುಮ್ಮನೆ ನಿಂತರು. ಶಿವ ಪಾರ್ವತಿಯೊಡನೆ ಮಿಷ್ಟಾನ್ನ ಉಂಡು ಕರ್ಪೂರ ಸಹಿತವಾದ ತಾಂಬೂಲವನ್ನು ಮೆದ್ದ. ಮೇನೆ ನೀಡಿದ ಮನೋಹರವಾದ ರತ್ನಸಿಂಹಾಸನದಲ್ಲಿ ಕುಳಿತು ವಾಸಗೃಹವನ್ನು ಒಮ್ಮೆ ಸುತ್ತಲೂ ಅವಲೋಕಿಸಿದ. ಅಲ್ಲಿ ನೂರಾರು ಉರಿವ ರತ್ನದೀಪಗಳಿದ್ದುವು. ರತ್ನಪಾತ್ರೆಗಳು ಮುತ್ತು ಮಾಣಿಕ್ಯಗಳು ರತ್ನಕನ್ನಡಿಗಳು ಬಿಳಿಚಾಮರಗಳು ಚಂದನ ಅಗುರು ಮುಂತಾದ ಸುಗಂಧದ್ರವ್ಯ ಯುಕ್ತವಾದ ಹೂವಿನ ಹಾಸಿಗೆ, ಚಿತ್ರವಿಚಿತ್ರ ರತ್ನವಜ್ರಖಚಿತವಾದ ಕಿಟಕಿ ಬಾಗಿಲುಗಳು. ಕೆಲವೆಡೆ ವೈಕುಂಠದಂತೆ, ಕೆಲವೆಡೆ ವೃಂದಾವನದ ರಾಸಮಂಡಲದಂತೆ, ಕೆಲವೆಡೆ ಕೈಲಾಸದಂತೆ, ಕೆಲವೆಡೆ ಅಮರಾವತಿಯಂತೆ ಕಾಣುವ ವಿಶ್ವಕರ್ಮನಿರ್ಮಿತವಾದ ಅರಮನೆಯನ್ನು ನೋಡಿ ಅಚ್ಚರಿಗೊಂಡ, ತೃಪ್ತಿಹೊಂದಿದ, ಶಿವ. ರಾತ್ರಿಕಳೆಯಿತು. ಪ್ರಾತಃಕಾಲದಲ್ಲಿ ನಾನಾ ಪ್ರಕಾರದ ವಾದ್ಯಗಳು ಮೊಳಗಿದುವು. ಎಲ್ಲ ದೇವತೆಗಳೂ ಎದ್ದು ಸಂಭ್ರಮದಿಂದ ಸಿದ್ಧರಾಗಿ ತಮ್ಮ ವಾಹನಗಳನ್ನೇರಿ ಕೈಲಾಸಕ್ಕೆ ಹೊರಟು ನಿಂತರು. ನಾರಾಯಣನ ಆಜ್ಞೆಯಂತೆ ಧರ್ಮ ವಾಸಗೃಹಕ್ಕೆ ಬಂದು ಶಿವನ ಮುಂದೆ ನುಡಿದ.

**ಧರ್ಮ:-** ಶಿವನೆ, ಏಳು, ಎದ್ದೇಳು ಹರಿಸ್ಮರಣೆಮಾಡಿ ಪಾರ್ವತಿಯೊಡನೆ ಕೈಲಾಸಕ್ಕೆ ಹೋರಡು.

ಧರ್ಮನ ಮಾತನ್ನು ಕೇಳಿ ಶಿವ ಪಾರ್ವತಿಯೊಡನೆ ಕೈಲಾಸಕ್ಕೆ ಹೊರಟ. ಮೇನೆ ಗಟ್ಟಿಯಾಗಿ ಅತ್ತು ಹೇಳಿದಳು.

**ಮೇನೆ:-** ಕೃಪಾನಿಧಿ, ಕೃಪೆಮಾಡಿ ನನ್ನ ಮಗಳನ್ನು ಕಾಪಾಡು. ನೀನು ಬೇಗನೆ ಒಲಿಯುವವ. ಮಗಳ ಸಾವಿರ ಅಪರಾಧಗಳನ್ನು ಕ್ಷಮಿಸಬೇಕು. ಅವಳು ಜನ್ಮಜನ್ಮಗಳಲ್ಲಿ ನಿನ್ನ ಪಾದಕಮಲ ಭಕ್ತಳು. ಕನಸಿನಲ್ಲಾಗಲಿ ಎಚ್ಚರದಲ್ಲಾಗಲಿ ನಿನ್ನನ್ನು ಹೊರತು ಅನ್ಯರನ್ನು ಎಣಿಸದವಳು. ನಿನ್ನ ಹೆಸರನ್ನು ಕೇಳಿದ ಮಾತ್ರಕ್ಕೆ ಮೈ ರೋಮಾಂಚಗೊಂಡು ಆನಂದ ಬಾಷ್ಪ ಸುರಿಸುವವಳು. ನಿನ್ನ ನಿಂದೆ ಕಿವಿಗೆ ಬಿದ್ದರೆ ಮೌನವಹಿಸಿ ಶವದಂತಾಗುವಳು.

ಹೀಗೆ ಮೇನೆ ಹೇಳುತ್ತಿದ್ದಂತೆ ಹಿಮಾಲಯನೂ ಬಂದು ಮಗಳನ್ನು ತಬ್ಬಿಕೊಂಡು ಅಳುತ್ತ 'ಮಗಳೆ, ಹೋಗುತ್ತಿರುವೆಯ, ಹಿಮಾಲಯವಿನ್ನು ಶೂನ್ಯವಾಗಿ ಬಿಡುತ್ತದೆ. ನಿನ್ನ ಸದ್ಗುಣಗಳನ್ನು ನೆನೆನೆನೆದು ನನ್ನೆದೆ ದುಃಖದಿಂದ ಬಿರಿಯುತ್ತದೆ.' ಎಂದ. ಮಗಳನ್ನು ಶಿವನ ಕೈಯಲ್ಲಿಟ್ಟು ಪುನಃ ಪುನಃ ಗಟ್ಟಿಯಾಗಿ ಅತ್ತುಬಿಟ್ಟ. ಭಗವಾನ್ ನಾರಾಯಣ ಎಲ್ಲರಿಗೂ ಕೃಪೆಯಿಂದ ಅಧ್ಯಾತ್ಮವನ್ನು ಬೋಧಿಸಿ ಸಮಾಧಾನಪಡಿಸಿದ. ಪಾರ್ವತಿ ಭಕ್ತಿಯಿಂದ ತಾಯಿತಂದೆ ಗುರುಗಳನ್ನು ನಮಿಸಿದಳು. ಮಹಾಮಾಯೆ ಮಾಯೆಯಿಂದ ಗಟ್ಟಿಯಾಗಿ ಅತ್ತಳು. ಪಾರ್ವತಿ ಅಳುವುದನ್ನು ಕಂಡು ಎಲ್ಲ ಸ್ತ್ರೀಯರೂ ಅತ್ತರು. ಮುನಿಗಳೂ ದೇವತೆಗಳೂ ಗಣಗಳೂ ಎಲ್ಲರೂ ಸ್ತ್ರೀಸಮೇತರಾಗಿ ಅತ್ತರು. ಎಲ್ಲರೂ

ಬೇಗನೆ ಕೈಲಾಸಕ್ಕೆ ನಡೆದರು. ಮನೋವೇಗದಿಂದ ಅರ್ಧಮುಹೂರ್ತದಲ್ಲಿ ಶಿವಮಂದಿರವನ್ನು ಸೇರಿದರು. ದೇವಪತ್ನಿ ಮುನಿಪತ್ನಿಯರು ಬೇಗನೆ ಆರತಿ ಎತ್ತಿದರು. ವಾಯು ಕುಬೇರ ಇಂದ್ರ ಬೃಹಸ್ಪತಿ ದೂರ್ವಾಸ ಅತ್ರಿ ಚಂದ್ರರ ಪತ್ನಿಯರೂ ಉಳಿದ ದೇವಕನ್ಯೆ ನಾಗಕನ್ಯೆ ಮುನಿಕನ್ಯೆಯರೂ ಮುಂತಾಗಿ ಅಸಂಖ್ಯ ಸ್ತ್ರೀಯರು ಸೇರಿ ಈ ನವ ದಂಪತಿಗಳಿಗೆ ಗೃಹಪ್ರವೇಶೋತ್ಸವ ನೆರವೇರಿಸಿದರು. ಪಾರ್ವತಿಯನ್ನು ರತ್ನಸಿಂಹಾಸನದಲ್ಲಿ ಕುಳ್ಳಿರಿಸಿದರು. ಶಿವ ಪಾರ್ವತಿಗೆ ಅವಳ ಹಿಂದಿನ ಮನೆಯನ್ನು ಸಂತೋಷದಿಂದ ತೋರಿಸಿದ.

'ಸತಿ, ಮನೆ ನಿನಗೆ ಇಷ್ಟವಾಯಿತೆ? ಅಂದು ನೀನು ಇದೇ ಮನೆಯಿಂದ ತಂದೆ ಮನೆಗೆ ಹೋಗಿದ್ದೆ. ಈಗ ನೀನು ಹಿಮಾಲಯನ ಪುತ್ರಿ. ಆಗ ದಕ್ಷಕನ್ಯೆ. ನಿನಗೆ ಪೂರ್ವ ಜನ್ಮದ ಸ್ಮರಣೆ ಇದೆ ಎಂದೇ ನೆನಪಿಸುತ್ತಿದ್ದೇನೆ. ಸ್ಮರಣೆ ಇದೆ ತಾನೆ? ಹೇಳು.' ಶಿವನ ಮಾತನ್ನು ಕೇಳಿ ಪಾರ್ವತಿ ನಗುತ್ತ ನುಡಿದಳು. 'ನನಗೆ ಎಲ್ಲ ಸ್ಮರಣೆ ಇದೆ, ಪ್ರಾಣೇಶ್ವರ, ನೀನು ಸುಮ್ಮನಿರು.' ಬಳಿಕ ಶಿವ ಭೋಜನ ಸಿದ್ಧತೆಯನ್ನು ಮಾಡಿ ನಾರಾಯಣ ಮುಂತಾದ ಎಲ್ಲ ದೇವತೆಗಳಿಗೂ ನಾನಾ ವಸ್ತುಗಳ ಮನೋಹರವಾದ ಭೋಜನ ನೀಡಿದ. ಅವರೆಲ್ಲರೂ ಉಂಡು ನಾನಾರತ್ನಭೂಷಿತರಾಗಿ ಪತ್ನೀಪರಿವಾರ ಸಮೇತರಾಗಿ ಶಿವನಿಗೆ ನಮಿಸಿ ಹೊರಟು ಹೋದರು. ನಾರಾಯಣನಿಗೂ ಬ್ರಹ್ಮನಿಗೂ ಶಿವ ಸ್ವತಃ ಪ್ರಣಾಮ ಮಾಡಿದ. ಅವರು ಶಿವನನ್ನು ಆಲಿಂಗಿಸಿ ಹರಸಿ ಹೋದರು.

ಬಳಿಕ ಒಂದು ದಿನ ಹಿಮಾಲಯ ಮೇನೆಯರು ಮಗನಾದ ಮೈನಾಕನನ್ನು ಕರೆದು 'ಬೇಗನೆ ಶಿವ ಪಾರ್ವತಿಯರನ್ನು ಮನೆಗೆ ಕರೆದು ತಾ' ಎಂದರು. ಮೈನಾಕ ಬೇಗನೆ ಕೈಲಾಸಕ್ಕೆ ಹೋಗಿ ಪಾರ್ವತೀ ಪರಮೇಶ್ವರರನ್ನು ಕರೆತಂದ. ಪಾರ್ವತಿಯ ಆಗಮನದ ವಾರ್ತೆಯನ್ನು ಕೇಳಿ ಹಿಮಾಲಯನಗರದ ಬಾಲಕ ಬಾಲಕಿಯರು ವೃದ್ಧರು ಯುವತಿಯರೆಲ್ಲರೂ ಓಡೋಡಿ ಬಂದರು. ಮೇನೆ ಹಿಮಾಲಯರು ಮಕ್ಕಳು ಸೊಸೆಯರೊಂದಿಗೆ ಆನಂದದಿಂದ ಇದಿರುಗೊಂಡರು. ಪಾರ್ವತಿ ರಥದಿಂದಿಳಿದು ತಂದೆ ತಾಯಿ ಗುರುಗಳನ್ನು ನಮಿಸಿ ಆನಂದಸಾಗರ ಮಗ್ನಳಾದಳು. ಪಾರ್ವತಿಯನ್ನು ಅಪ್ಪಿಕೊಂಡು ಮೇನೆ ಆನಂದವಿಹ್ವಲಳಾದಳು. ಹಿಮಾಲಯನೂ ಆನಂದ ಪಟ್ಟ. ಹೋದ ಪ್ರಾಣ ತಿರುಗಿ ಬಂದಂತಾಗಿತ್ತು ಆತನಿಗೆ. ಮಗಳನ್ನು ತನ್ನ ಅರಮನೆಯಲ್ಲಿ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ಶಿವನಿಗೆ ಮತ್ತು ಗಣಗಳಿಗೆ ಮಧುಪರ್ಕಾದಿ ಉಪಚಾರಗಳನ್ನಿತ್ತ. ಶಿವ ತನ್ನ ಗಣಗಳೊಂದಿಗೆ ಮಾವನ ಮನೆಯಲ್ಲಿ ನಿತ್ಯ ಷೋಡಶೋಪಚಾರಗಳನ್ನು ಪಡೆಯುತ್ತ ವಾಸಮಾಡಿದ.

ರಾಧೆ, ಇದು ಶಿವವಿವಾಹದ ಮಂಗಳ ಕಥೆ. ಕೇಳುವವರಿಗೆ ಶೋಕಗಳನ್ನು ಕಳೆದು ಆನಂದ ನೀಡುವುದು. ಇನ್ನೇನು ಕೇಳಲು ಬಯಸುವೆ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರದನಾರಾಯಣ ಸಂವಾದದಲ್ಲಿ ರಾಧಾಕೃಷ್ಣಸಂವಾದದಲ್ಲಿ ಶಂಕರವಿವಾಹವೆಂಬ ನಲವತ್ತೈದನೆ ಅಧ್ಯಾಯ ಮುಗಿಯಿತು.*

—o—

**ರಾಧೆ:-** ಬಹು ಕಾಲದ ಹಿಂದೆ ಸತ್ತಿದ್ದ ಮನ್ಮಥನನ್ನು ಶಿವ ತಿರುಗಿ ಬದುಕಿಸಿ ಕೊಟ್ಟಾಗ ರತಿ ತನ್ನ ಪತಿಯನ್ನು ಹೊಂದಿ ಏನು ಮಾಡಿದಳು? ಹೆಣ್ಣಿಗೆ ತನ್ನ ಪತಿಯ ವಿರಹ, ಮರಣಕ್ಕಿಂತ ಹೆಚ್ಚು ಅಸಹನೀಯವಾಗಿರುತ್ತದೆ. ಪುನಃ ಮಿಲನವಾಯಿತೆಂದರೆ ಅಂಥ ಸುಖ ಪರಮದುರ್ಲಭ. ಶಿವ ಸತಿಯನ್ನು ಪುನಃ ವಿವಾಹವಾದಾಗ ವಿರಹದುಃಖವನ್ನೆಲ್ಲ ಮರೆತು ಆನಂದ ಹೊಂದಿ ಏನು ಮಾಡಿದ? ಪುರುಷರಿಗೆ ಪತ್ನೀ ವಿರಹ ಎಲ್ಲ ಶೋಕಕ್ಕಿಂತ ಅಧಿಕ. ಪುನಃ ಮಿಲನವಾದರೆ ಹೋದ ಪ್ರಾಣ ತಿರುಗಿ ಬಂದಂತಾಗುತ್ತದೆ. ರತಿ ತನ್ನ ಪತಿಯಿಂದ ಶಿವ ತನ್ನ ಪತ್ನಿಯಿಂದ ವಿರಹ ಹೊಂದಿದ್ದರು. ಅವರಿಬ್ಬರಿಗೂ ಪುನಃ ಮಿಲನವಾದಾಗ ಅವರು ಹೇಗೆ ಸುಖ ಪಟ್ಟರು? ಇದನ್ನು ಕೇಳಲು ಬಯಸುತ್ತೇನೆ. ನನಗೆ ಬಹಳ ತವಕವಿದೆ. ಕೃಪೆಯಿಂದ ವಿಸ್ತಾರವಾಗಿ ಹೇಳು. ಶಿವ ಪಾರ್ವತಿಯರ ಮತ್ತು ರತಿ ಮನ್ಮಥರ ಮೇಲನದ ಕಥೆ ಕೇಳುವವರಿಗೆ ಸಕಲ ಮಂಗಲದಾಯಕವಾಗಬಲ್ಲುದು.

**ನಾರಾಯಣ:-** ಹೀಗೆ ರಾಧೆ ಹೇಳಿದಾಗ ಕೃಷ್ಣ ನಕ್ಕು ಹೇಳಿದ.

**ಶ್ರೀಕೃಷ್ಣ:-** ಮೃತನಾದ ಮನ್ಮಥನನ್ನು ಪುನಃ ಪಡೆದ ರತಿ ಅವನನ್ನು ಶಿವವಿವಾಹ ಮಂದಿರದಿಂದ ತನ್ನ ಮನೆಗೆ ಕರೆದುತಂದು ಸಖಿಯರಿಂದ ಅವನಿಗೆ ನಾನಾ ಬಗೆಯ ಸುಂದರ ವೇಷ ತೊಡಿಸಿದಳು. ಅವಳ ಮನೋರಥವನ್ನು ಅರಿತ ಕಾಮಶಾಸ್ತ್ರ ವಿಧಾಯಕನಾದ ಮನ್ಮಥ ರತ್ನವಿಮಾನದಲ್ಲಿ ಅವಳನ್ನೇರಿಸಿಕೊಂಡು ವಿಹಾರಕ್ಕೆ ಹೊರಟ. ಸುಂದರವಾದ ಪರ್ವತಗಳು ನದಿ ನದಗಳು ದ್ವೀಪಗಳು ಸಮುದ್ರತೀರ, ಪುಷ್ಪೋದ್ಯಾನ, ಸ್ವರ್ಣಭೂಮಿ, ವಟಮೂಲಗಳು ಈ ಎಲ್ಲ ಕಡೆ, ದುಂಬಿಯ ಗಾನ ಕೋಗಿಲೆಯ ಹಾಡು, ಸುಗಂಧಭರಿತವಾದ ನೀರಿನ ತುಂತುರುಗಳನ್ನು ಹೊತ್ತ ತಂಗಾಳಿ ಇರುವೆಡೆಗಳಲ್ಲಿ ಸ್ತ್ರೀಯರ ಮನ ಸೆಳೆವ ಪ್ರದೇಶಗಳಲ್ಲೆಲ್ಲ ಶೃಂಗಾರ ಕ್ರೀಡೆಯನ್ನಾಡಿದ. ಪೂರ್ಣ ನೂರು ವರ್ಷಕಾಲ ಅವಳೊಡನೆ ಕೂಡಿ ಮೈ ಮರೆತು ಹಗಲು ರಾತ್ರಿಗಳೆಂಬ ಭೇದವನ್ನೆ ಅರಿಯದಾದ. ಇಬ್ಬರೂ ರತಿಶಾಸ್ತ್ರವಿಶಾರದರು. ಕ್ರೀಡೆಯಲ್ಲಿ ಯಾರೂ ಸೋಲಲಿಲ್ಲ. ರತಿ ಒಂದು ಕ್ಷಣ ಮನ್ಮಥನನ್ನು ಬಿಟ್ಟಿರಲಿಲ್ಲ. ಕಳೆದು ಹೋದ ರತ್ನ ತಿರುಗಿ ಸಿಕ್ಕಿದರೆ ಯಾರು ಬಿಡುತ್ತಾರೆ?

ಇತ್ತ ಶಿವ ಪಾರ್ವತಿಯರ ವಿಹಾರದ ಕಥೆಯೂ ಅನುಪಮವಾಗಿದೆ. ಪರಮಾಶ್ಚರ್ಯಕರ. ಕೇಳುವವರಿಗೆ ಕಿವಿಗೆ ಅಮೃತ ಸೇಚನೆಯಾದಂತೆ. ಸರ್ವಸಂತಾಪ ಪರಿಹಾರಕ, ಸುಖಪ್ರದ, ಪುಣ್ಯದಾಯಕ, ಮಂಗಳಕರ. ಮಾವನ ಮನೆಯಲ್ಲಿದ್ದ ಶಿವ ಅವನ ಅನುಮತಿ ಪಡೆದು ಪಾರ್ವತಿಯೊಂದಿಗೆ ವನವಿಹಾರಕ್ಕೆ ಹೊರಟ. ವಿಶ್ವಕರ್ಮ ನಿರ್ಮಿತವಾದ ರತ್ನವಿಮಾನವನ್ನೇರಿ ಶತಶೃಂಗ ಮಲಯ ಗಂಧಮಾದನ ಪರ್ವತಗಳಲ್ಲಿ ನಂದನ ಪುಷ್ಪಭದ್ರ ಪಾರಿಭದ್ರ ಭದ್ರಕ ಪುಲಿಂದ ಕಲಿಂದ ಪುಂಡ್ರ ಪಿಂಡಾರಕ ಅಂಧಕ ವನಗಳಲ್ಲಿ ಸಮುದ್ರ ತೀರಗಳಲ್ಲಿ ಅಸ್ತಾಚಲದ ಬಳಿಯ ಮನೋಹರವಾದ

ವಟಮೂಲದಲ್ಲಿ ಪಶುಪಕ್ಷಿವಿರಹಿತವಾದ ಏಕಾಂತ ಪ್ರದೇಶದಲ್ಲಿ ಶಿವ ಪಾರ್ವತಿಯೊಡನೆ ರಮಿಸಿದ. ತಾನು ಹಿಂದೆ ಸತಿಯ ಶರೀರವನ್ನು ಹೊತ್ತು ಎಲ್ಲೆಲ್ಲಿ ತಿರುಗಿದ್ದನೋ ಆ ಎಲ್ಲ ಪ್ರದೇಶಗಳನ್ನೂ ಪಾರ್ವತಿಗೆ ತೋರಿಸಿದ. ಎಲ್ಲ ಕಡೆ ಶೃಂಗಾರವಿಹಾರ ಮಾಡಿದರೂ ದಂಪತಿಗಳಿಗೆ ತೃಪ್ತಿಯಾಗಲಿಲ್ಲ. ಕೊನೆಗೆ ಜಗತ್ಪಿತನಾದ ಶಿವ ಸಾವಿರ ವರ್ಷಗಳ ಮಹಾಶೃಂಗಾರಕ್ರೀಡೆಗೆ ಆರಂಭಿಸಿದ.

ಮಾಯಾತೀತ, ಮಾಯೇಶ, ಮಾಯಾಸಕ್ತ, ತನ್ನ ಮಾಯೆಯಿಂದಲೆ ಕ್ರೀಡಿಸುತ್ತ ಕಾಲ ಕಳೆಯುತ್ತಿದ್ದುದನ್ನೆ ಅರಿಯಲಿಲ್ಲ. ಈಕೆ ಶಕ್ತಿ, ಅವನು ಶಕ್ತಿಮಾನ್. ಶಕ್ತಿ ಶಕ್ತಿವಂತರಿಗೆ ಪರಿಶ್ರಮವೆಂಬುದೇ ಇಲ್ಲ. ಪರಸ್ಪರ ವಿರಹದಿಂದ ಉಂಟಾಗಿದ್ದ ಎಲ್ಲ ಸಂತಾಪವನ್ನೂ ಮರೆತು ಒಂದೇ ಮನಸ್ಸಿನವರಾಗಿ ಮೈ ರೋಮಂಚಗೊಂಡು ಕಾಮ ಬಾಣಗಳಿಂದ ಎಚ್ಚರತಪ್ಪಿ ಹೂವಿನ ಹಾಸಿಗೆಯಲ್ಲಿ ನಗ್ನರಾಗಿ ಸುಖಸಂಭೋಗ ನಡೆಸಿದರು. ಅನ್ಯೋನ್ಯ ನಖದಂತಪ್ರಹಾರಗಳಿಂದ ಕ್ಷತ ವಿಕ್ಷತರಾದರು. ಚಂದನ ಅಗುರು ಕಸ್ತೂರೀ ಸಿಂದೂರ ಬಿಂದುಗಳಿಂದ ಪರಸ್ಪರ ಲಿಪ್ತರಾದರು. ಕಟ್ಟಿದ್ದ ಕೇಶಪಾಶ ಬಿಚ್ಚಿತು. ಹೂಮಾಲೆಗಳು ಹರಿದು ಬಿದ್ದುವು. ಗೆಜ್ಜೆ ಬಳೆ ಕುಂಡಲಗಳು ಧ್ವನಿ ಗೈದುವು. ಹೂವಿನ ಹಾಸಿಗೆಗಳು ಅಸ್ತವ್ಯಸ್ತವಾದುವು. ರತಿಶಕ್ತಿಯಲ್ಲಿ ಇಬ್ಬರೂ ಸಮಾನರಾದ್ದರಿಂದ ಅವರ ನಿರಂತರ ಕ್ರೀಡೆಯ ಪರಿಣಾಮವಾಗಿ ವಿಶ್ವಂಭರರಾದ ಅವರ ಭಾರವನ್ನು ಭೂಮಿ ತಡೆಯಲಾರದೆ ನಡುಗಿತು, ಪರ್ವತ ಅರಣ್ಯ ಸಾಗರ ಸಮೇತವಾಗಿ ಭೂಮಿ ಬಿರಿಯಿತು. ದಂಪತಿಗಳೀರ್ವರ ಮತ್ತು ಭೂಮಿಯ ಭಾರ ತಡೆಯಲಾರದೆ ಶೇಷನೂ ಕುಸಿಯಲು ತೊಡಗಿದ. ಆಗ ಅವನನ್ನು ಹೊತ್ತ ಕೂರ್ಮನೂ ಕುಸಿಯಲು ತೊಡಗಿದ. ಅದರಿಂದ ವಾಯುಗಳೂ ಪ್ರಾಣಗಳೂ ಶ್ರಮದಿಂದ ಸ್ತಂಭಿತರಾದರು. ಆಗ ಮೂಲೋಕವೂ ಭಯವಿಹ್ವಲವಾಯಿತು. ಬ್ರಹ್ಮಾದಿ ದೇವತೆಗಳೆಲ್ಲರೂ ವೈಕುಂಠಕ್ಕೆ ಧಾವಿಸಿ ನಾರಾಯಣನಲ್ಲಿ ಮೊರೆಹೊಕ್ಕರು. ಭಗವಾನ್ ನಾರಾಯಣ ಬ್ರಹ್ಮನಿಗೆ ಹೇಳಿದ.

**ನಾರಾಯಣ:-** ಬ್ರಹ್ಮ, ಶಿವಪಾರ್ವತಿಯರ ಶೃಂಗಾರಕ್ರೀಡೆಯ ಭಂಗಕ್ಕೆ ಇದು ಕಾಲವಲ್ಲ. ಕಾಲಕ್ಕೆ ಅನುಗುಣವಾದ ಕಾರ್ಯವೆ ಫಲ ನೀಡಬಲ್ಲುದು. ಸಾವಿರ ವರ್ಷಗಳು ಪೂರ್ಣವಾದಾಗ ಕ್ರೀಡೆ ಸ್ವೇಚ್ಛೆಯಿಂದಲೆ ಮುಕ್ತಾಯವಾಗುತ್ತದೆ. ಶಿವ ಬಯಸಿದ ಸಂಭೋಗವನ್ನು ನಡುವೆ ನಿಲ್ಲಿಸುವುದಾದರೂ ಯಾರಿಗೆ ತಾನೆ ಶಕ್ಯ? ಸ್ತ್ರೀ ಪುರುಷರ ರತಿಕ್ರೀಡೆಗೆ ಭಂಗತರುವವನಿಗೆ ಜನ್ಮಜನ್ಮಗಳಲ್ಲಿಯೂ ಸ್ತ್ರೀ ವಿಯೋಗವಾಗುವುದು. ಲಕ್ಷ ವರ್ಷಗಳ ಕಾಲ ಕಾಲಸೂತ್ರವಾಸವೂ ಉಂಟಾಗುವುದು. ಅವನ ಜ್ಞಾನ ಕೀರ್ತಿ ಸಂಪತ್ತು ಎಲ್ಲವೂ ನಶಿಸುವುವು.

ದೇವೇಂದ್ರ ರಂಭೆಯೊಡನೆ ರಮಿಸುತ್ತಿದ್ದಾಗ ವಿಘ್ನ ಉಂಟುಮಾಡಿದ್ದರಿಂದ ದುರ್ವಾಸನಿಗೆ ಪತ್ನೀ ವಿಯೋಗವಾಯಿತು. ಪುನಃ ಇನ್ನೊಬ್ಬಳನ್ನು ಮದುವೆಯಾಗಿ ಸಾವಿರ ದಿವ್ಯ ವರ್ಷಕಾಲ ಶಿವನನ್ನು ಆರಾಧಿಸಿ ವಿರಹತಾಪವನ್ನು ಕಳೆದು ಕೊಳ್ಳಬೇಕಾಯಿತು. ರೋಹಿಣೀ ಸಹಿತನಾಗಿ ಚಂದ್ರನಿದ್ದಾಗ ಗೌತಮ ವಿಘ್ನ ಉಂಟುಮಾಡಿ ಅಹಲ್ಯಾವಿಯೋಗ ಹೊಂದಿದ; ಪುಷ್ಕರದಲ್ಲಿ ಸಾವಿರವರ್ಷ ಕಾಲ ಶಿವನನ್ನು ಆರಾಧಿಸಿ ಪುನಃ ಅಹಲ್ಯೆಯನ್ನು ಪಡೆದ. ಬ್ರಹ್ಮಾಂಡಕ ಮುನಿ ತನ್ನ ಮಗ

ನಿರ್ಜನವಾದ ಅರಣ್ಯದಲ್ಲಿ ಹಗಲಿನಲ್ಲಿ ತನ್ನ ಪತ್ನಿಯೊಡನೆ ರಮಿಸುತ್ತಿದ್ದಾಗ ತಡೆದು ಆಮಗನನ್ನು ಕರೆದುಕೊಂಡು ಬಂದ ಪರಿಣಾಮವಾಗಿ ಅವನಿಗೆ ಮಗನ ವಿಯೋಗವಾಯಿತು; ಇನ್ನೊಂದು ಕಲ್ಪದಲ್ಲಿ ಶಿವನನ್ನು ಆರಾಧಿಸಿ ಪುತ್ರಲಾಭ ಹೊಂದಿ ತನ್ನ ದುಃಖವನ್ನು ಕಳೆದುಕೊಳ್ಳಬೇಕಾಯಿತು. ಹರಿಶ್ಚಂದ್ರ ಒಮ್ಮೆ ಒಬ್ಬ ಬೇಸಾಯಗಾರನು ಚಂಡಾಲಸ್ತ್ರೀಯೊಡನೆ ನಿರ್ಜನ ಪ್ರದೇಶದಲ್ಲಿ ಮೈಮರೆತಿದ್ದಾಗ ಅದನ್ನು ತಡೆದುದರ ಪರಿಣಾಮವಾಗಿ ವಿಶ್ವಾಮಿತ್ರ ಮಹರ್ಷಿ ಅವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿ ಬಹಳ ಹಿಂಸೆಕೊಟ್ಟ. ಬಳಿಕ ಸಕಲ ಸಂಪತ್ತನ್ನು ನೀಡುವ ಶಿವನನ್ನು ಆರಾಧಿಸಿ ಸಪರಿವಾರನಾಗಿ ನನ್ನ ವೈಕುಂಠಮಂದಿರವನ್ನು ಪಡೆದ. ಅಜಾಮಿಲ ಶ್ರೇಷ್ಠ ಬ್ರಾಹ್ಮಣ. ಚಂಡಾಲಸ್ತ್ರೀ ಸಂಗ ಮಾಡಿದ. ಆದರೂ ಭಯದಿಂದ ಯಾವ ದೇವತೆಗಳೂ ತಡೆಯಲಿಲ್ಲ. ಅವನು ಪ್ರಾರಬ್ಧವನ್ನು ಉಂಡು ತೀರಿಸಿದ ಬಳಿಕ ನನ್ನ ಭಕ್ತನಾಗಿ ಮುಕ್ತಿ ಹೊಂದಿದ. ನನ್ನ ನಾಮಸ್ಮರಣಮಾತ್ರದಿಂದ ನನ್ನ ಲೋಕವನ್ನು ಹೊಂದಿದ. ಎಲ್ಲವೂ ನಿಷೇಕದಿಂದಲೇ ಸಾಧ್ಯ. ನಿಷೇಕ ಬಲವತ್ತರವಾದುದು. ನಿಷೇಕಕ್ಕೆ ಫಲದಾತ ನಾನು. ಅಂಥ ನಿಷೇಕವನ್ನು ಯಾರು ತಡೆಯಬಲ್ಲರು? ದಿವ್ಯ ಸಾವಿರವರ್ಷಕಾಲದ ಈ ಸಂಭೋಗ ಮುಗಿದೊಡನೆ ಶಿವ ತನ್ನ ವೀರ್ಯವನ್ನು ನೆಲದ ಮೇಲೆ ಬೀಳಿಸುತ್ತಾನೆ. ಆ ವೀರ್ಯದಲ್ಲಿ ಸ್ಕಂದ ಹುಟ್ಟಿ ಬರುತ್ತಾನೆ. ಭಕ್ತರ ದುಃಖ ನಿವಾರಣೆ ಮಾಡುತ್ತಾನೆ. ನಾನು ಮಂಗಳ ಸ್ವರೂಪನಿರುವಾಗ ನಿಮಗೆ ಏತರ ಭಯ? ನೀವೆಲ್ಲ ಹಿಂತಿರುಗಿರಿ. ಶಿವ ಪಾರ್ವತಿಯೊಡನೆ ರಮಿಸಲಿ.

ಹೀಗೆ ಹೇಳಿ ನಾರಾಯಣ ತನ್ನ ಅಂತಃಪುರದೊಳಗೆ ನಡೆದ. ದೇವತೆಗಳು ಹಿಂತಿರುಗಿದರು. ಶಿವ ನಿರ್ವಿಘ್ನವಾಗಿ ರತಿಕೇಳಿಯಾಡಿದ.

**ನಾರಾಯಣ:-** ಶ್ರೀಕೃಷ್ಣ ರಾಧೆಗೆ ಹೀಗೆ ಹೇಳಿ ಚಂದನವನಕ್ಕೆ ಹೋಗಿ ಅವಳೊಡನೆ ಏಕಾಂತದಲ್ಲಿ ಸುಗಂಧಭರಿತಗಾಳಿ ಬೀಸುವ ಪುಷ್ಪೋದ್ಯಾನಗಳಲ್ಲಿ ಹೂವಿನ ಹಾಸಿಗೆಗಳಲ್ಲಿ ಕ್ರೀಡಿಸಿದ. ಕೋಗಿಲೆಯ ಸಂಗೀತ ದುಂಬಿಗಳ ನಾದಗಳಿಂದ ಯುಕ್ತವಾಗಿದ್ದು ಪ್ರೇಮಿಗಳಿಗೆ ಚೇತೋಹಾರಿಯಾದ ಆ ವನದಲ್ಲಿ ಕೃಷ್ಣನೊಡನೆ ರಮಿಸಿದ ರಾಧೆ ಸುಖದಲ್ಲಿ ಮೈ ಮರೆತಳು. ಕೃಷ್ಣನೂ ಮೈ ಮರೆತ. ಹೀಗೆ ರಾಧಾಕೃಷ್ಣರು ಜೊತೆಗೂಡಿ ರತಿಸುಖದಿಂದ ನಿಶ್ಶೇಷ್ಟರಾದರು. ನಾರದ, ಇನ್ನೇನು ಕೇಳಲು ಬಯಸುವೆ? ಈ ಮಂಗಳಕಾರ್ಯದ ಕಥೆಯನ್ನು ಆದರದಿಂದ ಕೇಳಿದರೆ ಎಂದೂ ಬಂಧುವಿರಹ ಉಂಟಾಗುವುದಿಲ್ಲ. ಮಹಾಶೋಕಸಾಗರದಲ್ಲಿ ಬಿದ್ದು ಅಗಲಿದ ಪತ್ನೀಪುತ್ರರನ್ನು ಬಂಧುಗಳನ್ನು ನೆನೆಯುವವನಿಗೆ ಒಂದು ತಿಂಗಳ ಕಾಲದ ಈ ಕಥಾ ಶ್ರವಣದಿಂದ ಫಲದೊರಕುವುದು.

**ಸೂತ:-** ಹೀಗೆ ಹೇಳಿ ಧರ್ಮಪುತ್ರ ನಾರಾಯಣ ಸುಮ್ಮನಾದ. ದೇವರ್ಷಿ ನಾರದ ಪುನಃ ತವಕದಿಂದ ಪ್ರಶ್ನೆ ಮಾಡಲು ತೊಡಗಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರದನಾರಾಯಣ ಸಂವಾದದಲ್ಲಿ ಮಂಗಲವರ್ಣನವೆಂಬ ನಲವತ್ತಾರನೆ ಅಧ್ಯಾಯ ಮುಗಿಯಿತು*

ವಟಮೂಲದಲ್ಲಿ ಪಶುಪಕ್ಷಿವಿರಹಿತವಾದ ಏಕಾಂತ ಪ್ರದೇಶದಲ್ಲಿ ಶಿವ ಪಾರ್ವತಿಯೊಡನೆ ರಮಿಸಿದ. ತಾನು ಹಿಂದೆ ಸತಿಯ ಶರೀರವನ್ನು ಹೊತ್ತು ಎಲ್ಲೆಲ್ಲಿ ತಿರುಗಿದ್ದನೋ ಆ ಎಲ್ಲ ಪ್ರದೇಶಗಳನ್ನೂ ಪಾರ್ವತಿಗೆ ತೋರಿಸಿದ. ಎಲ್ಲ ಕಡೆ ಶೃಂಗಾರವಿಹಾರ ಮಾಡಿದರೂ ದಂಪತಿಗಳಿಗೆ ತೃಪ್ತಿಯಾಗಲಿಲ್ಲ. ಕೊನೆಗೆ ಜಗತ್ಪಿತನಾದ ಶಿವ ಸಾವಿರ ವರ್ಷಗಳ ಮಹಾಶೃಂಗಾರಕ್ರೀಡೆಗೆ ಆರಂಭಿಸಿದ.

ಮಾಯಾತೀತ, ಮಾಯೇಶ, ಮಾಯಾಸಕ್ತ, ತನ್ನ ಮಾಯೆಯಿಂದಲೆ ಕ್ರೀಡಿಸುತ್ತ ಕಾಲ ಕಳೆಯುತ್ತಿದ್ದುದ್ದನ್ನೆ ಅರಿಯಲಿಲ್ಲ. ಈಕೆ ಶಕ್ತಿ, ಅವನು ಶಕ್ತಿಮಾನ್. ಶಕ್ತಿ ಶಕ್ತಿವಂತರಿಗೆ ಪರಿಶ್ರಮವೆಂಬುದೇ ಇಲ್ಲ. ಪರಸ್ಪರ ವಿರಹದಿಂದ ಉಂಟಾಗಿದ್ದ ಎಲ್ಲ ಸಂತಾಪವನ್ನೂ ಮರೆತು ಒಂದೇ ಮನಸ್ಸಿನವರಾಗಿ ಮೈ ರೋಮಂಚಗೊಂಡು ಕಾಮ ಬಾಣಗಳಿಂದ ಎಚ್ಚರತಪ್ಪಿ ಹೂವಿನ ಹಾಸಿಗೆಯಲ್ಲಿ ನಗ್ನರಾಗಿ ಸುಖಸಂಭೋಗ ನಡೆಸಿದರು. ಅನ್ಯೋನ್ಯ ನಖದಂತಪ್ರಹಾರಗಳಿಂದ ಕ್ಷತ ವಿಕ್ಷತರಾದರು. ಚಂದನ ಅಗುರು ಕಸ್ತೂರೀ ಸಿಂದೂರ ಬಿಂದುಗಳಿಂದ ಪರಸ್ಪರ ಲಿಪ್ತರಾದರು. ಕಟ್ಟಿದ್ದ ಕೇಶಪಾಶ ಬಿಚ್ಚಿತು. ಹೂಮಾಲೆಗಳು ಹರಿದು ಬಿದ್ದುವು. ಗೆಜ್ಜೆ ಬಳೆ ಕುಂಡಲಗಳು ಧ್ವನಿ ಗೈದುವು. ಹೂವಿನ ಹಾಸಿಗೆಗಳು ಅಸ್ತವ್ಯಸ್ತವಾದುವು. ರತಿಶಕ್ತಿಯಲ್ಲಿ ಇಬ್ಬರೂ ಸಮಾನರಾದ್ದರಿಂದ ಅವರ ನಿರಂತರ ಕ್ರೀಡೆಯ ಪರಿಣಾಮವಾಗಿ ವಿಶ್ವಂಭರರಾದ ಅವರ ಭಾರವನ್ನು ಭೂಮಿ ತಡೆಯಲಾರದೆ ನಡುಗಿತು, ಪರ್ವತ ಅರಣ್ಯ ಸಾಗರ ಸಮೇತವಾಗಿ ಭೂಮಿ ಬಿರಿಯಿತು. ದಂಪತಿಗಳೀರ್ವರ ಮತ್ತು ಭೂಮಿಯ ಭಾರ ತಡೆಯಲಾರದೆ ಶೇಷನೂ ಕುಸಿಯಲು ತೊಡಗಿದ. ಆಗ ಅವನನ್ನು ಹೊತ್ತ ಕೂರ್ಮನೂ ಕುಸಿಯಲು ತೊಡಗಿದ. ಆದರಿಂದ ವಾಯುಗಳೂ ಪ್ರಾಣಗಳೂ ಶ್ರಮದಿಂದ ಸ್ತಂಭಿತರಾದರು. ಆಗ ಮೂಲೋಕವೂ ಭಯವಿಹ್ವಲವಾಯಿತು. ಬ್ರಹ್ಮಾದಿ ದೇವತೆಗಳೆಲ್ಲರೂ ವೈಕುಂಠಕ್ಕೆ ಧಾವಿಸಿ ನಾರಾಯಣನಲ್ಲಿ ಮೊರೆಹೊಕ್ಕರು. ಭಗವಾನ್ ನಾರಾಯಣ ಬ್ರಹ್ಮನಿಗೆ ಹೇಳಿದ.

**ನಾರಾಯಣ:-** ಬ್ರಹ್ಮ, ಶಿವಪಾರ್ವತಿಯರ ಶೃಂಗಾರಕ್ರೀಡೆಯ ಭಂಗಕ್ಕೆ ಇದು ಕಾಲವಲ್ಲ. ಕಾಲಕ್ಕೆ ಅನುಗುಣವಾದ ಕಾರ್ಯವೆ ಫಲ ನೀಡಬಲ್ಲುದು. ಸಾವಿರ ವರ್ಷಗಳು ಪೂರ್ಣವಾದಾಗ ಕ್ರೀಡೆ ಸ್ವೇಚ್ಛೆಯಿಂದಲೆ ಮುಕ್ತಾಯವಾಗುತ್ತದೆ. ಶಿವ ಬಯಸಿದ ಸಂಭೋಗವನ್ನು ನಡುವೆ ನಿಲ್ಲಿಸುವುದಾದರೂ ಯಾರಿಗೆ ತಾನೆ ಶಕ್ಯ? ಸ್ತ್ರೀ ಪುರುಷರ ರತಿಕ್ರೀಡೆಗೆ ಭಂಗತರುವವನಿಗೆ ಜನ್ಮಜನ್ಮಗಳಲ್ಲಿಯೂ ಸ್ತ್ರೀ ವಿಯೋಗವಾಗುವುದು. ಲಕ್ಷ ವರ್ಷಗಳ ಕಾಲ ಕಾಲಸೂತ್ರವಾಸವೂ ಉಂಟಾಗುವುದು. ಅವನ ಜ್ಞಾನ ಕೀರ್ತಿ ಸಂಪತ್ತು ಎಲ್ಲವೂ ನಶಿಸುವುವು.

ದೇವೇಂದ್ರ ರಂಭೆಯೊಡನೆ ರಮಿಸುತ್ತಿದ್ದಾಗ ವಿಘ್ನ ಉಂಟುಮಾಡಿದ್ದರಿಂದ ದುರ್ವಾಸನಿಗೆ ಪತ್ನೀ ವಿಯೋಗವಾಯಿತು. ಪುನಃ ಇನ್ನೊಬ್ಬಳನ್ನು ಮದುವೆಯಾಗಿ ಸಾವಿರ ದಿವ್ಯ ವರ್ಷಕಾಲ ಶಿವನನ್ನು ಆರಾಧಿಸಿ ವಿರಹತಾಪವನ್ನು ಕಳೆದು ಕೊಳ್ಳಬೇಕಾಯಿತು. ರೋಹಿಣೀ ಸಹಿತನಾಗಿ ಚಂದ್ರನಿದ್ದಾಗ ಗೌತಮ ವಿಘ್ನ ಉಂಟುಮಾಡಿ ಅಹಲ್ಯಾವಿಯೋಗ ಹೊಂದಿದ; ಪುಷ್ಕರದಲ್ಲಿ ಸಾವಿರವರ್ಷ ಕಾಲ ಶಿವನನ್ನು ಆರಾಧಿಸಿ ಪುನಃ ಅಹಲ್ಯೆಯನ್ನು ಪಡೆದ. ಬ್ರಹ್ಮಾಂಡಕ ಮುನಿ ತನ್ನ ಮಗ

ನಿರ್ಜನವಾದ ಅರಣ್ಯದಲ್ಲಿ ಹಗಲಿನಲ್ಲಿ ತನ್ನ ಪತ್ನಿಯೊಡನೆ ರಮಿಸುತ್ತಿದ್ದಾಗ ತಡೆದು ಆಮಗನನ್ನು ಕರೆದುಕೊಂಡು ಬಂದ ಪರಿಣಾಮವಾಗಿ ಅವನಿಗೆ ಮಗನ ವಿಯೋಗವಾಯಿತು; ಇನ್ನೊಂದು ಕಲ್ಪದಲ್ಲಿ ಶಿವನನ್ನು ಆರಾಧಿಸಿ ಪುತ್ರಲಾಭ ಹೊಂದಿ ತನ್ನ ದುಃಖವನ್ನು ಕಳೆದುಕೊಳ್ಳಬೇಕಾಯಿತು. ಹರಿಶ್ಚಂದ್ರ ಒಮ್ಮೆ ಒಬ್ಬ ಬೇಸಾಯಗಾರನು ಚಂಡಾಲಸ್ತ್ರೀಯೊಡನೆ ನಿರ್ಜನ ಪ್ರದೇಶದಲ್ಲಿ ಮೈಮರೆತಿದ್ದಾಗ ಅದನ್ನು ತಡೆದುದರ ಪರಿಣಾಮವಾಗಿ ವಿಶ್ವಾಮಿತ್ರ ಮಹರ್ಷಿ ಅವನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿ ಬಹಳ ಹಿಂಸೆಕೊಟ್ಟ. ಬಳಿಕ ಸಕಲ ಸಂಪತ್ತನ್ನು ನೀಡುವ ಶಿವನನ್ನು ಆರಾಧಿಸಿ ಸಪರಿವಾರನಾಗಿ ನನ್ನ ವೈಕುಂಠಮಂದಿರವನ್ನು ಪಡೆದ. ಅಜಾಮಿಲ ಶ್ರೇಷ್ಠ ಬ್ರಾಹ್ಮಣ. ಚಂಡಾಲಸ್ತ್ರೀ ಸಂಗ ಮಾಡಿದ. ಆದರೂ ಭಯದಿಂದ ಯಾವ ದೇವತೆಗಳೂ ತಡೆಯಲಿಲ್ಲ. ಅವನು ಪ್ರಾರಬ್ಧವನ್ನು ಉಂಡು ತೀರಿಸಿದ ಬಳಿಕ ನನ್ನ ಭಕ್ತನಾಗಿ ಮುಕ್ತಿ ಹೊಂದಿದ. ನನ್ನ ನಾಮಸ್ಮರಣಮಾತ್ರದಿಂದ ನನ್ನ ಲೋಕವನ್ನು ಹೊಂದಿದ. ಎಲ್ಲವೂ ನಿಷೇಕದಿಂದಲೇ ಸಾಧ್ಯ. ನಿಷೇಕ ಬಲವತ್ತರವಾದುದು. ನಿಷೇಕಕ್ಕೆ ಫಲದಾತ ನಾನು. ಅಂಥ ನಿಷೇಕವನ್ನು ಯಾರು ತಡೆಯಬಲ್ಲರು? ದಿವ್ಯ ಸಾವಿರವರ್ಷಕಾಲದ ಈ ಸಂಭೋಗ ಮುಗಿದೊಡನೆ ಶಿವ ತನ್ನ ವೀರ್ಯವನ್ನು ನೆಲದ ಮೇಲೆ ಬೀಳಿಸುತ್ತಾನೆ. ಆ ವೀರ್ಯದಲ್ಲಿ ಸ್ಕಂದ ಹುಟ್ಟಿ ಬರುತ್ತಾನೆ. ಭಕ್ತರ ದುಃಖ ನಿವಾರಣೆ ಮಾಡುತ್ತಾನೆ. ನಾನು ಮಂಗಳ ಸ್ವರೂಪನಿರುವಾಗ ನಿಮಗೆ ಏತರ ಭಯ? ನೀವೆಲ್ಲ ಹಿಂತಿರುಗಿರಿ. ಶಿವ ಪಾರ್ವತಿಯೊಡನೆ ರಮಿಸಲಿ.

ಹೀಗೆ ಹೇಳಿ ನಾರಾಯಣ ತನ್ನ ಅಂತಃಪುರದೊಳಗೆ ನಡೆದ. ದೇವತೆಗಳು ಹಿಂತಿರುಗಿದರು. ಶಿವ ನಿರ್ವಿಘ್ನವಾಗಿ ರತಿಕೇಳಿಯಾಡಿದ.

**ನಾರಾಯಣ:-** ಶ್ರೀಕೃಷ್ಣ ರಾಧೆಗೆ ಹೀಗೆ ಹೇಳಿ ಚಂದನವನಕ್ಕೆ ಹೋಗಿ ಅವಳೊಡನೆ ಏಕಾಂತದಲ್ಲಿ ಸುಗಂಧಭರಿತಗಾಳಿ ಬೀಸುವ ಪುಷ್ಪೋದ್ಯಾನಗಳಲ್ಲಿ ಹೂವಿನ ಹಾಸಿಗೆಗಳಲ್ಲಿ ಕ್ರೀಡಿಸಿದ. ಕೋಗಿಲೆಯ ಸಂಗೀತ ದುಂಬಿಗಳ ನಾದಗಳಿಂದ ಯುಕ್ತವಾಗಿದ್ದು ಪ್ರೇಮಿಗಳಿಗೆ ಚೇತೋಹಾರಿಯಾದ ಆ ವನದಲ್ಲಿ ಕೃಷ್ಣನೊಡನೆ ರಮಿಸಿದ ರಾಧೆ ಸುಖದಲ್ಲಿ ಮೈ ಮರೆತಳು. ಕೃಷ್ಣನೂ ಮೈ ಮರೆತ. ಹೀಗೆ ರಾಧಾಕೃಷ್ಣರು ಜೊತೆಗೂಡಿ ರತಿಸುಖದಿಂದ ನಿಶ್ಚೇಷ್ಟರಾದರು. ನಾರದ, ಇನ್ನೇನು ಕೇಳಲು ಬಯಸುವೆ? ಈ ಮಂಗಳಕಾರ್ಯದ ಕಥೆಯನ್ನು ಆದರದಿಂದ ಕೇಳಿದರೆ ಎಂದೂ ಬಂಧುವಿರಹ ಉಂಟಾಗುವುದಿಲ್ಲ. ಮಹಾಶೋಕಸಾಗರದಲ್ಲಿ ಬಿದ್ದು ಅಗಲಿದ ಪತ್ನೀಪುತ್ರರನ್ನು ಬಂಧುಗಳನ್ನು ನೆನೆಯುವವನಿಗೆ ಒಂದು ತಿಂಗಳ ಕಾಲದ ಈ ಕಥಾ ಶ್ರವಣದಿಂದ ಫಲದೊರಕುವುದು.

**ಸೂತ:-** ಹೀಗೆ ಹೇಳಿ ಧರ್ಮಪುತ್ರ ನಾರಾಯಣ ಸುಮ್ಮನಾದ. ದೇವರ್ಷಿ ನಾರದ ಪುನಃ ತವಕದಿಂದ ಪ್ರಶ್ನೆ ಮಾಡಲು ತೊಡಗಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರದನಾರಾಯಣ ಸಂವಾದದಲ್ಲಿ ಮಂಗಲವರ್ಣನವೆಂಬ ನಲವತ್ತಾರನೆ ಅಧ್ಯಾಯ ಮುಗಿಯಿತು*

## ಅಧ್ಯಾಯ - ೪೭

**ನಾರದ:-** ಕ್ರೀಡೆಯಾದ ಬಳಿಕ ರಾಧೆ ಕೃಷ್ಣನಲ್ಲಿ ಏನು ಕೇಳಿದಳು? ಯಾವ ಕಥೆಯನ್ನು ಕೃಷ್ಣ ಹೇಳಿದ?

**ನಾರಾಯಣ:-** ಮಲಯದ್ರೋಣಿಯ ಮನೋಹರವಾದ ವಟಮೂಲದಲ್ಲಿ ರಾಧೆ ಕೃಷ್ಣನಲ್ಲಿ ಇಂದ್ರನ ದರ್ಪಭಂಗದ ವೃತ್ತಾಂತವನ್ನು ಕೇಳಿದಳು.

**ರಾಧೆ:-** ಹರಿ, ಶಿವನ ದರ್ಪಭಂಗವನ್ನೂ ಪಾರ್ವತಿಯ ದರ್ಪಭಂಗವನ್ನೂ ಅವರಿಬ್ಬರ ವಿವಾಹವನ್ನೂ ಕೇಳಿದ್ದಾಯಿತು. ಈಗ ಇಂದ್ರನ ದರ್ಪಭಂಗವನ್ನು ಕೇಳುವ ಬಯಕೆ. ಕ್ರಮೇಣ ಉಳಿದವರ ವೃತ್ತಾಂತವನ್ನೂ ವಿವರಿಸಿ ಹೇಳು.

**ಶ್ರೀಕೃಷ್ಣ:-** ಇಂದ್ರನ ದರ್ಪಭಂಗ ಮೂಲೋಕದಲ್ಲಿ ಪ್ರಸಿದ್ಧವಿದೆ. ಸುಂದರವಾಗಿದ್ದು ಕೇಳಲು ಕಿವಿಗೆ ಅಮೃತದಂತಿದೆ, ಕೇಳು. ಹಿಂದೆ ಇಂದ್ರ ನೂರು ಯಜ್ಞಗಳನ್ನು ಮಾಡಿ ಸರ್ವದೇವಾಧಿಪತಿಯಾಗಿ ಮೆರೆದ. ದಿನೇ ದಿನೇ ಅವನ ಐಶ್ವರ್ಯ ಬೆಳೆಯಿತು. ಬೃಹಸ್ಪತಿ ಅವನಿಗೆ ಒಂದು ಸಿದ್ಧಮಂತ್ರದ ದೀಕ್ಷೆ ಇತ್ತ. ಆ ಮಹಾ ಮಂತ್ರವನ್ನು ಪುಷ್ಕರದಲ್ಲಿ ನೂರು ವರ್ಷಕಾಲ ಅವನು ಜಪಿಸಿ ಸಿದ್ಧಿ ಪಡೆದ. ಪೂರ್ಣ ಮನೋರಥನೆನಿಸಿದ. ಸಂಪತ್ತಿನಿಂದ ವಿವೇಕ ಕಳೆದುಕೊಂಡವನು ಬ್ರಹ್ಮ ಸ್ವರೂಪಳಾದ ಪ್ರಕೃತಿಯನ್ನು ಲೆಕ್ಕಿಸುವುದಿಲ್ಲ. ಅವಳ ಕೋಪದ ಫಲವಾಗಿ ಅವನಿಗೆ ಗುರುಶಾಪ ಬಂದಿತು. ಪ್ರಕೃತಿಯ ಶಾಪದಿಂದಾಗಿ ಬುದ್ಧಿಹೀನನಾದ ಇಂದ್ರನೊಮ್ಮೆ ತನ್ನ ಓಲಗಕ್ಕೆ ಬೃಹಸ್ಪತಿ ಬಂದಾಗ ತಾನು ಮದದಿಂದ ಎದ್ದು ನಿಂತು ನಮಿಸದೆ ಅಪಮಾನಗೈದ. ಬೃಹಸ್ಪತಿ ಕುಪಿತನಾಗಿ ಅಲ್ಲಿ ನಿಲ್ಲದೆ ತಪಸ್ಸಿಗೆ ಕಾಡಿಗೆ ಹೊರಟುಹೋದ. ಮನದೊಳಗೆ ಖಿನ್ನನಾಗಿ, ಈ ದೇವೇಂದ್ರನ ಸಂಪತ್ತು ಹೊರಟು ಹೋಗಲಿ ಎಂದು ಹೇಳಿಕೊಂಡ. ದೇವೇಂದ್ರ ಎಚ್ಚೆತ್ತುಕೊಂಡು, ಗುರು ಎಲ್ಲಿಗೆ ಹೋದನೆಂದು ವೇಗದಿಂದ ಎದ್ದು, ತಾರೆಯ ಬಳಿಗೆ ಹೋಗಿ ಭಕ್ತಿಯಿಂದ ನಮಿಸಿದ. ಕೈಮುಗಿದು ತಲೆಬಾಗಿ ಎಲ್ಲವನ್ನೂ ಹೇಳಿಕೊಂಡು ಗಟ್ಟಿಯಾಗಿ ಅತ್ತುಬಿಟ್ಟ. ತಾರೆಗೂ ಕಣ್ಣಲ್ಲಿ ನೀರು ಬಂದಿತು. 'ಮಗು, ಹೋಗು, ಮನೆಗೆ ಹೋಗು, ಈಗ ಗುರುವಿನ ದರ್ಶನವಾಗಲಾರದು. ಇದು ನಿನಗೆ ಕೆಟ್ಟಕಾಲ. ಇದು ಕಳೆಯಲಿ. ಆಗ ಗುರು ಸಿಗುತ್ತಾರೆ. ಪುನಃ ಸಂಪತ್ತು ಬರುತ್ತದೆ. ಈಗ ನೀನು ಮಾಡಿದ ದುಷ್ಕರ್ಮಕ್ಕೆ ಫಲ ಉಣ್ಣು. ಕೆಟ್ಟಕಾಲದಲ್ಲಿ ಗುರು ಕೋಪಿಸಿಕೊಳ್ಳುತ್ತಾರೆ. ಸುಕಾಲದಲ್ಲಿ ಒಲಿಯುತ್ತಾರೆ. ಈ ಸುಕಾಲ ದುಷ್ಕಾಲಗಳೆ ಸುಖದುಃಖಗಳಿಗೆ ಕಾರಣ.' ಹೀಗೆ ಹೇಳಿ ತಾರೆ ಸುಮ್ಮನಾದಳು. ಬಳಿಕ ಒಂದುದಿನ ಸ್ನಾನಕ್ಕಾಗಿ ಗಂಗಾನದೀ ತೀರಕ್ಕೆ ಹೋಗಿದ್ದಾಗ ದೇವೇಂದ್ರನಿಗೆ ಅಹಲ್ಯೆಯ ದರ್ಶನವಾಯಿತು. ಸ್ನಾನ ಮಾಡುತ್ತಿದ್ದ ಆ ಸುಂದರಿಯನ್ನು ಕಂಡು ದೇವೇಂದ್ರನಿಗೆ ಮೋಹ ಉಂಟಾಯಿತು. ಸ್ನಾನ ಮಾಡುವುದನ್ನು ಬಿಟ್ಟು

ಗೌತಮಮುನಿಯ ವೇಷ ಧರಿಸಿ ಹೋಗಿ ಅವಳನ್ನು ಬರಸೆಳೆದು ಕೂಡಿದ. ಅವಳು ಶೃಂಗಾರರಸದಲ್ಲಿ ಮುಳುಗಿ ಮೈಮರೆತಳು. ಇಂದ್ರನೂ ಮೈಮರೆತ. ಅಷ್ಟರಲ್ಲಿ ಗೌತಮ ಮುನಿ ಬಂದು ನೋಡಿ ಕುಪಿತನಾಗಿ ಬೆಂಕಿಯಂತಾದ. ಒಡನೆ ಇಂದ್ರ ಎಚ್ಚೆತ್ತುಕೊಂಡು ಮುನಿಯ ಕಾಲುಗಳನ್ನು ಹಿಡಿದುಕೊಂಡ. ಆದರೆ ಮುನಿಯ ಮುಖ ಕಣ್ಣುಗಳು ಕೋಪದಿಂದ ಕೆಂಪಾಗಿದ್ದುವು. ಆತ ಶಪಿಸಿದ.

**ಗೌತಮ:-** ಹೇ ಸುರಶ್ರೇಷ್ಠ, ಕಶ್ಯಪಪುತ್ರ! ನಿನಗೆ ಧಿಕ್ಕಾರ. ಸೃಷ್ಟಿಕರ್ತನ ಮೊಮ್ಮಗನಾಗಿದ್ದೂ ನಿನಗೆ ಏಕೆ ಈ ದುರ್ಬುದ್ಧಿ? ಜ್ಞಾನಿಯಾಗಿದ್ದು ವೇದದ ವಿಧಿ ನಿಷೇಧಗಳನ್ನು ಅರಿತವನು ಏಕೆ ಈ ಪರಸ್ತ್ರೀ ವ್ಯಾಮೋಹವಿಟ್ಟುಕೊಂಡಿರುವೆ? ನಿನ್ನ ಮೈಯೆಲ್ಲ ಸಾವಿರ ಯೋನಿಚಿಹ್ನೆ ಮೂಡಲಿ. ಒಂದು ವರ್ಷ ಕಾಲ ಕಳೆದ ಬಳಿಕ ಸೂರ್ಯಾರಾಧನೆಯಿಂದ ಆ ಚಿಹ್ನೆಗಳು ಕಣ್ಣುಗಳಾಗಲಿ. ನನ್ನ ಪ್ರಾಣಪ್ರಿಯೆಯನ್ನು ನೀನು ಕೆಡಿಸಿರುವುದರಿಂದ ನನ್ನ ಶಾಪದಿಂದಲೂ ಗುರುವಿನ ಕೋಪದಿಂದಲೂ ನಿನ್ನ ಸಂಪತ್ತು ಅಳಿಯಲಿ. ಗುರು ಸಿಟ್ಟಾಗದಿರಲೆಂದು ನಾನು ನಿನ್ನ ಪ್ರಾಣವನ್ನು ಅಪಹರಿಸುತ್ತಿಲ್ಲ. ನೀನು ಬಹಳ ಬಂಧುವೂ ಆಗಿರುವುದರಿಂದ ಬಂಧುವಿಯೋಗ ಭೀತಿಯಿಂದಲೂ ನಿನ್ನನ್ನು ಬಿಟ್ಟಿದ್ದೇನೆ. ಏಳು, ಏಳು, ಹೋಗು ನಿನ್ನ ಮನೆಗೆ. ಶುಭವಾಗಲಿ ಅಶುಭವಾಗಲಿ ಎಲ್ಲವೂ ಕರ್ಮಾಧೀನವೆ ಇರುತ್ತದೆ.'

ಮುನಿಯ ಆದೇಶದಂತೆ ಇಂದ್ರ ತಪಸ್ವಿಯಾಗಿ ಪುಷ್ಕರಕ್ಕೆ ನಡೆದ. ಭಕ್ತಿಯಿಂದ ಸೂರ್ಯಾರಾಧನ ಮಾಡಿ ಸ್ವಸ್ಥನಾದ. ಕಾಲಿಗೆ ಬಿದ್ದ ಅಹಲ್ಯೆಗೆ ಮುನಿ ಹೇಳಿದ, 'ಕಾಡಿಗೆ ಹೋಗಿ ಬಹುಕಾಲ ಕಲ್ಲಾಗಿ ಬಿದ್ದಿರು. ನೀನು ಮನಃಪೂರ್ವಕ ಇಂದ್ರನನ್ನು ಕೂಡಲಿಲ್ಲ ಎನ್ನುವುದು ನನಗೆ ಗೊತ್ತು. ಆದರೂ ನೀನು ಕೆಟ್ಟಿರುವಿ. ನನಗೆ ನೀನು ತಕ್ಕವಳಲ್ಲ. ಬಯಕೆ ಇದ್ದಾಗಲಿ ಇಲ್ಲದೆಯೆ ಆಗಲಿ ಪತ್ನಿ ಪರಪುರುಷನ ವೀರ್ಯವನ್ನು ಧರಿಸಿದರೆ ಅವಳು ಪತಿಗೆ ಸ್ವೀಕಾರ್ಯಳಾಗುವುದಿಲ್ಲ. ಆದರೆ ಬಯಕೆ ಇಲ್ಲದಿದ್ದವಳು ಪ್ರಾಯಶ್ಚಿತ್ತದಿಂದ ಶುದ್ಧಳಾಗುವಳು. ಬಯಕೆ ಇದ್ದವಳು ಮಾಡಿದ ದುಷ್ಕರ್ಮಫಲವನ್ನು ಉಂಡೇ ಶುದ್ಧಳಾಗುವಳು. ಅವಳು ಪಿತೃಕಾರ್ಯ ದೇವಕಾರ್ಯ ಪೂಜೆಗಳಲ್ಲಿ ಪಾಕಮಾಡಲು ಅಧಿಕಾರವಿಲ್ಲದವಳಾಗುತ್ತಾಳೆ. ಅರವತ್ತುಸಾವಿರ ವರ್ಷ ಕಾಲ ಕಾಲಸೂತ್ರ ನರಕದಲ್ಲಿ ಬೀಳುತ್ತಾಳೆ.' ಮುನಿಯ ಮಾತನ್ನು ಕೇಳಿ ಅಹಲ್ಯೆ ಅವನಿಗೆ ನಮಿಸಿ 'ನಾಥ! ನಾಥ!' ಎಂದು ಅಳುತ್ತ ಕಾಡಿಗೆ ಹೋದಳು. ಅರವತ್ತು ಸಾವಿರ ವರ್ಷಕಾಲ ಅವಳು ಕಲ್ಲಾಗಿದ್ದು ಶ್ರೀರಾಮನ ಪಾದಸ್ಪರ್ಶದಿಂದ ಶುದ್ಧಳಾದಳು. ಮೂಲೋಕವನ್ನು ಮರುಳು ಮಾಡಬಲ್ಲ ಸುಂದರಿಯಾಗಿ ಮುನಿಯ ಬಳಿಗೆ ಬಂದಳು. ಮುನಿ ಅವಳನ್ನು ಪರಿಗ್ರಹಿಸಿದ.

ರಾಧೆ, ಇಂದ್ರನ ಇನ್ನೊಂದು ವೃತ್ತಾಂತವನ್ನು ಹೇಳುತ್ತೇನೆ, ಕೇಳು. ಒಮ್ಮೆ ಗುರು ಕೋಪದಿಂದಲೂ ಪ್ರಕೃತಿಯ ಶಾಪದಿಂದಲೂ ಇಂದ್ರನಿಗೆ ಬ್ರಹ್ಮಹತ್ಯೆ ಪೀಡಿಸಿತು. ಅವನನ್ನು ಗುರು ತ್ಯಜಿಸಿದ್ದ. ದುರ್ದೈವ ಅಂಟಿಕೊಂಡು ಬಂದಿತ್ತು. ಅದರ ಪರಿಣಾಮವಾಗಿ ದೈತ್ಯರ ಕೈಮೇಲಾಯಿತು. ಭಯಪಟ್ಟು ಇಂದ್ರ ಬ್ರಹ್ಮನನ್ನು ಮೊರೆ ಹೊಕ್ಕ. ಬ್ರಹ್ಮ 'ವಿಶ್ವರೂಪನನ್ನು ಪುರೋಹಿತನನ್ನಾಗಿ ವರಿಸು' ಎಂದ. ಇಂದ್ರ ಹಾಗೇ

ಮಾಡಿದ. ಆದರೆ ವಿಶ್ವರೂಪ ಒಬ್ಬ ದೈತ್ಯನ ಮಗಳ ಮಗನಾಗಿದ್ದು ದೈತ್ಯಪಕ್ಷಪಾತಿ ಎಂದು ತಿಳಿದಾಗ ಅವನ ಶಿರಸ್ಸನ್ನು ಕತ್ತರಿಸಿದ, ಇಂದ್ರ. ವಿಶ್ವರೂಪನ ತಂದೆ ತ್ವಷ್ಟ್ರ, ಕುಪಿತನಾಗಿ 'ಇಂದ್ರಶತ್ರು, ಬೆಳೆದು ಬಾ' ಎನ್ನುತ್ತ ಯಜ್ಞ ಮಾಡಿದ. ಆಗ ಯಜ್ಞಕುಂಡದಿಂದ ಎದ್ದು ಬಂದವ ವೃತ್ರನೆಂಬ ಮಹಾ ಅಸುರ. ಅವನು ಅನಾಯಾಸವಾಗಿ ದೇವತೆಗಳನ್ನು ಪರಾಭವಗೊಳಿಸಿದ. ಇಂದ್ರ ಆಗ ದಧೀಚಿ ಮಹರ್ಷಿಯ ಬೆನ್ನೆಲುಬಿನಿಂದ ಭಯಂಕರವಾದ ವಜ್ರಾಯುಧವನ್ನು ಮಾಡಿಕೊಂಡು ಅದರಿಂದ ದೇವಕಂಟಕನಾದ ವೃತ್ರನನ್ನು ಕೊಂದ. ಆಗಲೆ ಬ್ರಹ್ಮಹತ್ಯೆ ಇಂದ್ರನನ್ನು ಬೆನ್ನಟ್ಟಿತು. ಅವಳು ಕೆಂಪುಬಟ್ಟೆ ಉಟ್ಟ ಸ್ತ್ರೀರೂಪಿಣಿ, ಏಳು ತಾಳೆ ಮರಗಳಷ್ಟು ಎತ್ತರ, ಒಣಗಿದ ಗಂಟಲು ತುಟಿ ಬಾಯಿಗಳು. ಕೋರೆ ದಾಡೆಗಳು. ಕೈಯಲ್ಲಿ ಖಡ್ಗ. ಬಲಿಷ್ಠಳಾಗಿದ್ದಳು. ವೇಗದಿಂದ ಬೆನ್ನಟ್ಟಿ ಬರುವ ದಯಾಹೀನಳಾದ ಆ ಭಯಂಕರ ಸ್ತ್ರೀಯನ್ನು ಕಂಡು ದೇವೇಂದ್ರ ಗುರುವಿನ ಪಾದವನ್ನು ಸ್ಮರಿಸುತ್ತ ಸ್ಮರಿಸುತ್ತ ಮಾನಸ ಸರೋವರದೊಳಗಿನ ಒಂದು ಕಮಲದ ನಾಳದೊಳಗೆ ಪ್ರವೇಶಿಸಿದ. ಅಲ್ಲಿಗೆ ಬ್ರಹ್ಮಹತ್ಯೆ ಪ್ರವೇಶಿಸುವಂತಿರಲಿಲ್ಲ. ಏಕೆಂದರೆ ಅದಕ್ಕೆ ಬ್ರಹ್ಮನ ಶಾಪ ಕಾರಣ. ಅದರಿಂದ ಅವಳು ಸರೋವರತೀರದ ಆಲದ ಮರದ ರೆಂಬೆಯಲ್ಲಿ ಕುಳಿತಳು. ಬಳಿಕ ನಹುಷಚಕ್ರವರ್ತಿ ಮೂಲೋಕದೊಡೆಯನಾದ. ಬಲಿಷ್ಠನಾಗಿ ದುರ್ಬಲರಾದ ದೇವತೆಗಳಲ್ಲಿ ಶಚೀದೇವಿಯನ್ನು ಕೊಡಲು ಕೇಳಿದ. ಶಚಿ ಭಯಗೊಂಡು ತಾರೆಯನ್ನು ಮೊರೆ ಹೊಕ್ಕಳು. ತಾರೆ ಪತಿಯಾದ ಬೃಹಸ್ಪತಿಯೆ ಇದಕ್ಕೆಲ್ಲ ಕಾರಣವೆಂದು ಆಕ್ಷೇಪಿಸಿ ಶಚಿಯನ್ನು ತನ್ನ ರಕ್ಷಣೆಯಲ್ಲಿ ಇಟ್ಟುಕೊಂಡಳು. ಬೃಹಸ್ಪತಿ ಶಚಿಗೆ ಆಶ್ವಾಸನೆ ಇತ್ತು ಮಾನಸ ಸರೋವರಕ್ಕೆ ಹೋಗಿ ಇಂದ್ರನನ್ನು ಕರೆದನು.

**ಬೃಹಸ್ಪತಿ:-** 'ಏಳು ಎದ್ದೇಳು, ಓ ಇಂದ್ರ, ಭಯ ಪಡಬೇಡ, ನಾನಿದ್ದೇನೆ. ನಾನು ನಿನ್ನ ಗುರು. ಧ್ವನಿಯಿಂದಲೆ ಗುರುತು ಹಿಡಿದು ನನ್ನ ಬಳಿಗೆ ಬಾ.' ಈ ಮಾತನ್ನು ಕೇಳಿದೊಡನೆ ಧ್ವನಿಯಿಂದ ಬೃಹಸ್ಪತಿ ಎಂದು ಗುರುತು ಹಿಡಿದು ಇಂದ್ರ ನಿರ್ಭಯದಿಂದ ಎದ್ದು ಬಂದ. ಸೂಕ್ಷ್ಮರೂಪವನ್ನು ಬಿಟ್ಟು ನಿಜರೂಪ ಧರಿಸಿ ಬಂದು ಬೃಹಸ್ಪತಿಯನ್ನು ನಮಿಸಿದ. ಬೃಹಸ್ಪತಿಯ ಕೋಪ ಮೊದಲೇ ತಣ್ಣಗಾಗಿತ್ತು. ಅಳುತ್ತ ಭಯದಿಂದ ನಡುಗುತ್ತ ತನ್ನ ಕಾಲಿಗೆ ಬಿದ್ದಿದ್ದ ಇಂದ್ರನನ್ನು ಕಂಡ ಬಳಿಕ ಬೃಹಸ್ಪತಿ ಅವನನ್ನು ಎದೆಗೆ ತಬ್ಬಿಕೊಂಡು ಕಣ್ಣೀರು ಸುರಿಸಿದ. ಇಂದ್ರ ಮೈರೋಮಾಂಚ ಗೊಂಡು ಭಕ್ತಿಯಿಂದ ತಲೆಬಾಗಿ ಕೈಮುಗಿದು ಸ್ತುತಿಸಿದ.

**ಇಂದ್ರ:-** ಪೂಜ್ಯರೆ, ನನ್ನ ತಪ್ಪನ್ನು ಮನ್ನಿಸಿ. ತಾವು ಕೃಪಾನಿಧಿಗಳು. ಭೃತ್ಯನ ಅಪರಾಧವನ್ನು ಸಜ್ಜನರು ಎಂದೂ ಪರಿಗಣಿಸುವುದಿಲ್ಲ. ದುರ್ಬಲನಿರಲಿ ಬಲಿಷ್ಠನಿರಲಿ ತನ್ನ ಹೆಂಡತಿ ಶಿಷ್ಯ ಸೇವಕ ಮಕ್ಕಳು ಇವರು ತಪ್ಪು ಮಾಡಿದಾಗ ಶಿಕ್ಷಿಸಲು ಶಕ್ತನೆ ಆಗಿರುತ್ತಾನೆ. ಮೂರು ಕೋಟಿ ದೇವತೆಗಳಲ್ಲಿ ನಾನೊಬ್ಬ ಸಾಮಾನ್ಯ ದೇವತೆ, ಅಜ್ಞಾನಿ. ನಿಮ್ಮ ಅನುಗ್ರಹದಿಂದ ಬಲಿಷ್ಠನೆನಿಸಿದ್ದೇನೆ. ನನ್ನ ಸರ್ವಸ್ವವನ್ನು ನಾಶಮಾಡಲು ನೀವು ಸಮರ್ಥರು. ನಾನು ಯಾರು? ಕೀಟದಂತೆ ಇರುವವನು. ನೀವು ಬ್ರಹ್ಮನ ಮೊಮ್ಮಗ.

ಪುನಃ ಸೃಷ್ಟಿ ಮಾಡುವುದಕ್ಕೂ ಸಮರ್ಥರು. ಹೀಗೆ ಇಂದ್ರ ಸ್ತುತಿಸಿದಾಗ ಬೃಹಸ್ಪತಿ ಸಂತುಷ್ಟನಾಗಿ ಅರಳಿದ ಮುಖ ಕಣ್ಣುಗಳಿಂದ ಪ್ರೀತಿಯ ಮಾತನ್ನಾಡಿದ.

**ಬೃಹಸ್ಪತಿ:-** ತಾಳು, ಇಂದ್ರ, ಸ್ಥಿರವಾದ ಸಂಪತ್ತನ್ನು ಪಡೆಯುವಿ. ಪರಮೈಶ್ವರ್ಯವನು, ಹಿಂದಿಗಿಂತ ನಾಲ್ಕು ಪಟ್ಟು ಅಧಿಕವಾಗಿಯೆ ಪಡೆಯುವಿ. ಹೋಗು, ಅಮರಾವತಿಗೆ, ರಾಜ್ಯವಾಳು. ನನ್ನ ಅನುಗ್ರಹದಿಂದ ಶತ್ರು ಪರಾಭವ ಹೊಂದಿದ್ದಾನೆ. ನಿನ್ನ ಮಡದಿಯಾದ ಶಚಿಯನ್ನು ಸೇರು.

ಹೀಗೆ ಹೇಳಿ ಬೃಹಸ್ಪತಿ ಇಂದ್ರನೊಡನೆ ಅಲ್ಲಿಂದ ಹೊರಟ. ಅಷ್ಟರಲ್ಲಿ ಎದುರಿಗೇ ಘೋರಾಕಾರದ ಬ್ರಹ್ಮಹತ್ಯೆ ಕಾಣಿಸಿಕೊಂಡಳು. ಇಂದ್ರ ನೋಡಿ ಬಲು ಭೀತನಾಗಿ ಗುರುವಿನ ಮೊರೆ ಹೊಕ್ಕ. ಗುರುವೂ ಭಯಪಟ್ಟು ನಾರಾಯಣನನ್ನು ನೆನೆದ. ಅಷ್ಟರಲ್ಲಿ ಅಶರೀರವಾಣಿ ಕೇಳಿಸಿತು. ನುಡಿ ಸಣ್ಣದಾಗಿದ್ದರೂ ಅರ್ಥ ಮಹತ್ತಾಗಿತ್ತು. 'ಸಂಸಾರ ವಿಜಯವೆಂಬ ಸರ್ವ ಅಮಂಗಳಪರಿಹಾರಕವಾದ ರಾಧಾ ಕವಚವನ್ನು ಶಿಷ್ಯನಿಗೆ ಉಪದೇಶಿಸಿ ಅವನನ್ನು ಕಾಪಾಡು.'

ರಾಧೆ, ಬೃಹಸ್ಪತಿ ಈ ಮಾತನ್ನು ಕೇಳಿ ನಿನ್ನ ಕವಚವನ್ನು ಇಂದ್ರನಿಗೆ ಉಪದೇಶಿಸಿ ಬ್ರಹ್ಮಹತ್ಯೆಯನ್ನು ಹುಂಕಾರದಿಂದ ಸುಟ್ಟು ಬೂದಿ ಮಾಡಿದ. ಇಂದ್ರನೊಡನೆ ಅಮರಾವತಿಗೆ ಹೋಗಿ ಆ ಪಟ್ಟಣ ತನ್ನ ಶಾಪದಿಂದಲೆ ಶತ್ರುವಿನಿಂದ ಭಿನ್ನ ಭಿನ್ನವಾಗಿ ಮುರಿದಿದ್ದುದನ್ನು ಕಂಡ. ಇಂದ್ರ ಬಂದನೆಂದು ಶಚಿ ಸಂಭ್ರಮದಿಂದ ಬಂದು ಗುರುವಿಗೂ ಪತಿಗೂ ನಮಿಸಿದಳು. ದೇವತೆಗಳೂ ಮುನಿಗಳೂ ಋಷಿಗಳೂ ಹರ್ಷಪಟ್ಟು ಬಂದು ಇಂದ್ರನನ್ನು ಕಂಡರು.

ಇಂದ್ರ ವಿಶ್ವಕರ್ಮನನ್ನು ಕರೆಸಿ ಅಮರಾವತಿಯ ಪುನರ್ನಿರ್ಮಾಣ ಕಾರ್ಯವನ್ನು ಅವನಿಗೆ ಒಪ್ಪಿಸಿದ. ವಿಶ್ವಕರ್ಮ ನೂರು ವರ್ಷಕಾಲ ಪೂರ್ತಿ ಶ್ರಮವಹಿಸಿ ಸುಂದರವಾದ ನಗರವನ್ನು ನಿರ್ಮಾಣ ಮಾಡಿದ. ನಾನಾ ರತ್ನಗಳಿಂದ ಚಿತ್ರವಿಚಿತ್ರವಾಗಿ ಶ್ರೇಷ್ಠ ಮಣಿ ರತ್ನಗಳಿಂದಲೆ ನಿರ್ಮಿಸಿದ್ದ ಆ ನಗರ ಅನುಪಮವಾಗಿತ್ತು. ಆದರೂ ಇಂದ್ರನಿಗೆ ತೃಪ್ತಿಯಾಗಲಿಲ್ಲ. ವಿಶ್ವಕರ್ಮ ಇಂದ್ರನ ಆಜ್ಞೆಯಾಗದೆ ಹೋಗುವಂತಿರಲಿಲ್ಲ. ದುಃಖಗೊಂಡು ಬ್ರಹ್ಮನನ್ನು ಆತ ಮೊರೆ ಹೊಕ್ಕ. ಬ್ರಹ್ಮ ಹೇಳಿದ, 'ನಿನ್ನ ಪ್ರಾರಬ್ಧ ಮುಗಿವವರೆಗೂ ನೀನು ಇಂದ್ರನ ಬಳಿಯಲ್ಲಿಯೆ ಇರು. ಬಳಿಕ ನೀನು ಸ್ವತಂತ್ರನಾಗುವೆ.' ಒಡನೆ ವಿಶ್ವಕರ್ಮ ಅಮರಾವತಿಗೆ ಹಿಂತಿರುಗಿದ. ಬ್ರಹ್ಮ ವೈಕುಂಠಕ್ಕೆ ಹೋಗಿ ಎಲ್ಲವನ್ನೂ ವಿಜ್ಞಾಪಿಸಿಕೊಂಡ. ಹರಿ ಅವನನ್ನು ಕಳಿಸಿಕೊಟ್ಟು ತಾನು ಬ್ರಾಹ್ಮಣಬಾಲಕ ರೂಪದಿಂದ ಅಮರಾವತಿಗೆ ಬಂದ. ಬಿಳಿ ಬಟ್ಟೆ ಉಟ್ಟು ಉಜ್ವಲವಾದ ತಿಲಕ ಧರಿಸಿ ದಂಡಛತ್ರಿಗಳನ್ನು ಹಿಡಿದ ಬಿಳಿಯಾದ ಹಲ್ಲಿನ ನಗುಮೊಗದ ಮನೋಹರ ಬ್ರಾಹ್ಮಣಬಾಲಕ ಜ್ಞಾನದಲ್ಲಿ ವೃದ್ಧ, ಸ್ವತಃ ಬ್ರಹ್ಮನಿಗೆ ತಂದೆ, ಲೋಕಕ್ಕೆ ಸರ್ವಸಂಪತ್ತನ್ನೂ ನೀಡುವವ. ಇಂದ್ರನ ಅರಮನೆ ಬಾಗಿಲಲ್ಲಿ ನಿಂತು ದ್ವಾರಪಾಲಕನಿಗೆ ಹೇಳಿದ, 'ಹೇಳು, ದ್ವಾರದಲ್ಲಿ ಬ್ರಾಹ್ಮಣ ಬಂದು ನಿಂತಿದ್ದಾನೆ, ಎಂದು.' ದ್ವಾರಪಾಲಕ ಬಂದು ಹಾಗೆ ಹೇಳಿದಾಗ ಇಂದ್ರ ಬಂದು ನೋಡಿದ. ಬ್ರಾಹ್ಮಣ ಬಾಲಕನನ್ನು

ಬಾಲಕಬಾಲಿಕೆಯರೆಲ್ಲ ಸುತ್ತುವರಿದು ಉತ್ಸಾಹದಿಂದ ನಗುತ್ತಿದ್ದರು. ಅವರ ನಡುವೆ ತೇಜಸ್ಸಿನಿಂದ ಜ್ವಲಿಸುವ ವಟುರೂಪದ ಹರಿಗೆ ಇಂದ್ರ ಭಕ್ತಿಯಿಂದ ನಮಿಸಿದ. ಹರಿ ಅವನನ್ನು ಹರಸಿದ. ಬಳಿಕ ಮಧುಪರ್ಕಾದಿ ಉಪಚಾರಗಳನ್ನಿತ್ತು 'ನೀನು ಬಂದ ಕಾರಣವೇನು' ಎಂದು ಕೇಳಿದ ಇಂದ್ರ. ಇಂದ್ರನ ಮಾತನ್ನು ಕೇಳಿ ಮೇಘಧ್ವನಿಯಂತೆ ಗಂಭೀರವಾದ ಮಾತಿನಿಂದ ಹರಿ ನುಡಿದ.

**ಬ್ರಾಹ್ಮಣ:-** ಇಂದ್ರ, ನಾನು ನಿನ್ನಲ್ಲಿ ಕೆಲವು ವಿಷಯಗಳನ್ನು ಕೇಳಿತಿಳಿದು ಕೊಳ್ಳುವುದಕ್ಕಾಗಿ ಬಂದೆ. ಏಕೆಂದರೆ ನೀನು ವಿಚಿತ್ರವಾದ ನಗರ ನಿರ್ಮಾಣ ಮಾಡಿಸಿದ್ದನ್ನು ಕೇಳಿದೆ. ಎಷ್ಟು ವರ್ಷಕಾಲ ನಿರ್ಮಾಣಕ್ಕೆ ಬೇಕೆಂದು ಸಂಕಲ್ಪಿಸಿರುವೆ? ವಿಶ್ವಕರ್ಮ ಎಷ್ಟು ವರ್ಷಗಳಲ್ಲಿ ಕೆಲಸ ಮುಗಿಸುತ್ತಾನೆ? ಇಂಥ ಒಂದು ನಗರ ನಿರ್ಮಾಣ ಇಷ್ಟರವರೆಗೆ ಯಾವ ಇಂದ್ರ ಮಾಡಿಸಿದ್ದ? ಇಂಥ ನಿರ್ಮಾಣ ಕಾರ್ಯಕ್ಕೆ ಬೇರೆ ಯಾವ ವಿಶ್ವಕರ್ಮನೂ ಶಕ್ತನಾಗಲಾರ.

ಬ್ರಹ್ಮಚಾರಿಯ ಮಾತನ್ನು ಕೇಳಿ ಇಂದ್ರ ನಕ್ಕ. ಸಂಪತ್ತಿನ ಮದದಿಂದ ಬಹಳ ಅಹಂಕಾರಿಯಾಗಿದ್ದ ಆತ ಕೇಳಿದ. 'ಬಾಲಕ, ನೀನು ಎಷ್ಟು ಇಂದ್ರರನ್ನು ನೋಡಿರುವೆ, ಅಥವಾ ಕೇಳಿರುವೆ? ಎಷ್ಟು ಮಂದಿ ವಿಶ್ವಕರ್ಮರನ್ನು ನೀನು ಬಲ್ಲೆ, ಹೇಳು ಮಗು!, ಇಂದ್ರನ ಮಾತನ್ನು ಕೇಳಿ ಬ್ರಹ್ಮಚಾರಿ ನಕ್ಕ. ಮಧುರವಾಗಿ ಉತ್ತರಿಸಿದ.

**ಬ್ರಾಹ್ಮಣ:-** ಇಂದ್ರ, ನಿನ್ನ ತಂದೆ ಕಶ್ಯಪ, ಅವನ ತಂದೆ ಮರೀಚಿ, ಅವನ ತಂದೆ ನಾರಾಯಣನ ನಾಭಿಕಮಲದಿಂದ ಜನಿಸಿದ ಬ್ರಹ್ಮ ಎಂಬುದು ನನಗೆ ಗೊತ್ತು. ಆ ನಾರಾಯಣ ಸತ್ವಗುಣಯುಕ್ತನಾಗಿ ಲೋಕವನ್ನು ರಕ್ಷಿಸುತ್ತಾನೆ ಎನ್ನುವುದು ಗೊತ್ತು. ಯಾವ ಪ್ರಾಣಿಯೂ ಇಲ್ಲದೆ ಬರಿ ಸಮುದ್ರವಾಗಿರುವ ಭಯಾನಕವಾದ ಪ್ರಳಯವೂ ನನಗೆ ಗೊತ್ತು. ಇಂಥ ಅನೇಕ ಪ್ರಳಯಗಳು ಆಗಿಹೋಗಿವೆ. ಅನೇಕ ಬಗೆಯ ಸೃಷ್ಟಿಗಳು ಕಲ್ಪಕಲ್ಪಗಳಲ್ಲಿ ಆಗಿವೆ. ಅನೇಕ ಬ್ರಹ್ಮಾಂಡಗಳು ಅನೇಕ ಬ್ರಹ್ಮ ವಿಷ್ಣು ಮಹೇಶ್ವರರು ಅನೇಕ ಇಂದ್ರರು ಆಗಿ ಹೋಗಿದ್ದಾರೆ. ನೆಲದ ಮೇಲಿನ ದೂಳಿನ ಕಣಗಳನ್ನಾದರೂ ಎಣಿಸಬಹುದು. ಸೃಷ್ಟಿಯಲ್ಲಿರುವ ಇಂದ್ರರ ಸಂಖ್ಯೆಯನ್ನು ಇಷ್ಟೆಂದು ಹೇಳಲಾಗದು. ಇಂದ್ರನ ಆಯುಷ್ಯ ಅಧಿಕಾರಗಳು ಎಪ್ಪತ್ತೊಂದು ಚತುರ್ಯುಗಗಳ ಮಾತ್ರ. ಇಪ್ಪತ್ತೆಂಟು ಇಂದ್ರಾಯುಷ್ಯಕಾಲ ಕಳೆದರೆ ಬ್ರಹ್ಮನಿಗೆ ಅದು ಒಂದು ದಿನ. ಈಮಾನದಲ್ಲಿ ಬ್ರಹ್ಮನಿಗೆ ನೂರೆಂಟು ವರ್ಷ ಆಯುಷ್ಯ. ದೇವೇಂದ್ರರ ಸಂಖ್ಯೆಯಂತೆ ಬ್ರಹ್ಮರ ಸಂಖ್ಯೆಯೂ ಇಷ್ಟೆಂದಿಲ್ಲ. ಬ್ರಹ್ಮ ವಿಷ್ಣು ಮಹೇಶ್ವರರಿಂದ ಕೂಡಿದ ಬ್ರಹ್ಮಾಂಡಗಳ ಸಂಖ್ಯೆಯೂ ಹಾಗೇ ಅಪರಿಮಿತ. ಮಹಾವಿಷ್ಣುವಿನ ರೋಮಕೂಪದ ಜಲದಲ್ಲಿ, ಬ್ರಹ್ಮಾಂಡದೊಳಗಿನ ಜಲದಲ್ಲಿ ನೌಕೆ ಇರುವಂತೆ, ಬ್ರಹ್ಮಾಂಡಗಳೇ ಇವೆ. ರೋಮಗಳ ಸಂಖ್ಯೆಗನುಗುಣವಾಗಿ ಬ್ರಹ್ಮಾಂಡಗಳ ಸಂಖ್ಯೆಯೂ ಅಪರಿಮಿತ. ಈಬ್ರಹ್ಮಾಂಡ ಒಂದರಲ್ಲಿಯೆ ನಿನ್ನಂಥ ಎಷ್ಟು ಮಂದಿ ದೇವತೆಗಳಿದ್ದಾರೆ, ಗೊತ್ತೇ?

ಹೀಗೆ ಹೇಳುತ್ತ ಹರಿ ಒಂದು ಇರುವೆಯ ಸಾಲನ್ನು ನೋಡತೊಡಗಿದ. ನೂರು ಧನುಃಪ್ರಮಾಣದಷ್ಟು ಉದ್ದವಾಗಿದ್ದ ಆ ಸಾಲಿನಲ್ಲಿ ಕ್ರಮವಾಗಿ ಒಂದೊಂದು

ಇರುವೆಯನ್ನೂ ಕಂಡು ನಕ್ಕ ಬ್ರಹ್ಮಚಾರಿ. ಆದರೆ ಒಂದು ಮಾತನ್ನೂ ಆಡಲಿಲ್ಲ. ಮೌನವಾಗಿ ಗಂಭೀರವಾಗಿ ಸಾಗರದಂತೆ ಇದ್ದ. ಇಂದ್ರನಿಗೆ ಪರಮಾಶ್ಚರ್ಯವಾಯಿತು. ಬ್ರಹ್ಮಚಾರಿಯನ್ನು ಪ್ರಶ್ನಿಸಿದ.

**ಇಂದ್ರ:-** ಬ್ರಾಹ್ಮಣ! ಏಕೆ ನಕ್ಕೆ? ಏನು ಕಾರಣ, ಹೇಳು ನೀನಾರು? ವೇಷ ಮರೆಸಿಕೊಂಡು ಬಾಲಕನಾಗಿ ಬಂದಿರುವೆ?

ಇಂದ್ರನ ಮಾತನ್ನು ಕೇಳಿ ಬ್ರಹ್ಮಚಾರಿ ಉದ್ಬೋಧಕ ನೀತಿಯುಕ್ತ ಮಾತನ್ನಾಡಿದ.

**ಬ್ರಾಹ್ಮಣ:-** ಇರುವೆಯ ಸಾಲನ್ನು ಕಂಡಾಗ ನನಗೆ ನಗು ಬಂದಿತು. ಅದಕ್ಕೆ ಕಾರಣ ನಿಗೂಢವಾಗಿದೆ. ಅದನ್ನು ಕೇಳಬೇಡ. ಕೇಳಿದರೆ ಅದು ನಿನ್ನ ಅಜ್ಞಾನವನ್ನು ಬಯಲಿಗೆಳೆದು ನಿನಗೆ ದುಃಖ ಉಂಟುಮಾಡೀತು. ವಸ್ತುತಃ ಅದು ಸಂಸಾರಿ ಜೀವರ ಸಂಸಾರ ವೃಕ್ಷದ ಬೇರನ್ನೆ ತರಿಯುವಂಥಹುದು. ಅಜ್ಞಾನದ ಕತ್ತಲಲ್ಲಿ ಮುಚ್ಚಿ ಹೋದ ಉತ್ತಮ ಜ್ಞಾನದೀಪ ಅದು. ಎಲ್ಲ ವೇದಗಳಲ್ಲಿ ನಿಗೂಢವಾಗಿದ್ದು ಸಿದ್ಧರಿಗೂ ಅತ್ಯಂತ ದುರ್ಲಭವೆನಿಸಿದುದು. ಯೋಗಿಗಳಿಗೆ ಪ್ರಾಣಕ್ಕೆ ಸಮಾನ. ಮೂಢರಿಗೆ ಅಹಂಕಾರ ಕಳೆಯುವಂಥಹುದು.

ಹೀಗೆ ಹೇಳಿ ಬ್ರಹ್ಮಚಾರಿ ನಕ್ಕ. ಇಂದ್ರನ ಗಂಟಲು ತುಟಿ ನಾಲಿಗೆ ಒಣಗಿದುವು. ಪುನಃ ಕೇಳಿದ.

**ಇಂದ್ರ:-** ಬ್ರಹ್ಮಚಾರಿ, ನನಗೆ ಆ ಜ್ಞಾನದೀಪವನ್ನು ಬೇಗನೆ ಹೇಳು. ಬಾಲಕನಾಗಿ ಕಾಣುವ ನೀನು ಯಾರು ಎಂದು ನಾನರಿಯೆ. ಜ್ಞಾನರಾಶಿಯಂತೂ ಅಹುದು. ಜ್ಞಾನರಾಶಿ ಮೂರ್ತಿಮತ್ತಾಗಿ ಬಂದಂತಿರುವೆ. ಇಂದ್ರನ ಮಾತನ್ನು ಕೇಳಿ ಹರಿ ಯೋಗೀಶ್ವರರಿಗೂ ದುರ್ಲಭವಾದ ಜ್ಞಾನವನ್ನು ಉಪದೇಶಿಸಿದ.

**ಬ್ರಾಹ್ಮಣ:-** ಈ ಇರುವೆಯ ಸಾಲನ್ನು ನಾನು ಸೃಷ್ಟಿಸಿದೆ. ಈ ಇರುವೆಗಳೆಲ್ಲ ಹಿಂದೆ ಅಮರಾವತಿಯನ್ನು ಆಳಿದ ಇಂದ್ರರು. ಕರ್ಮವಶಾತ್ ಅವರು ಇರುವೆಗಳಾಗಿದ್ದಾರೆ. ಕರ್ಮದಿಂದ ಜೀವಿಗಳು ವೈಕುಂಠ ಬ್ರಹ್ಮಲೋಕ ಶಿವಲೋಕ ಸ್ವರ್ಗ ಪಾತಾಳಗಳನ್ನಾಗಲಿ, ಕೇವಲ ದುಃಖ ತುಂಬಿದ ಘೋರ ನರಕವನ್ನಾಗಲಿ ಪಡೆಯುತ್ತವೆ. ಕರ್ಮದಿಂದ ಹಂದಿ ಪಶುಪಕ್ಷಿ ಕೀಟ ವನಸ್ಪತಿಗಳಾಗಿ ಹುಟ್ಟುತ್ತವೆ. ಕರ್ಮದಿಂದಲೆ ಎಲ್ಲರೂ ಸುಖಿ ದುಃಖಿಗಳಾಗಿ ಸೇವ್ಯ ಸೇವಕರಾಗಿ ಹುಟ್ಟುತ್ತಾರೆ. ಕರ್ಮದಿಂದಲೆ ಬ್ರಾಹ್ಮಣರಾಗಿಯೋ ಪ್ರೇತ ಬ್ರಹ್ಮರಾಕ್ಷಸರಾಗಿಯೋ ಹುಟ್ಟುತ್ತಾರೆ. ಪಲ್ಲಕ್ಕಿ ಏರುವುದಾಗಲಿ ರೋಗಗಳಿಂದ ನರಳುವುದಾಗಲಿ ಸುಂದರರೂಪದಿಂದ ಮೆರೆಯುವುದಾಗಲಿ ಹೀನಾಂಗ ಅಧಿಕಾಂಗರಾಗಿ ಬಾಳುವುದಾಗಲಿ ಎಲ್ಲವೂ ಕರ್ಮದಿಂದಲೇ. ಕರ್ಮಕ್ಕೆ ಆ ವಿಧಾತ ಫಲ ನೀಡುತ್ತಾನೆ. ಕರ್ಮ ಸ್ವಭಾವಾಧೀನ. ಸ್ವಭಾವ ಅಭ್ಯಾಸಾಧೀನ. ಇದು ಅಧ್ಯಾತ್ಮರಹಸ್ಯ. ಕೇಳಿದರೆ ಪುಣ್ಯವನ್ನೂ ಸುಖವನ್ನೂ ನೀಡುವುದು. ನರಕಾರ್ಣವದಿಂದ ಪಾರು ಮಾಡುವುದು. ಈ ಚರಾಚರ ಪ್ರಪಂಚವೆಲ್ಲ ಸ್ವಪ್ನದಂತೆ ಅಸ್ಥಿರ. ಎಲ್ಲರ ಹೆಡತಲೆಯಲ್ಲಿ ಮೃತ್ಯು ಇರುವುದರಿಂದ ನೀರ ಮೇಲಿನ ಗುಳ್ಳೆಯಂತೆ ಬಾಳು ನಶ್ವರ. ಅಜ್ಞಾನಿ ಅದನ್ನು ಸ್ಥಿರವೆಂದು ಭ್ರಮಿಸುತ್ತಾನೆ. ಜ್ಞಾನಿ

ಹಾಗೆ ಮೋಸ ಹೋಗುವುದಿಲ್ಲ. ಹೀಗೆ ಹೇಳಿ ಬ್ರಹ್ಮಚಾರಿ ಸುಮ್ಮನಾದ. ದೇವೇಂದ್ರನಿಗೆ ಆಶ್ಚರ್ಯವಾಯಿತು. ದರ್ಪ ಇಳಿಯಿತು.

ಅಷ್ಟರಲ್ಲಿ ಒಬ್ಬ ಮುನಿ ಅಲ್ಲಿಗೆ ಬಂದ. ಆತ ಅತ್ಯಂತ ವೃದ್ಧ, ಮಹಾ ಯೋಗಿ. ಜ್ಞಾನದಿಂದಲೂ ವಯಸ್ಸಿನಿಂದಲೂ ಬಹಳ ಹಿರಿಯ. ಕೃಷ್ಣಾಜಿನ ಹಿಡಿದಿದ್ದಾನೆ. ಉಜ್ವಲವಾದ ತಿಲಕಧಾರಣ ಮಾಡಿದ್ದಾನೆ. ಜಟಾಧಾರಿ. ಎದೆಯಲ್ಲಿ ರೋಮಚಕ್ರ. ತಲೆಯಲ್ಲಿ ಒಂದು ಚಾಪೆ. ರೋಮಗಳ ನಡುವೆ ಕೆಲವು ಉದುರಿಹೋಗಿವೆ. ಆತ ಇಂದ್ರ ಮತ್ತು ಬ್ರಹ್ಮಚಾರಿಗಳ ನಡುವೆ ಬಂದು ನಿಂತ. ಇಂದ್ರ ಅವನಿಗೆ ನಮಸ್ಕರಿಸಿ ಮಧುಪರ್ಕಾದಿಗಳನ್ನಿತ್ತು ಪೂಜಿಸಿದ. ವಿನಯದಿಂದ ಕುಶಲ ಪ್ರಶ್ನೆಗೈದ. ಬ್ರಹ್ಮಚಾರಿ ಅವನೊಡನೆ ಸಂಭಾಷಣೆ ನಡೆಸಿದ.

**ಬಾಲಕ:-** ಬ್ರಾಹ್ಮಣ, ನೀನು ಎಲ್ಲಿಂದ ಬಂದೆ, ನಿನ್ನ ಹೆಸರೇನು, ಹೇಳು. ನೀನು ಬಂದ ಕಾರಣವೇನು? ಎಲ್ಲಿ ವಾಸ ಮಾಡುತ್ತಿರುವೆ? ನಿನ್ನ ತಲೆಯ ಮೇಲೆ ಚಾಪೆ, ಎದೆಯಲ್ಲಿ ರೋಮದ ಚಕ್ರಾಕಾರ, ಕೆಲವು ರೋಮಗಳು ಉದುರಿರುವುದು ಇವೆಲ್ಲ ಏನು, ಹೇಳು. ಇವೆಲ್ಲ ಆಶ್ಚರ್ಯಕರವಾಗಿವೆ. ನನಗೆ ಕೇಳಿ ತಿಳಿಯಲು ಕುತೂಹಲ ಉಂಟಾಗಿದೆ. ಬ್ರಾಹ್ಮಣ ಬ್ರಹ್ಮಚಾರಿಯ ಮಾತನ್ನು ಕೇಳಿ ಇಂದ್ರನ ಮುಂದೆ ಎಲ್ಲವನ್ನೂ ಹೇಳಿದ.

**ಮುನಿ:-** ಇಂದ್ರ, ನಾನು ಅಲ್ಪಾಯುವೆಂದು, ಎಲ್ಲಿಯೂ ಮನೆ ಮಾಡಿಲ್ಲ. ಭಿಕ್ಷೆ ಬೇಡಿ ಬದುಕುವೆನೆಂದು, ಮದುವೆಯನ್ನೂ ಮಾಡಿಕೊಂಡಿಲ್ಲ, ಲೋಮಶ ಎಂದು ನನ್ನ ಹೆಸರು. ಈಬ್ರಹ್ಮಚಾರಿಯನ್ನು ದರ್ಶನ ಮಾಡಲೆಂದೇ ಬಂದೆ. ಮಳೆ ಬಿಸಿಲಿನ ಪೀಡೆ ಕಳೆಯಲು ಚಾಪೆಯನ್ನು ಹೊತ್ತುಕೊಂಡಿರುವೆ. ಎದೆಯ ರೋಮಚಕ್ರಕ್ಕೆ ಕಾರಣವೇನೆಂದು ಹೇಳುತ್ತೇನೆ ಕೇಳು. ಅದು ಸಂಸಾರಿಗಳಿಗೆ ಭಯಜನಕ. ವಿವೇಕ ಮೂಡಿಸುವಂಥಹುದು. ಈ ರೋಮಗಳ ಸಂಖ್ಯೆ ನನ್ನ ಆಯುಷ್ಯದ ಪ್ರಮಾಣವನ್ನು ತಿಳಿಸುತ್ತದೆ. ಒಬ್ಬ ಇಂದ್ರನ ಪತನವಾದಾಗ ನನ್ನ ಒಂದು ರೋಮ ಉದುರುತ್ತದೆ. ಬ್ರಹ್ಮನ ಎರಡು ಪರಾರ್ಧಗಳ ಕೊನೆಯಲ್ಲಿ ನನಗೆ ಮರಣ. ಇಂಥ ಅನೇಕ ಬ್ರಹ್ಮರು ಹುಟ್ಟುತ್ತಾರೆ, ಸಾಯುತ್ತಾರೆ. ಹೆಂಡತಿ ಮಕ್ಕಳಿಂದ ಮನೆಯಿಂದೇನು ಪ್ರಯೋಜನ? ಬ್ರಹ್ಮನ ಪತನವಾಗುವಾಗ ಒಮ್ಮೆ ಹರಿ ಕಣ್ಣರೆಪ್ಪೆ ಮುಚ್ಚುತ್ತಾನೆ. ಅಂಥ ಹರಿಯ ಪಾದ ಕಮಲವನ್ನೆ ನಾನು ಸದಾ ನೆನೆಯುತ್ತೇನೆ. ಹರಿದಾಸ್ಯ ದುರ್ಲಭ. ಮುಕ್ತಿಗಿಂತ ಭಕ್ತಿ ಹೆಚ್ಚಿನದು. ಎಲ್ಲ ಐಶ್ವರ್ಯ ಸ್ವಪ್ನದಂತೆ ಭಕ್ತಿಯನ್ನು ಮರೆಸುತ್ತದೆ. ಇದು ನನ್ನ ಗುರುವಾದ ಶಿವನಿತ್ತ ತತ್ವಜ್ಞಾನ. ನನಗೆ ಭಕ್ತಿಯೇ ಬೇಕು. ಅದಿಲ್ಲದೆ ಸಾಲೋಕ್ಯ ಮುಂತಾದ ನಾಲ್ಕು ಬಗೆಯ ಮೋಕ್ಷವೂ ನನಗೆ ಬೇಡ. ಹೀಗೆ ಹೇಳಿ ಮುನಿ ಶಿವನ ಸನ್ನಿಧಿಗೆ ನಡೆದ. ಬಾಲಕರೂಪದ ಶ್ರೀ ಹರಿಯೂ ಕಣ್ಮರೆಯಾದ.

ಇಂದ್ರ ಎಲ್ಲವನ್ನೂ ಕನಸಿನಂತೆ ಕಂಡು ಸಂಪತ್ತಿನ ಮೇಲಿನ ಮೋಹವನ್ನು ತೊರೆದ. ಪರಮೇಶ್ವರನಲ್ಲಿ ಮನವಿಟ್ಟ. ವಿಶ್ವಕರ್ಮನನ್ನು ಕರೆತರಿಸಿ ಅವನನ್ನು ಹೊಗಳಿ ರತ್ನಾದಿಗಳನ್ನಿತ್ತು ಸತ್ಕರಿಸಿ ಮನೆಗೆ ಕಳಿಸಿಕೊಟ್ಟ. ರಾಜ್ಯವನ್ನು ಮಗನಿಗೆ ಕೊಟ್ಟು

ಶಚಿಯನ್ನೂ ರಾಜ್ಯೈಶ್ವರ್ಯವನ್ನೂ ತೊರೆದು ತಪಸ್ಸಿಗೆ ಹೊರಟು ನಿಂತ. ಶಚಿ ಭಯಗೊಂಡು ಶೋಕಾರ್ತಳಾಗಿ ಬೃಹಸ್ಪತಿಯನ್ನು ಮೊರೆಹೊಕ್ಕಳು. ಅವನನ್ನು ಇಂದ್ರನ ಬಳಿಗೆ ಕರೆತಂದು ಇಂದ್ರನಿಗೆ ರಾಜನೀತಿಯನ್ನು ತಿಳಿಸಿದಳು. ಬೃಹಸ್ಪತಿಯೂ ಶಾಸ್ತ್ರಾನುಸಾರವಾಗಿ ನೀತಿಯನ್ನು ಇಂದ್ರನಿಗೆ ಉಪದೇಶಿಸಿ ಮನವರಿಕೆ ಮಾಡಿಕೊಟ್ಟ. ಆಗ ಇಂದ್ರ ತಿರುಗಿ ರಾಜ್ಯಾಡಳಿತವನ್ನು ಕೈಗೊಂಡ.

ರಾಧೆ, ಇದು ಇಂದ್ರನ ದರ್ಪಭಂಗದ ಕಥೆ. ಇನ್ನು ಗೋವರ್ಧನಗಿರಿಯಜ್ಞ ಸಂದರ್ಭದಲ್ಲಿ ಅವನ ದರ್ಪಭಂಗವಾದುದನ್ನು ನೀನು ಪ್ರತ್ಯಕ್ಷ ಕಂಡಿರುವೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರದನಾರಾಯಣಸಂವಾದದಲ್ಲಿ ಶ್ರೀಕೃಷ್ಣ ರಾಧಾಸಂವಾದದಲ್ಲಿ ಶಕ್ರದರ್ಪಭಂಗವೆಂಬ ನಲವತ್ತೇಳನೆ ಅಧ್ಯಾಯ ಮುಗಿಯಿತು.*



## ಸೂರ್ಯನ ದರ್ಪಭಂಗ

ಅಧ್ಯಾಯ - ೪೮

**ರಾಧೆ:-** ಇಂದ್ರನ ದರ್ಪಭಂಗದ ಬಗ್ಗೆ ನೀನು ಹೇಳಿರುವಿ. ಈಗ ಸೂರ್ಯನ ದರ್ಪಭಂಗವನ್ನು ಹೇಳು.

**ಶ್ರೀಕೃಷ್ಣ:-** ಒಮ್ಮೆ ಸೂರ್ಯ ಉದಿಸಿ ಅಸ್ತಂಗತನಾದಾಗ ಮಾಲಿ ಸುಮಾಲಿ ಎಂಬ ಇಬ್ಬರು ದೈತ್ಯರು ಲೋಕವನ್ನು ಬೆಳಗಿಸಲು ತೊಡಗಿದರು. ಅವರ ಬೆಳಕಿನಿಂದ ರಾತ್ರಿ ಇಲ್ಲವಾಗುತ್ತದೆ ಎಂದು ಕುಪಿತನಾದ ಸೂರ್ಯ ಅವರನ್ನು ಶೂಲದಿಂದ ಇರಿದು ಕೊಂದ. ಭಕ್ತರಿಗೆ ಅಪಾಯ ಬಂದರೆ ಶಿವ ಸಹಿಸಲಾರ. ಅವನು ಬಂದು ದೈತ್ಯರನ್ನು ತಿರುಗಿ ಬದುಕಿಸಿದ. ಅವರು ಶಿವನನ್ನು ಭಕ್ತಿಯಿಂದ ನಮಿಸಿ ಹೊರಟುಹೋದರು. ಬಳಿಕ ಶಿವ ಕೋಪದಿಂದ ಸೂರ್ಯನನ್ನು ಕೊಲ್ಲಲು ಹೊರಟ. ಸೂರ್ಯ ಭಯದಿಂದ ಪಲಾಯನ ಮಾಡಿ ಬ್ರಹ್ಮನನ್ನು ಮೊರೆ ಹೊಕ್ಕ. ಶಿವ ಬ್ರಹ್ಮಲೋಕಕ್ಕೂ ಬಂದ. ತ್ರಿಶೂಲವನ್ನು ಎತ್ತಿ ಹಿಡಿದು ಕುಪಿತನಾಗಿ ಬಂದ ಶಿವನನ್ನು ಬ್ರಹ್ಮ ನಾಲ್ಕೂ ಮುಖಗಳಿಂದ ವೇದೋಕ್ತ ಸ್ತೋತ್ರದಿಂದ ಸ್ತುತಿಸಿದ.

**ಬ್ರಹ್ಮ:-** ದಕ್ಷಯಜ್ಞ ಭಂಗಮಾಡಿದ ಶಿವನೆ, ಪ್ರಸನ್ನನಾಗು. ನನ್ನನ್ನು ಮೊರೆ ಹೊಕ್ಕಿರುವ ಈ ಸೂರ್ಯನನ್ನು ಕಾಪಾಡು. ಇವನನ್ನು ಸೃಷ್ಟಿಯ ಆರಂಭದಲ್ಲಿ ನೀನೆ ಸೃಷ್ಟಿಸಿದೆ. ಆಶುತೋಷ ಭಕ್ತವತ್ಸಲ ಕೃಪಾಸಾಗರ, ಸೂರ್ಯನನ್ನು ಕಾಪಾಡು, ಕಾಪಾಡು. ಬ್ರಹ್ಮಸ್ವರೂಪ, ಸೃಷ್ಟಿಸ್ಥಿತಿಲಯ ಕಾರಣ. ಸ್ವಯಂ ಸೂರ್ಯನನ್ನು ಹುಟ್ಟಿಸಿ ಸ್ವಯಂ ಕೊಲ್ಲಲು ಬಯಸುವೆಯ? ನೀನೆ ಬ್ರಹ್ಮ ಶೇಷ ಧರ್ಮ ಸೂರ್ಯ ಅಗ್ನಿಯಾಗಿರುವೆ. ಇಂದ್ರ ಚಂದ್ರಾದಿ ದೇವತೆಗಳೆಲ್ಲರೂ ನಿನಗೆ ಭಯಪಟ್ಟು ಸೇವಿಸುತ್ತಾರೆ. ಋಷಿ ಮುನಿಗಳೆಲ್ಲ ನಿನ್ನನ್ನು ಸೇವಿಸಿ ತಪೋಧನರೆನಿಸಿದ್ದಾರೆ. ತಪಸ್ಸಿಗೆ ಫಲದಾತನೂ, ತಪಸ್ಸಿನ ಫಲವೂ, ತಪಸ್ಸೂ ನೀನೆ.

ಹೀಗೆ ಹೇಳಿ ಬ್ರಹ್ಮ ಸೂರ್ಯನನ್ನು ಶಿವನಿಗೆ ತಂದೊಪ್ಪಿಸಿದ. ದೀನವತ್ಸಲನಾದ ಶಂಭು ಅವನನ್ನು ಹರಸಿ ಬ್ರಹ್ಮನನ್ನು ವಂದಿಸಿ ಪ್ರಸನ್ನನಾಗಿ ತನ್ನ ಲೋಕಕ್ಕೆ ತೆರಳಿದ.

ಬ್ರಹ್ಮನು ಮಾಡಿದ ಈ ಸ್ತೋತ್ರವನ್ನು ಸಂಕಟಕಾಲದಲ್ಲಿ ಪಠಿಸಿದರೆ ಸಂಕಟ ಪರಿಹಾರ. ಬಂಧನದಲ್ಲಿರುವವನಿಗೆ ಬಂಧನಪರಿಹಾರ. ರಾಜದ್ವಾರದಲ್ಲಿ, ಸ್ಮಶಾನದಲ್ಲಿ, ಸಮುದ್ರದಲ್ಲಿ ನೌಕೆ ಒಡೆದಾಗ ಈ ಸ್ತೋತ್ರದ ಸ್ಮರಣ ಮಾತ್ರದಿಂದ ಭಯಪರಿಹಾರವಾಗುತ್ತದೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರದನಾರಾಯಣಸಂವಾದದಲ್ಲಿ ಶ್ರೀಕೃಷ್ಣ ರಾಧಾ ಸಂವಾದದಲ್ಲಿ ಸೂರ್ಯದರ್ಪಭಂಗವೆಂಬ ನಲವತ್ತೆಂಟನೆ ಅಧ್ಯಾಯ ಮುಗಿಯಿತು*



## ಅಗ್ನಿಯ ದರ್ಪಭಂಗ

**ಅಧ್ಯಾಯ - ೪೯**

**ಶ್ರೀಕೃಷ್ಣ:-** ಸೂರ್ಯ ಬ್ರಹ್ಮನಿಗೆ ನಮಿಸಿ ಅವನ ಆಜ್ಞೆಯಂತೆ ಮುಂದೆ ವಿನೀತನಾಗಿ ನಡೆದುಕೊಂಡ. ರಾಧೆ, ಇನ್ನು ಮುಂದೆ ಅಗ್ನಿಯ ಪರಾಭವದ ಕಥೆಯನ್ನು ಹೇಳುತ್ತೇನೆ ಕೇಳು. ಇದೂ ರಹಸ್ಯ. ಕೇಳಲು ಕಿವಿಗಳಿಗೆ ಅಮೃತದಂತಿದೆ.

ಒಮ್ಮೆ ಅಗ್ನಿ ನೂರು ತಾಳ ಪ್ರಮಾಣದಷ್ಟು ಎತ್ತರದ ಭಯಂಕರ ಜ್ವಾಲೆಯಿಂದ ಉರಿಯುತ್ತ ಮೂಲೋಕವನ್ನು ಸುಡಲು ಉದ್ಯುಕ್ತನಾದ. ಏಕೆಂದರೆ ಭೃಗುಮುನಿಯ ಶಾಪದಿಂದ ಕ್ಷೋಭೆಗೊಂಡು ಕುಪಿತನಾಗಿದ್ದ; ತಾನೆ ತೇಜಸ್ವಿ, ಉಳಿದವರೆಲ್ಲರೂ ತುಚ್ಛರೆಂದು ತಿಳಿದಿದ್ದ. ಆಗ ವಿಷ್ಣು ಬಾಲಕರೂಪದಿಂದ ಅಗ್ನಿಯ ಮುಂದೆ ಬಂದು ನಿಂತು ಅವನ ದಾಹಕಶಕ್ತಿಯನ್ನು ಅಪಹರಿಸಿದ. ಬಳಿಕ ವಿನೀತನಂತೆ ತಲೆಬಾಗಿ ನುಡಿದ.

**ಬಾಲಕ:-** ಅಗ್ನಿಯೆ, ನಿನಗೆ ಏಕೆ ಈ ಕೋಪ? ಏನು ಕಾರಣ, ಹೇಳು. ಮೂಲೋಕವನ್ನು ವ್ಯರ್ಥವಾಗಿ ಸುಡಲು ಉದ್ಯುಕ್ತನಾಗಿರುವೆ! ನಿನಗೆ ಶಾಪವಿತ್ತವನು ಭೃಗು. ಆ ಭೃಗುವನ್ನು ಶಿಕ್ಷಿಸು. ಒಬ್ಬ ಮಾಡಿದ ಅಪರಾಧಕ್ಕೆ ಮೂರು ಲೋಕಗಳನ್ನು ಸುಡಬೇಡ. ಲೋಕವನ್ನು ಸೃಜಿಸುವವನು ಬ್ರಹ್ಮ. ಕಾಪಾಡುವವನು ವಿಷ್ಣು. ಸಂಹರಿಸುವವನು ಶಿವ. ಇದೇ ಕ್ರಮ. ಮುಂದೆ ಲಯಗೈಯಲು ಶಿವನಿರುವಾಗ ನೀನು ಏಕೆ ಲಯ ಮಾಡುವೆ? ಪಾಲಕನಾದ ಹರಿಯನ್ನು ಗೆಲ್ಲದೆ ಹೇಗೆ ಲಯ ಮಾಡಲು ಹೊರಟಿರುವೆ?

ಹೀಗೆ ಹೇಳಿ ಬ್ರಹ್ಮಚಾರಿ ತನ್ನ ಮುಂದೆ ಇದ್ದ ಒಣಗಿದ ಹುಲ್ಲು ಕಡ್ಡಿಯೊಂದನ್ನು ಕೈಯಿಂದೆತ್ತಿ ಸುಡಲು ಕೊಟ್ಟ. ಅಗ್ನಿ ಆಒಣಕಡ್ಡಿಯನ್ನು ಕಂಡು ಭಯಾನಕವಾಗಿ ಉರಿಯತೊಡಗಿದ. ಚಂದ್ರನನ್ನು ಮೋಡ ಮುಸುಕುವಂತೆ ಜ್ವಾಲೆಯಿಂದ ಬ್ರಹ್ಮಚಾರಿಯನ್ನು ಆವರಿಸಿದ. ಆದರೆ ಆ ಒಣ ಕಡ್ಡಿಯನ್ನು ಸುಡಲಾಗಲಿಲ್ಲ. ಬ್ರಹ್ಮಚಾರಿಯ ಒಂದು ರೋಮವನ್ನೂ ಸುಡಲಾಗಲಿಲ್ಲ. ಇದನ್ನು ನೋಡಿ ಅಗ್ನಿ ನಾಚಿ ಸ್ತಬ್ಧನಾಗಿ ನಿಂತ. ಹೀಗೆ ಅಗ್ನಿಯ ದರ್ಪಭಂಗವನ್ನು ಮಾಡಿ ಹರಿ ಅದೃಶ್ಯನಾದ. ಅಗ್ನಿ ತನ್ನ ಶರೀರವನ್ನು ಕುಗ್ಗಿಸಿಕೊಂಡು ಭಯದಿಂದ ಹೊರಟುಹೋದ.

ರಾಧೆ, ಅಗ್ನಿಯ ದರ್ಪಭಂಗವನ್ನು ವರ್ಣಿಸಿದ್ದೇನೆ. ಇನ್ನೇನು ಕೇಳ ಬಯಸುವೆ? ಉಳಿದ ದೇವತೆಗಳ ದರ್ಪಭಂಗದ ಕಥೆಯೂ ಕೇಳಲು ಚಿರನೂತನವಾಗಿರುತ್ತದೆ.

**ರಾಧೆ:-** ಉಳಿದ ದೇವತೆಗಳ ದರ್ಪಭಂಗದ ಕಥೆಯನ್ನೂ ಹೇಳು. ನೀನು ಹೇಳುವ ಕಥಾಮೃತಧಾರೆ ಯಾರಿಗೆ ತಾನೆ ಇನ್ನು ಸಾಕೆನಿಸೀತು?

**ನಾರಾಯಣ:-** ರಾಧೆಯ ಮಾತನ್ನು ಕೇಳಿ ನಕ್ಕು ಶ್ರೀಕೃಷ್ಣ ಪುನಃ ಹೇಳಲು ತೊಡಗಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣ ಜನ್ಮ ಖಂಡದಲ್ಲಿನ ನಾರದನಾರಾಯಣಸಂವಾದದಲ್ಲಿ ಅಗ್ನಿದರ್ಪಮೋಚನವೆಂಬ ನಲವತ್ತೊಂಬತ್ತನೆ ಅಧ್ಯಾಯ ಮುಗಿಯಿತು.*



## ದುರ್ವಾಸನ ದರ್ಪಭಂಗ

**ಅಧ್ಯಾಯ - ೫೦**

**ಶ್ರೀಕೃಷ್ಣ:-** ದುರ್ವಾಸನ ದರ್ಪಭಂಗವನ್ನು ಹೇಳುತ್ತೇನೆ, ಕೇಳು. ಆತ ರುದ್ರಾಂಶನಾದ ಮಹಾಮುನಿ, ಯೋಗಿ, ಬಹಳ ತೇಜಸ್ವಿ. ಆದರೆ ಒಮ್ಮೆ ಅಂಬರೀಷ ದ್ವಾದಶಿ ವ್ರತಮಾಡಿ ಪಾರಣಕ್ಕೆ ಮೊದಲು ಬಹುಮಂದಿ ಬ್ರಾಹ್ಮಣರಿಗೆ ಭೋಜನ ಮಾಡಿಸಿದಾಗ, ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿದ್ದ ವಿಷ್ಣುವ್ರತ ಪರಾಯಣನಾದ ದುರ್ವಾಸಮುನಿ ಬಂದು, ನನಗೆ ಭೋಜನ ನೀಡೆಂದ. ರಾಜ ಭಕ್ತಿಯಿಂದ ಅವನಿಗೆ ಅಮೃತದಂಥ ಪಾಯಸ ಬಡಿಸಿದ. ಆದರೆ ಅದರಲ್ಲಿ ತಲೆಕೂದಲು ಇದ್ದುದನ್ನು ಕಂಡು ಮುನಿ ರಾಜನನ್ನು ಶಪಿಸಲು ಉದ್ಯುಕ್ತನಾದ. ತನ್ನ ಜಟೆಯನ್ನು ಕಿತ್ತು ನೆಲದಲ್ಲಿಟ್ಟ. ಆಜಟೆಯ ಮಧ್ಯದಿಂದ ಉರಿವ ಬೆಂಕಿಯ ಜ್ವಾಲೆಯಂತೆ ಏಳು ತಾಳ ಪ್ರಮಾಣದ ಪ್ರಳಯಾಂತಕನಾದ ಪುರುಷನೊಬ್ಬ ಎದ್ದು ಬಂದ. ಅವನು ಕೋಪದಿಂದ ರಾಜನನ್ನು ಕೊಲ್ಲಲು ಬಂದ. ಎಲ್ಲರೂ ಭಯದಿಂದ ನಡುಗಿದರು. ಎಲ್ಲರ ಗಂಟಲು ತುಟಿ ಬಾಯಿ ಒಣಗಿತು. ರಾಜ ಬಹಳ ಭೀತನಾಗಿ ನನ್ನ ಪಾದಕಮಲವನ್ನು ನೆನೆದ. ಆಸ್ಮರಣಮಾತ್ರದಿಂದ ಅವನ ಸಕಲ ಆಪತ್ತು ಪರಿಹಾರವಾಯಿತು. ಅದೇ ಸಮಯದಲ್ಲಿ ಕೋಟಿ ಸೂರ್ಯರ ಪ್ರಭೆ ಉಳ್ಳ, ತೇಜಸ್ವಿನಲ್ಲಿ ನನಗೆ ಸಾಟಿಯಾಗುವ, ಯಾರಿಗೂ ತಡೆಯಲು ಅಸಾಧ್ಯವಾದ ಸುದರ್ಶನ ಚಕ್ರ ಸಭಾಮಧ್ಯದಲ್ಲಿ ಅನಿರೀಕ್ಷಿತವಾಗಿ ಮೈದೋರಿತು. ಗರಗರನೆ ತಿರುಗಿ ಆ ಕೃತ್ಯಾಪುರುಷನನ್ನು ಕತ್ತರಿಸಿ ದುರ್ವಾಸ ಮುನಿಯನ್ನು ಬೆನ್ನಟ್ಟಿತು. ಮುನಿ ಭೂಮಿಯಲ್ಲಿ ಎಲ್ಲೆಡೆ ಪರ್ವತ ಸಾಗರಗಳಲ್ಲಿಯೂ ಸ್ವರ್ಣ ಭೂಮಿಯಲ್ಲಿಯೂ ಧಾವಿಸಿದ. ಚಕ್ರ ಎಲ್ಲಿಯೂ ಬಿಡದೆ ಅವನನ್ನು ಅಟ್ಟಿಸಿಕೊಂಡು ಹಾರಿಬಂದಿತು. ಮುನಿ ಭಯದಿಂದ ಕಾತರನಾಗಿ ಓಡಿದ. ಅವನ ಕೂದಲು ಬಿಚ್ಚಿಹೋಯಿತು. ತೇಜಸ್ಸಿನಿಂದ ಸೂರ್ಯನನ್ನೂ ಮುಚ್ಚುವಂತೆ ಪ್ರಕಾಶದಿಂದ ಬೆಳಗುತ್ತ ಆತ ಕೈಲಾಸಕ್ಕೆ ಓಡಿದ. ಏಳು ಸ್ವರ್ಗಗಳಿಗೆ ಓಡಿದ. ಸುರಕ್ಷಿತವಾದ ಬ್ರಹ್ಮಲೋಕಕ್ಕೂ ಓಡಿದ. ಎಲ್ಲೆಡೆ ಸುತ್ತಿ ವೈಕುಂಠಕ್ಕೂ ಬಂದು

ನಾರಾಯಣನನ್ನು ಮೊರೆ ಹೊಕ್ಕ. ಪಾದಕಮಲದಲ್ಲಿ ಬಿದ್ದ ಮುನಿಪುಂಗವನನ್ನು ದಯಾಸಾಗರನಾದ ಹರಿ ಕಂಡು ಅಭಯ ನೀಡಿದ. ಅವನ ವರದಿಂದ ಮುನಿ ತಾಪ ಕಳೆದುಕೊಂಡು ಅವನನ್ನು ಸ್ತುತಿಸಿ ಅವನಾಜ್ಞೆಯಿಂದ ಅಂಬರೀಷನ ಅರಮನೆಗೆ ನಡೆದ. ರಾಜ ಅವನಿಗೆ ಪಾಯಸ ಉಣಿಸಿ ತಾನು ಪತ್ನಿಯೊಡನೆ, ಬಂಧುಗಳೊಡನೆ ಕೂಡಿ ಪಾರಣ ಮಾಡಿದ. ಮುನಿ ರಾಜನನ್ನು ಹರಸಿ ತನ್ನ ಆಶ್ರಮಕ್ಕೆ ನಡೆದ. ಭಕ್ತರ ರಕ್ಷಣೆಗಾಗಿ ನಾನು ಚಕ್ರವನ್ನಿಟ್ಟಿದ್ದೇನೆ. ಪ್ರಳಯದಲ್ಲಿ ಎಲ್ಲರೂ ನಾಶ ಹೊಂದುತ್ತಾರೆ. ನನ್ನ ಭಕ್ತರಿಗೆ ನಾಶವಿಲ್ಲ. ದೇವತೆಗಳೆಲ್ಲ ನನಗೆ ಪ್ರಾಣಕ್ಕೆ ಸಮರು. ಭಕ್ತರು ಪ್ರಾಣಕ್ಕಿಂತ ಅಧಿಕರು. ನೀನು ಲಕ್ಷ್ಮಿ ಮಹಾಮಾಯೆ ಸಾವಿತ್ರಿ ಸರಸ್ವತಿ ಬ್ರಹ್ಮ ಶಿವ ಶೇಷ ಧರ್ಮ ಮುನಿಗಳು ಗೋಪಾಂಗನೆಯರು ಗೋಪರು ಎಲ್ಲರೂ ನನಗೆ ಅತ್ಯಂತ ಪ್ರೀತಿಪಾತ್ರರು. ಎಲ್ಲರಿಗಿಂತ ಭಕ್ತರು ಹೆಚ್ಚು ಪ್ರಿಯರು. ಭಕ್ತನಿಗಿಂತ ಹೆಚ್ಚು ಪ್ರಿಯನಿನ್ನೊಬ್ಬನಿಲ್ಲ. ಆದ್ದರಿಂದ ಭಕ್ತರ ರಕ್ಷಣೆಗಾಗಿ ಸುದರ್ಶನ ಚಕ್ರವನ್ನು ಇರಿಸಿದ್ದೇನೆ. ಆದರೂ ನನಗೆ ಅದರಲ್ಲಿ ವಿಶ್ವಾಸವಿಲ್ಲ. ನಾನೇ ಸ್ವತಃ ಅವರ ಬಳಿಗೆ ಹೋಗುತ್ತೇನೆ. ರಾಧೆ, ದುರ್ವಾಸನ ದರ್ಪಭಂಗದ ವೃತ್ತಾಂತವನ್ನು ಕೇಳಿರುವೆ. ಇನ್ನೇನು ಕೇಳಲು ಬಯಸುವೆ, ಹೇಳು.

**ರಾಧೆ:-** ಧನ್ವಂತರಿಯ ದರ್ಪಭಂಗದ ಬಗ್ಗೆಯೂ ಹೇಳು. ಪುರಾಣಗಳಲ್ಲಿ ಅದು ಗೋಪ್ಯವಾಗಿ ಇದೆ. ಅದನ್ನು ಕೇಳಲು ಕುತೂಹಲ ಗೊಂಡಿದ್ದೇನೆ.

**ನಾರಾಯಣ:-** ರಾಧೆಯ ಮಾತನ್ನು ಕೇಳಿ ಕೃಷ್ಣ ನಕ್ಕು ಕೇಳಲು ರಮ್ಯವಾದ ಆ ಪುರಾತನ ವೃತ್ತಾಂತವನ್ನು ಹೇಳಲು ತೊಡಗಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರದನಾರಾಯಣಸಂವಾದದಲ್ಲಿ ದುರ್ವಾಸದರ್ಪಭಂಗವೆಂಬ ಐವತ್ತನೆ ಅಧ್ಯಾಯ ಮುಗಿಯಿತು*



## ಧನ್ವಂತರಿ ದರ್ಪಭಂಗ

**ಅಧ್ಯಾಯ - ೫೧**

**ಶ್ರೀಕೃಷ್ಣ:-** ನಾರಾಯಣಾಂಶನಾದ ಭಗವಾನ್ ಧನ್ವಂತರಿ ಹಿಂದೆ ಸಮುದ್ರಮಥನ ಕಾಲದಲ್ಲಿ ಸಮುದ್ರದಿಂದ ಎದ್ದು ಬಂದ. ಅವನು ಸರ್ವವೇದಗಳಲ್ಲಿ ನಿಷ್ಣಾತ. ಮಂತ್ರ ತಂತ್ರಗಳಲ್ಲಿ ಪರಿಣತ. ಗರುಡನ ಶಿಷ್ಯ. ಶಿವನ ಉಪಶಿಷ್ಯ. ಸಾವಿರಾರು ಮಂದಿ ಶಿಷ್ಯರೊಂದಿಗೆ ಒಮ್ಮೆ ಕೈಲಾಸಕ್ಕೆ ಹೊರಟ. ದಾರಿಯಲ್ಲಿ ಭಯನಕವಾಗಿ ನಾಲಿಗೆ ಚಾಚಿದ ಬೆಟ್ಟದಷ್ಟು ಗಾತ್ರದ ಮಹಾ ವಿಷ ಉಳ್ಳ ತಕ್ಷಕನನ್ನು ಕಂಡ. ಲಕ್ಷ ನಾಗರಿಂದೊಡಗೂಡಿ ತನ್ನನ್ನು ಆತ ನುಂಗಲು ಬರುತ್ತಿದ್ದುದನ್ನು ಕಂಡು ಧನ್ವಂತರಿ ನಕ್ಕುಬಿಟ್ಟ. ದಂಭಿ ಎಂಬ ಒಬ್ಬ ಧನ್ವಂತರಿಯ ಶಿಷ್ಯ ಕ್ರೂರನಾದ ಆ ತಕ್ಷಕನನ್ನು ಹಿಡಿದು ಮಂತ್ರದಿಂದ ಸ್ತಂಭಿತನನ್ನಾಗಿ ನಿರ್ವಿಷನನ್ನಾಗಿ ಮಾಡಿ ಅವನ ತಲೆಯಲ್ಲಿ ಇದ್ದ ಶ್ರೇಷ್ಠವಾದ ಮಣಿಯನ್ನು ಕಿತ್ತು ದೂರಕ್ಕೆ ಬೀಸಿ ಒಗೆದ. ತಕ್ಷಕ ನಿಶ್ಚೇಷ್ಟನಾಗಿ ದಾರಿಯಲ್ಲಿ ಶವದಂತೆ ಬಿದ್ದ. ನಾಗರು ವಾಸುಕಿಯ ಬಳಿಗೆ ಧಾವಿಸಿ ಎಲ್ಲವನ್ನೂ ನಿವೇದಿಸಿಕೊಂಡರು. ವಾಸುಕಿ ಅದನ್ನು ಕೇಳಿ ಅತ್ಯಂತ ಕೋಪದಿಂದ ಜ್ವಲಿಸುತ್ತ ಮಹಾವಿಷದ ಅಸಂಖ್ಯ ಸರ್ಪಗಳನ್ನು, ದ್ರೋಣ ಕಾಲಿಯ ಕರ್ಕೋಟಕ ಪುಂಡರೀಕ ಧನಂಜಯ ಎಂಬ ಐದು ಮಂದಿ ಸರ್ಪಸೇನಾಧಿಪತಿಗಳಾದ ಮುಖ್ಯನಾಗರೊಂದಿಗೆ ಕಳಿಸಿಕೊಟ್ಟ.

ಎಲ್ಲ ನಾಗರೂ ಧನ್ವಂತರಿಯ ಬಳಿಗೆ ಬಂದರು. ಅಸಂಖ್ಯನಾಗರು ಬಂದುದನ್ನು ಕಂಡು ಧನ್ವಂತರಿಯ ಶಿಷ್ಯರು ಭಯಪಟ್ಟರು. ನಾಗರ ವಿಷವಾಯುವಿನಿಂದ ಎಲ್ಲರೂ ಶವಗಳಂತೆ ನಿಶ್ಚೇಷ್ಟರಾಗಿ ಪ್ರಜ್ಞಾಶೂನ್ಯರಾಗಿ ನೆಲದ ಮೇಲೆ ಒರಗಿದರು. ಧನ್ವಂತರಿ ಒಡನೆ ಗುರುವನ್ನು ಸ್ಮರಿಸಿ ಮಂತ್ರದಿಂದ ಅಮೃತವನ್ನು ಹರಿಸಿ ಶಿಷ್ಯರನ್ನು ಬದುಕಿಸಿದ. ಬಳಿಕ ಮಂತ್ರದಿಂದ ಕ್ರೂರವಿಷದ ನಾಗರನ್ನು ಸ್ತಂಭಿತರನ್ನಾಗಿ ಮಾಡಿದ. ಅವರೆಲ್ಲರೂ ಶವಗಳಂತೆ ನಿಶ್ಚೇಷ್ಟರಾದರು. ಯಾರೊಬ್ಬರೂ ಈ ವಾರ್ತೆಯನ್ನು ವಾಸುಕಿಗೆ ತಿಳಿಸಲು ಎಚ್ಚರದಿಂದ ಇರಲಿಲ್ಲ. ವಾಸುಕಿ ಸರ್ವಜ್ಞ. ತಾನೆ ಎಲ್ಲ ಸಂಕಟವನ್ನೂ ತಿಳಿದು ಸೋದರಿಯಾದ ಜ್ಞಾನರೂಪಳಾದ ಜಗದ್ಗೌರಿಯನ್ನು ಕರೆಸಿಕೊಂಡ.

**ವಾಸುಕಿ:-** ಮನಸೆ, ಬಾ, ನಾಗರನ್ನು ಮಹಾ ಆಪತ್ತಿನಿಂದ ಕಾಪಾಡು. ಅದರಿಂದ ಮೂಲೋಕದಲ್ಲಿ ನಿನಗೆ ಪೂಜೆ ಸಲ್ಲುವುದು. ವಾಸುಕಿಯ ಮಾತನ್ನು ಕೇಳಿ ಮನಸೆ ನಕ್ಕು ವಿನಯದಿಂದ ಬಾಗಿನಿಂತು ಅಮೃತದಂಥ ಮಾತನ್ನಾಡಿದಳು.

**ಮನಸೆ:-** ನಾಗರಾಜ, ಕೇಳು ನನ್ನ ಮಾತನ್ನು. ನಾನು ಯುದ್ಧಕ್ಕೆ ತೆರಳುತ್ತೇನೆ. ಒಳ್ಳೆಯದೊ ಕೆಟ್ಟದೊ ದೈವ ಪ್ರೇರಿಸಿದಂತೆ ಉಚಿತವಾದುದನ್ನು ಮಾಡುತ್ತೇನೆ. ಆಶತ್ರುವನ್ನು ಅನಾಯಾಸವಾಗಿ ರಣರಂಗದಲ್ಲಿ ಕೊಲ್ಲುತ್ತೇನೆ. ನಾನು ಯಾರನ್ನು ಕೊಲ್ಲುವೆನೋ ಅವನನ್ನು ಯಾರು ತಾನೆ ಬದುಕಿಸಬಲ್ಲರು? ಬ್ರಹ್ಮಾದಿ ದೇವತೆಗಳು

ರಣರಂಗಕ್ಕೆ ಬಂದರೂ ಸರಿಯೆ. ನಾನು ನಿನ್ನ ಶತ್ರುವನ್ನು ಗೆಲ್ಲುವುದರಲ್ಲಿ ಸಂಶಯವಿಲ್ಲ. ನನಗೆ ಗುರು ಭಗವಾನ್ ಶೇಷ. ಅವನು ನನಗೆ ಜಗದೊಡೆಯನಾದ ನಾರಾಯಣನ ಪರಮಾದ್ಭುತವಾದ ಸಿದ್ಧಮಂತ್ರವನ್ನು ನೀಡಿದ್ದಾನೆ. ಮೂಲೋಕಕ್ಕೆ ಮಂಗಳಕರವಾದ ಕವಚವನ್ನು ಕುತ್ತಿಗೆಯಲ್ಲಿ ಧರಿಸಿದ್ದೇನೆ. ಪ್ರಪಂಚವನ್ನು ಸುಟ್ಟು ಬೂದಿಮಾಡಿ ತಿರುಗಿ ಸೃಷ್ಟಿ ಮಾಡಬಲ್ಲೆ. ನಾನು ಮಂತ್ರಶಾಸ್ತ್ರಗಳಲ್ಲಿ ಹಿಂದೆ ಶಿವನ ಶಿಷ್ಯಳಾಗಿದ್ದೆ. ಅವನು ದಯೆಯಿಂದ ನನಗೆ ಮಹಾಜ್ಞಾನವನ್ನು ನೀಡಿದ್ದಾನೆ. ಶಿವನ ಶಿಷ್ಯ ಗರುಡ. ಅವನನ್ನು ನಾನು ಲೆಕ್ಕಿಸಲಾರೆ. ಧನ್ವಂತರಿ ಅವನ ಶಿಷ್ಯರಲ್ಲಿ ಒಬ್ಬ. ಅವನು ನನಗೆ ಯಾವ ಲೆಕ್ಕ?

ಹೀಗೆ ಹೇಳಿ ಮನಸೆ ಶ್ರೀಹರಿಯನ್ನೂ ಶಿವನನ್ನೂ ಶೇಷನನ್ನೂ ನಮಿಸಿ ಎಲ್ಲ ನಾಗರನ್ನೂ ಬಿಟ್ಟು ಒಬ್ಬಳೆ ಕೋಪದಿಂದ ಧನ್ವಂತರಿದೇವನಿದ್ದಲ್ಲಿಗೆ ಬಂದಳು. ದೃಷ್ಟಿಮಾತ್ರದಿಂದ ಸರ್ಪಗಳನ್ನು ಬದುಕಿಸಿದಳು. ವಿಷದೃಷ್ಟಿಯಿಂದ ಶತ್ರುಶಿಷ್ಯರನ್ನು ನಿಶ್ಚೇಷ್ಟರನ್ನಾಗಿಸಿದಳು. ಭಗವಾನ್ ಧನ್ವಂತರಿ ಮಂತ್ರಶಾಸ್ತ್ರವಿಶಾರದ. ಮಂತ್ರದಿಂದ ಯತ್ನಿಸಿದ. ಆದರೆ ಶಿಷ್ಯರನ್ನು ಎಬ್ಬಿಸಲಾಗಲಿಲ್ಲ. ಮನಸೆ ನೋಡಿ ನಕ್ಕು ಅಹಂಕಾರಗರ್ಭಿತವಾದ ಬಹ್ವರ್ಥಯುಕ್ತವಾದ ಮಾತನ್ನಾಡಿದಳು.

**ಮನಸೆ:-** ಮಂತ್ರಾರ್ಥ, ಮಂತ್ರಶಿಲ್ಪ, ಮಂತ್ರಭೇದ, ಮಹೌಷಧಗಳನ್ನು ನೀನೇನು ಬಲ್ಲೆ ಹೇಳು. ನೀನು ಗರುಡನ ಶಿಷ್ಯ ತಾನೆ? ನಾನೂ ಗರುಡನೂ ಶಿವನ ಶಿಷ್ಯರು. ಕಲ್ಪಕಾಲದವರೆಗೆ ದೀರ್ಘಕಾಲ ನಾನು ಅಭ್ಯಾಸಮಾಡಿದ್ದೇನೆ.

ಹೀಗೆ ಹೇಳಿ ಮನಸೆ ಕೊಳದಿಂದ ಒಂದು ಕಮಲವನ್ನು ಎತ್ತಿ ಮಂತ್ರಪೂರ್ವಕವಾಗಿ ಕೋಪದಿಂದ ಎಸೆದಳು. ಉರಿವ ಬೆಂಕಿಯ ಜ್ವಾಲೆಯಂತೆ ಬರುತ್ತಿದ್ದ ಪದ್ಮವನ್ನು ಧನ್ವಂತರಿ ನಿಃಶ್ವಾಸದಿಂದ ಸುಟ್ಟು ಬೂದಿ ಮಾಡಿದ. ಆಬೂದಿಯನ್ನು ಮಂತ್ರದಿಂದ ನಿಷ್ಫಲವನ್ನಾಗಿ ಮಾಡಿ ನಕ್ಕ. ದೇವಿ ಬೇಸಗೆಯ ಸೂರ್ಯನಂತೆ ಜ್ವಲಿಸುವ ಶಕ್ತ್ಯಾಯುಧವನ್ನೆತ್ತಿ ಮಂತ್ರಪೂರ್ವಕವಾಗಿ ಎಸೆದಳು. ಜಾಜ್ವಲ್ಯಮಾನವಾದ ಆಆಯುಧವನ್ನು ನೋಡಿ ಧನ್ವಂತರಿ ವಿಷ್ಣುದತ್ತವಾದ ಶೂಲದಿಂದ ಅನಾಯಾಸವಾಗಿ ಕಡಿದ. ಶಕ್ತಿ ವ್ಯರ್ಥವಾದುದನ್ನು ಕಂಡು ಮನಸೆ ಅಮೋಘವಾದ ಭಯಂಕರ ನಾಗಪಾಶವನ್ನು ಎತ್ತಿಕೊಂಡಳು. ಸಿದ್ಧಮಂತ್ರದಿಂದ ಮಂತ್ರಿಸಿ ಲಕ್ಷನಾಗರೊಂದಿಗೆ ಕೋಪದಿಂದ ಪ್ರಯೋಗಿಸಿದಳು. ಕಾಲಯಮನಂತೆ ಜ್ವಲಿಸುವ ಆ ನಾಗಪಾಶವನ್ನು ನೋಡಿ ಧನ್ವಂತರಿ ಗರುಡನನ್ನು ನೆನೆದ. ಒಡನೆ ಗರುಡ ಬಂದು ಆ ಸರ್ಪಾಸ್ತ್ರವನ್ನು ಕೊಕ್ಕಿನಲ್ಲಿ ಹಿಡಿದು ಬೇಗನೆ ನುಂಗಿದ. ಬಹು ಕಾಲದಿಂದ ಹಸಿದಿದ್ದ ಆತ. ನಾಗಾಸ್ತ್ರ ಹೀಗೆ ವ್ಯರ್ಥವಾದುದನ್ನು ನೋಡಿ ಮನಸೆ ಕೋಪದ ಕೆಂಗಣ್ಣಿಂದ ನೋಡುತ್ತ ಶಿವದತ್ತವಾದ ಭಸ್ಮ ಮುಷ್ಟಿಯನ್ನು ಎತ್ತಿಕೊಂಡು ಮಂತ್ರಿಸಿ ಎಸೆದಳು. ಗರುಡ ತನ್ನ ರೆಕ್ಕೆಯ ಗಾಳಿಯಿಂದ ಆ ಬೂದಿಯನ್ನು ದೂರಕ್ಕೆ ಹಾರಿಸಿದ.

ಭಸ್ಮವೂ ಹೀಗೆ ದೂರದಲ್ಲಿ ಬಿದ್ದುದನ್ನು ಕಂಡು ಮನಸೆ ಕೋಪದಿಂದ ಅಮೋಘವಾದ ಶೂಲವನ್ನು ಹಿಡಿದು ಸ್ವಯಂ ಧನ್ವಂತರಿಯನ್ನು ಕೊಲ್ಲಲು ಬಂದಳು. ಅದು ಶಿವದತ್ತವಾದ ಶೂಲ. ನೂರಾರು ಸೂರ್ಯರಂತೆ ಜ್ವಲಿಸುವಂಥದ್ದು. ಪ್ರಳಯಾಗ್ನಿಯಂತಿದ್ದು ಲೋಕದಲ್ಲೆ ಅತಿ ಶ್ರೇಷ್ಠವಾದ ಶೂಲ. ಅಷ್ಟರಲ್ಲಿ ಧನ್ವಂತರಿ

ಮತ್ತು ಗರುಡರ ರಕ್ಷಣೆಗಾಗಿ ಬ್ರಹ್ಮ ಶಿವರು ಗೋಚರಿಸಿದರು. ಮನಸೆ ಶಿವ ಬ್ರಹ್ಮರನ್ನು ಕಂಡು ನಿಃಶಂಕೆಯಿಂದ ಶೂಲಧಾರಿಣಿಯಾಗಿಯೆ ನಮಿಸಿದಳು. ಇತ್ತ ಧನ್ವಂತರಿ ಗರುಡರೂ ಭಕ್ತಿಯಿಂದ ನಮಿಸಿ ಸ್ತೋತ್ರ ಮಾಡಿದರು. ಅವರು ಆಶೀರ್ವದಿಸಿದರು. ಬ್ರಹ್ಮ ಲೋಕಹಿತಕ್ಕಾಗಿ ಮತ್ತು ಮನಸೆಗೆ ಲೋಕದಲ್ಲಿ ಪೂಜೆ ಲಭಿಸುವುದಕ್ಕಾಗಿ ಧನ್ವಂತರಿಗೆ ಮಧುರವಾಗಿ ಹೀಗೆ ನುಡಿದ.

**ಬ್ರಹ್ಮ:-** ಧನ್ವಂತರಿ, ನೀನು ಸರ್ವಶಾಸ್ತ್ರವಿಶಾರದ. ಆದರೆ ಮನಸೆಯೊಂದಿಗೆ ಯುದ್ಧದಲ್ಲಿ ನೀನು ಸಮನೆಂದು ನಾನು ಬಗೆಯುವುದಿಲ್ಲ. ಯಾರಿಂದಲೂ ತಡೆಯಲಾಗದ ಶಿವದತ್ತವಾದ ಶೂಲದಿಂದ ಮೂಲೋಕವನ್ನು ಭಸ್ಮಮಾಡಲು ಇವಳು ಸಮರ್ಥಳು. ಆದರಿಂದ ನೀನು ಕೌಥುಮಶಾಖೋಕ್ತ ರೀತಿಯಲ್ಲಿ ಭಕ್ತಿಯಿಂದ ದೇವಿಯನ್ನು ಧ್ಯಾನಿಸಿ ಷೋಡಶೋಪಚಾರಗಳನ್ನಿತ್ತು ಪೂಜಿಸು. ಆಸ್ತೀಕನು ಹೇಳಿದ ಕ್ರಮದಿಂದ ಸ್ತೋತ್ರ ಮಾಡು. ಸಂತುಷ್ಟಳಾಗಿ ಮನಸೆ ನಿನಗೆ ವರ ನೀಡುವಳು.

ಬ್ರಹ್ಮನ ಮಾತನ್ನು ಕೇಳಿ ಶಿವ ಅನುಮತಿ ನೀಡಿದ. ಗರುಡನೂ ಬಹಳ ಯತ್ನಮಾಡಿ ಒಪ್ಪಿಸಿದ. ಇವರೆಲ್ಲರ ಮಾತನ್ನು ಕೇಳಿ ಧನ್ವಂತರಿ ಸ್ನಾನ ಮಾಡಿ ಶುಚಿಯಾಗಿ ಅಲಂಕೃತನಾಗಿ ಬ್ರಹ್ಮನನ್ನೆ ಪುರೋಹಿತನನ್ನಾಗಿ ಮಾಡಿಕೊಂಡು ದೇವಿಯನ್ನು ಪೂಜಿಸಲು ಆರಂಭಿಸಿದ.

**ಧನ್ವಂತರಿ:-** ಜಗದ್ಗೌರಿ, ಬಾ, ನನ್ನ ಪೂಜೆಯನ್ನು ಸ್ವೀಕರಿಸು. ಕಶ್ಯಪರ ಮಗಳಾದ ನೀನು ಮೂಲೋಕದಲ್ಲಿ ಪೂಜ್ಯಳು. ನೀನು ವಿಷ್ಣು ಸ್ವರೂಪಳು. ಸಮಸ್ತ ಜಗತ್ತನ್ನು ಗೆದ್ದಿರುವಿ. ಆದರಿಂದ ನೀನು ಯುದ್ಧರಂಗದಲ್ಲಿ ಅಸ್ತ್ರಪ್ರಯೋಗ ಮಾಡಬೇಡ.

ಹೀಗೆ ಹೇಳಿ ಭಕ್ತಿಯಿಂದ ತಲೆಬಾಗಿ ಬಿಳಿ ಹೂವನ್ನು ಎತ್ತಿ ಹಿಡಿದುಕೊಂಡು ಧ್ಯಾನ ಮಾಡಲು ತೊಡಗಿದ- 'ದೇವಿ ಸಂಪಿಗೆಯಂಥ ಮೈ ಬಣ್ಣದವಳು. ಸರ್ವಾಂಗ ಸುಂದರಿ. ನಗುಮೊಗದಿಂದ ಶೋಭಿಸುವವಳು. ತೆಳುವಾದ ಸೀರೆ ಉಟ್ಟವಳು. ತಲೆಗೂದಲು ಕಟ್ಟಿಕೊಂಡು ರತ್ನಾಭರಣಗಳಿಂದ ಅಲಂಕರಿಸಿಕೊಂಡವಳು. ಎಲ್ಲರಿಗೂ ಅಭಯ ನೀಡುವವಳು. ಭಕ್ತರಿಗೆ ಅನುಗ್ರಹ ಮಾಡುವವಳು. ಸರ್ವವಿದ್ಯಾವಿಶಾರದೆ, ಸರ್ವವಿದ್ಯಾದಾಯಿನಿ, ವಾಸುಕಿಯ ಸೋದರಿ, ನಾಗೇಶ್ವರಿಯಾದ ಈ ದೇವಿ ಮನಸೆಯನ್ನು ಭಜಿಸುವೆನು.' ಹೀಗೆ ಧ್ಯಾನಿಸಿ ಹೂವನ್ನು ಅರ್ಪಿಸಿ ನಾನಾ ದ್ರವ್ಯಯುಕ್ತವಾದ ಷೋಡಶೋಪಚಾರಗಳನ್ನಿತ್ತು ಪೂಜಿಸಿದ. ಕೈ ಮುಗಿದು ತಲೆಬಾಗಿ ಮೈ ರೋಮಾಂಚಗೊಂಡು ಸ್ತೋತ್ರ ಮಾಡಿದ.

**ಧನ್ವಂತರಿ:-** ಸಿದ್ಧಿಸ್ವರೂಪೆ, ಸಿದ್ಧಿದಾಯಿನಿ, ಕಶ್ಯಪಕನ್ಯೆ, ವರದೆ, ಶಂಕರಕನ್ಯೆ, ಶಂಕರಿ, ನಾಗಭಗಿನಿ, ನಾಗೇಶ್ವರಿ. ಆಸ್ತೀಕಜನನಿ, ಜಗಜ್ಜನನಿ, ಜರತ್ಕಾರು ಪತ್ನಿ, ಯೋಗಿನಿ, ತಪಸ್ವಿನಿ, ಸುಖದಾಯಿನಿ, ತಪೋರೂಪಿಣಿ, ತಪಃ ಫಲದಾಯಿನಿ, ಸುಶೀಲೆ, ಸಾಧ್ವಿ, ಶಾಂತೆ, ನಿನಗೆ ನಮೋ ನಮಃ.

ಹೀಗೆ ಹೇಳಿ ಭಕ್ತಿಯಿಂದ ನಮಿಸಿದ. ದೇವಿ ಸಂತುಷ್ಟಳಾಗಿ ವರ ನೀಡಿ ತನ್ನ ಲೋಕಕ್ಕೆ ತೆರಳಿದಳು. ಬ್ರಹ್ಮ ರುದ್ರ ಗರುಡರೂ ತಮ್ಮ ಲೋಕಗಳಿಗೆ ಹೋದರು. ಧನ್ವಂತರಿಯೂ ತನ್ನ ಮನೆಗೆ ತೆರಳಿದ. ನಾಗರೂ ಹೆಡೆಗಳನ್ನೆತ್ತಿ ಸಂತೋಷದಿಂದ ಹಿಂತಿರುಗಿದರು.

ರಾಧೆ, ಇದು ಶ್ರೇಷ್ಠವಾದ ಸ್ತೋತ್ರ. ಮಗನಾದ ಆಸ್ತೀಕ ತಾಯಿಯನ್ನು ವಿಧ್ಯುಕ್ತವಾಗಿ ಮಾಡಿದ ಸ್ತೋತ್ರ. ಆಗ ಸಂತುಷ್ಟಳಾದ ಜಗದ್ಗೌರಿ ಆ ಮಗನನ್ನು ಮುನಿಪುಂಗವನನ್ನಾಗಿ ಮಾಡಿದಳು. ಈ ಸ್ತೋತ್ರ ಮಹಾಪುಣ್ಯಕರ. ಭಕ್ತಿಯಿಂದ ಪಠಿಸಿದರೆ ಅವನ ವಂಶಜರಿಗೂ ನಾಗ ಭಯವಿರುವುದಿಲ್ಲ. ಇದರಲ್ಲಿ ಸಂಶಯ ಬೇಡ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರದನಾರಾಯಣಸಂವಾದದಲ್ಲಿ ಧನ್ವಂತರಿದರ್ಪಭಂಗ ಮನಸಾವಿಜಯವೆಂಬ ಐವತ್ತೊಂದನೆ ಅಧ್ಯಾಯ ಮುಗಿಯಿತು*



## ಗೋಪಿಯರೊಡನೆ ರಾಸಕ್ರೀಡೆ

ಅಧ್ಯಾಯ - ೫೨

**ಶ್ರೀಕೃಷ್ಣ:-** ರಾಧೆ, ನಾನು ಸಣ್ಣ ಹಾಗೂ ದೊಡ್ಡ ದೇವತೆಗಳೆಲ್ಲರ ದರ್ಪಭಂಗವನ್ನೂ ವರ್ಣಿಸಿದ್ದೇನೆ, ನೀನು ಕೇಳಿರುವಿ. ಇನ್ನು ಎದ್ದೇಳು. ವೃಂದಾವನಕ್ಕೆ ಹೋಗೋಣ. ಬೇಗನೆ ವಿರಹಾರ್ತರಾದ ಗೋಪಿಯರನ್ನು ನೋಡಬೇಕು.

**ನಾರಾಯಣ:-** ಈ ಮಾತನ್ನು ಕೇಳಿ ಮಾನಿನಿಯಾದ ರಾಧೆ ಹೇಳಿದಳು, 'ನಾಥ, ನನ್ನನ್ನು ಎತ್ತಿಕೊಳ್ಳು, ನಾನು ನಡೆಯಲಾರೆ.' ರಾಧೆಯ ಮಾತನ್ನು ಕೇಳಿ ಕೃಷ್ಣ ನಕ್ಕು 'ನನ್ನ ಬೆನ್ನ ಮೇಲೇರು' ಎನ್ನುತ್ತ ಕಣ್ಮರೆಯಾದ. ರಾಧೆ ಅಳುತ್ತ ಮನೋವೇಗದಿಂದ ಎಲ್ಲೆಡೆ ಕೃಷ್ಣನನ್ನು ಅರಸಿ ವೃಂದಾವನವನ್ನು ಸೇರಿದಳು. ಅಳುತ್ತ ಶೋಕಾರ್ತಳಾಗಿಯೆ ಚಂದನವನವನ್ನು ಪ್ರವೇಶಿಸಿದಳು. ಶೋಕಾರ್ತರಾಗಿ ಭಯವಿಹ್ವಲತೆಯಿಂದ ಸಂಚರಿಸುತ್ತಿದ್ದ ಗೋಪಿಯರನ್ನು ಕಂಡಳು. ಅವರು 'ನಾಥ! ನಾಥ!' ಎನ್ನುತ್ತ ನಿರಾಹಾರರಾಗಿ ದುಃಖಿಸುತ್ತಿದ್ದುದನ್ನು ನೋಡಿ ತಾನು ಕೃಷ್ಣನೊಂದಿಗೆ ಮಲಯ ಮುಂತಾದ ಕಡೆಗಳಲ್ಲಿ ವಿಹರಿಸಿದುದನ್ನು ಬಣ್ಣಿಸಿದಳು. ಅವರೊಂದಿಗೆ ತಾನೂ 'ನಾಥ! ನಾಥ!' ಎನ್ನುತ್ತ ಅತ್ತಳು. ಎಲ್ಲರೂ ಕೃಷ್ಣನನ್ನು ಒಮ್ಮೆ ಬೈಯುವರು, ಬೆದರಿಸುವರು, ಒಮ್ಮೆ ಶರೀರತ್ಯಾಗ ಮಾಡಲು ಹೊರಡುವರು.

ಅಷ್ಟರಲ್ಲಿ ಶ್ರೀಕೃಷ್ಣ ಮೈದೋರಿದ. ಚಂದನವನದಲ್ಲಿ ರಾಧೆಯೂ ಗೋಪಿಯರೂ ಕೃಷ್ಣನನ್ನು ಕಂಡು ಅವನ ಬಳಿಗೆ ಓಡಿದರು. ರಾಧೆ ಮೈರೋಮಾಂಚಗೊಂಡು ಅವನನ್ನು ಅಪ್ಪಿಕೊಂಡಳು. ಕೋಪದಿಂದ ಕೊಳಲನ್ನು ಕಿತ್ತುಕೊಂಡಳು, ಮಾಲೆಯನ್ನು ತೆಗೆದಳು, ಪೀತಾಂಬರವನ್ನು ಬಿಚ್ಚಿ ನಗ್ನಗೊಳಿಸಿದಳು. ಪುನಃ ಬಟ್ಟೆ ಉಡಿಸಿ ಮಾಲೆ ಹಾಕಿ ಕೈಗೆ ಕೊಳಲನ್ನು ಕೊಟ್ಟಳು. ಚಂದನ ಅಗುರು ಕಸ್ತೂರಿ ಕುಂಕುಮಗಳಿಂದ ಅಲಂಕೃತವಾದ ಮುಖವನ್ನು ನೋಡಿ ಪುನಃ ಪುನಃ ಚುಂಬಿಸಿದಳು. ಒಮ್ಮೆ ಬೆದರಿಸುವಳು. ಇನ್ನೊಮ್ಮೆ ಸ್ತೋತ್ರಮಾಡುವಳು, ಕರ್ಪೂರ ತಾಂಬೂಲ ನೀಡುವಳು.

ಬಳಿಕ ಎಲ್ಲ ಗೋಪಾಂಗನೆಯರೂ ಪ್ರೇಮವಿಹ್ವಲತೆಯಿಂದ ಅತ್ತರು. ತಮ್ಮ ವಿರಹದುಃಖವನ್ನೆಲ್ಲ ಹೇಳಿಕೊಂಡರು. ಸ್ನಾನಭೋಜನಗಳನ್ನು ಪರಿತ್ಯಜಿಸಿ ದೇಹತ್ಯಾಗಕ್ಕೆ ಹೊರಟಿದ್ದನ್ನು, ಎಲ್ಲ ಕಾಡುಗಳಲ್ಲಿ ಹಗಲು ರಾತ್ರಿ ಎನ್ನದೆ ಸದಾ ಅಲೆಯುತ್ತಿದ್ದುದನ್ನು ಹೇಳಿದರು. ಅವರೂ ಒಮ್ಮೆ ಕೃಷ್ಣನನ್ನು ಬೈವರು, ಒಮ್ಮೆ ಸ್ತೋತ್ರ ಮಾಡುವರು, ಒಮ್ಮೆ ಆಭರಣಗಳನ್ನು ನೀಡುವರು, ಚಂದನವನ್ನು ಬಳಿಯುವರು. ಕೆಲವರು ನೀನು ನನ್ನ ಪ್ರಾಣ/ಗಳನ್ನು ಅಪಹರಿಸುವೆ, ಹಾಗೆ ಮಾಡಬೇಡ ಎನ್ನುವರು. ಕೆಲವರು 'ಇನ್ನು ಮುಂದೆ ಅವನು ಹೀಗೆ ಮಾಡದಂತೆ ಅವನನ್ನು ನಡುವೆ ನಿಲ್ಲಿಸಿ ಕಟ್ಟಿ ಹಾಕೋಣ. ಹೃದಯದಲ್ಲಿ ಪ್ರೇಮಪಾಶದ ಬಂಧನದಲ್ಲಿ ಇಡೋಣ' ಎನ್ನುವರು. ಕೆಲವರು, 'ಹಾಗೆ ಮಾಡಿದರೂ ಅವನು ನಿಲ್ಲುವನೆಂಬ ನಂಬಿಕೆ ನನಗಿಲ್ಲ.' ಎನ್ನುವರು. 'ನೋಡು ನಮ್ಮ ಮನವನ್ನು ಕದಿವ ಕಳ್ಳ ಸಿಕ್ಕಿಬಿದ್ದ' ಎನ್ನುವರು. 'ಈತ ನಿಷ್ಠುರ, ನರಹಂತಕ' ಎಂದು ಕೋಪದಿಂದ ಹೇಳುವರು. 'ನೋಡು, ಅವನು ನನಗಾಗಲಿ ಯಾರಿಗಾಗಲಿ ಒಂದು ಮಾತನ್ನಾಡುವುದಿಲ್ಲ!' ಎನ್ನುವರು. ಹೀಗೆ ಗೋಪಿಯರು ಕೃಷ್ಣನನ್ನು ವಶಪಡಿಸಿಕೊಂಡು ನಿರ್ಜನವಾದ ರಮ್ಯವಾದ ವನಗಳಲ್ಲಿ ವಿಹರಿಸಿದರು. ಬಳಿಕ ಅವನನ್ನು ರಾಸಮಂಡಲದ ಸ್ವರ್ಣಪೀಠದಲ್ಲಿ ಕುಳ್ಳಿರಿಸಿದರು. ನಕ್ಷತ್ರಗಳ ನಡುವೆ ಚಂದ್ರನಂತೆ ಶ್ರೀಕೃಷ್ಣ ಅಲ್ಲಿ ರಾರಾಜಿಸಿದ. ನಾನಾ ರೂಪಗಳನ್ನು ಸ್ವೀಕರಿಸಿ ರಾಸಲೀಲೆ ನಡೆಸಿದ. ತಿರುಗಿ ಗೋಪಿಯರೊಡನೆ ಕ್ರೀಡಿಸಿ, ರಾಧೆಯನ್ನು ವಿಶ್ವಕರ್ಮ ನಿರ್ಮಿತವಾದ ರತಿ ಮಂದಿರಕ್ಕೆ ಒಯ್ದ. ಅಲ್ಲಿ ಸಂಪಿಗೆಯ ಹಾಸಿಗೆ ಮೇಲೆ ಅವಳೊಡನೆ ಮಲಗಿದ. ನಾನಾ ಬಗೆಯ ಶೃಂಗಾರ ಕ್ರೀಡೆ ನಡೆಸಿದ. ಅತ್ತ ಬೇರೆ ಗೋಪಿಯರೊಡನೆಯೂ ಬೇರೆ ರೂಪಗಳಿಂದ ಕ್ರೀಡಿಸಿದ.

**ನಾರದ:-** ಪ್ರಭು, ಮೊದಲಿಗೆ ರಾಧೆಯ ನಾಮವನ್ನು ಉಚ್ಚರಿಸಿ ಬಳಿಕ ಕೃಷ್ಣ ನಾಮವನ್ನು ಬಲ್ಲವರು ಹೇಳುತ್ತಾರೆ. ಇದಕ್ಕೆ ಏನು ಕಾರಣ, ಹೇಳು.

**ನಾರಾಯಣ:-** ಇದಕ್ಕೆ ಮೂರು ಕಾರಣಗಳಿವೆ, ಹೇಳುತ್ತೇನೆ, ಕೇಳು. ಪ್ರಕೃತಿ ಜಗನ್ಮಾತೆ. ಪುರುಷ ಜಗತ್ತಿನ ತಂದೆ. ತಂದೆಗಿಂತ ತಾಯಿ ನೂರು ಪಟ್ಟು ಹೆಚ್ಚು ಪೂಜ್ಯಳು. ಅದರಿಂದ 'ರಾಧಾಕೃಷ್ಣ', 'ಗೌರೀಶ' ಎಂದು ಮುಂತಾಗಿಯೆ ಹೇಳುತ್ತಾರೆ. 'ಕೃಷ್ಣ ರಾಧಾ' 'ಈಶಗೌರೀ' ಎಂದಲ್ಲ. 'ಪ್ರಸನ್ನನಾಗು, ರೋಹಿಣೀಚಂದ್ರ! ಈಅರ್ಘ್ಯವನ್ನು ಸ್ವೀಕರಿಸು' 'ಸಂಜ್ಞಾಸಹಿತನಾದ ಸೂರ್ಯನೆ. ನನ್ನ ಅರ್ಘ್ಯವನ್ನು ಸ್ವೀಕರಿಸು' 'ಪ್ರಸನ್ನನಾಗು, ಕಮಲಾಕಾಂತ! ನನ್ನ ಪೂಜೆಯನ್ನು ಸ್ವೀಕರಿಸು' ಹೀಗೇ ಹೇಳುವುದು ಸಾಮವೇದದ ಕೌಥುಮಶಾಖೆಯಲ್ಲಿ ಕಂಡಿದೆ.

'ರಾ ' ಶಬ್ದೋಚ್ಚಾರಣ ಮಾಡಿದ ಮಾತ್ರಕ್ಕೆ ಮಾಧವ ಪ್ರಕಟನಾಗುತ್ತಾನೆ. 'ಧಾ' ಶಬ್ದೋಚ್ಚಾರಣ ಮಾಡಿದೊಡನೆ ಹಿಂದಿಂದ ಓಡಿಬರುತ್ತಾನೆ, ಅದರಿಂದ 'ರಾಧೆ'ಯ ಹಿಂದಿನಿಂದ 'ಮಾಧವ' ಎಂದೇ 'ರಾಧಾಮಾಧವ' ಎನ್ನಬೇಕು.

ಮೊದಲಿಗೆ ಪುರುಷನನ್ನು ಹೇಳಿ ಬಳಿಕ ಪ್ರಕೃತಿಯನ್ನು ಹೇಳಿದರೆ ಅವನು 'ಮಾತೃಘಾತಿ' ಎನಿಸುತ್ತಾನೆ. ವೇದಾತಿಕ್ರಮಣವೂ ಆಗುತ್ತದೆ. ಆದರಿಂದಲೂ ರಾಧೆಯನ್ನು ಮೊದಲು ಉಚ್ಚರಿಸಬೇಕು. ಬಳಿಕ ಕೃಷ್ಣನನ್ನು ಹೇಳಬೇಕು.

**ಮೂಲೋಕದಲ್ಲಿ ಭಾರತ ಕರ್ಮಕ್ಷೇತ್ರ, ಪುಣ್ಯದಾಯಕ, ಧನ್ಯ, ಭಾರತದಲ್ಲಿ ರಾಧೆಯ ಪಾದಕಮಲಗಳ ದೂಳಿನಿಂದ ಪವಿತ್ರಿತವಾದ ವೃಂದಾವನ ಧನ್ಯ. ರಾಧೆಯ ಪಾದಕಮಲ ದೂಳನ್ನು ಕಾಣಲು ಬ್ರಹ್ಮ ಅರವತ್ತುಸಾವಿರ ವರ್ಷಕಾಲ ತಪಸ್ಸನ್ನು ಮಾಡಬೇಕಾಯಿತು.**

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರದನಾರಾಯಣಸಂವಾದದಲ್ಲಿ ರಾಧಾಮಾಧವ ರಾಸವರ್ಣನವೆಂಬ ಐವತ್ತೆರಡನೆ ಅಧ್ಯಾಯ ಮುಗಿಯಿತು*



## ರಾಧೆಯೊಡನೆ ವಿಹಾರ

ಅಧ್ಯಾಯ - ೫೩

**ನಾರದ:-** ರಾಸಕ್ರೀಡೆ ಪೂರ್ಣವಾಗಿ ಮುಗಿದಾಗ ಶ್ರೀಕೃಷ್ಣನೇನು ಮಾಡಿದ? ಏನು ರಹಸ್ಯ ನಡೆಯಿತು? ಅದನ್ನು ಹೇಳು.

**ನಾರಾಯಣ:-** ರಾಸವನ್ನು ಮುಗಿಸಿ ರಾಸೇಶ್ವರ ರಾಸೇಶ್ವರಿಯೊಡನೆ ಯಮುನಾ ತೀರಕ್ಕೆ ನಡೆದ. ಅಲ್ಲಿ ಸ್ನಾನ ಮಾಡಿ ನಿರ್ಮಲವಾದ ನೀರನ್ನು ಕುಡಿದು ಗೋಪಾಂಗನೆಯರೊಡನೆ ಜಲಕೇಳಿಯಾಡಿದ. ಬಳಿಕ ರಾಧೆಯೊಡನೆ ಭಾಂಡೀರಕ್ಕೆ ತೆರಳಿದ. ಗೋಪಾಂಗನೆಯರು ವಿರಹಾತುರರಾಗಿಯೆ ತಮ್ಮ ಮನೆಗಳಿಗೆ ತೆರಳಿದರು.

ಮಾಲತೀವನದಲ್ಲಿ ಭಾಂಡೀರದ ಏಕಾಂತಸ್ಥಳದಲ್ಲಿ ಮಾಲತೀಪುಷ್ಪದ ಹಾಸಿಗೆಯಲ್ಲಿ ರಾಧೆಯೊಡನೆ ಕ್ರೀಡಿಸಿದ. ಬಳಿಕ ವಾಸಂತೀವನದಲ್ಲಿ ಮತ್ತು ಚಂದನವನದಲ್ಲಿ, ಬೆಳದಿಂಗಳ ವಿಹಾರ ಮಾಡಿದ. ಬಳಿಕ ಚಂಪಕವನದಲ್ಲಿ ಸಂಪಿಗೆ ಹೂವಿನ ಹಾಸಿಗೆಯಲ್ಲಿ ರತಿಕ್ರೀಡೆಯಾಡಿ ಪದ್ಮವನಕ್ಕೆ ಹೋಗಿ ತಾವರೆ ಎಲೆಯ ಹಾಸಿಗೆಯಲ್ಲಿ ತಾವರೆಗಂಪಿನ ಗಾಳಿಯನ್ನು ಸೇವಿಸುತ್ತ ತಾವರೆ ಮೊಗದ ರಾಧೆಯೊಡನೆ ಆಟವಾಡಿದ. ಸುಖನಿದ್ದೆ ಮಾಡಿದ. ನಿದ್ದೆಯಿಂದ ಎದ್ದು ಇನ್ನೂ ಮಲಗಿದ್ದ ರಾಧೆಯ ಮುಖವನ್ನು ಕಂಡ. ಶರತ್ಕಾಲದ ಚಂದ್ರನಂಥ ಮುಖ ಅದು. ಹಣೆಯ ಸಿಂದೂರ, ಕಣ್ಣಿನ ಕಾಡಿಗೆ, ತುಟಿಯ ಕೆಂಪು, ಕೆನ್ನೆಯ ಪತ್ರಿಕೆ ಎಲ್ಲವೂ ಒರೆಸಿ ಹೋಗಿದ್ದುವು. ತಲೆಗೂದಲು ಬಿಚ್ಚಿಹೋಗಿತ್ತು. ಕಿವಿಗಳಲ್ಲಿ ರತ್ನಕುಂಡಲಗಳು, ಮೂಗಿನಲ್ಲಿ ಮೂಗುತಿ ಇದ್ದುವು. ಕೃಷ್ಣ ಪ್ರೀತಿಯಿಂದ ತೆಳುವಾದ ಬಟ್ಟೆಯಿಂದ ಅವಳ ಮುಖವನ್ನು ಒರೆಸಿದ. ತಲೆ ಬಾಚಿ ಹೆರಳು ಹಾಕಿದ. ಜಾಜಿ ಹೂ ಮುಡಿಸಿದ. ಸಿಂದೂರದ ತಿಲಕವಿಟ್ಟ. ಅದರ ಸುತ್ತಲೂ ಕಸ್ತೂರೀ ಚಂದನದ ಬೊಟ್ಟನ್ನಿಟ್ಟ. ಕೆನ್ನೆಯಲ್ಲಿ ಚಿತ್ರವಿಚಿತ್ರವಾದ ಪತ್ರವನ್ನು ರಚಿಸಿದ. ಕಣ್ಣುಗಳಿಗೆ ಕಾಡಿಗೆ ಇಟ್ಟ. ತುಟಿಗಳಿಗೆ ಕೆಂಪನ್ನು ಹಚ್ಚಿದ. ಕಿವಿಗಳ ರತ್ನಕುಂಡಲಗಳನ್ನು ತಿಕ್ಕಿ ಉಜ್ವಲ ಗೊಳಿಸಿದ. ಎದೆಯಲ್ಲಿ ಅಮೂಲ್ಯ ರತ್ನಹಾರಗಳನ್ನಿಟ್ಟ. ಅಮೂಲ್ಯವಾದ ಕಸ್ತೂರೀ ಕುಂಕುಮಗಳಿಂದ ಸುಗಂಧಿತವಾದ ಸೀರೆ

ಉಡಿಸಿದ. ಕಾಲುಗಳಿಗೆ ಗೆಜ್ಜೆ ತೊಡಿಸಿದ. ಅಂಗಾಲಿಗೆ ಅಲಕ್ತಕ ಸವರಿದ. ಉಗುರುಗಳಿಗೆ ಬಣ್ಣ ಬಳಿದ. ಮೂಲೋಕಗಳಿಗೆ ಸೇವ್ಯನಾದ ಕೃಷ್ಣ ಹೀಗೆ ರಾಧೆಯ ಸೇವೆಗೈದ. ಬಿಳಿಚಾಮರಗಳಿಂದ ಬೀಸುತ್ತ ರಾಧೆಯನ್ನು ಎಬ್ಬಿಸಿ ಅಪ್ಪಿಕೊಂಡ. ಪ್ರೀತಿಯಿಂದ ರತ್ನದರ್ಪಣವನ್ನಿತ್ತ. ಅವಳ ಸರ್ವಾಂಗಕ್ಕೆ ಕಸ್ತೂರೀ ಕುಂಕುಮ ಸಹಿತವಾದ ಪರಿಮಳದ ಚಂದನವನ್ನಿತ್ತ. ಬ್ರಹ್ಮನು ಕೊಟ್ಟಿದ್ದ ಪಾರಿಜಾತದ ಹೂವನ್ನು ಅವಳ ಮುಡಿಯಲ್ಲಿಟ್ಟ. ಶಿವನು ಕೊಟ್ಟಿದ್ದ ಸಹಸ್ರದಳ ಕಮಲವನ್ನು ಬಲಗೈಗೆ ಕೊಟ್ಟ. ಧರ್ಮರಾಜ ಕೊಟ್ಟಿದ್ದ ಕೌಸ್ತುಭಮಣಿಯನ್ನು ಕೊರಳಿಗೆ ತೊಡಿಸಿದ. ಅಶ್ವಿನೀ ದೇವತೆ ಕೊಟ್ಟಿದ್ದ ಆಸವವನ್ನು ರತ್ನಪಾತ್ರದಲ್ಲಿ ಕುಡಿಯಲು ಕೊಟ್ಟ. ಮಾಲತಿ ಮಾಧವಿ ಕುಂದ ಮಂದಾರ ಚಂಪಕ ಮುಂತಾದ ಹೂಗಳನ್ನಿತ್ತ. ಕರ್ಪೂರ ತಾಂಬೂಲವನ್ನಿತ್ತ. ವರುಣ ಕೊಟ್ಟಿದ್ದ ಬಹು ತೆಳುವಾದ ದುರ್ಲಭವಾದ ಸೀರೆಯನ್ನು ಉಡಿಸಿದ. ದೇವೇಂದ್ರನಿತ್ತ ಮುತ್ತಿನ ಮೂಗುತಿಯನ್ನು ತೊಡಿಸಿದ.

ಅಷ್ಟರಲ್ಲಿ ಸುಶೀಲೆ ಮುಂತಾದ ಅರವತ್ತು ಮಂದಿ ಸಖಿಯರಾದ ಗೋಪಿಯರೂ ಅವರ ಸೇವಕಿಯರಾದ ಅರವತ್ತುಕೋಟಿಗೋಪಿಯರೂ ಬಂದರು. ಚಂದನ ಚಾಮರ ಕಸ್ತೂರಿ ಹೂಮಾಲೆ ಸಿಂದೂರ ಬಾಚಣಿಗೆ ಅಲಕ್ತಕ ಸೀರೆ ಕನ್ನಡಿ ಹೂ ಕ್ರೀಡಾಕಮಲ ಆಭರಣಗಳನ್ನೂ ಮೃದಂಗ ಸ್ವರಯಂತ್ರ ವೀಣೆ ಮುಂತಾದ ವಾದ್ಯಗಳನ್ನೂ ತಂದರು. ರಾಗರಾಗಿಣಿಯರು ಗೋಪಿಯರ ರೂಪದಿಂದ ಬಂದು ಹಾಡಿ ಕುಣಿದರು. ಕೆಲವರು ಚಾಮರ ಬೀಸಿದರು. ಕೆಲವರು ಕಾಲೊತ್ತಿದರು. ಕೆಲವರು ತಾಂಬೂಲವಿತ್ತರು. ಹೀಗೆ ಕೃಷ್ಣ ರಾಧೆಯೊಡನೆ ವಿಹರಿಸಿ ಆಸವವನ್ನು ಕುಡಿದು ತಾಂಬೂಲ ಮೆದ್ದು ನಿದ್ದೆ ಮಾಡಿದ.

ಇದು ಶ್ರೀಕೃಷ್ಣನ ರಾಸಲೀಲೆ. ಪೂರ್ಣಾನಂದನಾದ ಹರಿ ಸ್ವೇಚ್ಛೆಯಿಂದ ಮಾಡುವ ಈ ಲೀಲೆ ಆಶ್ಚರ್ಯಕರ. ನಿರ್ಗುಣ, ಸ್ವತಂತ್ರ, ಪ್ರಕೃತಿಯಿಂದ ಉತ್ತಮ, ಸರ್ವಶಕ್ತನಾತ, ಬ್ರಹ್ಮವಿಷ್ಣು ಶಿವಾದಿಗಳಿಗೆ ಒಡೆಯ. ನಾರದ, ಕೃಷ್ಣ ಜನ್ಮರಹಸ್ಯವನ್ನೂ ಅವನ ಬಾಲಲೀಲೆಯನ್ನೂ ವರ್ಣಿಸಿದ್ದೇನೆ. ಇನ್ನೇನು ಕೇಳಲು ಬಯಸುವೆ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ*
*ನಾರದನಾರಾಯಣಸಂವಾದದಲ್ಲಿ ಶ್ರೀಕೃಷ್ಣರಾಸಕ್ರೀಡಾವರ್ಣನವೆಂಬ*
*ಐವತ್ತಮೂರನೆ ಅಧ್ಯಾಯ ಮುಗಿಯಿತು*

—o—

**ನಾರದ:-** ಮುನಿಶ್ರೇಷ್ಠನೆ, ಅನಂತರ ಏನು ರಹಸ್ಯ ನಡೆಯಿತು? ಶ್ರೀಕೃಷ್ಣ ನಂದನ ಮನೆಯಿಂದ ಮಧುರೆಗೆ ಹೇಗೆ ಹೋದ? ಹರಿಯ ವಿಯೋಗವಾದಾಗ ನಂದ ಹೇಗೆ ಪ್ರಾಣವಿಟ್ಟುಕೊಂಡಿದ್ದ? ಗೋಪಾಂಗನೆಯರು, ಯಶೋದೆ ಹೇಗೆ ವಿರಹವನ್ನು ತಡೆದುಕೊಂಡರು? ಅವರು ಕೃಷ್ಣನಲ್ಲೆ ಮನಸಿಟ್ಟವರು ತಾನೆ? ಕಣ್ಣು ಮುಚ್ಚಿ ತೆರೆವಷ್ಟು ಕಾಲವೂ ಕೃಷ್ಣನನ್ನು ಬಿಟ್ಟಿರಲಾರದ ರಾಧೆ ಕೃಷ್ಣನನ್ನು ಬಿಟ್ಟು ಹೇಗಿದ್ದಳು? ಕೃಷ್ಣನೊಡನೆಯೆ ಇದ್ದು ಶಯನ ಆಸನ ಭೋಗಗಳನ್ನು ಜೊತೆಗೇ ಮಾಡುತ್ತಿದ್ದ ಗೋಪಾಲಕರು ಅಂಥ ಬಂಧುವನ್ನು ಮರೆಯಲು ಹೇಗೆ ಸಮರ್ಥರಾದರು? ಶ್ರೀಕೃಷ್ಣ ಮಧುರೆಗೆ ಹೋಗಿ ಏನೇನು ಕರ್ಮಗಳನ್ನು ಮಾಡಿದ? ಸ್ವರ್ಗಾರೋಹಣ ಪರ್ಯಂತ ಅವನ ಚರಿತ್ರೆಯನ್ನು ಹೇಳು.

**ನಾರಾಯಣ:-** ಕಂಸ ಬಿಲ್ಲಹಬ್ಬ ನಡೆಸಿದ. ಅದಕ್ಕೆ ಕೃಷ್ಣನನ್ನು ಆಮಂತ್ರಿಸಿದ. ಅಕ್ರೂರನನ್ನು ಕಳಿಸಿದ. ಅಕ್ರೂರ ನಂದನ ಮನೆಗೆ ಬಂದು ಕೃಷ್ಣನನ್ನೂ ಅವನ ಪರಿವಾರದವರನ್ನೂ ಮಧುರೆಗೆ ಕರೆದೊಯ್ದ. ಕೃಷ್ಣ ಮಧುರೆಗೆ ಹೋಗಿ ಕಂಸನನ್ನು ಕೊಂದ. ಅಗಸನನ್ನೂ ಚಾಣೂರ ಮುಷ್ಟಿಕರನ್ನೂ ಅದೇ ಸಂದರ್ಭದಲ್ಲಿ ಕೊಂದ. ತಂದೆ ತಾಯಿಗಳನ್ನು ಸೆರೆಯಿಂದ ಬಿಡಿಸಿದ. ಕುಬ್ಜೆಯೊಡನೆ ಶೃಂಗಾರಕ್ರೀಡೆಯಾಡಿ ಅವಳನ್ನು ಗೋಲೋಕಕ್ಕೆ ಕಳಿಸಿದ. ಮಾಲಾಕಾರನಿಗೆ ಮೋಕ್ಷ ಕೊಟ್ಟ. ಉದ್ಧವನ ಮೂಲಕ ಗೋಪಿಯರಿಗೆ ಸಮಾಧಾನ ಪಡಿಸಿದ. ಉಪನೀತನಾಗಿ ಅವಂತೀ ನಗರಕ್ಕೆ ಹೋಗಿ ಸಾಂದೀಪನಿ ಮುನಿಯ ಬಳಿ ವಿದ್ಯಾಭ್ಯಾಸ ಮಾಡಿದ. ಜರಾಸಂಧನನ್ನು ಗೆದ್ದು ಕಾಲಯವನನನ್ನು ಕೊಂದು ವಿಧ್ಯುಕ್ತವಾಗಿ ಉಗ್ರಸೇನನನ್ನು ರಾಜನನ್ನಾಗಿ ಮಾಡಿದ. ಸಮುದ್ರದಲ್ಲಿ ದ್ವಾರಕಾನಗರ ನಿರ್ಮಾಣಮಾಡಿ ರುಕ್ಮಿಣೀ ಸ್ವಯಂವರದಲ್ಲಿ ರಾಜರುಗಳನ್ನು ಗೆದ್ದು ರುಕ್ಮಿಣಿಯನ್ನು ತಂದ. ಕಾಲಿಂದಿ, ಲಕ್ಷ್ಮಣೆ, ಶೈಬ್ಯೆ, ಸತ್ಯಭಾಮೆ, ಜಾಂಬವತಿ, ಮಿತ್ರವಿಂದೆ, ನಾಗ್ನಜಿತಿಯರನ್ನು ಮದುವೆಯಾದ. ನರಕಾಸುರನನ್ನು ಸಂಹರಿಸಿ ಹದಿನಾರು ಸಾವಿರ ಮಂದಿ ಸ್ತ್ರೀಯರನ್ನು ಮದುವೆಯಾದ. ಇಂದ್ರನನ್ನು ಗೆದ್ದು ಪಾರಿಜಾತವನ್ನು ಅಪಹರಿಸಿದ. ಶಿವನನ್ನು ಗೆದ್ದು ಬಾಣಾಸುರನ ಕೈಗಳನ್ನು ಕತ್ತರಿಸಿದ. ಅನಿರುದ್ಧನನ್ನು ಸೆರೆಯಿಂದ ಬಿಡಿಸಿ ತಂದು ದ್ವಾರಕೆಯಲ್ಲಿ ವಾಸಮಾಡಿದ. ಹದಿನಾರು ಸಾವಿರ ಮಡದಿಯರ ಪ್ರತಿ ಮನೆಯಲ್ಲಿಯೂ ಬೇರೆ ಬೇರೆ ರೂಪಗಳಿಂದ ತೋರಿಕೊಂಡ. ವಸುದೇವನ ಯಾಗದಲ್ಲಿ ತೀರ್ಥಯಾತ್ರಾ ಪ್ರಸಂಗವಶಾತ್ ರಾಧೆಯನ್ನು ಕಂಡ. ಸುದಾಮನ ಶಾಪದಂತೆ ನೂರು ವರ್ಷದ ವಿರಹ ಮುಗಿದಾಗ ಪುನಃ ರಾಧೆಯೊಡನೆ ವೃಂದಾವನವನ್ನು ಪ್ರವೇಶಿಸಿದ. ಪುನಃ ಹದಿನಾಲ್ಕು ವರ್ಷಕಾಲ ಅವಳೊಡನೆ ರಾಸಕ್ರೀಡೆ ಮಾಡಿದ. ನಂದನ ಮನೆಯಲ್ಲಿ ಹನ್ನೊಂದು ವರ್ಷ, ಮಥುರೆಯಲ್ಲಿ ನೂರು ವರ್ಷಗಳ ಕಾಲವಿದ್ದು ಭೂಭಾರಹರಣ ಮಾಡಿ ನೂರ

ಇಪ್ಪತ್ತೈದು ವರ್ಷ ಕಾಲ ಭೂಮಿಯಲ್ಲಿ ಇದ್ದು ಗೋಲೋಕವನ್ನು ಸೇರಿದ. ಯಶೋದೆ, ನಂದ, ವೃಷಭಾನ, ರಾಧೆಯ ಮಾತೆಯಾದ ಕಲಾವತಿ, ಇವರಿಗೆ ಸಾಮೀಪ್ಯಮೋಕ್ಷವನ್ನು ಅನುಗ್ರಹಿಸಿದ. ರಾಧೆ ಮತ್ತು ಗೋಪಿಯರೊಡನೆ ಕೃಷ್ಣ ಭೂಮಿಯಲ್ಲಿ ಅವತರಿಸಿ ಧರ್ಮರಕ್ಷಣೆ ಮಾಡಿದ, ಇದು ಕೃಷ್ಣಚರಿತೆ, ಸಂಕ್ಷೇಪವಾಗಿ. ಇದು ರಮ್ಯ, ಚತುರ್ವರ್ಗ ಫಲದಾಯಕ. ಬ್ರಹ್ಮಾದಿ ಸ್ತಂಬಪರ್ಯಂತ ಎಲ್ಲವೂ ನಶ್ವರ. ಪರಮಾನಂದನಾದ ನಂದನಂದನನನ್ನೇ ಆನಂದದಿಂದ ಭಜಿಸು. ಅವನು ಸ್ವೇಚ್ಛಾಮಯಿ, ಪರಬ್ರಹ್ಮ, ಪರಮಾತ್ಮ, ಈಶ್ವರ, ಅವ್ಯಯ, ಅವ್ಯಕ್ತ, ಭಕ್ತರ ಅನುಗ್ರಹಕ್ಕಾಗಿ ಅವತರಿಸುವವ. ಸತ್ಯ, ನಿತ್ಯ, ಸ್ವತಂತ್ರ, ಸರ್ವೇಶ್ವರ, ಪ್ರಕೃತಿಗಿಂತ ಆಚೆ ಇರುವವ, ನಿರ್ಗುಣ, ನಿರೀಹ, ನಿರಾಕಾರ, ನಿರಂಜನ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ನಾರದನಾರಾಯಣ 'ಂವಾದದಲ್ಲಿ ಶ್ರೀಕೃಷ್ಣರಾಧಿಕಾಸಂವಾದವೆಂಬ ಐವತ್ತನಾಲ್ಕನೆ ಅಧ್ಯಾಯ ಮುಗಿಯಿತು.*

*ಶ್ರೀಕೃಷ್ಣಜನ್ಮಖಂಡದ ಪೂರ್ವಾರ್ಧ ಮುಗಿಯಿತು.*



# ಶ್ರೀಕೃಷ್ಣಜನ್ಮಖಂಡ ಉತ್ತರಾರ್ಧ

## ಶ್ರೀಕೃಷ್ಣನ ಪ್ರಭಾವ

**ಅಧ್ಯಾಯ - ೫೫**

**ನಾರಾಯಣ:-** ಸರ್ವಾತ್ಮನಾದ ಪರಮಪುರುಷ ಭಗವಾನ್ ಶ್ರೀಕೃಷ್ಣ ಒಲಿಸಲು ಸುಲಭನೂ ಹೌದು ಕಷ್ಟಸಾಧ್ಯನೂ ಹೌದು. ಭಕ್ತರಿಗೆ ಸುಲಭ, ಅಭಕ್ತರಿಗೆ ಕಷ್ಟ ಸಾಧ್ಯ. ಭಕ್ತನಿಗೆ ಕಾಣಿಸಿಕೊಳ್ಳುವನು, ಅಭಕ್ತನಿಗೆ ಅದೃಶ್ಯನಾಗಿರುವನು. ಅವನ ಚರಿತ್ರೆ ಯಾರಿಗೂ ತಿಳಿಯಲಾಗದು. ಅವನ ಮಾಯೆ ಅನಂತ. ಆದರಿಂದ ಎಲ್ಲರೂ ಬದ್ಧರು. ಅವನ ಭಯದಿಂದ ವಾಯು ಬೀಸುತ್ತಾನೆ. ಕೂರ್ಮನಾಗಿ ಬ್ರಹ್ಮಾಂಡವನ್ನು ಹೊರುತ್ತಾನೆ. ಕೂರ್ಮದ ಮೇಲೆ ಶೇಷ, ಶೇಷನ ಮೇಲೆ ಲೋಕಗಳು ನಿಂತಿವೆ. ಶೇಷ ಸಾವಿರ ಹೆಡೆಗಳುಳ್ಳವ. ಒಂದು ಹೆಡೆಯ ಮೇಲೆ ಸಪ್ತಸಾಗರ ಸಪ್ತದ್ವೀಪಯುಕ್ತವಾದ ಬೆಟ್ಟಕಾಡುಗಳಿಂದ ತುಂಬಿದ ಭೂಮಿ ಇದೆ. ಸಪ್ತ ಪಾತಾಳಗಳಿವೆ. ಸಪ್ತ ಸ್ವರ್ಗಗಳೂ ಇವೆ. ಬ್ರಹ್ಮಲೋಕವೂ ಇದೆ. ಈ ಎಲ್ಲ ವಿಶ್ವವನ್ನೂ ಕೃಷ್ಣನ ಭಯದಿಂದಲೆ ಬ್ರಹ್ಮ ಸೃಜಿಸುತ್ತಾನೆ. ಕೃಷ್ಣನ ಭಯದಿಂದಲೇ ಅವೆಲ್ಲವನ್ನೂ ರೋಮ ಕೂಪಗಳಿಂದ ಮಹಾವಿರಾಟ್‌ಪುರುಷ ಧರಿಸುತ್ತಾನೆ, ವಿಷ್ಣುವೂ ಕೃಷ್ಣನ ಭಯದಿಂದಲೆ ಕಾಪಾಡುತ್ತಾನೆ. ಕಾಲಾಗ್ನಿರುದ್ರನೂ ಕೃಷ್ಣನ ಭಯದಿಂದಲೆ ಎಲ್ಲವನ್ನೂ ಲಯ ಮಾಡುತ್ತಾನೆ. ಕೃಷ್ಣನ ಭಯದಿಂದಲೆ ಮೃತ್ಯುಂಜಯ ಮಹಾದೇವ ವಿರಕ್ತನಾಗಿ ಸದಾ ಧ್ಯಾನಿಸುತ್ತಾನೆ. ಕೃಷ್ಣನ ಭಯದಿಂದಲೆ ಬೆಂಕಿ ಉರಿಯುತ್ತದೆ. ಸೂರ್ಯ ಜ್ವಲಿಸುತ್ತಾನೆ. ಇಂದ್ರ ಮಳೆಗರೆಯುತ್ತಾನೆ, ಮೃತ್ಯು ಜಂತುಗಳನ್ನು ನಾಶಮಾಡುತ್ತಾನೆ. ಯಮ ಪಾಪಿಗಳನ್ನು ಶಿಕ್ಷಿಸುತ್ತಾನೆ. ಭೂಮಿ ಜನರನ್ನು ಹೊರುತ್ತದೆ. ಪ್ರಕೃತಿ ಸೃಷ್ಟಿ ಮಾಡುತ್ತಾಳೆ. ಇಂಥ ಕೃಷ್ಣನ ಸಂಕಲ್ಪವನ್ನು ಯಾರು ತಾನೆ ತಿಳಿಯಬಲ್ಲರು? ಬ್ರಹ್ಮ ವಿಷ್ಣು ಮಹೇಶ್ವರರೂ ಅವನ ಶಕ್ತಿಯನ್ನು ಅರಿಯಲಾರರು. ನಾನೇನು ಅರಿಯಬಲ್ಲೆ? ಅವನು ಮಥುರೆಯನ್ನು ಬಿಟ್ಟು ವೃಂದಾವನಕ್ಕೆ ತೆರಳಿದ. ಬಳಿಕ ವೃಂದಾವನವನ್ನು ತೊರೆದು ಗೋಪಿಯರನ್ನೂ ಪ್ರಾಣಾಧಿಕ ಪ್ರಿಯೆಯಾದ ರಾಧೆಯನ್ನೂ ನಂದ ಯಶೋದೆಯರನ್ನೂ ಬಾಂಧವರನ್ನೂ ತೊರೆದು ಮಥುರೆಗೇ ತೆರಳಿದ. ಎಲ್ಲರ ದರ್ಪವನ್ನು ಕಳೆದ. ಸುದಾಮನ ಶಾಪದಿಂದ ರಾಧೆಯ ದರ್ಪವನ್ನೂ ಕಳೆದ. ಹಾಗೆಯೆ ಮಹಾವಿಷ್ಣು ಬ್ರಹ್ಮ ವಿಷ್ಣು ಶಿವ ಶೇಷ ಧರ್ಮ ಯಮ ಸಾಂಬ ಚಂದ್ರ ಸೂರ್ಯ ಗರುಡ ಅಗ್ನಿ ದುರ್ವಾಸ ದ್ವಾರಪಾಲಕರಾದ ಜಯ ವಿಜಯರು ಸುರಾಸುರರು ಮನ್ಮಥ ಇಂದ್ರ ಲಕ್ಷ್ಮಣ ಅರ್ಜುನ ಬಾಣ ಭೃಗು ಮೇರು ಸಮುದ್ರ ವಾಯು ವರುಣ ಸರಸ್ವತಿ ದುರ್ಗೆ ಪದ್ಮೆ ಭೃಗು ಸಾವಿತ್ರಿ ಗಂಗೆ ಮನಸೆ ಎಲ್ಲರಿಗಿಂತಲೂ ತನ್ನ ಪ್ರಾಣಗಳಿಗಿಂತಲೂ ಹೆಚ್ಚಾದ ರಾಧೆ ಇವರೆಲ್ಲರ ದರ್ಪವನ್ನೂ

ಕಳೆದು ಅನುಗ್ರಹ ಮಾಡಿದ್ದಾನೆ ಶ್ರೀಕೃಷ್ಣ. ಸೃಷ್ಟಿ ಸ್ಥಿತಿ ಲಯ ಕಾರಿಯಾದ ಅವನನ್ನು ಐದು ಮುಖದ ಶಂಕರನೂ ಹೊಗಳಿ ಮುಗಿಸಲಾರ. ನಾಲ್ಕು ಮುಖದ ಬ್ರಹ್ಮನಾಗಲಿ ಸಹಸ್ರ ಮುಖದ ಶೇಷನಾಗಲಿ ಪೂರ್ಣವಾಗಿ ಸ್ತೋತ್ರಮಾಡಲಾರರು. ಅವನ ಮುಂದೆ ಪ್ರಕೃತಿ ನಡುಗುತ್ತಾಳೆ. ಸರಸ್ವತಿ ಜಡಳಾಗುತ್ತಾಳೆ. ವೇದಗಳೂ ಅವನನ್ನು ಅರಿಯಲಾರವು. ಇದು ಪರಮಾತ್ಮನ ಮಹಿಮೆ ನಾರದ, ಇನ್ನೇನು ಕೇಳಲು ಬಯಸುವೆ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಶ್ರೀಕೃಷ್ಣಪ್ರಭಾವವರ್ಣನವೆಂಬ ಐವತ್ತೈದನೆ ಅಧ್ಯಾಯ ಮುಗಿಯಿತು*



## ಮಹಾವಿಷ್ಣು ಮುಂತಾದವರ ದರ್ಪಭಂಗ

**ಅಧ್ಯಾಯ - ೫೬**

**ನಾರದ:-** ಮುನಿಯೆ, ಎಂಥಹ ಪರಮಾದ್ಭುತವಾದ ಶ್ರೀಕೃಷ್ಣಚರಿತೆಯನ್ನು ಹೇಳುತ್ತಿರುವೆ! ಈಗ ಮಹಾವಿಷ್ಣುವಿನ ಮತ್ತು ಉಳಿದವರ ದರ್ಪವನ್ನು ಶ್ರೀಕೃಷ್ಣ ಹೇಗೆ ಕಳೆದನೆಂಬುದನ್ನು ಹೇಳು. ಶ್ರೀಕೃಷ್ಣನ ಚರಿತ್ರೆ ಸ್ವತಃ ಮಧುರ, ರಮ್ಯ. ಜ್ಞಾನಿಗಳ ಮುಖದಿಂದ ಬಂದರಂತೂ ಇನ್ನೂ ಮಧುರ ರಮ್ಯ.

**ನಾರಾಯಣ:-** ಮಹಾವಿಷ್ಣುವಿಗೆ ಒಮ್ಮೆ ಅಹಂಕಾರ ಬಂದಿತು. ಎಲ್ಲ ಜಗತ್ತೂ ನನ್ನ ರೋಮಕೂಪದಲ್ಲಿ ಅಡಗಿದೆ, ಆದರಿಂದ ನಾನೆ ಪ್ರಭು ಎಂದುಕೊಂಡ. ಆಗ ಕೃಷ್ಣ ಸಂಹಾರ ಭೈರವನಾಗಿ ಬಂದು ಅನಾಯಾಸವಾಗಿ ಅವನನ್ನು ನುಂಗಲು ತೊಡಗಿದ. ಅವನ ತಲೆ ಮಾತ್ರ ಉಳಿದಿದ್ದಾಗ ಅನುಗ್ರಹ ಮಾಡಿಬಿಟ್ಟ. ಭಯಗೊಂಡು ಸ್ತುತಿಸಿದ ಅವನನ್ನು ಮತ್ತೆ ಮೊದಲಿನಂತೆ ಸರ್ವಾಂಗ ಪರಿಪೂರ್ಣನನ್ನಾಗಿ ಮಾಡಿದ.

ಬ್ರಹ್ಮನಿಗೂ ಒಮ್ಮೆ ಅಕಸ್ಮಾತ್ ಅಹಂಕಾರ ಬಂದಿತು. ನಾನೆ ಮೂಲೋಕಗಳಿಗೆ ಸೃಷ್ಟಿಕರ್ತ. ಅದರಿಂದ ನಾನೆ ಪ್ರಭು. ನನಗಿಂತ ಬೇರೆ ಪೂಜಾರ್ಹವ್ಯಕ್ತಿಯಿಲ್ಲ. ನನ್ನನ್ನು ಮೀರಿಸುವ ಜಿತೇಂದ್ರಿಯನಿಲ್ಲ ಎಂದುಕೊಂಡ. ಶ್ರೀಕೃಷ್ಣ ಕ್ಷಣದಲ್ಲಿ ಗೋಲೋಕದಲ್ಲಿ ತನ್ನ ಬಳಿ ಇದ್ದ ಲೆಕ್ಕವಿಲ್ಲದ ಬ್ರಹ್ಮರ ಸಮೂಹಗಳನ್ನೆ ತೋರಿದ. ಅವರಲ್ಲಿ ಚತುರ್ಮುಖರಂತೆ ಪಂಚಮುಖರೂ ಷಣ್ಮುಖರೂ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಮುಖ ಉಳ್ಳವರೂ ಇದ್ದರು. ನೂರು ಮುಖದ ಬ್ರಹ್ಮರೂ ಇದ್ದರು. ಬ್ರಹ್ಮನಿಗೆ ಅಹಂಕಾರ ಇಳಿಯಿತು. ನಾಚಿಕೆಯಿಂದ ಶರೀರ ತ್ಯಾಗ ಮಾಡಬೇಕೆನಿಸಿತು. ತಲೆತಗ್ಗಿಸಿ ನಿಂತ. ಅವನಲ್ಲಿ ಕೃಪಾನಿಧಿ ಕೃಷ್ಣ ಅನುಗ್ರಹ ಮಾಡಿದ. ಇನ್ನೊಮ್ಮೆ ಮೋಹಿನಿಯ ಮೂಲಕ ಅವನನ್ನು ಅಪೂಜ್ಯನನ್ನಾಗಿ ಮಾಡಿದ. ತನ್ನ ಮಗಳನ್ನೆ ತಾನು ಮೋಹಿಸುವಂತೆ ಮಾಡಿದ. ಮತ್ತೊಮ್ಮೆ ಶಿವನ ಮೂಲಕ ಅವನ ದರ್ಪವನ್ನು ಮುರಿದ. ಆಗ ಅವನು ಶರೀರತ್ಯಾಗ ಮಾಡಿ ತಿರುಗಿ ಧರಿಸಿದ. ಆಗ ಅವನನ್ನು ಲೋಕ ಪೂಜ್ಯನನ್ನಾಗಿ ಮಾಡಿ ಜ್ಞಾನ ನೀಡಿದ, ಮಹಾಜ್ಞಾನಿ, ಜ್ಞಾನಾನಂದಮಯ, ಸನಾತನನಾದ ಕೃಷ್ಣ. ಪ್ರಪಂಚವನ್ನು ಪಾಲಿಸುವವನು ತಾನೆಂದು ವಿಷ್ಣುವಿಗೆ ಗರ್ವಬಂದಿತು. ಅವನಿಗೆ ರಾಮಾವತಾರದಲ್ಲಿ

ತನ್ನನ್ನು ತಾನು ಮರೆಯುವಂತೆ ಮಾಡಿದ ಕೃಷ್ಣ. ತಾನು ಲೋಕವನ್ನು ಹೊರುವವನೆಂದು ಶೇಷನಿಗೆ ಅಹಂಕಾರ ಬಂದಿತು. ಅವನ ದರ್ಪವನ್ನು ಗರುಡನ ಮೂಲಕ ಕೃಷ್ಣ ಕಳೆದ. ಒಮ್ಮೆ ನಾಗರೆಲ್ಲರೂ ಕೃಷ್ಣನ ವಾಹನನಾದ ಗರುಡನನ್ನು ಪೂಜಿಸಿದರೂ ಶೇಷ ದರ್ಪದಿಂದ ಅವನನ್ನು ಪೂಜಿಸದಿದ್ದಾಗ ಅವನನ್ನು ಗರುಡ ಹಿಡಿದುಕೊಂಡ. ಕರುಣಾನಿಧಿಯಾದ ಕೃಷ್ಣ ಆಗ ಶೇಷನನ್ನು ಬಿಡಿಸಿದ.

ಶಿವ ಅಹಂಕಾರದಿಂದ ಸತಿಯನ್ನು ಮದುವೆಯಾಗಲು ಒಪ್ಪದಿದ್ದಾಗ ಕೃಷ್ಣ ಮಾಯೆಯಿಂದ ಮೋಹ ಉಂಟು ಮಾಡಿ ಅವಳನ್ನು ವಿವಾಹ ಮಾಡಿಕೊಳ್ಳುವಂತೆ ಮಾಡಿದ. ಬಳಿಕ ಸತಿಯ ವಿಯೋಗ ಉಂಟುಮಾಡಿ ಒಂದು ವರ್ಷ ಕಾಲ ಸತಿಯ ಶವವನ್ನು ಹೊತ್ತು ನಾನಾ ಕಡೆಗಳಲ್ಲಿ ತಿರುಗಿ ಶೋಕದಿಂದ ಅಳುವಂತೆಯೂ ಮಾಡಿದ. ಸತಿ ಮುಂದಿನ ಜನ್ಮದಲ್ಲಿ ಪಾರ್ವತಿಯಾಗಿ ಜನಿಸಿದಾಗ ಅವಳನ್ನು ದಕ್ಷಶಾಪ ಪ್ರಭಾವದಿಂದಾಗಿ ಅರಿಯದೆ ಅಂಗಿರಸ ಮುನಿಗಳಿಂದ ತಿಳಿಯುವಂತೆ ಮಾಡಿದ. ಶಿವನ ಮೂಲಕ ತ್ರಿಪುರಾಸುರರನ್ನು ನಾಶಪಡಿಸಿ ಶಿವನನ್ನು ತ್ರಿಪುರಾರಿ ಎನಿಸುವಂತೆ ಮಾಡಿದ. ಇದರಿಂದ ಶಿವ ಅಹಂಕಾರದಿಂದ ನಾನು ಎಲ್ಲರಿಗೂ ಎಲ್ಲ ವರಗಳನ್ನು ನೀಡುವವನೆಂದು ಹೇಳಿಕೊಳ್ಳುತ್ತ ಹಾಗೇ ಪ್ರತಿಜ್ಞೆ ಮಾಡಿ ವೃಕಾಸುರನಿಗೆ ಆತ ಯಾರ ತಲೆಯ ಮೇಲೆ ಕೈಯಿಡುವನೋ ಅವನು ಸುಟ್ಟು ಬೂದಿಯಾಗುವನೆಂದು ವರ ನೀಡಿದ. ಒಡನೆ ಶಿವನ ತಲೆಯ ಮೇಲೆಯೆ ಕೈಯಿಡಲು ಅಸುರ ಧಾವಿಸಿ ಬಂದ. ಭಯಗೊಂಡ ಶಿವ ವಿಷ್ಣುವನ್ನು ಮೊರೆ ಹೊಕ್ಕಾಗ ಆತ ಅಸುರನನ್ನು ಭಸ್ಮ ಮಾಡಿದ.

ಬಾಣಾಸುರ ಯುದ್ಧದಲ್ಲಿ ಯುದ್ಧ ಮಾಡಲು ಬಂದ ಶಿವನನ್ನು ಕೃಷ್ಣ ಜೃಂಭಣಾಸ್ತ್ರದಿಂದ ಸ್ತಂಭನಗೊಳಿಸಿದ. ದಕ್ಷಯಜ್ಞ ಪ್ರಸಂಗದಲ್ಲಿ ಶಿವ ವಿಷ್ಣುವಿನ ಮೇಲೇರಿ ಬಂದಾಗ ವಿಷ್ಣು ಅವನ ಕಂಠವನ್ನು ಹಿಡಿದು ನಿಗ್ರಹಿಸಿದ. ಕೇದಾರಕನ್ನಿಕೆಯ ಶಾಪದ ಮೂಲಕ ಧರ್ಮನನ್ನು ಕೃಶನನ್ನಾಗಿ ಮಾಡಿ ಅಮಾವಾಸ್ಯೆಯ ಚಂದ್ರನಂತೆ ಕಾಣುವ ಹಾಗೆ ಮಾಡಿದ. ಬಳಿಕ ಆ ಶಾಪ ಕಳೆದಾಗ ಪೂರ್ಣ ಕಾಣುವಂತೆಯೂ ಮಾಡಿದ. ಅಂದರೆ ತ್ರೇತೆಯಲ್ಲಿ ಮೂರು ಪಾದಗಳು, ದ್ವಾಪರದಲ್ಲಿ ಎರಡು ಪಾದಗಳು ಕಲಿಯುಗದಲ್ಲಿ ಒಂದು ಪಾದ ಕಲಿಯುಗದ ಕೊನೆಯಲ್ಲಿ ಆ ಒಂದು ಪಾದಕ್ಕೂ ಕ್ಷಯವಾಗುವಂತೆ ಮಾಡಿ ಸತ್ಯಯುಗಾರಂಭದಲ್ಲಿ ಪರಿಪೂರ್ಣನಾಗುವಂತೆ ಯುಗಾನುಸಾರೇಣ ಕ್ರಮವಾಗಿ ಕ್ಷೀಣನಾಗುವಂತೆಯೂ ಮಾಡಿದ.

ಮಾಂಡವ್ಯಶಾಪದಿಂದ ಯಮ ಶೂದ್ರಜನ್ಮಹೊಂದಿ ನೂರು ವರ್ಷಗಳ ಬಳಿಕ ಶುದ್ಧನಾದುದೂ ಕೃಷ್ಣನ ಪ್ರಭಾವದಿಂದ. ಸಾಂಬ ಮಲತಾಯಿಯ ಶಾಪದಿಂದ ಕುಷ್ಠರೋಗಕ್ಕೆ ತುತ್ತಾಗಿ ಬಳಿಕ ಸೂರ್ಯವ್ರತದಿಂದ ಶುದ್ಧನಾದ. ಚಂದ್ರ ಅಹಂಕಾರದಿಂದ ಬೃಹಸ್ಪತಿಯ ಪತ್ನಿಯನ್ನು ಅಪಹರಿಸಿ ಕ್ಷಯರೋಗ ಗ್ರಸ್ತನಾದ.

ಸೂರ್ಯನೂ ಅಹಂಕಾರದಿಂದ ಶಿವಭೃತ್ಯನಾದ ಸುಮಾಲಿಯನ್ನು ಕೊಲ್ಲಲು ಬಂದು ಹಗಲು ರಾತ್ರಿ ಎನ್ನದೆ ಸದಾ ಬಿಸಿಲನ್ನು ಉಂಟು ಮಾಡಿದ. ಸುಮಾಲಿದೈತ್ಯ ಭಯದಿಂದ ಶಿವನನ್ನು ಮೊರೆ ಹೊಕ್ಕ. ಶಿವ ಶೂಲವನ್ನೆತ್ತಿದ. ಸೂರ್ಯ ಭಯದಿಂದ ಧಾವಿಸಿದ. ಆದರೆ ಕಾಶಿಯಲ್ಲಿ ಶೂಲಕ್ಕೆ ಸಿಕ್ಕಿ ಮೂರ್ಛೆ ಹೊಂದಿದ. ಅವನ

ದರ್ಪವಡಗಿತು. ಆದರೆ ಭೂಲೋಕದಲ್ಲೆಲ್ಲ ದಟ್ಟವಾದ ಕತ್ತಲು ಹಬ್ಬಿತು. ಆಶುತೋಷನಾದ ಶಿವ ಕ್ಷಣದಲ್ಲಿ ಸೂರ್ಯನನ್ನು ಎಬ್ಬಿಸಿದ. ಸೂರ್ಯ ಲಜ್ಜಿತನಾಗಿ ಭಯದಿಂದ ಶಿವನನ್ನು ಕೊಂಡಾಡಿ ವರ ಪಡೆದು ಹಿಂತಿರುಗಿದ. ಭಕ್ತಿಯಿಂದ ನಾರಾಯಣನನ್ನು ಕಾಣಲು ವೈಕುಂಠಕ್ಕೆ ಬರುತ್ತಿದ್ದ ಶಿವನ ನಿಶ್ವಾಸದಿಂದಲೂ ವೃಷಭನ ನಿಶ್ವಾಸದಿಂದಲೂ ಗರುಡ ದೂರಕ್ಕೆ ಹೋಗಿ ಬಿದ್ದು ದರ್ಪವನ್ನು ಕಳೆದುಕೊಂಡ.

ಅಗ್ನಿಯೂ ಸರ್ವಭಕ್ಷಕನಾಗೆಂದು ಭೃಗುವಿನಿಂದ ಶಪ್ತನಾಗಿ ದರ್ಪವನ್ನು ಕಳೆದುಕೊಂಡ. ಬೃಹಸ್ಪತಿಗೆ ತನ್ನ ಪತ್ನಿ ತಾರೆ ಚಂದ್ರನಿಂದ ಅಪಹೃತಳಾದಾಗ ದರ್ಪ ಮುರಿಯಿತು. ಅಂಬರೀಷನನ್ನು ಕೆಣಕಿ ದುರ್ವಾಸನೂ ವಿಷ್ಣುವಿನ ಸುದರ್ಶನ ಚಕ್ರದಿಂದ ಪರಾಭವಗೊಂಡ.

ಸನಕಾದಿಮುನಿಶಾಪದಿಂದ ಭೂಮಿಯಲ್ಲಿ ಜನಿಸಿದ ಜಯವಿಜಯರ ದರ್ಪವನ್ನು ಕೃಷ್ಣ ನಾಶಪಡಿಸಿದ. ಹಿರಣ್ಯಕಶಿಪು ನೃಸಿಂಹನಿಂದ, ಹಿರಣ್ಯಾಕ್ಷ ವರಾಹನಿಂದ, ರಾವಣ ಕುಂಭಕರ್ಣರು ರಾಮಬಾಣಗಳಿಂದ, ಶಿಶುಪಾಲ ದಂತವಕ್ರರು ಕೃಷ್ಣನ ಬಾಣಗಳಿಂದ ನಾಶಹೊಂದಿದರು. ದೇವತೆಗಳ ಅಹಂಕಾರವನ್ನು ದೈತ್ಯರ ಮೂಲಕವೂ ದೈತ್ಯರ ಅಹಂಕಾರ ವನ್ನು ದೇವತೆಗಳ ಮೂಲಕವೂ ಪರಸ್ಪರ ವಿರೋಧ ಹುಟ್ಟಿಸಿ ಕೃಷ್ಣನೆ ಪರಿಹರಿಸಿದ.

ನಾರದ, ನಿನ್ನ ದರ್ಪವನ್ನೂ ಬ್ರಹ್ಮನ ಮೂಲಕ ಕೃಷ್ಣನೆ ಪರಿಹರಿಸಿದ. ನೀನು ಹಿಂದೆ ನಾರದನೆಂಬ ಬ್ರಹ್ಮಪುತ್ರನಾಗಿದ್ದು ಬ್ರಹ್ಮನ ಶಾಪದಿಂದ ಗಂಧರ್ವನಾಗಿ ಜನಿಸಿ ಬಳಿಕ ಶೂದ್ರಸ್ತ್ರೀಯ ಮಗನಾದೆ. ಬಳಿಕ ಕೃಷ್ಣನ ಅನುಗ್ರಹದಿಂದ ಈಗ ಪುನಃ ನಾರದನೆನಿಸಿರುವೆ. ನಾನು ಪ್ರಪಂಚವನ್ನೆ ಗೆಲ್ಲಬಲ್ಲೆ ಎಂದು ಅಹಂಕಾರ ಪಟ್ಟ ಮನ್ಮಥನನ್ನು ಶಿವನಿಂದ ಸುಡಿಸಿದ ಶ್ರೀಕೃಷ್ಣ ಪುನಃ ಅನುಗ್ರಹಿಸಿ ಬದುಕಿಸಿದ. ಮುಂದೆ ಅವನೆಂದೂ ಕೃಷ್ಣನ ಏಕಾಂತಭಕ್ತರನ್ನು ಪೀಡಿಸುವುದಿಲ್ಲ.

ಲಕ್ಷ್ಮಣನಿಗೆ ಬಂದ ದರ್ಪವನ್ನು ರಾವಣನೆಸೆದ ಶಿವನ ಶೂಲದ ಮೂಲಕ ಪರಿಹರಿಸಿದ. ಭೃಗುಶಾಪದಿಂದ ರಾಮ ತನ್ನನ್ನು ತಾನೆ ಮರೆಯುವಂತೆ ಮಾಡಿ ಅವನ ದರ್ಪವನ್ನು ಪರಿಹರಿಸಿದ. ಕಾರ್ತವೀರ್ಯಾರ್ಜುನನ ದರ್ಪವನ್ನು ಪರಶುರಾಮನ ಪರಶು ಎಂಬ ಅಮೋಘ ಅಸ್ತ್ರದಿಂದ ನಾಶಪಡಿಸಿದ.

ಬ್ರಾಹ್ಮಣಪುತ್ರನ ಮರಣಪ್ರಸಂಗದಲ್ಲಿಯೂ ಕೃಷ್ಣನ ಹದಿನಾರು ಸಾವಿರ ಸ್ತ್ರೀಯರನ್ನು ಮ್ಲೇಚ್ಛರು ಅಪಹರಿಸಿದ ಪ್ರಸಂಗದಲ್ಲಿಯೂ ಕರ್ಣನೊಡನೆ ಯುದ್ಧ ಮಾಡಿದಾಗಲೂ ಅರ್ಜುನನ ದರ್ಪ ಮುರಿಯುವಂತೆ ಮಾಡಿದ.

ಉಷಾಹರಣ ಸಂದರ್ಭದಲ್ಲಿ ಬಾಣನ ಬಾಹುಗಳನ್ನು ಕೃಷ್ಣ ಕತ್ತರಿಸಿದ. ಭೃಗುವಿಗೆ ದಕ್ಷಯಜ್ಞ ಪ್ರಸಂಗದಲ್ಲಿ ದರ್ಪಭಂಗ ಮಾಡಿಸಿದ. ಸೀತಾರಾಮರು ವಿವಾಹವಾಗಿ ಹೊರಟಾಗ ದಾರಿಯಲ್ಲಿ ಪರಶುರಾಮ ರಾಮನನ್ನು ಇದಿರಿಸಿ ಸೋತು ದರ್ಪ ಕಳೆದುಕೊಂಡ. ಮೇರುವಿನ ಶಿಖರಗಳನ್ನು ವಾಯುವಿನಿಂದ ಕಿತ್ತು ಹಾಕಿಸಿ ದರ್ಪವನ್ನು ಕಳೆದ. ಸಮುದ್ರಗಳ ದರ್ಪವನ್ನು ಅಗಸ್ತ್ಯರ ಮೂಲಕ ಕಳೆದ.

ಪಾರ್ವತಿಗೆ ಅಹಂಕಾರ ಬಂದಿತೆಂದು ಶಿವ ಅವಳನ್ನು ತೊರೆದು ಮನ್ಮಥನನ್ನು ಸುಟ್ಟು ತಪಸ್ಸಿಗೆ ತೆರಳಿದ. ಆಗ ಪಾರ್ವತಿಗೆ ಲಜ್ಜೆ ಉಂಟಾಯಿತು. ದರ್ಪ ಅಳಿಯಿತು.

ಶಿವನನ್ನು ಹೊಂದುವಂತೆ ವಿಷ್ಣುವಿನಿಂದ ವರಪಡೆಯಲು ತಪಸ್ಸು ಮಾಡಿದಳು. ಅದರಿಂದ ಅವಳು ಮಹಾ ಭಾಗ್ಯವತಿಯಾಗಿ ಶಂಕರನಿಗೆ ಪ್ರಿಯಳಾಗಿ ಲೋಕದಲ್ಲೆಲ್ಲ ಅತ್ಯಂತ ಪೂಜ್ಯಳೆನಿಸಿದಳು.

ಲಕ್ಷ್ಮಿಗೆ ಅಹಂಕಾರ ಬಂದಾಗ ಒಮ್ಮೆ ಅವಳು ಭಕ್ತರಿಗೆ ಅನುಗ್ರಹ ಮಾಡಿ ವೈಕುಂಠದ ಅಂತಃಪುರವನ್ನು ಪ್ರವೇಶಿಸುತ್ತಿದ್ದಂತೆ ದ್ವಾರಪಾಲಕರಾದ ಜಯವಿಜಯರು ತಡೆದರು. ಅಭಿಮಾನ ಉಳ್ಳ ಮಹಾಲಕ್ಷ್ಮಿ ಈ ಅಪಮಾನವನ್ನು ತಡೆಯದೆ ಹರಿಯ ಪಾದಕಮಲಗಳನ್ನು ನೆನೆದು ಶರೀರತ್ಯಾಗ ಮಾಡಲು ಉದ್ಯುಕ್ತಳಾದಳು. ಆಗ ಬ್ರಹ್ಮ ಶಿವ ವಿಷ್ಣು ಧರ್ಮ ಸೂರ್ಯ ಚಂದ್ರ ಮನ್ಮಥ, ಅಗ್ನಿ ಕುಬೇರ ಋಷಿ ಮುನಿಗಳು ಮನುಗಳು ಇಂದ್ರ ವರುಣ ವಾಯು ಅಗ್ನಿಗಳೆಲ್ಲರೂ ಅಳುತ್ತ ಮಹಾಲಕ್ಷ್ಮಿಯ ಮುಂದೆ ಬಂದು ಸ್ತುತಿಸಿದರು.

'ಅಮ್ಮ ಭಗವತಿ ಕ್ಷಮಿಸು, ನೀನು ಕ್ಷಮಾಶೀಲಳು, ಶುದ್ಧ ಸತ್ಯ ಸ್ವರೂಪಳು, ಕೋಪಾದಿರಹಿತಳು. ಎಲ್ಲ ಪತಿವ್ರತೆಯರಿಗೂ ಆದರ್ಶಭೂತಳು. ನೀನಿಲ್ಲದಿದ್ದರೆ ಜಗತ್ತೆಲ್ಲ ಸತ್ತ ಹೆಣದಂತಾಗುವುದು. ನಿಷ್ಫಲವಾಗುವುದು. ಸರ್ವಸಂಪತ್ ಸ್ವರೂಪಳು ನೀನು, ರಾಸೇಶ್ವರಿ. ಎಲ್ಲ ಸ್ತ್ರೀಯರೂ ನಿನ್ನ ಅಂಶರೂಪರು. ಕೈಲಾಸದಲ್ಲಿ ಪಾರ್ವತಿ ನೀನು. ಕ್ಷೀರಸಮುದ್ರದಲ್ಲಿ ಲಕ್ಷ್ಮಿ, ಸ್ವರ್ಗದಲ್ಲಿ ಸ್ವರ್ಗಲಕ್ಷ್ಮಿ. ಭೂಮಿಯಲ್ಲಿ ಮರ್ತ್ಯಲಕ್ಷ್ಮಿ ವೈಕುಂಠದಲ್ಲಿ ಮಹಾಲಕ್ಷ್ಮಿ ಗಂಗೆ ಸರಸ್ವತಿ ತುಲಸಿ. ಬ್ರಹ್ಮಲೋಕದಲ್ಲಿ ಸಾವಿತ್ರಿ, ಗೋಲೋಕದಲ್ಲಿ ಕೃಷ್ಣನ ಪ್ರಾಣಾಧಿಕಳಾದ ರಾಧೆ, ರಾಸದಲ್ಲಿ ರಾಸೇಶ್ವರಿ ವೃಂದಾವನದಲ್ಲಿ ವೃಂದೆ, ಭಾಂಡೀರದಲ್ಲಿ ಕೃಷ್ಣಪ್ರಿಯೆ, ಚಂದನ ಕಾನನದಲ್ಲಿ ಚಂದ್ರೆ, ಚಂಪಕವನದಲ್ಲಿ ವಿರಜೆ, ಶತಶೃಂಗದಲ್ಲಿ ಸುಂದರಿ. ಪದ್ಮವನದಲ್ಲಿ ಪದ್ಮಾವತಿ, ಮಾಲತೀವನದಲ್ಲಿ ಮಾಲತಿ, ಕುಂದವನದಲ್ಲಿ ಕುಂದದಂತಿ, ಕೇತಕೀವನದಲ್ಲಿ ಸುಶೀಲೆ, ಕದಂಬವನದಲ್ಲಿ ಕದಂಬಮಾಲೆ, ರಾಜಗೃಹದಲ್ಲಿ ರಾಜಲಕ್ಷ್ಮಿ, ಪ್ರತಿ ಗೃಹಗಳಲ್ಲಿ ಗೃಹಲಕ್ಷ್ಮಿ ನೀನೆ.' ಹೀಗೆ ಎಲ್ಲ ದೇವತೆಗಳೂ ಮುನಿಗಳೂ ಮನುಗಳೂ ಸ್ತೋತ್ರಮಾಡಿ ತಲೆಬಾಗಿ ಕಣ್ಣೀರು ಕರೆದರು. ಅವರ ಕಂಠ ಓಷ್ಠ ತಾಲುಗಳು ಒಣಗಿದುವು.

ಈ ಪುಣ್ಯಕರವಾದ ಲಕ್ಷ್ಮೀಸ್ತೋತ್ರವನ್ನು ಬೆಳಿಗ್ಗೆ ಎದ್ದು ಪಠಿಸುವವನು ಸಕಲಾಭೀಷ್ಟಗಳನ್ನು ಪಡೆಯುವನು. ಹೆಂಡತಿ ಇಲ್ಲದವನು ಸುಶೀಲೆ ಸುಂದರಿ ವಿನೀತೆ ಪ್ರಿಯವಾದಿನಿಯಾದ ಹೆಂಡತಿಯನ್ನು ಪಡೆಯುವನು. ಪುತ್ರ ಪೌತ್ರ ಸಂತತಿಯನ್ನೂ ಪಡೆಯುವನು. ಮಕ್ಕಳಿಲ್ಲದವನು ವಿಷ್ಣುಭಕ್ತನಾದ ದೀರ್ಘಾಯುವಾದ ಪರಮೈಶ್ವರ್ಯ ವಿದ್ಯೆ ಯಶಸ್ಸುಳ್ಳ ಮಗನನ್ನು ಪಡೆಯುವನು. ರಾಜ್ಯ ಕಳೆದುಕೊಂಡವನು ರಾಜ್ಯ ಹೊಂದುವನು. ಸಂಪತ್ತನ್ನು ಕಳೆದುಕೊಂಡವನು ತಿರುಗಿ ಸಂಪತ್ತನ್ನು ಪಡೆಯುವನು. ಕೀರ್ತಿ ಇಲ್ಲದವನು ಕೀರ್ತಿ ಹೊಂದುವನು. ಸರ್ವಮಂಗಳದಾಯಕ, ಶೋಕ ತಾಪಗಳನ್ನು ಕಳೆವ, ಹರ್ಷ ಆನಂದಗಳನ್ನೀವ, ಧರ್ಮಮೋಕ್ಷಕಾರಣವಾದ ಸ್ತೋತ್ರ ಇದು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಲಕ್ಷ್ಮೀಸ್ತೋತ್ರಕಥನವೆಂಬ ಐವತ್ತಾರನೆ ಅಧ್ಯಾಯ ಮುಗಿಯಿತು*

—○—

## ಲಕ್ಷ್ಮೀ ವೈರಾಗ್ಯಮೋಚನ

ಅಧ್ಯಾಯ - ೫೭

**ನಾರಾಯಣ:-** ದೇವತೆಗಳು ಮಾಡಿದ ಸ್ತೋತ್ರವನ್ನು ಕೇಳಿ ಮಹಾಲಕ್ಷ್ಮಿ ಅಳುವನ್ನು ನಿಲ್ಲಿಸಿದಳು, ಪ್ರಸನ್ನಳಾಗಿ ನುಡಿದಳು.

**ಮಹಾಲಕ್ಷ್ಮಿ:-** ದೇವತೆಗಳೆ, ಕೇಳಿರಿ. ನಾನು ಈಗ ಕೋಪದಿಂದಾಗಲಿ ವೈರಾಗ್ಯದಿಂದಾಗಲಿ ಶರೀರತ್ಯಾಗ ಮಾಡುತ್ತಿಲ್ಲ. ಸರ್ವಾತ್ಮ, ಸದಾನಂದ, ನಿರ್ಗುಣನಾದ ಪರಮಾತ್ಮನಿಗೆ ಒಂದು ಹುಲ್ಲುಕಡ್ಡಿಯೂ ಬೆಟ್ಟವೂ ಸಮಾನವೆ. ಒಂದು ಹುಬ್ಬಿನ ಕುಣಿತದಿಂದ ಲಕ್ಷ ಲಕ್ಷ್ಮಿಯರನ್ನು ಹುಟ್ಟಿಸಬಲ್ಲ ಅವನಿಗೆ ಮಡದಿಯೂ ಸೇವಕನೂ ಸಮಾನರು. ಅವನ ಸೇವೆ ಮಾಡಿ ಏನು ಫಲ? ಅವನ ಮಡದಿಯರಲ್ಲಿ ಪ್ರಧಾನಳು ನಾನು, ಅವನ ಮನೆಬಾಗಿಲಲ್ಲಿ ಅವನ ಭೃತ್ಯಭೃತ್ಯರ ಭೃತ್ಯನಾದ ಒಬ್ಬನಿಂದ ತಡೆದು ನಿಲ್ಲಿಸಲ್ಪಟ್ಟೆನೆಂದರೆ ಪತಿಸೌಭಾಗ್ಯವಿಲ್ಲದ ನಾನು ಏಕೆ ಬದುಕಿರಬೇಕು? ಆದರಿಂದ ಅಗ್ನಿಯಲ್ಲಿ ನಾನು ಶರೀರತ್ಯಾಗ ಮಾಡುವೆನು. ಯಾವ ಸ್ತ್ರೀ ಪತಿ ಸೌಭಾಗ್ಯರಹಿತಳೋ ಅವಳು ಎಲ್ಲ ಸೌಭಾಗ್ಯಗಳಿಂದಲೂ ವಂಚಿತಳಾಗುವಳು. ಅವಳಿಗೆ ಉಣ್ಣುವುದರಲ್ಲಿ ಮಲಗುವುದರಲ್ಲಿ ಸೌಖ್ಯವೆಂಬುದಿಲ್ಲ. ಅವಳ ಜೀವನವೆ ವ್ಯರ್ಥ. ಪತಿಪ್ರೇಮವಿಲ್ಲದ ನಾರಿಯ ಜನ್ಮವೆ ವ್ಯರ್ಥ. ಎಂದಮೇಲೆ ಅವಳಿಗೆ ಪುತ್ರಸಂಪತ್ತು ರೂಪ ಯೌವನಗಳಿದ್ದೇನು ಫಲ? ಯಾವ ಸ್ತ್ರೀಗೆ ಸರ್ವಪ್ರಿಯತಮನಾದ ಪತಿಯಲ್ಲಿ ಭಕ್ತಿ ಇಲ್ಲವೋ ಅವಳು ಅಪವಿತ್ರಳು, ಸರ್ವಕರ್ಮಬಹಿಷ್ಕೃತಳು. ಪತಿಯೆ ಬಂಧು ಗತಿ ದೇವತೆ ಗುರು ಎಲ್ಲವೂ ಆಗಿರುತ್ತಾನೆ. ಪತಿಗಿಂತ ಬೇರೆ ಗುರು ಅವಳಿಗೆ ಇಲ್ಲ. ತಂದೆ ತಾಯಿ ಮಗ ಸೋದರರು ಕೊಟ್ಟರೆ ಏನಿದ್ದರೂ ಕಡಿಮೆ ಕೊಡುತ್ತಾರೆ. ಪತಿ ಸತಿಗೆ ಸರ್ವಸ್ವವನ್ನೇ ಕೊಡುತ್ತಾನೆ. ಸತ್ಕುಲದಲ್ಲಿ ಬಂದ ಸುಶೀಲೆಯಾದ ಮಹಾಸಾಧ್ವಿಯರು ಕೆಲವರು ಮಾತ್ರ ಪತಿಯನ್ನು ಅರಿತುಕೊಳ್ಳಬಲ್ಲರು. ಸತ್ಕುಲದವಳಲ್ಲದ ದುಃಶೀಲೆಯಾದ ಯೋನಿದುಷ್ಟಳಾದ ಕಟುನುಡಿಯಾಡುವ ಹೆಣ್ಣು ಪತಿಯನ್ನು ನಿಂದಿಸುತ್ತಾಳೆ. ಹೀಗೆ ವಿಷ್ಣುಸಮನಾದ ಗುರುವಾದ ಪತಿಯನ್ನು ದ್ವೇಷಿಸುವ ಹೆಣ್ಣು ಹದಿನಾಲ್ಕು ಮನ್ವಂತರಗಳ ಕಾಲ ಕುಂಭೀಪಾಕದಲ್ಲಿ ಬೀಳುವಳು. ಪತಿಭಕ್ತಿ ರಹಿತಳಾದ ಹೆಣ್ಣು ಮಾಡುವ ವ್ರತ ಉಪವಾಸ ದಾನ ತಪಸ್ಸುಗಳೆಲ್ಲವೂ ನಿರರ್ಥಕವಾಗುವುವು. ಆದರಿಂದ ನಾನು ಪತಿಯ ಬಗ್ಗೆ ನಿಷ್ಠುರವಾಗಿ ಏನೂ ಹೇಳಲಾರೆ. ಆದರೆ ಸೇವಕನು ಮಾಡಿದ ಅಪಚಾರದಿಂದ ಪ್ರಾಣತ್ಯಾಗ ಮಾಡುವುದು ನಿಶ್ಚಿತ. ಪತಿಯಲ್ಲಿ ಏನೇ ದೋಷವಿದ್ದರೂ ಸತಿ ನಿಷ್ಠುರವಾಗಿ ನುಡಿಯಬಾರದು. ಸಹಿಸಲು ಅಶಕ್ಯವಾದಲ್ಲಿ ಧರ್ಮದಿಂದ ಪ್ರಾಣತ್ಯಾಗ ಮಾಡಬೇಕು. ಪತಿಸೇವೆಯೆ ಸತಿಗೆ ವ್ರತ ತಪಸ್ಸು ಧರ್ಮ ದೇವತಾರಾಧನ, ದಾನ, ತೀರ್ಥ ಯಾತ್ರೆ ಎಲ್ಲವೂ ಆಗಿರುತ್ತದೆ. ಪತಿಯೆ ಸತಿಗೆ ಸರ್ವದೇವಮಯ, ಶುಚಿ, ಸರ್ವಪುಣ್ಯ ಸ್ವರೂಪ. ಅವಳಿಗೆ ಪತಿಯೆ ಜನಾರ್ದನ, ಅವನ ಉಚ್ಛಿಷ್ಟ ಉಣ್ಣುವ, ಪಾದೋದಕ ಧರಿಸುವ ಸತಿಯ ದರ್ಶನವನ್ನು ದೇವತೆಗಳೂ ನಿತ್ಯ

ಬಯಸುತ್ತಾರೆ. ಅವಳ ಸ್ಪರ್ಶದಿಂದ ತೀರ್ಥಗಳು ಪವಿತ್ರವಾಗಿ ಪಾಪಿಗಳ ಪಾಪವನ್ನು ಕಳೆಯಲು ಶಕ್ತವಾಗುತ್ತವೆ. ಹೀಗೆ ಹೇಳಿ ಲಕ್ಷ್ಮಿ ಕಣ್ಣೀರುಗರೆದಳು. ಬ್ರಹ್ಮ ಭಯಗೊಂಡು ಭಕ್ತಿಯಿಂದ ತಲೆಬಾಗಿ ನುಡಿದ -

**ಬ್ರಹ್ಮ:-** ಜಯವಿಜಯರಿಗೆ ಮುಂದೆ ಒಳ್ಳೆಯದಾಗುವುದಿಲ್ಲ. ಏಕೆಂದರೆ ಪತಿಗೆ ಖೇದ ಉಂಟುಮಾಡಬಾರದೆಂದು ಆ ಮೂಢರಿಗೆ ನೀನು ಶಾಪ ಕೊಡಲಿಲ್ಲ. ಅಪರಾಧ ಮಾಡಿದವನಿಗೆ ಪುಣ್ಯಾತ್ಮನು ಸಹನೆಯಿಂದ ಶಾಪ ಕೊಡದಿದ್ದಲ್ಲಿ ಅವನು ಬೇಗನೆ ಸರ್ವನಾಶ ಹೊಂದುತ್ತಾನೆ. ಅಪರಾಧಿಯನ್ನು ದಂಡಿಸಲು ಅಥವಾ ಶಪಿಸಲು ಅಶಕ್ತಿಯಿಂದ ಬಿಟ್ಟುಬಿಟ್ಟರೆ ಅವನನ್ನು ಅವನ ಪಾಪವೆ ದಂಡಿಸತ್ತದೆ. ಅಮ್ಮ ನೀನು ಎಲ್ಲವನ್ನೂ ಮರೆತು ಪತಿಯ ಬಳಿಗೆ ಹೋಗು. ಅವನ ಭಕ್ತನಾದ ನನಗೆ ಸೃಷ್ಟಿಕಾರ್ಯದಲ್ಲಿ ಆಜ್ಞೆ ನೀಡು.'

ಹೀಗೆ ಹೇಳಿ ಬ್ರಹ್ಮ ಲಕ್ಷ್ಮಿಯನ್ನು ಮುಂದಿಟ್ಟುಕೊಂಡು ಎಲ್ಲ ದೇವತೆಗಳೊಡನೆ ಮುನಿಗಳೊಡನೆ ಶ್ರೀಹರಿಯ ಬಳಿಗೆ ಹೋಗಿ ಸ್ತುತಿಸಿದ. ಅವನ ಸ್ತೋತ್ರವನ್ನು ಕೇಳಿ, ಇದಿರಿನಲ್ಲಿ ತಲೆ ತಗ್ಗಿಸಿ ಕಣ್ಣೀರು ಸುರಿಸುತ್ತ ನಿಂತ ಲಕ್ಷ್ಮಿಯನ್ನೂ ನೋಡಿ ಶ್ರೀಹರಿ ನುಡಿದ -

ಬ್ರಹ್ಮ, ನನಗೆ ಎಲ್ಲವೂ ತಿಳಿದಿದೆ. ನನಗೆ ಭಕ್ತನಲ್ಲಿಯೂ ಸತಿಯಲ್ಲಿಯೂ ಬಂಧುವಿನಲ್ಲಿಯೂ ಎಲ್ಲರಲ್ಲಿಯೂ ಸಮಾನವಾದ ಆದರವಿರುತ್ತದೆ. ವಿಶೇಷವಾಗಿ ಸತಿಗಿಂತಲೂ ಭಕ್ತನಲ್ಲಿ ವಿಶೇಷವಾದ ಆದರ. ಈಗ ನನ್ನ ಭಕ್ತರೆ ಆದ ನಿನ್ನ ಮಕ್ಕಳು ಜಯ ವಿಜಯರು ಮಾಡಿದ ಅಪರಾಧವನ್ನು ನಾನು ಕ್ಷಮಿಸಿದ್ದೇನೆ. ನನ್ನ ಭಕ್ತಿರಸ ಪಾನದಿಂದ ಮದವೇರಿದ ಭಕ್ತನಿಗೆ ನನ್ನ ಸುದರ್ಶನ ಚಕ್ರದ ರಕ್ಷಣೆ ಇರುವುದರಿಂದ ಬಲಿಷ್ಠನಾಗಿದ್ದು ದೈತ್ಯರಿಗೆ ಅವನು ಅಂಜುವುದಿಲ್ಲ.

ಹೀಗೆ ಹೇಳಿ ಜಗನ್ನಾಥ ಲಕ್ಷ್ಮಿಯನ್ನು ಆಲಿಂಗಿಸಿಕೊಂಡು ದ್ವಾರಪಾಲಕರನ್ನು ಕರೆದು ಹೇಳಿದ - 'ನೀವು ಭಯ ಪಡಬೇಡಿ. ನಾನಿರುವಾಗಿ ನಿಮಗೆ ಏತರ ಭಯ? ನನ್ನ ಭಕ್ತರಿಗೆ ಶಾಸನ ಮಾಡಬಲ್ಲವ ಯಾರಿದ್ದಾನೆ? ಅದರಿಂದ ನೀವು ನಿಮ್ಮ ಸ್ಥಾನಕ್ಕೆ ಹೋಗಿರಿ.' ದೇವತೆಗಳೆಲ್ಲರೂ ಹರಿಯನ್ನು ನಮಿಸಿ ತಮ್ಮ ಲೋಕಗಳಿಗೆ ಹೊರಟು ಹೋದರು. ಹರಿಯ ಮಾತನ್ನು ಕೇಳಿ ದ್ವಾರಪಾಲಕರು ರೋಮಾಂಚಿತರಾಗಿ ಭಕ್ತಿಯಿಂದ ತಲೆ ಬಾಗಿ ನುಡಿದರು.

**ಜಯ:-** ನಾವು ನಿನ್ನ ಪಾದಕಮಲ ಧ್ಯಾನದಲ್ಲಿ ಮುಳುಗಿದ್ದು ಯಾವ ದೇವತೆಗಳಿಗಾಗಲಿ ಲಕ್ಷ್ಮಿಗಾಗಲಿ ಋಷಿ ಮುನಿಗಳಿಗಾಗಲಿ ಎಂದೂ ಅಂಜುವುದಿಲ್ಲ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಲಕ್ಷ್ಮೀವೈರಾಗ್ಯಮೋಚನವೆಂಬ ಐವತ್ತೇಳನೆ ಅಧ್ಯಾಯ ಮುಗಿಯಿತು*

—o—

## ರಾಧೆಯ ದರ್ಪಭಂಗ

### ಅಧ್ಯಾಯ - ೫೮

**ನಾರಾಯಣ:-** ಪೃಥಿವಿಗೂ ಅಹಂಕಾರ ಬಂದಿತು, ತಾನು ಎಲ್ಲಕ್ಕೂ ಆಧಾರಳೆಂದು. ಅವಳ ದರ್ಪವನ್ನು ಶ್ರೀಕೃಷ್ಣ ಪೃಥುರಾಜನ ಮೂಲಕ ಕಳೆದ. ಸಾವಿತ್ರಿಗೂ ಅಹಂಕಾರ ಬಂದಿತು, ತಾನೇ ವೇದಮಾತೆ ಎಂದು. ಕೃಷ್ಣ ಅವಳನ್ನು ಅವಳ ಮಗನ ಸಮೇತವಾಗಿ ಲೋಕದಿಂದ ಮರೆ ಮಾಡಿದ. ಗಂಗೆಗೂ ಅಹಂಕಾರ ಬಂದಿತು, ತಾನು ಮೋಕ್ಷದಾಯಕಳೆಂದು. ಜಹ್ನು ಮುನಿಯ ಮೂಲಕ ಅವಳ ದರ್ಪವನ್ನೂ ಕಳೆದ. ಮನಸಾದೇವಿಯ ದರ್ಪವನ್ನು ದುರ್ಗೆಯ ಮೂಲಕ ಕಳೆದ.

ಕೃಷ್ಣನೊಮ್ಮೆ ರಾಸಗೃಹಕ್ಕೆ ಬಂದಾಗ ಬಾಗಿಲಲ್ಲಿ ರಾಧೆ ದರ್ಪದಿಂದ ಮತ್ತು ಕೋಪದಿಂದ ಬೈದಳು. ದ್ವಾರಪಾಲಿಕೆಯರಿಂದ ಹೊಡೆಸಿದಳು. ಅದಕ್ಕೆ ಅವನು ತನ್ನ ಭಕ್ತನಾದ ಸುದಾಮನಿಂದ ಅವಳಿಗೆ ಶಾಪ ಕೊಡಿಸಿದ. ಒಡನೆ ಅವಳು ಗೋಲೋಕದಿಂದ ಭೂಮಿಗೆ ಬಿದ್ದು ವೃಷಭಾನುವಿನ ಮಗಳಾಗಿ ಹುಟ್ಟಿದಳು. ಅವಳಿಗಾಗಿ ಕೃಷ್ಣ ಕಂಸನ ಭಯವನ್ನು ನೆಪಮಾಡಿಕೊಂಡು ಮಧುರೆಯಿಂದ ನಂದ ಗೋಕುಲಕ್ಕೆ ಬಂದ. ನಂದನಂದನನೆನಿಸಿದ. ಬಳಿಕ ಸುದಾಮನ ಶಾಪಕ್ಕೆ ಅನುಗುಣವಾಗಿ ರಾಧೆಗೆ ತನ್ನ ವಿಯೋಗ ಉಂಟು ಮಾಡುವುದಕ್ಕಾಗಿ ತಿರುಗಿ ನಂದಗೋಕುಲದಿಂದ ಮಧುರೆಗೆ ತೆರಳಿದ. ಆಗ ರಾಧೆ ಕೃಷ್ಣವಿಯೋಗದಿಂದ ದುಃಖಿತಳಾಗಿ ಅರಣ್ಯಗುಡ್ಡಗಾಡುಗಳಲ್ಲಿ ಸ್ಮಶಾನಗಳಲ್ಲಿ ಅಲೆಯುತ್ತ ಕ್ಷಣ ಕ್ಷಣಕ್ಕೂ ಮೂರ್ಛೆಗೊಂಡು ಬೀಳುತ್ತ ಏಳುತ್ತ ಕ್ಷಣಕ್ಷಣಕ್ಕೂ ನಿದ್ರೆಯಿಂದ ಕಣ್ಣು ಮುಚ್ಚುತ್ತ ತೆರೆಯುತ್ತ ನಿಟ್ಟುಸಿರು ಬಿಡುತ್ತ ಕೃಷ್ಣನನ್ನೆ ಧ್ಯಾನಿಸಿದಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಐವತ್ತೆಂಟನೆ ಅಧ್ಯಾಯ ಮುಗಿಯಿತು*

—o—

## ಅಧ್ಯಾಯ - ೫೯

**ನಾರಾಯಣ:-** ನಾರದ, ಶ್ರೀಕೃಷ್ಣ ಎಲ್ಲರ ದರ್ಪವನ್ನು ಮುರಿದ ಬಗೆಯನ್ನು ಹೇಳಿದ್ದೇನೆ. ಈಗ ಇಂದ್ರನ ದರ್ಪವನ್ನು ಮುರಿದ ಬಗೆಯನ್ನು ವಿಸ್ತಾರವಾಗಿ ಹೇಳುವೆನು, ಕೇಳು. ಇಂದ್ರನೊಮ್ಮೆ ರತ್ನಸಿಂಹಾಸನದಲ್ಲಿ ಕುಳಿತಿದ್ದಾಗ ಗುರು ಬೃಹಸ್ಪತಿ ಬಂದ. ಆದರೆ ಇಂದ್ರ ಎದ್ದು ನಿಂತು ಗೌರವತೋರಲಿಲ್ಲ. ಬೃಹಸ್ಪತಿ ಈಅಪಮಾನದಿಂದ ಕುಪಿತನಾದ. ಆದರೂ ಕರುಣೆಯಿಂದ ಮತ್ತು ಶಿಷ್ಯವಾತ್ಸಲ್ಯದಿಂದ ಶಾಪಕೊಡಲಿಲ್ಲ. ಅದರಿಂದ ಶಾಪವಿಲ್ಲದೆಯೆ ಅವನ ದರ್ಪಮುರಿಯಿತು. ಅಪರಾಧ ಗೈದವನಿಗೆ ಪುಣ್ಯಾತ್ಮರು ಶಾಪಕೊಡದಿದ್ದರೂ ಅವನಿಗೆ ಅವನ ಪಾಪವೆ ದಂಡನೀಡುತ್ತದೆ. ಒಬ್ಬನ ಪುಣ್ಯ ನಾಶವಾಗುವಾಗ ಅದು ಅವನನ್ನು ನಾಶ ಮಾಡುತ್ತಲೆ ತಾನು ನಾಶವಾಗುತ್ತದೆ. ಪಾಪ ಬಂದು ಸೇರುತ್ತದೆ. ಹೀಗೆ ಇಂದ್ರನ ಪುಣ್ಯ ನಾಶವಾಯಿತು, ಬ್ರಹ್ಮಹತ್ಯಾ ಪಾಪ ತಗುಲಿತು. ಅದರಿಂದ ಭಯಗೊಂಡ ಇಂದ್ರ ಒಂದು ಸರೋವರವನ್ನು ಹೊಕ್ಕು ಅದರೊಳಗೆ ಒಂದು ಕಮಲದ ನಾಳದಲ್ಲಿ ಅಡಗಿ ಕುಳಿತ. ಬ್ರಹ್ಮಹತ್ಯೆ ಆ ಸರೋವರವನ್ನು ಪ್ರವೇಶಿಸಲು ಶಕ್ತಳಾಗಲಿಲ್ಲ. ಅದು ಪವಿತ್ರವಾದ ವಿಷ್ಣುಸರೋವರ. ಭರತಭೂಮಿಯಲ್ಲಿಯೇ ಶ್ರೇಷ್ಠವಾದ ತಪಸ್ಸಿನ ಸ್ಥಳ. ಅದನ್ನು ಪುಷ್ಕರತೀರ್ಥವೆನ್ನುತ್ತಾರೆ ಬಲ್ಲವರು. ಇಂದ್ರ ರಾಜ್ಯಭ್ರಷ್ಟನಾದುದನ್ನು ಕಂಡು ಹರಿಭಕ್ತನಾದ ನಹುಷಚಕ್ರವರ್ತಿ ಬಲಾತ್ಕಾರದಿಂದ ಇಂದ್ರನ ಸಿಂಹಾಸನವನ್ನು ಆಕ್ರಮಿಸಿದ. ಬಳಿಕ ಇಂದ್ರನ ರಾಣಿಯಾದ ಶಚಿಯನ್ನು ಕಂಡ. ಅವಳು ಸುಂದರಿ, ನವಯುವತಿ. ಮಕ್ಕಳಿಲ್ಲದವಳು. ಒಮ್ಮೆ ಅವಳು ಆಕಾಶಗಂಗೆಗೆ ಸ್ನಾನಕ್ಕಾಗಿ ಹೋಗುತ್ತಿದ್ದಾಗ ನಹುಷ ಕಂಡು ಕಾಮಪರವಶನಾದ. ಅವಳ ಮುಂದೆ ದಾಸನಂತೆ ವಿನೀತಭಾವದಿಂದ ನಿಂತು ನುಡಿದ -

**ನಹುಷ:-** ಬ್ರಹ್ಮನ ಸೃಷ್ಟಿ ಬಲು ವಿಚಿತ್ರ. ಅದನ್ನು ಯಾರಿಗೂ ತಿಳಿಯಲಾಗದು. ಪರಸ್ತ್ರೀಲಂಪಟನಾಗಿ ಮೈಯೆಲ್ಲ ಸಹಸ್ರಾಕ್ಷನಾದ ಆ ಇಂದ್ರನಿಗೆ ಇಂಥ ಸುಂದರಿಯಾದ ಮಡದಿ! ಇವಳ ಮುಂದೆ ಆ ರಂಭೆ ಯಾರು? ಊರ್ವಶಿ ಯಾರು? ತಿಲೋತ್ತಮೆ ಯಾರು? ಮೇನೆ, ಘೃತಾಚಿ, ರತ್ನಮಾಲೆ, ಕಲಾವತಿ, ಕಾಲಿಕೆ, ಸುಂದರಿ, ಭದ್ರವತಿ, ಚಂಪಾವತಿ ಮುಂತಾದ ಅಪ್ಸರೆಯರು ಯಾರೂ ಈಕೆಗೆ ಹದಿನಾರನೆ ಒಂದಂಶದಷ್ಟೂ ಸಮರಾಗಲಾರರು. ಇವಳನ್ನು ಬಿಟ್ಟು ಮೂಢನಾದ ಇಂದ್ರ ಬೇರೆ ಹೆಣ್ಣುಗಳನ್ನು ಬಯಸುತ್ತಾನೆ. ನನ್ನ ಹೆಂಡಂದಿರು ಎಲ್ಲರೂ ಇವಳ ಸೇವಕಿಯರಿಗೆ ಸಮಾನರಾಗಬಲ್ಲರು, ಅಷ್ಟೇ. ಎಲೆ ಸುಂದರಿ, ನೀನು ಪ್ರಸನ್ನಳಾಗಿ ನಿನ್ನ ದಾಸನಾದ ನನ್ನನ್ನು ಸೇರು. ಗೋಲೋಕದಲ್ಲಿ ಕೃಷ್ಣನ ಬಳಿ ರಾಧೆ, ವೈಕುಂಠದಲ್ಲಿ ವೈಕುಂಠನ ಬಳಿ ಲಕ್ಷ್ಮಿ, ಸರಸ್ವತಿಯರು, ಬ್ರಹ್ಮಲೋಕದಲ್ಲಿ ಬ್ರಹ್ಮನ ಬಳಿ ಬ್ರಹ್ಮಾಣಿ, ಧರ್ಮನ ಬಳಿ ಮೂರ್ತಿ, ಅನಂತನ ಬಳಿ ಪಾತಾಲಲಕ್ಷ್ಮಿ, ಗಣೇಶನ ಬಳಿ ಪುಷ್ಟಿ, ಕಾರ್ತಿಕೇಯನ ಬಳಿ

ದೇವಸೇನೆ, ವರುಣನ ಬಳಿ ವರುಣಾನಿ, ಅಗ್ನಿಯ ಬಳಿ ಸ್ವಾಹೆ, ಮನ್ಮಥನ ಬಳಿ ರತಿ, ಸೂರ್ಯನ ಬಳಿ ಸಂಜ್ಞೆ, ವಾಯುವಿನ ಬಳಿ ವಾಯುಪತ್ನಿ, ಚಂದ್ರನ ಬಳಿ ರೋಹಿಣಿ, ದೇವಮಾತೆಯೂ ನಿನ್ನ ಅತ್ತೆಯೂ ಆದ ಅದಿತಿ ಕಶ್ಯಪರ ಬಳಿ, ಹಿಮಾಲಯನ ಬಳಿ ಮೇನೆ, ಅಗಸ್ತ್ಯರ ಬಳಿ ಲೋಪಾಮುದ್ರೆ, ಬೃಹಸ್ಪತಿಯ ಬಳಿ ತಾರೆ, ಕರ್ದಮರ ಬಳಿ ದೇವಹೂತಿ, ವಸಿಷ್ಠರ ಬಳಿ ಅರುಂಧತಿ, ಮನುವಿನ ಬಳಿ ಶತರೂಪೆ, ನಳನ ಬಳಿ ದಮಯಂತಿ ಹೇಗೋ ಹಾಗೆ ನನ್ನ ಬಳಿ ನೀನು ನನ್ನನ್ನಾಲಿಂಗಿಸಿಕೊಂಡಿರು. ನಾನು ಸಾವಿರ ಇಂದ್ರರನ್ನೂ ನಿಗ್ರಹಿಸಬಲ್ಲೆ. ಹೆಣ್ಣು ತನ್ನ ಪತಿಗಿಂತ ಹೆಚ್ಚು ಬಲಿಷ್ಠನಾದ ಗಂಡಸನ್ನೆ ಸೇರಲು ಬಯಸುವುದು ಸ್ವಾಭಾವಿಕ.

ಮೇರು ಪರ್ವತದ ಅತಿ ದುರ್ಗಮವಾದ ಗೋಪ್ಯಸ್ಥಳದಲ್ಲಿ ಅಥವಾ ಮಲಯ ಪರ್ವತದ ರಮ್ಯವಾದ ಸ್ಥಳದಲ್ಲಿ ಅಥವಾ ದೇವಲೋಕದ ನಂದನ ವನದ ಏಕಾಂತ ಸ್ಥಳದಲ್ಲಿ ನಾವು ವಿಹರಿಸೋಣ. ಅಥವಾ ಶತಶೃಂಗದ ಬಳಿ, ಪುಷ್ಪಭದ್ರಾ ನದೀತೀರದಲ್ಲಿ ಗೋದಾವರೀ ತೀರದಲ್ಲಿ ಚಂಪಾವತೀನದೀತೀರದ ಚಂಪಕವನದಲ್ಲಿ ವಿಹರಿಸೋಣ. ಅಥವಾ ಸ್ಮಶಾನ ಅತಿಸ್ಮಶಾನಗಳ ನಿರ್ಜನವಾದ ಸ್ಥಳದಲ್ಲಿ ಬೆಟ್ಟ ಕಾಡುಗಳ ಗಿರಿಗಹ್ವರಗಳ ದ್ವೀಪಗಳ ನದೀನದಗಳ ಸಮುದ್ರ ತೀರಗಳ ಏಕಾಂತ ಪ್ರದೇಶದಲ್ಲಿ ನಾವು ವಿಹರಿಸೋಣ. ಕುಶಲೆಯಾದ ಹೆಣ್ಣಿಗೆ ಕುಶಲನಾದ ಗಂಡಿನೊಡನೆ ನಿರ್ಜನ ಪ್ರದೇಶದಲ್ಲಿ ವಿಹರಿಸಿದರೇ ಸುಖ. ಪುಷ್ಪಚಂದನಗಳಿಂದ ಅಲಂಕೃತವಾದ ಪುಷ್ಪಚಂದನಮಯವಾದ ಹಾಸಿಗೆಯಲ್ಲಿ ಪುಷ್ಪ ಚಂದನ ಧರಿಸಿದ ನನ್ನೊಂದಿಗೆ ರಮಿಸು. ದೇವಿ, ನಾನು ಬ್ರಹ್ಮನ ವರದಿಂದ ಜರಾ ಮರಣವರ್ಜಿತ ನಾಗಿದ್ದೇನೆ. ಸ್ಥಿರಯೌವನಶಾಲಿಯಾಗಿದ್ದೇನೆ. ಸುಂದರ, ಸುಂದರವೇಷದವ, ಧೀರ, ಕಾಮಶಾಸ್ತ್ರವಿಶಾರದ, ಹುಣ್ಣಿಮೆ ಚಂದ್ರನಂಥ ಮುಖ ಉಳ್ಳವ, ಚಂದ್ರವಂಶದಲ್ಲಿ ಉದಿಸಿದವ, ಒಮ್ಮೆ ನನಗಾಗಿ ಊರ್ವಶಿ ಭೂಲೋಕಕ್ಕೆ ಬಂದಳು, ನನ್ನನ್ನು ಬೇಡಿದಳು; ನಾನು ನಿರಾಕರಿಸಿದೆ. ನಿನ್ನನ್ನು ಕಂಡ ಮಾತ್ರಕ್ಕೆ ನಿನ್ನಲ್ಲಿ ಆಸೆಪಟ್ಟಿದ್ದೇನೆ. ನಾನು ಇನ್ನಾವ ಸ್ತ್ರೀಯನ್ನೂ ಬಯಸುವುದಿಲ್ಲ. ನನ್ನ ಹೆಂಡಂದಿರನ್ನೆ ತ್ಯಜಿಸುತ್ತೇನೆ. ಅಥವಾ ಅವರೆಲ್ಲರನ್ನೂ ನಿನ್ನ ದಾಸಿಯರನ್ನಾಗಿ ಮಾಡುತ್ತೇನೆ. ವರುಣನಿಂದ ದತ್ತವಾದ ರತ್ನಮಾಲೆಯನ್ನು ನಿನಗೆ ತೊಡಿಸುತ್ತೇನೆ. ಅಗ್ನಿಯನ್ನು ಗೆದ್ದು ಪಡೆದ ಜೋಡಿವಸ್ತ್ರವನ್ನು ನಿನಗೆ ಉಡಿಸುತ್ತೇನೆ. ದೇವತೆಗಳನ್ನು ಗೆದ್ದು ದೇವಮಾತೆ ಅದಿತಿಯ ರತ್ನಕುಂಡಲಗಳನ್ನು ತಂದು ನಿನಗೆ ತೊಡಿಸುತ್ತೇನೆ. ಚಂದ್ರನನ್ನು ಗೆದ್ದು ರೋಹಿಣಿಯ ಕೈಯಲ್ಲಿರುವ ಅತಿ ದುರ್ಲಭವಾದ ರತ್ನದ ಬಳೆಯನ್ನು ತಂದು ನಿನಗೆ ಕೊಡುತ್ತೇನೆ. ಅಥವಾ ಕ್ಷಯರೋಗಗ್ರಸ್ತನಾದ್ದರಿಂದ ನನ್ನ ವಂಶದ ಮೂಲಪುರುಷನಾದ ಚಂದ್ರ ಭಯದಿಂದ ಯುದ್ಧವನ್ನೆ ಮಾಡದೆ ನನಗೆ ಆಬಳೆಗಳನ್ನು ನೀಡಬಹುದು.

ಈಗಲೆ ಆಶುತೋಷನಾದ ಕೃಪಾನಿಧಿಯಾದ ಶಿವನನ್ನು ಸ್ತುತಿಯಿಂದ ಒಲಿಸಿಕೊಂಡು ಪಾರ್ವತಿಯಲ್ಲಿ ಭಿಕ್ಷೆ ಬೇಡಿ ಅಮೂಲ್ಯವಾದ ರತ್ನಮಯವಾದ ಕಾಲ್ಗೆಜ್ಜೆಗಳನ್ನು ಸಂಪಾದಿಸಿ ನಿನಗೆ ತಂದುಕೊಡುತ್ತೇನೆ. ಗಂಗೆಯಿಂದ ಈಗಲೆ

ಅಮೂಲ್ಯ ರತ್ನಮಯವಾದ ತೋಳ್ಬಳೆಗಳನ್ನು ಪಡೆದು ನಿನಗೆ ತಂದುಕೊಡುತ್ತೇನೆ. ಮನ್ಮಥನನ್ನು ಗೆದ್ದು ರತಿಯ ಕೈಯಲ್ಲಿರುವ ರತ್ನಕನ್ನಡಿಯನ್ನು ತಂದು ನಿನಗೊಪ್ಪಿಸುತ್ತೇನೆ. ಶ್ರೀಹರಿಯನ್ನು ಸ್ತೋತ್ರದಿಂದ ವಶಪಡಿಸಿಕೊಂಡು ಲಕ್ಷ್ಮೀಯ ಕೈಯಲ್ಲಿರುವ ಲೀಲಾಕಮಲವನ್ನು ಬೇಡಿ ತಂದು ನಿನಗೆ ಕೊಡುತ್ತೇನೆ. ಬ್ರಹ್ಮನನ್ನು ತಪಸ್ಸಿನಿಂದ ಒಲಿಸಿಕೊಂಡು ಸಾವಿತ್ರಿಯ ಕೈಬೆರಳ ಉಂಗುರಗಳನ್ನು ನಿನಗೆ ತಂದುಕೊಡುತ್ತೇನೆ. ನಾರಾಯಣ ವ್ರತದ ಬಲದಿಂದ ಸರಸ್ವತಿಯ ಕೈಯ ವೀಣೆಯನ್ನೂ ನಿನಗೆ ತಂದುಕೊಡುತ್ತೇನೆ. ರತ್ನಹಾರಗಳು ಕಾಲುಂಗುರಗಳು ವಿಶ್ವಕರ್ಮ ನಿರ್ಮಿತವಾದವು ಕುಬೇರನ ಪತ್ನಿಯಲ್ಲಿ ಇವೆ. ಅವನ್ನೂ ನಿನಗೆ ತಂದು ಕೊಡುತ್ತೇನೆ.' ಹೀಗೆ ಹೇಳಿ ನಹುಷ ಶಚಿಯ ಪಾದಗಳಲ್ಲಿ ಬೀಳುತ್ತಾನೆ. ರಾಜಮಾರ್ಗದಲ್ಲಿ ರಾಜಾ ನಹುಷ ಹೀಗೆ ಮಾಡಿದ್ದನ್ನು ಕಂಡು ಭೀತಳಾಗಿ ಶಚಿ ಅವನನ್ನು ಕೈಹಿಡಿದೆಬ್ಬಿಸಿ ಮನಸಿನಲ್ಲಿ ಹರಿಗುರುಗಳನ್ನು ನೆನೆಯುತ್ತ ಒಣಗಿದ ಗಂಟಲು ತಾಲು ತುಟಿಗಳಿಂದ ನುಡಿದಳು.

**ಶಚಿ:-** ಮಹಾರಾಜ, ನೀನು ಎಲ್ಲರನ್ನೂ ಆಳುವವ, ತಂದೆ, ಭಯ ಪರಿಹಾರಕ. ಈಗ ಇಂದ್ರ ಸಂಪತ್ತನ್ನು ಕಳೆದುಕೊಂಡಿದ್ದಾನೆ. ನೀನು ಸ್ವರ್ಗಕ್ಕೆ ಅಧಿಪತಿಯಾಗಿರುವೆ. ರಾಜನಾಗಿರುವೆ. ರಾಜನೆಂದರೆ ಪ್ರಜೆಗಳಿಗೆ ರಕ್ಷಕನಾದ ತಂದೆ. ಗುರುಪತ್ನಿ, ರಾಜಪತ್ನಿ, ದೇವಪತ್ನಿ, ಸೊಸೆ, ಸೋದರತ್ತೆ, ಶಿಷ್ಯಪತ್ನಿ, ದಾಸ ಪತ್ನಿ, ಸೋದರ ಮಾವನ ಹೆಂಡತಿ, ಪಿತೃಪತ್ನಿ, ಭ್ರಾತೃಪತ್ನಿ, ಹೆಣ್ಣು ಕೊಟ್ಟ ಅತ್ತೆ, ಸೋದರಿ, ಮಗಳು, ದಾದಿ, ಇಷ್ಟದೇವತೆ ಇವರೆಲ್ಲರನ್ನೂ ತಾಯಿಗೆ ಸಮಾನವಾಗಿ ಕಾಣಬೇಕು. ನೀನು ಮನುಷ್ಯ, ನಾನು ದೇವಪತ್ನಿ. ಅದರಿಂದ ನಾನು ನಿನಗೆ ತಾಯಿಯಂತೆ. ತಾಯಿಗೆ ಗಂಡನೆನಿಸುವ ಆಸೆ ಇದ್ದರೆ ದೇವಮಾತೆ ಅದಿತಿ ಇದ್ದಾರೆ. ಅವರ ಬಳಿಗೆ ಹೋಗು. ಎಲ್ಲ ಪಾಪಗಳಿಗೆ ಪ್ರಾಯಶ್ಚಿತ್ತವಿದೆ. ತಾಯಿಗಂಡನಿಗೆ ಪ್ರಾಯಶ್ಚಿತ್ತವೆ ಇಲ್ಲ. ಅವನು ಬ್ರಹ್ಮನ ಆಯುಷ್ಯದಷ್ಟು ಕಾಲ ಕುಂಭೀಪಾಕದಲ್ಲಿ ನರಳುತ್ತಾನೆ. ಬಳಿಕ ಕ್ರಿಮಿಕೀಟಗಳಾಗಿ ಕುಷ್ಠರೋಗಿಗಳಾಗಿ ಹತ್ತಾರು ಜನ್ಮಗಳಲ್ಲಿ ನರಳುತ್ತಾನೆ. ಇದಕ್ಕೆ ಪರಿಹಾರವೆ ಇಲ್ಲ ಎಂದು ಬ್ರಹ್ಮ ಹೇಳುತ್ತಾನೆ.

ಹೀಗೇ ವೈಶ್ಯ ಕ್ಷತ್ರಿಯ ಶೂದ್ರರು ಬ್ರಾಹ್ಮಣಸ್ತ್ರೀಸಂಗ ಮಾಡಿದರೂ ವೇದದಲ್ಲಿ ಅದಕ್ಕೆ ಪ್ರಾಯಶ್ಚಿತ್ತವನ್ನು ಹೇಳಿಲ್ಲವೆಂದು ಅಂಗಿರಸಮುನಿ ಹೇಳುತ್ತಾನೆ. ಬ್ರಾಹ್ಮಣನಿಗೆ ಬ್ರಾಹ್ಮಣ್ಯಧರ್ಮದಲ್ಲಿಯೆ ಸುಖ. ಮುನಿಗಳಿಗೆ ಮೌನದಲ್ಲಿ, ವೈದಿಕರಿಗೆ ವೇದಾಭ್ಯಾಸದಲ್ಲಿ, ಕವಿಗಳಿಗೆ ಕಾವ್ಯವರ್ಣನೆಯಲ್ಲಿ, ವಿಷ್ಣುಭಕ್ತರಿಗೆ ವಿಷ್ಣುದಾಸ್ಯದಲ್ಲಿ ಸುಖವಿದೆ. ವಿಷ್ಣುಭಕ್ತಿಯನ್ನು ಹೊರತು ಮುಕ್ತಿಯನ್ನೂ ವೈಷ್ಣವರು ಬಯಸಲಾರರು. ಮಲಭರಿತವಾದ ದುರ್ಗಂಧದ ಆಗರವಾದ ಸ್ತ್ರೀಯೋನಿಗಳಲ್ಲಿ ಸಜ್ಜನರಿಗೆ ಅದೇನು ಸುಖ ದೊರಕೀತು? ಹೇಳು. ಲೋಕವನ್ನು ಆಳುವ ರಾಜರ ಕುಲದೀಪಕನಾದ ರಾಜ ನೀನು. ಬಹುಜನ್ಮಗಳ ಪುಣ್ಯದಿಂದ ನಿನಗೆ ಭಾರತ ಭೂಮಿಯಲ್ಲಿ ಜನ್ಮ ಲಭಿಸಿದೆ. ಚಂದ್ರವಂಶದ ರಾಜರುಗಳೆಂಬ ಕಮಲಗಳಿಗೆ ಗ್ರೀಷ್ಮ ಕಾಲದ ಮಧ್ಯಾಹ್ನದ ಸೂರ್ಯನಂತೆ ತೇಜಸ್ವಿಯಾದ ನೀನು ಜನಿಸಿರುವೆ. ಎಲ್ಲ

ಆಶ್ರಮದವರಿಗೂ ಸ್ವಧರ್ಮವೆ ಮಹಾ ಯಶಸ್ಕರ. ಸ್ವಧರ್ಮದಲ್ಲಿ ಇಲ್ಲದವರು ಮೂಢರು ನರಕದಲ್ಲಿ ಬೀಳುತ್ತಾರೆ. ಬ್ರಾಹ್ಮಣನ ಸ್ವಧರ್ಮ ಮೂರು ಹೊತ್ತು ಸಂಧ್ಯಾವಂದನೆ, ಹರಿಪೂಜೆ, ಹರಿಪಾದೋದಕ ನೈವೇದ್ಯಭಕ್ಷಣ. ಅದು ಅಮೃತಕ್ಕಿಂತಲೂ ಮೇಲು. ಹರಿಗೆ ನಿವೇದಿಸದ ಅನ್ನ ಮಲದಂತೆ, ನೀರು ಮೂತ್ರದಂತೆ ಅಗ್ರಾಹ್ಯ. ಅವುಗಳನ್ನು ಬ್ರಾಹ್ಮಣರು ಉಂಡರೆ ಹಂದಿಗಳಾಗಿ ಜನಿಸುತ್ತಾರೆ. ಬದುಕಿರುವಷ್ಟು ಕಾಲ ವಿಷ್ಣುನೈವೇದ್ಯವನ್ನೆ ಉಣಬೇಕು. ಏಕಾದಶಿ ಕೃಷ್ಣಜನ್ಮಾಷ್ಟಮೀ ಶಿವರಾತ್ರಿ ರಾಮನವಮಿಗಳಲ್ಲಿ ಅನ್ನಉಣಬಾರದು. ಇದಿಷ್ಟು ಬ್ರಾಹ್ಮಣರ ಸ್ವಧರ್ಮ. ಪತಿವ್ರತೆಯರಿಗೆ ಪತಿಸೇವೆಯೆ ಪರಮಧರ್ಮ. ಪರಪುರುಷರನ್ನು ಸ್ವಂತ ಮಗನಂತೆಯೆ ಕಾಣಬೇಕು. ಕ್ಷತ್ರಿಯರು ಪ್ರಜೆಗಳನ್ನು ಸ್ವಂತ ಮಕ್ಕಳಂತೆ ಕಾಪಾಡಬೇಕು. ಪ್ರಜೆಗಳಾದ ಸ್ತ್ರೀಯರನ್ನು ತಾಯಿಯಂತೆ ಕಾಣಬೇಕು. ಯಜ್ಞಗಳಿಂದ ವಿಷ್ಣುವನ್ನು ಆರಾಧಿಸಬೇಕು. ದೇವಬ್ರಾಹ್ಮಣರ ಸೇವೆ ಮಾಡಬೇಕು. ದುಷ್ಟರನ್ನು ನಿಗ್ರಹಿಸಬೇಕು. ಶಿಷ್ಟರನ್ನು ಕಾಪಾಡಬೇಕು. ಇದು ಬ್ರಹ್ಮನು ಹೇಳಿರುವ ಕ್ಷತ್ರಿಯಧರ್ಮ. ವೈಶ್ಯರಿಗೆ ವ್ಯಾಪಾರವೆ ಸ್ವಧರ್ಮ. ಅದರಿಂದ ಪುಣ್ಯಲಭಿಸುತ್ತದೆ. ಶೂದ್ರರಿಗೆ ಬ್ರಾಹ್ಮಣಸೇವೆಯೆ ಪರಮಧರ್ಮ.

ಸನ್ಯಾಸಿಗಳಿಗೆ ಎಲ್ಲವನ್ನೂ ಹರಿಯಲ್ಲಿ ತ್ಯಾಗ ಮಾಡುವುದು ಸ್ವಧರ್ಮ. ಒಂದು ಕೆಂಪು ಬಟ್ಟೆ ಉಡಬೇಕು. ದಂಡಕಮಂಡಲ ಧರಿಸಿ ಎಲ್ಲರಲ್ಲಿಯೂ ಸಮಾನ ಭಾವನೆ ಇಟ್ಟುಕೊಂಡು ಸದಾ ಹರಿಯನ್ನು ನೆನೆಯಬೇಕು. ಸದಾ ಸಂಚರಿಸುತ್ತಿರಬೇಕು. ಯಾವ ಮನೆಯಲ್ಲಿಯೂ ಒಂದು ದಿನಕ್ಕಿಂತ ಹೆಚ್ಚು ನಿಲ್ಲಬಾರದು. ಧನಾದಿ ಲೋಭದಿಂದ ತತ್ವಜ್ಞಾನವನ್ನು ಉಪದೇಶಿಸಬಾರದು. ಒಂದೆಡೆ ಆಶ್ರಮ ಕಟ್ಟಿಕೊಳ್ಳಬಾರದು. ಯಾರಲ್ಲಿಯೂ ಮಮತೆ ಇಟ್ಟುಕೊಳ್ಳದೆ, ಮೋಹ ಆಸಕ್ತಿ ಮಾಡದೆ, ರುಚಿಕರವಾದ ಆಹಾರ ಸ್ವೀಕರಿಸದೆ, ಮೋಹದಿಂದ ಸ್ತ್ರೀಮುಖವನ್ನು ನೋಡದೆ, ಗೃಹಸ್ಥರಲ್ಲಿ ದೇಹಧಾರಣೆಗೆ ಬೇಕಾಗುವಷ್ಟು ಮಾತ್ರ ಬೇಡಿ ತಿನ್ನಬೇಕು. ಇದು ಸನ್ಯಾಸಿಯ ಧರ್ಮವೆಂದು ಬ್ರಹ್ಮ ಹೇಳಿದ್ದಾನೆ. ಅದರಿಂದ ನಹುಷ, ನೀನು ಹೊರಟುಹೋಗು. ಶಚಿ ಹೀಗೆ ನುಡಿದಾಗ ನಹುಷ ಹೇಳಿದ, -

**ನಹುಷ:-** ದೇವಿ ಹೇಳಿದುದೆಲ್ಲ ವಿಪರೀತವಾಗಿದೆ! ವೇದೋಕ್ತವಾದ ನಿಜವಾದ ಧರ್ಮವನ್ನು ನಾನು ಹೇಳುತ್ತೇನೆ ಕೇಳು. ಸುರಸುಂದರಿ, ಎಲ್ಲರಿಗೂ ಕರ್ಮಗಳ ಫಲ ಉಂಟು. ಸ್ವರ್ಗದಲ್ಲಾಗಲಿ ಪಾತಾಳದಲ್ಲಾಗಲಿ ಬೇರೆ ದ್ವೀಪಗಳಲ್ಲಾಗಲಿ ಕರ್ಮಾಚರಣೆ ಇಲ್ಲ. ಪುಣ್ಯಕ್ಷೇತ್ರವಾದ ಭಾರತದಲ್ಲಿ ಮಾತ್ರವೆ ಶುಭ ಅಶುಭಕರ್ಮಗಳನ್ನು ಮಾಡಬೇಕು. ಬೇರೆ ಕಡೆ ಅವುಗಳ ಫಲ ಉಣಬೇಕು. ಹಿಮಾಲಯದಿಂದ ಸಮುದ್ರದವರೆಗಿನ ಭೂಮಿ ಭಾರತಕ್ಷೇತ್ರ. ಎಲ್ಲ ಕ್ಷೇತ್ರಗಳಿಗಿಂತ ಶ್ರೇಷ್ಠ, ಮುನಿಗಳ ತಪಸ್ಸಿನ ಸ್ಥಳ. ಅಲ್ಲಿ ಜನ್ಮ ತಳೆದ ಮಾನವನು ವಿಷಯಾಸೆ ತೊರೆದು ಹರಿಸೇವೆ ಮಾಡಿ ಆ ಮಹಾ ಪುಣ್ಯದಿಂದ ಸ್ವರ್ಗಕ್ಕೆ ಬರುತ್ತಾನೆ. ಸ್ವರ್ಗದಲ್ಲಿ ಎಲ್ಲ ಸ್ತ್ರೀಯರನ್ನೂ ಕೂಡಿ ಆನಂದಿಸುತ್ತಾನೆ. ಮಾನವ ತನ್ನ ಮಾನವಶರೀರ ತ್ಯಾಗಮಾಡಿಯೆ ಸ್ವರ್ಗಕ್ಕೆ ಬರಬೇಕು.

ಆದರೆ ನಾನು ಮಾನವಶರೀರದಿಂದಲೆ ಬಂದಿದ್ದೇನೆ. ನನ್ನದು ಎಂಥ ಪುಣ್ಯ ಎನ್ನುವುದನ್ನು ನೋಡು. ಅನೇಕ ಜನ್ಮಗಳ ಪುಣ್ಯದಿಂದ ನನಗೆ ಇಷ್ಟವಾದ ಈ ಸ್ವರ್ಗಕ್ಕೆ ನಾನು ಬಂದಿದ್ದೇನೆ. ಪುಣ್ಯದಿಂದಲೆ ನಾನು ನಿನ್ನನ್ನು ಕಂಡೆ. ಈ ಸ್ವರ್ಗ ಕರ್ಮಭೂಮಿಯಲ್ಲ, ಭೋಗಭೂಮಿ. ಎಲ್ಲ ಭೋಗಗಳಲ್ಲಿ ಶ್ರೇಷ್ಠವಾದುದು ಸ್ತ್ರೀಯ ಭೋಗ. ಭೋಗಭೂಮಿಯಲ್ಲಿ ಭೋಗವನ್ನು ತೊರೆಯುವುದು ಪ್ರಶಸ್ತವಲ್ಲ. ನೀನು ರಸಿಕಳು, ಭೋಗಿಗಳಿಗೆ ಭೋಗ್ಯಳು.

ಯಾರಿಗೂ ಸೇರದಿರುವ ಸಂಪತ್ತನ್ನಾಗಲಿ ಭೋಗ್ಯಸುಖವನ್ನಾಗಲಿ ಬಿಟ್ಟುಬಿಡುವವನು ಬುದ್ಧಿ ಇಲ್ಲದವನು. ವಿರೋಧವಿಲ್ಲದಿರುವ ಸುಖವನ್ನು ತ್ಯಜಿಸುವವನು ಪಶುವೆ ಸರಿ. ಅದರಿಂದ ಪ್ರಿಯೆ, ನೀನು ಮನೆಗೆ ನಡೆ. ಏಕಾಂತ ಸ್ಥಳದಲ್ಲಿ ಸುಂದರವಾದ ರತಿಯೋಗ್ಯವಾದ ಹಾಸಿಗೆ ಸಿದ್ಧಪಡಿಸು. ಮನಸ್ಸಿನ ಸಂಶಯವನ್ನು ದೂರಮಾಡು. ನನ್ನೊಡನೆ ರಮಿಸು. ಲಕ್ಷ್ಮೀಯ ಎದೆಯ ಮೇಲೆ ಶೋಭಿಸುವ ಅಮೂಲ್ಯ ರತ್ನಮಾಲೆಯನ್ನು ಬೇಡಿ ತಂದು ನಿನಗೆ ತೊಡಿಸುತ್ತೇನೆ. ಶೇಷನಾಗನ ಹೆಡೆಯಲ್ಲಿರುವ ಮೂಲೋಕದಲ್ಲಿ ದುರ್ಲಭವಾದ ರತ್ನವನ್ನು ತಂದುಕೊಡುತ್ತೇನೆ. ನಾರಾಯಣವ್ರತವನ್ನು ಮಾಡಿ ನಾರಾಯಣನ ಎದೆಯಲ್ಲಿರುವ ಶ್ರೇಷ್ಠವಾದ ಕೌಸ್ತುಭ ರತ್ನವನ್ನು ಬೇಡಿ ತಂದುಕೊಡುತ್ತೇನೆ. ವಿಶ್ವನಾಥವ್ರತವನ್ನು ಮಾಡಿ ಚಂದ್ರಮೌಳಿ ಶಿವನ ತಲೆಯಲ್ಲಿರುವ ಜರಾಮರಣ ವ್ಯಾಧಿ ಪರಿಹಾರಕ, ವಿಶ್ವವಂದ್ಯ, ವಿಶ್ವ ದುರ್ಲಭವಾದ ಅರ್ಧಚಂದ್ರಭೂಷಣವನ್ನು ನಿನಗೆ ತಂದುಕೊಡುತ್ತೇನೆ. ಸೂರ್ಯವ್ರತವನ್ನು ಮಾಡಿ ಮೂಲೋಕದಲ್ಲಿ ದುರ್ಲಭವಾದ ಸ್ಯಮಂತಕ ಮಣಿಯನ್ನು ತಂದುಕೊಡುತ್ತೇನೆ. ಆಮಣಿ ಪ್ರತಿದಿನ ಎಂಟು ಭಾರದ ಸುವರ್ಣವನ್ನು ನೀಡುತ್ತದೆ. ಜರಾಮರಣಗಳನ್ನು ನೀಗುತ್ತದೆ. ಮನ್ಮಥನಲ್ಲಿ ಅಮೂಲ್ಯವಾದ ರತ್ನಪಾತ್ರೆಯೊಂದಿದೆ. ಅದು ಸದಾ ಮಧುಪೂರ್ಣ. ಸೂರ್ಯನಂತೆ ಹೊಳೆಯುತ್ತದೆ. ನಾನಾ ಚಿತ್ರವಿಚಿತ್ರವಾದ ಮನೋಹರವಾದ ಮಂಡಲಾಕಾರದ ಈಶ್ವರ ನಿರ್ಮಾಣ, ಲಕ್ಷಹಸ್ತಪರಿಮಾಣದ್ದು. ಅದನ್ನು ನಿನಗೆ ತಂದು ಕೊಡುತ್ತೇನೆ. ಪದ್ಮೆಯ ಪದ್ಮಾಸನ ಅತ್ಯಂತ ದುರ್ಲಭ. ಪದ್ಮಾಲಯಾವ್ರತವನ್ನು ಮಾಡಿ ಅದನ್ನೂ ನಿನಗೆ ಕೊಡುತ್ತೇನೆ. ಹೀಗೆ ಹೇಳುತ್ತ ನಹುಷ ಶಚಿಗೆ ದಾರಿಯಲ್ಲಿ ಅಡ್ಡವಾಗಿ ನಿಂತು ಪುನಃ ಪುನಃ ಅವಳ ಪಾದಗಳಲ್ಲಿ ಬಿದ್ದ. ಅವನ ಮಾತನ್ನು ಕೇಳಿ ಪುನಃ ಪುನಃ ಹರಿಗುರುಗಳನ್ನು ನೆನೆದು ಒಣಗಿದ ಕಂಠ ಓಷ್ಠ ತಾಲುಗಳಿಂದ ನುಡಿದಳು -

**ಶಚಿ:-** ನೀನೀಗ ಕಾಮಾತುರನಾಗಿ ಮೈಮರೆತು ಕಾರ್ಯ ಅಕಾರ್ಯಗಳ ವಿವೇಕವನ್ನೆ ತೊರೆದು ಬಹಳ ಮಾತುಗಳನ್ನು ಆಡುತ್ತಿರುವೆ. ಕಾಮುಕರೇ ಹೀಗೆ. ಕುಡಿದು ಅಮಲೇರಿದವನೂ ಕಾಮಾತುರನೂ ಬುದ್ಧಿಸ್ಥೈರ್ಯ ಕಳೆದುಕೊಂಡು ಮರಣಕ್ಕೂ ಅಂಜದೆ ಮುಂದುವರಿಯುತ್ತಾನೆ. ಆಗಲಿ, ಆದರೂ ನಾನು ಈಗ ರಜಸ್ವಲೆ. ಮುಟ್ಟಿನ ಮೊದಲನೆ ದಿನ ಇಂದು ನಡೆಯುತ್ತಿದೆ. ರಜಸ್ವಲೆ ಮೊದಲನೆ ದಿನ ಚಂಡಾಲ ಸ್ತ್ರೀಗೆ ಸಮಾನಳು. ಎರಡನೆ ದಿನ ಮ್ಲೇಚ್ಛಸ್ತ್ರೀ ಸಮಾನಳು. ಮೂರನೆ ದಿನ ಅಗಸರ

ಹೆಣ್ಣಿಗೆ ಸಮಾನಳು. ನಾಲ್ಕನೆ ದಿನ ಪತಿಕಾರ್ಯದಲ್ಲಿ ಶುದ್ಧಳೆನಿಸುತ್ತಾಳೆ. ದೇವ ಪಿತೃಕಾರ್ಯದಲ್ಲಿಯೂ ಪರಪುರುಷರ ಕಾರ್ಯಗಳಲ್ಲಿಯೂ ಅವಳು ದುಷ್ಟಶೂದ್ರ ಸ್ತ್ರೀಯಂತೆ ಅಯೋಗ್ಯಳು. ಮೊದಲನೆ ದಿನ ರಜಸ್ವಲೆಯಾದ ಪತ್ನಿಯನ್ನು ಕೂಡುವವನು ಬ್ರಹ್ಮಹತ್ಯೆಯ ಕಾಲಂಶಕ್ಕೆ ಭಾಗಿ ಯಾಗುತ್ತಾನೆ. ಅವನು ದೇವ ಪಿತೃಕಾರ್ಯಗಳಲ್ಲಿ ಅನರ್ಹ, ನಿಂದಾರ್ಹ, ಅಯಶಸ್ಸಿಗೆ ಭಾಗಿಎನಿಸುತ್ತಾನೆ. ಎರಡನೆ ದಿನ ರಜಸ್ವಲೆಯನ್ನು ಕೂಡುವವನು ಪೂರ್ಣ ಗೋಹತ್ಯಾ ಪಾಪವನ್ನು ಹೊಂದುತ್ತಾನೆ. ದೇವಪಿತೃಬ್ರಾಹ್ಮಣಕಾರ್ಯಗಳಲ್ಲಿ ಅವನಿಗೆ ಅಧಿಕಾರವಿಲ್ಲ. ಅಯಶೋಭಾಗಿ ಯಾಗುತ್ತಾನೆ ಎಂದು ಅಂಗಿರಸರು ಹೇಳುತ್ತಾರೆ. ಮೂರನೆ ದಿವಸ ರಜಸ್ವಲಾ ಸಂಸರ್ಗ ಮಾಡುವ ಮೂಢನು ಭ್ರೂಣಹತ್ಯಾ ಪಾಪವನ್ನು ಹೊಂದುತ್ತಾನೆ. ಹಿಂದಿನಂತೆ ಅವನೂ ಸರ್ವಕರ್ಮಗಳಲ್ಲಿ ಅನರ್ಹನಾಗುತ್ತಾನೆ. ನಾಲ್ಕನೆ ದಿನದಲ್ಲಿಯೂ ದುಷ್ಟಶೂದ್ರಸ್ತ್ರೀ ಸಮಾನಳಾದ್ದರಿಂದ ಅವಳ ಸಂಸರ್ಗ ಮಾಡಕೂಡದು. ನೀನು ಬಲಾತ್ಕಾರದಿಂದ ನನ್ನನ್ನು ಕೂಡುವುದೇ ಆದರೆ ಮುಟ್ಟಿನ ಸ್ನಾನವಾದ ಬಳಿಕ ಕೂಡು.

ಶಚಿಯ ಈ ಮಾತುಗಳನ್ನು ಕೇಳಿ ನಹುಷ ನಕ್ಕು ನುಡಿದ.

**ನಹುಷ:-** ದೇವಪತ್ನಿ ಸದಾ ಶುದ್ಧಳು. ಶಯನ ಭೋಜನಗಳಲ್ಲಿ ಅವಳು ಮಾನವನಿಗೆ ಅಶುದ್ಧಳೆನಿಸುವುದಿಲ್ಲ. ರಜಸ್ವಲಾ ಸಂಸರ್ಗ ಕರ್ಮಭೂಮಿಯಾದ ಭಾರತದಲ್ಲಿ ನಿಷಿದ್ಧವೆ ಹೊರತು ಈ ಸ್ವರ್ಗದಲ್ಲಿ ಅದು ಪಾಪಜನಕವಾಗುವುದಿಲ್ಲ. ಕರ್ಮಭೂಮಿಯಲ್ಲಿಯೂ ಪಾಪಕರ್ಮ ಬ್ರಹ್ಮತೇಜಸ್ಸಿನಿಂದ ಜ್ವಲಿಸುವ ವಿಷ್ಣುಭಕ್ತರಿಗೆ ಲೇಪವಾಗದು. ಉರಿವ ಬೆಂಕಿಯಲ್ಲಿ ಒಣಗಿದ ಎಲೆ ಹುಲ್ಲು ಕಡ್ಡಿಗಳಂತೆ ಬ್ರಹ್ಮತೇಜಸ್ಸಿನಲ್ಲಿ ಪಾಪಕರ್ಮ ಉರಿದು ಹೋಗುವುವು. ಅಗ್ನಿ ಸೂರ್ಯ ಬ್ರಾಹ್ಮಣರಿಗಿಂತ ವಿಷ್ಣುಭಕ್ತ ಹೆಚ್ಚು ತೇಜಸ್ವಿ. ಅವನಿಗೆ ವಿಷ್ಣುಚಕ್ರದ ರಕ್ಷಣೆ ಇರುವುದರಿಂದ ಆತ ಅಂಕುಶವಿಲ್ಲದ ಮದ್ದಾನೆಯಂತೆ ಸಂಚರಿಸಬಲ್ಲ. ಅದರಿಂದ ವಿಷ್ಣುಭಕ್ತರಿಗೆ ತಮ್ಮ ಕರ್ಮದಲ್ಲಿ ವಿಚಾರಬೇಡ. ಕರ್ಮದ ಫಲಭೋಗವೂ ಅವರಿಗೆ ಉಂಟಾಗುವುದಿಲ್ಲ. ಇದು ಸಾಮವೇದದ ಕೌಥುಮಶಾಖೆಯಲ್ಲಿ ಇದೆ. ಬೇಕಾದರೆ ಬೃಹಸ್ಪತಿಯನ್ನೆ ಕೇಳಿ ನೋಡು. ನಾವು ಚಂದ್ರವಂಶದ ರಾಜರೆಂಬುದು ಎಲ್ಲರಿಗೂ ಗೊತ್ತು. ಚಂದ್ರವಂಶದ ರಾಜರು ಹರಿಯನ್ನು ಬಿಟ್ಟು ಅನ್ಯ ದೇವತೆಗಳನ್ನು ಆರಾಧಿಸುವುದಿಲ್ಲ. ಉತ್ತಮ ವಂಶದಲ್ಲಿ ಹುಟ್ಟಿದ ಬ್ರಾಹ್ಮಣನಾಗಲಿ ಕ್ಷತ್ರಿಯನಾಗಲಿ ವಿಷ್ಣುಮಂತ್ರವನ್ನು ಉಪಾಸನೆ ಮಾಡದಿದ್ದರೆ ಅವನು ದೇವಮಾಯೆಯಿಂದ ವಂಚಿತನಾದನೆನ್ನಬೇಕು. ಅದರಿಂದ ವಿಷ್ಣುಮಂತ್ರೋಪಾಸಕನಾದ ನನಗೆ ಯಮನೂ ಶಾಸನ ಮಾಡಲಾರ, ಉಳಿದ ದೇವತೆಗಳೆಲ್ಲಿ? ಮಂತ್ರಗಳೆಲ್ಲಿ? ಬ್ರಹ್ಮ ವಿಷ್ಣು ಶಿವರನ್ನುಳಿದು ಇನ್ನೆಲ್ಲ ದೇವತೆಗಳ ಮೇಲೂ ಶಾಸನ ಮಾಡಬಲ್ಲವನು ನಾನು. ಅದರಿಂದ ಬೇಗನೆ ಮನೆಗೆ ಹೋಗು, ರತಿ ಶಯ್ಯೆಯನ್ನು ಸಿದ್ಧಗೊಳಿಸು, ನಾನು ಬೇಗನೆ ನಿನ್ನ ಮನೆಗೆ ಬಂದುಬಿಡುತ್ತೇನೆ. ರಜಸ್ವಲಾ ಸಂಸರ್ಗ ಪಾಪವೇನಿದ್ದರೂ ಅದು ನನಗೇ ತಾನೆ? ನಿನಗೆ ಅದರಿಂದೇನು?

ಹೀಗೆ ಹೇಳಿ ನಹುಷ ಪ್ರಸನ್ನವದನನಾಗಿ ರತ್ನವಿಮಾನವನ್ನೇರಿ ನಂದನವನಕ್ಕೆ ತೆರಳಿದ. ಶಚಿ ತನ್ನ ಮನೆಗೆ ಹೋಗದೆ ಬೃಹಸ್ಪತಿಯ ಮನೆಗೆ ನಡೆದಳು. ಅಲ್ಲಿ ದರ್ಭಾಸನದಲ್ಲಿ ಕುಳಿತ ಬೃಹಸ್ಪತಿಯನ್ನು ಕಂಡಳು. ಆತ ಬ್ರಹ್ಮವರ್ಚಸ್ಸಿನಿಂದ ಜ್ವಲಿಸುತ್ತಿದ್ದ. ಕೈಯಲ್ಲಿ ಜಪಮಾಲೆ ಹಿಡಿದು ಸ್ವತಂತ್ರ ಸ್ವೇಚ್ಛಾಮಯ ಪರಮಾನಂದ ಪರಬ್ರಹ್ಮ ಪರಮಾತ್ಮನಾದ ಶ್ರೀಕೃಷ್ಣನನ್ನು ಧ್ಯಾನಿಸುತ್ತ ಜಪಿಸುತ್ತಿದ್ದ. ಬಳಿಯಲ್ಲಿ ತಾರೆ ಅವನನ್ನು ಸೇವಿಸುತ್ತಿದ್ದಳು. ಆನಂದಬಾಷ್ಪದಿಂದ ಕೂಡಿದ ಬೃಹಸ್ಪತಿಯನ್ನು ಕಂಡು ಶಚಿ ಅವನಿಗೆ ತಲೆಬಾಗಿ ನಮಿಸಿದಳು. ಭಕ್ತಿಸಾಗರದಲ್ಲಿ ಮುಳುಗಿ ಕಣ್ಣೀರು ಕರೆದಳು. ಶೋಕಸಾಗರದಲ್ಲಿ ಮುಳುಗಿ ನೊಂದ ಹೃದಯದಿಂದ ಭಯದಿಂದ ಕೃಪಾನಿಧಿಯಾದ ಬ್ರಾಹ್ಮಣೋತ್ತಮನನ್ನು ಸ್ತುತಿಸಿದಳು.

**ಶಚಿ:-** ಮಹಾತ್ಮ, ನನ್ನನ್ನು ಕಾಪಾಡು, ಕಾಪಾಡು. ನಾ ನಿನ್ನ ಮೊರೆ ಹೊಕ್ಕಿದ್ದೇನೆ, ಶೋಕಸಾಗರದಲ್ಲಿ ಮುಳುಗಿರುವ ನನ್ನನ್ನು ಉದ್ಧರಿಸು. ಶಕ್ತಿ ಇರಲಿ ಇಲ್ಲದಿರಲಿ ತನ್ನ ಶಿಷ್ಯನ ಹೆಂಡತಿ ಮಕ್ಕಳನ್ನು ಗುರು ಕಾಪಾಡಲೆ ಬೇಕು. ನಿನ್ನ ಶಿಷ್ಯನನ್ನು ರಾಜ್ಯಚ್ಯುತನನ್ನಾಗಿ ಮಾಡಿರುವಿ. ಅವನು ದೂರಕ್ಕೆ ಹೊರಟು ಹೋಗಿದ್ದಾನೆ. ಅವನ ಅಪರಾಧಕ್ಕೆ ಶಾಂತಿಯಾಯಿತು. ಈಗ ಅನುಗ್ರಹ ಮಾಡು. ನಾನು ಈಗ ಅನಾಥೆ, ಸರ್ವಶೂನ್ಯೆ. ಅಮರಾವತಿ ಸಂಪತ್ತನ್ನು ಕಳೆದುಕೊಂಡು ಶೂನ್ಯವಾಗಿದೆ. ನನ್ನ ಆಶ್ರಮವನ್ನು ನೋಡು, ಕೃಪಾನಿಧಿಯಾದ ನೀನು ಕಾಪಾಡಬೇಕು. ಎಲ್ಲ ಗುರುಹಿರಿಯರಿಗೂ ಹೆಚ್ಚಿನವನು ಜನ್ಮದಾತನಾದ ಪಿತ. ಪಿತನಿಗಿಂತ ನೂರುಪಾಲು ಮಾತೆ ಮಿಗಿಲು. ವಿದ್ಯೆ ಮಂತ್ರ ಜ್ಞಾನ ಹರಿಭಕ್ತಿಗಳನ್ನು ನೀಡುವ ಗುರು ತಾಯಿಗಿಂತ ನೂರು ಪಾಲು ಹೆಚ್ಚು ಪೂಜ್ಯ ವಂದ್ಯ ಮತ್ತು ಸೇವ್ಯನೆನಿಸುತ್ತಾನೆ.

**ಮಂತ್ರಾದ್ಯುದ್ಗಿರಣೇನೈವ ಗುರುರಿತ್ಯುಚ್ಯತೇ ಬುಧೈಃ ।**
**ಅನ್ಯೋ ವಂದ್ಯೋ ಗುರುರಯಮನ್ಯಶ್ಚಾರೋ ಪಿತೋ ಗುರುಃ ॥**

ಮಂತ್ರಾದಿಗಳನ್ನು ಉಪದೇಶಿಸುವುದರಿಂದಲೆ ಗುರು ಗುರುವೆನಿಸುತ್ತಾನೆ. ವಂದ್ಯನಾದ ಈಗುರುವೆ ವಿಲಕ್ಷಣ. ಗುರುಸ್ಥಾನದಲ್ಲಿರಿಸಲ್ಪಟ್ಟ ಬೇರೆ ಗುರುವೆ ವಿಲಕ್ಷಣ.

**ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।**
**ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥**

ಅಜ್ಞಾನವೆಂಬ ತಿಮಿರರೋಗದಿಂದ ಅಂಧನಾದ ಶಿಷ್ಯನಿಗೆ ಜ್ಞಾನಾಂಜನ ಶಲಾಕೆಯಿಂದ ಕಣ್ಣು ತೆರೆಸುವ ಶ್ರೀಗುರುವಿಗೆ ನಮೋ ಎನ್ನುತ್ತೇನೆ. ಗುರುದೀಕ್ಷೆ ಇಲ್ಲದ ಮೂರ್ಖನಿಗೆ ಪ್ರಾಯಶ್ಚಿತ್ತವೆ ಇಲ್ಲ. ಅವನು ಎಲ್ಲ ಕರ್ಮಗಳಲ್ಲಿ ಅನಧಿಕಾರಿ. ಪಶುತುಲ್ಯನಾದ ಆತ ನರಕಭಾಗಿಯಾಗುತ್ತಾನೆ. ಅವನನ್ನು ಅನ್ನದಾತ ಜನ್ಮದಾತ ಮಾತೆ ಮತ್ತು ಬೇರೆ ಗುರುಹಿರಿಯರು ಯಾರೂ ಘೋರ ಸಂಸಾರಸಾಗರದಿಂದ ಪಾರು ಮಾಡಲಾರರು. ವಿದ್ಯೆ ಮಂತ್ರ ತತ್ವಜ್ಞಾನ ನೀಡುವ ಗುರು ಒಬ್ಬನೆ ಪಾರುಮಾಡಬಲ್ಲ. ಅವನೇ ಶಿಷ್ಯನನ್ನು ಉದ್ಧರಿಸಬಲ್ಲ. ಶಿಷ್ಯನಿಗೆ ದೇವರಿಗಿಂತ ಗುರುವೆ ಮಿಗಿಲು.

**ಗುರುರ್ವಿಷ್ಣುರ್ಗುರುರ್ಬ್ರಹ್ಮಾ ಗುರುರ್ದೇವೋ ಮಹೇಶ್ವರಃ ।**
**ಗುರುರ್ಧರ್ಮೋ ಗುರುಃ ಶೇಷಃ ಸರ್ವಾತ್ಮಾ ನಿರ್ಗುಣೋ ಗುರುಃ॥**
**ಸರ್ವತೀರ್ಥಾಶ್ರಯಶ್ಚೈವ ಸರ್ವದೇವಾಶ್ರಯೋ ಗುರುಃ ।**
**ಸರ್ವವೇದಸ್ವರೂಪಶ್ಚ ಗುರುರೂಪೀ ಹರಿಃ ಸ್ವಯಂ ॥**

ಶಿಷ್ಯನ ಪಾಲಿಗೆ ಗುರುವೇ ವಿಷ್ಣು ಬ್ರಹ್ಮ ಮಹೇಶ್ವರ ಧರ್ಮ ಶೇಷ ನಿರ್ಗುಣನಾದ ಸರ್ವಾತ್ಮ, ಸರ್ವತೀರ್ಥ, ಸರ್ವದೇವ, ಸರ್ವವೇದ ಎಲ್ಲವೂ ಆಗಿರುತ್ತಾನೆ. ಸ್ವಯಂ ಹರಿಯೂ ಗುರುವೆ ಆಗಿರುತ್ತಾನೆ. ಅಂದರೆ ಸಾಧಕನಿಗೆ ವಿಷ್ಣು ಬ್ರಹ್ಮ ಮಹೇಶ್ವರ ಧರ್ಮ ಶೇಷ ನಿರ್ಗುಣಪರಮಾತ್ಮ ಸರ್ವತೀರ್ಥ ಸರ್ವದೇವ ಸರ್ವವೇದ ಸ್ವಯಂ ಶ್ರೀಹರಿ ಎಲ್ಲರೂ ಗುರುಗಳೆನಿಸುತ್ತಾರೆ.

**ಅಭೀಷ್ಟದೇವೇ ರುಷ್ಟೇ ಚ ಗುರುಃ ಶಕ್ತೋ ಹಿ ರಕ್ಷಿತುಂ ।**
**ಗುರೌ ರುಷ್ಟೇಽಭೀಷ್ಟದೇವೋ ನ ಹಿ ಶಕ್ತಶ್ಚ ರಕ್ಷಿತುಂ ॥**

ಇಷ್ಟದೇವ ಕುಪಿತನಾದರೂ ಗುರು ಕಾಪಾಡಬಲ್ಲ. ಗುರು ಕುಪಿತನಾದರೆ ಇಷ್ಟದೇವ ಕಾಪಾಡಲಾರ. ಎಲ್ಲ ಗ್ರಹಗಳೂ ಎಲ್ಲ ದೇವಬ್ರಾಹ್ಮಣರೂ ಯಾರಿಗೆ ಕುಪಿತರಾಗುವರೋ ಅವನಿಗೆ ನೀನೆ ಮೊದಲಿಗೆ ಕುಪಿತನಾಗಿರುತ್ತಿ.

ಶಿಷ್ಯನಿಗೆ ಗುರುವಿಗಿಂತ ತನ್ನ ಆತ್ಮವೂ ಹೆಚ್ಚಿನದಲ್ಲ, ಹೆಂಡತಿ ಮಕ್ಕಳು ಪ್ರಿಯ ಬಂಧುಗಳೂ ಹೆಚ್ಚಿನವರಲ್ಲ. ಗುರುವಿಗಿಂತ ಹೆಚ್ಚಿನ ಹೆಂಡತಿ ಮಕ್ಕಳು ಪ್ರಿಯ ಬಂಧುಗಳೂ ಯಾರಿಲ್ಲ. ಗುರುವನ್ನು ಬಿಟ್ಟು ಧರ್ಮವಿಲ್ಲ ತಪಸ್ಸಿಲ್ಲ. ಸತ್ಯವಿಲ್ಲ ಪುಣ್ಯವಿಲ್ಲ. ಗುರುವನ್ನು ಮೀರಿಸುವ ಶಾಸಕನಿಲ್ಲ. ಗುರುವಿಗಿಂತ ಹೆಚ್ಚಿನ ಬಂಧುವಿಲ್ಲ. ಶಿಷ್ಯನಿಗೆ ಗುರುವೆ ಸದಾ ದೇವನೂ ರಾಜನೂ ಶಾಸಕನೂ ಎಲ್ಲವೂ ಆಗಿರುತ್ತಾನೆ. ಶಾಸಕ ಅನ್ನಕೊಡಲು ಶಕ್ತನಾಗಿರುವಷ್ಟು ಕಾಲ ಶಾಸಕನಾಗಿರುತ್ತಾನೆ. ಆದರೆ ಗುರುವು ಶಿಷ್ಯನಿಗೆ ಜನ್ಮ ಜನ್ಮಗಳಲ್ಲಿಯೂ ಶಾಸಕನಾಗಿರುತ್ತಾನೆ. ಮಂತ್ರ ವಿದ್ಯೆ ಗುರು ದೇವತೆಗಳು ಜನ್ಮಜನ್ಮಾಂತರಕ್ಕೂ ನಮ್ಮ ಜೊತೆಗೆ ಇರುವವರು. ಪಿತನು ಯಾವ ಜನ್ಮದಲ್ಲಿ ಜನ್ಮ ನೀಡಿರುವನೋ ಆ ಜನ್ಮದಲ್ಲಿ ವಂದ್ಯ. ಹಾಗೇ ಅನ್ಯ ಗುರುಗಳೂ ತಾಯಿಯೂ ಆಯಾ ಜನ್ಮಕ್ಕೆ ಸಂಬಂಧಿಸಿರುತ್ತಾರೆ. ಮಂತ್ರೋಪದೇಶಗೈದ ಗುರುವು ಮಾತ್ರ ಪ್ರತಿ ಜನ್ಮಕ್ಕೂ ಸಂಬಂಧಿಸಿರುತ್ತಾನೆ. ಆದರಿಂದ ಅವನು ಎಲ್ಲರಿಗಿಂತ ಮಿಗಿಲು. ಬೃಹಸ್ಪತಿಯೆ, ನೀನು ಬ್ರಾಹ್ಮಣರಲ್ಲೆಲ್ಲ ಉತ್ತಮ, ತಪಸ್ವಿಗಳಲ್ಲೆಲ್ಲ ಉತ್ತಮ, ಬಹು ಬ್ರಹ್ಮಜ್ಞಾನಶಾಲಿ, ಧರ್ಮಿಷ್ಠರಲ್ಲೆಲ್ಲ ಶ್ರೇಷ್ಠ, ನೀನು ನನ್ನ ಬಗ್ಗೆ ಪ್ರಸನ್ನನಾಗು. ಇಂದ್ರನ ಬಗ್ಗೆ ಪ್ರಸನ್ನನಾಗು. ನೀನು ಪ್ರಸನ್ನನಾದರೆ ಎಲ್ಲ ಗ್ರಹ ದೇವತೆಗಳೂ ಪ್ರಸನ್ನರಾಗುವರು.'' ಹೀಗೆ ಹೇಳಿ ಶಚಿ ಗಟ್ಟಿಯಾಗಿ ಅತ್ತಳು. ಅದನ್ನು ನೋಡಿ ತಾರೆಯೂ ಅತ್ತಳು. ಬೃಹಸ್ಪತಿಯ ಕಾಲಿಗೆ ಬಿದ್ದು ಇಂದ್ರನ ಅಪರಾಧವನ್ನು ಮನ್ನಿಸು ಎನ್ನುತ್ತ ಕಣ್ಣೀರಿಟ್ಟಳು. ಆಗ ಪ್ರಸನ್ನನಾದ ಗುರು ನುಡಿದ.

**ಗುರು:-** ತಾರೆ, ಎದ್ದೇಳು. ಶಚಿಗೆ ಎಲ್ಲವೂ ಶುಭವಾಗುವುದು. ನನ್ನ ಆಶೀರ್ವಾದದಿಂದ ಅವಳು ಬೇಗನೆ ಪತಿಯನ್ನು ಹೊಂದುವಳು. ಹೀಗೆ ಹೇಳಿ ಗುರು

ಸುಮ್ಮನಾದ. ತಾರೆ ಪುನಃ ಗುರುವನ್ನು ನಮಿಸಿ ಅಳುತ್ತ ಶಚಿಯನ್ನು ಅಪ್ಪಿಕೊಂಡು ನಾನಾ ಬಗೆಯ ಅಧ್ಯಾತ್ಮ ಉಪದೇಶಗಳಿಂದ ಸಂತೈಸಿದಳು.

ಶಚಿಯು ಮಾಡಿದ ಗುರುಸ್ತೋತ್ರವನ್ನು ಪೂಜಾಕಾಲದಲ್ಲಿ ಪಠಿಸುವವನಿಗೆ ಅಭೀಷ್ಟದೇವತೆ ಜನ್ಮಜನ್ಮಗಳಲ್ಲಿಯೂ ಪ್ರಸನ್ನನಾಗಿರುತ್ತಾನೆ. ಗ್ರಹಗಳೂ ದೇವತೆಗಳೂ ಬ್ರಾಹ್ಮಣರೂ ಪ್ರಸನ್ನರಾಗಿರುತ್ತಾರೆ. ರಾಜರುಗಳೂ ಬಂಧುಗಳೂ ಪ್ರೀತಿ ತೋರುತ್ತಾರೆ. ಗುರುಭಕ್ತಿ ವಿಷ್ಣುಭಕ್ತಿಗಳನ್ನೂ ಎಲ್ಲ ಅಭೀಷ್ಟಗಳನ್ನೂ ಅವನು ಹೊಂದುತ್ತಾನೆ. ಸದಾ ಆತ ಸುಖಿಯಾಗುತ್ತಾನೆ, ಎಂದೂ ದುಃಖಹೊಂದುವುದಿಲ್ಲ. ಮಕ್ಕಳಿಲ್ಲದವ ಮಕ್ಕಳನ್ನೂ ಪತ್ನಿ ಇಲ್ಲದವ ಪತ್ನಿಯನ್ನೂ ಪಡೆಯುವನು. ರೋಗಾರ್ತನು ರೋಗವನ್ನೂ ಬದ್ಧನು ಬಂಧನವನ್ನೂ ಕಳೆದುಕೊಳ್ಳುವನು. ಕೀರ್ತಿ ಇಲ್ಲದವ ಕೀರ್ತಿಯನ್ನೂ ಮೂರ್ಖ ವಿದ್ಯೆಯನ್ನೂ ಸಂಪಾದಿಸುವನು. ಅವನಿಗೆ ಬಂಧು ವಿಯೋಗವಾಗದು. ಅವನ ಪುಣ್ಯ ಕೀರ್ತಿಗಳು ಹೆಚ್ಚುವುವು. ಪುತ್ರ ಪೌತ್ರ ಧನ ಯುಕ್ತವಾದ ಪರಮ ಐಶ್ವರ್ಯವನ್ನು ಹೊಂದಿ ಇಹದಲ್ಲಿ ಸರ್ವಸುಖಗಳನ್ನು ಅನುಭವಿಸಿ ಕೊನೆಯಲ್ಲಿ ಹರಿಪದವನ್ನು ಹೊಂದುವನು. ಅವನಿಗೆ ಪುನರ್ಜನ್ಮವಿಲ್ಲ. ಹರಿದಾಸ್ಯವೆ ಲಭಿಸುವುದು. ವಿಷ್ಣುಭಕ್ತಿಯ ಅಮೃತಸಮುದ್ರದಲ್ಲಿ ಅವನು ಮುಳುಗಿರುತ್ತಾನೆ. ವಿಷ್ಣುಭಕ್ತಿರಸದ ಅಮೃತವನ್ನು ಸದಾ ಪಾನ ಮಾಡುತ್ತಾನೆ. ಜನನ ಮರಣ ಜರೆ ವ್ಯಾಧಿ ಶೋಕತಾಪಗಳನ್ನು ನೀಗಿಕೊಳ್ಳುತ್ತಾನೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಮಹೇಂದ್ರ ದರ್ಪಭಂಗಪ್ರಕರಣದಲ್ಲಿ ಶಚೀಶೋಕಾಪನೋದನದಲ್ಲಿ ಶಚೀಕೃತಗುರುಸ್ತೋತ್ರಕಥನವೆಂಬ ಐವತ್ತೊಂಬತ್ತನೆಯ ಅಧ್ಯಾಯ ಮುಗಿಯಿತು*

—o—

**ನಾರಾಯಣ:-** ಶಚಿಯು ಮಾಡಿದ ಸ್ತೋತ್ರವನ್ನು ಕೇಳಿ ಸಂತುಷ್ಟನಾದ ಬೃಹಸ್ಪತಿ ಶಾಂತವಾಗಿ ಮಧುರವಾಗಿ ನುಡಿದ -

**ಬೃಹಸ್ಪತಿ:-** ಮಗಳೆ, ಅಂಜಬೇಡ. ನಾನಿರುವಾಗ ನಿನಗೆ ಏತರ ಭಯ? ನನಗೆ ಕಚನ ಪತ್ನಿ ಹೇಗೋ ಹಾಗೇ ನೀನು. ಪುತ್ರನು ಹೇಗೋ ಹಾಗೇ ಶಿಷ್ಯ. ತರ್ಪಣ ಪಿಂಡದಾನ ಪಾಲನ ಪೋಷಣಗಳಲ್ಲಿ ಅವರಿಬ್ಬರಲ್ಲಿ ಭೇದವಿಲ್ಲ. ಪುತ್ರನು ಹೇಗೆ ಚಿತೆಗೆ ಅಗ್ನಿಸ್ಪರ್ಶ ಮಾಡುವನೋ ಹಾಗೇ ಶಿಷ್ಯನೂ ಕೂಡ, ಹೀಗೆ ಬ್ರಹ್ಮನು ಕಣ್ವಶಾಖೆಯಲ್ಲಿ ಹೇಳಿರುವನು.

ತಂದೆ ತಾಯಿ ಗುರು ಪತ್ನಿ ಶಿಶು ಅನಾಥರಾದ ಬಂಧುಗಳು ಇವರೆಲ್ಲರೂ ಮಾನವನಿಗೆ ಸದಾ ರಕ್ಷಣೆಗೆ ಅರ್ಹರೆಂದು ಬ್ರಹ್ಮ ಹೇಳಿದ್ದಾನೆ. ಇವರನ್ನು ರಕ್ಷಿಸದಿರುವವನು, ಪೋಷಿಸದಿರುವವನು ಬದುಕಿರುವಷ್ಟೂ ಕಾಲ ಸೂತಕ ಉಳ್ಳವನು, ದೇವಪಿತೃಕಾರ್ಯಗಳಿಗೆ ಅನರ್ಹನೆನಿಸುವನು ಎಂದು ಮಹೇಶ್ವರ ಹೇಳಿದ್ದಾನೆ. ತಾಯಿ ತಂದೆ ಗುರುಗಳನ್ನು ಸಾಮಾನ್ಯ ಮಾನವರೆಂದು ಕಾಣುವವನಿಗೆ ಎಲ್ಲೆಡೆ ಅಪಯಶಸ್ಸು, ಪದೇ ಪದೇ ವಿಘ್ನಗಳು. ಐಶ್ವರ್ಯಮದದಿಂದ ತನ್ನ ಗುರುವಿಗೆ ಅಪಮಾನ ಮಾಡುವವನು ಬೇಗನೆ ಸರ್ವನಾಶ ಹೊಂದುವನು. ಸಭೆಯ ನಡುವೆ ನನ್ನನ್ನು ಕಂಡೂ ಇಂದ್ರ ಎದ್ದುನಿಂತು ಗೌರವಿಸಲಿಲ್ಲ. ಅದರ ಫಲವನ್ನು ಕೂಡಲೆ ಸ್ವತಃ ಅನುಭವಿಸುತ್ತಿದ್ದಾನೆ, ನೋಡು. ನಾನು ಅವನ ಅಪರಾಧಕ್ಕೆ ಮುಕ್ತಿ ನೀಡಿ ನಿನ್ನನ್ನು ಕಾಪಾಡುತ್ತೇನೆ. ಶಿಕ್ಷೆ ರಕ್ಷೆಗಳೆರಡನ್ನೂ ಮಾಡಬಲ್ಲವನೆ ಗುರುವೆನಿಸುತ್ತಾನೆ. ಅಂತರಂಗದಲ್ಲಿ ಶುದ್ಧಳಾದ ಸ್ತ್ರೀಯ ಸತೀತ್ವವನ್ನು ಕಾಣಲಾಗದವನು ಮನಸ್ಸಿನಲ್ಲಿ ವಿಕಾರ ಹೊಂದುತ್ತಾನೆ, ಪುಣ್ಯವನ್ನು ಕಳೆದುಕೊಳ್ಳುತ್ತಾನೆ. ಮುಂದೆ ನಿನ್ನ ಪ್ರಭಾವ ಪಾರ್ವತಿಗೆ ಸಮವೆನಿಸುತ್ತದೆ. ನಿನ್ನ ಪ್ರತಿಷ್ಠೆ ಯಶಸ್ಸು ಲಕ್ಷ್ಮೀಗೆ ಸಮಾನವಾಗುತ್ತದೆ. ನಿನ್ನ ಪತಿಸೌಭಾಗ್ಯ ಪತಿಪ್ರೇಮಗಳು ರಾಧೆಗೆ ಸಮವೆನಿಸುತ್ತವೆ. ರೋಹಿಣಿಯಂತೆ ಎಲ್ಲರಿಗೂ ಪ್ರಿಯಳೆನಿಸುವಿ. ಭಾರತಿಯಂತೆ ಪೂಜ್ಯಳೆನಿಸುವಿ. ಸಾವಿತ್ರಿಯಂತೆ ಅನುಪಮಳಾಗಿ ಸದಾ ಶುದ್ಧಳಾಗಿರುವಿ.

ಅಷ್ಟರಲ್ಲಿ ನಹುಷನ ದೂತನೊಬ್ಬ ಬಂದು ಭಯದಿಂದ ಬೃಹಸ್ಪತಿಯ ಮುಂದೆ ಶಚಿಗೆ ಹೇಳಿದ -

**ದೂತ:-** ದೇವಿ ಎದ್ದೇಳು, ಬೇಗನೆ ನಹುಷನ ಬಳಿಗೆ ಹೋಗು. ರಮ್ಯವಾದ ನಂದನವನದಲ್ಲಿ ಏಕಾಂತದಲ್ಲಿ ಅವನೊಡನೆ ವಿಹಾರ ಮಾಡು.

ದೂತನ ಮಾತನ್ನು ಕೇಳಿ ಬೃಹಸ್ಪತಿ ಕೋಪದಿಂದ ನಡುಗಿದ. ಅವನ ಕಣ್ಣುಗಳು ಕೆಂಪಾದುವು. ದೂತನಿಗೆ ಹೇಳಿದ -

**ಬೃಹಸ್ಪತಿ:-** ದೂತ, ಹೋಗು, ನಹುಷನಿಗೆ ಹೇಳು, 'ನೀನು ಶಚಿಯನ್ನು ಕೂಡಲು ಬಯಸುವಿಯಾದರೆ ಅಪೂರ್ವವಾದ ವಾಹನವೇರಿ ರಾತ್ರಿಕಾಲದಲ್ಲಿ ಬರಬೇಕು. ನಿನ್ನ ಮೇನೆಯನ್ನು ಸಪ್ತರ್ಷಿಗಳ ಹೆಗಲ ಮೇಲೆ ಹೊರಿಸಿಕೊಂಡು

ಬರಬೇಕು' ಎಂದು. ಬೃಹಸ್ಪತಿಯ ಮಾತನ್ನು ಕೇಳಿ ದೂತ ಹಾಗೇ ನಹುಷನ ಬಳಿಯಲ್ಲಿ ನುಡಿದ. ದೂತನ ಮಾತನ್ನು ಕೇಳಿ ನಹುಷ ನಕ್ಕು ನುಡಿದ. 'ಹೋಗು, ಹೋಗು, ಬೇಗನೆ ಸಪ್ತರ್ಷಿಗಳನ್ನು ಕರೆದು ತಾ. ಅವರೊಡನೆ ಸೇರಿ ನಾನು ಉಪಾಯ ಹೂಡುವೆನು.' ರಾಜನ ಮಾತನ್ನು ಕೇಳಿ ದೂತ ಸಪ್ತರ್ಷಿಗಳ ಬಳಿಗೆ ಹೋಗಿ ಎಲ್ಲವನ್ನೂ ತಿಳಿಸಿದ. ದೂತನ ಮಾತನ್ನು ಕೇಳಿ ಸಪ್ತರ್ಷಿಗಳು ರಾಜನ ಬಳಿಗೆ ಬಂದರು. ಅವರನ್ನು ಆದರದಿಂದ ನಮಿಸಿ ನುಡಿದ, ನಹುಷ

**ನಹುಷ:-** ನೀವೆಲ್ಲರೂ ಬ್ರಹ್ಮಪುತ್ರರು, ಬ್ರಹ್ಮತೇಜಸ್ಸಿನಿಂದ ಜ್ವಲಿಸುವವರು. ಬ್ರಹ್ಮನಿಗೆ ಸಮಾನರು. ಸದಾ ಭಕ್ತವತ್ಸಲರು. ನಾರಾಯಣ ಭಕ್ತರು. ಶುದ್ಧ ಸತ್ವ ಸ್ವರೂಪರು. ಮೋಹ ಮತ್ಸರ ದರ್ಪ ಅಹಂಕಾರವರ್ಜಿತರು. ತೇಜಸ್ಸಿನಲ್ಲಿ ಯಶಸ್ಸಿನಲ್ಲಿ ಕೃಪೆಯಲ್ಲಿ ಪ್ರೇಮದಲ್ಲಿ ವರದಾನದಲ್ಲಿ ಎಲ್ಲರೂ ನಾರಾಯಣನಿಗೆ ಸಮರು.

ಹೀಗೆ ಹೇಳಿ ನಹುಷ ನಮಿಸಿ ಸ್ತೋತ್ರ ಮಾಡಿ ಕಣ್ಣೀರುಗರೆದ. ಮುನಿಗಳು ಪರಹಿತೈಷಿಗಳು. ಕಾತರನಾದ ರಾಜನಿಗೆ ಹೇಳಿದರು-

**ಋಷಿಗಳು:-** ವತ್ಸ, ಬೇಕಾದ ವರವನ್ನು ಕೇಳು, ಎಲ್ಲವನ್ನೂ ನಾವು ಕೊಡಬಲ್ಲೆವು. ನಮಗೆ ಅಸಾಧ್ಯವೇನೂ ಇಲ್ಲ. ಇಂದ್ರಪದವಿ, ಮನುಪದವಿ, ಚಿರಂಜೀವಿತ್ವ, ಸಪ್ತದ್ವೀಪಗಳ ಒಡೆತನಗಳನ್ನಾಗಲಿ ಸರ್ವಸಿದ್ಧಿ ಸರ್ವೈಶ್ವರ್ಯಗಳನ್ನಾಗಲಿ, ತಪಸ್ಸಿನಿಂದಲೂ ಲಭಿಸದ ಮುಕ್ತಿ, ಹರಿಭಕ್ತಿಗಳನ್ನಾಗಲಿ ನಾವು ನಿನಗೆ ಕೊಡಬಲ್ಲೆವು. ನಿನ್ನ ಅಭೀಷ್ಟವೇನು ಹೇಳು. ಎಲ್ಲವನ್ನೂ ನೀಡಿ ನಾವು ತಪಸ್ಸಿಗೆ ತೆರಳುತ್ತೇವೆ. ಏಕೆಂದರೆ ನಮಗೆ ಕೃಷ್ಣನ ಆರಾಧನೆ ಮಾಡದ ಒಂದು ಕ್ಷಣವೂ ಲಕ್ಷ ಯುಗಗಳಿಗೆ ಸಮಾನ. ಕೃಷ್ಣಧ್ಯಾನಮಾಡದ ಸೇವೆಮಾಡದ ದಿನ ದುರ್ದಿನವೆನಿಸುವುದು. ಕೃಷ್ಣಸೇವೆಯನ್ನು ಬಿಟ್ಟು ಬೇರೆ ವಿಷಯಭೋಗವನ್ನು ಬಯಸುವವನು ಅಮೃತವನ್ನು ಬಿಟ್ಟು ವಿಷಉಂಡಂತೆ, ನಾಶವನ್ನೆ ಹೊಂದುತ್ತಾನೆ. ಬ್ರಹ್ಮ ಶಿವ ಧರ್ಮ ವಿಷ್ಣು ಮಹಾವಿರಾಟ್ ಗಣೇಶ ಸೂರ್ಯ ಶೇಷ ಸನಕಾದಿಗಳೆಲ್ಲರೂ ಆ ಕೃಷ್ಣನ ಪಾದಕಮಲವನ್ನೆ ಹಗಲು ರಾತ್ರಿ ಧ್ಯಾನಿಸುವವರೇ. ಆ ಧ್ಯಾನ ಜನನ ಮರಣ ಜರೆ ವ್ಯಾಧಿಗಳಿಗೆ ನಾಶಕ. ಆದರಿಂದ ಧ್ಯಾನದಲ್ಲಿ ನಾವು ನಿರತರಾಗಿರುತ್ತೇವೆ. ಋಷಿಗಳ ಮಾತನ್ನು ಕೇಳಿ ನಹುಷ ಲಜ್ಜಿತನಾದ. ಆದರೂ ಮಾಯಾ ಮೋಹಿತನಾಗಿ ಮುಖ ತಗ್ಗಿಸಿ ನುಡಿದ.

**ನಹುಷ:-** ತಾವು ಭಕ್ತವತ್ಸಲರು. ಭಕ್ತರಿಗೆ ಸರ್ವಾಭೀಷ್ಟ ಕೊಡಲು ಶಕ್ತರು. ನನಗೆ ಈಗ ಶಚೀದೇವಿ ಅಭೀಷ್ಟಳು. ಅವಳನ್ನು ನನಗೆ ದೊರಕಿಸಿ ಕೊಡಿ. ಸಪ್ತರ್ಷಿಗಳು ಹೊರುವ ಮೇನೆಯಲ್ಲಿ ಕುಳಿತು ನಾನು ಅವಳ ಬಳಿಗೆ ಬರಬೇಕೆಂದು ಅವಳ ಬಯಕೆ ಇದೆ. ಇದನ್ನು ನಡೆಸಿಕೊಡಿ. ನಹುಷನ ಮಾತನು ಕೇಳಿ ಮುನಿಗಳು ಅಚ್ಚರಿಗೊಂಡರು. ಪರಸ್ಪರ ಮುಖ ನೋಡಿ ಗಟ್ಟಿಯಾಗಿ ನಕ್ಕರು. ಅವರಿಗೆ ರಾಜ ವಿಷ್ಣುಮಾಯೆಯಿಂದ ಮೋಹಿತನಾಗಿರುವುದು ತಿಳಿದುಹೋಯಿತು. ದೀನವತ್ಸಲರಾದ ಅವರು ಕೃಪೆಯಿಂದ ಒಪ್ಪಿದರು. ಮೇನೆಯನ್ನು ಹೆಗಲಿಗೆ ಏರಿಸಿಕೊಂಡರು. ಮುತ್ತು ಮಾಣಿಕ್ಯಗಳಿಂದ ಅಲಂಕೃತವಾದ ಆ ಮೇನೆಯಲ್ಲಿ ರತ್ನಾಭರಣಭೂಷಿತನಾದ ರಾಜ

ಕುಳಿತ. ಮುನಿಗಳು ಬಲುನಿಧಾನವಾಗಿ ಚಲಿಸಿದರು. ನಹುಷನಿಗೆ ವಿಳಂಬವನ್ನು ಸಹಿಸಲಾಗಲಿಲ್ಲ. ಆತ ಮುನಿಗಳನ್ನು ಆಕ್ಷೇಪಿಸಿದ. ಆಗ ಮುನಿಗಳಲ್ಲಿ ಒಬ್ಬರಾದ ದುರ್ವಾಸರು ರಾಜನನ್ನು ಶಪಿಸಿದರು. 'ರಾಜನೆ, ನೀನು ದೊಡ್ಡ ಹೆಬ್ಬಾವಾಗಿ ಭೂಮಿಗೆ ಬೀಳು. ಯುಧಿಷ್ಠಿರನ ದರ್ಶನದಿಂದ ಶಾಪಮುಕ್ತಿಯಾಗುವುದು. ಬಳಿಕ ರತ್ನವಿಮಾನದಿಂದ ವೈಕುಂಠಕ್ಕೆ ಹೋಗಿ ವೈಕುಂಠನ ಸೇವೆ ಮಾಡುವಿ. ಕರ್ಮ ಎಂದೂ ಫಲ ನೀಡದಿರುವುದಿಲ್ಲ.' ಹೀಗೆ ಹೇಳಿ ಮುನಿಗಳು ನಕ್ಕು ಹೊರಟು ಹೋದರು. ರಾಜ ಹೆಬ್ಬಾವಾಗಿ ಬಿದ್ದ. ಶಚಿ ಈ ವಾರ್ತೆಯನ್ನು ಕೇಳಿ ಗುರುವನ್ನು ನಮಿಸಿ ಅಮರಾವತಿಗೆ ಹೋದಳು. ಬೃಹಸ್ಪತಿ ಬೇಗನೆ ಇಂದ್ರನಿದ್ದಲ್ಲಿಗೆ ಹೋಗಿ ಅವನನ್ನು ಕರೆದ. ಕೃಪಾನಿಧಿಯಾದ ಆತ ಕೃಪೆಯಿಂದ ಪ್ರಸನ್ನನಾಗಿ ನುಡಿದ -

**ಬೃಹಸ್ಪತಿ:-** ವತ್ಸ, ದೇವೇಂದ್ರ, ಬಾ. ಭಯಪಡಬೇಡ. ನಾನಿರುವಾಗ ನಿನಗೇಕೆ ಭಯ? ಇಗೋ, ನಾನು ನಿನ್ನ ಗುರು ಬೃಹಸ್ಪತಿ ಬಂದಿದ್ದೇನೆ. ತನ್ನ ಗುರುವಿನ ಧ್ವನಿಯನ್ನು ಕೇಳಿ ದೇವೇಂದ್ರ ಆನಂದಿತನಾಗಿ ಸೂಕ್ಷ್ಮರೂಪವನ್ನು ತೊರೆದು ನಿಜರೂಪದಿಂದ ಬಂದ. ಗುರುವಿನ ಕಾಲುಗಳಿಗೆ ಭಕ್ತಿಯಿಂದ ದಂಡಪ್ರಣಾಮ ಮಾಡಿದ. ಭಯದಿಂದ ನಡುಗುತ್ತ ಕಣ್ಣೀರು ಸುರಿಸಿದ. ಅವನನ್ನು ಗುರು ಆಲಿಂಗಿಸಿ ಅವನಿಂದ ಪ್ರಾಯಶ್ಚಿತ್ತವಾಗಿ ಸೋಮಯಾಗ ಮಾಡಿಸಿ ರತ್ನಸಿಂಹಾಸನದಲ್ಲಿ ಅವನನ್ನು ಕೂಡಿಸಿದ. ಹಿಂದಿಗಿಂತ ನಾಲ್ಕು ಪಟ್ಟು ಅಧಿಕವಾದ ಪರಮೈಶ್ವರ್ಯವನ್ನಿತ್ತ. ಎಲ್ಲ ದೇವತೆಗಳೂ ಬಂದು ದೇವೇಂದ್ರನನ್ನು ಆನಂದದಿಂದ ಸೇವಿಸಿದರು. ಶಚಿ ದೇವಾಧಿಪತಿಯಾದ ಇಂದ್ರನನ್ನು ಸೇರಿ ಹೂವಿನ ಹಾಸಿಗೆಯಲ್ಲಿ ಅವನೊಡನೆ ವಿಹರಿಸಿದಳು.

ನಾರದ, ಇದು ದೇವೇಂದ್ರನ ದರ್ಪನಾಶದ ಮತ್ತು ಶಚಿಯ ಪಾತಿವ್ರತ್ಯ ರಕ್ಷಣೆಯ ಕಥೆ. ಇನ್ನೇನು ಕೇಳಲು ಬಯಸುವಿ?

**ನಾರದ:-** ಸೋಮಯಾಗದ ವಿಧಾನವೇನು? ಗುರು ಅದನ್ನು ಹೇಗೆ ಮಾಡಿಸಿದ? ಯಾಗದ ಫಲವೇನು, ಹೇಳು.

**ನಾರಾಯಣ:-** ಬ್ರಹ್ಮಹತ್ಯಾ ಪಾಪಪರಿಹಾರ ಸೋಮಯಾಗದ ಫಲ. ಯಾಗದ ಯಜಮಾನ ಒಂದು ವರ್ಷಕಾಲ ಸೋಮರಸವನ್ನು ಮಾತ್ರ ಸೇವಿಸಬೇಕು. ಒಂದು ವರ್ಷಕಾಲ ಫಲವನ್ನು ಮಾತ್ರ ಭಕ್ಷಿಸಬೇಕು. ಇನ್ನೊಂದು ವರ್ಷಕಾಲ ಕೇವಲ ನೀರನ್ನು ಸೇವಿಸಬೇಕು. ಹೀಗೆ ಮೂರು ವರ್ಷಗಳ ಕಾಲ ಮಾಡುವ ವ್ರತ ಇದು. ಸರ್ವಪಾಪಪರಿಹಾರಕ. ಯಾರಲ್ಲಿ ಮೂರುವರ್ಷದ ಧಾನ್ಯಸಂಗ್ರಹವಿರುವುದೋ ಅಥವಾ ಅದಕ್ಕಿಂತ ಅಧಿಕ ಧಾನ್ಯಸಂಗ್ರಹವಿರುವುದೋ ಅವನು ಸೋಮಪಾನಕ್ಕೆ ಅರ್ಹನೆನಿಸುತ್ತಾನೆ. ಅದರಿಂದ ಮಹಾರಾಜನಾಗಲಿ ದೇವನಾಗಲಿ ಈ ಯಾಗ ಮಾಡಬಲ್ಲ. ಎಲ್ಲರಿಗೂ ಈ ಯಜ್ಞ ಸಾಧ್ಯವಲ್ಲ. ಬಹು ಅನ್ನ ಬಹು ದಕ್ಷಿಣೆಗಳನ್ನು ನೀಡಬೇಕಾಗುತ್ತದೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಶಕ್ರದರ್ಪಭಂಗಪ್ರಕರಣದಲ್ಲಿ ಶಕ್ರಮೋಕ್ಷಕಥನವೆಂಬ ಅರವತ್ತನೆ ಅಧ್ಯಾಯ ಮುಗಿಯಿತು.*

## ಮಹೇಂದ್ರನ ದರ್ಪಭಂಗ ಇನ್ನೊಮ್ಮೆ

ಅಧ್ಯಾಯ - ೬೧

**ನಾರಾಯಣ:-** ನಾರದ, ದೇವೇಂದ್ರನ ದರ್ಪಭಂಗದ ಒಂದು ಕಥೆ ಹೇಳಿದ್ದೇನೆ. ಇನ್ನೊಂದು ಕಥೆಯನ್ನೂ ಹೇಳುತ್ತೇನೆ, ಕೇಳು. ಸಮುದ್ರಮಥನ ಮಾಡಿ, ಅಮೃತ ಕುಡಿದು, ದೈತ್ಯರನ್ನು ಗೆದ್ದ ಬಳಿಕ ದೇವೇಂದ್ರನಿಗೆ ಬಹಳ ಅಹಂಕಾರ ಬಂದಿತು. ಆಗ ಕೃಷ್ಣ ಬಲಿಚಕ್ರವರ್ತಿಯ ಮೂಲಕ ಇಂದ್ರನ ಆ ಅಹಂಕಾರವನ್ನು ಕಳೆದ. ಇಂದ್ರಾದಿ ದೇವತೆಗಳೆಲ್ಲರೂ ಆಗ ಸಂಪತ್ತಿನಿಂದ ಚ್ಯುತರಾದರು. ಆಗ ಬೃಹಸ್ಪತಿಯ ಸ್ತೋತ್ರದಿಂದಲೂ ಅದಿತಿಯ ವ್ರತದಿಂದಲೂ ಕೃಷ್ಣ ಒಂದು ಅಂಶ ಕಲೆಯಿಂದ ಅದಿತಿಯಲ್ಲಿ ವಾಮನನಾಗಿ ಅವತರಿಸಿದ. ಬಲಿಯಿಂದ ದಾನ ಬೇಡಿ ಇಂದ್ರನಿಗೂ ಎಲ್ಲ ದೇವತೆಗಳಿಗೂ ಅವರ ಸಂಪತ್ತನ್ನು ಕೊಟ್ಟ. ದೇವೇಂದ್ರನಿಗೆ ಇನ್ನೊಮ್ಮೆ ಅಹಂಕಾರ ಬಂದಾಗ ದುರ್ವಾಸಶಾಪದ ಮೂಲಕ ಅವನ ಸಂಪತ್ತನ್ನು ಕಸಿದು ತಿರುಗಿ ಕೊಟ್ಟ. ಇನ್ನೊಮ್ಮೆ ದೇವೇಂದ್ರ ಸಂಪತ್ತಿನ ಮದದಿಂದ ಗೌತಮ ಪತ್ನಿಯನ್ನು ಅಪಹರಿಸಿದ. ಆಗ ಗೌತಮಶಾಪದಿಂದ ಅವನ ಮೈಯೆಲ್ಲ ಯೋನಿ ಚಿಹ್ನಯುಕ್ತವಾಯಿತು. ಎಲ್ಲರೂ ನೋಡಿ ನಗುವಂತಾಯಿತು. ದೇವತೆಗಳೆಲ್ಲ ಲಜ್ಜಿತರಾದರು. ಬೃಹಸ್ಪತಿಗೆ ಅಪಮಾನದಿಂದ ಸತ್ತಂತೆ ಎನಿಸಿತು. ಸಾವಿರ ವರ್ಷಕಾಲ ಇಂದ್ರ ಸೂರ್ಯನನ್ನು ಕುರಿತು ತಪಸ್ಸು ಮಾಡಿ ಅವನ ವರದಿಂದ ಮೈಯೆಲ್ಲ ಕಣ್ಣಾಗುವಂತೆ ಮಾಡಿಕೊಂಡ. ಸಹಸ್ರಾಕ್ಷನೆನಿಸಿದ. ಈ ಕಣ್ಣುಗಳು ಇಂದ್ರನಿಗೆ ಕಲಂಕ ಪ್ರಾಯ. ಹೇಗೆ ಚಂದ್ರನಿಗೆ ಗುರುಪತ್ನೀಸಂಗಪ್ರಯುಕ್ತ ಕಲಂಕ ಬಂದಿದೆಯೋ ಹಾಗೆ.

**ನಾರದ:-** ಮಹಾಪತಿವ್ರತೆ ಭುವನಪಾವನೆ ಪೂಜ್ಯೆಯಾದ ಗೌತಮಪತ್ನಿ ಅಹಲ್ಯೆಯನ್ನು ದೇವೇಂದ್ರ ಹೇಗೆ ಅಪಹರಿಸಿದ? ಇದನ್ನು ತಿಳಿಯಲು ಬಯಸಿದ್ದೇನೆ, ಹೇಳು.

**ನಾರಾಯಣ:-** ತೀರ್ಥಯಾತ್ರೆ ಮಾಡುತ್ತ ಸೂರ್ಯಗ್ರಹಣ ಕಾಲದಲ್ಲಿ ಪುಷ್ಕರಕ್ಕೆ ಅಹಲ್ಯೆ ಬಂದಿದ್ದಳು. ಅಲ್ಲಿ ಇಂದ್ರ ಅವಳನ್ನು ಕಂಡು ಮೋಹ ಪರವಶನಾದ. ಮತ್ತೊಮ್ಮೆ ಗಂಗಾನದಿಯಲ್ಲಿ ಸ್ನಾನ ಮಾಡುತ್ತಿದ್ದ ಅಹಲ್ಯೆಯನ್ನು ಕಂಡು ದೇವೇಂದ್ರ ಕಾಮಾರ್ತನಾಗಿ ನುಡಿದ.

**ದೇವೇಂದ್ರ:-** ಅಹಲ್ಯೆ, ಏನು ಸುಂದರ ರೂಪ! ಏನು ನವಯೌವನ ನಿನ್ನದು! ನಿನ್ನ ಮುಖ ಶರತ್ಕಾಲದ ಚಂದ್ರನನ್ನು ನಾಚಿಸುವಂತಿದೆ. ನಿನ್ನ ಕಣ್ಣನೋಟ ಎಂಥವನಿಗೂ ಮನ ಸೆಳೆಯುವಂತಹುದು. ನಿನ್ನ ಕಣ್ಣುಗಳು ಕಮಲದಂತೆ, ನಡೆ ಮದಗಜದಂತೆ, ನಿನ್ನ ಕಂಠಧ್ವನಿಯೂ ಮಧುರ, ಅಮೃತಕ್ಕಿಂತ ಮಿಗಿಲು. ಮುನಿಗಳ ಮನಸ್ಸನ್ನೂ ಸೆಳೆಯ ಬಲ್ಲೆ. ನಿನ್ನನ್ನು ಪತ್ನಿಯನ್ನಾಗಿ ಪಡೆಯಲು ಗೌತಮನೇನು ತಪಸ್ಸು ಮಾಡಿದನೊ! ಆದರೆ ನಿನ್ನನ್ನು ಆಳುವ ಕಾಮಶಾಸ್ತ್ರಪಾಂಡಿತ್ಯ ಗೌತಮನಿಗೆ ಎಲ್ಲಿ ಇದ್ದೀತು? ನಿನ್ನನ್ನು ಆಳಬೇಕಾದರೆ ಕಾಮಶಾಸ್ತ್ರ ವಿಚಕ್ಷಣನಾದ ನಾನೆ ಸರಿ.

ಅಥವಾ ಮನ್ಮಥನೋ ಚಂದ್ರನೋ ಬರಬೇಕು. ಊರ್ವಶಿ ಮುಂತಾದ ಅಪ್ಸರೆಯರು ಕಾಮಶಾಸ್ತ್ರ ಬಲ್ಲವರು ನನ್ನನ್ನು ಹೊಗಳುತ್ತಾರೆ. ಅದರಿಂದ ನಾನೆ ನಿನಗೆ ತಕ್ಕವನು. ಶಚಿಯನ್ನು ನಿನಗೆ ದಾಸಿಯನ್ನಾಗಿ ಮಾಡಿ ಕೊಡುವೆನು. ವಿಪುಲವಾದ ತ್ರೈಲೋಕ್ಯ ಸಂಪತ್ತನ್ನೆ ನಿನಗೆ ನೀಡುವೆನು. ಗೌತಮನನ್ನು ಬಿಟ್ಟುಬಿಡು. ಅವನು ಕಾಮಶಾಸ್ತ್ರದಲ್ಲಿ ಅನಭಿಜ್ಞ, ತಪಸ್ಸಿನಿಂದ ದುರ್ಬಲನೂ ಆಗಿದ್ದಾನೆ. ಅವನಿಗೆ ಸುಖಭೋಗದ ಆಸೆಯೂ ಇಲ್ಲ, ಕೇವಲ ನಾರಾಯಣ ಪರಾಯಣನಾಗಿರುತ್ತಾನೆ. ಬ್ರಹ್ಮನಿಗೆ ವಿವೇಕ ಸಾಲದು. ನಿನ್ನಂಥ ಸುಂದರಿಯನ್ನು ತಪಸ್ವಿಯಾದ ದುರ್ಬಲನಾದ ಗೌತಮನಿಗೆ ಕೊಡಿಸಿದ್ದಾನೆ. ಹೀಗೆ ಹೇಳಿ ದೇವೇಂದ್ರ ಅಹಲ್ಯೆಯ ಕಾಲಿಗೆ ಬಿದ್ದ. ಅಹಲ್ಯೆ ಮಹಾಸಾಧ್ವಿ. ವೇದೋಕ್ತವಾದ ಧರ್ಮವನ್ನು ಬೋಧಿಸಿದಳು.

**ಅಹಲ್ಯೆ:-** ಪಾಪಬುದ್ಧಿಯವನಾದ ನೀನು ಕಶ್ಯಪನ ಮಗನಾಗಿ ಜನಿಸಿದ್ದು ಕಶ್ಯಪನ ದುರದೃಷ್ಟ, ಮರೀಚಿಯ ದುರದೃಷ್ಟ, ಮತ್ತು ಬ್ರಹ್ಮನ ದುರದೃಷ್ಟ. ಸ್ತ್ರೀ ಲಂಪಟನು ಜಪ ತಪ ಮೌನವ್ರತ ದೇವತಾರ್ಚನೆ ತೀರ್ಥಯಾತ್ರೆಗಳನ್ನು ಎಷ್ಟು ಮಾಡಿದರೇನು? ಸ್ತ್ರೀಯನ್ನು ಸೃಷ್ಟಿಕರ್ತ ನಿರ್ಮಿಸಿದುದು ಕಾಮಿಗಳಿಗೆ ಮೋಹ ಉಂಟು ಮಾಡುವುದಕ್ಕಾಗಿ. ಇಲ್ಲದಿದ್ದರೆ ಸೃಷ್ಟಿಕಾರ್ಯ ನಡೆಯಲಾರದು ಎಂದು. ವಸ್ತುತಃ ಸ್ತ್ರೀಮೋಹ ಮಾನವರಿಗೆ ಧರ್ಮಮಾರ್ಗದಲ್ಲಿ ದೊಡ್ಡ ಅಡಚಣೆ. ತಪಸ್ಸಿಗೆ ವಿರೋಧಿ. ದೋಷಗಳಿಗೆ ಆಶ್ರಯ. ಕರ್ಮಬದ್ಧರಿಗೆ ಕಠಿನವಾದ ಬಂಧನ. ಹುಳುಗಳಿಗೆ ದೀಪದಂತೆ, ಮೀನುಗಳಿಗೆ ಗಾಳದ ಮಾಂಸದಂತೆ ವಿನಾಶಕಾರಿ. ಮೊದಲಿಗೆ ಹಾಲಿನಂತೆ ಸವಿ, ಕೊನೆಯಲ್ಲಿ ವಿಷದಂತೆ ಭಯಂಕರವೆನಿಸಿ ನರಕಕ್ಕೇ ಒಯ್ಯುತ್ತದೆ. ಸನಕಾದಿ ಋಷಿಗಳು ಈ ಕಾರಣದಿಂದಲೇ ಮದುವೆ ಮಾಡಿಕೊಳ್ಳಲಿಲ್ಲ. ಪರಸ್ತ್ರೀಕಾಮನೆ ಉಳ್ಳವನು ಮಾಡುವ ಕರ್ಮವೆಲ್ಲವೂ ವ್ಯರ್ಥ. ಅವನಿಗೆ ಇಹದಲ್ಲಿ ಅಪಯಶಸ್ಸು, ಪರದಲ್ಲಿ ನರಕ.

ಹೀಗೆ ಹೇಳಿ ಅಹಲ್ಯೆ ಬೇಗನೆ ತನ್ನ ಆಶ್ರಮಕ್ಕೆ ನಡೆದಳು. ಗೌತಮನ ಮುಂದೆ ಎಲ್ಲವನ್ನೂ ಹೇಳಿದಳು. ಗೌತಮ ನಕ್ಕು ಸುಮ್ಮನಾದ. ಒಮ್ಮೆ ಅವನು ಕೈಲಾಸಕ್ಕೆ ಹೋದಾಗ ದೇವೇಂದ್ರ ಗೌತಮರೂಪದಿಂದ ಬಂದು ಅಹಲ್ಯೆಯೊಡನೆ ಕೂಡಿದ. ಸರ್ವಜ್ಞನಾದ ಗೌತಮ ಇದನ್ನು ತಿಳಿದು ಆಶ್ರಮದ್ವಾರಕ್ಕೆ ಬಂದ. ಆಗತಾನೆ ಆಶ್ರಮದಿಂದ ಹೊರಟು ಬರುತ್ತಿದ್ದ ದೇವೇಂದ್ರನನ್ನು ಕಂಡು ಕೋಪದಿಂದ ನಿನ್ನ ಮೈಯೆಲ್ಲ ಯೋನಿಚಿಹ್ನಯುಕ್ತವಾಗಲಿ ಎಂದು ಶಪಿಸಿದ. ಅಹಲ್ಯೆಗೂ ಕಲ್ಲಾಗೆಂದು ಶಪಿಸಿದ. ದೇವೇಂದ್ರ ಲಜ್ಜಿತನಾಗಿ ಹೊರಟು ಹೋದ. ಅಹಲ್ಯೆ ಪತಿಯನ್ನು ಬೇಡಿದಳು.

**ಅಹಲ್ಯೆ:-** ನಾನು ನಿರ್ದೋಷಳು, ಧಾರ್ಮಿಕನೂ ವೇದವೇತ್ತರಲ್ಲಿ ಶ್ರೇಷ್ಠನೂ ಆದ ನೀನು ನನ್ನನ್ನು ಹೇಗೆ ಪರಿತ್ಯಜಿಸುವೆ, ವಿಚಾರಮಾಡು.

**ಗೌತಮ:-** ನೀನು ಮನಸಿನಲ್ಲಿ ಶುದ್ಧಳು, ಪತಿವ್ರತೆ ಎಂದು ನನಗೆ ಗೊತ್ತು. ಆದರೂ ಪರಪುರುಷನಿಂದ ನಿನ್ನ ಶರೀರ ಅಪವಿತ್ರವಾಗಿದೆ. ಎಲ್ಲ ಕರ್ಮಗಳಿಗೂ ಅನರ್ಹವೆನಿಸಿದೆ. ನೀನು ಈಗ ಕೊಡುವ ಅನ್ನ ಮಲಕ್ಕೆ ಸಮಾನವಾಗುವುದು. ನೀರು

**ಮೂತ್ರಕ್ಕೆ ಸಮಾನವಾಗುವುದು. ಕೇವಲ ಬಲಾತ್ಕಾರಕ್ಕೊಳಗಾಗಿ ಹೆಣ್ಣು ಪರಪುರುಷ ಸಂಪರ್ಕ ಹೊಂದಿದರೆ ಅವಳು ಕೆಡುವುದಿಲ್ಲ. ಆದರೆ ಆಸಕ್ತಿಯಿಂದ ಸಂಪರ್ಕ ಮಾಡಿದರೆ ಕೆಡುತ್ತಾಳೆ. ಈಗ ನನ್ನ ವೇಷದಿಂದ ಬಂದ ಇಂದ್ರನನ್ನು ನಾನೆಂದೇ ತಿಳಿದು ಆಸಕ್ತಿಯಿಂದಲೆ ಅವನ ಸಂಪರ್ಕಮಾಡಿರುವೆಯಾದ್ದರಿಂದ ನೀನು ಕೆಟ್ಟಿರುವೆ. ಆದರಿಂದ ಕಲ್ಲಾಗಿ ಬಿದ್ದಿರು. ಮುಂದೆ ರಾಮನ ಪಾದಸ್ಪರ್ಶದಿಂದ ಪವಿತ್ರಳಾಗುವಿ. ನನ್ನನ್ನು ಹೊಂದುವಿ. ಹೀಗೆ ಹೇಳಿ ಗೌತಮ ತಪಸ್ಸಿಗಾಗಿ ಹೊರಟು ಹೋದ. ಇದು ಮಹೇಂದ್ರನ ದರ್ಪ ಭಂಗದ ಕಥೆ. ಮುಂದೆ ಅವನು ಕೃಷ್ಣಾನುಗ್ರಹದಿಂದ ಸಂಪತ್ತನ್ನು ಪಡೆದ.**

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಅರವತ್ತೊಂದನೆ ಅಧ್ಯಾಯ ಮುಗಿಯಿತು.*



## ಶ್ರೀರಾಮನ ಚರಿತ್ರೆ

**ಅಧ್ಯಾಯ - ೬೨**

**ನಾರದ:-** ದಾಶರಥಿರಾಮ ಹೇಗೆ ಅಹಲ್ಯೆಯನ್ನು ಶಾಪದಿಂದ ವಿಮೋಚನ ಗೊಳಿಸಿದ? ಸುಖದಾಯಕವಾದ ರಾಮಾವತಾರದ ಕಥೆಯನ್ನು ಸಂಕ್ಷೇಪವಾಗಿ ತಿಳಿಸು. ನನಗೆ ಬಹಳ ಕುತೂಹಲವಿದೆ.

**ನಾರಾಯಣ:-** ಬ್ರಹ್ಮನಿಂದ ಪ್ರಾರ್ಥಿತನಾಗಿ ವಿಷ್ಣು ತ್ರೇತಾಯುಗದಲ್ಲಿ ದಶರಥನಿಂದ ಕೌಸಲ್ಯೆಯಲ್ಲಿ ರಾಮನಾಗಿ ಅವತರಿಸಿದ. ಕೈಕೇಯಿಯಲ್ಲಿ ಭರತನು ಗುಣದಲ್ಲಿ ರಾಮನಿಗೆ ಸದೃಶನಾಗಿ ಜನಿಸಿದ. ಸುಮಿತ್ರೆಯಲ್ಲಿ ಲಕ್ಷ್ಮಣ ಶತ್ರುಘ್ನರು ಜನಿಸಿದರು. ವಿಶ್ವಾಮಿತ್ರರು ರಾಮ ಲಕ್ಷ್ಮಣರನ್ನು ಸೀತಾಸ್ವಯಂವರಕ್ಕಾಗಿ ಮಿಥಿಲೆಗೆ ಕರೆದೊಯ್ದರು. ದಾರಿಯಲ್ಲಿ ಕಲ್ಲಿನ ರೂಪದ ಸ್ತ್ರೀಯನ್ನು ಕಂಡು ರಾಮ ಅದಕ್ಕೇನು ಕಾರಣವೆಂದು ವಿಶ್ವಾಮಿತ್ರರನ್ನು ಕೇಳಿದ. ವಿಶ್ವಾಮಿತ್ರ ಎಲ್ಲ ರಹಸ್ಯವನ್ನೂ ತಿಳಿಸಿದ. ಆಗ ಲೋಕಪಾವನನಾದ ರಾಮ ಕಾಲಿನ ಬೆರಳಿನಿಂದ ಶಿಲೆಯನ್ನು ಸ್ಪರ್ಶಿಸಿದ. ಒಡನೆ ಅಹಲ್ಯೆ ಶಾಪಮುಕ್ತಳಾದಳು. ರಾಮನನ್ನು ಆಶೀರ್ವದಿಸಿ ಪತಿಯ ಆಶ್ರಮಕ್ಕೆ ಹೋದಳು. ಗೌತಮರೂ ಪತ್ನಿಯನ್ನು ಪಡೆದು ರಾಮನಿಗೆ ಆಶೀರ್ವದಿಸಿದರು.

ರಾಮ ಮಿಥಿಲೆಗೆ ಹೋಗಿ ಶಿವಧನುರ್ಭಂಗಗೈದು ಸೀತೆಯ ಪಾಣಿಗ್ರಹಣಮಾಡಿ ಅಯೋಧ್ಯೆಗೆ ಬರುತ್ತ ದಾರಿಯಲ್ಲಿ ಪರಶುರಾಮನ ದರ್ಪವನ್ನು ಮುರಿದ. ದಶರಥ ರಾಮನಿಗೆ ಯುವರಾಜಪದವಿಯಲ್ಲಿ ಪಟ್ಟಾಭಿಷೇಕ ಮಾಡಲು ಸಂಕಲ್ಪಿಸಿ ಏಳು ತೀರ್ಥಗಳ ಜಲವನ್ನು ತರಿಸಿದ. ಮುನಿಪುಂಗವರನ್ನೂ ಕರೆಸಿಕೊಂಡ. ಶ್ರೀರಾಮ ಪಟ್ಟಾಭಿಷೇಕಕ್ಕೆ ಅಣಿಯಾದುದನ್ನು ಕಂಡು ಭರತನ ಮಾತೆ ಕೈಕೇಯಿ ದಶರಥನನ್ನು ತಡೆದಳು. ದಶರಥ ಅವಳಿಗೆ ಹಿಂದೆ ವಾಗ್ದಾನ ಮಾಡಿದ್ದ ಎರಡು ವರಗಳನ್ನು ಈಗ ಕೇಳಿದಳು, ರಾಮನಿಗೆ ವನವಾಸ ವಿಧಿಸಬೇಕು, ಭರತನಿಗೆ ಪಟ್ಟಾಭಿಷೇಕ ಮಾಡಬೇಕು ಎಂದು. ದಶರಥ ಪುತ್ರಪ್ರೇಮ ಪರವಶತೆಯಿಂದ ಆ ವರಗಳನ್ನು ನೀಡಲು ಅಶಕ್ತನಾದ. ರಾಮ ಆಗ ಸತ್ಯಧರ್ಮ ರಕ್ಷಣೆಗಾಗಿ ಅವನಿಗೆ ಬೋಧಿಸಿದ.

**ಶ್ರೀರಾಮ:-** ನೂರು ಕೊಳಗಳನ್ನು ದಾನ ಮಾಡಿದರೆ ಎಷ್ಟು ಪುಣ್ಯವೋ ಅದಕ್ಕಿಂತ ಹೆಚ್ಚು ಪುಣ್ಯ ಬಾವಿಯನ್ನು ದಾನ ಮಾಡಿದಾಗ ಲಭ್ಯವಾಗುವುದು. ಹತ್ತು ಬಾವಿಗಳನ್ನು ದಾನ ಮಾಡಿದ್ದಕ್ಕಿಂತ ಒಂದು ಕನ್ಯಾದಾನಕ್ಕೆ ಹೆಚ್ಚು ಫಲವಿದೆ. ಹತ್ತು ಕನ್ಯಾದಾನಕ್ಕಿಂತ ಒಂದು ಯಜ್ಞಕ್ಕೆ ಹೆಚ್ಚು ಫಲ. ನೂರು ಯಜ್ಞಗಳನ್ನು ಮಾಡಿದ್ದಕ್ಕಿಂತ ಒಬ್ಬ ಮಗನನ್ನು ಪಡೆದರೆ ಹೆಚ್ಚು ಫಲ. ನೂರು ಮಂದಿ ಪುತ್ರರನ್ನು ಪಡೆಯುವುದಕ್ಕಿಂತ ಸತ್ಯಪಾಲನೆಗೆ ಹೆಚ್ಚು ಫಲ.

**ನ ಹಿ ಸತ್ಯಾತ್ ಪರೋ ಧರ್ಮೋ**
**ನಾನೃತಾತ್ ಪಾತಕಂ ಪರಂ ।**
**ನ ಹಿ ಗಂಗಾಸಮಂ ತೀರ್ಥಂ**
**ನ ದೇವಃ ಕೇಶವಾತ್ ಪರಃ ॥**

ಸತ್ಯಕ್ಕಿಂತ ಮಿಗಿಲಾದ ಪುಣ್ಯಕರ್ಮವಿಲ್ಲ. ಸುಳ್ಳಿಗಿಂತ ಹೆಚ್ಚಿನ ಪಾಪಕರ್ಮವಿಲ್ಲ. ಗಂಗೆಗೆ ಸಮವಾದ ತೀರ್ಥವಿಲ್ಲ. ಕೇಶವನಿಗೆ ಸಮನಾದ ದೇವನಿಲ್ಲ. ಧರ್ಮಕ್ಕಿಂತ ಹೆಚ್ಚಿನ ಬಂಧು ಇಲ್ಲ. ಧರ್ಮಕ್ಕಿಂತ ಹೆಚ್ಚಿನ ಸಂಪತ್ತು ಇಲ್ಲ. ಧರ್ಮಕ್ಕಿಂತ ಹೆಚ್ಚು ಪ್ರಿಯ ಇನ್ನೊಂದಿಲ್ಲ. ಅದರಿಂದ ಪ್ರಯತ್ನಪೂರ್ವಕ ಸ್ವಧರ್ಮವನ್ನು ರಕ್ಷಿಸು. ಸ್ವಧರ್ಮರಕ್ಷಣೆ ಮಾಡಿದರೆ ಎಲ್ಲಕಡೆ ಮಂಗಲವಾಗುವುದು. ಕೀರ್ತಿ ಪ್ರತಿಷ್ಠೆ ಆದರಗಳು ಲಭಿಸುವುವು. ನಾನು ಹದಿನಾಲ್ಕು ವರ್ಷಗಳ ಕಾಲ ಸತ್ಯದ ಪಾಲನೆಗಾಗಿ ಗೃಹಸುಖವನ್ನು ತೊರೆದು ವನವಾಸ ಮಾಡುವೆನು. ಕೊಟ್ಟ ಮಾತನ್ನು ನಡೆಸಿಕೊಡದವನು ಬದುಕಿರುವಷ್ಟು ಕಾಲವೂ ಸೂತಕ ಉಳ್ಳವನೆನಿಸುತ್ತಾನೆ. ಚಂದ್ರ ಸೂರ್ಯರಿರುವಷ್ಟು ಕಾಲವೂ ಕುಂಭೀಪಾಕ ನರಕದಲ್ಲಿ ವಾಸಮಾಡುವನು. ಬಳಿಕ ಏಳು ಮಾನವಜನ್ಮಗಳಲ್ಲಿ ಮೂಕನೆನಿಸುತ್ತಾನೆ. ಕುಷ್ಠರೋಗದಿಂದ ಬಳಲುತ್ತಾನೆ. ಹೀಗೆ ಹೇಳಿ ರಾಮ ಜಟಾವಲ್ಕಲಧಾರಿಯಾಗಿ ಸೀತಾ ಲಕ್ಷ್ಮಣರಿಂದೊಡಗೂಡಿ ವನವಾಸಕ್ಕೆ ಹೊರಟ. ಪುತ್ರಶೋಕದಿಂದ ದಶರಥ ಪ್ರಾಣ ತ್ಯಾಗ ಮಾಡಿದ. ಪಿತೃವಾಕ್ಯ ಪರಿಪಾಲನೆಗಾಗಿ ರಾಮ ವನದಲ್ಲಿ ಸಂಚರಿಸಿದ. ಒಂದು ದಿನ ಕಾಡಿನಲ್ಲಿ ರಾವಣನ ತಂಗಿ ಶೂರ್ಪಣಖೆ ಸಂಚರಿಸುತ್ತ ರಾಮನನ್ನು ಕಂಡಳು. ಅವಳು ರಾಕ್ಷಸಿ, ಕುಲಟೆ. ರಾಮನನ್ನು ಕಂಡೊಡನೆ ಕಾಮಪರವಶಳಾಗಿ ರೋಮಾಂಚಗೊಂಡು ಮೈ ಮರೆತಳು. ರಾಮನ ಬಳಿಗೆ ಹೋಗಿ ನುಡಿದಳು.

**ಶೂರ್ಪಣಖೆ:-** ಹೇ ರಾಮ, ಘನಶ್ಯಾಮ, ರೂಪಧಾಮ, ನಿನಗಾಗಿ ಒಲಿದು ಬಂದ ಹೆಣ್ಣು ನಾನು. ಈ ಕಾಡಿನ ನಿರ್ಜನ ಪ್ರದೇಶದಲ್ಲಿ ನನ್ನನ್ನು ಸ್ವೀಕರಿಸು.'' ಶೂರ್ಪಣಖೆಯ ಈ ಮಾತನ್ನು ಕೇಳಿ ಧಾರ್ಮಿಕನಾದ ರಾಮ ಧರ್ಮವನ್ನು ಆಲೋಚಿಸಿ ನುಡಿದ -

**ಶ್ರೀರಾಮ:-** ''ಅಮ್ಮ ತಾಯಿ, ನನಗೆ ಹೆಂಡತಿ ಇದ್ದಾಳೆ. ನನ್ನ ತಮ್ಮನಿಗೆ ಹೆಂಡತಿ ಇಲ್ಲ. ಅವನ ಬಳಿಗೆ ಹೋಗು.'' ರಾಮನ ಮಾತನ್ನು ಕೇಳಿ ಶೂರ್ಪಣಖೆ ಲಕ್ಷ್ಮಣನ ಬಳಿಗೆ ಹೋದಳು. ಅವನೂ ಅವಳಿಗೆ ಲಕ್ಷಣಭರಿತನಾಗಿ ಸುಂದರನಾಗಿ ಕಂಡು ಬಂದ. ನನ್ನನ್ನು ಸ್ವೀಕರಿಸೆಂದು ಪುನಃ ಪುನಃ ಬೇಡಿಕೊಂಡಳು. ಲಕ್ಷ್ಮಣ ಅವಳ ಮಾತನ್ನು ಕೇಳಿ ನುಡಿದ.

**ಲಕ್ಷ್ಮಣ:-** ರಾಮ ಪ್ರಭು. ಅವನನ್ನು ಬಿಟ್ಟು ದಾಸನಾದ ನನ್ನನ್ನು ಬಯಸುವ ನೀನು ಬುದ್ಧಿಶೂನ್ಯಳು. ಆ ರಾಮನಿಗೆ ಸೀತೆ ದಾಸಿ. ಸೀತೆಗೆ ನಾನೂ ನನ್ನ ಪತ್ನಿಯರೂ ದಾಸಿಯರು. ಆದರಿಂದ ನೀನು ರಾಮನನ್ನೇ ಸೇರು. ಸೀತೆಗೆ ಸವತಿಯಾಗು. ಆಗ ಸೀತೆಗೆ ಹೇಗೋ ಹಾಗೆ ನಿನಗೂ ನಾನು ಪುತ್ರನಾಗುತ್ತೇನೆ.'' ಲಕ್ಷ್ಮಣನ ಮಾತನ್ನು ಕೇಳಿ ಕಾಮಪರವಶಳಾದ ಶೂರ್ಪಣಖೆ ಒಣಗಿದ ಗಂಟಲು ತುಟಿ ತಾಲುಗಳಿಂದ ನುಡಿದಳು.

**ಶೂರ್ಪಣಖೆ:-** ಬಯಸಿ ತಾನಾಗಿ ಬಂದ ನನ್ನನ್ನು ಹೀಗೆ ತಿರಸ್ಕರಿಸಿದೆಯಾದರೆ ನಿಮಗಿಬ್ಬರಿಗೂ ಆಪತ್ತು ಬರುವುದು ನಿಶ್ಚಿತ. ಬ್ರಹ್ಮ ಮೋಹಿನಿಯನ್ನು ತಿರಸ್ಕರಿಸಿ ಲೋಕದಲ್ಲಿ ಅಪೂಜ್ಯನೆನಿಸಿದ. ರಂಭೆಯ ಶಾಪದಿಂದ ದಕ್ಷ ಹೋತ ತಲೆಯವನಾದ. ಅಶ್ವಿನಿಗಳು ಊರ್ವಶೀ ಶಾಪದಿಂದ ಯಜ್ಞಭಾಗವಿಲ್ಲದವರಾದರು. ಮೇನಕೆಯ ಶಾಪದಿಂದ ಕುಬೇರ ಕುರೂಪಿಯಾದ. ಮನ್ಮಥ ಘೃತಾಚಿಯ ಶಾಪದಿಂದ ಶಿವನ ಹಣೆಗಣ್ಣಿಗೆ ತುತ್ತಾಗಿ ಬೂದಿಯಾದ. ಬಲಿ ಮದಾಲಸೆಯ ಶಾಪದಿಂದ ರಾಜ್ಯ ಚ್ಯುತನಾದ. ಮಿಶ್ರಕೇಶಿಯ ಶಾಪದಿಂದ ಬೃಹಸ್ಪತಿಯ ಹೆಂಡತಿಯನ್ನು ಚಂದ್ರ ಅಪಹರಿಸಿದ. ನನ್ನ ಶಾಪದಿಂದ ರಾಮನ ಹೆಂಡತಿಯೂ ಹಾಗೇ ಅಪಹೃತಳಾಗುವಳು. ಯೌವನದಲ್ಲಿದ್ದು ಕಾಮಾತುರತೆಯಿಂದ ತಾನಾಗಿ ಬಳಿಗೆ ಬಂದ ಪತ್ನಿಯನ್ನು ಧರ್ಮಕ್ಕೆ ಭಯಪಡುವವನೆಂದೂ ತಿರಸ್ಕರಿಸಬಾರದೆಂದೂ ಮಾಧ್ಯಂದಿನ ಶ್ರುತಿ ಹೇಳುತ್ತದೆ. ಹಾಗೆ ತಿರಸ್ಕರಿಸುವವನಿಗೆ ಇಹದಲ್ಲಿ ಆಪತ್ತು, ಪರದಲ್ಲಿ ನರಕ ಉಂಟಾಗುವುದು.

ಶೂರ್ಪಣಖೆಯ ಮಾತನ್ನು ಕೇಳಿ ಲಕ್ಷ್ಮಣ ಅರ್ಧಚಂದ್ರಾಯುಧದಿಂದ ಅವಳ ಮೂಗನ್ನು ಕತ್ತರಿಸಿದ. ಆಗ ಅವಳ ಸೋದರರಾದ ಖರದೂಷಣರು ಹದಿನಾಲ್ಕು ಸಾವಿರ ಸೈನಿಕರೊಡನೆ ಬಂದು ಯುದ್ಧ ಮಾಡಿದರು ಲಕ್ಷ್ಮಣನ ಅಸ್ತ್ರದಿಂದ ಸೈನ್ಯ ಸಮೇತ ನಾಶಹೊಂದಿದರು. ಅದನ್ನು ನೋಡಿ ಶೂರ್ಪಣಖೆ ರಾವಣನ ಬಳಿ ಎಲ್ಲವನ್ನೂ ಹೇಳಿ ಪುಷ್ಕರಕ್ಕೆ ಹೋದಳು. ದುಷ್ಕರವಾದ ತಪಸ್ಸನ್ನು ಮಾಡಿದಳು. ನಿರಾಹಾರಳಾಗಿ ತಪಸ್ಸು ಮಾಡುತ್ತಿದ್ದ ಅವಳನ್ನು ಕಂಡು ಬ್ರಹ್ಮ ಕರುಣೆಯಿಂದ ನುಡಿದ.

**ಬ್ರಹ್ಮ:-** ರಾಮ ಅಲಭ್ಯ, ಲಕ್ಷ್ಮಣನೂ ಜಿತೇಂದ್ರಿಯರಲ್ಲಿ ಮೊದಲಿಗ. ಅವರನ್ನು ಹೊಂದಲಾರದೆ ದುಷ್ಕರವಾದ ತಪಸ್ಸನ್ನು ಮಾಡುತ್ತಿರುವೆ. ಅದರಿಂದ ನೀನು ಮುಂದಿನ ಜನ್ಮದಲ್ಲಿ ಬ್ರಹ್ಮ ವಿಷ್ಣು ಶಿವಾದಿಗಳಿಗೆ ಒಡೆಯನಾದ, ಪ್ರಕೃತಿಯನ್ನು ಮೀರಿದ ಪತಿಯನ್ನು ಹೊಂದುವಿ. ಹೀಗೆ ಹೇಳಿ ಬ್ರಹ್ಮ ತನ್ನ ಲೋಕಕ್ಕೆ ಹೊರಟು ಹೋದ. ಶೂರ್ಪಣಖೆ ಅಗ್ನಿಪ್ರವೇಶ ಮಾಡಿ ಶರೀರವನ್ನು ತ್ಯಜಿಸಿ ಮುಂದಿನ ಜನ್ಮದಲ್ಲಿ ಕುಬ್ಜೆಯಾದಳು.

ಇತ್ತ ಶೂರ್ಪಣಖೆಯ ಮಾತಿನಿಂದ ರಾವಣ ಕೋಪದಿಂದ ನಡುಗಿದ. ಮಾಯಾವಿಯಾದ ಆತ ಮಾಯೆಯಿಂದ ಸೀತೆಯನ್ನು ಅಪಹರಿಸಿದ. ಸೀತೆಯನ್ನು ಕಾಣದೆ ರಾಮ ಬಹುಕಾಲ ಮೂರ್ಛಿತನಾದ. ಸೋದರನಾದ ಲಕ್ಷ್ಮಣ ಅಧ್ಯಾತ್ಮವನ್ನು ಹೇಳಿ ಅವನನ್ನು ಸಂತೈಸಿದ. ಬಳಿಕ ರಾಮ ಶೋಕಾರ್ತನಾಗಿ ಹಗಲು ರಾತ್ರಿ ಕಾಡು ಗುಡ್ಡ ಗುಹೆಗಳಲ್ಲಿ ಮುನಿಗಳ ಆಶ್ರಮಗಳಲ್ಲಿ ಸಂಚರಿಸಿ ಬಹುಕಾಲ ಸೀತೆಯನ್ನು

ಹುಡುಕಿ ಕಾಣದೆ ಸುಗ್ರೀವನೊಡನೆ ಮೈತ್ರಿಯನ್ನು ಮಾಡಿಕೊಂಡ. ಅನಾಯಾಸವಾಗಿ ಬಾಣದಿಂದ ವಾಲಿಯನ್ನು ಕೊಂದು ಕಿಷ್ಕಿಂಧೆಯ ರಾಜ್ಯವನ್ನು ಮಿತ್ರನಾದ ಸುಗ್ರೀವನಿಗೆ ಇತ್ತ. ಸುಗ್ರೀವ ಸೀತಾನ್ವೇಷಣಕ್ಕಾಗಿ ಎಲ್ಲೆಡೆ ದೂತರನ್ನು ಕಳಿಸಿದ. ರಾಮಲಕ್ಷ್ಮಣರು ಸುಗ್ರೀವನ ಬಳಿ ಇದ್ದರು. ಶ್ರೀರಾಮ ಹನುಮಂತನಿಗೆ ಸೀತೆಗಾಗಿ ಮುದ್ರೆಯುಂಗುರ ನೀಡಿ ಶುಭಸಂದೇಶವನ್ನೂ ಕಳಿಸಿದ. ಪ್ರೀತಿಯಿಂದ ಆಲಿಂಗಿಸಿ ದುರ್ಲಭವಾದ ಪಾದರೇಣುವನ್ನು ನೀಡಿ ದಕ್ಷಿಣ ದಿಕ್ಕಿಗೆ ಕಳಿಸಿದ.

ಹನುಮಂತ ರಾಮನ ಸಂದೇಶವನ್ನು ಹೊತ್ತು ಸೀತಾನ್ವೇಷಣಕ್ಕಾಗಿ ಲಂಕೆಗೆ ಹಾರಿ ಅಶೋಕವನದಲ್ಲಿ ಶೋಕಿಸುತ್ತಿದ್ದ ಸೀತೆಯನ್ನು ಕಂಡ. ಅವಳು ನಿರಾಹಾರಳಾಗಿ ಅತಿಕೃಶಳಾಗಿ ಅಮಾವಾಸ್ಯೆಯ ಚಂದ್ರನಂತಿದ್ದಳು. ಸತತವಾಗಿ ರಾಮ ರಾಮ ಎಂದು ಭಕ್ತಿಪೂರ್ವಕ ಜಪಿಸುತ್ತಿದ್ದಳು. ಪುಟಕ್ಕಿಟ್ಟ ಚಿನ್ನದಂತೆ ಹೊಳೆವ ಜಟೆಯನ್ನು ಧರಿಸಿದ್ದಳು. ಮಹಾಲಕ್ಷ್ಮೀಯ ಚಿಹ್ನಯುಕ್ತಳಾಗಿ ತೇಜಸ್ವಿನಿಂದ ಪ್ರಜ್ವಲಿಸುತ್ತಿದ್ದಳು. ಸರ್ವತೀರ್ಥಗಳನ್ನೂ ಶುದ್ಧಗೊಳಿಸುವ ಲೋಕಪಾವನೆಯಾದ ಜಗನ್ಮಾತೆ ಅಳುತ್ತಿರುವುದನ್ನು ಕಂಡು ವಾಯುಪುತ್ರ ಹನುಮಂತ ರಾಮನ ಮುದ್ರೆಯುಂಗುರವನ್ನು ಸಂತೋಷದಿಂದ ನೀಡಿದ. ಕಾಲಿಗೆ ಬಿದ್ದು ಕಣ್ಣೀರಿಂದ ತೊಳೆದು ಸೀತೆಯ ಬದುಕನ್ನು ಉಳಿಸುವ ರಾಮನ ಸಂದೇಶವನ್ನು ಉಸುರಿದ.

**ಹನುಮಂತ:-** ಸಮುದ್ರದ ಆಚೆದಡದಲ್ಲಿ ಶ್ರೀರಾಮ ಲಕ್ಷ್ಮಣ ಸಹಿತನಾಗಿ ಸನ್ನದ್ಧನಾಗಿದ್ದಾನೆ. ಬಲಿಷ್ಠನಾದ ಸುಗ್ರೀವನೆಂಬ ಕಪಿ ರಾಮನ ಮಿತ್ರನಾಗಿದ್ದಾನೆ. ರಾಮ ವಾಲಿಯನ್ನು ಕೊಂದು ನಿಷ್ಕಂಟಕವಾದ ರಾಜ್ಯವನ್ನು ಸುಗ್ರೀವನಿಗೆ ನೀಡಿದ್ದಾನೆ. ವಾಲಿಯಿಂದ ಅಪಹೃತಳಾಗಿದ್ದ ಹೆಂಡತಿಯನ್ನೂ ಅವನಿಗೆ ನೀಡಿದ್ದಾನೆ. ಆದರಿಂದ ಸುಗ್ರೀವ ನಿನ್ನನ್ನು ರಾಮನೊಂದಿಗೆ ಸೇರಿಸಲು ಪ್ರತಿಜ್ಞೆಗೈದಿದ್ದಾನೆ. ಎಲ್ಲವಾನರರೂ ನಿನ್ನ ಅನ್ವೇಷಣಕ್ಕೆ ತೆರಳಿದ್ದಾರೆ. ರಾಮ ನನ್ನಿಂದ ನಿನ್ನ ಶುಭವಾರ್ತೆಯನ್ನು ಕೇಳಿ ಸಮುದ್ರಕ್ಕೆ ಸೇತುವೆ ನಿರ್ಮಿಸಿ ಲಂಕೆಗೆ ಬೇಗನೆ ಬರುತ್ತಾನೆ. ಪಾಪಿಯಾದ ರಾವಣನನ್ನು ಪುತ್ರ ಬಂಧು ಸಮೇತ ನಾಶಮಾಡಿ ಬೇಗನೆ ನಿನ್ನನ್ನು ಇಲ್ಲಿಂದ ಬಿಡಿಸಿಕೊಂಡು ಹೋಗುತ್ತಾನೆ. ಈಗ ನಿನ್ನ ಅನುಗ್ರಹದಿಂದ ರತ್ನಮಯವಾದ ಈ ಲಂಕೆಯನ್ನು ಸುಟ್ಟು ಬೂದಿಮಾಡುವೆನು, ಅಮ್ಮ, ನೀನೆ ನೋಡು. ರಾವಣನನ್ನೂ ಅವನ ಸೈನ್ಯವನ್ನೂ ನಾನೇ ಇರುವೆಗಳಂತೆ ಒರೆಸಿ ಹಾಕಬಲ್ಲೆ. ರಾಮನ ಪ್ರತಿಜ್ಞೆಯನ್ನು ನಡೆಸಿಕೊಡುವುದಕ್ಕಾಗಿ ನಾನು ಹಾಗೆ ಮಾಡುತ್ತಿಲ್ಲ. ಆದರಿಂದ ಭಯವನ್ನು ಬಿಟ್ಟುಬಿಡು.

ಸೀತೆ ಕಪಿಯ ಮಾತನ್ನು ಕೇಳಿ ಆನಂದದ ಬಾಷ್ಪ ಸುರಿಸಿದಳು. ಆದರೂ ಭಯದಿಂದ ನುಡಿದಳು -

**ಸೀತೆ:-** ನನ್ನ ವಿರಹಶೋಕದ ಸಮುದ್ರದಲ್ಲಿ ಮುಳುಗಿದ ನನ್ನ ರಾಮನಿನ್ನೂ ಬದುಕಿರುವನೆ? ನನ್ನ ನಾಥ ಕ್ಷೇಮದಿಂದಿರುವನೆ? ಸಮುದ್ರದ ಆಚೆ ದಡದಲ್ಲಿ ಶ್ರೀರಾಮ ನಿಂತಿರುವುದು ನಿಜವೆ? ಅವನು ಸನ್ನದ್ಧನಾಗಿರುವನೆ? ಶೋಕದಿಂದ ಅಶಕ್ತನಾಗಿಲ್ಲವೆ? ಪತಿಯ ದುಃಖಕ್ಕೆ ಕಾರಣಳಾದ ಪಾಪಿಯಾದ ನನ್ನನ್ನು

ನೆನೆಯುತ್ತಿರುವನೆ? ನನ್ನ ಸಲುವಾಗಿ ನನ್ನ ಸ್ವಾಮಿ ಅದೆಷ್ಟು ದುಃಖ ಹೊಂದಿದನೊ! ಹಿಂದೆ ಅವನು ತನ್ನ ಕೊರಳಲ್ಲಿ ಹಾರವನ್ನೂ ಹಾಕಿಕೊಳ್ಳುತ್ತಿರಲಿಲ್ಲ, ಅದು ನಮ್ಮಿಬ್ಬರ ಆಲಿಂಗನಕ್ಕೆ ನಡುವೆ ಅಡ್ಡಿಯಾಗದಿರಲಿ ಎಂದು. ಈಗ ನಮ್ಮಿಬ್ಬರ ನಡುವೆ ಶತಯೋಜನ ವಿಸ್ತೀರ್ಣವಾದ ಸಮುದ್ರವೆ ಇದೆ. ನಾನು ಕರುಣಾಸಾಗರನಾದ ಶ್ರೀರಾಮನನ್ನು ಕಾಣುವೆನೆ? ಅವನ ಪಾದಸೇವೆಯನ್ನು ಪುನಃ ಮಾಡುವೆನೆ? ನನಗೆ ಮಗನಂತಿರುವ ಲಕ್ಷ್ಮಣ ಬದುಕಿರುವನೆ? ನನ್ನನ್ನು ಕಾಣದೆ ಶೋಕಸಾಗರದಲ್ಲಿ ಮುಳುಗಿ ದರ್ಪ ಕಳೆದುಕೊಂಡ ದೇವಸಮಾನ ವೀರಶ್ರೇಷ್ಠನಾದ ಆಲಕ್ಷ್ಮಣ ನಿಜವಾಗಿ ಸನ್ನದ್ಧನಾಗಿರುವನೆ? ನಾನು ಅವನನ್ನು ನಿಜವಾಗಿ ಕಾಣುವೆನೆ?

ಹೀಗೆ ಕೇಳಿದ ಸೀತೆಗೆ ಒಳ್ಳೆಯ ಪ್ರತ್ಯುತ್ತರ ನೀಡಿ ಹನುಮಂತ ಲಂಕೆಯನ್ನು ಅನಾಯಾಸವಾಗಿ ಸುಟ್ಟು ಬೂದಿ ಮಾಡಿದ. ಪುನಃ ಸೀತೆಯನ್ನು ಸಂತೈಸಿ ವೇಗದಿಂದ ರಾಮನ ಬಳಿಗೆ ಸಾರಿದ. ಮಾತೆಯ ಎಲ್ಲ ವೃತ್ತಾಂತವನ್ನೂ ಹೇಳಿದ. ಆ ಶುಭವಾರ್ತೆಯನ್ನು ಕೇಳಿ ರಾಮ ಆನಂದಬಾಷ್ಪ ಸುರಿಸಿದ. ಲಕ್ಷ್ಮಣ ಸುಗ್ರೀವರೂ ಗಟ್ಟಿಯಾಗಿ ಅತ್ತರು. ಮಹಾಬಲ ಪರಾಕ್ರಮಿಗಳಾದ ಕಪಿಗಳೂ ಅತ್ತರು. ಬಳಿಕ ಶ್ರೀರಾಮ ಸಮುದ್ರಕ್ಕೆ ಸೇತುವೆ ಕಟ್ಟಿ ಲಕ್ಷ್ಮಣನಿಂದಲೂ ಸೈನ್ಯದಿಂದಲೂ ಕೂಡಿ ಬೇಗನೆ ಲಂಕೆಯನ್ನು ಪ್ರವೇಶಿಸಿದ. ರಾವಣನೊಡನೆ ಯುದ್ಧ ಮಾಡಿ ಅವನನ್ನು ಬಂಧು ಸಮೇತವಾಗಿ ಕೊಂದು ಸೀತೆಯನ್ನು ಬಿಡಿಸಿ ತಂದ. ಪುಷ್ಪಕವಿಮಾನದಲ್ಲಿ ಅಯೋಧ್ಯೆಗೆ ತಂದು ಅವಳನ್ನು ಅಪ್ಪಿಕೊಂಡು ರಮಿಸಿದ. ಒಡನೆ ಸೀತಾ ರಾಮರು ಅಂದಿನವರೆಗೆ ಅನುಭವಿಸಿದ್ದ ವಿರಹ ಶೋಕವನ್ನೆಲ್ಲ ಮರೆತರು. ರಾಮ ಸಪ್ತದ್ವೀಪಾಧಿಪತಿಯಾದ. ಅವನ ರಾಜ್ಯದಲ್ಲಿ ಎಲ್ಲಿಯೂ ಆಧಿವ್ಯಾಧಿಗಳ ಪೀಡೆಯೆ ಇರಲಿಲ್ಲ.

ಶ್ರೀರಾಮನಿಗೆ ಕುಶಲವರು ಮಕ್ಕಳಾಗಿ ಜನಿಸಿದರು. ಅವರ ಮಕ್ಕಳು ಮೊಮ್ಮಕ್ಕಳಿಂದ ಸೂರ್ಯವಂಶ ಬೆಳೆಯಿತು. ಇದು ಶ್ರೀರಾಮನ ಚರಿತ್ರೆ ಸಂಕ್ಷೇಪವಾಗಿ. ಇದು ಶುಭಕರ, ಸುಖದಾಯಕ, ಭವಸಾಗರದ ಆಚೆ ದಡ ಸೇರಿಸಿ ಮೋಕ್ಷ ನೀಡುವಂತಹುದು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಶ್ರೀರಾಮಚರಿತವೆಂಬ ಅರವತ್ತೆರಡನೆ ಅಧ್ಯಾಯ ಮುಗಿಯಿತು.*

—○—

## ಕಂಸನ ದುಃಸ್ವಪ್ನ

**ಅಧ್ಯಾಯ - ೬೩**

**ನಾರಾಯಣ:-** ಕಂಸ ದುಃಸ್ವಪ್ನ ಕಂಡು ಉದ್ವಿಗ್ನನಾಗಿ ಭಯದಿಂದ ಆಹಾರವನ್ನು ಪರಿತ್ಯಜಿಸಿ ಪುತ್ರ ಮಿತ್ರ ಬಂಧು ಬಾಂಧವರನ್ನೂ ಪುರೋಹಿತನನ್ನೂ ಕರೆಸಿಕೊಂಡು ಸಭೆಯಲ್ಲಿ ದುಃಖದಿಂದ ನುಡಿದ.

**ಕಂಸ:-** ನಾನು ರಾತ್ರಿಯಲ್ಲಿ ಕಂಡ ದುಃಸ್ವಪ್ನ ಭಯಂಕರ. ನೀವೆಲ್ಲ ಬಾಂಧವರೂ ಪುರೋಹಿತರೂ ಕೇಳಿ, ಹೇಳುತ್ತೇನೆ. ಒಬ್ಬಳು ಭಯಂಕರ ರೂಪಿನ ಅತಿ ವೃದ್ಧೆ, ಕಪ್ಪು ಬಣ್ಣದ ಮೈಯವಳು. ಮಲಿನವಾದ ಕೆಂಪು ಬಟ್ಟೆ ಉಟ್ಟಿದ್ದಾಳೆ. ಕೆಂಪು ಚಂದನ ಬಳಿದುಕೊಂಡಿದ್ದಾಳೆ. ಕೆಂಪು ಹೂಗಳ ಮಾಲೆ ತೊಟ್ಟಿದ್ದಾಳೆ. ನಾಲಿಗೆ ಹೊರಗೆ ಚಾಚಿ ಅಟ್ಟಹಾಸ ಮಾಡುತ್ತಿದ್ದಾಳೆ. ತಲೆ ಕೂದಲು ಕೆದರಿಕೊಂಡಿದ್ದಾಳೆ, ಮೂಗು ಕುಯ್ದಿದೆ. ವಿಧವೆ, ಮಹಾಶೂದ್ರಿ, ಕುಣಿಯುತ್ತ ಬಂದು ನನ್ನನ್ನು ಆಲಿಂಗಿಸಲು ಬಯಸುತ್ತಾಳೆ. ನನ್ನ ಕೆನ್ನೆಗೂ ಎದೆಗೂ ಬೊಟ್ಟನ್ನು ಇಡುತ್ತಾಳೆ. ಅದೇ ರೀತಿ ಮಲಿನವಸ್ತ್ರ ಉಟ್ಟು ಒರಟು ತಲೆಕೂದಲಿನ ವಿಕೃತಾಕಾರದ ಮ್ಲೇಚ್ಛನೊಬ್ಬ ಬಂದು ಛಿನ್ನ ಭಿನ್ನವಾಗಿ ಹರಿದ ಜಟೆಯನ್ನು ನನ್ನ ತಲೆಯಲ್ಲಿ ಇಡುತ್ತಾನೆ. ಒಬ್ಬಳು ದಿವ್ಯಸ್ತ್ರೀ ಪತಿಪುತ್ರವತಿ ಬಲು ಕೋಪಗೊಂಡು ನನ್ನನ್ನು ಶಪಿಸುತ್ತ ಪೂರ್ಣಕುಂಭವನ್ನು ಒಡೆಯುತ್ತಾಳೆ. ಒಬ್ಬ ಬ್ರಾಹ್ಮಣ ಮಹಾ ಕೋಪದಿಂದ ನನ್ನನ್ನು ಶಪಿಸುತ್ತ ರಕ್ತಚಂದನಯುಕ್ತವಾದ ಕೆಂಪು ಹೂಮಾಲೆ ತೊಡಿಸುತ್ತಾನೆ. ಒಂದು ಕ್ಷಣ ನಗರದಲ್ಲೆಲ್ಲ ಉರಿವ ಕೆಂಡದ ಮಳೆ. ಇನ್ನೊಂದು ಕ್ಷಣ ಭಸ್ಮದ ಮಳೆ. ಇನ್ನೊಂದು ಕ್ಷಣ ನೆತ್ತರಿನ ಸುರಿಮಳೆ. ಕೋತಿ, ಕಾಗೆ, ನಾಯಿ, ಕರಡಿ, ಹಂದಿ, ಕತ್ತೆಗಳು ವಿಕಟಾಕಾರದಿಂದ ಬಂದು ಕರ್ಕಶ ಶಬ್ದ ಮಾಡುತ್ತವೆ. ಒಣಕಟ್ಟಿಗೆ ರಾಶಿ, ಕಾಡಿಗೆ, ಉಗುರಿಲ್ಲದ ಕಪಿಗಳು ಕಂಡುಬರುತ್ತವೆ. ಪೀತಾಂಬರ ಉಟ್ಟು ಬಿಳಿ ಗಂಧ ಬಳಿದುಕೊಂಡು ಜಾಜಿ ಹೂಮಾಲೆ ರತ್ನಾಭರಣಗಳನ್ನು ತೊಟ್ಟು ಕ್ರೀಡಾಕಮಲವನ್ನು ಹಿಡಿದ ಕುಂಕುಮದ ಬೊಟ್ಟಿಂದ ಶೋಭಿಸುವ ಪತಿವ್ರತಾ ಸ್ತ್ರೀ ಕೋಪಗೊಂಡು ಶಪಿಸುತ್ತ ನನ್ನ ಅರಮನೆಯಿಂದ ಹೊರಟುಹೋಗುತ್ತಾಳೆ. ತಲೆಕೂದಲು ಕೆದರಿಕೊಂಡು ಕೈಯಲ್ಲಿ . ಹಗ್ಗ ಹಿಡಿದುಕೊಂಡ ಮಹಾಒರಟಾದ ಭಯಂಕರ ಮನುಷ್ಯರು ನನ್ನ ನಗರವನ್ನು ಪ್ರವೇಶಿಸುತ್ತಾರೆ. ತಲೆಕೆದರಿಕೊಂಡು ಕುಣಿವ ವಿಕೃತಾಕಾರದ ನಗ್ನಸ್ತ್ರೀಯರು ಪ್ರತಿ ಮನೆಗಳಲ್ಲಿಯೂ ಕಂಡು ಬರುತ್ತಾರೆ. ಮೂಗಿಲ್ಲದ ದಿಗಂಬರಳಾದ ವಿಧವೆಯಾದ ಮಹಾಭಯಂಕರಿ ಮಹಾಶೂದ್ರಿ, ನನಗೆ ತೈಲಾಭ್ಯಂಗ ಮಾಡುತ್ತಾಳೆ. ಇದ್ದಿಲು ಬೂದಿಗಳನ್ನು ಹೊತ್ತು ದಿಗಂಬರರಾಗಿ ನಗುವ ಮನುಷ್ಯರು ಕಾಣಿಸಿಕೊಳ್ಳುತ್ತಾರೆ. ವಿವಾಹ ನೃತ್ಯಗೀತಾದಿಗಳನ್ನೂ ನಡೆಸುವ ಕೆಂಪು ಕೂದಲಿನ ಕೆಂಪು ಬಟ್ಟೆ ಉಟ್ಟ ಮನುಷ್ಯರು ಕಾಣಿಸಿಕೊಳ್ಳುತ್ತಾರೆ. ಒಬ್ಬ ಮನುಷ್ಯ ಭಯಂಕರಾಕಾರದವನು ನಗ್ನನಾಗಿ

ರಕ್ತವನ್ನು ಕಾರುತ್ತ ಕುಣಿಯುತ್ತಾನೆ ಓಡುತ್ತಾನೆ ಮಲಗುತ್ತಾನೆ ನಗುತ್ತಾನೆ. ಏಕಕಾಲದಲ್ಲಿ ಆಕಾಶದಲ್ಲಿ ಪೂರ್ಣವಾದ ಸೂರ್ಯಚಂದ್ರರ ಗ್ರಹಣ ಗೋಚರಿಸುತ್ತದೆ. ಉಲ್ಕಾಪಾತ ಧೂಮಕೇತು ಭೂಕಂಪ ರಾಷ್ಟ್ರವಿಪ್ಲವ ಝಂಝಾವಾತ ಮಹೋತ್ಪಾತ ಗಾಳಿಯಿಂದ ಕೊಂಬೆಗಳನ್ನು ಮುರಿದುಕೊಂಡು ಸುತ್ತು ತಿರುಗುವ ಮರಗಳು ಭೂಮಿಗೆ ಉರುಳುತ್ತಿರುವ ಬೆಟ್ಟಗಳು ಕಂಡು ಬರುತ್ತವೆ. ತಲೆಯಿಲ್ಲದ ಮನುಷ್ಯ ನಗ್ನನಾಗಿ ರುಂಡಮಾಲೆಧರಿಸಿ ಕುಣಿವ ಘೋರದೃಶ್ಯ ಮನೆಮನೆಗಳಲ್ಲಿ ಕಂಡು ಬರುತ್ತವೆ. ಎಲ್ಲ ಮನೆಗಳೂ ಸುಟ್ಟು ಇದ್ದಿಲು ಬೂದಿಗಳಿಂದ ತುಂಬಿರುತ್ತವೆ. ಎಲ್ಲೆಡೆ ಹಾಹಾಕಾರವನ್ನೆ ಎಲ್ಲರೂ ಮಾಡುತ್ತಿದ್ದಾರೆ. ಇವನ್ನೆಲ್ಲ ನಾನು ನಿನ್ನೆ ರಾತ್ರಿ ಸ್ವಪ್ನದಲ್ಲಿ ಕಂಡೆ.

ಹೀಗೆ ಹೇಳಿ ಕಂಸ ಸುಮ್ಮನಾದ. ಅದನ್ನು ಕೇಳಿದ ಬಂಧುಗಳು ಏನೂ ಹೇಳದೆ ನಿಟ್ಟುಸಿರು ಬಿಟ್ಟರು. ಪುರೋಹಿತನಾದ ಸತ್ಯಕನೂ ಕಂಸನ ತಂದೆತಾಯಿಯರೂ ಹೆಂಡಂದಿರೂ ಕಂಸನ ವಿನಾಶಕಾಲ ವೇಗವಾಗಿ ಸಮೀಪಿಸುತ್ತಿದೆ ಎಂದು ತಿಳಿದರು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಕಂಸ ದುಃಸ್ವಪ್ನಕಥನವೆಂಬ ಅರವತ್ತಮೂರನೆ ಅಧ್ಯಾಯ ಮುಗಿಯಿತು*



## ಕಂಸನ ಧನುರ್ಯಾಗ

**ಅಧ್ಯಾಯ - ೬೪**

**ನಾರಾಯಣ:-** ಶುಕ್ರಾಚಾರ್ಯರ ಶಿಷ್ಯನಾದ ಬುದ್ಧಿಶಾಲಿಯಾದ ಸತ್ಯಕನೆಂಬ ಪುರೋಹಿತ ಎಲ್ಲವನ್ನೂ ವಿಚಾರಮಾಡಿ ಕಂಸನಿಗೆ ಹಿತವನ್ನು ಬೋಧಿಸಿದ.

**ಸತ್ಯಕ:-** ರಾಜನೆ, ಭಯಪಡಬೇಡ. ನಾನಿರುವಾಗ ನಿನಗೆ ಏತರ ಭಯ? ಸರ್ವ ಅರಿಷ್ಟಗಳ ಪರಿಹಾರಕ್ಕೆ ಒಂದು ರುದ್ರಯಾಗ ಮಾಡು. ಇದು ಧನುರ್ಯಾಗ. ಬಹಳ ಅನ್ನದಾನ ಬಹಳ ದಕ್ಷಿಣೆ ಮಾಡಬೇಕಾಗುತ್ತದೆ. ದುಃಸ್ವಪ್ನ ಪರಿಹಾರಕರ, ಶತ್ರುಭಯ ನಾಶಕ, ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕವೆಂಬ ಮೂರು ಬಗೆಯ ಮಹಾ ಉತ್ಪಾತಗಳನ್ನು ಪರಿಹರಿಸಿ ಸಂಪತ್ತನ್ನು ನೀಡುವುದು. ಯಾಗ ಸಮಾಪ್ತಿಯಾಗುವಾಗ ಶಿವ ಬಂದು ಜರಾಮರಣ ಪರಿಹಾರದ ವರ ನೀಡುತ್ತಾನೆ, ಸರ್ವಸಂಪತ್ತುಗಳನ್ನು ನೀಡುತ್ತಾನೆ. ಈ ಯಾಗವನ್ನು ಹಿಂದೆ ಬಾಣ ನಂದಿ ಪರಶುರಾಮ ಭಲ್ಲ ಇವರೆಲ್ಲರೂ ಮಾಡಿದ್ದಾರೆ. ಈ ಧನುಸ್ಸನ್ನು ಶಿವ ನಂದಿಗೆ ನೀಡಿದ. ನಂದಿ ಯಾಗ ಮಾಡಿ ಸಿದ್ಧಿಪಡೆದು ಬಾಣನಿಗೆ ನೀಡಿದ. ಬಾಣನೂ ಯಾಗ ಮಾಡಿ ಸಿದ್ಧಿ ಹೊಂದಿ ಪುಷ್ಕರದಲ್ಲಿ ಪರಶುರಾಮನಿಗೆ ನೀಡಿದ. ಪರಶುರಾಮ ನಿನಗೆ ನೀಡಿದ. ಸಾವಿರ ಮೊಳ ವಿಸ್ತಾರವಾಗಿದ್ದು ಹತ್ತು ಮೊಳ ದಪ್ಪವಾಗಿರುವ ಈ ಧನುಸ್ಸು ಶಿವನ ಇಚ್ಛೆಯಿಂದ ನಿರ್ಮಿತವಾಗಿದ್ದು ದೇವ ನಾರಾಯಣನಿಗೆ ಹೊರತು ಇನ್ನಾರಿಗೂ ಮುರಿಯಲಾಗದುದು. ಯಾಗದಲ್ಲಿ ಈ ಧನುಸ್ಸನ್ನು ಪೂಜಿಸಬೇಕು. ರಾಜನೆ, ಬೇಗನೆ ಎಲ್ಲರನ್ನೂ ಯಾಗಕ್ಕೆ

ಆಮಂತ್ರಿಸು. ಈ ಯಾಗದಲ್ಲಿ ಧನುರ್ಭಂಗವಾದರೆ ಯಜಮಾನನಿಗೆ ಸಾವು ನಿಶ್ಚಿತ. ಯಾಗ ನಿಂತು ಹೋಗುವುದು. ಕರ್ಮ ಪೂರ್ತಿಯಾಗದಿದ್ದರೆ ಅದರಿಂದ ಫಲ ಸಿಗುವುದು ಶಕ್ಯವಿಲ್ಲ. ಈಧನುಸ್ಸಿನ ಮೂಲದಲ್ಲಿ ಬ್ರಹ್ಮ, ನಡುವೆ ನಾರಾಯಣ, ತುದಿಯಲ್ಲಿ ಸ್ವಯಂ ಶಿವನೆ ಇರುತ್ತಾನೆ. ಅದರಿಂದ ಗ್ರೀಷ್ಮಕಾಲದ ಮಧ್ಯಾಹ್ನ ಸೂರ್ಯನಂತೆ ಬೆಳಗುತ್ತದೆ. ಮಹಾಬಲಿಷ್ಠನಾದ ಶೇಷನಾಗಲಿ ಸೂರ್ಯನಾಗಲಿ ಷಣ್ಮುಖನಾಗಲಿ ಈಬಿಲ್ಲನ್ನು ಬಗ್ಗಿಸಲಾರರು. ಇನ್ನು ಉಳಿದವರ ಪಾಡೇನು? ಶಿವ ಹಿಂದೆ ಇದೇ ಬಿಲ್ಲಿನಿಂದ ತ್ರಿಪುರರನ್ನು ಸಂಹರಿಸಿದ. ಅದರಿಂದ ನಿರ್ಭಯವಾಗಿ ಮಂಗಳ ಮಹೋತ್ಸವವನ್ನು ನಡೆಸು. ಸತ್ಯಕನ ಮಾತನ್ನು ಕೇಳಿ ಕಂಸ ನುಡಿದ.

**ಕಂಸ:-** ವಸುದೇವನ ಪತ್ನಿಯಲ್ಲಿ ನನ್ನ ಹಂತಕ ಕುಲನಾಶಕ ಕೃಷ್ಣ ಜನಿಸಿದ. ನಂದಗೋಪನ ಮನೆಯಲ್ಲಿ ಅವನು ಬೆಳೆಯುತ್ತಿದ್ದಾನೆ. ಶೂರರಾದ ನನ್ನ ಬಂಧುವರ್ಗದವರನ್ನೂ ಮಂತ್ರಿಗಳನ್ನೂ ಸೋದರಿಯಾದ ಪೂತನೆಯನ್ನೂ ಕೊಂದಿದ್ದಾನೆ. ಒಂದು ಕೈಯಿಂದ ಗೋವರ್ಧನಗಿರಿಯನ್ನೆತ್ತಿ ಇಂದ್ರನನ್ನು ಪರಾಭವಗೊಳಿಸಿದ್ದಾನೆ. ಬ್ರಹ್ಮನಿಗೆ ಬ್ರಹ್ಮರೂಪವಾದ ಚರಾಚರವನ್ನು ತೋರಿಸಿದ್ದಾನೆ. ಕೃತ್ರಿಮವಾದ ದನಕರುಗಳನ್ನು ನಿರ್ಮಿಸಿದ್ದಾನೆ. ಇಂಥ ಬಲಿಷ್ಠನಾದ ಕೃಷ್ಣನನ್ನು ವಧಿಸಲು ಉಪಾಯ ಹೇಳು. ಅವನ ಹೊರತಾಗಿ ಇನ್ನೊಬ್ಬ ಶತ್ರು ನನಗೆ ಭೂಲೋಕದಲ್ಲಿಯೆ ಇಲ್ಲ. ಸ್ವರ್ಗ ಪಾತಾಳಗಳಲ್ಲಿಯೂ ಇಲ್ಲ. ಎಲ್ಲೆಡೆ ಇರುವ ರಾಜರುಗಳು ಒಳ್ಳೆಯವರು, ನನಗೆ ಬಂಧುಗಳು. ಬ್ರಹ್ಮರುದ್ರರು ಮಹಾತಪಸ್ವಿಗಳು. ಸರ್ವಾತ್ಮನಾದ ವಿಷ್ಣುವೂ ಎಲ್ಲರಲ್ಲಿಯೂ ಸಮದರ್ಶಿಯಾಗಿದ್ದಾನೆ. ಅದರಿಂದ ನಂದಪುತ್ರನೊಬ್ಬನನ್ನು ಕೊಂದರೆ ನಾನು ಮೂರು ಲೋಕಗಳಲ್ಲಿಯೂ ಪೂಜ್ಯನೆನಿಸುತ್ತೇನೆ. ಸಪ್ತದ್ವೀಪಾಧಿಪತಿ ಮಹಾಸಾರ್ವಭೌಮನಾಗುತ್ತೇನೆ. ಸ್ವರ್ಗವನ್ನು ಆಕ್ರಮಿಸಿ, ದೈತ್ಯರಿಗೆ ಸೋಲುವ ದುರ್ಬಲನಾದ ಇಂದ್ರನನ್ನು ಗೆದ್ದು ನಾನೆ ಇಂದ್ರನಾಗುತ್ತೇನೆ. ಹಾಗೇ ಸೂರ್ಯ ಚಂದ್ರ ವಾಯು ಕುಬೇರ ವರುಣ ಯಮರನ್ನೂ ಗೆಲ್ಲುತ್ತೇನೆ. ಅದರಿಂದ ಬೇಗನೆ ನಂದಗೋಕುಲಕ್ಕೆ ಹೋಗಿ ಆ ಕೃಷ್ಣನನ್ನೂ ಅವನ ಅಣ್ಣನಾದ ಬಲರಾಮನನ್ನೂ ಕರೆದು ತಾ. ಕಂಸನ ಮಾತನ್ನು ಕೇಳಿ ಸತ್ಯಕ ಸಮಯೋಚಿತವಾಗಿ ಸಲಹೆ ನೀಡಿದ.

**ಸತ್ಯಕ:-** ರಾಜನೆ ಈ ಕೆಲಸಕ್ಕೆ ಅಕ್ರೂರನನ್ನಾಗಲಿ ಉದ್ಧವನನ್ನಾಗಲಿ, ವಸುದೇವನನ್ನಾಗಲಿ ಕಳಿಸು.

ಸತ್ಯಕನ ಮಾತನ್ನು ಕೇಳಿ ಕಂಸ ಸ್ವರ್ಣಸಿಂಹಾಸನದಲ್ಲಿ ಕುಳಿತಿದ್ದ ವಸುದೇವನಿಗೆ ಆಜ್ಞೆ ಮಾಡಿದ.

**ಕಂಸ:-** ವಸುದೇವ, ನೀನು ನೀತಿಶಾಸ್ತ್ರಗಳ ತತ್ವವನ್ನು ಬಲ್ಲವ, ಉಪಾಯ ವಿಶಾರದ. ನೀನು ನಂದಗೋಕುಲಕ್ಕೆ ಹೋಗಿ ವೃಷಭಾನ ನಂದ ಬಲರಾಮ ಕೃಷ್ಣ ಮತ್ತು ಎಲ್ಲ ಗೋಕುಲವಾಸಿಗಳನ್ನೂ ಬೇಗನೆ ಯಜ್ಞಕ್ಕೆ ಕರೆದು ತಾ. ಆಮಂತ್ರಣ ಪತ್ರಿಕೆಗಳನ್ನು ಹಿಡಿದು ದೂತರು ನಾಲ್ಕೂ ದಿಕ್ಕುಗಳಿಗೆ ಹೋಗಿ ಎಲ್ಲ ರಾಜರುಗಳನ್ನೂ ಮುನಿಗಳನ್ನೂ ಆಮಂತ್ರಿಸಲಿ.

ಕಂಸನ ಮಾತನ್ನು ಕೇಳಿ ವಸುದೇವ ಹೃದಯದಲ್ಲಿ ದುಃಖಿತನಾಗಿ ಒಣಗಿದ ಗಂಟಲು ತುಟಿ ತಾಲುಗಳಿಂದ ನುಡಿದ -

**ವಸುದೇವ:-** ರಾಜನೆ, ನೀನು ಆಜ್ಞೆ ಮಾಡಿದರೆ ನಾನು ನಂದಗೋಕುಲಕ್ಕೆ ಹೋಗಿ ನಂದನಿಗಾಗಲಿ ಕೃಷ್ಣನಿಗಾಗಲಿ ನಿನ್ನ ಆಮಂತ್ರಣವನ್ನು ತಿಳಿಸುವುದು ಯುಕ್ತವೆ. ಆದರೆ ಕೃಷ್ಣನಿಲ್ಲಿಗೆ ಬಂದರೆ ಅವನಿಗೂ ನಿನಗೂ ವಿರೋಧ ಉಂಟಾಗುವುದು ನಿಶ್ಚಿತ. ಅದರಿಂದ ನನಗಾಗಲಿ ಕೃಷ್ಣನಿಗಾಗಲಿ ನಿನಗಾಗಲಿ ಯಾರಿಗೂ ಒಳ್ಳೆಯದಾಗುವುದಿಲ್ಲ. ತಂದೆ ಮಗನನ್ನು ಕಂಸನ ಕೈಯಲ್ಲಿ ಕೊಲ್ಲಿಸಿದನೆಂದಾಗಲಿ ಮಗನ ಕೈಯಿಂದ ತಂದೆ ಕಂಸನನ್ನು ಕೊಲ್ಲಿಸಿದನೆಂದಾಗಲಿ ಅಪಕೀರ್ತಿ ನನಗೆ ಬರುವುದು. ಏಕೆಂದರೆ ನಿಮ್ಮಿಬ್ಬರಲ್ಲಿ ಯಾರಾದರೊಬ್ಬರು ಮಡಿಯಲೇಬೇಕು. ಶೂರರಾದ ಸೈನಿಕರೂ ಯುದ್ಧದಲ್ಲಿ ಹತರಾಗುವರು. ರಕ್ತಪಾತವಿಲ್ಲದೆ ಯುದ್ಧ ನಡೆಯುವುದೇ ಇಲ್ಲ.

ವಸುದೇವನ ಮಾತನ್ನು ಕೇಳಿ ಕಂಸ ಕೆಂಗಣ್ಣಿಂದ ನೋಡುತ್ತ ಖಡ್ಗ ಹಿರಿದು ವಸುದೇವನನ್ನು ಕೊಲ್ಲಲು ಬಂದ. ತತ್‌ಕ್ಷಣವೆ ಉಗ್ರಸೇನ ಹಾಹಾಕಾರಮಾಡಿ ಕಂಸನನ್ನು ತಡೆದ. ವಸುದೇವ ಕೋಪದಿಂದ ಆಸನ ಬಿಟ್ಟೆದ್ದು ತನ್ನ ಮನೆಗೆ ಹೊರಟು ಹೋದ.

ಕಂಸ ನಂದಗೋಕುಲಕ್ಕೆ ಅಕ್ರೂರನನ್ನು ಕಳಿಸಿದ. ಎಲ್ಲ ದಿಕ್ಕುಗಳಿಗೂ ದೂತರನ್ನು ಕಳಿಸಿದ. ಎಲ್ಲ ಮುನಿಗಳೂ ರಾಜರುಗಳೂ ಪರಿವಾರ ಸಮೇತವಾಗಿ ಬಂದರು. ದಿಕ್ಪಾಲಕರಾದ ದೇವತೆಗಳೂ ತಪಸ್ವಿಗಳಾದ ಬ್ರಾಹ್ಮಣರೂ ಬಂದರು. ಸನಕ ಸನಂದನ ವೋಢು ಪಂಚಶಿಖ ಸನತ್ಕುಮಾರ ಕಪಿಲ ಆಸುರಿ ಪೈಲ ಸುಮಂತು ಸನಾತನ ಪುಲಹ ಪುಲಸ್ತ್ಯ ಭೃಗು ಕ್ರತು ಅಂಗಿರ ಮರೀಚಿ ಕಶ್ಯಪ ದಕ್ಷ ಅತ್ರಿ ಚ್ಯವನ ಭರದ್ವಾಜ ವ್ಯಾಸ ಗೌತಮ ಪರಾಶರ ಪ್ರಚೇತ ವಸಿಷ್ಠ ಸಂವರ್ತ ಬೃಹಸ್ಪತಿ ಕಾತ್ಯಾಯನ ಯಾಜ್ಞವಲ್ಕ್ಯ ಸೌಭರಿ ಪರ್ವತ ದೇವಲ ಜೈಗೀಷವ್ಯ ಜೈಮಿನಿ ವಿಶ್ವಾಮಿತ್ರ ಸುತಪ ಪಿಪ್ಪಲ ಶಾಕಟಾಯನ ಜಾಬಾಲಿ ಜಾಂಗಲಿ ಪಿಶಲಿ ಶಿಲಾಲಿಕ ಆಸ್ತೀಕ ಜರತ್ಕಾರು ಕಲ್ಯಾಣಮಿತ್ರ ದುರ್ವಾಸ ವಾಮದೇವ ಋಷ್ಯಶೃಂಗ ವಿಭಾಂಡಕ ಪಥಿ ಕವಿ ಕಣಾದ ಕೌಶಿಕ ಪಾಣಿನಿ ಕೌತ್ಸ ಅಘಮರ್ಷಣ ವಾಲ್ಮೀಕಿ ಲೋಮಹರ್ಷಣ, ಮಾರ್ಕಂಡೇಯ ಮೃಕಂಡು ಪರಶುರಾಮ ಸಾಂಕೃತಿ ಅಗಸ್ತ್ಯ ವಾಂತ ಮತ್ತು ಇನ್ನೂ ಅನೇಕ ಮುನಿಗಳು ಶಿಷ್ಯರಿಂದಲೂ ಪುತ್ರರಿಂದಲೂ ಸಹಿತರಾಗಿ ಬಂದರು. ಜರಾಸಂಧ ದಂತವಕ್ರ ದಾಂಭಿಕ ಶಿಶುಪಾಲ ಭೀಷ್ಮಕ ಭಗದತ್ತ ಮುದ್ಗಲ ಧಾರ್ತರಾಷ್ಟ್ರ ಧೂಮಕೇಶ ಧೂಮ್ರಕೇತು ಶಂಬರ ಶಲ್ಯ ಸತ್ರಾಜಿತ ಶಂಕು ಭೀಷ್ಮ ದ್ರೋಣ ಕೃಪ ಅಶ್ವತ್ಥಾಮ ಭೂರಿಶ್ರವ ಸಾಲ್ವ ಕೈಕಯ ಕೌಶಲ ಮುಂತಾದ ಮಹಾ ಬಲಿಷ್ಠರಾದ ರಾಜರುಗಳೂ ಬಂದರು. ಎಲ್ಲರನ್ನೂ ಕಂಸ ಯಥೋಚಿತವಾಗಿ ಇದಿರುಗೊಂಡು ಸತ್ಕರಿಸಿದ. ಸತ್ಕಕ ಸುಮುಹೂರ್ತದಲ್ಲಿ ಯಜ್ಞವನ್ನು ಪ್ರಾರಂಭಿಸಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಕಂಸಯಜ್ಞಕಥನವೆಂಬ ಅರವತ್ತನಾಲ್ಕನೆ ಅಧ್ಯಾಯ ಮುಗಿಯಿತು.*

—o—

## ಅಕ್ರೂರನ ಹರ್ಷ

## ಅಧ್ಯಾಯ - ೬೫

**ನಾರಾಯಣ:-** ಕಂಸನ ಮಾತನ್ನು ಕೇಳಿ ಅಕ್ರೂರ ಆನಂದದಿಂದ ಉದ್ಧವನಿಗೆ ಹೇಳಿದ.

**ಅಕ್ರೂರ:-** ನನಗೆ ಇಂದಿನ ಪ್ರಭಾತವೆ ಸುಪ್ರಭಾತ. ಇಂದಿನ ದಿನವೆ ಶುಭದಿನ. ಗುರು ಬ್ರಾಹ್ಮಣ ದೇವತೆಗಳ ಅನುಗ್ರಹ ನನ್ನ ಮೇಲಾಯಿತು. ಕೋಟಿ ಜನ್ಮಗಳಲ್ಲಿ ಸಂಪಾದಿಸಿದ ನನ್ನ ಪುಣ್ಯ ಇಂದು ಫಲಿಸಿತು. ಕರ್ಮಬಂಧದಿಂದ ಬಿಡುಗಡೆಯಾಯಿತು. ಸಂಸಾರದ ಕಾರಾಗಾರದಿಂದ ಮುಕ್ತನಾಗಿ ಹರಿಸನ್ನಿಧಿಗೆ ಈಗ ನಡೆಯಬಲ್ಲೆ. ಕಂಸ ಕೋಪದಿಂದಲಾದರೂ ನನಗೆ ಉಪಕಾರ ಮಾಡಿದ. ದೇವನ ಕೋಪವೂ ವರಕ್ಕೆ ತುಲ್ಯವೆನ್ನುವುದು ಸುಳ್ಳಲ್ಲ.

ನಂದಗೋಕುಲದ ದೊರೆಯನ್ನು ಕರೆತರಲು ನಾನೀಗಲೆ ಹೊರಡುತ್ತೇನೆ. ಭುಕ್ತಿಮುಕ್ತಿದಾಯಕನಾದ ಪರಮ ಪೂಜ್ಯನಾದ ಕೃಷ್ಣನನ್ನು ಕಾಣುತ್ತೇನೆ. ಹೊಸ ಮೋಡದಂತೆ ಶ್ಯಾಮಲ, ನೀಲಕಮಲದಂಥ ಕಣ್ಣಿನವ, ಪೀತಾಂಬರ ಉಟ್ಟವ ಕೃಷ್ಣ. ಅವನು ಆಟವಾಡಿ ಮೈಯೆಲ್ಲ ಮಣ್ಣು ಮಾಡಿಕೊಂಡಿರಬಹುದು, ಅಥವಾ ಮಿಂದು ಶ್ರೀಗಂಧ ಲೇಪಿಸಿಕೊಂಡಿರಬಹುದು ಇಲ್ಲವೆ ಬೆಣ್ಣೆಕದ್ದು ಮೈಗೆ ಲೇಪಿಸಿಕೊಂಡಿರ ಬಹುದು. ಕೊಳಲೂದುತ್ತ ಹಸುಗಳನ್ನು ಕಾಯುತ್ತಿರಬಹುದು ಓಡಾಡುತ್ತಿರಬಹುದು ಇಲ್ಲವೆ ಮಲಗಿರಬಹುದು. ಅವನ ಪಾದಕಮಲವನ್ನು ಬ್ರಹ್ಮ ವಿಷ್ಣು ಶಿವಾದಿಗಳು ಧ್ಯಾನಿಸುವರು. ಅವನ ಅನಂತ ಗುಣಗಳನ್ನು ಅನಂತನೂ ಅರಿಯಲಾರ. ಅವನ ಪ್ರಭಾವವನ್ನು ದೇವತೆಗಳೂ ಅರಿಯರು. ಅವನ ಸ್ತೋತ್ರ ಮಾಡಲಾರದೆ ದೇವಿ ಸರಸ್ವತಿ ಭಯದಿಂದ ಜಡವಾದಳು. ಮಹಾಲಕ್ಷ್ಮಿ ದಾಸಿಯಾದಳು. ಗಂಗೆ ಅವನ ಪಾದಕಮಲದಿಂದ ಉದ್ಭವಿಸಿದಳು. ಅವಳೂ ಜನನ ಮರಣ ಜರೆ ವ್ಯಾಧಿಗಳನ್ನು ಕಳೆಯಬಲ್ಲಳು. ದರ್ಶನ ಸ್ಪರ್ಶನಗಳಿಂದ ಮಾನವರ ಪಾಪಗಳನ್ನು ಪರಿಹರಿಸುವಳು.

ಶ್ರೀಕೃಷ್ಣನ ಪಾದಕಮಲವನ್ನು ತ್ರಿಲೋಕಜನನಿಯಾದ ದುರ್ಗೆ ಧ್ಯಾನಿಸುವಳು. ರೋಮ ಕೂಪಗಳಲ್ಲಿ ಜಗತ್ತುಗಳನ್ನು ಧರಿಸಿದ ಮಹಾವಿಷ್ಣುವೂ ಈ ಕೃಷ್ಣನ ಹದಿನಾರನೆ ಒಂದು ಅಂಶ. ಇಂಥ ಕೃಷ್ಣನನ್ನು ಕಾಣಲು ನಾನು ಹೋಗುತ್ತೇನೆ. ಶ್ರೀಕೃಷ್ಣ ಸರ್ವಾಂತರಾತ್ಮ, ಸರ್ವಜ್ಞ, ಪ್ರಕೃತಿಗೆ ಅತೀತ. ಜ್ಯೋತಿರೂಪ ಪರಬ್ರಹ್ಮ ಭಕ್ತರಿಗೆ ಅನುಗ್ರಹ ಮಾಡಲು ರೂಪು ತಳೆದವ. ನಿರ್ಗುಣ ನಿರೀಹ ನಿರಾನಂದ ನಿರಾಶ್ರಯ ಪರಮಾನಂದ ಸ್ವೇಚ್ಛಾಮಯ ಸರ್ವಬೀಜ ಸರ್ವೋತ್ತಮ ಸನಾತನ. ಯೋಗಿಗಳು ಇವನನ್ನೆ ಸದಾ ಹಗಲು ರಾತ್ರಿ ಧ್ಯಾನಿಸುವರು. ಸಾವಿರ ಮನ್ವಂತರಗಳ ಕಾಲ ಬ್ರಹ್ಮ ಕೃಷ್ಣನ ನಾಭಿಕಮಲದಲ್ಲಿ ಕುಳಿತು ಕೃಷ್ಣನ ದರ್ಶನಕ್ಕಾಗಿ ನಿರಾಹಾರನಾಗಿ ಕೃಶೋದರನಾಗಿ ತಪಸ್ಸು ಮಾಡಿದರೂ ಕೃಷ್ಣನ ದರ್ಶನ ಲಭಿಸಲಿಲ್ಲ. ಬಳಿಕ 'ಇನ್ನೂ ತಪಸ್ಸು ಮಾಡು, ಆಗ ನಿನಗೆ ದರ್ಶನ ನೀಡುವೆನು' ಎಂದು ಕೃಷ್ಣ ಹೇಳಿದ್ದರಿಂದ

ತಿರುಗಿ ಅಷ್ಟು ದೀರ್ಘಕಾಲ ಬ್ರಹ್ಮ ತಪಸ್ಸು ಮಾಡಿ ಕೃಷ್ಣನ ದರ್ಶನ ಪಡೆದ, ವರವನ್ನೂ ಪಡೆದ. ಉದ್ಧವ, ನಾನೀಗ ಇಂಥ ಕೃಷ್ಣನ ದರ್ಶನವನ್ನು ಅನಾಯಾಸವಾಗಿ ಪಡೆಯುತ್ತಿದ್ದೇನೆ.

ಹಿಂದೆ ಶಿವ ಬ್ರಹ್ಮಕಲ್ಪದಷ್ಟು ಕಾಲ ಜ್ಯೋತಿರ್ಮಂಡಲ ಮಧ್ಯದಲ್ಲಿ ಗೋಲೋಕದಲ್ಲಿ ತಪಸ್ಸು ಮಾಡಿ ಕೃಷ್ಣನನ್ನು ಕಂಡ. ಸರ್ವತತ್ವವನ್ನೂ ತಿಳಿದು ಅವನ ನಿರ್ಮಲ ಪಾದಕಮಲಭಕ್ತಿಯನ್ನೂ ಪಡೆದ. ಭಕ್ತವತ್ಸಲನಾದ ಕೃಷ್ಣ ಭಕ್ತನಾದ ಶಿವನನ್ನು ತನಗೆ ಸಮಾನನನ್ನಾಗಿ ಮಾಡಿದ. ಇಂಥ ಪರಮಾತ್ಮನನ್ನು ಕಾಣುವೆನು. ಅನಂತನು ಸಾವಿರ ಮನ್ವಂತರಗಳವರೆಗೂ ನಿರಾಹಾರ ಕೃಶೋದರನಾಗಿದ್ದು ಭಕ್ತಿಯಿಂದ ತಪಸ್ಸು ಮಾಡಿದಾಗ ಕೃಷ್ಣ ಅವನಿಗೆ ತನ್ನಂತೆಯೆ ಸರ್ವಜ್ಞಾನ ನೀಡಿದ. ಧರ್ಮನೂ ಸಾವಿರ ಮನ್ವಂತರಗಳ ಕಾಲ ತಪಸ್ಸು ಮಾಡಿ ಎಲ್ಲ ಕರ್ಮಗಳಿಗೂ ಸಾಕ್ಷಿ ಎನಿಸಿದ. ಇಪ್ಪತ್ತೆಂಟು ಮನ್ವಂತರಗಳು ಬ್ರಹ್ಮನಿಗೆ ಒಂದು ದಿನ. ಈಗಣನೆಯಲ್ಲಿ ನೂರು ವರ್ಷ ಬ್ರಹ್ಮನ ಆಯುಷ್ಯ. ಇದೂ ಕೃಷ್ಣನಿಗೆ ಒಮ್ಮೆ ಕಣ್ಣರೆಪ್ಪೆ ಮುಚ್ಚಿ ತೆರೆಯುವಷ್ಟು ಕಾಲ. ನೆಲದಲ್ಲಿ ದೂಳಿನ ಕಣಗಳಿಗೆ ಲೆಕ್ಕವಿಲ್ಲದಿರುವಂತೆ ಈ ಬ್ರಹ್ಮರಿಗೂ ಲೆಕ್ಕವಿಲ್ಲ. ಹೀಗೆ ಪ್ರತಿ ಜಗತ್ತಿನಲ್ಲಿಯೂ ಬ್ರಹ್ಮ ವಿಷ್ಣು ಮಹೇಶ್ವರರು ಬೇರೆಬೇರೆಯೆ ಇದ್ದು ಎಲ್ಲರನ್ನೂ ಧರಿಸುವವ ಮಹಾವಿಷ್ಣು ಅವನೂ ಕೃಷ್ಣನಿಗೆ ಹದಿನಾರನೆ ಒಂದಂಶದಷ್ಟಿದ್ದಾನೆ. ಅವನನ್ನು ಲೀಲೆಯಿಂದ ಸೃಜಿಸಿ ಲಯ ಮಾಡುವವನು ಶ್ರೀಕೃಷ್ಣ. ಇಂಥ ಸರ್ವೇಶ್ವರನಾದ ಕೃಷ್ಣನನ್ನು ಕಾಣಲು ಹೋಗುತ್ತೇನೆ.

ಹೀಗೆ ಹೇಳಿ ಅಕ್ರೂರ ರೋಮಾಂಚಗೊಂಡು ಮೈಮರೆತು ಕಣ್ಣುಗಳಲ್ಲಿ ಆನಂದ ಬಾಷ್ಪ ತುಂಬಿಕೊಂಡು ಕೃಷ್ಣನ ಪಾದಕಮಲವನ್ನು ಧ್ಯಾನಿಸಿದ. ಉದ್ಧವ ಅವನನ್ನು ಆಲಿಂಗಿಸಿ ಪ್ರಶಂಸೆ ಮಾಡಿ ಮನೆಗೆ ತೆರಳಿದ. ಅಕ್ರೂರನೂ ತನ್ನ ಮನೆಗೆ ನಡೆದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಅಕ್ರೂರಹರ್ಷೋತ್ಕರ್ಷಕಥನವೆಂಬ ಅರವತ್ತೈದನೆ ಅಧ್ಯಾಯ ಮುಗಿಯಿತು.*

—o—

ರಾಧೆಯ ಸ್ವಪ್ನ

## ಅಧ್ಯಾಯ - ೬೬

**ನಾರಾಯಣ:-** ಶ್ರೀಕೃಷ್ಣ ರಾಧೆಯೊಡನೆ ವಿಹಾರ ಮಾಡಿದ ಬಳಿಕ ರಾಧೆ ಸುಖವಾಗಿ ನಿದ್ರೆ ಮಾಡುತ್ತ ಒಂದು ಕನಸನ್ನು ಕಂಡಳು. ಎದ್ದು ದೈನ್ಯದಿಂದ ಕೃಷ್ಣನಲ್ಲಿ ಅದನ್ನು ಹೇಳಿಕೊಂಡಳು.

**ರಾಧೆ:-** ನಾಥ, ಹೀಗೆ ಬಾ, ನಿನ್ನನ್ನು ಒಮ್ಮೆ ಆಲಿಂಗಿಸಿಕೊಳ್ಳುವೆ. ಮುಂದೆ ಆವಿಧಿ ನನಗೆ ಏನು ಮಾಡುವನೊ!

ಹೀಗೆ ಹೇಳಿ ಕೃಷ್ಣನನ್ನು ಆಲಿಂಗಿಸಿಕೊಂಡು ತನಗಾದ ದುಃಸ್ವಪ್ನವನ್ನು ನೋವು ತುಂಬಿದ ಎದೆಯಿಂದ ಹೇಳತೊಡಗಿದಳು.

**ರಾಧೆ:-** ರತ್ನಸಿಂಹಾಸನದಲ್ಲಿ ರತ್ನಛತ್ರದ ಅಡಿಯಲ್ಲಿ ಕುಳಿತಿದ್ದೆ. ಒಬ್ಬ ಬ್ರಾಹ್ಮಣ ಬಂದು ಕೋಪದಿಂದ ನನ್ನ ಆ ಛತ್ರವನ್ನು ಕಿತ್ತು ತೆಗೆದ. ಕಾಡಿಗೆ ಬಣ್ಣದ ಆಳವಾದ ದುಸ್ತರವಾದ ಮಹಾ ಘೋರವಾದ ಸಾಗರದಲ್ಲಿ ನನ್ನನ್ನು ಎಸೆದ. ನಾನು ನೀರಿನ ಪ್ರವಾಹದಲ್ಲಿ ಶೋಕಾರ್ತಳಾಗಿ ಸುತ್ತಿದೆ. ದೊಡ್ಡ ಅಲೆಗಳಿಂದ ಮೊಸಳೆಗಳಿಂದ ಕೂಡಿದ ಆ ಸಾಗರದಲ್ಲಿ ನಿನ್ನನ್ನು ಕಾಣದೆ ಬಲು ಭೀತಳಾಗಿ 'ನಾಥ, ನನ್ನನ್ನು ಕಾಪಾಡು ಕಾಪಾಡು' ಎಂದು ಪುನಃ ಪುನಃ ಕೂಗಿಕೊಂಡೆ. ಹೀಗೆ ಸಮುದ್ರದಲ್ಲಿ ಮುಳುಗಿದ್ದೇ ಆಕಾಶದಿಂದ ಚಂದ್ರಮಂಡಲ ನೂರಾರು ತುಂಡಾಗಿ ನೆಲಕ್ಕೆ ಬಿದ್ದುದನ್ನು ಕಂಡೆ. ಇನ್ನೊಂದು ಕ್ಷಣದಲ್ಲಿ ಸೂರ್ಯಮಂಡಲವೂ ನಾಲ್ಕು ತುಂಡಾಗಿ ಬಿದ್ದಿತು. ಏಕಕಾಲದಲ್ಲಿ ಚಂದ್ರ ಸೂರ್ಯರು ರಾಹುಗ್ರಹಣದಿಂದ ಕಾಡಿಗೆಯಂತೆ ಕಪ್ಪಾದರು.

ಒಬ್ಬ ಬ್ರಾಹ್ಮಣ ನನ್ನ ಅಮೃತಕಲಶವನ್ನು ಕೋಪದಿಂದ ಪುಡಿಮಾಡಿದ. ಕ್ರೀಡಾಕಮಲವನ್ನೂ ಕಿತ್ತು ಚೂರುಚೂರು ಮಾಡಿದ. ರತ್ನಕನ್ನಡಿಯನ್ನೂ ಪುಡಿ ಮಾಡಿದ. ನನ್ನೆದೆಯ ರತ್ನಹಾರವೂ ಕಡಿದು ತುಂಡಾಗಿ ನೆಲಕ್ಕೆ ಬಿದ್ದಿತು. ಮನೆಯಲ್ಲಿ ಬೊಂಬೆಗಳು ನಗುತ್ತವೆ ಕುಣಿಯುತ್ತವೆ ಹಾಡುತ್ತವೆ ಅಳುತ್ತವೆ. ಕಪ್ಪು ಬಣ್ಣದ ಭಯಂಕರವಾದ ದೊಡ್ಡ ಚಕ್ರ ಆಕಾರದಲ್ಲಿ ಗರಗರನೆ ತಿರುಗುತ್ತದೆ, ಕೆಳಗೆ ಬಿದ್ದು ತಿರುಗಿ ಮೇಲೇರುತ್ತದೆ. ಪ್ರಾಣದೇವ ನನ್ನೆದೆಯಿಂದ ಹೊರಬಂದು 'ನನಗೆ ಅನುಮತಿ ಕೊಡು, ನಾನು ಹೋಗುವೆನು' ಎನ್ನುತ್ತಾನೆ. ಕಪ್ಪು ಬಟ್ಟೆ ಉಟ್ಟ ಕಪ್ಪು ಬಣ್ಣದ ಪ್ರತಿಮೆ ನನ್ನನ್ನು ಅಪ್ಪಿ ಮುದ್ದಿಸುತ್ತದೆ.

ನಾಥ, ಈ ದುಃಸ್ವಪ್ನಗಳನ್ನು ಕಂಡು ನನ್ನ ಪ್ರಾಣಗಳೆ ಹೋಗುವಂತಿವೆ. ಮನಸ್ಸು ಶೋಕದಿಂದ ಉದ್ವೇಗಗೊಂಡಿದೆ. ನಾಥ, ಇದೇನು, ಇದೇನು, ಹೇಳು.

ಹೀಗೆ ರಾಧೆ ಒಣಗಿದ ಗಂಟಲು ತುಟಿ ತಾಲುಗಳಿಂದ ನುಡಿದು ಕೃಷ್ಣನ ಪಾದಕಮಲದಲ್ಲಿ ಭಯಭೀತಳಾಗಿ ಶೋಕವಿಹ್ವಲತೆಯಿಂದ ಬಿದ್ದಳು. ಕೃಷ್ಣ ಎಲ್ಲವನ್ನೂ ಕೇಳಿ ದೇವಿಯನ್ನು ತಬ್ಬಿಕೊಂಡು ಅಧ್ಯಾತ್ಮೋಪದೇಶದಿಂದ ಸಂತೈಸಿದ. ದೇವಿ ನಿರ್ಮಲ ಜ್ಞಾನವನ್ನು ಹೊಂದಿ ಶಾಂತನಾದ ಪ್ರಿಯಕರನನ್ನು ಅಪ್ಪಿಕೊಂಡು ಶೋಕವನ್ನು ತೊರೆದಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ರಾಧಾಶೋಕಾಪನೋದನವೆಂಬ ಅರವತ್ತಾರನೆ ಅಧ್ಯಾಯ ಮುಗಿಯಿತು*

# ರಾಧೆಗೆ ಕೃಷ್ಣನ ಅಧ್ಯಾತ್ಮೋಪದೇಶ

**ಅಧ್ಯಾಯ - ೬೭**

**ನಾರಾಯಣ:-** ರಾಧೆ ವಿರಹಭಯದಿಂದ ವ್ಯಾಕುಲಳಾದುದನ್ನು ಕಂಡು ಕೃಷ್ಣ ಅವಳನ್ನು ಎದೆಗೆ ಅಪ್ಪಿಕೊಂಡು ಈಜುಕೊಳಕ್ಕೆ ಕರೆದೊಯ್ದ. ಕೃಪಾನಿಧಿ ಕೃಷ್ಣ ಕೃಪೆಯಿಂದ ಅವಳೊಡನೆ ಜಲಕೇಳಿಯಾಡಿ ರತ್ನಪರ್ಯಂಕದಲ್ಲಿ ರಮಿಸಿದ. ಮೋಡದಲ್ಲಿ ಮಿಂಚಿನ ಬಳ್ಳಿಯಂತೆ, ಮರಕತ ಮಣಿಯೊಡನೆ ಚಿನ್ನದಂತೆ ರಾಧೆ ಕೃಷ್ಣನೊಡನೆ ಸೇರಿ ರಮಿಸಿದಳು. ಕೊನೆಯಲ್ಲಿ ಹೀಗೆ ನುಡಿದಳು -

**ರಾಧೆ:-** ನಾನು ನಿನ್ನ ಜೊತೆಗಿದ್ದರೆ ಪ್ರಫುಲ್ಲಳಾಗಿರುತ್ತೇನೆ. ನೀನಿಲ್ಲದಿದ್ದರೆ ಬಾಡುತ್ತೇನೆ. ಸೂರ್ಯನ ಕಿರಣಗಳಿದ್ದರೆ ಸಸ್ಯಗಳು ಪ್ರಫುಲ್ಲವಾಗುತ್ತವೆ, ಇಲ್ಲದಿದ್ದರೆ ಬಾಡುತ್ತವೆ. ರಾತ್ರಿಯಲ್ಲಿ ದೀಪಜ್ವಾಲೆ ಒಂದೇ ರೀತಿ ಬೆಳಗುತ್ತದೆ, ಆದರೆ ಕೃಷ್ಣಪಕ್ಷದ ಚಂದ್ರ ದಿನೇದಿನೇ ಕ್ಷೀಣಿಸುತ್ತಾನೆ. ಹುಣ್ಣಿಮೆ ಚಂದ್ರ ಚೆನ್ನಾಗಿ ಬೆಳಗುತ್ತಾನೆ ಅಮಾವಾಸ್ಯೆಯ ಚಂದ್ರ ಮೃತತುಲ್ಯನಾಗುತ್ತಾನೆ. ತುಪ್ಪದ ಆಹುತಿಯಿಂದ ಅಗ್ನಿ ಜ್ವಲಿಸುತ್ತದೆ. ಶಿಶಿರದಲ್ಲಿ ಕಮಲ ಕಾಂತಿಹೀನವಾಗುತ್ತದೆ. ಹೀಗೆ ನೀನಿದ್ದರೆ ನಾನು ನಲಿಯುತ್ತೇನೆ. ನೀನಿಲ್ಲದಿದ್ದರೆ ಬಾಡುತ್ತೇನೆ. ಚಿಂತೆ ಜರೆ ಜ್ವರವೆಲ್ಲವೂ ನನ್ನನ್ನು ಆವರಿಸುತ್ತದೆ. ಸೂರ್ಯಚಂದ್ರರು ಅಸ್ತಂಗತರಾದಾಗ ಕತ್ತಲು ತುಂಬಿದ ಭೂಮಿಯಂತಾಗುತ್ತೇನೆ. ನನ್ನ ರೂಪ ಯೌವನ ಕಾಂತಿ ಎಲ್ಲವೂ ಮರೆಯಾಗಿ ಅರುಣೋದಯ ಕಾಲದ ತಾರೆಯರಂತೆ ಆಗುತ್ತೇನೆ. ನೀನೆ ಎಲ್ಲರಿಗೂ ಆತ್ಮ. ವಿಶೇಷವಾಗಿ ನನಗೆ ಆತ್ಮ. ಆದರಿಂದ ನೀನಿಲ್ಲದಿದ್ದರೆ ನಾನು ಆತ್ಮನಿಲ್ಲದ ಶವದಂತಾಗುತ್ತೇನೆ. ನನಗೆ ನೀನು ಪಂಚಪ್ರಾಣ. ನೀನಿಲ್ಲದಿದ್ದರೆ ನಾನು ಪ್ರಾಣರಹಿತಳಂತಾಗುತ್ತೇನೆ. ನೀನು ದೃಷ್ಟಿಯಂತೆ, ನಾನು ಕಣ್ಣಿನಂತೆ. ನೀನಿಲ್ಲದಿದ್ದರೆ ಗೊಂಬೆಯ ಕಣ್ಣಿನಂತೆ ನಾನಿರುತ್ತೇನೆ. ನೀನಿದ್ದರೆ ನಾನು ಚಿತ್ರಬರೆದ ನೆಲದಂತೆ ಶೋಭಿಸುತ್ತೇನೆ. ನೀನಿಲ್ಲದಿಲ್ಲದರೆ ಹುಲ್ಲು ಬೆಳೆವ ಭೂಮಿಯಂತಾಗುತ್ತೇನೆ. ನೀನಿದ್ದರೆ ನಾನು ಚಿತ್ರಯುಕ್ತವಾದ ಮಣ್ಣಿನ ಬೊಂಬೆಯಾಗುತ್ತೇನೆ. ನೀನಿಲ್ಲದಿದ್ದರೆ ನಾನು ಒಡೆದು ವಿರೂಪವಾದ ಮಣ್ಣಿನ ಬೊಂಬೆಯಾಗುತ್ತೇನೆ. ಗೋಪಾಂಗನೆಯರಿಗೆ ನೀನಿದ್ದರೆ ಮಾತ್ರ ಶೋಭೆ. ಚಿನ್ನದ ಹಾರದಲ್ಲಿ ಮಣಿ ಇದ್ದರೆ ಮಾತ್ರ ಶೋಭೆ. ಚಂದ್ರನಿದ್ದರೆ ನಕ್ಷತ್ರ ಶೋಭಿಸುವಂತೆ ನೀನಿದ್ದರೇ ರಾಜರು ಶೋಭಿಸುತ್ತಾರೆ. ನಂದ ಯಶೋದೆಯರಿಗೂ ನೀನಿದ್ದರೇ ಶೋಭೆ, ಹಣ್ಣುಗಳಿಂದ ಮರಗಳು ಶೋಭಿಸುವಂತೆ. ಗೋಕುಲವಾಸಿಗಳಿಗೂ ನೀನಿದ್ದರೇ ಸುಖ, ರಾಜನಿದ್ದರೇ ರಾಜ್ಯಕ್ಕೆ ಸುಖ ನೆಮ್ಮದಿಗಳು ಹೇಗೋ ಹಾಗೆ. ರಾಸಮಂಡಲದಲ್ಲಿಯೂ ನೀನಿದ್ದರೇ ಶೋಭೆ, ಅಮರಾವತಿಯಲ್ಲಿ ದೇವೇಂದ್ರನಿದ್ದರೆ ಹೇಗೋ ಹಾಗೆ. ವೃಂದಾವನದಲ್ಲಿ ನೀನಿದ್ದರೇ ಶೋಭೆ, ಬೇರೆ ಕಾಡುಗಳಲ್ಲಿ ಸಿಂಹವಿದ್ದರೇ ಶೋಭೆ ಹೇಗೋ ಹಾಗೆ. ನೀನಿಲ್ಲದಿಲ್ಲರೆ ಯಶೋದೆ ದುಃಖಸಾಗರದಲ್ಲಿ ಮುಳುಗುತ್ತಾಳೆ, ಕರುವನ್ನು ಕಾಣದ ಆಕಳಿನಂತೆ. ನೀನಿಲ್ಲದಿದ್ದರೆ ನಂದನ ಪ್ರಾಣಗಳೂ ಮನಸ್ಸೂ ಹುರಿವ ಬಾಣಲೆಯಲ್ಲಿ ಧಾನ್ಯದ ಕಾಳುಗಳಾಗುತ್ತವೆ.' ಹೀಗೆ ರಾಧೆ ನುಡಿದಾಗ ಪುನಃ ಕೃಷ್ಣ ಅವಳಿಗೆ ಅಧ್ಯಾತ್ಮೋಪದೇಶ ನೀಡಿ ಸಂತೈಸಿದ. ಹರಿತವಾದ ಕೊಡಲಿ ಮರವನ್ನು ಕಡಿವಂತೆ ಅಧ್ಯಾತ್ಮೋಪದೇಶ ಮೋಹವನ್ನು ಛೇದಿಸುತ್ತದೆ.

**ನಾರದ:-** ಲೋಕದ ಮೋಹ ಶೋಕಗಳನ್ನು ಕಳೆವ ಆ ಅಧ್ಯಾತ್ಮ ಯೋಗವನ್ನು ಹೇಳು. ಅದನ್ನು ಕೇಳುವ ಕುತೂಹಲ ಉಂಟಾಗಿದೆ.

**ನಾರಾಯಣ:-** ಅಧ್ಯಾತ್ಮ ಮಹಾಯೋಗ ಯೋಗಿಗಳಿಗೂ ತಿಳಿದಿಲ್ಲ. ಅದು ನಾನಾ ಪ್ರಕಾರ. ಎಲ್ಲವನ್ನೂ ಹರಿಯೊಬ್ಬನೇ ಬಲ್ಲ. ಸ್ವಲ್ಪ ಮಾತ್ರ ಗೋಲೋಕದಲ್ಲಿ ರಾಧಾರಮಣನು ಶಿವನಿಗೆ ಉಪದೇಶಿಸಿದ. ಅದಕ್ಕಾಗಿ ವೈಷ್ಣವಾಗ್ರೇಸರ ತಾಪಸೋತ್ತಮನಾದ ಶಿವ ಒಂದು ಸಾವಿರ ಮನ್ವಂತರಗಳ ಕಾಲ ತಪಸ್ಸು ಮಾಡಬೇಕಾಯಿತು. ನೂರು ಮನ್ವಂತರಗಳ ಕಾಲ ಪುಷ್ಕರದಲ್ಲಿ ಕಠೋರ ತಪಸ್ಸನ್ನು ಮಾಡಿ ಅಸ್ಥಿಮಾತ್ರನಾಗಿದ್ದ ಬ್ರಹ್ಮನಿಗೂ ಹರಿ ಸ್ವಲ್ಪವೆ ಅಧ್ಯಾತ್ಮೋಪದೇಶ ಮಾಡಿದ. ಹದಿನಾಲ್ಕು ಮನ್ವಂತರಗಳ ಕಾಲ ನರಸಿಂಹಕ್ಷೇತ್ರದಲ್ಲಿ ತಪಸ್ಸು ಮಾಡಿದ ನನ್ನ ತಂದೆಯಾದ ಧರ್ಮನಿಗೂ ಕೃಷ್ಣ ಕೃಪೆಯಿಂದ ಸ್ವಲ್ಪ ಅಧ್ಯಾತ್ಮವನ್ನು ಉಪದೇಶಿಸಿದ. ಹಾಗೇ ನನಗೂ ಸನತ್ಕುಮಾರನಿಗೂ ಶೇಷನಿಗೂ ಕಪಿಲ ಹಿಮಾಲಯ ಪ್ರಹ್ಲಾದ ದುರ್ವಾಸ ಭೃಗು ಮೊದಲಾದವರಿಗೂ ಸ್ವಲ್ಪ ಸ್ವಲ್ಪ ಅಧ್ಯಾತ್ಮವನ್ನು ರಹಸ್ಯವಾಗಿ ಉಪದೇಶಿಸಿದ್ದಾನೆ, ಕರುಣಾಕರನಾದ ಹರಿ. ಶೋಕಾರ್ತಳಾದ ರಾಧೆಗೆ ಕೃಷ್ಣ ಉಪದೇಶಿಸಿದ ಅಧ್ಯಾತ್ಮವನ್ನು ನಿನಗೆ ಹೇಳುತ್ತೇನೆ.

ದುಃಖಿತಳಾದ ರಾಧೆಯನ್ನು ಎದೆಗೆ ತಬ್ಬಿಕೊಂಡು ಯೋಗಿಗಳಿಗೆ ಗುರುವಾದ ಕೃಷ್ಣ ಕೆಲವು ಅಧ್ಯಾತ್ಮ ತತ್ವಗಳನ್ನು ಹೇಳಿದ.

**ಶ್ರೀಕೃಷ್ಣ:-** ರಾಧೆ, ನಿನಗೆ ಪೂರ್ವಜನ್ಮ ಸ್ಮರಣೆ ಇದೆ. ಆದರೂ ನೀನೂ ನಿನ್ನನ್ನೂ ಎಲ್ಲ ಗೋಲೋಕ ವೃತ್ತಾಂತವನ್ನೂ ಸುದಾಮನ ಶಾಪವನ್ನೂ ಏಕೆ ಮರೆಯುತ್ತಿರುವೆ? ಶಾಪದಿಂದ ನಿನಗೆ ಕೆಲವು ದಿನಗಳ ಕಾಲ ನನ್ನಿಂದ ವಿರಹವಾಗಲಿದೆ. ಬಳಿಕ ನಮಗೆ ಮೇಲನವೂ ಆಗಲಿದೆ. ನಾನು ಪುನಃ ಗೋಲೋಕ ವಾಸಿಗಳಾದ ಗೋಪ ಗೋಪಾಂಗನೆಯರೊಡನೆ ಗೋಲೋಕಕ್ಕೆ ಹೋಗುತ್ತೇನೆ. ಈಗ ನಿನಗೆ ಅಧ್ಯಾತ್ಮವನ್ನು ಸ್ವಲ್ಪ ಹೇಳುತ್ತೇನೆ ಕೇಳು. ಅದು ಶೋಕವನ್ನು ಕಳೆದು ಸುಖ ನೀಡುವುದು. ನಾನು ಸರ್ವಾಂತರಾತ್ಮ, ನಿರ್ಲಿಪ್ತ, ಎಲ್ಲೆಡೆ ಇದ್ದೇನೆ, ಯಾರಿಗೂ ಕಾಣಿಸುವುದಿಲ್ಲ, ಎಲ್ಲೆಡೆ ಇದ್ದೂ ಕಾಣದ ವಾಯುವಿನಂತೆ. ವಾಯುವಿನಂತೆಯೆ ನಿರ್ಲಿಪ್ತನಾಗಿದ್ದು ಸರ್ವಕರ್ಮಗಳಿಗೂ ಸಾಕ್ಷಿಯಾಗಿರುತ್ತೇನೆ. ಎಲ್ಲ ಜೀವಿಗಳಲ್ಲಿಯೂ ಜೀವ ನನ್ನ ಪ್ರತಿಬಿಂಬ. ಶುಭಾಶುಭ ಭೋಕ್ತ, ಮತ್ತು ಕರ್ಮಕರ್ತ. ಜಲಪಾತ್ರೆಯಲ್ಲಿ ಚಂದ್ರ ಸೂರ್ಯರ ಬಿಂಬದಂತೆ ನಾನು ಕಾಣುವೆ. ಪಾತ್ರೆ ಒಡೆದಾಗ ಇಲ್ಲ. ನನ್ನ ಆವಿರ್ಭಾವ ಕೆಲವರಲ್ಲಿ ಅಧಿಕ, ಕೆಲವರಲ್ಲಿ ನ್ಯೂನವಾಗಿರುತ್ತದೆ. ಕೆಲವು ದೇವತೆಗಳು ನನ್ನ ಅಂಶಭೂತರು. ಕೆಲವರು ಕಲೆಗಳು. ಕೆಲವರು ಕಲಾಂಶರು, ಕೆಲವರು ಅಂಶಾಂಶರು. ಸೂಕ್ಷ್ಮ ಪ್ರಕೃತಿ ನನ್ನ ಅಂಶಭೂತಳು. ಈ ಪ್ರಕೃತಿ ಐದು ಬಗೆ. ಸರಸ್ವತಿ, ಕಮಲೆ, ದುರ್ಗೆ, ನೀನು, ಮತ್ತು ಸಾವಿತ್ರಿ ಎಂದು. ಎಲ್ಲ ದೇವತೆಗಳೂ ಪ್ರಾಕೃತಿಕರು. ಅವರು ಪ್ರಾಕೃತ ಲಯದಲ್ಲಿ ಲಯ ಹೊಂದುತ್ತಾರೆ. ಎಲ್ಲಕ್ಕೂ ಮೊದಲು ನಾನೆ ಇದ್ದೆ. ಎಲ್ಲ ಹೋದ ಮೇಲೂ ನಾನಿರುವೆ. ಹಾಲು ಮತ್ತು ಅದರ ಬಿಳುಪುಗಳು ಹೇಗೆ ಬೇರೆಯಲ್ಲವೊ ಹಾಗೇ ನಾವಿಬ್ಬರೂ ಬೇರೆಯಲ್ಲ. ನಾನು ಅಂಶದಿಂದ ಮಹಾವಿರಾಟ್

# ರಾಧೆಗೆ ಕೃಷ್ಣನ ಅಧ್ಯಾತ್ಮೋಪದೇಶ

ಅಧ್ಯಾಯ - ೬೭

**ನಾರಾಯಣ:-** ರಾಧೆ ವಿರಹಭಯದಿಂದ ವ್ಯಾಕುಲಳಾದುದನ್ನು ಕಂಡು ಕೃಷ್ಣ ಅವಳನ್ನು ಎದೆಗೆ ಅಪ್ಪಿಕೊಂಡು ಈಜುಕೊಳಕ್ಕೆ ಕರೆದೊಯ್ದ. ಕೃಪಾನಿಧಿ ಕೃಷ್ಣ ಕೃಪೆಯಿಂದ ಅವಳೊಡನೆ ಜಲಕೇಳಿಯಾಡಿ ರತ್ನಪರ್ಯಂಕದಲ್ಲಿ ರಮಿಸಿದ. ಮೋಡದಲ್ಲಿ ಮಿಂಚಿನ ಬಳ್ಳಿಯಂತೆ, ಮರಕತ ಮಣಿಯೊಡನೆ ಚಿನ್ನದಂತೆ ರಾಧೆ ಕೃಷ್ಣನೊಡನೆ ಸೇರಿ ರಮಿಸಿದಳು. ಕೊನೆಯಲ್ಲಿ ಹೀಗೆ ನುಡಿದಳು -

**ರಾಧೆ:-** ನಾನು ನಿನ್ನ ಜೊತೆಗಿದ್ದರೆ ಪ್ರಫುಲ್ಲಳಾಗಿರುತ್ತೇನೆ. ನೀನಿಲ್ಲದಿದ್ದರೆ ಬಾಡುತ್ತೇನೆ. ಸೂರ್ಯನ ಕಿರಣಗಳಿದ್ದರೆ ಸಸ್ಯಗಳು ಪ್ರಫುಲ್ಲವಾಗುತ್ತವೆ, ಇಲ್ಲದಿದ್ದರೆ ಬಾಡುತ್ತವೆ. ರಾತ್ರಿಯಲ್ಲಿ ದೀಪಜ್ವಾಲೆ ಒಂದೇ ರೀತಿ ಬೆಳಗುತ್ತದೆ, ಆದರೆ ಕೃಷ್ಣಪಕ್ಷದ ಚಂದ್ರ ದಿನೇದಿನೇ ಕ್ಷೀಣಿಸುತ್ತಾನೆ. ಹುಣ್ಣಿಮೆ ಚಂದ್ರ ಚೆನ್ನಾಗಿ ಬೆಳಗುತ್ತಾನೆ ಅಮಾವಾಸ್ಯೆಯ ಚಂದ್ರ ಮೃತತುಲ್ಯನಾಗುತ್ತಾನೆ. ತುಪ್ಪದ ಆಹುತಿಯಿಂದ ಅಗ್ನಿ ಜ್ವಲಿಸುತ್ತದೆ. ಶಿಶಿರದಲ್ಲಿ ಕಮಲ ಕಾಂತಿಹೀನವಾಗುತ್ತದೆ. ಹೀಗೆ ನೀನಿದ್ದರೆ ನಾನು ನಲಿಯುತ್ತೇನೆ. ನೀನಿಲ್ಲದಿದ್ದರೆ ಬಾಡುತ್ತೇನೆ. ಚಿಂತೆ ಜರೆ ಜ್ವರವೆಲ್ಲವೂ ನನ್ನನ್ನು ಆವರಿಸುತ್ತದೆ. ಸೂರ್ಯಚಂದ್ರರು ಅಸ್ತಂಗತರಾದಾಗ ಕತ್ತಲು ತುಂಬಿದ ಭೂಮಿಯಂತಾಗುತ್ತೇನೆ. ನನ್ನ ರೂಪ ಯೌವನ ಕಾಂತಿ ಎಲ್ಲವೂ ಮರೆಯಾಗಿ ಅರುಣೋದಯ ಕಾಲದ ತಾರೆಯರಂತೆ ಆಗುತ್ತೇನೆ. ನೀನೆ ಎಲ್ಲರಿಗೂ ಆತ್ಮ. ವಿಶೇಷವಾಗಿ ನನಗೆ ಆತ್ಮ. ಆದರಿಂದ ನೀನಿಲ್ಲದಿದ್ದರೆ ನಾನು ಆತ್ಮನಿಲ್ಲದ ಶವದಂತಾಗುತ್ತೇನೆ. ನನಗೆ ನೀನು ಪಂಚಪ್ರಾಣ. ನೀನಿಲ್ಲದಿದ್ದರೆ ನಾನು ಪ್ರಾಣರಹಿತಳಂತಾಗುತ್ತೇನೆ. ನೀನು ದೃಷ್ಟಿಯಂತೆ, ನಾನು ಕಣ್ಣಿನಂತೆ. ನೀನಿಲ್ಲದಿದ್ದರೆ ಗೊಂಬೆಯ ಕಣ್ಣಿನಂತೆ ನಾನಿರುತ್ತೇನೆ. ನೀನಿದ್ದರೆ ನಾನು ಚಿತ್ರಬರೆದ ನೆಲದಂತೆ ಶೋಭಿಸುತ್ತೇನೆ. ನೀನಿಲ್ಲದಿಲ್ಲದರೆ ಹುಲ್ಲು ಬೆಳೆವ ಭೂಮಿಯಂತಾಗುತ್ತೇನೆ. ನೀನಿದ್ದರೆ ನಾನು ಚಿತ್ರಯುಕ್ತವಾದ ಮಣ್ಣಿನ ಬೊಂಬೆಯಾಗುತ್ತೇನೆ. ನೀನಿಲ್ಲದಿದ್ದರೆ ನಾನು ಒಡೆದು ವಿರೂಪವಾದ ಮಣ್ಣಿನ ಬೊಂಬೆಯಾಗುತ್ತೇನೆ. ಗೋಪಾಂಗನೆಯರಿಗೆ ನೀನಿದ್ದರೆ ಮಾತ್ರ ಶೋಭೆ. ಚಿನ್ನದ ಹಾರದಲ್ಲಿ ಮಣಿ ಇದ್ದರೆ ಮಾತ್ರ ಶೋಭೆ. ಚಂದ್ರನಿದ್ದರೆ ನಕ್ಷತ್ರ ಶೋಭಿಸುವಂತೆ ನೀನಿದ್ದರೇ ರಾಜರು ಶೋಭಿಸುತ್ತಾರೆ. ನಂದ ಯಶೋದೆಯರಿಗೂ ನೀನಿದ್ದರೇ ಶೋಭೆ, ಹಣ್ಣುಗಳಿಂದ ಮರಗಳು ಶೋಭಿಸುವಂತೆ. ಗೋಕುಲವಾಸಿಗಳಿಗೂ ನೀನಿದ್ದರೇ ಸುಖ, ರಾಜನಿದ್ದರೇ ರಾಜ್ಯಕ್ಕೆ ಸುಖ ನೆಮ್ಮದಿಗಳು ಹೇಗೋ ಹಾಗೆ. ರಾಸಮಂಡಲದಲ್ಲಿಯೂ ನೀನಿದ್ದರೇ ಶೋಭೆ, ಅಮರಾವತಿಯಲ್ಲಿ ದೇವೇಂದ್ರನಿದ್ದರೆ ಹೇಗೋ ಹಾಗೆ. ವೃಂದಾವನದಲ್ಲಿ ನೀನಿದ್ದರೇ ಶೋಭೆ, ಬೇರೆ ಕಾಡುಗಳಲ್ಲಿ ಸಿಂಹವಿದ್ದರೇ ಶೋಭೆ ಹೇಗೋ ಹಾಗೆ. ನೀನಿಲ್ಲದಿಲ್ಲರೆ ಯಶೋದೆ ದುಃಖಸಾಗರದಲ್ಲಿ ಮುಳುಗುತ್ತಾಳೆ, ಕರುವನ್ನು ಕಾಣದ ಆಕಳಿನಂತೆ. ನೀನಿಲ್ಲದಿದ್ದರೆ ನಂದನ ಪ್ರಾಣಗಳೂ ಮನಸ್ಸೂ ಹುರಿವ ಬಾಣಲೆಯಲ್ಲಿ ಧಾನ್ಯದ ಕಾಳುಗಳಾಗುತ್ತವೆ.' ಹೀಗೆ ರಾಧೆ ನುಡಿದಾಗ ಪುನಃ ಕೃಷ್ಣ ಅವಳಿಗೆ ಅಧ್ಯಾತ್ಮೋಪದೇಶ ನೀಡಿ ಸಂತೈಸಿದ. ಹರಿತವಾದ ಕೊಡಲಿ ಮರವನ್ನು ಕಡಿವಂತೆ ಅಧ್ಯಾತ್ಮೋಪದೇಶ ಮೋಹವನ್ನು ಛೇದಿಸುತ್ತದೆ.

**ನಾರದ:-** ಲೋಕದ ಮೋಹ ಶೋಕಗಳನ್ನು ಕಳೆವ ಆ ಅಧ್ಯಾತ್ಮ ಯೋಗವನ್ನು ಹೇಳು. ಅದನ್ನು ಕೇಳುವ ಕುತೂಹಲ ಉಂಟಾಗಿದೆ.

**ನಾರಾಯಣ:-** ಅಧ್ಯಾತ್ಮ ಮಹಾಯೋಗ ಯೋಗಿಗಳಿಗೂ ತಿಳಿದಿಲ್ಲ. ಅದು ನಾನಾ ಪ್ರಕಾರ. ಎಲ್ಲವನ್ನೂ ಹರಿಯೊಬ್ಬನೇ ಬಲ್ಲ. ಸ್ವಲ್ಪ ಮಾತ್ರ ಗೋಲೋಕದಲ್ಲಿ ರಾಧಾರಮಣನು ಶಿವನಿಗೆ ಉಪದೇಶಿಸಿದ. ಅದಕ್ಕಾಗಿ ವೈಷ್ಣವಾಗ್ರೇಸರ ತಾಪಸೋತ್ತಮನಾದ ಶಿವ ಒಂದು ಸಾವಿರ ಮನ್ವಂತರಗಳ ಕಾಲ ತಪಸ್ಸು ಮಾಡಬೇಕಾಯಿತು. ನೂರು ಮನ್ವಂತರಗಳ ಕಾಲ ಪುಷ್ಕರದಲ್ಲಿ ಕಠೋರ ತಪಸ್ಸನ್ನು ಮಾಡಿ ಅಸ್ಥಿಮಾತ್ರನಾಗಿದ್ದ ಬ್ರಹ್ಮನಿಗೂ ಹರಿ ಸ್ವಲ್ಪವೆ ಅಧ್ಯಾತ್ಮೋಪದೇಶ ಮಾಡಿದ. ಹದಿನಾಲ್ಕು ಮನ್ವಂತರಗಳ ಕಾಲ ನರಸಿಂಹಕ್ಷೇತ್ರದಲ್ಲಿ ತಪಸ್ಸು ಮಾಡಿದ ನನ್ನ ತಂದೆಯಾದ ಧರ್ಮನಿಗೂ ಕೃಷ್ಣ ಕೃಪೆಯಿಂದ ಸ್ವಲ್ಪ ಅಧ್ಯಾತ್ಮವನ್ನು ಉಪದೇಶಿಸಿದ. ಹಾಗೇ ನನಗೂ ಸನತ್ಕುಮಾರನಿಗೂ ಶೇಷನಿಗೂ ಕಪಿಲ ಹಿಮಾಲಯ ಪ್ರಹ್ಲಾದ ದುರ್ವಾಸ ಭೃಗು ಮೊದಲಾದವರಿಗೂ ಸ್ವಲ್ಪ ಸ್ವಲ್ಪ ಅಧ್ಯಾತ್ಮವನ್ನು ರಹಸ್ಯವಾಗಿ ಉಪದೇಶಿಸಿದ್ದಾನೆ, ಕರುಣಾಕರನಾದ ಹರಿ. ಶೋಕಾರ್ತಳಾದ ರಾಧೆಗೆ ಕೃಷ್ಣ ಉಪದೇಶಿಸಿದ ಅಧ್ಯಾತ್ಮವನ್ನು ನಿನಗೆ ಹೇಳುತ್ತೇನೆ.

ದುಃಖಿತಳಾದ ರಾಧೆಯನ್ನು ಎದೆಗೆ ತಬ್ಬಿಕೊಂಡು ಯೋಗಿಗಳಿಗೆ ಗುರುವಾದ ಕೃಷ್ಣ ಕೆಲವು ಅಧ್ಯಾತ್ಮ ತತ್ವಗಳನ್ನು ಹೇಳಿದ.

**ಶ್ರೀಕೃಷ್ಣ:-** ರಾಧೆ, ನಿನಗೆ ಪೂರ್ವಜನ್ಮ ಸ್ಮರಣೆ ಇದೆ. ಆದರೂ ನೀನೂ ನಿನ್ನನ್ನೂ ಎಲ್ಲ ಗೋಲೋಕ ವೃತ್ತಾಂತವನ್ನೂ ಸುದಾಮನ ಶಾಪವನ್ನೂ ಏಕೆ ಮರೆಯುತ್ತಿರುವೆ? ಶಾಪದಿಂದ ನಿನಗೆ ಕೆಲವು ದಿನಗಳ ಕಾಲ ನನ್ನಿಂದ ವಿರಹವಾಗಲಿದೆ. ಬಳಿಕ ನಮಗೆ ಮೇಲನವೂ ಆಗಲಿದೆ. ನಾನು ಪುನಃ ಗೋಲೋಕ ವಾಸಿಗಳಾದ ಗೋಪ ಗೋಪಾಂಗನೆಯರೊಡನೆ ಗೋಲೋಕಕ್ಕೆ ಹೋಗುತ್ತೇನೆ. ಈಗ ನಿನಗೆ ಅಧ್ಯಾತ್ಮವನ್ನು ಸ್ವಲ್ಪ ಹೇಳುತ್ತೇನೆ ಕೇಳು. ಅದು ಶೋಕವನ್ನು ಕಳೆದು ಸುಖ ನೀಡುವುದು. ನಾನು ಸರ್ವಾಂತರಾತ್ಮ, ನಿರ್ಲಿಪ್ತ, ಎಲ್ಲೆಡೆ ಇದ್ದೇನೆ, ಯಾರಿಗೂ ಕಾಣಿಸುವುದಿಲ್ಲ, ಎಲ್ಲೆಡೆ ಇದ್ದೂ ಕಾಣದ ವಾಯುವಿನಂತೆ. ವಾಯುವಿನಂತೆಯೆ ನಿರ್ಲಿಪ್ತನಾಗಿದ್ದು ಸರ್ವಕರ್ಮಗಳಿಗೂ ಸಾಕ್ಷಿಯಾಗಿರುತ್ತೇನೆ. ಎಲ್ಲ ಜೀವಿಗಳಲ್ಲಿಯೂ ಜೀವ ನನ್ನ ಪ್ರತಿಬಿಂಬ. ಶುಭಾಶುಭ ಭೋಕ್ತ, ಮತ್ತು ಕರ್ಮಕರ್ತ. ಜಲಪಾತ್ರೆಯಲ್ಲಿ ಚಂದ್ರ ಸೂರ್ಯರ ಬಿಂಬದಂತೆ ನಾನು ಕಾಣುವೆ. ಪಾತ್ರೆ ಒಡೆದಾಗ ಇಲ್ಲ. ನನ್ನ ಆವಿರ್ಭಾವ ಕೆಲವರಲ್ಲಿ ಅಧಿಕ, ಕೆಲವರಲ್ಲಿ ನ್ಯೂನವಾಗಿರುತ್ತದೆ. ಕೆಲವು ದೇವತೆಗಳು ನನ್ನ ಅಂಶಭೂತರು. ಕೆಲವರು ಕಲೆಗಳು. ಕೆಲವರು ಕಲಾಂಶರು, ಕೆಲವರು ಅಂಶಾಂಶರು. ಸೂಕ್ಷ್ಮ ಪ್ರಕೃತಿ ನನ್ನ ಅಂಶಭೂತಳು. ಈ ಪ್ರಕೃತಿ ಐದು ಬಗೆ. ಸರಸ್ವತಿ, ಕಮಲೆ, ದುರ್ಗೆ, ನೀನು, ಮತ್ತು ಸಾವಿತ್ರಿ ಎಂದು. ಎಲ್ಲ ದೇವತೆಗಳೂ ಪ್ರಾಕೃತಿಕರು. ಅವರು ಪ್ರಾಕೃತ ಲಯದಲ್ಲಿ ಲಯ ಹೊಂದುತ್ತಾರೆ. ಎಲ್ಲಕ್ಕೂ ಮೊದಲು ನಾನೆ ಇದ್ದೆ. ಎಲ್ಲ ಹೋದ ಮೇಲೂ ನಾನಿರುವೆ. ಹಾಲು ಮತ್ತು ಅದರ ಬಿಳುಪುಗಳು ಹೇಗೆ ಬೇರೆಯಲ್ಲವೊ ಹಾಗೇ ನಾವಿಬ್ಬರೂ ಬೇರೆಯಲ್ಲ. ನಾನು ಅಂಶದಿಂದ ಮಹಾವಿರಾಟ್

ಎನಿಸಿದಾಗ ನೀನೂ ಅಂಶದಿಂದ ಅವನ ಪತ್ನಿಯಾಗುವೆ. ನಾನು ಅಂಶದಿಂದ ಕ್ಷುದ್ರವಿರಾಟ್ ಎನಿಸಿದಾಗ ನೀನೂ ಅಂಶದಿಂದ ಅವನ ರಾಣಿಯಾಗುವೆ. ವೈಕುಂಠದಲ್ಲಿ ನೀನು ಮಹಾಲಕ್ಷ್ಮಿ. ನಾನು ಅಲ್ಲಿ ಚತುರ್ಭುಜ. ಸತ್ಯಲೋಕದಲ್ಲಿ ನೀನು ಸಾವಿತ್ರಿ. ನಾನು ಬ್ರಹ್ಮ. ಶಿವಲೋಕದಲ್ಲಿ ನೀನು ದುರ್ಗಾಸುರನನ್ನು ಕೊಂದು ದುರ್ಗೆ ಎನಿಸಿದವಳು, ಎಲ್ಲರ ದುರ್ಗತಿಯನ್ನು ಕಳೆವವಳು. ಆ ದುರ್ಗೆಯೆ ದಕ್ಷಕನ್ಯೆ. ಅವಳೆ ಹಿಮಾಲಯನ ಪುತ್ರಿ. ಕೈಲಾಸದಲ್ಲಿರುವ ಪಾರ್ವತಿ. ಸಮುದ್ರ ಕುಮಾರಿಯಾಗಿ ಕ್ಷೀರ ಸಮುದ್ರದಲ್ಲಿಯೂ ನೀನಿರುವೆ. ವಿಷ್ಣುವಿನ ಪತ್ನಿ ಎನಿಸಿರುವೆ. ನಾನು ಹೇಗೆ ಅಂಶದಿಂದ ಬ್ರಹ್ಮ ವಿಷ್ಣು ಮಹೇಶ್ವರ ರೂಪನಾಗುವೆನೋ ಹಾಗೇ ನೀನೂ ಅಂಶದಿಂದ ನೀನು, ಲಕ್ಷ್ಮೀ, ಶಿವೆ, ಧಾತ್ರಿ, ಸಾವಿತ್ರಿ ರೂಪದಿಂದಿರುವೆ, ಗೋಲೋಕದಲ್ಲಿ ಸ್ವಯಂ ರಾಧೆ ನೀನು ರಾಸೇಶ್ವರಿಯಾಗಿರುವಿ. ವೃಂದಾವನದಲ್ಲಿ ವೃಂದೆ, ವಿರಜಾತಟದಲ್ಲಿ ವಿರಜೆ, ನೀನೆ. ಸುದಾಮಶಾಪದಿಂದ ನೀನು ಈಗ ಪುಣ್ಯಕರವಾದ ಭಾರತಕ್ಕೆ ಬಂದಿರುವಿ, ಭಾರತವನ್ನೂ ವೃಂದಾವನವನ್ನೂ ಪಾವನಗೊಳಿಸುತ್ತಿರುವಿ. ನಿನ್ನ ಅಂಶಾಂಶಕಲೆಗಳೆ ಜಗತ್ತಿನ ಎಲ್ಲ ಸ್ತ್ರೀಯರೂ ಆಗಿದ್ದಾರೆ. ಸ್ತ್ರೀಯರೆಲ್ಲ ನೀನೇ, ಪುರುಷರೆಲ್ಲ ನಾನೇ. ನನ್ನ ಕಲೆ ಅಗ್ನಿ, ನಿನ್ನ ಕಲೆ ಸ್ವಾಹೆ, ಅಂದರೆ ದಹನಶಕ್ತಿ. ನೀನಿದ್ದರೆ ನಾನು ಸುಡಬಲ್ಲೆ. ನೀನಿಲ್ಲದೆ ಅಲ್ಲ. ನಾನು ಸೂರ್ಯ, ನೀನು ಪ್ರಭೆ, ಸಂಜ್ಞೆ. ನೀನಿಲ್ಲದೆ ನಾನು ಸೂರ್ಯನಾಗಿ ಬೆಳಗಲಾರೆ. ನಾನು ಚಂದ್ರ, ನೀನು ರೋಹಿಣಿ. ನಿನ್ನೊಡನಿದ್ದರೆ ನಾನು ಮನೋಹರ. ನೀನಿಲ್ಲದಿದ್ದರೆ ಅಲ್ಲ. ನಾನು ಇಂದ್ರ, ನೀನು ಸ್ವರ್ಗಲಕ್ಷ್ಮಿ. ನಿನ್ನ ಜೊತೆಗಿದ್ದರೆ ಇಂದ್ರ ಮೆರೆಯುತ್ತಾನೆ, ಇಲ್ಲದಿದ್ದರೆ ಇಲ್ಲ. ನಾನು ಧರ್ಮ, ನೀನು ಮೂರ್ತಿ, ಧರ್ಮಕ್ರಿಯಾ ರೂಪಳಾದ ನೀನಿಲ್ಲದೆ ನಾನು ಧರ್ಮ ಕೃತ್ಯದಲ್ಲಿ ಶಕ್ತನಲ್ಲ. ನಾನು ಯಜ್ಞ, ನೀನು ದಕ್ಷಿಣೆ, ನಿನ್ನ ಜೊತೆಗಿದ್ದರೇ ನಾನು ಫಲದಾಯಕನಾಗುತ್ತೇನೆ. ನೀನಿಲ್ಲದೆ ಇದ್ದರೆ ನಾನು ಫಲದಾಯಕನಾಗಲಾರೆ. ನಾನು ಪಿತೃದೇವತೆ, ನೀನು ಸ್ವಧೆ. ನಿನ್ನ ಜೊತೆಗಿದ್ದರೇ ನಾನು ಕವ್ಯವನ್ನು ಸ್ವೀಕರಿಸಬಲ್ಲೆ, ಇಲ್ಲದಿದ್ದರೆ ಇಲ್ಲ. ನಾನು ಪುರುಷ, ನೀನು ಪ್ರಕೃತಿ. ನೀನಿಲ್ಲದೆ ನನಗೆ ಸೃಷ್ಟಿಸಾಮರ್ಥ್ಯವಿಲ್ಲ. ನೀನು ಸಂಪದ್ರೂಪಳು. ನಾನು ರಾಜ. ನೀನಿದ್ದರೆ ನಾನು ಸಂಪನ್ನನಾದ ರಾಜ. ಇಲ್ಲದಿದ್ದರೆ ನಾನು ದರಿದ್ರ. ಕುಂಬಾರ ಮಣ್ಣಿಲ್ಲದೆ ಗಡಿಗೆ ಮಾಡಲು ಹೇಗೆ ಅಶಕ್ತನೋ ಹಾಗೇ. ನಾನು ಶೇಷ. ನೀನು ಭೂಮಿ. ನಿನ್ನನ್ನು ನಾನು ಹೊರುತ್ತಿದ್ದೇನೆ. ನೀನೆ ಕಾಂತಿ ಶಾಂತಿ ಭೂತಿ ತುಷ್ಟಿ ಪುಷ್ಟಿ ಕ್ಷಮಾ ಲಜ್ಜಾ ಕ್ಷುಧಾ ತೃಷ್ಣಾ ದಯಾ ನಿದ್ರಾ ಶ್ರದ್ಧಾ ತಂದ್ರಾ ಮೂರ್ಛಾ ಸಂನತಿ ಕ್ರಿಯಾ ಮೂರ್ತಿ ಭಕ್ತಿ. ದೇಹಿಗಳಿಗೆ ದೇಹರೂಪಳು ನೀನೆ. ನಿನಗೆ ನಾನು ಆಧಾರ. ನನಗೆ ನೀನು ಆಧಾರಳು. ನೀನೂ ನಾನೂ ಸಮಾನರು, ಪ್ರಕೃತಿ ಪುರುಷರು. ಇಬ್ಬರಲ್ಲಿ ಒಬ್ಬರಿಲ್ಲದೆ ಸೃಷ್ಟಿ ಇಲ್ಲ.

ಹೀಗೆ ಹೇಳಿ ಪರಮ ಪ್ರಿಯೆಯಾದ ರಾಧೆಯನ್ನು ಆಲಿಂಗಿಸಿ ಸಂತೈಸಿದ ಶ್ರೀಕೃಷ್ಣ, ಬಳಿಕ ರತ್ನಮಂದಿರದಲ್ಲಿ ಅವಳೊಡನೆ ವಿಹರಿಸಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಆಧ್ಯಾತ್ಮಿಕಯೋಗಕಥನವೆಂಬ ಅರವತ್ತೇಳನೆ ಅಧ್ಯಾಯ ಮುಗಿಯಿತು.*

## ರಾಧಾಶೋಕವಿಮೋಚನ

## ಅಧ್ಯಾಯ - ೬೮

**ನಾರಾಯಣ:-** ಕೃಷ್ಣ ರಾಧೆಯೊಡನೆ ಹೂವಿನ ಹಾಸಿಗೆಯಲ್ಲಿ ಮಲಗಿ ಎದ್ದ. ಇನ್ನೂ ನಿದ್ದೆಮಾಡುತ್ತಿದ್ದ ರಾಧೆಯನ್ನು ಎಬ್ಬಿಸಿ ಉತ್ತರೀಯದಿಂದ ಅವಳ ಮುಖ ಒರೆಸಿ ಮಧುರವಾಗಿ ನುಡಿದ.

**ಶ್ರೀಕೃಷ್ಣ:-** ರಾಧೆ, ಸ್ವಲ್ಪಕಾಲ ನಿಲ್ಲು, ನಾನು ಮನೆಗೆ ಹೋಗುತ್ತೇನೆ. ನನಗೆ ಮುಖ್ಯ ಕಾರ್ಯವಿದೆ. ನೀನು ವೃಂದಾವನಕ್ಕೋ ನಂದಗೋಕುಲಕ್ಕೋ ಹೋಗಿರಬಹುದು. ರಾಸಾಧಿಷ್ಠಾತೃ ದೇವಿ ನೀನು. ರಾಸವಿರುವಲ್ಲೆಲ್ಲ ನೀನಿರುವೆ. ಗ್ರಾಮಗ್ರಾಮಗಳಲ್ಲಿ ಗ್ರಾಮದೇವತೆಗಳಿರುವಂತೆ. ಅಥವಾ ಸಖಿಯರೊಡನೆ ಚಂದನ ವನಕ್ಕೋ ಚಂಪಕವನಕ್ಕೋ ಹೋಗು. ನನಗೆ ಒಂದು ಕ್ಷಣ ಮನೆಗೆ ಹೋಗಲು ಅನುಮತಿ ನೀಡು. ನೀನು ನನಗೆ ಪ್ರಾಣೇಶ್ವರಿ. ನನ್ನ ಪ್ರಾಣಗಳೆಲ್ಲ ನಿನ್ನಲ್ಲಿಯೆ ಇವೆ. ಪ್ರಾಣವನ್ನು ತೊರೆದು ಪ್ರಾಣಿ ಎಲ್ಲಿ ಇರಲು ಸಾಧ್ಯ, ಪ್ರಿಯೆ? ನಿನ್ನಲ್ಲಿಯೆ ನನ್ನ ಮನಸ್ಸಿರುತ್ತದೆ. ನಿನಗಿಂತ ಪ್ರಿಯರು ನನಗೆ ಇನ್ನಾರೂ ಇಲ್ಲ.

ಶ್ರೀಕೃಷ್ಣ ಹೀಗೆ ಹೇಳಿ ರಾಧೆಯನ್ನು ಆಲಿಂಗಿಸಿ ಹೊರಟ. ಸರ್ವಜ್ಞನಾದ ಆತ ಅಕ್ರೂರನ ಆಗಮನವನ್ನು ಅರಿತೇ ಮನೆಗೆ ಹೊರಟಿದ್ದ. ಅವನು ಹೊರಟಿದ್ದನ್ನು ನೋಡಿ ರಾಧೆ ದುಃಖದಿಂದ ನುಡಿದಳು.

**ರಾಧೆ:-** ಹೇ ನಾಥ, ಪ್ರಿಯಕರ, ಕೃಷ್ಣ, ರಮಾನಾಥ, ಹೋಗಬೇಡ, ನೀನು ಹೋದರೆ ನನ್ನ ಸೌಭಾಗ್ಯವೆ ಹೊರಟುಹೋಗುತ್ತದೆ. ನಾನು ನಿನ್ನನ್ನೆ ಮೊರೆ ಹೊಕ್ಕವಳು. ದೀನಳು, ವಿರಹ ವ್ಯಾಕುಲಳಾದ ನನ್ನನ್ನು ಶೋಕಸಾಗರದಲ್ಲಿ ಹಾಕಿ ನೀನೆಲ್ಲಿಗೆ ಹೋಗುವೆ? ನಾನು ತಿರುಗಿ ಮನೆಗೆ ಹೋಗಲಾರೆ. ಬೇರೆ ಕಾಡಿಗೇ ಹೋಗುತ್ತೇನೆ. ಕೃಷ್ಣ ಕೃಷ್ಣ ಕೃಷ್ಣ ಎಂದು ಹಗಲು ರಾತ್ರಿ ಗಾನ ಮಾಡುತ್ತೇನೆ. ಅಥವಾ ಕಾಡಿಗೂ ಹೋಗುವುದಿಲ್ಲ. ಪ್ರಣಯಸಾಗರದಲ್ಲಿಯೆ ಮುಳುಗಿ ಶರೀರವನ್ನೆ ಪರಿತ್ಯಾಗ ಮಾಡುತ್ತೇನೆ. ಆಕಾಶ ಆತ್ಮರಂತೆ, ಚಂದ್ರ ಸೂರ್ಯರಂತೆ ನಾವಿಬ್ಬರೂ ಸದಾ ಜೊತೆಗೇ ಸಂಚರಿಸುವವರು. ಈಗ ನೀನು ನನಗೆ ನಿರಾಸೆ ಉಂಟುಮಾಡುತ್ತ ನನ್ನನ್ನು ತೊರೆದು ಹೋಗುವುದು ಯುಕ್ತವಾಗದು. ನಾನು ನಿನ್ನನ್ನೆ ಶರಣು ಹೊಂದಿದವಳು. ಬ್ರಹ್ಮ ವಿಷ್ಣು ಮಹೇಶ್ವರರು ಮುಂತಾದವರು ಯಾರ ಪಾದಕಮಲವನ್ನೆ ಧ್ಯಾನಿಸುವರೋ ಆ ನೀನು ಈಗ ಮಾಯೆಯಿಂದ ಗೋಪವೇಷ ಧರಿಸಿರುವೆ. ಅದು ನನಗೆ ಹೇಗೆ ಗೊತ್ತಾಗುವುದು? ಪತಿ ಎಂಬ ಭಾವನೆಯಿಂದ, ಅಭಿಮಾನದಿಂದ ನಾನು ನಿನಗೆ ಏನಾದರೂ ಅವಿನಯ ತೋರಿದ್ದರೆ, ಅಪರಾಧಸಹಸ್ರವನ್ನು ಗೈದಿದ್ದರೆ ಅವನ್ನು ಕ್ಷಮಿಸು. ನನ್ನ ದರ್ಪವೆಲ್ಲ ಮುರಿದಿದೆ. ನನ್ನ ಸೌಭಾಗ್ಯವನ್ನು ಅರಿಯುವ ಮನೋರಥವೂ ದೂರವಾಗಿದೆ. ಗರ್ಗನ ಮುಖದಿಂದ ಕೇಳಿದರೂ ನಿನ್ನ

ಮಾಯೆಯಿಂದ ಮೋಹಿತಳಾದೆ. ನಿನಗೆ ನಾನೇನೂ ಹೇಳಲು ಶಕ್ತಳಲ್ಲ, ಪ್ರೇಮದಿಂದಲೂ ಭಕ್ತಿಪಾಶದಿಂದಲೂ ಬದ್ಧಳಾಗಿದ್ದೇನೆ. ಆದರೆ ಇಷ್ಟು ಮಾತ್ರ ಹೇಳುತ್ತೇನೆ, ನೀನು ನನ್ನನ್ನು ತೊರೆದು ಹೋದರೆ ನಿನಗೆ ಕಲಂಕ ತಟ್ಟುವುದು. ನಿನ್ನ ಮಕ್ಕಳು ಮೊಮ್ಮಕ್ಕಳೆಲ್ಲರೂ ಬ್ರಾಹ್ಮಣನ ಕೋಪಾಗ್ನಿಯಲ್ಲಿ ಉರಿದು ನಾಶವಾಗುವರು. ನೀನಿಲ್ಲದ ಒಂದು ಕ್ಷಣವೂ ನನಗೆ ನೂರಾರು ಯುಗಗಳಂತಾದೀತು. ಹೇಗೆ ನೂರು ವರ್ಷಕಾಲ ನಿನ್ನನ್ನು ಬಿಟ್ಟು ಬದುಕಿರುವೆನು, ಪ್ರಭು!

ಹೀಗೆ ಹೇಳಿ ರಾಧೆ ಕೋಪದಿಂದ ನೆಲಕ್ಕೊರಗಿ ಮೂರ್ಛೆ ಹೊಂದಿದಳು. ಕೃಷ್ಣ ನೋಡಿ ಅವಳನ್ನು ಎಬ್ಬಿಸಿ ಎದೆಗೆ ತಬ್ಬಿಕೊಂಡ. ಶೋಕನಾಶಕವಾದ ನಾನಾ ಅಧ್ಯಾತ್ಮ ಯೋಗಗಳನ್ನು ಬೋಧಿಸಿದ. ಆದರೂ ಅವಳು ಶೋಕವನ್ನು ಬಿಡಲಿಲ್ಲ. ಸಾಮಾನ್ಯ ವಸ್ತು ಕಳೆದುಹೋದರೂ ಮಾನವರಿಗೆ ದುಃಖವಾಗುವುದು. ದೇಹ ಆತ್ಮಗಳಂತಿರುವ ರಾಧಾಕೃಷ್ಣರ ವಿಯೋಗ ಹೇಗೆ ಸಹನೀಯವಾದೀತು? ಕೃಷ್ಣ ಆ ದಿನ ನಂದಗೋಕುಲಕ್ಕೆ ಹೋಗಲೆ ಇಲ್ಲ. ಈಜುಕೊಳದ ಸಮೀಪಕ್ಕೇ ರಾಧೆಯೊಡನೆ ನಡೆದ. ಅಲ್ಲಿ ಪುನಃ ಅವಳೊಡನೆ ವಿಹಾರ ಮಾಡಿದ. ರಾಧೆ ಈಗ ವಿರಹಾಗ್ನಿಯನ್ನು ಮರೆತು ಕೃಷ್ಣನೊಡನೆ ಪುಷ್ಪಚಂದನತಲ್ಪದಲ್ಲಿ ವಿಹರಿಸಿದಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ರಾಧಾಶೋಕವಿಮೋಚನವೆಂಬ ಅರವತ್ತೆಂಟನೆ ಅಧ್ಯಾಯ ಮುಗಿಯಿತು.*

—o—

## ನಂದನ ಮನೆಗೆ ಶ್ರೀಕೃಷ್ಣಾಗಮನ

**ಅಧ್ಯಾಯ - ೬೯**

**ನಾರದ:-** ರಾಧಾಕೃಷ್ಣರ ಮುಂದಿನ ರಹಸ್ಯ ಚರಿತ್ರೆ, ನಿಗೂಢವಾಗಿದೆ, ಅಸ್ಪಷ್ಟವಿದೆ. ಅದನ್ನು ವಿವರಿಸಿ ಹೇಳು.

**ನಾರಾಯಣ:-** ನಾರದ, ವೇದ ಪುರಾಣಗಳಲ್ಲಿ ಅಡಗಿರುವ ಪರಮಾದ್ಭುತವಾದ ರಹಸ್ಯ ಕಥೆಯನ್ನು ಹೇಳುತ್ತೇನೆ, ಕೇಳು. ಪುನಃ ಭಗವಾನ್ ಕೃಷ್ಣ ರಾಧೆಯೊಡನೆ ವಿಹರಿಸಿದ. ಇಬ್ಬರೂ ಶೃಂಗಾರ ಕಲೆಯಲ್ಲಿ ನಿಷ್ಣಾತರು. ಅರವತ್ತನಾಲ್ಕು ಶೃಂಗಾರಕಲೆಗಳಲ್ಲಿ ಕಾಮಶಾಸ್ತ್ರಗಳಲ್ಲಿ ನಿಪುಣಳು ರಾಧೆ. ಸುಂದರಿಯರಲ್ಲಿ ಸುಂದರಿ. ಸದಾ ಶೃಂಗಾರ ರಸಿಕಳು. ಅವಳ ತಾಯಿ ಪಿತೃಗಳ ಮಾನಸಕನ್ಯೆ. ಶಿವನ ಶಿಷ್ಯೆ. ನೂರುಕಲ್ಪ ಆಯುಷ್ಯ ಉಳ್ಳವಳು. ವೇದವೇದಾಂಗನಿಪುಣೆ. ಯೋಗನೀತಿವಿಶಾರದೆ. ಸಿದ್ಧ ಯೋಗಿನಿಯಾಗಿದ್ದು ನಾನಾ ರೂಪ ಧರಿಸಬಲ್ಲವಳು ಎಂದು ಪ್ರಸಿದ್ಧಳು. ಅವಳ ಮಗಳು ರಾಧೆ ತಾಯಿಯಂತೆಯೆ ನಾನಾ ರೂಪ ಧರಿಸಿ ಕೃಷ್ಣನೊಡನೆ ವಿಹರಿಸಿದಳು. ಕೃಷ್ಣನೂ ಅರವತ್ತನಾಲ್ಕು ವಿದ್ಯೆಗಳನ್ನು ಪ್ರಯೋಗಿಸಿದ. ಆ ಶೃಂಗಾರ ರಸಾನುಭವದಲ್ಲಿ ರಾಧೆ ರೋಮಾಂಚಗೊಂಡಳು. ಸುಖಪರವಶಳಾಗಿ ನಿದ್ದೆ ಹೋದಳು. ನಿದ್ರಿಸುತ್ತಿದ್ದ ಅವಳನ್ನು ನೋಡುತ್ತ ಕೃಷ್ಣ ಸಾಮಾನ್ಯ ಮಾನವನಂತೆ ಕಣ್ಣೀರು ಸುರಿಸಿದ. ಲೋಕ ಶಿಕ್ಷೆಗಾಗಿ ಹಾಗೆ ಮಾಡಿದ. ಪುನಃ ಪುನಃ ಆಲಿಂಗನ ಚುಂಬನ ನಖಕ್ಷತಗಳನ್ನು ಮಾಡಿದ. ಕಣ್ಣೀರಿಂದ ಮೈತೋಯಿಸಿದ. ಅವಳಿಗೆ ಸೀರೆ ಉಡಿಸಿದ. ತಲೆ ಕೂದಲು ಬಾಚಿ ಹೆರಳು ಹಾಕಿದ. ಕುಂಕುಮಗಂಧ ಲೇಪಿಸಿದ. ಅಮೂಲ್ಯರತ್ನಹಾರವನ್ನು ತೊಡಿಸಿದ. ಬೈತಲೆಯಲ್ಲಿ ಸಿಂದೂರವಿಟ್ಟ. ಕೆನ್ನೆಯಲ್ಲಿ ಪದ್ಮಕವನ್ನು ರಚಿಸಿದ. ಕಾಲಿಗೆ ರತ್ನದ ಗೆಜ್ಜೆ ತೊಡಿಸಿದ. ಕಾಲಬೆರಳುಗಳಿಗೂ ಉಗುರುಗಳಿಗೂ ಅಲಕ್ತಕ ಬಳಿದ. ಹೀಗೆ ನಾನಾ ಬಗೆಯ ಸುಂದರ ವೇಷ ಧರಿಸಿ ನಿದ್ದೆ ಮಾಡುತ್ತಿದ್ದ ರಾಧೆಯನ್ನು ಪುನಃ ಕೃಷ್ಣ ಗಾಢವಾಗಿ ಆಲಿಂಗಿಸಿದ. ಅವಳೊಡನೆ ತಾನೂ ನಿದ್ರೆ ಮಾಡಿದ. ಅದೇ ಸಮಯದಲ್ಲಿ ಬ್ರಹ್ಮನು ಶಿವಶೇಷಾದಿ ದೇವತೆಗಳೊಡನೆ ಮತ್ತು ಮುನಿಗಳೊಡನೆ ತಲೆ ಬಾಗಿ ನಮಿಸಿ ಕೃಷ್ಣನನ್ನು ಸಾಮವೇದೋಕ್ತ ಸ್ತೋತ್ರದಿಂದ ಸ್ತುತಿಸಿದ.

**ಬ್ರಹ್ಮ:-** ಕೃಷ್ಣ, ನಿನಗೆ ಜಯವಾಗಲಿ, ಜಯವಾಗಲಿ. ನೀನು ಜಗದೀಶ, ಲೋಕವಂದ್ಯಚರಣ, ನಿರ್ಗುಣ, ನಿರಾಕಾರ, ಸ್ವೇಚ್ಛಾಮಯ, ಭಕ್ತಾನುಗ್ರಹ ನಿತ್ಯವಿಗ್ರಹ, ಮಾಯೆಯಿಂದ ಗೋಪವೇಷ ಧರಿಸಿದವ. ಮಾಯೇಶ, ಸುವೇಷ, ಸುಶೀಲ, ಶಾಂತ, ಸರ್ವಕಾಂತ, ದಾಂತ, ಪೂರ್ಣಜ್ಞಾನಾನಂದ, ಪರಾತ್ಪರ, ಪ್ರಕೃತಿಗೆ ಅತೀತ, ಸರ್ವಾಂತರಾತ್ಮರೂಪ, ನಿರ್ಲಿಪ್ತಸಾಕ್ಷಿ ಸ್ವರೂಪ, ವ್ಯಕ್ತಾವ್ಯಕ್ತ, ನಿರಂಜನ, ಭೂಭಾರಾವತರಣ, ಕರುಣಾರ್ಣವ, ಶೋಕಸಂತಾಪ ನಿವಾರಣ, ಜರಾ ಮರಣ ಭಯಾದಿಹರಣ, ಶರಣ ಪಂಜರ, ಭಕ್ತಾನುಗ್ರಹಕಾರಕ, ಭಕ್ತವತ್ಸಲ, ಭಕ್ತರಿಗಾಗಿ ಸಂಚಿತಧನ ಉಳ್ಳವ, ಸರ್ವಾಧಿಷ್ಠಾತ ದೇವನಾದ ನಿನಗಿದೋ ಓಂ ನಮಃ.

ಬ್ರಹ್ಮ ಹೀಗೆ ಸ್ತೋತ್ರಮಾಡಿ ಮೈ ಮರೆತ.

ಬ್ರಹ್ಮನು ಮಾಡಿದ ಈ ಸ್ತೋತ್ರವನ್ನು ಭಕ್ತಿಯಿಂದ ಕೇಳುವವನು ಸರ್ವಾಭೀಷ್ಟ ಸಿದ್ಧಿ ಹೊಂದುವನು. ಪುತ್ರನಿಲ್ಲದವ ಸತ್ಪುತ್ರನನ್ನು ಪಡೆಯುವನು. ಹೆಂಡತಿ ಇಲ್ಲದವನು ಒಳ್ಳೆಯ ಹೆಂಡತಿಯನ್ನು ಪಡೆಯುವನು. ದರಿದ್ರನು ಪೂರ್ಣ ಐಶ್ವರ್ಯವನ್ನು ಪಡೆಯುವನು. ಇಹದಲ್ಲಿ ಸುಖಭೋಗವನ್ನೂ ಪರದಲ್ಲಿ ಹರಿದಾಸ್ಯವನ್ನೂ ಹೊಂದುವನು. ಮುಕ್ತಿಗಿಂತಲೂ ಹೆಚ್ಚಿನದಾದ ದುರ್ಲಭವಾದ ನಿಶ್ಚಲ ಭಕ್ತಿಯನ್ನೂ ಹೊಂದುವನು.

ಶ್ರೀಕೃಷ್ಣನನ್ನು ಸ್ತುತಿಸಿ ಬ್ರಹ್ಮ ಭಕ್ತಿಯಿಂದ ನುಡಿದ -

**ಬ್ರಹ್ಮ:-** ದೇವ ದೇವೇಶ ಎದ್ದೇಳು. ನಿತ್ಯಾನಂದನಾದ ನಂದನಂದನನೆ, ನಿನಗೆ ನಮಸ್ಕಾರ. ವೃಂದಾವನವನ್ನು ಬಿಟ್ಟು ನಂದನ ಮನೆಗೆ ಹೋಗು. ನೂರು ವರ್ಷ ವಿಯೋಗದ ಸುದಾಮ ಶಾಪವನ್ನು ನೆನೆದುಕೊಳ್ಳು. ಭಕ್ತನ ಶಾಪಕ್ಕೆ ಬೆಲೆ ಕೊಟ್ಟು ಪ್ರಿಯೆಯನ್ನು ತ್ಯಜಿಸು. ಮುಂದೆ ಅವಳನ್ನು ತಿರುಗಿ ಗೋಲೋಕದಲ್ಲಿ ಸೇರು. ನಂದನ ಮನೆಗೆ ಹೋಗಿ ಅಲ್ಲಿಗೆ ಬರುವ ಅಕ್ರೂರನನ್ನು ಕಾಣು. ಆತ ನಿನಗೆ ಚಿಕ್ಕಪ್ಪ, ಮಾನ್ಯ ಧನ್ಯ, ವಿಷ್ಣುಭಕ್ತ. ಅವನೊಂದಿಗೆ ಮಧುರೆಗೆ ಹೋಗು. ಶಿವಧನುಸ್ಸನ್ನು ಮುರಿದು ಕಂಸನ ಸೈನ್ಯವನ್ನು ತರಿದು ದುರಾತ್ಮನಾದ ಆಕಂಸನನ್ನು ವಧಿಸು. ತಂದೆ ತಾಯಿಗಳನ್ನು ಸಂತೈಸು. ದ್ವಾರಕಾ ನಿರ್ಮಾಣ ಮಾಡು, ಭೂಭಾರಹರಣ ಮಾಡು. ಶಿವನ ಕಾಶೀಕ್ಷೇತ್ರವನ್ನು ಸುಡು. ಬಾಣಯುದ್ಧದಲ್ಲಿ ಶಿವನನ್ನು ಸ್ತಂಭಿಸು, ಬಾಣನ ಭುಜಗಳನ್ನು ಕತ್ತರಿಸು. ರುಕ್ಮಿಣಿಯನ್ನು ಅಪಹರಿಸು, ನರಕನನ್ನು ವಧಿಸು, ಹದಿನಾರು ಸಾವಿರ ಸ್ತ್ರೀಯರನ್ನು ಮದುವೆಯಾಗು.

ಅದರಿಂದ ನೀನೀಗ ಪ್ರಿಯೆಯಾದ ರಾಧೆಯನ್ನು ತೊರೆಯಬೇಕು. ನಂದಗೋಕುಲಕ್ಕೆ ತೆರಳಬೇಕು. ಅವಳು ಏಳುವುದಕ್ಕೆ ಮೊದಲೆ ನೀನು ಎದ್ದೇಳು. ಹೀಗೆ ಹೇಳಿ ಬ್ರಹ್ಮ ಇಂದ್ರಾದಿ ದೇವತೆಗಳೊಡನೆ ತನ್ನ ಲೋಕಕ್ಕೆ ತೆರಳಿದ. ದೇವತೆಗಳು ಹೋಗುವಾಗ ಕೃಷ್ಣನ ಮೇಲೆ ಪುಷ್ಪಗಂಧಗಳ ಮಳೆಗರೆದರು. ಅಶರೀರವಾಣಿ ಹೇಳಿತು, 'ಕೃಷ್ಣ, ಕಂಸನನ್ನು ಕೊಲ್ಲು, ತಂದೆತಾಯಿಯರನ್ನು ಬಂಧನದಿಂದ ಬಿಡಿಸು, ಭೂಭಾರ ಹರಣಮಾಡು' ಎಂದು.

ಈ ಮಾತನ್ನು ಕೇಳಿ ಕೃಷ್ಣ ರಾಧೆಯನ್ನು ಬಿಟ್ಟು ನಿಧಾನವಾಗಿ ಎದ್ದ. ಸ್ವಲ್ಪ ದೂರ ನಡೆದು ಪುನಃ ಹಿಂತಿರುಗಿ ನೋಡುತ್ತ ಚಂದನವನದಲ್ಲಿ ಒಂದು ಕ್ಷಣ ನಿಂತ. ಅಷ್ಟರಲ್ಲಿ ರಾಧೆ ನಿದ್ರೆ ಬಿಟ್ಟು ಎದ್ದಳು. ಕೃಷ್ಣನನ್ನು ಕಾಣದೆ 'ಹಾ ನಾಥ ಹಾ ಪ್ರಾಣವಲ್ಲಭ ಪ್ರಿಯತಮ ಎಲ್ಲಿಗೆ ಹೋದೆ?' ಎಂದು ಹುಡುಕುತ್ತ ಜಾಜಿಯ ವನದಲ್ಲಿ ತಿರುಗಿದಳು. ಗಟ್ಟಿಯಾಗಿ ವಿಲಾಪ ಮಾಡಿದಳು, ಅತ್ತಳು. 'ಹೇ ನಾಥ ಬಾ' ಎನ್ನುತ್ತ ಮೂರ್ಛೆಹೋದಳು. ನೆಲದ ಮೇಲೆ ಬಿದ್ದಳು. ಅಲ್ಲಿಗೆ ನೂರಾರು ಸಾವಿರಾರು ಮಂದಿ ಗೋಪಿಯರು ಬಂದರು. ಕೆಲವು ಗೋಪಿಯರು ಚಾಮರವನ್ನೂ ಕೆಲವು ಗೋಪಿಯರು ಚಂದನದ್ರವವನ್ನೂ ತಂದರು. ಅವರಲ್ಲಿ ಒಬ್ಬಳು ರಾಧೆಯನ್ನು ಎದೆಗೆ

ಅಪ್ಪಿಕೊಂಡಳು. ಮೃತಳಂತಿದ್ದ ದೇವಿಯನ್ನು ಕಂಡು ಪ್ರೇಮವಿಹ್ವಲಳಾಗಿ ಅತ್ತಳು. ತಾವರೆಯ ಎಲೆ ಹಾಸಿ ನೀರು ಚಿಮುಕಿಸಿ ಶ್ರೀಗಂಧ ದ್ರವವನ್ನು ಎರೆದು ಅದರ ಮೇಲೆ ದೇವಿಯನ್ನು ಮಲಗಿಸಿದಳು. ಎಲ್ಲರೂ ಬಿಳಿಚಾಮರವನ್ನು ಬೀಸಿದರು. ಶ್ರೀಕೃಷ್ಣನನ್ನು ಗೋಪಿಯರು ತಡೆದು ಬಲಾತ್ಕಾರವಾಗಿ ದೇವಿಯ ಬಳಿಗೆ ಎಳೆದು ತಂದರು, ಅಪರಾಧಿಯನ್ನು ರಾಜಭಟರು ಎಳೆದುತರುವಂತೆ. ಆಗ ಕೃಷ್ಣ ದೇವಿಯನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡು ಪ್ರಜ್ಞೆ ಬರಿಸಿ ಪ್ರಿಯವಚನಗಳಿಂದ ಸಂತೈಸಿದ. ದೇವಿ ಎಚ್ಚೆತ್ತು ಪ್ರಾಣವಲ್ಲಭನನ್ನು ಕಂಡಳು. ಅಪ್ಪಿಕೊಂಡಳು, ನಾನಾ ಪ್ರಕಾರದ ಶೃಂಗಾರ ಲೀಲೆಗಳನ್ನು ಕೃಷ್ಣ ನಡೆಸಿದ. ರತ್ನತಲ್ಪದಲ್ಲಿ ದೇವಿಯನ್ನು ತಬ್ಬಿಕೊಂಡ. ಅವಳ ಸಖಿ ರತ್ನಮಾಲೆ ಮಧುರವಾಗಿ ನುಡಿದಳು -

**ರತ್ನಮಾಲೆ:-** ಕೃಷ್ಣ, ನಾನು ಹೇಳುವುದನ್ನು ಕೇಳು. ದಂಪತಿಗಳು ಮಾಡಬೇಕಾದ ಕರ್ತವ್ಯವನ್ನು ಹೇಳುತ್ತೇನೆ. ವೇದ ಪುರಾಣ ಸಮ್ಮತವಾದ ಲೋಕವ್ಯವಹಾರದಲ್ಲಿ ಪ್ರಶಸ್ತವಾದ ಕಾಮಶಾಸ್ತ್ರ ನೀತಿಯನ್ನು ಹೇಳುತ್ತೇನೆ. ನಾರಿಯರಿಗೆ ಬಂಧುಗಳಲ್ಲಿ ಪ್ರಿಯರೆಂದರೆ ತಾಯಿ ಮತ್ತು ಸೋದರ. ಅವರಿಗಿಂತ ಪ್ರಿಯ ಮಗ. ಮಗನಿಗಿಂತ ಪ್ರಿಯ ಪತಿ. ನೂರು ಮಂದಿ ಮಕ್ಕಳಿಗಿಂತಲೂ ಪತಿಯೆ ಪತಿವ್ರತೆಗೆ ಹೆಚ್ಚಿನವನು. ಶೃಂಗಾರರಸಿಕರಾದ ಸಾಧ್ವಿಯರಿಗೆ ಪತಿಗಿಂತ ಮಿಗಿಲಾದವನಿನ್ನೊಬ್ಬನಿಲ್ಲ. ಪತಿ ಶೃಂಗಾರನಿಪುಣನಾದರೆ ಬಹಳ ಸುಖ ನೀಡಬಲ್ಲ. ಇಲ್ಲದಿದ್ದರೆ ವಿಷತುಲ್ಯನಾಗುತ್ತಾನೆ. ಸತಿಯಲ್ಲಿ ಪ್ರೀತಿ ಮಾಡದಿದ್ದರೆ ಅವನು ಖಳನೆನಿಸುತ್ತಾನೆ. ದಂಪತಿಗಳಿಗೆ ಪರಸ್ಪರ ಪ್ರೀತಿ ಸಮತೆಗಳೆ ಸೌಭಾಗ್ಯ. ಎಲ್ಲಿ ದಂಪತಿಗಳಲ್ಲಿ ಸಮತೆ ಇಲ್ಲವೊ ಆ ಮನೆಯಲ್ಲಿ ಅಲಕ್ಷ್ಮಿ ವಾಸ ಮಾಡುವಳು. ದಂಪತಿಗಳ ಜೀವನ ವ್ಯರ್ಥವಾಗುವುದು. ಪತಿ ಸತಿಗೆ ವಿಮುಖನಾದರೆ ಸತಿಗೆ ಅದೇ ಮಹಾದುಃಖ, ಶೋಕಸಂತಾಪಗಳಿಗೆ ಕಾರಣ. ಅವಳ ಬದುಕು ಅವಳಿಗೆ ಮರಣಕ್ಕಿಂತ ಹೆಚ್ಚಿನ ನೋವು ಉಂಟುಮಾಡುವುದು. ಕನಸಲ್ಲಾಗಲಿ ಎಚ್ಚರದಲ್ಲಾಗಲಿ ಸತಿಗೆ ಪತಿಯೆ ಪ್ರಾಣ. ಸ್ತ್ರೀಗೆ ಇಹಪರಗಳೆರಡರಲ್ಲಿಯೂ ಪತಿಯೇ ಗುರು. ಆದರಿಂದ ನೀನು ಹೊರಟುಹೋದೊಡನೆ ದೇವಿ ಎಚ್ಚರತಪ್ಪಿ ಬಿದ್ದಳು. ಅವಳಿಗೆ ನಾನು ಶೈತ್ಯೋಪಚಾರ ಗೈದೆ. ಆಗ ಚೈತನ್ಯ ಮೂಡಿತು. ಕ್ಷಣಕ್ಷಣಕ್ಕೂ ಹೇ ನಾಥ ಹೇ ಕೃಷ್ಣ ಎನ್ನುತ್ತ ಅಳುತ್ತಾಳೆ. ಮೂರ್ಛೆ ಬೀಳುತ್ತಾಳೆ. ಅವಳ ಶರೀರ ವಿರಹಾಗ್ನಿಯಿಂದ ಕಾದು ಸುಡುತ್ತಿದೆ. ಕಾಯಿಸಿದ ಕಬ್ಬಿಣದಂತೆ, ಬೆಂಕಿಯಂತೆ ಇದೆ. ಅವಳಿಗೆ ನಿದ್ರೆ ಎಚ್ಚರಗಳಲ್ಲಿ ರಾತ್ರಿ ಹಗಲುಗಳಲ್ಲಿ ಮನೆ ಕಾಡುಗಳಲ್ಲಿ ನೆಲ ಜಲಗಳಲ್ಲಿ ಚಂದ್ರೋದಯ ಸೂರ್ಯೋದಯಗಳಲ್ಲಿ ಭೇದವೆ ಇಲ್ಲದಂತಾಗಿದೆ. ಎಲ್ಲೆಡೆ ವಿಷ್ಣುವನ್ನೆ ಕಾಣುತ್ತಾಳೆ. ತಾವರೆ ಎಲೆಗಳ ಹಾಸಿಗೆಯಲ್ಲಿ ಮಲಗಿ ಸಖಿಯರು ಸತತವಾಗಿ ಬೀಸುವ ಬಿಳಿಚಾಮರಗಳ ಗಾಳಿಯಿಂದ ಚಂದನದ್ರವದ ಸೇಚನೆಯಿಂದ ನಿದ್ದೆಮಾಡುತ್ತಾಳೆ. ಅವಳ ಮೈಸೋಕಿದ ಮಾತ್ರಕ್ಕೆ ಕ್ಷಣದಲ್ಲಿ ಚಂದನದ್ರವ ಒಣಗುತ್ತದೆ, ತಾವರೆ ಎಲೆ ಸುಟ್ಟು ಬೂದಿಯಾಗುತ್ತದೆ. ಸಂಪಿಗೆ ಬಣ್ಣದ ಗಂಧ ಕಾಡಿಗೆಯಂತೆ ಕಪ್ಪಾಗುತ್ತದೆ. ಸಿಂದೂರದ ಬಿಂದೂ ಕಪ್ಪಾಗುತ್ತದೆ. ಆದರಿಂದ ವೇಷ

ಭೂಷಣ ವಿಲಾಸ ಕ್ರೀಡೆಗಳನ್ನೂ ದೇವಿ ತೊರೆದಿದ್ದಾಳೆ. ಹೇ ಕೃಷ್ಣ, ಕಮಲಾಕಾಂತ, ನೀನು ಬೇಗನೆ ಬಾರದಿದ್ದರೆ ನಮ್ಮ ಸಖಿ ನಿನ್ನ ವಿಯೋಗವನ್ನು ಸಹಿಸಲಾರದೆ ಪ್ರಾಣತ್ಯಾಗ ಮಾಡುವುದು ನಿಶ್ಚಿತ. ಚೆನ್ನಾಗಿ ವಿಚಾರಿಸಿ ಯಾವುದು ಯುಕ್ತವೋ ಅದನ್ನು ಮಾಡು. ಅಂತೂ ಸ್ತ್ರೀಹತ್ಯೆಯಾಗಕೂಡದು.

ರತ್ನಮಾಲೆಯ ಮಾತನ್ನು ಕೇಳಿ ಶ್ರೀಕೃಷ್ಣ ನಕ್ಕು ರಾಧೆಗೆ ಹಿತವನ್ನು ನುಡಿದ.

**ಶ್ರೀಕೃಷ್ಣ:-** ರಾಧೆ, ನಾನು ಸಮರ್ಥನಾದರೂ ನಿಯಮವನ್ನು ಮೀರಲಾರೆ. ಎಲ್ಲ ಬ್ರಹ್ಮಾಂಡಗಳಲ್ಲಿಯೂ ನಿಯಮವನ್ನು ಮಾಡಿಟ್ಟಿದ್ದೇನೆ. ಅದರಂತೆ ಮುನಿಗಳೂ ದೇವತೆಗಳೂ ಮಾನವರೂ ಕರ್ಮವನ್ನಾಚರಿಸುವರು. ಸುದಾಮನ ಶಾಪದಿಂದ ನೂರು ವರ್ಷಗಳ ವಿಯೋಗ ನಮಗೆ ಅನಿಷ್ಟವಾದರೂ ಸಂಭವಿಸುವುದು ನಿಶ್ಚಿತ. ಆದರೂ ಎಚ್ಚರದಲ್ಲಿ ನಿನಗೆ ಈ ವಿಯೋಗವಿರುವುದು. ಸ್ವಪ್ನದಲ್ಲಿ ಸದಾ ನಾನು ನಿನ್ನ ಜೊತೆಗೇ ಇರುತ್ತೇನೆ. ಜಾಗರದಲ್ಲಿ ನಾನು ನಿನಗೆ ನೀಡಿರುವ ಅಧ್ಯಾತ್ಮೋಪದೇಶದಿಂದ ದುಃಖಶಾಂತಿಯಾಗುವುದು.

ರತ್ನಮಾಲೆ, ರಾಧೆಗೆ ಬುದ್ಧಿ ಹೇಳು ಸಂತೈಸು. ನಿನಗೆ ಶುಭವಾಗಲಿ.

ಹೀಗೆ ಹೇಳಿ ಶ್ರೀಕೃಷ್ಣ ನಂದಗೋಪನ ಮನೆಗೆ ತೆರಳಿದ. ಸಖಿಯರು ರಾಧೆಯನ್ನು ಸಂತೈಸಿದರು. ಶ್ರೀಕೃಷ್ಣ ಮನೆಗೆ ಹೋಗಿ ತಂದೆ ತಾಯಿಗಳನ್ನು ನಮಸ್ಕರಿಸಿದ. ತಾಯಿ ಅವನನ್ನು ತೊಡೆಯಲ್ಲಿ ಕುಳ್ಳಿರಿಸಿ ಹೊಸ ಬೆಣ್ಣೆಯನ್ನು ತಿನಿಸಿದಳು. ತಾಂಬೂಲವಿತ್ತಳು. ತಂಪಿನ ನೀರಿತ್ತಳು. ಕೃಷ್ಣ ತಾಂಬೂಲ ಮೆದ್ದು ನೀರನ್ನು ಕುಡಿದು ತಾಯಿಯ ಬಳಿ ಕುಳಿತ. ಎಲ್ಲ ಗೋಪಾಲಕರೂ ಅವನಿಗೆ ಬಿಳಿ ಚಾಮರ ಬೀಸಿ ಉಪಚರಿಸಿದರು. ಹೂಮಾಲೆ ಗಂಧ ತಾಂಬೂಲಗಳನ್ನಿತ್ತರು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಶ್ರೀಕೃಷ್ಣಾಗಮನವೆಂಬ ಅರವತ್ತೊಂಬತ್ತನೆ ಅಧ್ಯಾಯ ಮುಗಿಯಿತು.*

—o—

## ಅಧ್ಯಾಯ - ೭೦

**ನಾರಾಯಣ:-** ಅಕ್ರೂರ ಕಂಸನ ಆಜ್ಞೆಯಂತೆ ಮನೆಗೆ ಹೋಗಿ ಮಿಷ್ಟಾನ್ನ ಉಂಡು ಕರ್ಪೂರ ತಾಂಬೂಲವನ್ನು ಮೆದ್ದು ಪರಿಮಳದ ನೀರನ್ನು ಕುಡಿದು ಹಾಸಿಗೆಯಲ್ಲಿ ಮಲಗಿ ನಿದ್ದೆ ಹೋದ. ಬೆಳಗಿನ ಜಾವದಲ್ಲಿ ಸುಸ್ವಪ್ನವನ್ನು ಕಂಡ. ಆರೋಗ್ಯವಂತನು ಜೋಡಿ ವಸ್ತ್ರ ಧರಿಸಿ ತಲೆಕೂದಲು ಕಟ್ಟಿಕೊಂಡು ಒಳ್ಳೆಯ ಹಾಸಿಗೆಯಲ್ಲಿ ಚಿಂತಾಶೋಕ ರಹಿತನಾಗಿ ಸುಖನಿದ್ರೆ ಮಾಡುತ್ತ ಬೆಳಗಿನ ಜಾವದಲ್ಲಿ ಸ್ವಪ್ನಕಂಡರೆ ಅದು ನಿಜವಾಗುವುದು. ಅಕ್ರೂರ ಹಾಗೇ ಸುಸ್ವಪ್ನವನ್ನು ಕಂಡ. ಪೀತಾಂಬರ ವನಮಾಲೆಗಳನ್ನು ಧರಿಸಿ ಮೈಗೆ ಶ್ರೀಗಂಧ ಬಳಿದುಕೊಂಡ ಸರ್ವಾಲಂಕಾರ ಭೂಷಿತನಾದ ನವಿಲ ಗರಿಯಿಂದ ಅಲಂಕೃತನಾದ ಕಮಲದಂಥ ಕಣ್ಣಿನ ದ್ವಿಭುಜನಾದ ದ್ವಿಜಬಾಲಕ ಕೊಳಲನ್ನು ಹಿಡಿದು ನಿಂತಂತೆ ಸ್ವಪ್ನವನ್ನು ಕಂಡ. ಪೀತಾಂಬರ ಉಟ್ಟು ರತ್ನಾಭರಣ ಭೂಷಿತಳಾದ ಶರಚ್ಚಂದ್ರನಂಥ ಮುಖಉಳ್ಳ, ಪತಿಪುತ್ರವತಿಯಾದ ಸುಮಂಗಲಿ ಕೈಯಲ್ಲಿ ಉರಿವ ದೀಪವನ್ನೂ ಬಿಳಿಧಾನ್ಯವನ್ನೂ ಹಿಡಿದಂತೆ ಸ್ವಪ್ನವನ್ನು ಕಂಡ. ಶುಭಾಶೀರ್ವಾದವನ್ನು ಮಾಡುವ ಬ್ರಾಹ್ಮಣನನ್ನು ಕಂಡ. ಸರೋವರದಲ್ಲಿ ಬಿಳಿಕಮಲಗಳನ್ನೂ ಹಂಸವನ್ನೂ ಕಂಡ. ಪುಷ್ಪಫಲಗಳಿಂದ ತುಂಬಿದ ಮಾವು ಬೇವು ತೆಂಗು ಬಾಳೆ ಮುಂತಾದುವನ್ನೂ ಕಂಡ, ಬಿಳಿ ಹಾವನ್ನು ಕಂಡ. ತಾನು ಬೆಟ್ಟವನ್ನೇರಿ ನಿಂತಂತೆ, ಮರವನ್ನು ಆನೆಯನ್ನು ಕುದುರೆಯನ್ನು ನೌಕೆಯನ್ನು ಏರಿದಂತೆ, ವೀಣಾವಾದನ ಮಾಡುತ್ತಿದ್ದಂತೆ, ಪಾಯಸ ತಿಂದಂತೆ ಮೊಸರು ಹಾಲುಗಳಿಂದ ಕೂಡಿದ ಅನ್ನವನ್ನು ತಾವರೆಯ ಎಲೆಯಲ್ಲಿ ಉಂಡಂತೆ, ಬಿಳಿಧಾನ್ಯ ಹೂಗಳನ್ನು ಹಿಡಿದಂತೆ, ಚಂದನ ಬಳಿದುಕೊಂಡಂತೆ, ಅರಮನೆಯಲ್ಲಿ ಸಮುದ್ರದಲ್ಲಿ ಕುಳಿತಂತೆ ಸ್ವಪ್ನಕಂಡ. ತಾನು ಮೈಯೆಲ್ಲ ಮಲಕ್ರಿಮಿಸಹಿತನಾಗಿ ಅಳುತ್ತಿರುವಂತೆ ಮೈಯೆಲ್ಲ ಛಿನ್ನಭಿನ್ನವಾಗಿ ಕೊಬ್ಬು ಕೀವುಗಳಿಂದ ಯುಕ್ತನಾಗಿದ್ದಂತೆಯೂ ಕನಸುಕಂಡ. ಬೆಳ್ಳಿ, ಬಿಳಿಯಾದ ರತ್ನ, ಚಿನ್ನ, ಮುತ್ತು, ಮಾಣಿಕ್ಯ, ತುಂಬಿದ ಕೊಡ, ಕರುವಿನಿಂದ ಕೂಡಿದ ಆಕಳು, ಎತ್ತು, ನವಿಲು, ಗಿಳಿ, ಕೊಕ್ಕರೆ, ಹಂಸ, ತಾಂಬೂಲ, ಹೂಮಾಲೆ, ಉರಿವ ಬೆಂಕಿ, ದೇವತಾರಾಧನೆ, ಪಾರ್ವತೀ ಪ್ರತಿಮೆ, ಕೃಷ್ಣ ಪ್ರತಿಮೆ, ಶಿವಲಿಂಗ ಬ್ರಾಹ್ಮಣ ಬಾಲಕ ಬಾಲಕಿ, ಬೆಳೆದು ನಿಂತ ಬೆಳೆ, ಶ್ರೇಷ್ಠನಾದ ರಾಜ, ಸಿಂಹ, ಹುಲಿ, ಗುರು, ದೇವತೆಗಳನ್ನೂ ಕನಸಿನಲ್ಲಿ ಅಕ್ರೂರ ಕಂಡ.

ಸ್ವಪ್ನವನ್ನು ಕಂಡು ಎದ್ದ ಅಕ್ರೂರ ಆಹ್ನಿಕವನ್ನು ತೀರಿಸಿ ಉದ್ಧವನಿಗೆ ಸ್ವಪ್ನ ವೃತ್ತಾಂತವನ್ನು ಹೇಳಿ ಅವನ ಅನುಮತಿ ಪಡೆದು ಗುರುದೇವತಾರ್ಚನೆ ಮಾಡಿ ಶ್ರೀಕೃಷ್ಣಧ್ಯಾನ ಪೂರ್ವಕವಾಗಿ ಪ್ರಯಾಣ ಮಾಡಿದ. ದಾರಿಯಲ್ಲಿ ಶುಭಶಕುನಗಳೆ ಕಂಡು ಬಂದುವು. ಅವನ ಅಭೀಷ್ಟ ಸಿದ್ಧಿಯಾಗುವುದೆಂದು ಸೂಚಿಸಿದುವು. ಅವನ ಎಡಕ್ಕೆ ಶವ ನರಿ ಪೂರ್ಣಕುಂಭ ಪತಿಪುತ್ರವತಿಯಾದ ದಿವ್ಯಾಭರಣಭೂಷಿತಳಾದ ಸಾಧ್ವಿ, ಬಿಳಿ ಹೂಮಾಲೆ ಧಾನ್ಯಗಳು ಕಂಡುಬಂದುವು. ಬಲಕ್ಕೆ ಉರಿವ ಅಗ್ನಿ ಬ್ರಾಹ್ಮಣ ಎತ್ತು ಆನೆ, ಕರುವಿನೊಡನೆ ಆಕಳು, ಬಿಳಿ ಕುದುರೆ ರಾಜಹಂಸ ವೇಶ್ಯೆ ಪುಷ್ಪಮಾಲೆ ಪತಾಕೆ

ಮೊಸರು, ಪಾಯಸ, ಮಣಿ, ಬಂಗಾರ, ಬೆಳ್ಳಿ ಮುತ್ತು ಮಾಣಿಕ್ಯ ಮದ್ಯ ಮಾಂಸ ಚಂದನ ತುಪ್ಪ ಕೃಷ್ಣಮೃಗ ಹಣ್ಣು ಅರಳು ಅನ್ನ ಕನ್ನಡಿ ವಿಮಾನ ಪ್ರತಿಮೆ ಬಿಳಿಕಮಲ ತಾವರೆ ಕೊಳ ಬೆಕ್ಕು ಬೆಟ್ಟ ಮೋಡ ನವಿಲು ಗಿಳಿ ಹಂಸ, ಶಂಖಧ್ವನಿ, ಕೋಗಿಲೆಯ ಧ್ವನಿ, ಹರಿಸಂಕೀರ್ತನೆ ಹರಿನಾಮ ಜಯಧ್ವನಿ ಇಂಥ ಶುಭಶಕುನಗಳನ್ನು ದಾರಿಯುದ್ದಕ್ಕೂ ನೋಡುತ್ತ ಅಕ್ರೂರ ವೃಂದಾವನಕ್ಕೆ ಬಂದ. ಅಲ್ಲಿ ಚಂದನ ಅಗುರು ಕಸ್ತೂರಿ ಪುಷ್ಪ ಚಂದನಗಳಿಂದ ಪರಿಮಳದ ಗಾಳಿ ಬೀಸುತ್ತಿತ್ತು. ಮಂಗಲಕಲಶಗಳು ಬಾಳೆಕಂಬಗಳು ಮಾವಿನ ತಳಿರು ಪಟ್ಟಸೂತ್ರಗಳು ಇವುಗಳಿಂದ ಶೋಭಿತವಾದ ಮೂರುಕೋಟಿ ರತ್ನಮಂದಿರಗಳು ನೂರುಕೋಟಿ ಬಳ್ಳಿ ಮನೆಗಳು ಕಂಡು ಬಂದುವು. ಅಕ್ರೂರ ಅವುಗಳನ್ನು ಕಾಣುತ್ತ ಮುಂದೆ ರಮ್ಯವಾದ ನಂದಗೋಕುಲವನ್ನೂ ಕಂಡ. ಅದು ವೈಕುಂಠನ ನಿಲಯ, ವೈಕುಂಠ ಸದೃಶ, ರತ್ನಸೋಪಾನಯುಕ್ತ. ರತ್ನ ಸ್ತಂಭಯುಕ್ತ, ರತ್ನ ಖಚಿತ. ವಿಶ್ವಕರ್ಮನಿಂದ ನಿರ್ಮಿತವಾಗಿತ್ತು. ಅಕ್ರೂರ ರಾಜದ್ವಾರವನ್ನು ಪ್ರವೇಶಿಸಿದ. ಮುಂದೆ ಎಲ್ಲಿ ನೋಡಿದರೂ ಮುತ್ತು ಮಾಣಿಕ್ಯ ಭೂಷಿತ ಪತಾಕೆಗಳು ರತ್ನದರ್ಪಣಗಳು ಮಂಗಲ ಕಲಶಗಳು ಇದ್ದುವು.

ಅಕ್ರೂರನ ಆಗಮನವಾರ್ತೆಯನ್ನು ಕೇಳಿ ನಂದ ಆನಂದಪಟ್ಟ. ರಾಮ ಕೃಷ್ಣರಿಂದಲೂ ವೃಷಭಾನು ಮೊದಲಾದ ಗೋಪರಿಂದಲೂ ಕೂಡಿ ವೇಶ್ಯೆಯರನ್ನು ಮುಂದೆ ಮಾಡಿಕೊಂಡು ಪೂರ್ಣಕಲಶ ಆನೆ ಬಿಳಿಧಾನ್ಯ ಕಪ್ಪುಹಸು ಮಧುಪರ್ಕ ಪಾದ್ಯ ರತ್ನಾಸನ ಮುಂತಾದುವನ್ನು ಹಿಡಿದು ಆದರದಿಂದ ನಂದ ಅಕ್ರೂರನನ್ನು ಇದಿರುಕೊಂಡ. ಆಲಿಂಗಿಸಿದ. ಎಲ್ಲ ಗೋಪಾಲಕರೂ ತಲೆಬಾಗಿ ನಮಿಸಿ ಆಶೀರ್ವಾದ ಪಡೆದರು. ಎಲ್ಲರೂ ಪರಸ್ಪರ ಕೂಡಿ ಸಂತೋಷ ಪಟ್ಟರು. ಅಕ್ರೂರ ಕೃಷ್ಣನನ್ನು ತೊಡೆಯಲ್ಲಿ ಇರಿಸಿಕೊಂಡ. ರಾಮನನ್ನೂ ತೊಡೆಯಲ್ಲಿರಿಸಿಕೊಂಡ. ಕೆನ್ನೆಗೆ ಮುದ್ದಿಸಿ ರೋಮಾಂಚಗೊಂಡ. ಕಣ್ಣಲ್ಲಿ ಆನಂದಬಾಷ್ಪ ಸುರಿಸಿದ. ನನ್ನ ಅಭೀಷ್ಟ ಸಿದ್ಧಿಸಿತು, ನಾನಿನ್ನು ಕೃತಾರ್ಥ ಎಂದುಕೊಂಡ.

ಅಕ್ರೂರ ಕೃಷ್ಣನ ಅದ್ಭುತರೂಪವನ್ನು ಕಂಡು ಆನಂದಿಸಿದ. ಪೀತಾಂಬರ ಉಟ್ಟು ಜಾಜಿಯ ಹೂಮಾಲೆ ತೊಟ್ಟು ಮೈಗೆ ಶ್ರೀಗಂಧ ಲೇಪಿಸಿಕೊಂಡ ದ್ವಿಭುಜ ಮುರಲೀಧರ ಬಾಲರೂಪವನ್ನು ಬ್ರಹ್ಮಶಿವ ಶೇಷಾದಿ ದೇವತೆಗಳು ಸನಕಾದಿ ಮುನಿಗಳು ಸ್ತೋತ್ರ ಮಾಡುತ್ತಾರೆ. ಗೋಪಕನ್ಯೆಯರು ಪ್ರೇಮದಿಂದ ನೋಡುತ್ತಾರೆ. ಕ್ಷಣದಲ್ಲಿ ಆ ದ್ವಿಭುಜರೂಪ ಚತುರ್ಭುಜವಾಗುತ್ತದೆ. ಲಕ್ಷ್ಮೀ ಸರಸ್ವತೀ ಯುಕ್ತವಾಗಿ ವನಮಾಲಾ ಭೂಷಿತವಾಗಿ ಸುನಂದ ನಂದ ಕುಮುದರೆಂಬ ಪಾರ್ಷದರಿಂದ ಸೇವಿಸಲ್ಪಡುತ್ತದೆ. ಪುನಃ ಚತುರ್ಭುಜ ರೂಪವೆ. ಪಂಚಮುಖ ತ್ರಿಣೇತ್ರ ಶುದ್ಧಸ್ಫಟಿಕಕಾಂತಿ ನಾಗಾಭರಣ ಭೂಷಿತ ದಿಗಂಬರ ಭಸ್ಮಲಿಪ್ತ ಜಟಾಧಾರಿ ಜಪಮಾಲಾಹಸ್ತ ಧ್ಯಾನನಿರತ ಮೂರ್ತಿಯಾಗುತ್ತದೆ. ಪುನಃ ಆ ರೂಪ ಚತುರ್ಮುಖವಾಗುತ್ತದೆ. ಧರ್ಮಶೇಷ ಸೂರ್ಯರೂಪ ತಾಳುತ್ತದೆ. ಕೋಟಿ ಮನ್ಮಥರನ್ನು ಧಿಕ್ಕರಿಸುವ ಸೌಂದರ್ಯದಿಂದ ಮೆರೆಯುತ್ತದೆ. ಇಂಥ ಅದ್ಭುತ ಶಿಶುವಾದ ಕೃಷ್ಣನನ್ನು ಅಕ್ರೂರ ಎದೆಗೆ ತಬ್ಬಿಕೊಂಡು ನಂದನು ನೀಡಿದ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ಭಕ್ತಿಯಿಂದ ಪ್ರದಕ್ಷಿಣೆ ಮಾಡಿ ರೋಮಾಂಚಗೊಂಡು ನೆಲದ ಮೇಲೆ ತಲೆ ಇಟ್ಟು ನಮಸ್ಕರಿಸಿ ಸ್ತೋತ್ರ ಮಾಡಿದ.

**ಅಕ್ರೂರ:-** ಸರ್ವಕ್ಕೂ ಕಾರಣರೂಪನಾದ ಪರಮಾತ್ಮ ಸ್ವರೂಪಿ ಕೃಷ್ಣನಿಗೆ ನಮಸ್ಕಾರ. ಸರ್ವೇಶ್ವರ, ಪ್ರಕೃತಿಗೆ ಪರ, ಪರಾತ್ಪರ, ನಿರ್ಗುಣ ನೀರೂಪ ನಿರೀಹ ಸರ್ವದೇವಸ್ವರೂಪ ಸರ್ವದೇವೇಶ್ವರ ಸರ್ವದೇವಾಧಿದೇವ ವಿಶ್ವಾದಿರೂಪಿ ಬ್ರಹ್ಮ ವಿಷ್ಣು ಶಿವಾತ್ಮಕ, ವಿಶ್ವರೂಪ, ಆದಿಬೀಜ, ಗೋಪಾಂಗನೇಶ, ಗಣೇಶೇಶ್ವರ ರೂಪ, ರಾಧೇಶ, ರಾಧಾರಮಣ, ರಾಧಾರೂಪಧರ, ರಾಧಾರಾಧ್ಯ, ರಾಧಾಪ್ರಾಣಾಧಿಕತರ, ರಾಧಾಸಾಧ್ಯ, ರಾಧಾದಿದೇವ ಪ್ರಿಯತಮ, ರಾಧಾಪ್ರಾಣಾಧಿದೇವ, ವೇದಸ್ತುತ, ಆತ್ಮವೇದಜ್ಞರೂಪಿ ವೇದಾಧಿಷ್ಠಾತೃ ದೇವ, ವೇದಬೀಜ, ವಿಶ್ವಾಧಾರ ಮಹಾವಿಷ್ಣುಪ್ರಭು, ವಿಶ್ವೇಶ, ಪ್ರಕೃತಿ ಪ್ರಾಕೃತರೂಪ, ಪ್ರಕೃತೀಶ್ವರ ಪ್ರಧಾನರೂಪ ಇಂಥ ಕೃಷ್ಣನಿಗೆ ನಮಸ್ಕಾರ.

ಹೀಗೆ ಅಕ್ರೂರ ಸ್ತೋತ್ರ ಮಾಡಿ ಮೈಮರೆತ. ನೆಲದ ಮೇಲೆ ಬಿದ್ದ. ಪುನಃ ಮೂರ್ಛೆಯಲ್ಲಿ ಹೊರಗಿನ ಮತ್ತು ಹೃದಯದೊಳಗಿನ ಪರಮಾತ್ಮ ರೂಪವನ್ನೆ ಕಂಡ. ಹೀಗೆ ಅಕ್ರೂರ ಮೂರ್ಛಿತನಾದುದನ್ನು ಕಂಡು ನಂದ ಆದರದಿಂದ ಅವನನ್ನು ರತ್ನಸಿಂಹಾಸನದಲ್ಲಿ ಕುಳ್ಳಿರಿಸಿದ. ಮಿಷ್ಟಾನ್ನ ಉಣಿಸಿ ಕುಶಲ ಪ್ರಶ್ನ ಮಾಡಿದ. ಅಕ್ರೂರ ಕಂಸನ ವೃತ್ತಾಂತವನ್ನು ಹೇಳಿ ರಾಮ ಕೃಷ್ಣರು ಅವರ ತಂದೆತಾಯಿಗಳನ್ನು ಬಂಧ ಮುಕ್ತರನ್ನಾಗಿ ಮಾಡಲು ಮಧುರೆಗೆ ಹೋಗಬೇಕಾಗಿದೆ ಎಂದ.

ಅಕ್ರೂರ ಮಾಡಿದ ಸ್ತೋತ್ರವನ್ನು ಪಠಿಸಿದರೆ ಅಪುತ್ರನಿಗೆ ಪುತ್ರಲಾಭ, ಪತ್ನಿ ಇಲ್ಲದವನಿಗೆ ಪತ್ನೀಲಾಭ, ನಿರ್ಧನನಿಗೆ ಧನಲಾಭ, ಭೂಮಿ ಇಲ್ಲದವನಿಗೆ ಭೂಲಾಭ, ಯಶಸ್ಸು ಪ್ರತಿಷ್ಠೆಗಳನ್ನು ಬಯಸುವವನಿಗೆ ಯಶಸ್ಸು ಪ್ರತಿಷ್ಠೆಗಳು ಅನಾಯಾಸವಾಗಿ ಲಭಿಸುವುವು.

ರಾತ್ರಿ ಅಕ್ರೂರ ಸಂಪಿಗೆ ಹೂವಿನ ಹಾಸಿಗೆಯಲ್ಲಿ ಕೃಷ್ಣನನ್ನು ಹೃದಯದಲ್ಲಿ ಧ್ಯಾನಿಸುತ್ತ ಮಲಗಿದ. ಬೆಳಿಗ್ಗೆ ಎದ್ದು ಆಹ್ನಿಕ ಮುಗಿಸಿ ರಾಮ ಕೃಷ್ಣರನ್ನು ರಥದಲ್ಲಿ ಕುಳ್ಳಿರಿಸಿಕೊಂಡ. ಜೊತೆಗೆ ವೃಷಭಾನು ನಂದ ಸುನಂದ ಚಂದ್ರಭಾನರನ್ನೂ ಕುಳ್ಳಿರಿಸಿಕೊಂಡ. ಐದು ಬಗೆಯ ಗವ್ಯವನ್ನೂ ನಾನಾ ದ್ರವ್ಯಗಳನ್ನೂ ಇರಿಸಿಕೊಂಡು ಪ್ರಯಾಣಕ್ಕೆ ಹೊರಟ. ಮೃದಂಗ ಮದ್ದಳೆ ಪಟಹ ಡಕ್ಕೆ ದುಂದುಭಿ ಮುಂತಾದ ಮಂಗಳ ವಾದ್ಯಗಳನ್ನು ನಂದಗೋಪ ಮೊಳಗಿಸಿದ. ವಾದ್ಯಘೋಷವನ್ನು ಕೇಳಿದ ಗೋಪಿಯರು ರಾಮ ಕೃಷ್ಣರು ಹೊರಟರೆಂದು ತಿಳಿದರು. ಕೃಷ್ಣ ರಥದಲ್ಲಿದ್ದುದನ್ನು ನೋಡಿ ಕೋಪಗೊಂಡರು. ಅವರನ್ನು ರಾಧೆಯೆ ಕಳಿಸಿದ್ದಳು. ಅವರು ಕೃಷ್ಣನ ರಥವನ್ನು ಕಾಲಿಂದ ಒದ್ದು ಪುಡಿಮಾಡಿದರು. ಎಲ್ಲ ಗೋಪರು ಹಾಹಾಕಾರ ಮಾಡುತ್ತಿದ್ದಂತೆ ಗೋಪಿಯರು ಕೃಷ್ಣನನ್ನು ಎದೆಗೆ ತಬ್ಬಿಕೊಂಡು ಎತ್ತಿ ರಾಧೆಯ ಬಳಿಗೆ ಒಯ್ದರು. ಅಕ್ರೂರನನ್ನು ಬಯ್ದರು, ಬಟ್ಟೆಯಿಂದ ಬಿಗಿದು ಕಟ್ಟಿದರು, ಕೈಯಿಂದ ಹೊಡೆದರು, ಅವನುಟ್ಟ ಬಟ್ಟೆಯನ್ನು ಸೆಳೆದರು. ಮೈಯೆಲ್ಲ ಗಾಯ ಮಾಡಿದರು. ಕೃಷ್ಣ ರಾಧೆಯ ಬಳಿಗೆ ಹೋಗಿ ಬುದ್ಧಿ ಹೇಳಿದ, ಅಧ್ಯಾತ್ಮೋಪದೇಶ ನೀಡಿ ಸಂತೈಸಿದ. ಅಕ್ರೂರನನ್ನೂ ಸಮಾಧಾನ ಮಾಡಿ ಆಕಾಶದಿಂದ ಬಂದಿಳಿದ ವಿಶ್ವಕರ್ಮನಿರ್ಮಿತ ದಿವ್ಯ ರಥದಲ್ಲಿ ಮರುದಿನ ಪ್ರಯಾಣ ಮಾಡಲು ನಿಶ್ಚಯಿಸಿ ತಾಯಿ ಯಶೋದೆಯ ಬಳಿಗೆ ಬಂದ. ಶ್ರೀಕೃಷ್ಣ ಅಂದು ರಾತ್ರಿ ಬಂಧುಗಳೊಡನೆ ಉಂಡು ಸುಖವಾಗಿ ಮಲಗಿದ. ಗೋಪಿಯರೂ ರಾಧೆಯೊಡನೆ ಹೂವಿನ

**ಹಾಸಿಗೆಯಲ್ಲಿ ಮಲಗಿದರು. ಗೋಕುಲವಾಸಿಗಳೆಲ್ಲರೂ ಆನಂದ ಯುಕ್ತರಾದರು. ಕೆಲವರು ಹಾಡಿದರು, ಕೆಲವರು ಕುಣಿದರು.**

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಗೋಪೀವಿಷಯವೆಂಬ ಎಪ್ಪತ್ತನೆ ಅಧ್ಯಾಯ ಮುಗಿಯಿತು.*

—o—

## ಶ್ರೀಕೃಷ್ಣನ ಮಧುರಾ ಪ್ರಯಾಣ

**ಅಧ್ಯಾಯ - ೭೧**

**ನಾರಾಯಣ:-** ಪುಷ್ಪಚಂದನ ತಲ್ಪದಲ್ಲಿ ಸುಗಂಧವಾಯುವನ್ನು ಸೇವಿಸುತ್ತ ರಾಧೆಯೂ ಗೋಪಿಯರೂ ನಿದ್ರಿಸಿದರು. ರಾತ್ರಿ ಮೂರನೆ ಯಾಮ ಕಳೆದಾಗ ಶ್ರೀಕೃಷ್ಣ ಎದ್ದು ಯಶೋದೆಯನ್ನು ಸಂತೈಸಿ ಬಂಧುಗಳಿಗೂ ಸಮಾಧಾನ ಹೇಳಿ ಶುಭ ಚಂದ್ರ ನಕ್ಷತ್ರಗಳಲ್ಲಿ ಅಮೃತಯೋಗದಲ್ಲಿ ಶುಭಲಗ್ನದಲ್ಲಿ ಪ್ರಯಾಣಕ್ಕೆ ಹೊರಟ. ಮಂಗಳ ವಾದ್ಯ ಘೋಷವನ್ನು ಬೇಡವೆಂದ. ರಾಧೆಗೆ ಎಚ್ಚರವಾದೀತೆಂದು ಭಯ. ಸ್ವತಂತ್ರನಾದ ರಕ್ಷಕ, ಸ್ವಾಮಿ, ಆದರೂ ಭಕ್ತವಾತ್ಸಲ್ಯದಿಂದ ಭಯಗೊಂಡವನಂತೆ ತೋರಿಕೊಂಡ. ಮೊದಲಿಗೆ ಕಾಲುಗಳನ್ನು ತೊಳೆದುಕೊಂಡು ಶುಭ್ರವಸ್ತ್ರಗಳನ್ನು ಧರಿಸಿ, ಸಾರಿಸಿದ ನೆಲದಲ್ಲಿ ಎಡದಲ್ಲಿ ಹಣ್ಣು ಚಿಗುರೆಲೆಗಳಿಂದ ಕೂಡಿದ ಪೂರ್ಣಕುಂಭವನ್ನೂ ಬಲದಲ್ಲಿ ಅಗ್ನಿ ಬ್ರಾಹ್ಮಣರನ್ನೂ, ಎದುರಿನಲ್ಲಿ ಪತಿಪುತ್ರವತಿಯಾದ ಸುಮಂಗಲಿಯನ್ನೂ ದೀಪವನ್ನೂ ದರ್ಪಣವನ್ನೂ ಇರಿಸಿ ದೂರ್ವೆ ಹೂ ಮತ್ತು ಬಿಳಿ ಧಾನ್ಯಗಳನ್ನೂ ಪುರೋಹಿತರ ಕೈಯಿಂದ ಪಡೆದು ತಲೆ ಮೇಲೆ ಇರಿಸಿಕೊಂಡ. ಬಳಿಕ ತುಪ್ಪ ಜೇನು ಬೆಳ್ಳಿ ಚಿನ್ನ ಮೊಸರು ಇವುಗಳನ್ನು ದರ್ಶನ ಮಾಡಿದ. ಶ್ರೀಗಂಧ ಲೇಪಿಸಿಕೊಂಡು ಹೂ ಮಾಲೆಯನ್ನು ಕೊರಳಲ್ಲಿ ಧರಿಸಿದ. ಪುರೋಹಿತ ವರ್ಗದವರನ್ನೂ ಬೇರೆ ಬ್ರಾಹ್ಮಣರನ್ನೂ ವಂದಿಸಿದ. ಶಂಖಧ್ವನಿ, ವೇದಪಾಠ, ಸಂಗೀತ, ಮಂಗಳಾಷ್ಟಕ, ಬ್ರಾಹ್ಮಣಾಶೀರ್ವಾದಗಳನ್ನು ಆಲಿಸಿದ. ಸರ್ವತ್ರಮಂಗಳದಾಯಕವಾದ ತನ್ನದೇ ಆದ ಮಂಗಳ ಸ್ವರೂಪವನ್ನು ಧ್ಯಾನಿಸುತ್ತ ಎಡಮೂಗಿನ ಹೊಳ್ಳೆಯಿಂದ ವಾಯುವನ್ನು ತೆಗೆದುಕೊಂಡು ಬಲಹೊಳ್ಳೆಯಿಂದ ಬಿಟ್ಟು ಬಲಗಾಲು ಮುಂದಿಟ್ಟು ಶ್ರೀಕೃಷ್ಣ ಅಂಗಳಕ್ಕೆ ಇಳಿದ. ನಿತ್ಯಾನಂದನಾದ ನಿತ್ಯನೂತನ ರೂಪನಾದ ನಿತ್ಯನೂತನ ವೇಷನೂ ಆದ ಕೃಷ್ಣ ಮಧುರೆಗೆ ಹೊರಟು ಅಂಗಳದಲ್ಲಿ ಕ್ಷಣಕಾಲ ನಿಂತ. ಬಾಳೆಕಂಬಗಳಿಂದ ಮಾವಿನ ಚಿಗುರೆಲೆಗಳಿಂದ ಕಸ್ತೂರೀ ಕುಂಕುಮ ಚಂದನಗಳಿಂದ ಕೂಡಿ ಅಲಂಕೃತವಾದ ಆಅಂಗಳದಲ್ಲಿ ಕೃಷ್ಣ ಅಕ್ರೂರ ಹಾಗೂ ಬಂಧುಬಾಂಧವರ ಜೊತೆಗೆ ನಿಂತ. ಅವನನ್ನು ಎಡ ಪಾರ್ಶ್ವದಲ್ಲಿ ಯಶೋದೆಯೂ ಬಲ ಪಾರ್ಶ್ವದಲ್ಲಿ ನಂದನೂ ಆನಂದದಿಂದ ತಬ್ಬಿಕೊಂಡು ಮುದ್ದಿಸಿದರು. ಬಾಂಧವರೆಲ್ಲರೂ ಸತ್ಕರಿಸಿದರು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಯಾತ್ರಾಮಂಗಲವೆಂಬ ಎಪ್ಪತ್ತೊಂದನೆ ಅಧ್ಯಾಯ ಮುಗಿಯಿತು.*

—o—

## ಕಂಸವಧೆ, ದೇವಕೀ ವಸುದೇವ ಮೋಕ್ಷಣ

ಅಧ್ಯಾಯ - ೭೨

**ನಾರಾಯಣ:-** ಶ್ರೀಕೃಷ್ಣ ಗುರುನಮಸ್ಕಾರ ಮಾಡಿ ಸ್ವರ್ಗದಿಂದ ಇಳಿದು ಬಂದಿದ್ದ ದಿವ್ಯವಾದ ರಥವನ್ನೇರಿ ಮಧುರೆಗೆ ತೆರಳಿದ. ಮಧುರೆ ಇಂದ್ರನ ಅಮರಾವತಿಯನ್ನೂ ನಾಚಿಸುವಂತೆ ಶೋಭಿಸುತ್ತಿತ್ತು. ಅದು ವಿಶ್ವಕರ್ಮ ನಿರ್ಮಿತ, ರತ್ನಮಯ. ಅಮೂಲ್ಯ ರತ್ನಕಲಶಗಳಿಂದ ವಿರಾಜಮಾನವಾಗಿತ್ತು. ನೂರಾರು ಬೀದಿಗಳು ರತ್ನಗಳಿಂದ ತುಂಬಿದ ಅಂಗಡಿಗಳಿಂದ ಶೋಭಿಸುತ್ತಿದ್ದುವು. ಪಟ್ಟಣದ ಸುತ್ತಲೂ ಸಾವಿರಾರು ಸರೋವರಗಳಿದ್ದುವು. ಅಲ್ಲಿ ನಾರಿಯರೆಲ್ಲರೂ ಸ್ಥಿರ ಯೌವನ ಯುಕ್ತರಾಗಿ ರತ್ನಾಭರಣ ಭೂಷಿತರಾಗಿದ್ದರು. ಶ್ರೀಕೃಷ್ಣನ ದರ್ಶನಕ್ಕಾಗಿ ಕಾದಿದ್ದರು. ಅಕ್ಷತೆ ಕಾಳು ಹಿಡಿದು ಚಂಚಲನಯನಗಳಿಂದ ಈಕ್ಷಿಸುತ್ತಿದ್ದರು.

ಶ್ರೀಕೃಷ್ಣ ನಗರವನ್ನು ಪ್ರವೇಶಿಸುತ್ತಿದ್ದಂತೆ ದಾರಿಯಲ್ಲಿ ಇಳಿವಯಸ್ಸಿನ ಗೂನಿಯನ್ನು ಕಂಡ. ಊರುಗೋಲು ಊರುತ್ತ ಕೈಯಲ್ಲಿ ಗಂಧದ ಬಟ್ಟಲನ್ನು ಹಿಡಿದು ಮೆಲ್ಲನೆ ನಡೆಯುತ್ತಿದ್ದಳು. ಅವಳು ಕೃಷ್ಣನನ್ನು ಕಂಡೊಡನೆ ತಲೆಬಾಗಿ ನಮಿಸಿ ಕೈಯಲ್ಲಿದ್ದ ಕಸ್ತೂರೀಕುಂಕುಮ ಯುಕ್ತವಾದ ಮನೋಹರವಾದ ಗಂಧವನ್ನು ಅವನ ಶ್ಯಾಮವರ್ಣದ ಸುಂದರವಾದ ಮೈಗೆ ಲೇಪಿಸಿ ಪ್ರದಕ್ಷಿಣೆಗೈದು ನಮಿಸಿದಳು. ಶ್ರೀಕೃಷ್ಣನ ದೃಷ್ಟಿಮಾತ್ರದಿಂದ ಸಾಕ್ಷಾತ್ ಲಕ್ಷ್ಮೀಯಂತೆ ಸುಂದರ ರೂಪ ಯೌವನ ಭರಿತಳಾದಳು. ನಿರ್ಮಲ ವಸ್ತ್ರ ಉಟ್ಟ ರತ್ನಾಭರಣ ಭೂಷಿತೆಯಾದ ಹನ್ನೆರಡು ವಯಸ್ಸಿನ ಕನ್ಯೆಯಂತೆ ಮನೋಹರಳಾಗಿ ಕಂಡಳು. ಅವಳು ಓರೆಗಣ್ಣಿಂದ ಕೃಷ್ಣನನ್ನು ಈಕ್ಷಿಸುತ್ತ ಅವನ ಸಂಗವನ್ನು ಬಯಸಿದಳು. ಕೃಷ್ಣ ಅವಳನ್ನು ಸಂತೈಸಿ ಮುಂದೆ ನಡೆದ. ಅವಳು ತನ್ನ ಮನೆಗೆ ಹೋದರೆ ಮನೆ ಆಗಲೆ ಸಂಪತ್ತಿನ ಆಗರವಾಗಿತ್ತು. ರತ್ನಮಯವಾದ ಶಯ್ಯೆ, ರತ್ನದೀಪಸಾಲುಗಳು ರತ್ನದರ್ಪಣಗಳು ಶ್ವೇತ ಚಾಮರಗಳನ್ನು ಹಿಡಿದ ದಾಸದಾಸಿಯರು ಕಂಡು ಬಂದರು. ಅವಳು ಅಲ್ಲಿ ಮಿಷ್ಟಾನ್ನ ಉಂಡು ರತ್ನಪರ್ಯಂಕದಲ್ಲಿ ದಾಸದಾಸಿಯರಿಂದ ಸೇವಿಸಲ್ಪಡುತ್ತ ಸುಖನಿದ್ರೆ ಮಾಡಿದಳು. ಕಸ್ತೂರಿ ಕುಂಕುಮ ಸಹಿತವಾದ ಗಂಧವನ್ನೂ ಕರ್ಪೂರ ತಾಂಬೂಲವನ್ನೂ ಕೃಷ್ಣನಿಗಾಗಿ ಸಿದ್ಧಪಡಿಸಿದಳು. ಜಾಜಿಯ ಹೂಮಾಲೆ ಕರ್ಪೂರಾದಿಗಳಿಂದ ಸುಗಂಧಭರಿತವಾದ ತಂಪಾದ ನೀರನ್ನೂ ಸ್ವಾದುವಾದ ಮಿಷ್ಟಾನ್ನವನ್ನೂ ಕೃಷ್ಣನಿಗೆ ಎಂದು ಇರಿಸಿ ಅವನ ಪಾದವನ್ನೆ ತ್ರಿಕರಣಗಳಿಂದ ಆರಾಧಿಸುತ್ತ ಜಗತ್ತನ್ನೆ ಕೃಷ್ಣಮಯವನ್ನಾಗಿ ಕಂಡಳು.

ಶ್ರೀಕೃಷ್ಣ ಮುಂದೆ ಹೂವಾಡಿಗನನ್ನು ಕಂಡ. ಅವನು ಅರಮನೆಗೆ ಹೂಮಾಲೆಗಳನ್ನು ಒಯ್ಯುತ್ತಿದ್ದ. ಅವನೂ ಶ್ರೀಕೃಷ್ಣನನ್ನು ಕಂಡೊಡನೆ ನೆಲದ ಮೇಲೆ ಶಿರಸಾಷ್ಟಾಂಗ ಪ್ರಣಾಮ ಮಾಡಿ ಹೂಮಾಲೆಗಳನ್ನಿತ್ತ. ಕೃಷ್ಣ ಅವನಿಗೆ ಅತಿದುರ್ಲಭವಾದ ತನ್ನ ದಾಸ್ಯವನ್ನಿತ್ತ.

ಶ್ರೀಕೃಷ್ಣ ಅಗಸನನ್ನು ಕಂಡ. ಅವನು ಅರಮನೆಗೆ ಬಟ್ಟೆಗಳನ್ನು ಒಯ್ಯುತ್ತಿದ್ದ. ಬಲಿಷ್ಠನೂ ಯೌವನಶಾಲಿಯೂ ಆಗಿದ್ದು ಅಹಂಕಾರಿಯಾಗಿದ್ದ. ಕೃಷ್ಣ ಅವನಲ್ಲಿ ವಿನಯದಿಂದ ವಸ್ತ್ರವನ್ನು ಬೇಡಿದ. ಅವನು ವಸ್ತ್ರ ನೀಡಲಿಲ್ಲ, ಬಿರು ನುಡಿಗಳನ್ನಾಡಿದ.

**ಅಗಸ:-** ದನ ಮೇಸುವವರಿಗೆ ರಾಜಯೋಗ್ಯವಾದ ವಸ್ತ್ರಗಳು ಯೋಗ್ಯವಲ್ಲ. ಸ್ತ್ರೀಲಂಪಟನಾದ ನೀನು ಗೊಲ್ಲರ ಹೆಣ್ಣುಗಳನ್ನು ಕೂಡಿ ವೃಂದಾವನದಲ್ಲಿ ಮಾಡಿದ ಆಟಗಳಿಗೆ ಈ ಮಧುರೆಯ ಬೀದಿಗಳು ಸ್ಥಳವಲ್ಲ. ಇಂಥ ಕೆಟ್ಟಕೆಲಸಕ್ಕೆ ಶಿಕ್ಷೆ ನೀಡುವ ರಾಜನಾದ ಕಂಸ ಇಲ್ಲಿ ಇದ್ದಾನೆ.

ಅಗಸನ ಮಾತನ್ನು ಕೇಳಿ ಕೃಷ್ಣ ನಕ್ಕ. ಬಲರಾಮ ಅಕ್ರೂರ ಮತ್ತು ಎಲ್ಲ ಗೊಲ್ಲರೂ ನಕ್ಕರು. ಒಂದು ಕೈಯ ಏಟಿನಿಂದ ಅವನನ್ನು ಕೊಂದು ಬಟ್ಟೆಗಳನ್ನು ಎತ್ತಿಕೊಂಡು ಧರಿಸಿದ. ತನ್ನವರಿಗೆಲ್ಲರಿಗೂ ಬಟ್ಟೆಗಳನ್ನಿತ್ತ. ಅಗಸ ದಿವ್ಯಶರೀರ ಧಾರಿಯಾಗಿ ದಿವ್ಯವಿಮಾನವನ್ನೇರಿ ಗೋಲೋಕಕ್ಕೆ ತೆರಳಿದ. ಅಲ್ಲಿ ಪಾರ್ಷದನಾಗಿ ಕೃಷ್ಣನ ಆಗಮನವನ್ನು ಇದಿರು ನೋಡುತ್ತ ನಿಂತ. ಅಷ್ಟರಲ್ಲಿ ಸಂಜೆಯಾಯಿತು. ಅಕ್ರೂರ ತನ್ನ ಮನೆಗೆ ನಡೆದ. ಕೃಷ್ಣನೂ ಒಬ್ಬ ವಿಷ್ಣುಭಕ್ತನಾದ ನೇಕಾರನ ಮನೆಗೆ ನಡೆದ. ಆತ ಬಡವನಾದರೂ ಆನಂದದಿಂದ ಕೃಷ್ಣನನ್ನೂ ಅವನ ಪರಿವಾರವನ್ನೂ ಸತ್ಕರಿಸಿದ. ಕೃಷ್ಣ ಅವನಿಗೂ ಬ್ರಹ್ಮಾದಿಗಳಿಗೆ ದುರ್ಲಭವಾದ ತನ್ನ ದಾಸ್ಯವನ್ನಿತ್ತ. ಎಲ್ಲರೂ ಮಿಷ್ಟಾನ್ನ ಉಂಡು ಹಾಸಿಗೆಗಳಲ್ಲಿ ಮಲಗಿ ನಿದ್ದೆ ಹೋದರು.

ಶ್ರೀಕೃಷ್ಣ ಗೂನಿಯ ಮನೆಗೆ ಹೋಗಿ ಅವಳು ಹಾಸಿಗೆಯಲ್ಲಿ ನಿದ್ರಿಸುತ್ತಿದ್ದುದನ್ನು ಕಂಡ. ಅವಳನ್ನು ಕೃಷ್ಣ ಎಬ್ಬಿಸಿ ಹೇಳಿದ.

**ಶ್ರೀಕೃಷ್ಣ:-** ಚೆಲುವೆ, ಎದ್ದೇಳು ನನ್ನೊಡನೆ ರಮಿಸು. ಹಿಂದೆ ನನ್ನ ರಾಮಾವತಾರ ಕಾಲದಲ್ಲಿ ನೀನು ರಾವಣನ ತಂಗಿ ಶೂರ್ಪಣಖೆಯಾಗಿದ್ದೆ. ಆಗ ನನಗಾಗಿ ತಪಸ್ಸು ಮಾಡಿದೆ. ಅದರ ಪ್ರಭಾವದಿಂದ ಈಗ ಕೃಷ್ಣಾವತಾರದಲ್ಲಿ ನನ್ನನ್ನು ಸೇರುತ್ತಿರುವೆ. ನನ್ನೊಡನೆ ಈಗ ರಮಿಸಿ ನನ್ನ ಗೋಲೋಕವನ್ನು ಸೇರು.

ಶ್ರೀಕೃಷ್ಣ ಹೀಗೆ ಹೇಳಿ ಅವಳೊಡನೆ ನಾನಾ ವಿಧವಾದ ಶೃಂಗಾರ ಲೀಲೆಯನ್ನು ನಡೆಸಿದ. ಅವಳು ಸುಖದಲ್ಲಿ ಮೈಮರೆತು ಹಗಲು ರಾತ್ರಿ ಸ್ವರ್ಗಮರ್ತ್ಯಗಳ ಭೇದವನ್ನೆ ಅರಿಯದಂತಾದಳು. ರಾತ್ರಿ ಕಳೆದು ಬೆಳಗಾದಾಗ ಗೋಲೋಕದಿಂದ ದಿವ್ಯವಾದ ರಥ ಬಂದಿತು. ಆ ರಥವನ್ನೇರಿ ಅವಳು ಗೋಲೋಕವನ್ನು ಸೇರಿದಳು. ಕೃಷ್ಣ ಕ್ಷಣಕಾಲ ಅಲ್ಲಿ ಇದ್ದು ನಂದನಿರುವಲ್ಲಿಗೆ ನಡೆದ.

ಕಂಸ ರಾತ್ರಿ ನಿದ್ರೆಯಲ್ಲಿ ತನ್ನ ಮರಣ ಸೂಚಕವಾದ ದುಃಸ್ವಪ್ನವನ್ನು ಕಂಡು ಭಯವಿಹ್ವಲನಾದ. ಸೂರ್ಯ ನಾಲ್ಕು ತುಂಡಾಗಿ ಭೂಮಿಗೆ ಬಿದ್ದುದನ್ನೂ ಚಂದ್ರ ಹತ್ತು ತುಂಡುಗಳಾಗಿ ಬಿದ್ದುದನ್ನೂ ಬೆತ್ತಲೆಯಾದ ವಿಕೃತಾಕಾರದ ಪುರುಷರು ಹಗ್ಗ ಹಿಡಿದುದನ್ನೂ ವಿಧವೆಯಾದ ಶೂದ್ರಪತ್ನಿ ಮೂಗು ಕುಯ್ದುಕೊಂಡು ಬೆತ್ತಲೆಯಾಗಿ ರುಂಡಮಾಲೆ ಧರಿಸಿ ಖಡ್ಗ ಕಪಾಲಗಳನ್ನು ಹಿಡಿದು ನಾಲಿಗೆ ಹೊರ ಚಾಚಿದುದನ್ನೂ ಕಂಡ. ಕತ್ತೆ ಕೋಣ ಕರಡಿ ಹಂದಿ ಕಾಗೆ ಗಿಡುಗ ಕಪಿ ನಾಯಿ ಮೊಸಳೆ ನರಿ ಬೂದಿಯ

ರಾಶಿ ಎಲುಬಿನ ರಾಶಿ ತಾಳೆಹಣ್ಣು ತಲೆಕೂದಲು ಆರಳೆ ಇದಿಲು ಉಲ್ಕೆ ಶವ ಕುಂಬಾರನ ಗಾಣಿಗನ ಚಕ್ರಗಳು, ಸ್ಮಶಾನ, ಸುಟ್ಟ ಕಟ್ಟಿಗೆ, ಒಣಗಿದ ಕಟ್ಟಿಗೆ, ದರ್ಭೆ ಹುಲ್ಲು, ಓಡಾಡುವ ರುಂಡವಿಲ್ಲದ ದೇಹ, ಹೆಣದ ತಲೆ, ಬೂದಿ ಹರಡಿದ ಸ್ಮಶಾನ, ನೀರಿಲ್ಲದ ಕೊಳ ಇವನ್ನು ಕನಸಿನಲ್ಲಿ ಕಂಡ. ಅರ್ಧಸುಟ್ಟ ಕಾಡನ್ನೂ ಕಂಡ. ಶೂದ್ರನೊಬ್ಬ ಕುಷ್ಠರೋಗಿಯಾಗಿ ನಗ್ನನಾಗಿ ತಲೆಕೂದಲು ಹರವಿಕೊಂಡಿದ್ದುದನ್ನೂ ಕಂಡ. ಗುರುವಾದ ಬ್ರಾಹ್ಮಣ ಕೋಪದಿಂದ ಶಪಿಸುವುದನ್ನೂ ಕಂಡ. ಯೋಗಿಯಾದ ವಿಷ್ಣುಭಕ್ತನಾದ ಯತಿಯೊಬ್ಬ ಬಹಳ ಕುಪಿತನಾಗಿದ್ದುದನ್ನೂ ಕಂಡ. ಇಂಥ ದುಃಸ್ವಪ್ನಗಳನ್ನು ಕಂಡು ಕಂಸ ತಾಯಿ ತಂದೆ ಸೋದರರ ಮುಂದೆಯೂ ಅಳುತ್ತಿರುವ ಹೆಂಡತಿಯ ಮುಂದೆಯೂ ಹೇಳಿದ. ಮಲ್ಲಯುದ್ಧದ ವೀಕ್ಷಣೆಗಾಗಿ ರಂಗಮಂಚವನ್ನೂ ಆಸನಗಳನ್ನೂ ಸಿದ್ಧ ಪಡಿಸಿ ಬಾಗಿಲಲ್ಲಿ ಆನೆಯನ್ನೂ ನಿಲ್ಲಿಸಿದ. ಮಲ್ಲರಿಗೂ ಸೈನ್ಯಗಳಿಗೂ ಮಂಗಲಕಾರ್ಯ ಮಾಡಿಸಿದ. ಸಭೆಯನ್ನು ಏರ್ಪಡಿಸಿದ. ಸಭೆಯಲ್ಲಿ ವಿಲಕ್ಷಣವಾದ ಖಡ್ಗವನ್ನು ಹಿಡಿದು ಸಿಂಹಾಸನದಲ್ಲಿ ಕುಳಿತ. ಯುದ್ಧ ಕೋವಿದರಾದ ಯೋಧರನ್ನು ಯುದ್ಧಕ್ಕೆ ಅಣಿಯಾಗಿಸಿ ನಿಲ್ಲಿಸಿದ. ರಾಜರನ್ನೂ ಬ್ರಾಹ್ಮಣರನ್ನೂ ಮುನಿಗಳನ್ನೂ ಬಂಧು ಮಿತ್ರರನ್ನೂ ಆಸನಗಳಲ್ಲಿ ಕುಳ್ಳಿರಿಸಿದ.

ಆಗ ಶ್ರೀಕೃಷ್ಣ ಬಲರಾಮನೊಂದಿಗೆ ಬಂದು ಅನಾಯಾಸವಾಗಿ ಶಿವಧನುಸ್ಸನ್ನು ಮುರಿದ. ಆಗ ಉದ್ಭೂತವಾದ ಆ ಮಹಾಧ್ವನಿ ಕೇಳಿ ಇಡಿ ಮಥುರೆಯೆ ಕಿವುಡಾಯಿತು. ಕಂಸ ವಿಷಾದ ಹೊಂದಿದ. ಕೃಷ್ಣ ಆನಂದಿತನಾದ. ಸಭಾಮಧ್ಯದಲ್ಲಿ ಆನೆಯನ್ನೂ ಮಲ್ಲರನ್ನೂ ಕೊಂದು ವಿರಾಜಮಾನನಾದ. ಅವನನ್ನು ನಾನಾ ಬಗೆಯ ಜನರು ನಾನಾ ಬಗೆಯಿಂದ ಕಂಡುಕೊಂಡರು. ಯೋಗಿಗಳಿಗೆ ಪರಮಾತ್ಮನಾಗಿ, ರಾಜರಿಗೆ ರಾಜನಾಗಿ, ತಂದೆತಾಯಿಗಳಿಗೆ ಮುದ್ದುಮಗುವಾಗಿ, ಕಾಮಿನಿಯರಿಗೆ ಕೋಟಿಕಂದರ್ಪಲೀಲಾ ಲಾವಣ್ಯಶಾಲಿಯಾಗಿ, ಕಂಸನಿಗೆ ಕಾಲಪುರುಷನಾಗಿ, ಕಂಸನ ಬಂಧುಗಳಿಗೆ ವೈರಿಯಾಗಿ, ಮಲ್ಲರಿಗೆ ಮೃತ್ಯುವಾಗಿ, ಯಾದವರಿಗೆ ಪ್ರಾಣಸ್ವರೂಪನಾಗಿ, ಕೃಷ್ಣ ಕಂಡುಬಂದ. ಶ್ರೀಕೃಷ್ಣ ಮುನಿಗಳನ್ನೂ ಬ್ರಾಹ್ಮಣರನ್ನೂ ತಾಯಿ ತಂದೆ ಗುರುಗಳನ್ನೂ ನಮಿಸಿ ಸುದರ್ಶನಚಕ್ರಧಾರಿಯಾಗಿ ಕಂಸನ ಬಳಿಗೆ ಬಂದ. ಭಕ್ತನಾದ ಕಂಸನನ್ನು ಭಕ್ತಬಂಧುವಾದ ಕರುಣಾನಿಧಿಯಾದ ಕೃಷ್ಣ ಕಂಡು ಸಿಂಹಾಸನದಿಂದ ಅವನನ್ನು ಎಳೆದು ಕೊಡಹಿ ಲೀಲೆಯಿಂದ ಕೊಂದ. ಆಗ ಕಂಸ ಸಮಸ್ತವಿಶ್ವವೇ ಕೃಷ್ಣಮಯವಾಗಿದ್ದುದ್ದನ್ನು ಕಂಡ. ಎದುರಿಗೇ ರತ್ನಹಾರಗಳಿಂದ ಅಲಂಕೃತವಾದ ದಿವ್ಯಯಾನವನ್ನು ಕಂಡು ತಾನು ದಿವ್ಯರೂಪ ತಳೆದು ರಥವೇರಿ ವಿಷ್ಣುಲೋಕವನ್ನು ಸೇರಿದ. ಅವನ ತೇಜಸ್ಸು ಕೃಷ್ಣನ ಪಾದಕಮಲವನ್ನು ಪ್ರವೇಶಿಸಿತು.

ಶ್ರೀಕೃಷ್ಣ ಕಂಸನಿಗೆ ಉತ್ತರಕ್ರಿಯೆ ಮಾಡಿಸಿ ಬ್ರಾಹ್ಮಣರಿಗೆ ಧನವನ್ನಿತ್ತ. ಉಗ್ರಸೇನನಿಗೆ ಪಟ್ಟಾಭಿಷೇಕ ಮಾಡಿದ. ಕಂಸನ ತಾಯಿ ಹೆಂಡತಿ ಮುಂತಾದವರು ಬಂಧುಬಾಂಧವರು ಎಲ್ಲರೂ ವಿಲಾಪ ಮಾಡಿದರು. 'ರಾಜ, ಏಳು ಸಿಂಹಾಸನದಲ್ಲಿ ಕುಳಿತು ದರ್ಶನ ನೀಡು ರಾಜ್ಯವನ್ನಾಳು, ಬಾಂಧವರನ್ನೂ ಸೈನ್ಯವನ್ನೂ ಕಾಪಾಡು.

ಅನಾಥರಾದ ನಿನ್ನ ಬಂಧುಗಳನ್ನು ತೊರೆದು ಎಲ್ಲಿಗೆ ಹೋಗುತ್ತಿರುವೆ? ಬ್ರಹ್ಮಾದಿ ಸ್ತಂಬ ಪರ್ಯಂತ ಅಸಂಖ್ಯ ವಿಶ್ವವನ್ನು ಲೀಲೆಯಿಂದ ಸೃಜಿಸುವ, ಬ್ರಹ್ಮ ಶಿವ ಶೇಷ ಧರ್ಮ ಸೂರ್ಯ ಗಣಪತಿ ಮುನಿಗಳು ದೇವೇಂದ್ರ ಇವರೆಲ್ಲರಿಗೂ ಧ್ಯೇಯಮೂರ್ತಿಯಾದ ವೇದವೇದ್ಯನಾದ ಪ್ರಕೃತಿಗೆ ಅತೀತನಾದ ಸ್ವೇಚ್ಛಾಮಯ ನಿರೀಹ ನಿರ್ಗುಣ ನಿರಂಜನ ಪರಾತ್ಪರ ಬ್ರಹ್ಮ ಪರಮಾತ್ಮನಾದ ನಿತ್ಯಜ್ಯೋತಿಃಸ್ವರೂಪ ನಿತ್ಯಾನಂದನಾದ ಹರಿ ಭೂಭಾರಹರಣಕ್ಕಾಗಿ ಮಾಯೆಯಿಂದ ಬಾಲಗೋಪಾಲ ರೂಪನಾಗಿ ಅವತರಿಸಿದ್ದಾನೆ. ಅವನ ಕೈಯಲ್ಲಿ ಸಾಯುವವನನ್ನು ಯಾರು ತಾನೆ ರಕ್ಷಿಸಬಲ್ಲ? ಅವನಿಂದ ರಕ್ಷಿತನಾದವನನ್ನು ಯಾರು ಕೊಲ್ಲಬಲ್ಲ? ಹೀಗೆ ಹೇಳಿ ಎಲ್ಲರೂ ಸುಮ್ಮನಾದರು. ಶ್ರೀಕೃಷ್ಣ ತಂದೆ ತಾಯಿಗಳ ಬಳಿಗೆ ಹೋಗಿ ಅವರನ್ನು ಬಂಧನದಿಂದ ಬಿಡಿಸಿದ. ದಂಡ ಪ್ರಣಾಮಮಾಡಿ ಭಕ್ತಿಯಿಂದ ತಲೆಬಾಗಿ ಸ್ತುತಿಸಿದ.

**ಶ್ರೀಕೃಷ್ಣ:-** ತಂದೆ ತಾಯಿಗಳನ್ನೂ ವಿದ್ಯೋಪದೇಶ ಮಂತ್ರೋಪದೇಶ ಗೈವ ಗುರುವನ್ನೂ ಯಾರು ಕಾಪಾಡುವುದಿಲ್ಲವೋ ಅವನು ಬದುಕಿರುವಷ್ಟೂ ಕಾಲ ಅಶುಚಿ. ಪೂಜಾರ್ಹರಾದವರಲ್ಲೆಲ್ಲ ತಂದೆಯೆ ಮೇಲು. ತಂದೆಗಿಂತ ನೂರುಪಾಲು ಮಾತೆ. ಏಕೆಂದರೆ ಅವಳು ಗರ್ಭದಲ್ಲಿ ಹೊತ್ತು ಹೆತ್ತು ಪೋಷಿಸುವಳು. ಮಾತೆ ಎಂದರೆ ಭೂಮಿ ಸ್ವರೂಪಳು, ಎಲ್ಲರಿಗೂ ಹಿತ ಉಂಟುಮಾಡುವವಳು. ಮಾತೆಗಿಂತ ಮಿಗಿಲಾದ ಬಂಧು ಇಡಿ ಪ್ರಪಂಚದಲ್ಲಿಯೆ ಇಲ್ಲ. ವಿದ್ಯೆ ಮಂತ್ರಗಳನ್ನು ನೀಡುವ ಗುರು ಮಾತೆಗಿಂತಲೂ ಉತ್ತಮ. ಅವನಿಗಿಂತಲೂ ವಂದ್ಯ ಪೂಜ್ಯ ಇನ್ನೊಬ್ಬನಿಲ್ಲ.

ಹೀಗೆ ಹೇಳಿ ಶ್ರೀಕೃಷ್ಣನೂ ಬಲರಾಮನೂ ನಮಿಸಿದರು. ತಂದೆ ತಾಯಿಯರು ಅವರನ್ನು ತೊಡೆಯಲ್ಲಿರಿಸಿಕೊಂಡು ಮಿಷ್ಟಾನ್ನ ಉಣಿಸಿದರು. ನಂದ ಗೋಪಾಲಕರಿಗೆ ಅನ್ನ ನೀಡಿದ. ಮಂಗಳಕಾರ್ಯ ಮಾಡಿಸಿ ಬ್ರಾಹ್ಮಣರಿಗೆ ಭೋಜನವನ್ನೂ ಧನವನ್ನೂ ನೀಡಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಕಂಸವಧ ವಸುದೇವದೇವಕೀಮೋಕ್ಷಣವೆಂಬ ಎಪ್ಪತ್ತೆರಡನೆ ಅಧ್ಯಾಯ ಮುಗಿಯಿತು.*

—o—

**ನಾರಾಯಣ:-** ಶ್ರೀಕೃಷ್ಣ ಶೋಕಾರ್ತನಾದ ನಂದಗೋಪನಿಗೆ ಪುತ್ರವಿಯೋಗ ದುಃಖ ದೂರವಾಗುವಂತೆ ದಿವ್ಯವಾದ ಆಧ್ಯಾತ್ಮಿಕೋಪದೇಶಗಳನ್ನು ನೀಡಿದ.

**ಶ್ರೀಕೃಷ್ಣ:-** ನಂದ, ನಾನು ಹೇಳುವುದನ್ನು ಕೇಳು, ಶೋಕವನ್ನುಬಿಡು, ಆನಂದ ಹೊಂದು. ನಾನು ಹಿಂದೆ ಬ್ರಹ್ಮನಿಗೆ ಉಪದೇಶಿಸಿದ ತತ್ವಜ್ಞಾನವನ್ನೆ ಈಗ ನಿನಗೆ ಉಪದೇಶಿಸುತ್ತೇನೆ. ಶೇಷ ಗಣೇಶ ಶಿವ ಸೂರ್ಯ ಮುನಿಗಳು ಯೋಗಿಗಳಿಗೆ ಪುಷ್ಕರದಲ್ಲಿ ಹೇಳಿದ್ದನ್ನೆ ನಿನಗೆ ಹೇಳುತ್ತೇನೆ. ನೋಡು, ಯಾರು ಯಾರಿಗೆ ಪುತ್ರ, ಯಾರು ಯಾರಿಗೆ ಪಿತ? ಯಾರು ಯಾರಿಗೆ ಮಾತೆ? ಸಂಸಾರದಲ್ಲಿ ಕರ್ಮಾನುಸಾರ ತಂದೆ ತಾಯಿಗಳಾಗಿ ಮಕ್ಕಳಾಗಿ ಬರುತ್ತಾರೆ ಹೋಗುತ್ತಾರೆ. ಕರ್ಮಾನುಸಾರ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಸ್ತ್ರೀಯರಲ್ಲಿ ಪ್ರಾಣಿಗಳಲ್ಲಿ ಹುಟ್ಟುತ್ತಾರೆ. ಎಲ್ಲರೂ ನನ್ನ ಮಾಯೆಯಿಂದಲೆ ವಿಷಯಭೋಗದಲ್ಲಿ ಸುಖವನ್ನು ಕಾಣುತ್ತಾರೆ. ಶರೀರತ್ಯಾಗ ಕಾಲದಲ್ಲಿ ದುಃಖಿಸುತ್ತಾರೆ. ಬಂಧುವಿಯೋಗದಿಂದ ಅಳುತ್ತಾರೆ. ಸಂತತಿ ಭೂಮಿ ಧನಾದಿಗಳ ನಾಶ ಮರಣಕ್ಕಿಂತ ಹೆಚ್ಚು ದುಃಖಕರ. ಅದು ಸದಾ ಸಂಭವಿಸುತ್ತದೆ. ಮೂಢ ಅದಕ್ಕೆ ದುಃಖಿಸುತ್ತಾನೆ. ಜ್ಞಾನಿ ದುಃಖಿಸುವುದಿಲ್ಲ. ನನ್ನಲ್ಲಿ ಭಕ್ತಿ ಇಟ್ಟು ಜಿತೇಂದ್ರಿಯನಾಗಿ ನನ್ನನ್ನು ಆರಾಧಿಸುವವ, ನನ್ನ ಮಂತ್ರ ಜಪಿಸುವವ ಶುಚಿಯಾಗಿರುತ್ತಾನೆ. ನನ್ನ ಭಯದಿಂದ ಗಾಳಿ ಬೀಸುತ್ತದೆ. ಸೂರ್ಯ ಹೊಳೆಯುತ್ತಾನೆ. ಚಂದ್ರ ಬೆಳಗುತ್ತಾನೆ. ಇಂದ್ರ ಮಳೆಗರೆಯುತ್ತಾನೆ. ಅಗ್ನಿ ದಹಿಸುತ್ತಾನೆ. ಮೃತ್ಯು ಜಂತುಗಳಲ್ಲಿ ಸಂಚರಿಸುತ್ತಾನೆ. ಕಾಲಕಾಲಕ್ಕೆ ವೃಕ್ಷಗಳು ಹೂ ಹಣ್ಣುಗಳನ್ನು ಕೊಡುತ್ತವೆ. ನಿರಾಧಾರನಾದ ವಾಯು ಕೂರ್ಮನಿಗೆ ಆಧಾರ. ಕೂರ್ಮ ಶೇಷನಿಗೆ ಆಧಾರ. ಶೇಷ ಪರ್ವತಗಳಿಗೆ ಆಧಾರ. ಜಲವು ನಿಶ್ಚಲ, ಜಲದಲ್ಲಿ ಭೂಮಿ ನಿಶ್ಚಲ. ಭೂಮಿ ಸಪ್ತ ಸ್ವರ್ಗಗಳಿಗೆ ಆಧಾರ. ಗ್ರಹಗಳಿಗೆ ಜ್ಯೋತಿಶ್ಚಕ್ರ ಆಧಾರ. ನಿರಾಧಾರ ವೈಕುಂಠ ಬ್ರಹ್ಮಾಂಡಕ್ಕಿಂತ ಮೇಲೆ. ಅದಕ್ಕಿಂತ ಗೋಲೋಕ ಮೇಲೆ. ಅದಕ್ಕೆ ಏಳು ಬಾಗಿಲುಗಳು. ಸುತ್ತಲೂ ವಿರಜಾನದಿ. ಶತಶೃಂಗಗಳುಳ್ಳ ರತ್ನ ಪರ್ವತಗಳು. ಶತಕೋಟಿ ಯೋಜನ ಎತ್ತರ ಉದ್ದಗಲ ಉಳ್ಳವುಗಳು. ಅಲ್ಲಿಯೆ ಕೋಟಿಯೋಜನ ವಿಸ್ತೀರ್ಣವಾದ ರಾಸಮಂಡಲ. ಅಮೂಲ್ಯ ರತ್ನಗಳಿಂದ ನಿರ್ಮಿತ. ಅದಕ್ಕೆ ಸುತ್ತಲೂ ಹೂಗಳಿಂದ ತುಂಬಿದ ಪಾರಿಜಾತವನ. ಸಾವಿರ ಕಲ್ಪವೃಕ್ಷಗಳ ಪುಷ್ಪೋದ್ಯಾನ. ಮೂರು ಕೋಟಿ ರತ್ನ ಭವನಗಳು. ಲಕ್ಷ ಗೋಪಿಯರು ಅಲ್ಲಿ ಅವುಗಳನ್ನು ಕಾಪಾಡುವರು. ರತ್ನದೀಪ ರತ್ನತಲ್ಪಗಳಿಂದ ನಾನಾ ಭೋಗಗಳಿಂದ ಅಮೃತದ ನೂರಾರು ಭಾವಿಗಳಿಂದ ಕೂಡಿದೆ.

ಗೋಲೋಕದಲ್ಲಿರುವ ಮನೆಗಳ ಸಂಖ್ಯೆಯನ್ನು ಹೇಳಬಲ್ಲವನಾರು? ಅದನ್ನು ಯಾರೂ ತಿಳಿಯರು. ಶ್ರೀಕೃಷ್ಣನಿಗೇ ಗೊತ್ತು. ಮೂರು ಕೋಟಿ ರತ್ನಗೃಹಗಳು ರಾಧೆಯ ಶಿಬಿರದಲ್ಲಿ ಇವೆ. ಅಮೂಲ್ಯ ರತ್ನ ಕಲಶಗಳು, ರತ್ನ ಸ್ತಂಭಗಳು ಬಿಳಿಚಾಮರಗಳು ರತ್ನದೀಪಗಳು ಇಲ್ಲಿ ಇವೆ. ಮೂರು ಕಂದಕಗಳಿಂದ ಮೂರು

ದ್ವಾರಗಳಿಂದ ಹದಿನಾರು ಕಕ್ಷ್ಯಗಳಿಂದ ಕೂಡಿದೆ. ಹದಿನಾರು ಲಕ್ಷ ಗೋಪಿಯರು ಇಲ್ಲಿ ನಿಯುಕ್ತರಾಗಿದ್ದಾರೆ. ಅವರೆಲ್ಲರೂ ಪುಟಕ್ಕಿಟ್ಟ ಚಿನ್ನದ ಮೈಬಣ್ಣದವರು, ನೂರಾರು ಚಂದ್ರಮರಂತೆ ಹೊಳೆವವರು. ಅಲ್ಲಿಯ ಪ್ರಾಂಗಣವೂ ಅಮೂಲ್ಯರತ್ನ ನಿರ್ಮಿತವಾದುದು. ರತ್ನ ಕಲಶಗಳಿಂದ ರತ್ನ ವೇದಿಕೆಗಳಿಂದ ರತ್ನ ಕನ್ನಡಿಗಳಿಂದ ಶೋಭಿಸುವುದು. ಇಲ್ಲಿ ರಾಧೆಯನ್ನು ಬಿಳಿಚಾಮರಗಳನ್ನು ಹಿಡಿದ ಗೋಪಿಯರು ಉಪಚರಿಸುವರು. ರಾಧೆ ನನ್ನ ಪ್ರಾಣೇಶ್ವರಿ. ಸುದಾಮನ ಶಾಪದಿಂದ ಈಗ ವೃಷಭಾನನ ಮಗಳಾಗಿ ಜನಿಸಿದ್ದಾಳೆ. ಶಾಪದಿಂದ ನಮಗೆ ನೂರುವರ್ಷಗಳ ವಿಯೋಗ ಉಂಟಾಗಲಿದೆ. ಅದರಿಂದ ನಾನು ಈ ನೂರು ವರ್ಷಕಾಲ ಭೂಭಾರಹರಣ ಕಾರ್ಯಮಾಡುತ್ತೇನೆ ಬಳಿಕ ರಾಧೆಯೊಂದಿಗೆ ಗೋಲೋಕಕ್ಕೆ ಹೋಗುತ್ತೇನೆ. ನೀನೂ ಯಶೋದೆಯೂ ಗೋಪ ಗೋಪಿಯರೂ ವೃಷಭಾನನೂ ಅವನ ಪತ್ನಿ ಕಲಾವತಿಯೂ ಎಲ್ಲರೂ ನನ್ನ ಜೊತೆಗೆ ಗೋಲೋಕಕ್ಕೆ ಬರುತ್ತೀರಿ. ಈ ಎಲ್ಲವನ್ನೂ ಯಶೋದೆಗೂ ಹೇಳು. ಶೋಕವನ್ನು ಬಿಡು. ಗೋಪರೊಡನೆ ಗೋಕುಲಕ್ಕೆ ಹೋಗು. ನಾನು ಎಲ್ಲರಿಗೂ ಆತ್ಮ, ಸಾಕ್ಷಿ, ನಿರ್ಲಿಪ್ತ. ಜೀವರೆಲ್ಲ ನನಗೆ ಪ್ರತಿಬಿಂಬರು. ಪ್ರಕೃತಿ ನನ್ನ ವಿಕಾರ. ಆದರೂ ಆ ಪ್ರಕೃತಿ ನಾನೆ. ಹೇಗೆ ಹಾಲಿನಲ್ಲಿ ಬಿಳುಪು ಇದ್ದು ಹಾಲು ಬಿಳುಪುಗಳಿಗೆ ಭೇದವಿಲ್ಲವೋ ಹಾಗೆ. ನೀರಿನಲ್ಲಿ ಶೈತ್ಯ, ಬೆಂಕಿಯಲ್ಲಿ ದಾಹ, ಆಕಾಶದಲ್ಲಿ ಶಬ್ದ, ಪೃಥಿವಿಯಲ್ಲಿ ಗಂಧ, ಚಂದ್ರನಲ್ಲಿ ಶೋಭೆ, ಸೂರ್ಯನಲ್ಲಿ ಪ್ರಭೆ, ಹೇಗೆ ಒಂದಾಗಿರುತ್ತವೋ ಹಾಗೆ ನನ್ನಲ್ಲಿ ರಾಧೆ ಒಂದಾಗಿರುತ್ತಾಳೆ.

ರಾಧೆಯನ್ನು ಒಬ್ಬಳು ಗೋಪಿ ಎಂದು ತಿಳಿಯಬೇಡ. ನನ್ನನ್ನೂ ಮಗನೆಂದು ತಿಳಿಯಬೇಡ. ನಾನು ಎಲ್ಲಕ್ಕೂ ಉತ್ಪತ್ತಿಕಾರಣ. ರಾಧೆ ಪ್ರಕೃತಿ. ನನ್ನ ವಿಭೂತಿ ರೂಪವನ್ನು ಗಮನವಿಟ್ಟು ಕೇಳು. ಇದನ್ನು ಹಿಂದೆ ನಾನು ಬ್ರಹ್ಮನಿಗೆ ಉಪದೇಶಿಸಿದ್ದೇನೆ. ಗೋಲೋಕದಲ್ಲಿ ನಾನು ದ್ವಿಭುಜನಾದ ಕೃಷ್ಣ. ವೈಕುಂಠದಲ್ಲಿ ಚತುರ್ಭುಜನಾದ ವಿಷ್ಣು. ಶಿವಲೋಕದಲ್ಲಿ ಶಿವ. ಬ್ರಹ್ಮಲೋಕದಲ್ಲಿ ಬ್ರಹ್ಮ. ತೇಜಸ್ವಿಗಳಲ್ಲಿ ಸೂರ್ಯ, ಪವಿತ್ರಗಳಲ್ಲಿ ವಹ್ನಿ, ಇಂದ್ರಿಯಗಳಲ್ಲಿ ಮನಸ್ಸು, ವೇಗ ಉಳ್ಳವರಲ್ಲಿ ವಾಯು, ಶಾಸನ ಮಾಡುವವರಲ್ಲಿ ಯಮ, ಬಂಧಿಸುವವರಲ್ಲಿ ಕಾಲ, ಅಕ್ಷರಗಳಲ್ಲಿ ಅಕಾರ, ವೇದಗಳಲ್ಲಿ ಸಾಮ, ಹದಿನಾಲ್ಕು ಇಂದ್ರರಲ್ಲಿ ಇಂದ್ರ, ಧನಿಕರಲ್ಲಿ ಕುಬೇರ. ದಿಕ್ಪಾಲಕರಲ್ಲಿ ಈಶಾನ, ವ್ಯಾಪಕಗಳಲ್ಲಿ ಆಕಾಶ, ಜೀವರಲ್ಲಿ ಅಂತರ್ಯಾಮಿ, ಜಾತಿಗಳಲ್ಲಿ ಬ್ರಾಹ್ಮಣ, ಧನಗಳಲ್ಲಿ ರತ್ನ, ತೈಜಸಗಳಲ್ಲಿ ಬಂಗಾರ, ಮಣಿಗಳಲ್ಲಿ ಕೌಸ್ತುಭ. ಪ್ರತೀಕಗಳಲ್ಲಿ ಪುಷ್ಕರ, ವಿಷ್ಣುಭಕ್ತರಲ್ಲಿ ಸನತ್‌ಕುಮಾರ, ಯೋಗೀಂದ್ರರಲ್ಲಿ ಗಣಪತಿ, ಸೇನಾಪತಿಗಳಲ್ಲಿ ಸ್ಕಂದ, ಧನುರ್ಧಾರಿಗಳಲ್ಲಿ ಲಕ್ಷ್ಮಣ, ರಾಜರುಗಳಲ್ಲಿ ರಾಮ, ನಕ್ಷತ್ರಗಳಲ್ಲಿ ಚಂದ್ರ, ಮಾಸಗಳಲ್ಲಿ ಮಾರ್ಗಶೀರ್ಷ, ಋತುಗಳಲ್ಲಿ ವಸಂತ, ವಾರಗಳಲ್ಲಿ ಆದಿತ್ಯವಾರ, ತಿಥಿಗಳಲ್ಲಿ ಏಕಾದಶಿ, ಸಹಿಷ್ಣುಗಳಲ್ಲಿ ಪೃಥಿವಿ, ಬಂಧುಗಳಲ್ಲಿ ಮಾತೆ, ಭಕ್ಷ್ಯಗಳಲ್ಲಿ ಅಮೃತ, ಗವ್ಯಗಳಲ್ಲಿ ತುಪ್ಪ, ವೃಕ್ಷಗಳಲ್ಲಿ ಕಲ್ಪವೃಕ್ಷ, ಕಾಮಧೇನುಗಳಲ್ಲಿ ಸುರಭಿ, ನದಿಗಳಲ್ಲಿ ಗಂಗೆ, ಪಂಡಿತರಲ್ಲಿ ವಾಣಿ,

ಮಂತ್ರಗಳಲ್ಲಿ ಪ್ರಣವ, ವಿದ್ಯೆಗಳಲ್ಲಿ ಬೀಜ, ಸಸ್ಯಗಳಲ್ಲಿ ಧಾನ್ಯ, ವೃಕ್ಷಗಳಲ್ಲಿ ಅಶ್ವತ್ಥ, ಗುರುಗಳಲ್ಲಿ ಮಂತ್ರದಾಯಕ, ಪ್ರಜಾಪತಿಗಳಲ್ಲಿ ಕಶ್ಯಪ, ಪಕ್ಷಿಗಳಲ್ಲಿ ಗರುಡ, ನಾಗರಲ್ಲಿ ಅನಂತ, ನರರಲ್ಲಿ ನರಪತಿ, ಬ್ರಹ್ಮರ್ಷಿಗಳಲ್ಲಿ ಭೃಗು, ದೇವರ್ಷಿಗಳಲ್ಲಿ ನಾರದ, ರಾಜರ್ಷಿಗಳಲ್ಲಿ ಜನಕ, ಮಹರ್ಷಿಗಳಲ್ಲಿ ಶುಕ, ಗಂಧರ್ವರಲ್ಲಿ ಚಿತ್ರರಥ, ಸಿದ್ಧರಲ್ಲಿ ಕಪಿಲಮುನಿ, ಬುದ್ಧಿಶಾಲಿಗಳಲ್ಲಿ ಬೃಹಸ್ಪತಿ, ಕವಿಗಳಲ್ಲಿ ಶುಕ್ರ, ಗ್ರಹಗಳಲ್ಲಿ ಶನಿ, ಶಿಲ್ಪಿಗಳಲ್ಲಿ ವಿಶ್ವಕರ್ಮ, ಮೃಗಗಳಲ್ಲಿ ಸಿಂಹ, ಎತ್ತುಗಳಲ್ಲಿ ನಂದಿ, ಆನೆಗಳಲ್ಲಿ ಐರಾವತ, ಛಂದಸ್ಸುಗಳಲ್ಲಿ ಗಾಯತ್ರಿ, ಶಾಸ್ತ್ರಗಳಲ್ಲಿ ವೇದ, ಜಲಜಂತುಗಳಲ್ಲಿ ವರುಣ, ಅಪ್ಸರೆಯರಲ್ಲಿ ಊರ್ವಶೀ, ಸಮುದ್ರಗಳಲ್ಲಿ ಜಲಾರ್ಣವ, ಪರ್ವತಗಳಲ್ಲಿ ಮೇರು, ರತ್ನಶಾಲಿಗಳಲ್ಲಿ ಹಿಮಾಲಯ, ಪ್ರಕೃತಿಯರಲ್ಲಿ ದುರ್ಗೆ, ದೇವಿಯರಲ್ಲಿ ಲಕ್ಷ್ಮಿ, ನಾರಿಯರಲ್ಲಿ ಶತರೂಪೆ, ನನಗೆ ಪ್ರಿಯರಾದವರಲ್ಲೆಲ್ಲ ರಾಧೆ, ಸಾಧ್ವಿಯರಲ್ಲಿ ವೇದಮಾತೆ, ದೈತ್ಯರಲ್ಲಿ ಪ್ರಹ್ಲಾದ, ಬಲಿಷ್ಠರಲ್ಲಿ ಬಲಿ, ಜ್ಞಾನಿಗಳಲ್ಲಿ ನಾರಾಯಣ ಋಷಿ, ಕಪಿಗಳಲ್ಲಿ ಹನುಮಾನ್, ಪಾಂಡವರಲ್ಲಿ ಅರ್ಜುನ, ನಾಗಕನ್ಯೆಯರಲ್ಲಿ ಮನಸೆ, ವಸುಗಳಲ್ಲಿ ದ್ರೋಣ, ಮೋಡಗಳಲ್ಲಿ ದ್ರೋಣ, ವರ್ಷಗಳಲ್ಲಿ ಭಾರತ, ಕಾಮಿಗಳಲ್ಲಿ ಕಾಮದೇವ, ಕಾಮುಕಿಯರಲ್ಲಿ ರಂಭೆ, ಲೋಕಗಳಲ್ಲಿ ಗೋಲೋಕ, ಮಾತೃಕೆಯರಲ್ಲಿ ಶಾಂತಿ, ಸುಂದರಿಯರಲ್ಲಿ ರತಿ, ಸಾಕ್ಷಿಗಳಲ್ಲಿ ಧರ್ಮ, ದಿವಸದಲ್ಲಿ ಸಂಧ್ಯೆ, ದೇವತೆಗಳಲ್ಲಿ ಮಹೇಂದ್ರ, ರಾಕ್ಷಸರಲ್ಲಿ ವಿಭೀಷಣ, ರುದ್ರರಲ್ಲಿ ಕಾಲಾಗ್ನಿರುದ್ರ, ಭೈರವರಲ್ಲಿ ಸಂಹಾರ, ಶಂಖಗಳಲ್ಲಿ ಪಾಂಚಜನ್ಯ, ಅಂಗಗಳಲ್ಲಿ ಶಿರಸ್ಸು, ಪುರಾಣಗಳಲ್ಲಿ ಭಾಗವತ, ಇತಿಹಾಸಗಳಲ್ಲಿ ಭಾರತ, ಪಂಚರಾತ್ರಗಳಲ್ಲಿ ಕಾಪಿಲ, ಮನುಗಳಲ್ಲಿ ಸ್ವಾಯಂಭುವ, ಮುನಿಗಳಲ್ಲಿ ವ್ಯಾಸ, ಪಿತೃಪತ್ನಿಯರಲ್ಲಿ ಸ್ವಧೆ, ವಹ್ನಿಪತ್ನಿಯರಲ್ಲಿ ಸ್ವಾಹೆ, ಯಜ್ಞಗಳಲ್ಲಿ ರಾಜಸೂಯ, ಯಜ್ಞಪತ್ನಿಯರಲ್ಲಿ ದಕ್ಷಿಣೆ, ಶಸ್ತ್ರಾಸ್ತ್ರ ಜ್ಞಾನಿಗಳಲ್ಲಿ ಪರಶುರಾಮ, ಪೌರಾಣಿಕರಲ್ಲಿ ಸೂತ, ನೀತಿವಂತರಲ್ಲಿ ಅಂಗಿರಸ್, ವ್ರತಗಳಲ್ಲಿ ವಿಷ್ಣುವ್ರತ, ಬಲಗಳಲ್ಲಿ ದೈವಬಲ, ಔಷಧಿಗಳಲ್ಲಿ ದೂರ್ವೆ, ತೃಣಗಳಲ್ಲಿ ದರ್ಭೆ, ಧರ್ಮಗಳಲ್ಲಿ ಸತ್ಯ, ಸ್ನೇಹಪಾತ್ರರಲ್ಲಿ ಪುತ್ರ, ಶತ್ರುಗಳಲ್ಲಿ ವ್ಯಾಧಿ, ವ್ಯಾಧಿಗಳಲ್ಲಿ ಜ್ವರ, ವಿಷ್ಣುಭಕ್ತಿಗಳಲ್ಲಿ ವಿಷ್ಣುದಾಸ್ಯ, ಆಶ್ರಮಗಳಲ್ಲಿ ಗೃಹಸ್ಥಾಶ್ರಮ, ವಿವೇಕಿಗಳಲ್ಲಿ ಸಂನ್ಯಾಸಿ, ಶಸ್ತ್ರಗಳಲ್ಲಿ ಸುದರ್ಶನ, ಶುಭಾಶಿಷಗಳಲ್ಲಿ ಕುಶಲ, ಐಶ್ವರ್ಯಗಳಲ್ಲಿ ಜ್ಞಾನ, ಸುಖಗಳಲ್ಲಿ ವೈರಾಗ್ಯ, ಪ್ರೀತಿದಾಯಕಗಳಲ್ಲಿ ಸವಿನುಡಿ, ದಾನಗಳಲ್ಲಿ ಆತ್ಮದಾನ, ಸಂಚಯಗಳಲ್ಲಿ ಧರ್ಮಕರ್ಮ, ಕರ್ಮಗಳಲ್ಲಿ ವಿಷ್ಣ್ವರ್ಚನ, ಕಠೋರಗಳಲ್ಲಿ ತಪಸ್ಸು, ಫಲಗಳಲ್ಲಿ ಮೋಕ್ಷ, ಅಷ್ಟಸಿದ್ಧಿಗಳಲ್ಲಿ ಪ್ರಾಕಾಮ್ಯ, ಪುರಿಗಳಲ್ಲಿ ಕಾಶಿ, ನಗರಗಳಲ್ಲಿ ಕಾಂಚಿ, ದೇಶಗಳಲ್ಲಿ ವೈಷ್ಣವದೇಶ, ಆಧಾರಗಳಲ್ಲಿ ಮಹಾವಿರಾಟ್, ಸೂಕ್ಷ್ಮಗಳಲ್ಲಿ ಪರಮಾಣು, ವೈದ್ಯರಲ್ಲಿ ಅಶ್ವಿನಿಗಳು, ಔಷಧಿಗಳಲ್ಲಿ ರಸಾಯನ, ಮಂತ್ರವೇತ್ತರಲ್ಲಿ ಧನ್ವಂತರಿ, ಕ್ಷಯಕಾರಿಗಳಲ್ಲಿ ವಿಷಾದ, ರಾಗಗಳಲ್ಲಿ ಮೇಘಮಲ್ಲಾರ, ರಾಗಪ್ರಿಯೆಯರಲ್ಲಿ ಕಾಮೋದ, ವಿಷ್ಣುಪಾರ್ಷದರಲ್ಲಿ ಶ್ರೀದಾಮ, ವಿಷ್ಣುಬಂಧುಗಳಲ್ಲಿ ಉದ್ಧವ, ಪಶುಗಳಲ್ಲಿ ಗೋವು, ಕಾಡುಗಳಲ್ಲಿ ಗಂಧದ ಕಾಡು, ಪೂತಗಳಲ್ಲಿ ತೀರ್ಥಪೂತ, ನಿಃಶಂಕರಲ್ಲಿ ವೈಷ್ಣವ, ವೃಕ್ಷಗಳಲ್ಲಿ ಅಂಕುರ,

ಸರ್ವವಸ್ತುಗಳಲ್ಲಿ ಆಕಾರ, ಎಲ್ಲವೂ ನಾನೆ. ನಾನೇ ಎಲ್ಲ ಜೀವಿಗಳಲ್ಲಿರುತ್ತೇನೆ, ಎಲ್ಲ ಜೀವಿಗಳೂ ನನ್ನಲ್ಲಿರುತ್ತಾರೆ. ಹೇಗೆ ವೃಕ್ಷಗಳಲ್ಲಿ ಫಲ, ಫಲಗಳಲ್ಲಿ ಅಂಕುರಗಳೋ ಹಾಗೆ ಎಲ್ಲಕ್ಕೂ ಕಾರಣ ನಾನು. ನನಗೊಂದು ಕಾರಣವಿಲ್ಲ. ಎಲ್ಲಕ್ಕೂ ಸ್ವಾಮಿ ನಾನು, ನನಗೊಬ್ಬ ಸ್ವಾಮಿ ಇಲ್ಲ. ನಾನು ಕಾರಣಗಳಿಗೆ ಕಾರಣ. ನನ್ನ ಮಾಯೆಯಿಂದ ಮೋಹಿತರಾದ ಪಾಪಿಜನ ನನ್ನನ್ನು ತಿಳಿಯುವುದಿಲ್ಲ. ಪಾಪಗ್ರಸ್ತರಾಗಿ ಅವರು ದುರ್ಬುದ್ಧಿಯಿಂದ ವಿನಷ್ಟರಾಗಿರುತ್ತಾರೆ. ಎಲ್ಲ ಜಂತುಗಳಿಗೂ ಆತ್ಮ ನಾನು. ನಾನಿದ್ದರೆ ಜೀವರಿಗೆ ಹಸಿವು ಬಾಯಾರಿಕೆ ಮುಂತಾದುವು. ನಾನು ಹೊರಟು ಹೋದರೆ ಅವೂ ಹೋಗುವುವು. ರಾಜ ಹೋದರೆ ಅವನ ಹಿಂದೆ ಪರಿವಾರ ಹೇಗೋ ಹಾಗೆ. ನಂದ, ಈ ಜ್ಞಾನವನ್ನು ಪಡೆದು ನೀನು ಗೋಕುಲಕ್ಕೆ ತೆರಳು. ಆ ರಾಧೆಗೂ ಇದನ್ನು ಬೋಧಿಸು, ಯಶೋದೆಗೂ ಬೋಧಿಸು.'' ಹೀಗೆ ಕೃಷ್ಣ ಬೋಧಿಸಿದಾಗ ನಂದಗೋಪ ಜ್ಞಾನವನ್ನು ಹೊಂದಿ ತನ್ನ ಪರಿವಾರದೊಂದಿಗೆ ನಂದಗೋಕುಲಕ್ಕೆ ಹೋಗಿ ರಾಧೆಗೂ ಯಶೋದೆಗೂ ಬೋಧಿಸಿದ. ಎಲ್ಲರೂ ಈ ಮಹಾಜ್ಞಾನದ ಬಲದಿಂದ ಶೋಕವನ್ನು ತೊರೆದರು. ಇನ್ನೊಮ್ಮೆ ಯಶೋದೆಯ ಪ್ರೇರಣೆಯಿಂದ ನಂದ ಕೃಷ್ಣನ ಬಳಿಗೆ ಬಂದು ಇದಿರಿನಲ್ಲಿ ನಿಂತು ಬ್ರಹ್ಮನು ರಚಿಸಿದ ಸಾಮವೇದೋಕ್ತ ಸ್ತೋತ್ರದಿಂದ ಪುನಃ ಪುನಃ ಸ್ತುತಿಸಿ ಕಣ್ಣೀರು ಸುರಿಸಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ನಂದಾದಿಶೋಕಪ್ರಮೋಚನವೆಂಬ ಎಪ್ಪತ್ತಮೂರನೆ ಅಧ್ಯಾಯ ಮುಗಿಯಿತು*

—○—

**ನಾರಾಯಣ:-** ಶ್ರೀಕೃಷ್ಣ ಪರಮಾನಂದ ಪರಿಪೂರ್ಣನಾದ ಪ್ರಭು, ಪರಮಾತ್ಮ, ಭಕ್ತಾನುಗ್ರಹಕಾರಕ, ಭೂಭಾರಹರಣ ಮಾಡಿದವ, ನಿರ್ಗುಣ, ಪ್ರಕೃತಿಗೆ ಪರ, ಪರಾತ್ಪರ, ಬ್ರಹ್ಮ ರುದ್ರ ಶೇಷರಿಂದ ವಂದಿತ, ನಂದನ ಸ್ತೋತ್ರವನ್ನು ಕೇಳಿ ಸಂತುಷ್ಟನಾದ. ವಿರಹತಾಪದಿಂದ ಕಾತರನಾಗಿ ಗೋಕುಲದಿಂದ ಬಂದಿದ್ದ ಆತನಿಗೆ ಕೃಷ್ಣ ನುಡಿದ -

**ಶ್ರೀಕೃಷ್ಣ:-** ನಂದ, ನೀನು ನಂದಗೋಕುಲಕ್ಕೆ ಹಿಂತಿರುಗು, ಶೋಕವನ್ನು ಬಿಡು. ಭ್ರಮವನ್ನು ಬಿಡು, ಶೋಕಗ್ರಂಥಿ ನಿವಾರಕವಾದ ತತ್ವಜ್ಞಾನವನ್ನು ಕೇಳು. ವಾಯು ಭೂಮಿ ಆಕಾಶ ಜಲ ತೇಜಸ್ಸು ಇವು ಪಂಚಭೂತಗಳು. ಇವುಗಳಿಂದಾದ ಪಾಂಚಭೌತಿಕವಾದ ಶರೀರದಲ್ಲಿ ವ್ಯರ್ಥವಾದ ಭ್ರಮ ಜೀವಿಗಳಿಗೆ, ಈ ಶರೀರ ಕೃತ್ರಿಮ, ಸ್ವಪ್ನದಂತೆ ಮಾಯೆ. ಈಪಂಚಭೂತಗಳೆ ಈ ಶರೀರವನ್ನು ತಮ್ಮಲ್ಲಿ ಲಯಮಾಡಿಕೊಳ್ಳುತ್ತವೆ. ಈ ಶರೀರವೆ ನಾನೆಂಬುದು ಭ್ರಮ ಮಾತ್ರ. ಯಾರು ಯಾರಿಗೆ ಮಗ, ಯಾರು ಯಾರಿಗೆ ತಂದೆ? ಯಾರು ಹೆಂಡತಿ? ಯಾರು ಪತಿ? ಕರ್ಮಾನುಸಾರವಾಗಿ ಅನೇಕ ಜನ್ಮಗಳಲ್ಲಿ ಜೀವಿಸುತ್ತಾನೆ. ಕರ್ಮದಿಂದ ಹುಟ್ಟಿ ಕರ್ಮದಿಂದಲೆ ಸಾಯುತ್ತಾನೆ. ಸುಖ ದುಃಖ ಭಯ ಶೋಕಗಳನ್ನು ಕರ್ಮದಿಂದಲೆ ಪಡೆಯುತ್ತಾನೆ. ಕೆಲವರು ಸ್ವರ್ಗದಲ್ಲಿ, ಕೆಲವರು ಸತ್ಯಲೋಕದಲ್ಲಿ, ಕೆಲವರು ಬ್ರಾಹ್ಮಣಾದಿಜಾತಿಗಳಲ್ಲಿ ಹುಟ್ಟಬಹುದು. ಕೆಲವರು ಅತಿನೀಚ ಕ್ರಿಮಿಕೀಟಾದಿ ಜನ್ಮಗಳನ್ನು ಹೊಂದಬಹುದು. ಪುನಃಪುನಃ ಕರ್ಮದಿಂದ ನಾನಾ ಯೋನಿಗಳಲ್ಲಿ ಸುತ್ತಲೇಬೇಕು. ನನ್ನ ಭಕ್ತನು ಮಾತ್ರ ಈ ಕರ್ಮವನ್ನು ನೀಗಿಕೊಳ್ಳಬಲ್ಲ. ಸತ್ಯ ತ್ರೇತಾ ದ್ವಾಪರ ಕಲಿ ಎಂದು ನಾಲ್ಕು ಯುಗಗಳು ಸೇರಿ ಒಂದು ಮಹಾಯುಗ. ಎಪ್ಪತ್ತೆರಡು ಮಹಾಯುಗಗಳ ಕೊನೆಯಲ್ಲಿ ಮನ್ವಂತರ ಮುಗಿಯುತ್ತದೆ. ಇಂದ್ರನಿಗೆ ಮನ್ವಂತರಕಾಲ ಇಂದ್ರಪದವಿ ಇರುತ್ತದೆ. ಹದಿನಾಲ್ಕು ಮನ್ವಂತರಗಳು ಕಳೆದರೆ ಬ್ರಹ್ಮನಿಗೆ ಒಂದು ಹಗಲು. ಅವನ ರಾತ್ರಿಯೂ ಇಷ್ಟೇ ದೀರ್ಘವಾಗಿದೆ. ಈ ಗಣನೆಯಲ್ಲಿ ಬ್ರಹ್ಮನ ಮಾಸವರ್ಷಗಳನ್ನು ತಿಳಿಯಬೇಕು. ಬ್ರಹ್ಮನ ನೂರು ವರ್ಷಗಳು ಅವನ ಪೂರ್ಣ ಆಯುಷ್ಯ. ಇದು ನನಗೆ ನಿಮಿಷ ಮಾತ್ರ. ಬ್ರಹ್ಮಾದಿ ತೃಣಪರ್ಯಂತ ವಿಶ್ವದಲ್ಲಿ ನಿರ್ಮಿತವಾದ ಎಲ್ಲವೂ ಪರಮಾತ್ಮನಾದ ನಾನೂ ಸತ್ಯ. ನನ್ನ ಮಂತ್ರ ಉಪಾಸನೆ ಮಾಡುವವನೂ ಸತ್ಯ. ಅವನು ದೇಹವನ್ನು ತ್ಯಜಿಸಿ ಪ್ರಾಚೀನ ಕರ್ಮವನ್ನು ತೊಡೆದುಕೊಂಡು ಗೋಲೋಕಕ್ಕೆ ಹೋಗುತ್ತಾನೆ. ಅನಂತಬ್ರಹ್ಮಪ್ರಳಯಗಳಲ್ಲಿಯೂ ಅವನಿಗೆ ಪ್ರಳಯವಿರುವುದಿಲ್ಲ. ನಿತ್ಯವಾದ ಸ್ವರೂಪ ಭೂತವಾದ ಶರೀರವನ್ನು ಹೊಂದಿರುತ್ತಾನೆ. ಆ ಶರೀರದಲ್ಲಿ ಜನ್ಮ ಮರಣ ಜರೆಗಳು ಅವನಿಗೆ ಇರುವುದಿಲ್ಲ.

ನಂದ, ನನ್ನ ಭಕ್ತರಿಗೆ ಎಂದೂ ಅಶುಭವಾಗುವುದಿಲ್ಲ. ಅವನನ್ನು ನನ್ನ ಸುದರ್ಶನಚಕ್ರ ಸದಾ ಕಾಪಾಡುತ್ತದೆ. ಅದರಿಂದ ನನಗಿಂತ ನನ್ನ ಭಕ್ತನೆ ಹೆಚ್ಚು ಬಲಿಷ್ಠನಾಗುತ್ತಾನೆ. ಅವನಿಗೆ ನಾನು ಪ್ರಭು. ನನಗೆ ಪ್ರಭು ಇನ್ನೊಬ್ಬನಿಲ್ಲ. ನನಗೆ ತಂದೆ ತಾಯಿಯರಿಲ್ಲ. ಅದರಿಂದ ನನ್ನನ್ನು ಮಗನೆಂದು ತಿಳಿಯಬೇಡ. ಆ ಭ್ರಮವನ್ನು ಕಳೆದುಕೊಂಡು ಗೋಲೋಕಕ್ಕೆ ಹೋಗು. ಯಶೋದೆಗೂ ಗೋಪಗೋಪಿಯರಿಗೂ ಇದನ್ನು ಬೋಧಿಸು. ಶೋಕವನ್ನು ಬಿಟ್ಟು ಮನೆಗೆ ಹೋಗು. ಹೀಗೆ ಕೃಷ್ಣ ಹೇಳಿದಾಗ ನಂದ ಪುನಃ ನುಡಿದ.

**ನಂದ:-** ನಾನು ಮೂಢ, ನೀನು ಶ್ರುತಿಗಳಿಗೆ ಜನಕ. ನನಗೆ ಇನ್ನೂ ಜ್ಞಾನವನ್ನು ಉಪದೇಶಿಸು. ನಂದನ ಮಾತನ್ನು ಕೇಳಿ ಕೃಷ್ಣ ಶ್ರುತಿಗಳಲ್ಲಿಯೂ ಕಾಣದಿರುವ ನಿತ್ಯಾಹ್ನಿಕದ ವಿವರವನ್ನು ಉಪದೇಶಿಸಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಎಪ್ಪತ್ತನಾಲ್ಕನೆ ಅಧ್ಯಾಯ ಮುಗಿಯಿತು.*



## ಸದಾಚಾರನಿಯಮ

ಅಧ್ಯಾಯ - ೭೫

**ಶ್ರೀಕೃಷ್ಣ:-** ನಂದ, ನಿನಗೆ ನಾನು ದುರ್ಲಭವಾದ ವೇದಪುರಾಣರಹಸ್ಯಗಳನ್ನು ಹೇಳುತ್ತೇನೆ. ಶೀಲಗೆಟ್ಟ ಹೆಣ್ಣುಗಳಲ್ಲಿ ವಿಶ್ವಾಸ ಮಾಡಬಾರದು. ಅದು ಭ್ರಮಮಾಯೆಗಳಿಗೆ ಮೂಲವಾಗಿದ್ದು ಮೋಕ್ಷಮಾರ್ಗಕ್ಕೆ ಅಡ್ಡಿ ಉಂಟುಮಾಡುತ್ತದೆ. ಸರ್ವನಾಶ ತರುತ್ತದೆ. ಅದರಿಂದ ಸದಾಚಾರ ನಿರತನಾಗಬೇಕು. ಬೆಳಿಗ್ಗೆ ಹಾಸಿಗೆಯಿಂದೆದ್ದು ಬೇರ ವಸ್ತ್ರ ಉಟ್ಟು ಹೃದಯಕಮಲದಲ್ಲಿ ಇಷ್ಟದೇವತೆಯನ್ನು ಧ್ಯಾನಿಸಬೇಕು. ಬಳಿಕ ಬೆಳಗಿನ ಶೌಚ ಮುಂತಾದ ಕೃತ್ಯಗಳನ್ನು ಮುಗಿಸಿ ನಿರ್ಮಲ ಜಲದಲ್ಲಿ ಸ್ನಾನಮಾಡಿ ಸಂಧ್ಯಾವಂದನ ಮಾಡಿ ಮನೆಗೆ ಬರಬೇಕು. ಕಾಲು ತೊಳೆದುಕೊಂಡು ಒಳಗೆ ಪ್ರವೇಶಿಸಿ ಮಡಿಯುಟ್ಟು ಮೋಕ್ಷದಾಯಕ ಪರಮಾತ್ಮನಾದ ನನ್ನನ್ನು ಆರಾಧಿಸಬೇಕು. ಶಾಲಗ್ರಾಮ ಮಣಿ ಯಂತ್ರ ಪ್ರತಿಮೆ ನೀರು ಬ್ರಾಹ್ಮಣ ಗೋವು ಗುರು ಕಲಶ ಅಷ್ಟದಳಪದ್ಮ ಚಂದನಪಾತ್ರಗಳಲ್ಲಿ ನನ್ನ ಪೂಜೆ ಮಾಡಬಹುದು. ಶಾಲಗ್ರಾಮದಲ್ಲಿಯೂ ನೀರಿನಲ್ಲಿಯೂ ಆವಾಹನವಿಲ್ಲ. ಮಂತ್ರಾನುಸಾರ ಧ್ಯಾನಮಾಡಿ ಮೂಲಮಂತ್ರದಿಂದ ಷೋಡಶೋಪಚಾರ ಪೂಜೆ ಮಾಡಬೇಕು. ಶ್ರೀದಾಮ, ಸುದಾಮ, ವಸುದಾಮ ವೀರಭಾನು ಶೂರಭಾನು ಎಂಬ ಐದು ಗೋಪಾಲಕನ್ನೂ, ಸುನಂದ ನಂದ ಕುಮುದ ಸುದರ್ಶನ ಲಕ್ಷ್ಮಿ ಸರಸ್ವತಿ ದುರ್ಗೆ ರಾಧೆ ವಸುಂಧರೆ ಗಂಗೆ ಗುರು ತುಲಸಿ ಶಂಭು ಕಾರ್ತಿಕೇಯ ವಿನಾಯಕ ನವಗ್ರಹರು ದಿಕ್ಪಾಲಕರು ಇವರನ್ನೂ ಪೂಜಿಸಬೇಕು. ಎಲ್ಲರಿಗಿಂತ ಮೊದಲು ಗಣೇಶ ಸೂರ್ಯ, ಅಗ್ನಿ, ವಿಷ್ಣು, ಶಿವ ಪಾರ್ವತಿಯರನ್ನೂ ಪೂಜಿಸಬೇಕು.

**ಗಣೇಶಂ ವಿಘ್ನನಾಶಾಯ ಸೂರ್ಯಂ ವ್ಯಾಧಿವಿನಾಶನೇ ।**
**ವಹ್ನಿಂ ಪ್ರಾಪ್ತಿನಿಮಿತ್ತೇನ ಶಾಂತೌ ಶುದ್ಧೌ ಭವೇದ್ ಧ್ರುವಂ ।**
**ವಿಷ್ಣುಂ ಮೋಕ್ಷನಿಮಿತ್ತೇನ ಜ್ಞಾನದಾನಾಯ ಶಂಕರಂ**
**ಬುದ್ಧಿಮುಕ್ತಿನಿಮಿತ್ತೇನ ಪಾರ್ವತೀಂ ಪೂಜಯೇತ್ ಸುಧೀಃ ॥**

ವಿಘ್ನ ನಿವಾರಣೆಗೆ ಗಣೇಶನನ್ನೂ ವ್ಯಾಧಿಪರಿಹಾರಕ್ಕೆ ಸೂರ್ಯನನ್ನೂ ಅಭೀಷ್ಟ ಪ್ರಾಪ್ತಿ, ಮನಃಶಾಂತಿ, ಮನಃಶುದ್ಧಿಗಳಿಗೆ ಅಗ್ನಿಯನ್ನೂ ಮೋಕ್ಷಕ್ಕಾಗಿ ವಿಷ್ಣುವನ್ನೂ ಜ್ಞಾನದಾನಕ್ಕಾಗಿ ಶಂಕರನನ್ನೂ ಬುದ್ಧಿಶಕ್ತಿಗಾಗಿ ಪಾರ್ವತಿಯನ್ನೂ ಪೂಜಿಸಬೇಕು.

ಮೂರು ಬಾರಿ ಪುಷ್ಪಾಂಜಲಿ ನೀಡಿ ಸ್ತೋತ್ರಕವಚಪಠನಪೂರ್ವಕ ಗುರುವನ್ನು ಪೂಜಿಸಿ ದೇವತಾರಾಧನೆ ಮಾಡಬೇಕು. ಹೀಗೆ ಆಹ್ನಿಕ ದೇವಾರ್ಚನೆಗಳನ್ನು ಮಾಡಬೇಕು. ಸದಾಶುಚಿಯಾಗಿರಬೇಕು. ಮಲಮೂತ್ರಗಳನ್ನೂ ಗುಪ್ತಾಂಗಗಳನ್ನು ಸ್ತ್ರೀಯರ ಸ್ತನ ಮುಖ ಕಟಾಕ್ಷ ನಗುಗಳನ್ನೂ ನೋಡಬಾರದು. ಅವು ರೋಗ ದುಃಖ ದಾರಿದ್ರ್ಯ ಪಾಪಗಳಿಗೆ ಕಾರಣ. ವಿನಾಶಕಾರಣ. ತನ್ನ ಪತ್ನಿಯೊಂದಿಗೂ ಹಗಲು ಹೊತ್ತು ಕೂಡಬಾರದು. ಅದು ಕಣ್ಣು, ಕಿವಿಗಳ ರೋಗಗಳಿಗೆ ಕಾರಣವಾಗುವುದು.

ಆಕಾಶದಲ್ಲಿ ಒಂದು ನಕ್ಷತ್ರ ಮಾತ್ರ ಕಾಣುವಾಗ ಅದನ್ನು ದರ್ಶನಮಾಡಬಾರದು. ಅದು ರೋಗಕಾರಣ. ಅಕಸ್ಮಾತ್ ದರ್ಶನ ಮಾಡಿದರೆ ದೇವದರ್ಶನ ಹರಿಸ್ಮರಣೆ ಮಾಡಿ ಏಳು ಬಾರಿ ನಾರದ ನಾಮ ಜಪಿಸಬೇಕು. ಅಸ್ತಕಾಲದಲ್ಲಿ ಸೂರ್ಯಚಂದ್ರರನ್ನು ನೋಡಬಾರದು. ಅರ್ಧಚಂದ್ರನನ್ನು ಉದಯಕಾಲದಲ್ಲಿಯೂ ನೋಡಬಾರದು. ಅದು ವ್ಯಾಧಿಗೆ ಕಾರಣವಾಗುವುದು. ನೀರಲ್ಲಿ ಸೂರ್ಯಚಂದ್ರರ ಪ್ರತಿಬಿಂಬವನ್ನೂ ನೋಡಬಾರದು. ಅದು ಶೋಕಕ್ಕೆ ಕಾರಣವಾಗುವುದು. ಬೇರೆ ಸ್ತ್ರೀಪುರುಷರು ಕೂಡುವುದನ್ನೂ ನೋಡಬಾರದು. ಅದು ಬಂಧುವಿಯೋಗಕ್ಕೆ ಕಾರಣವಾಗುವುದು. ಪಾಪಕರ್ಮಿಗಳೊಂದಿಗೆ ಮಲಗುವುದು ಕುಳ್ಳಿರುವುದು ಉಣ್ಣುವುದು ಓಡಾಡುವುದು ಎಲ್ಲವೂ ಸರ್ವನಾಶಕಾರಣವಾಗುವುದು. ಅವರನ್ನು ಮಾತನಾಡಿಸುವುದರಿಂದ, ಸ್ಪರ್ಶಿಸುವುದರಿಂದ, ಜೊತೆಗೆ ಮಲಗುವುದು ಕುಳ್ಳಿರುವುದು ಉಣ್ಣುವುದು ಇವೆಲ್ಲವನ್ನೂ ಮಾಡುವುದರಿಂದ ನೀರಲ್ಲಿ ಎಣ್ಣೆಯ ಬಿಂದು ಹರಡುವಂತೆ ಅವರ ಪಾಪ ನಮ್ಮಲ್ಲಿ ಹರಡುತ್ತದೆ. ಹಿಂಸ್ರ ಜಂತುಗಳ ಬಳಿಗೂ ಹೋಗಕೂಡದು. ದುಷ್ಟರ ಜೊತೆ ಸೇರಕೂಡದು. ಅವೆರಡೂ ದುಃಖಕಾರಣಗಳು. ಬ್ರಾಹ್ಮಣರಿಗೂ, ಗೋವುಗಳಿಗೂ ವಿಶೇಷವಾಗಿ ವಿಷ್ಣುಭಕ್ತರಿಗೂ ಹಿಂಸೆ ಮಾಡಬಾರದು. ಅದು ಸರ್ವನಾಶಕ್ಕೆ ಕಾರಣವಾಗುವುದು. ದೇವರ, ದೇವಾಲಯದ, ಬ್ರಾಹ್ಮಣರ, ವೈಷ್ಣವರ ಸ್ವತ್ತನ್ನು ಅಪಹರಿಸಿದರೆ ಅದೂ ಸರ್ವನಾಶಕ್ಕೆ ಕಾರಣವಾಗುವುದು. ತಾನು ಅಥವಾ ಪರರು ಬ್ರಾಹ್ಮಣನಿಗೆ ಕೊಟ್ಟಿದ್ದನ್ನು ಅಪಹರಿಸಿದರೆ ಸಾವಿರಾರು ವರ್ಷಕಾಲ ಮಲಕ್ರಿಮಿಯಾಗಿ ಹದ್ದು ಹಂದಿ ಮುಂತಾದ ತಿರ್ಯಗ್ ಜಂತುವಾಗಿ ಹುಟ್ಟಬೇಕಾಗುವುದು. ದೇವರನ್ನೂ ಬ್ರಾಹ್ಮಣರನ್ನೂ ಕಂಡಾಗ ನಮಿಸದಿದ್ದರೆ ಭಕ್ತಿ ಮಾಡದಿದ್ದರೆ ರೌರವನರಕ ಪ್ರಾಪ್ತವಾಗುವುದು. ಸತಿಯು ಪತಿಯಲ್ಲಿ ಭಗವಂತನನ್ನು

ಕಾಣದೆ ಅವನಿಗೆ ಹಿಂಸೆ ಮಾಡುತ್ತಿದ್ದರೆ ಅವಳಿಗೆ ಕುಂಭೀಪಾಕ ನರಕ ಲಭಿಸುವುದು. ಪತಿಯನ್ನು ಬಯ್ಯುವುದು ಹೊಡೆಯುವುದು ಅವನಲ್ಲಿ ಕೋಪ ಅಹಂಕಾರ ಮಾಡುವುದು ಇವೆಲ್ಲವುಗಳಿಂದ ಕಾಗೆ ಹಂದಿ ಹಾವು ಕತ್ತೆ ನಾಯಿ ಮುಂತಾದ ಜನ್ಮ ಬರುವುದು. ಪತಿವ್ರತೆಯಾದ ಸತಿ ಪತಿಯೊಂದಿಗೆ ವೈಕುಂಠಕ್ಕೆ ಹೋಗಿ ಸುಖಿಸುವಳು.

ಶಿವ ದುರ್ಗೆ ಗಣಪತಿ ಸೂರ್ಯ ಬ್ರಾಹ್ಮಣ ವೈಷ್ಣವರನ್ನೂ ವಿಷ್ಣುವನ್ನೂ ನಿಂದಿಸುವವನು ಮಹಾರೌರವನರಕವನ್ನು ಹೊಂದುತ್ತಾನೆ. ತಂದೆ ತಾಯಿ ಮಗ ಹೆಂಡತಿ ಗುರು ಅನಾಥೆಯಾದ ಸೋದರಿ, ಕನ್ಯೆಯರನ್ನು ನಿಂದಿಸಿದರೆ ನರಕವಾಗುವುದು. ಬ್ರಾಹ್ಮಣರಲ್ಲಿ ಹರಿಯಲ್ಲಿ ಭಕ್ತಿ ಮಾಡದ ಕ್ಷತ್ರಿಯರು ಮುಂತಾದವರೂ ನರಕಭಾಗಿಗಳಾಗುತ್ತಾರೆ. ಶಾಲಗ್ರಾಮ ತೀರ್ಥವನ್ನೂ ವಿಷ್ಣುನೈವೇದ್ಯವನ್ನೂ ಸೇವಿಸುವವರು ಭೂಮಿಯನ್ನೇ ಪಾವನಗೊಳಿಸುವರು. ಪಿತೃದೇವತೆಗಳನ್ನು ಆರಾಧಿಸಿ ಮಾಂಸಭಕ್ಷಣ ಮಾಡಿದರೆ ದ್ವಿಜನು ಶುಚಿ ಎನಿಸುವನು. ಅವರಿಗೆ ಅರ್ಪಿಸದೆ ತಾನೇ ಮಾಂಸಭಕ್ಷಣ ಮಾಡಿದರೆ ಮಹಾರೌರವ ನರಕ ಲಭಿಸುವುದು. ಮೀನು ತಿಂದರ ಪ್ರಾಯಶ್ಚಿತವಾಗಿ ದ್ವಿಜನು ಉಪವಾಸ ಚಾಂದ್ರಾಯಣ ವ್ರತ ಮಾಡಬೇಕಾಗುವುದು. ಆದರೂ ಅವನು ಸದಾ ಅಶುಚಿ, ಅವನ ಪೂರ್ವಪುಣ್ಯವೆಲ್ಲವೂ ನಶಿಸುವುದು. ಮತ್ಸ್ಯ ಮಾಂಸ ವರ್ಜ್ಯಮಾಡಿ ವಿಷ್ಣುನೈವೇದ್ಯವನ್ನು ಉಣ್ಣುವವನು ಅಶ್ವಮೇಧಯಾಗದ ಫಲವನ್ನು ಪಡೆಯುವನು. ಏಕಾದಶೀ ವ್ರತವನ್ನೂ ಕೃಷ್ಣಜನ್ಮಾಷ್ಟಮೀ ವ್ರತವನ್ನೂ ಮಾಡುವವನು ನೂರುಜನ್ಮಗಳ ಪಾಪವನ್ನು ಕಳೆದುಕೊಳ್ಳುವನು. ಅವನು ಬಾಲ್ಯ ಕೌಮಾರ ಯೌವನ ವಾರ್ಧಕಗಳಲ್ಲಿ ಮಾಡುವ ಎಲ್ಲ ಪಾಪಗಳೂ ಸುಟ್ಟು ಬೂದಿಯಾಗುತ್ತವೆ. ಏಕಾದಶಿ ಕೃಷ್ಣಜನ್ಮಾಷ್ಟಮಿಗಳಲ್ಲಿ ಉಣ್ಣುವವನು ಮೂಲೋಕದ ಎಲ್ಲ ಪಾಪಗಳನ್ನೂ ಉಣ್ಣುತ್ತಾನೆ. ಆದರೆ ರೋಗಿಗೂ ವೃದ್ಧನಿಗೂ ಬಾಲಕನಿಗೂ ಇದು ಅನ್ವಯಿಸುವುದಿಲ್ಲ. ಅವನು ಉಂಡಿದ್ದರೆ ಎರಡು ಪಟ್ಟು ಬ್ರಾಹ್ಮಣನಿಗೆ ದಾನ ಮಾಡಿದರೆ ಶುಚಿಯಾಗುವನು.

ಶಿವರಾತ್ರಿ ಶ್ರೀರಾಮನವಮಿ ದಿನಗಳಲ್ಲಿ ಉಪವಾಸ. ಸಮರ್ಥನು ಉಂಡರೆ ಮಹಾರೌರವನರಕ. ಅಮಾವಾಸ್ಯೆ ಹುಣ್ಣಿಮೆ ಸಂಕ್ರಮಣ ಚತುರ್ದಶಿ ಅಷ್ಟಮಿ ದಿನಗಳಲ್ಲಿ ಸ್ತ್ರೀ ತೈಲ ಮಾಂಸ ಸೇವನೆಯಿಂದ ಚಂಡಾಲ ಜನ್ಮ ಪ್ರಾಪ್ತಿಯಾಗುವುದು. ಮತ್ಸ್ಯ ಮಾಂಸ ಮಸೂರ ಕಂಚಿನ ಪಾತ್ರೆಯಲ್ಲಿ ಉಣ್ಣುವುದು, ಶುಂಠಿ ಕೆಂಪು ತರಕಾರಿಗಳನ್ನು ಭಾನುವಾರಗಳಲ್ಲಿ ವರ್ಜಿಸಬೇಕು. ಇಲ್ಲದಿದ್ದರೆ ಕುಂಭೀಪಾಕ ನರಕ. ರಜಸ್ವಲೆ ವೇಶ್ಯೆಯರ ಅನ್ನ, ಹೆಂಡದಿಂದ ಕೂಡಿದ ಅನ್ನಗಳನ್ನು ದೈವಾತ್ ಉಂಡ ಬ್ರಾಹ್ಮಣನೂ ಹಂದಿಯಾಗಿ ಹುಟ್ಟುತ್ತಾನೆ. ಅವನು ಮಾಡುವ ಪುಣ್ಯಕರ್ಮಕ್ಕೆ ಫಲವಿಲ್ಲ. ಸಾಯುವವರೆಗೂ ಅವನು ಅಶುಚಿ. ವೇಶ್ಯೆಗೆ ಪಿತೃದೇವತೆಗಳ ನೈವೇದ್ಯ ಪಾಕ ಮಾಡುವ ಅಧಿಕಾರವಿರುವುದಿಲ್ಲ. ಶೂದ್ರ ಶ್ರಾದ್ಧಾನ್ನ ಉಂಡರೂ ಕುಂಭೀಪಾಕನರಕ. ಯಾರು ಎರಡು ಹೊತ್ತು ಸಂಧ್ಯಾವಂದನೆ ಮಾಡುವುದಿಲ್ಲವೋ ಅವನಿಗೆ ಯಾವ ಸತ್ಕರ್ಮದಲ್ಲಿಯೂ ಅಧಿಕಾರವಿಲ್ಲ.

**ಸಂಧ್ಯಾಹೀನೋऽಶುಚಿರ್ನಿತ್ಯಮನರ್ಹಃ ಸರ್ವಕರ್ಮಸು ।**
**ಯದಹ್ನಾ ಕುರುತೇ ಕರ್ಮ ನ ತಸ್ಯ ಫಲಭಾಗಭವೇತ್ ॥**

ಸಂಧ್ಯಾವಂದನೆ ಮಾಡದವನು ಸದಾ ಅಶುಚಿ. ಅವನಿಗೆ ಯಾವಕರ್ಮದಲ್ಲಿಯೂ ಅಧಿಕಾರವಿಲ್ಲ. ಅವನು ದಿನವಿಡೀ ಮಾಡುವ ಯಾವುದೇ ಕರ್ಮ ಅವನಿಗೆ ಫಲಕಾರಿಯಾಗುವುದಿಲ್ಲ.

ನದೀನೀರಿನಲ್ಲಿ ನೀರಿನ ಹೊಂಡದಲ್ಲಿ ಮರದ ಬುಡದಲ್ಲಿ ನೀರ ಬಳಿಯಲ್ಲಿ ದೇವಾಲಯದ ಬಳಿಯಲ್ಲಿ ಸಸ್ಯ ಬೆಳೆಯುವ ಭೂಮಿಯಲ್ಲಿ ಮಲವಿಸರ್ಜನೆ ಮಾಡಕೂಡದು. ಹುತ್ತದ ಮಣ್ಣು, ಇಲಿ ಹೆಗ್ಗಣ ಅಗೆದ ಮಣ್ಣು, ನೀರೊಳಗಿನ ಮಣ್ಣು, ಹುಳುಗಳು ಇರುವೆಗಳಿಂದ ಯುಕ್ತವಾದ ಮಣ್ಣು, ನೇಗಿಲಿನಿಂದ ಉತ್ತ ಮಣ್ಣು, ಗಿಡಗಳ ಪಾತಿಯ ಮಣ್ಣು, ಸಸ್ಯ ಬೆಳೆಯುವ ಭೂಮಿಯ ಮಣ್ಣು ಮರಗಳ ಬುಡದ ಮಣ್ಣು ಇವನ್ನು ಶೌಚಕ್ಕೆ ಉಪಯೋಗಿಸಬಾರದು. ಕುಂಬಳಕಾಯಿಯನ್ನು ಹೆಚ್ಚುವ ಸ್ತ್ರೀ ಮತ್ತು ದೀಪವನ್ನು ಆರಿಸುವ ಪುರುಷ ಏಳು ಜನ್ಮಗಳಲ್ಲಿ ರೋಗಿಗಳಾಗಿ ದರಿದ್ರರಾಗಿ ಹುಟ್ಟುತ್ತಾರೆ.

ದೀಪ, ಶಿವಲಿಂಗ, ಶಾಲಗ್ರಾಮ, ಮಣಿ ಪ್ರತಿಮಾ, ಯಜ್ಞೋಪವೀತ, ಬಂಗಾರ, ಶಂಖ, ವಜ್ರ, ಮುತ್ತು, ಗೋಮೂತ್ರ ಗೋಮಯ ತುಪ್ಪ ಶಾಲಿಗ್ರಾಮತೀರ್ಥ ಇವುಗಳನ್ನು ಭೂಮಿಯಲ್ಲಿ ಚೆಲ್ಲುವವನು ನರಕಕ್ಕೆ ಹೋಗುತ್ತಾನೆ. ದರಿದ್ರ ರೋಗಿ ಅಂಗಹೀನನಾಗಿ ಹುಟ್ಟುತ್ತಾರೆ. ಹಗಲಲ್ಲಿ ಸಂಧ್ಯಾಕಾಲದ ನಿದ್ದೆ ಸ್ತ್ರೀಸಂಗಗಳನ್ನು ಮಾಡುವವನು ಏಳು ಜನ್ಮ ದರಿದ್ರರೋಗಿಯಾಗಿ ಹುಟ್ಟುತ್ತಾನೆ. ಸೂರ್ಯೋದಯವಾದ ಬಳಿಕ ಹಲ್ಲುಜ್ಜುವವನು ಮಹಾಪಾಪಿ. ಅವನಿಗೆ ವಿಷ್ಣುಪೂಜೆಯಲ್ಲಿ ಅಧಿಕಾರವಿಲ್ಲ. ಮಣ್ಣು ಭಸ್ಮ ಗೋಮಯಪಿಂಡ ಹೊಯಿಗೆಗಳಿಂದ ಲಿಂಗವನ್ನು ಮಾಡಿ ಒಮ್ಮೆ ಅರ್ಚಿಸಿದರೂ ನೂರುಕಲ್ಪಕಾಲ ಸ್ವರ್ಗವಾಸ ಲಭಿಸುವುದು. ಅವನು ಜೀವನ್ಮುಕ್ತನಾಗುತ್ತಾನೆ. ಶಿವಪೂಜೆ ಮಾಡದ ಬ್ರಾಹ್ಮಣನೂ ಶಿವನನ್ನು ನಿಂದಿಸುವ ಮಾನವನೂ ನರಕಭಾಗಿಯಾಗುತ್ತಾನೆ. ನನಗೆ ಪ್ರಿಯರಾದವರಲ್ಲೆಲ್ಲ ಬ್ರಾಹ್ಮಣ ಹೆಚ್ಚು. ಅವನಿಗಿಂತ ಲಕ್ಷ್ಮಿ. ಅವಳಿಗಿಂತ ನನ್ನೆದೆಯಲ್ಲಿರುವ ರಾಧೆ. ಅವಳಿಗಿಂತಲೂ ಶಂಕರ. ಶಂಕರನಿಗಿಂತ ಹೆಚ್ಚು ಪ್ರಿಯನಿನ್ನೊಬ್ಬನಿಲ್ಲ. ''ಮಹಾದೇವ ಮಹಾದೇವ ಮಹಾದೇವ'' ಎನ್ನುವವನ ಹಿಂದೆ ಹಿಂದೆ ನಾನು ಆ ನಾಮಶ್ರವಣದಾಸೆಯಿಂದ ನಡೆಯುವೆನು. ನನ್ನ ಮನಸ್ಸು ಭಕ್ತರಲ್ಲಿರುತ್ತದೆ. ಪ್ರಾಣ ರಾಧಾಸ್ವರೂಪವಾಗಿದೆ. ಆತ್ಮ ಶಂಕರನಾಗಿದ್ದಾನೆ. ಆದರಿಂದ ಅವನು ನನಗೆ ಪ್ರಾಣಕ್ಕಿಂತ ಪ್ರಿಯ. ಸರ್ವಜಗತ್ಕಾರಣಳಾದ ನಾರಾಯಣೀಶಕ್ತಿ ದಯಾ ನಿದ್ರಾ ಕ್ಷುತ ತೃಪ್ತಿ ತೃಷ್ಣಾ ಶ್ರದ್ಧಾ ಕ್ಷಮಾ ಧೃತಿ ತುಷ್ಟಿಪುಷ್ಟಿ ಶಾಂತಿ ಲಜ್ಜಾ ಇವೆಲ್ಲಕ್ಕೂ ಅಧಿದೇವತೆ. ಅವಳಿಲ್ಲದೆ ನಾನು ಏನೂ ಸೃಷ್ಟಿ ಮಾಡಲಾರೆ. ವೈಕುಂಠದಲ್ಲಿ ಮಹಾಲಕ್ಷ್ಮಿ, ಗೋಲೋಕದಲ್ಲಿ ರಾಧೆ, ಕ್ಷೀರಸಾಗರದಲ್ಲಿ ಲಕ್ಷ್ಮಿ ಅವಳೇ. ಅವಳನ್ನೇ ನಾನು ಶಂಕರನಿಗೆ ನೀಡಿದ್ದೇನೆ. ಅವಳೇ ದಕ್ಷಕನ್ಯೆ ಸತಿ, ಅವಳೇ ಮೇನಕಾಕನ್ಯೆ ಪಾರ್ವತಿ, ಸ್ವರ್ಗಲಕ್ಷ್ಮಿಯೂ ಅವಳೇ.

ಅವಳೇ ಸರಸ್ವತಿ, ಸಾವಿತ್ರಿ, ವಿದ್ಯಾಧಿದೇವತೆ, ಅಗ್ನಿಯಲ್ಲಿ ದಾಹಕಶಕ್ತಿ ಅವಳೇ. ಸೂರ್ಯನಲ್ಲಿ ಬೆಳಕಿನ ಶಕ್ತಿ ಅವಳೇ. ಪೂರ್ಣಚಂದ್ರನಲ್ಲಿ ಶೋಭಾಶಕ್ತಿ, ನೀರಿನಲ್ಲಿ ಶೀತಶಕ್ತಿ ಸಸ್ಯದಲ್ಲಿ ಪ್ರಸೂತಿ ಶಕ್ತಿ ಧರೆಯಲ್ಲಿ ಧಾರಣಶಕ್ತಿ, ವಿಪ್ರರಲ್ಲಿ ಬ್ರಹ್ಮಶಕ್ತಿ, ದೇವತೆಗಳಲ್ಲಿ ದೈವಶಕ್ತಿ, ತಪಸ್ವಿಗಳಲ್ಲಿ ತಪಸ್ಸು, ಗೃಹಸ್ಥರಲ್ಲಿ ಗೃಹದೇವತೆ, ಮುಕ್ತರಲ್ಲಿ ಮುಕ್ತಶಕ್ತಿ, ಭಕ್ತರಲ್ಲಿ ಭಕ್ತಿ, ರಾಜರಲ್ಲಿ ರಾಜ್ಯಲಕ್ಷ್ಮಿ, ಸಜ್ಜನರಲ್ಲಿ ಮೋಕ್ಷದಾಯಕ ವೇದವಿದ್ಯೆ, ವ್ಯಾಖ್ಯಾಶಕ್ತಿ, ಮೇಧಾಶಕ್ತಿ, ಕ್ಷತ್ರಿಯಾದಿಗಳಲ್ಲಿ ವಿಪ್ರಭಕ್ತಿ, ಸ್ತ್ರೀಯರಲ್ಲಿ ಪತಿಭಕ್ತಿ ಎಲ್ಲವೂ ಅವಳೆ. ಅವಳನ್ನು ನಾನು ಶಿವನಿಗೆ ನೀಡಿದ್ದೇನೆ, ಎಂದು ಶ್ರೀಕೃಷ್ಣ ನಂದನಿಗೆ ಉಪದೇಶಿಸುತ್ತಾನೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಶ್ರೀಕೃಷ್ಣನಂದಸಂವಾದವೆಂಬ ಎಪ್ಪತ್ತೈದನೆಯ ಅಧ್ಯಾಯ ಮುಗಿದುದು*



## ಪುಣ್ಯಕರ ದರ್ಶನ

**ಅಧ್ಯಾಯ - ೭೬**

**ನಂದ:-** ಏನು ನೋಡಿದರೆ ಪುಣ್ಯ, ಏನು ನೋಡಿದರೆ ಪಾಪ ಎಂಬುದನ್ನೂ ಹೇಳು.

**ಶ್ರೀಕೃಷ್ಣ:-** ಒಳ್ಳೆಯ ಬ್ರಾಹ್ಮಣರ ತೀರ್ಥಗಳ ವಿಷ್ಣುಭಕ್ತರ ದೇವತಾಪ್ರತಿಮೆಗಳ ದರ್ಶನದಿಂದ ತೀರ್ಥಸ್ನಾನ ಮಾಡಿದ ಪುಣ್ಯ. ಸೂರ್ಯ ಪತಿವ್ರತೆ ಯತಿ, ಬ್ರಹ್ಮಚಾರಿ, ಗೋವು, ಅಗ್ನಿ, ಗುರುಗಳು, ಆನೆ ಸಿಂಹ ಬಿಳಿಕುದುರೆ, ಗಿಳಿ ಕೋಗಿಲೆ, ಹಂಸ, ನವಿಲು, ಚಾಷ ಶಂಖಪಕ್ಷಿಗಳು, ಕರುವಿನೊಂದಿಗೆ ಹಸು, ಅಶ್ವತ್ಥ, ಪತಿಪುತ್ರರೊಂದಿಗೆ ನಾರಿ, ತೀರ್ಥಯಾತ್ರೆಮಾಡುವ ಪುರುಷ, ದೀಪ, ಬಂಗಾರ, ರತ್ನ, ಮುತ್ತು, ವಜ್ರ, ಮಾಣಿಕ್ಯ, ತುಲಸಿ ಬಿಳಿಹೂ ಹಣ್ಣುಗಳು, ಬಿಳಿ ಧಾನ್ಯ, ತುಪ್ಪ, ಮೊಸರು, ಜೇನು, ಪೂರ್ಣಕಲಶ, ಅರಳು ಕನ್ನಡಿ ನೀರು, ಬಿಳಿಹೂಗಳ ಮಾಲೆ, ಗೋರೋಚನ, ಕರ್ಪೂರ, ಕುಂಕುಮ ಪತಾಕೆ ಅಕ್ಷಯವಟ, ದೇವಾಲಯ, ಶಂಖ, ದುಂದುಭಿ, ಶುಕ್ತಿ, ಹವಳ, ಸ್ಫಟಿಕ, ದರ್ಭೆ, ತಾಮ್ರ, ಪುರಾಣಪುಸ್ತಕ, ವಿಷ್ಣುಯಂತ್ರ, ದೂರ್ವೆ, ಅಕ್ಷತ, ತಪಸ್ವಿಗಳು, ಸಮುದ್ರ, ಕೃಷ್ಣಮೃಗ, ಯಜ್ಞ, ಉತ್ಸವ, ಗೋಮೂತ್ರ ಗೋಮಯ, ಹಾಲು, ಗೋಧೂಳಿ, ಹಟ್ಟಿ, ಸಸ್ಯಯುಕ್ತವಾದ ಹೊಲ, ಕಮಲಯುಕ್ತವಾದ ಕೊಳ, ವಸ್ತ್ರಾಲಂಕಾರ ಯುಕ್ತಳಾದ ವೇಶ್ಯೆ, ಗಂಧ, ಸಿದ್ಧವಾ, ಅನ್ನ, ಇವುಗಳ ದರ್ಶನ ಮಾಡಿದರೆ ಪುಣ್ಯ ಲಭಿಸುತ್ತದೆ.

ಕಾರ್ತಿಕ ಹುಣ್ಣಿಮೆಯಂದು ರಾಧೆಯ ಪ್ರತಿಮೆಯನ್ನು ಆಶ್ವಯುಜ ಶುದ್ಧ ಅಷ್ಟಮಿಯಂದು ದುರ್ಗೆಯ ಪ್ರತಿಮೆಯನ್ನು, ಶಿವರಾತ್ರಿ ದಿನ ಕಾಶಿಯಲ್ಲಿ ವಿಶ್ವನಾಥನನ್ನು ಕೃಷ್ಣ ಜನ್ಮಾಷ್ಟಮಿಯಂದು ಕಾಶಿಯಲ್ಲಿ ಬಿಂದುಮಾಧವನನ್ನು, ಪುಷ್ಯಮಾಸದಲ್ಲಿ ಶುಕ್ಲಪಕ್ಷ ರಾತ್ರಿಯಲ್ಲಿ ಪದ್ಮಾಪ್ರತಿಮೆಯನ್ನು, ಏಕಾದಶಿ ಉಪವಾಸ

ಮಾಡಿ ದ್ವಾದಶಿ ಪ್ರಾತಃಕಾಲದಲ್ಲಿ ಸ್ನಾನಮಾಡಿ ಕಾಶಿಯ ಅನ್ನಪೂರ್ಣ ಪ್ರತಿಮೆಯನ್ನು ಚೈತ್ರ ಚತುರ್ದಶಿಯಲ್ಲಿ ಕಾಮರೂಪದ ಭದ್ರಕಾಳಿಯನ್ನು ಶ್ರೀರಾಮನವಮಿಯಂದು ಅಯೋಧ್ಯೆಯಲ್ಲಿ ಶ್ರೀರಾಮನನ್ನು ಕಂಡು ಪೂಜಿಸಿದರೆ ಪುನರ್ಜನ್ಮವಿಲ್ಲದಂತಾಗುತ್ತದೆ.

ಗಯೆಯಲ್ಲಿ ವಿಷ್ಣುಪಾದದಲ್ಲಿ ಪಿಂಡಪ್ರದಾನ ಮಾಡಿ ವಿಷ್ಣುಪೂಜೆ ಮಾಡಿದರೂ ಪುನರ್ಜನ್ಮವಿಲ್ಲ. ಗಯಾತೀರ್ಥಶ್ರಾದ್ಧದಿಂದ ಪಿತೃಗಳಿಗೂ ಉದ್ಧಾರವಾಗುತ್ತದೆ. ಪ್ರಯಾಗ ನೈಮಿಷಾರಣ್ಯ ಪುಷ್ಕರ ಬದರಿ ವೃಂದಾವನಗಳಲ್ಲಿಯೂ ಉಪವಾಸ ಸ್ನಾನ ದಾನ ಪೂಜೆಗಳು ಪುಣ್ಯಕರ. ಭಾದ್ರಪದದಲ್ಲಿ ಮಂಚದಲ್ಲಿ ಆಸೀನನಾದ ಮಧುಸೂದನನ ದರ್ಶನ ಪೂಜೆ ನಮಸ್ಕಾರ; ರಥಯಾತ್ರೆಯಲ್ಲಿ ರಥಾರೂಢನಾದ ಜಗನ್ನಾಥನ ದರ್ಶನ ನಮಸ್ಕಾರ; ಮಕರ ಸಂಕ್ರಮಣದಲ್ಲಿ ಪ್ರಯಾಗ ಸ್ನಾನ, ವೇಣಿಮಾಧವದರ್ಶನ; ಕಾರ್ತಿಕ ಹುಣ್ಣಿಮೆಯಲ್ಲಿ ನನ್ನ ಪ್ರತಿಮೆಯ ದರ್ಶನ; ಚಂದ್ರಭಾಗಾನದೀತೀರದಲ್ಲಿ ಮಾಘ ಅಮಾವಾಸ್ಯೆ ಪೂರ್ಣಿಮೆಗಳಲ್ಲಿ ರಾಧಾಸಹಿತವಾದ ನನ್ನ ದರ್ಶನ, ಆಷಾಡ ಹುಣ್ಣಿಮೆಯಂದು ರಾಮೇಶ್ವರ ಸೇತುದರ್ಶನ ಇವೆಲ್ಲವೂ ಪುನರ್ಜನ್ಮವನ್ನು ಕಳೆಯುತ್ತವೆ.

ರಾಮೇಶ್ವರದಲ್ಲಿ ರಾತ್ರಿಕಾಲ ಗಂಧರ್ವರು ಕಿನ್ನರರು ಮನೋಹರವಾದ ಗಾನ ಮಾಡುತ್ತಾರೆ. ಸಾಕ್ಷಾತ್ ಮಾಧವ ರಾಮೇಶ್ವರನಿಗೆ ಪ್ರಣಾಮ ಮಾಡಲು ಅಲ್ಲಿಗೆ ಬರುತ್ತಾನೆ. ರಾಮೇಶ್ವರನ ದರ್ಶನ ಮಾಡುವ ಮಾನವ ಜೀವನ್ಮುಕ್ತನಾಗುತ್ತಾನೆ. ವಿಷ್ಣುಲೋಕವನ್ನು ಹೊಂದುತ್ತಾನೆ. ಉತ್ತರಾಯಣದಲ್ಲಿ ಕೋಣರ್ಕದ ಸೂರ್ಯದರ್ಶನ, ಕೃಷಿಗೋಷ್ಠ ಸುವಸನ ಕಲವಿಂಕ ಮುಂತಾದ ತೀರ್ಥಗಳಲ್ಲಿ ಪಾರ್ವತಿ ಕಾರ್ತಿಕೇಯ ಗಣೇಶ ನಂದಿ ಶಂಕರರ ದರ್ಶನ, ಇವು ಜನ್ಮಸಾಫಲ್ಯ ಕಾರಣವಾಗುತ್ತದೆ. ತ್ರಿಕೂಟದ ಮಣಿಭದ್ರ ತೀರ್ಥದಲ್ಲಿ ಮತ್ತು ಪಶ್ಚಿಮ ಸಮುದ್ರತೀರದಲ್ಲಿ ನನ್ನ ದರ್ಶನ ಮಾಡುವವನು ಮೋಕ್ಷಭಾಗಿಯಾಗುತ್ತಾನೆ.

ನನಗೆ ಮಂದಿರ ನಿರ್ಮಾಣ ಮಾಡಿ ಅದರಲ್ಲಿ ಶಿವ ಮುಂತಾದ ಪ್ರತಿಷ್ಠ ಮಾಡಿದರೆ ಜನ್ಮ ಸಫಲವಾಗುವುದು. ಪುಷ್ಪೋದ್ಯಾನ ಬಾವಿ ಸರೋವರಗಳನ್ನು ನಿರ್ಮಿಸುವುದು. ಬ್ರಾಹ್ಮಣರಿಗೆ ಅಗ್ರಹಾರ ನಿರ್ಮಿಸುವುದೂ ಜನ್ಮ ಸಾಫಲ್ಯಕ್ಕೆ ಕಾರಣವಾಗುವುದು.

ಬ್ರಾಹ್ಮಣರಿಗೆ ಅಗ್ರಹಾರ ನಿರ್ಮಿಸುವುದರ ಫಲ ವೇದಪುರಾಣಾದಿಗಳಿಗೂ ವರ್ಣಿಸಲು ಅಶಕ್ಯ. ಭೂಮಿಯಲ್ಲಿರುವ ದೂಳಿನ ಕಣಗಳನ್ನಾದರೂ ಎಣಿಸಬಹುದು. ಮಳೆ ನೀರ ಹನಿಗಳನ್ನೂ ಎಣಿಸಬಹುದು. ಅಗ್ರಹಾರನಿರ್ಮಾಣ ಫಲವನ್ನು ಎಣಿಸಿ ಹೇಳಲಾಗದು. ಜೀವನ್ಮುಕ್ತಿಯನ್ನೂ ನಾಲ್ಕು ಬಗೆಯ ಮೋಕ್ಷಕ್ಕೆ ಭಾಗಿತ್ವವನ್ನೂ ಅದು ತಂದುಕೊಟ್ಟೀತು. ನನ್ನ ದಾಸ್ಯವನ್ನೂ ಭಕ್ತಿಯನ್ನೂ ಚಿರಕಾಲ ವೈಕುಂಠವಾಸವನ್ನೂ ಕೊಟ್ಟೀತು. ಉತ್ತಮ ಪಂಡಿತನೂ ಅನಾಥನೂ ದರಿದ್ರನೂ ಆದ ಬ್ರಾಹ್ಮಣನಿಗೆ ಕನ್ಯಾದಾನ ಮಾಡಿದರೆ ಅದು ಮೋಕ್ಷಸಾಧನವಾಗುವುದು. ಛತ್ರ ಪಾದುಕೆ, ಶಾಲಗ್ರಾಮ, ಕನ್ಯಾದಾನಗಳು ಭೂದಾನಕ್ಕೆ ಸಮಾನವೆನಿಸುವುವು. ಆನೆ ಬಿಳಿಕುದುರೆ ಕಪ್ಪು ಹಸುಗಳ ದಾನಗಳೂ ಹಾಗೆ ಭೂದಾನ ಸಮಾನವಾಗಿವೆ. ಬ್ರಾಹ್ಮಣನಿಗೆ ಅನ್ನದಾನ ಮಾಡುವುದು

ಎಲ್ಲ ದಾನಗಳ ಫಲಕ್ಕೆ ಕಾರಣವಾಗುವುದು. ಅದಕ್ಕೆ ಸಮಾನವಾದ ದಾನ ಇನ್ನೊಂದಿಲ್ಲ. ಅನ್ನದಾನಕ್ಕಿಂತ ದೊಡ್ಡ ದಾನ ಇನ್ನೊಂದಿಲ್ಲ. ಅನ್ನದಾನಕ್ಕೆ ಪಾತ್ರಾಪಾತ್ರವಿವೇಚನೆ ಬೇಕಾಗಿಲ್ಲ. ಕಾಲನಿಯಮವೂ ಇಲ್ಲ. ಹಸಿದವನೇ ಪಾತ್ರ. ದಾನಿಗೆ ಸತತ ಪುಣ್ಯಫಲ ಪ್ರಾಪ್ತಿ. ಉಣ್ಣುವವನಿಗೂ ಪ್ರತಿಗ್ರಹ ದೋಷವಿಲ್ಲ. ಅದರಿಂದ ವೈಕುಂಠಲೋಕ ಪ್ರಾಪ್ತಿಗೆ ಸಾಧನವಾದ ಅನ್ನದಾನವೇ ಲೋಕದಲ್ಲಿ ಧನ್ಯ.

**ಅನ್ನದಾನಾತ್ ಪರಂ ದಾನಂ ನ ಭೂತಂ ನ ಭವಿಷ್ಯತಿ ।**
**ನಾತ್ರ ಪಾತ್ರಪರೀಕ್ಷಾ ಸ್ಯಾತ್ ನ ಕಾಲನಿಯಮಃ ಕ್ವಚಿತ್ ।**
**ಅನ್ನದಾನೇ ಶುಭಂ ಪುಣ್ಯಂ ದಾತುಃ ಪಾತ್ರಂ ತ್ವಪಾತಕೀ**
**ಅನ್ನದಾನಂ ಚ ಧನ್ಯಂ ಸ್ಯಾದ್ ಭೂಮೌ ವೈಕುಂಠಕಾರಣಂ ।**

ಬ್ರಾಹ್ಮಣನಿಗೆ ವಸ್ತ್ರ ದೀಪ ತಾಂಬೂಲ ಮಾಲ್ಯ ಫಲ ಶಯ್ಯಾಗೃಹ ಅನ್ನಗಳನ್ನು ದಾನಮಾಡುವುದರಿಂದ ಯಮಯಾತನೆ ಇಲ್ಲವಾಗುವುದು. ವಿಷ್ಣುಲೋಕ ಪ್ರಾಪ್ತಿಯಾಗುವುದು. ಇಹದಲ್ಲಿ ಸ್ಥಿರವಾದ ಸಂಪತ್ತು ಪುತ್ರಪೌತ್ರಾದಿ ಸಂತತಿ ಲಭಿಸುವುದು.

ವ್ರಜರಾಜ ನಂದ, ನೀನು ವ್ರಜಕ್ಕೆ ಹಿಂತಿರುಗು. ಅಲ್ಲಿ ಬ್ರಾಹ್ಮಣರಿಗೆ ಅನ್ನದಾನ ಮಾಡು. ಹೀಗೆ ಪುಣ್ಯಾಕರವಾದ ದಾನಗಳ ಬಗ್ಗೆ ಹೇಳಿದ್ದೇನೆ. ಇದನ್ನು ಅಯೋಗ್ಯ ಪುರುಷರಿಗೆ ಹೇಳಬಾರದು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಎಪ್ಪತ್ತಾರನೆಯ ಅಧ್ಯಾಯ ಮುಗಿದುದು*

—o—

**ನಂದ:-** ಯಾವ ಸ್ವಪ್ನ ಪುಣ್ಯಸೂಚಕ, ಯಾವ ಸ್ವಪ್ನದಿಂದ ಮೋಕ್ಷ ಸುಖ ಸೂಚಿತವಾಗುತ್ತದೆ, ಯಾವುದು ಸುಸ್ವಪ್ನ ಇವೆಲ್ಲವನ್ನೂ ಹೇಳು.

**ಶ್ರೀಕೃಷ್ಣ:-** ವೇದಗಳಲ್ಲಿ ಸಾಮವೇದ ಎಲ್ಲ ಕರ್ಮಗಳಲ್ಲಿಯೂ ಪ್ರಶಸ್ತವೆನಿಸಿದೆ. ಅದರಲ್ಲಿಯೂ ಕಾಣ್ವ ಶಾಖೆಯಲ್ಲಿಯೂ ಪುಣ್ಯಸ್ವಪ್ನದ ಬಗ್ಗೆ ವಿವರಣೆ ಸಿಗುತ್ತದೆ. ಎಲ್ಲವನ್ನೂ ಹೇಳುತ್ತೇನೆ. ಸ್ವಪ್ನಧ್ಯಾನ ಬಹುಪುಣ್ಯ ಫಲಪ್ರದ. ಅದನ್ನು ಶ್ರವಣಮಾಡಿದರೆ ಗಂಗಾಸ್ನಾನದ ಫಲ ಬರುತ್ತದೆ. ರಾತ್ರಿಯ ಪ್ರಥಮ ಯಾಮದಲ್ಲಿ ಕಂಡ ಸ್ವಪ್ನ ಒಂದು ವರ್ಷದಲ್ಲಿ ನೀಡುತ್ತದೆ. ಎರಡನೇ ಯಾಮದಲ್ಲಿ ಕಂಡ ಸ್ವಪ್ನ ಎಂಟು ತಿಂಗಳಲ್ಲಿ, ಮೂರನೆ ಯಾಮದಲ್ಲಿ ಕಂಡ ಸ್ವಪ್ನ ಮೂರು ತಿಂಗಳಲ್ಲಿ, ನಾಲ್ಕನೇ ಯಾಮದಲ್ಲಿ ಕಂಡ ಸ್ವಪ್ನ ಹದಿನೈದು ದಿನಗಳಲ್ಲಿ, ಅರುಣೋದಯದಲ್ಲಿ ಕಂಡ ಸ್ವಪ್ನ ಹತ್ತು ದಿನಗಳಲ್ಲಿ, ಸೂರ್ಯೋದಯದಲ್ಲಿ ಕಂಡ ಸ್ವಪ್ನದಲ್ಲಿ ಕಾಣುತ್ತಾನೆ. ಹೀಗೆ ಚಿಂತಾಕುಲನಾಗಿ ಅಥವಾ ವ್ಯಾಧಿಯುಕ್ತನಾಗಿ ಇದ್ದಾಗ ಸ್ವಪ್ನಕಂಡರೆ ಅದು ನಿಷ್ಫಲ. ಮಲಮೂತ್ರಪೀಡಿತನಾಗಿ ಭಯಾಕುಲನಾಗಿ ದಿಗಂಬರನಾಗಿ ತಲೆಕೂದಲು ಕಟ್ಟಿಕೊಳ್ಳದೆ ಮಲಗಿದ್ದಾಗ ಕಂಡ ಸ್ವಪ್ನವೂ ಫಲಕಾರಿಯಲ್ಲ. ಸ್ವಪ್ನನೋಡಿ ತಿರುಗಿ ನಿದ್ದೆ ಮಾಡಿದರೆ ಅಥವಾ ತಾನು ಕಂಡ ಸ್ವಪ್ನವನ್ನು ಇನ್ನೊಬ್ಬರಿಗೆ ಹೇಳಿದರೆ ಸ್ವಪ್ನ ಫಲಿಸುವುದಿಲ್ಲ.

ಸ್ವಪ್ನದಲ್ಲಿ ಗೋವು ಆನೆ, ಕುದುರೆ, ಅರಮನೆ ಪರ್ವತ, ಮರಗಳ ಮೇಲೇರಿದಂತೆ ಕಾಣುವುದು, ಉಣ್ಣುವುದು, ಅಳುವುದು, ಧನಪ್ರದ. ವೀಣೆ ಸಿಕ್ಕಿದಂತೆ ಕಂಡರೆ ಫಲವತ್ತಾದ ಭೂಮಿ ಲಭಿಸುವುದು. ಶಸ್ತ್ರಾಸ್ತ್ರಗಳಿಂದ ಮೈಗೆ ಗಾಯವಾದಂತೆ, ಮೈಯಲ್ಲಿ ವ್ರಣಕ್ರಿಮಿ ಮಲ ರಕ್ತಲೇಪವಾದಂತೆ ಕಂಡರೂ ಧನಲಾಭ. ಅಗಮ್ಯ ಸ್ತ್ರೀಸಂಗವೂ ಭಾರ್ಯಪ್ರಾಪ್ತಿ ಸೂಚಕ. ಮೂತ್ರ ಸೇಕ, ವೀರ್ಯಪಾನ, ನರಕ ಪ್ರವೇಶ, ನಗರಪ್ರವೇಶ, ಕೆಂಪು ಸಮುದ್ರ ಪ್ರವೇಶ, ಅಮೃತಪಾನಗಳಿಂದ ಶುಭವಾರ್ತಾಶ್ರವಣ ಮತ್ತು ಧನಲಾಭ. ಆನೆ ರಾಜ ಬಂಗಾರ ಎತ್ತು ಹಸು ದೀಪ ಅನ್ನ ಫಲ ಪುಷ್ಪ ಕನ್ಯೆ ಛತ್ರ ಧ್ವಜ ರಥಗಳ ದರ್ಶನ ಮಾಡಿದರೆ ಕುಟುಂಬ ಕೀರ್ತಿ ವಿಪುಲಸಂಪತ್ತುಗಳು ಲಭಿಸುವುವು. ಪೂರ್ಣಕುಂಭ, ಬ್ರಾಹ್ಮಣ, ಅಗ್ನಿ, ಪುಷ್ಪ, ತಾಂಬೂಲ ಮಂದಿರ ಬಿಳಿಧಾನ್ಯ ನಟ ನರ್ತಕಿಯರನ್ನು ಕಂಡರೆ ಲಕ್ಷ್ಮೀಪ್ರಾಪ್ತಿ. ಆಕಳ ಹಾಲು ತುಪ್ಪಗಳನ್ನು ಕಂಡರೂ ಧನಲಾಭ. ಪಾಯಸ ಮೊಸರು ಹಾಲು ತುಪ್ಪ ಜೇನು ಮಿಷ್ಟಾನ್ನಗಳನ್ನು ಕಮಲದೆಲೆಯಲ್ಲಿ ಉಂಡಂತೆ ಕಂಡರೆ ರಾಜನಾಗುತ್ತಾನೆ. ಛತ್ರ, ಪಾದುಕೆ, ನಿರ್ಮಲ ತೀಕ್ಷ್ಣವಾದ ಖಡ್ಗ ಸಿಕ್ಕಿದರೆ ಧಾನ್ಯಲಾಭ. ಅನಾಯಾಸವಾಗಿ ಈಜುತ್ತ ನೀರನ್ನು ದಾಟಿದರೆ ಊರಿಗೆ ಮುಖ್ಯನೆನಿಸುತ್ತಾನೆ. ಫಲಭರಿತವಾದ ವೃಕ್ಷವನ್ನು ಕಂಡರೆ ಧನಲಾಭ. ಹಾವು ಕಚ್ಚಿದರೂ ಧನಲಾಭ. ಸೂರ್ಯಚಂದ್ರನ್ನು ಕಂಡರೆ

ರೋಗಪರಿಹಾರ. ಹೆಣ್ಣುಕುದುರೆ ಹೆಣ್ಣುಕೋಳಿಗಳನ್ನು ಹೆಣ್ಣುಬಕಪಕ್ಷಿಗಳನ್ನು ಕಂಡರೆ ಭಾರ್ಯಾಲಾಭ. ಕಾರಾಗೃಹ ಬಂಧನಕ್ಕೊಳಗಾದರೆ ಪ್ರತಿಷ್ಠೆ ಪುತ್ರಲಾಭ. ಜಲ ಜಂತು, ಚೇಳು, ಹಾವುಗಳನ್ನು ಕಂಡರೆ ಧನ ಪುತ್ರ ವಿಜಯ ಪ್ರತಿಷ್ಠಾ ಲಾಭ. ಕೊಂಬು ಕೋರೆಹಲ್ಲುಗಳುಳ್ಳ ಮೃಗಗಳು ಕಾಡುಹಂದಿ ಕೋತಿಗಳಿಂದ ಪೀಡಿತನಾದರೆ ರಾಜನಾಗುತ್ತಾನೆ, ವಿಪುಲಧನಲಾಭ. ಮೀನು ಮಾಂಸ ಮುತ್ತು ಶಂಖ ಚಂದನ ವಜ್ರಗಳನ್ನು ಸ್ವಪ್ನದ ಕೊನೆಯಲ್ಲಿ ಕಂಡರೆ ವಿಪುಲ ಧನಲಾಭ. ಪ್ರತಿಮೆ ಶಿವಲಿಂಗಗಳನ್ನು ಕಂಡರೆ ಜಯಲಾಭ, ಧನಲಾಭ. ಹೂಹಣ್ಣುಗಳಿಂದ ಕೂಡಿದ ಬಿಲ್ವ ಮಾವಿನ ಮರಗಳನ್ನು ಕಂಡೂರ ಧನಲಾಭ. ಉರಿವ ಅಗ್ನಿಯನ್ನು ಕಂಡರೆ ಧನ ಬುದ್ಧಿ ಲಕ್ಷ್ಮೀ ಲಾಭ. ನೆಲ್ಲಿ ತಾವರೆ ಹೂಗಳನ್ನು ಕಂಡರೂ ಧನಲಾಭ. ದೇವತೆಗಳು ಬ್ರಾಹ್ಮಣರು ಗೋವುಗಳು ಪಿತೃಗಳು ಬ್ರಹ್ಮಚಾರಿಗಳು ಸ್ವಪ್ನದಲ್ಲಿ ಏನು ಕೊಟ್ಟರೂ ಅದು ನಿಜವಾಗುತ್ತದೆ. ಬಿಳಿಸೀರೆ ಉಟ್ಟು ಬಿಳಿ ಹೂಮಾಲೆ ಗಂಧಲೇಪಿಸಿಕೊಂಡ ಸ್ತ್ರೀಯರು ಆಲಿಂಗಿಸಿದರೆ, ಪೀತಾಂಬರ ಉಟ್ಟ ಹಳದಿ ಹೂಮಾಲೆ ತೊಟ್ಟ ಸ್ತ್ರೀಯರನ್ನು ಆಲಿಂಗಿಸಿದರೆ ಶುಭ, ಸುಖ, ಧನಪ್ರಾಪ್ತಿ. ಸ್ವಪ್ನದಲ್ಲಿ ಭಸ್ಮ ಅಸ್ಥಿ ಹತ್ತಿ ಹೊರತು ಎಲ್ಲ ಬಿಳಿ ವಸ್ತುಗಳೂ ಪ್ರಶಸ್ತ. ಗೋವು ಆನೆ ಕುದುರೆ ಬ್ರಾಹ್ಮಣ ದೇವತೆ ಹೊರತು ಎಲ್ಲ ಕಪ್ಪು ವಸ್ತುಗಳೂ ನಿಂದಿತ. ರತ್ನಾಭರಣಭೂಷಿತಳಾದ ದಿವ್ಯ ಬ್ರಾಹ್ಮಣಸ್ತ್ರೀ ನಸುನಗುತ್ತ ಮನೆಯೊಳಗೆ ಕಾಲಿಟ್ಟರೆ ಪ್ರಿಯಲಾಭ. ಬ್ರಾಹ್ಮಣ ದೇವತೆ ಬ್ರಾಹ್ಮಣಸ್ತ್ರೀ ದೇವಕನ್ಯೆ ಸಂತೋಷದಿಂದ ಫಲವಿತ್ತರೆ ಪುತ್ರಲಾಭ. ಬ್ರಾಹ್ಮಣರು ಶುಭಾಶೀರ್ವಾದ ಮಾಡಿದರೆ ಐಶ್ವರ್ಯಲಾಭ. ಶ್ರೇಷ್ಠಬ್ರಾಹ್ಮಣ ನಾರಾಯಣ ಶಿವ ಬ್ರಹ್ಮ ಮನೆಯನ್ನು ಹೊಕ್ಕರೆ ಯಶಸ್ಸು ವಿಪುಲ ಶುಭ, ಸಂಪತ್ತು ಲಭಿಸುತ್ತದೆ. ಸನ್ಮಾನ ಗೌರವಗಳೂ ಸುಖವೂ ಹೆಚ್ಚುತ್ತದೆ. ಅಕಸ್ಮಾತ್ ಹಸು ದೊರಕಿದಂತೆ ಕಂಡರೆ ಭೂಲಾಭ, ಪತಿವ್ರತೆಯಾದ ಭಾರ್ಯೆ ಲಭಿಸುತ್ತಾಳೆ. ಆನೆ ಸೊಂಡಿಲಿನಿಂದೆತ್ತಿ ತಲೆಯ ಮೇಲೆ ತನ್ನನ್ನು ಇರಿಸಿದಂತೆ ಕಂಡರೆ ರಾಜ್ಯಲಾಭ. ಬ್ರಾಹ್ಮಣ ಸಂತುಷ್ಟನಾಗಿ ಆಲಿಂಗಿಸಿದರೆ ತೀರ್ಥಸ್ನಾನಲಾಭ. ಲಕ್ಷ್ಮೀಲಾಭ. ಬ್ರಾಹ್ಮಣ ಪುಷ್ಪವನ್ನು ನೀಡಿದರೆ ಜಯ ಯಶಸ್ಸು, ಧನ ಸುಖಲಾಭ. ತೀರ್ಥಗಳನ್ನೂ ಅರಮನೆಗಳನ್ನೂ ಕಂಡರೆ ಜಯಲಾಭ, ಧನಲಾಭ. ತೀರ್ಥಸ್ನಾನಲಾಭ. ಯಾರಾದರೂ ಪೂರ್ಣಕುಂಭವನ್ನು ಕೊಟ್ಟರೆ ಪುತ್ರಲಾಭ, ಧನಲಾಭ, ಕೈಯಲ್ಲಿರುವ ಸೇರು ಅವರೆಕಾಳನ್ನು ಹಿಡಿದು ವೇಶ್ಯೆ ಮನೆಯನ್ನು ಪ್ರವೇಶಿಸಿದರೆ ಲಕ್ಷ್ಮೀಲಾಭ. ದಿವ್ಯಸ್ತ್ರೀ ಮನೆಗೆ ಬಂದು ಮಲವಿಸರ್ಜನೆ ಮಾಡಿದರೂ ಧನಲಾಭ. ದಾರಿದ್ರ್ಯಪರಿಹಾರ. ಸಪತ್ನೀಕರಾಗಿ ಬ್ರಾಹ್ಮಣ, ಶಂಕರ, ನಾರಾಯಣರು ಮನೆಗೆ ಬಂದು ಧಾನ್ಯಹೂಗಳನ್ನು ನೀಡಿದರೆ ಸರ್ವಸಂಪತ್ತು ಲಭಿಸುವುದು. ಬ್ರಾಹ್ಮಣ ಮುತ್ತಿನ ಮಾಲೆ ಹೂಮಾಲೆ ಚಂದನಗಳನ್ನು ನೀಡಿದರೆ ಲಕ್ಷ್ಮೀಲಾಭ. ಗೋರೋಚನ ಪತಾಕೆ ಅರಿಶಿಣ ಕಬ್ಬಿನ ಜಲ್ಲೆ ಪಕ್ವಾನ್ನಗಳನ್ನೂ ಪಡೆದಂತೆ ಕಂಡರೆ ಧನಲಾಭ. ಬ್ರಾಹ್ಮಣ ಅಥವಾ ಬ್ರಾಹ್ಮಣಸ್ತ್ರೀ ತಲೆಯ ಮೇಲೆ ಛತ್ರವನ್ನಾಗಲಿ ಬಿಳಿಧಾನ್ಯವನ್ನಾಗಲಿ ಇಟ್ಟರೆ ರಥದಲ್ಲಿ ತಾನು ಮೊಸರನ್ನು ಅಥವಾ ಪಾಯಸವನ್ನು ಭಕ್ಷಿಸಿದರೆ, ಬ್ರಾಹ್ಮಣ ಅಥವಾ ಬ್ರಾಹ್ಮಣಸ್ತ್ರೀ ತನಗೆ ಅಮೃತದ ಅಥವಾ ಮೊಸರಿನ ಪಾತ್ರೆ ಕೊಟ್ಟರೆ, ಅವನು ರಾಜನಾಗುತ್ತಾನೆ.

ರತ್ನಾಭರಣ ಭೂಷಿತಳಾದ ಎಂಟುವರ್ಷದ ಕನ್ಯೆ ತನ್ನಲ್ಲಿ ಸಂತುಷ್ಟಳಾದರೆ ತನಗೆ ಪುಸ್ತಕವನ್ನಿತ್ತರೆ, ಪ್ರಸಿದ್ಧ ಕವಿ, ಪಂಡಿತನಾಗುತ್ತಾನೆ. ಆ ಕನ್ಯೆ ತನಗೆ ಶಾಸ್ತ್ರವನ್ನು ಹೇಳಿಕೊಟ್ಟರೆ, ದೊಡ್ಡ ಪಂಡಿತನಾಗುತ್ತಾನೆ. ಬ್ರಾಹ್ಮಣನೊಬ್ಬ ತನಗೆ ಶಾಸ್ತ್ರ ಹೇಳಿಕೊಟ್ಟರೆ, ಅವನೊಂದು ಪುಸ್ತಕವನ್ನಿತ್ತರೆ, ಮಾರ್ಗದಲ್ಲಿ ಎಲ್ಲಿಯಾದರೂ ಬಿದ್ದಿರುವ ಒಂದು ಪುಸ್ತಕ ತನಗೆ ಸಿಕ್ಕಿದರೆ, ಅವನು ಪ್ರಸಿದ್ಧ ಪಂಡಿತನಾಗುತ್ತಾನೆ. ಬ್ರಾಹ್ಮಣ ಅಥವಾ ಬ್ರಾಹ್ಮಣಸ್ತ್ರೀ ಮಂತ್ರೋಪದೇಶ ಮಾಡಿದರೆ ಅಥವಾ ಶಿಲಾಪ್ರತಿಮೆಯನ್ನು ನೀಡಿದರೆ ಮಂತ್ರಸಿದ್ಧಿಯಾಗುತ್ತದೆ. ಬ್ರಾಹ್ಮಣ ಸಮೂಹಕ್ಕೆ ವಂದನಮಾಡಿ ಆಶೀರ್ವಾದ ಪಡೆದರೆ ರಾಜಾಧಿರಾಜ, ಕವಿ, ಪಂಡಿತನೆನಿಸುತ್ತಾನೆ. ಬ್ರಾಹ್ಮಣ ಸಂತುಷ್ಟನಾಗಿ ಬಿಳಿಧಾನ್ಯಯುಕ್ತವಾದ ಭೂಮಿಯನ್ನು ನೀಡಿದರೆ ರಾಜನಾಗುತ್ತಾನೆ. ಬ್ರಾಹ್ಮಣ ತನ್ನನ್ನು ರಥದಲ್ಲಿ ಕುಳ್ಳಿರಿಸಿ ನಾನಾ ಪ್ರಕಾರದ ಸ್ವರ್ಗವನ್ನು ತೋರಿದರೆ ಅವನು ಚಿರಂಜೀವಿಯಾಗುತ್ತಾನೆ. ಅವನ ಆಯುಷ್ಯ ಸಂಪತ್ತು ವರ್ಧಿಸುತ್ತದೆ. ಬ್ರಾಹ್ಮಣ ತನಗೆ ಕನ್ಯಾದಾನ ಮಾಡಿದರೆ ಧನಾಢ್ಯನಾದ ರಾಜನಾಗುತ್ತಾನೆ. ಸರೋವರ ನದಿ ನದ ಸಮುದ್ರ ಬಿಳಿ ಹಾವು ಬಿಳಿ ಬೆಟ್ಟಗಳನ್ನು ಕಂಡರೆ ಲಕ್ಷ್ಮೀಪ್ರಾಪ್ತಿ. ತಾನು ಸತ್ತು ಹೋದಂತೆ ಕಂಡರೆ ಚಿರಂಜೀವಿಯಾಗುತ್ತಾನೆ. ತಾನು ರೋಗಿಯಾದಂತೆ ಕಂಡರೆ ನೀರೋಗಿಯಾಗುತ್ತಾನೆ. ದುಃಖಿಯಾದಂತೆ ಕಂಡರೆ ಸುಖಿಯಾಗುತ್ತಾನೆ. ದಿವ್ಯನಾರಿ 'ನೀನು ನನ್ನ ಪತಿ' ಎಂದು ಹೇಳಿದಂತೆ ಕನಸು ಕಂಡು ತಕ್ಷಣ ಎಚ್ಚತ್ತರೆ ಅವನು ನಿಶ್ಚಯವಾಗಿ ರಾಜನಾಗುತ್ತಾನೆ. ಕಾಳಿ ಬಂದು ಸ್ಫಟಿಕಮಾಲೆ ಇಂದ್ರ ಧನುಸ್ಸು ವಜ್ರಾಯುಧಗಳನ್ನು ನೀಡಿದರೆ ಪ್ರತಿಷ್ಠೆ ಲಭಿಸುತ್ತದೆ. ಬ್ರಾಹ್ಮಣನು ''ನೀನು ನನ್ನ ದಾಸನಾಗು'' ಎಂದರೆ ಹರಿದಾಸ್ಯ ಹರಿಭಕ್ತಿ ಲಭಿಸುತ್ತದೆ. ಸ್ವಪ್ನದಲ್ಲಿ ಕಾಣುವ ಬ್ರಾಹ್ಮಣ ಹರಿಯಾಗುತ್ತಾನೆ. ಹರನಾಗಿರುತ್ತಾನೆ, ಬ್ರಾಹ್ಮಣಸ್ತ್ರೀ ಲಕ್ಷ್ಮಿ ಅಥವಾ ಪಾರ್ವತಿಯಾಗಿರುತ್ತಾಳೆ. ಶುಕ್ಲವರ್ಣದ ಸ್ತ್ರೀಯು ದೇವಮಾತೆ, ಗಂಗೆ ಅಥವಾ ಸರಸ್ವತಿಯಾಗಿರುತ್ತಾಳೆ. ಗೋಪವೇಷದಲ್ಲಿರುವ ಬಾಲಿಕೆಯು ರಾಧೆಯಾಗಿರುತ್ತಾಳೆ. ಬಾಲಕನು ಬಾಲಗೋಪಾಲನಾಗಿರುತ್ತಾನೆ ಎಂದು ಸ್ವಪ್ನವನ್ನು ಬಲ್ಲವರು ಹೇಳಿದ್ದಾರೆ. ನಂದ, ಪುಣ್ಯದಿಂದ ಕಾಣುವ ಸುಸ್ವಪ್ನಗಳು ಇವು. ಇನ್ನೇನು ಕೇಳಲು ಬಯಸುವೆ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಸುಸ್ವಪ್ನದರ್ಶನವೆಂಬ ಎಪ್ಪತ್ತೇಳನೆಯ ಅಧ್ಯಾಯ ಮುಗಿದುದು*

—೦—

**ನಂದ:-** ಸುಸ್ವಪ್ನದ ಬಗ್ಗೆ ನಾನು ಕೇಳಿ ತಿಳಿದೆ. ಇದು ವೇದಗಳ ಸಾರ, ಲೌಕಿಕ ವೈದಿಕ ನೀತಿಸಾರವಾಗಿದೆ. ಇನ್ನು ಮುಂದೆ ಏನನ್ನು ನೋಡಿದರೆ ಪಾಪ ಬರುತ್ತದೆ ಎನ್ನುವುದನ್ನೂ ಹೇಳು. ದುಃಖತಪ್ತರಾದ ವೈದಿಕ ಜನರು ನಿನ್ನ ಮುಖದಿಂದಲೆ ವೇದಶಾಸ್ತ್ರೋಕ್ತ ಪ್ರಮೇಯಗಳನ್ನು ಕೇಳಲು ಬಯಸುವುದು ಸಹಜ. ಏಕೆಂದರೆ ವೇದಗಳಿಗೆ ಜನಕ ನೀನು. ವೈದಿಕರಾದ ಬ್ರಹ್ಮಾದಿ ದೇವತೆಗಳಿಗೂ ಮುನಿಗಳಿಗೂ ನಿನ್ನ ಮುಖದಿಂದ ಕೇಳಿದ ವಚನಾಮೃತವೇ ಪ್ರಮಾಣ. ನಿನ್ನ ವಿಯೋಗದುಃಖದಿಂದ ಬೇಯುತ್ತಿರುವ ನನ್ನ ಶರೀರಕ್ಕೆ ನಿನ್ನ ವಚನಾಮೃತದ ಅಭಿಷೇಕವಾಗಬೇಕು. ನಿನ್ನ ಚರಣಕಮಲವನ್ನು ಬ್ರಹ್ಮಾದಿಗಳು ಸ್ವಪ್ನದಲ್ಲಿ ಕಾಣಲಾರರು. ಅದನ್ನು ನಾನೀಗ ಕಾಣುತ್ತಿದ್ದೇನೆ. ಮುಂದೆ ನನಗೆ ಎಂದಿಗೆ ಅದರ ದರ್ಶನ ಲಭಿಸೀತು? ನಾನು ಪಾಪಿ, ಮಲಮೂತ್ರಮಯವಾದ ಶರೀರದಲ್ಲಿ ಕರ್ಮದಿಂದ ಬದ್ಧನಾಗಿದ್ದೇನೆ. ಇಂಥ ಸುದಿನ ನನಗೆ ಇನ್ನೆಂದು ಲಭಿಸೀತು? ಬ್ರಹ್ಮಾದಿ ದೇವತೆಗಳಿಗೂ ಸ್ವಾಮಿಯಾದ ನಿನ್ನೊಂದಿಗೆ ಹೀಗೆ ಮಾತನಾಡುವ ಯೋಗ ನನ್ನಂಥ ಪಾಪಿಗೆ ಇನ್ನೆಂದು ಲಭಿಸೀತು? ಪ್ರಭು, ನನನ್ನಲ್ಲಿ ದಯೆದೋರು. ನಾನು ನಿನ್ನನ್ನು ಮಗನೆಂದು ಬಗೆದು ಸದಾ ಅಪಚಾರಗೈದಿರುವೆನು. ಅವುಗಳನ್ನು ಕ್ಷಮಿಸು. ಬ್ರಹ್ಮ ಶಿವ ಶೇಷ ಮುನಿಗಳು ನಿನ್ನ ಚರಣ ಕಮಲಗಳನ್ನು ಧ್ಯಾನಿಸುತ್ತಾರೆ. ಸರಸ್ವತಿಯೂ ವೇದವೂ ನಿನ್ನ ಸ್ತುತಿ ಮಾಡಲು ಅಶಕ್ತರಾಗಿದ್ದಾರೆ. ಇನ್ನು ನನ್ನ ಪಾಡೇನು?

ಹೀಗೆ ಹೇಳಿ ನಂದ ದುಃಖಶೋಕವ್ಯಾಕುಲನಾದ; ಪುತ್ರವಿಯೋಗದಿಂದ ವಿಹ್ವಲನಾಗಿ ಅತ್ತುಅತ್ತು ಮೂರ್ಛೆ ಹೊಂದಿದ. ಭಗವಾನ್ ಶ್ರೀಕೃಷ್ಣ ಅವನನ್ನು ಸಂತೈಸಿ ಉತ್ತಮ ಅಧ್ಯಾತ್ಮ ಉಪದೇಶ ನೀಡಿದ.

**ಶ್ರೀಕೃಷ್ಣ:-** ಅಪ್ಪ, ಲೋಕದಲ್ಲಿ ಮಕ್ಕಳಿಗೆ ಜನ್ಮ ನೀಡಿದ ತಂದೆಗಳಲ್ಲೆಲ್ಲ ಶ್ರೇಷ್ಠವಾದ ಸ್ಥಾನ ನಿನ್ನದು. ಎಚ್ಚೆತ್ತುಕೊಳ್ಳು. ಮಂಗಳಕರವಾದ ಜ್ಞಾನೋಪದೇಶ ನೀಡುತ್ತೇನೆ ಕೇಳು. ಜ್ಞಾನಿಗಳಿಗೂ ಪರಮ ದುರ್ಲಭವಾದ ಜ್ಞಾನ ಅದು. ವೇದಶಾಸ್ತ್ರಗಳ ರಹಸ್ಯವಾಗಿದೆ. ನಿನಗೆ ಮಾತ್ರ ಈ ಉಪದೇಶ ನೀಡುತ್ತಿದ್ದೇನೆ. ಏಕಾಗ್ರ ಚಿತ್ತನಾಗಿ ಕೇಳಿ ಮನನ ಮಾಡು. ಅದರಿಂದ ನಿನಗೆ ಜನನ ಮರಣ ಜರಾರೋಗಗಳಿಂದ ಮುಕ್ತಿ ಲಭಿಸುತ್ತದೆ. ಈ ಜ್ಞಾನವನ್ನು ಹೊಂದಿ ಶೋಕಮೋಹ ರಹಿತನಾಗು, ಪರಮಾನಂದ ಮಗ್ನನಾಗು. ನೆಮ್ಮದಿಯಿಂದ ಗೋಕುಲಕ್ಕೆ ಹಿಂತಿರುಗು.

ಈ ಸಮಸ್ತ ಚರಾಚರ ಪ್ರಪಂಚದ ನೀರಮೇಲಿನ ಗುಳ್ಳೆಯಂತೆ ಅಸ್ಥಿರ, ಹಗಲು ಕಂಡ ಸ್ವಪ್ನದಂತೆ ಸುಳ್ಳು, ಮೋಹಕ್ಕೆ ಕಾರಣವಾಗಿದೆ. ಮಾಯೆಯಿಂದ ಅದನ್ನು ಸತ್ಯನಿತ್ಯವೆಂದು ತಿಳಿದು ಕಾಮಕ್ರೋದಾಧಿಗಳಿಗೆ ವಶನಾಗಿ ಜ್ಞಾನಹೀನನಾಗುತ್ತಾನೆ ಜೀವ. ನಿದ್ದೆ, ಆಲಸ್ಯ ಹಸಿವು ತೃಷೆ ಕ್ಷಮೆ, ಶ್ರದ್ಧೆ ದಯೆ ಲಜ್ಜೆ ಶಾಂತಿ ಧೃತಿ ಪುಷ್ಟಿ

ತುಷ್ಟಿಗಳಿಂದ ಬದ್ಧನಾಗುತ್ತಾನೆ. ಮನೋಬುದ್ಧಿ ಚೇತನಾ ಪ್ರಾಣ ಜ್ಞಾನಗಳ ಅಧಿದೇವತೆಗಳು ಅವನ ಶರೀರದಲ್ಲಿ ಹಕ್ಕಿಗಳು ಮರಗಳಲ್ಲಿ ಹೇಗೋ ಹಾಗೆ ಮನೆ ಮಾಡಿರುತ್ತಾರೆ. ನಾನು ಸರ್ವೇಶ್ವರ, ಸರ್ವಜ್ಞ. ಮನಸ್ಸಿಗೆ ಬ್ರಹ್ಮ, ಬುದ್ಧಿಗೆ ಪ್ರಕೃತಿ, ಪ್ರಾಣಕ್ಕೆ ವಿಷ್ಣು, ಚೇತನಾಕ್ಕೆ ಲಕ್ಷ್ಮಿ, ಅಧಿದೇವತೆಗಳು. ಇವರೆಲ್ಲರೂ ಶರೀರದಲ್ಲಿ ನಾನಿದ್ದರೆ ಮಾತ್ರ ಇರುತ್ತಾರೆ. ನಾನು ಹೊರಗೆ ಹೋದರೆ ಅವರೂ ಹೊರಗೆ ಹೋಗುತ್ತಾರೆ. ನಾವೆಲ್ಲರೂ ಹೊರಗೆ ಹೋದರೆ ತಕ್ಷಣ ಶರೀರಪಾತವಾಗುತ್ತದೆ. ಪಾಂಚಭೌತಿಕವಾದ್ದರಿಂದ ಪಂಚಭೂತಗಳಲ್ಲಿ ಲೀನವಾಗುತ್ತದೆ. ಶರೀರಕ್ಕೆ ಹೆಸರಿಡುವುದು ನಿಷ್ಫಲ, ಮೋಹಕಾರಣ. ಆದರಿಂದ ಅಜ್ಞಾನಿಗಳಿಗೆ ಮಾತ್ರ ಶರೀರ ಸಂಬಂಧದಿಂದ ಶೋಕ. ಜ್ಞಾನಿಗಳಿಗೆ ಅದು ಇಲ್ಲ. ನಿದ್ರಾದಿಗಳು ಪ್ರಕೃತಿಯ ಅಂಶಗಳು. ಕಾಮ ಕ್ರೋಧ ಲೋಭ ಮೋಹ ಮದಗಳು ಅಧರ್ಮದ ಅಂಶಗಳು. ಸತ್ವರಜಸ್ತಮೋ ಗುಣಗಳು ವಿಷ್ಣು ಬ್ರಹ್ಮ ರುದ್ರರ ಅಂಶಗಳು. ಜ್ಯೋತಿರ್ಮಯನಾದ ಶಿವ ಜ್ಞಾನಸ್ವರೂಪ. ನಾನು ನಿರ್ಗುಣ ಆತ್ಮ. ಪ್ರಕೃತಿಯಲ್ಲಿ ನಾನು ಪ್ರವೇಶಮಾಡಿದಾಗ ಸಗುಣನಾಗುತ್ತೇನೆ. ವಿಷ್ಣು ಬ್ರಹ್ಮರುದ್ರರು ಧರ್ಮಶೇಷ ಸೂರ್ಯಚಂದ್ರರು ಎಲ್ಲರೂ ನನ್ನ ಅಂಶಗಳು. ನಾನು ಎಲ್ಲರ ದೇಹದಲ್ಲಿದ್ದರೂ ನನಗೆ ಕರ್ಮಲೇಪವಿಲ್ಲ. ನನ್ನ ಭಕ್ತನೂ ಜೀವನ್ಮುಕ್ತನಾಗುತ್ತಾನೆ. ಜನನ ಮರಣ ಜರೆಗಳನ್ನು ಕಳೆದುಕೊಳ್ಳುತ್ತಾನೆ. ಸರ್ವಸಿದ್ಧೇಶ್ವರನಾಗುತ್ತಾನೆ. ಶ್ರೀಮಂತ ಕೀರ್ತಿಶಾಲಿ ಪಂಡಿತ ಕವಿಯೆನಿಸುತ್ತಾನೆ. ಇಪ್ಪತ್ತೆರಡು ಸಿದ್ಧಿಗಳನ್ನು ಪಡೆಯುತ್ತಾನೆ. ಅಂಥ ಸಿದ್ಧನಲ್ಲಿ ನಾನಿರುತ್ತೇನೆ. ಏಕೆಂದರೆ ಅವನು ನನ್ನ ಹೊರತು ಬೇರೆ ಏನನ್ನೂ ಬಯಸುವುದಿಲ್ಲ. ಆ ಇಪ್ಪತ್ತು ಸಿದ್ಧಿಗಳನ್ನೂ ಸಿದ್ಧಮಂತ್ರವನ್ನೂ ಹೇಳುತ್ತೇನೆ ಕೇಳು.

ಅಣಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಮಹಿಮಾ, ಈಶಿತ್ವ, ವಶಿತ್ವ, ಕಾಮಾವಸಾಯಿತ್ವ, ದೂರಶ್ರವಣ, ಪರಕಾಯ ಪ್ರವೇಶ, ಮನೋಯಾಯಿತ್ವ, ಸರ್ವಜ್ಞತ್ವ, ಅಗ್ನಿಸ್ತಂಭ, ಜಲಸ್ತಂಭ, ಚಿರಜೀವಿತ್ವ, ಕಾಯವ್ಯೂಹ, ವಾಕ್‌ಸಿದ್ಧಿ, ಮೃತಾನಯನ, ಸೃಷ್ಟೀಕರಣ, ಪ್ರಾಣಾಕರ್ಷಣ ಇವೇ ಇಪ್ಪತ್ತು ಸಿದ್ಧಿಗಳು. ಸಿದ್ಧಮಂತ್ರ ಹೀಗಿದೆ. - 'ಓಂ ಸರ್ವೇಶ್ವರಾಯ ಸರ್ವವಿಘ್ನವಿನಾಶಿನೇ ಮಧುಸೂದನಾಯ ಸ್ವಾಹಾ'. ಈ ಮಂತ್ರ ಅತ್ಯಂತ ಗೋಪ್ಯ, ಸರ್ವಾಭೀಷ್ಟಸಾಧನೆಯಲ್ಲಿ ಇದು ಕಲ್ಪವೃಕ್ಷಕ್ಕೆ ಸಮಾನ. ಸಾಮವೇದದಲ್ಲಿ ಇದರ ವರ್ಣನೆ ಇದೆ. ಸಿದ್ಧರಿಗೆ ಎಲ್ಲ ಸಿದ್ಧಿಗಳನ್ನು ನೀಡುವಂತಹುದು. ಇದರ ಜಪದಿಂದ ಯೋಗಿಗಳು ಮುನಿಗಳು ದೇವತೆಗಳು ಸಿದ್ಧರಾಗುತ್ತಾರೆ. ಒಂದು ಲಕ್ಷ ಜಪದಿಂದ ಸಿದ್ಧಿ. ನಾರಾಯಣ ಕ್ಷೇತ್ರದಲ್ಲಿ ಹವಿಷ್ಯಾನ್ನ ಉಣ್ಣುತ್ತ ಮಂತ್ರ ಜಪಿಸಿದರೆ ಬೇಗನೆ ಸಿದ್ಧಿಯಾಗುವುದು. ಅಪ್ಪ, ನೀನು ಕಾಶಿಯ ಮಣಿಕರ್ಣಿಕಾ ತೀರ್ಥದಲ್ಲಿ ಜಪಮಾಡು. ನಾರಾಯಣ ಕ್ಷೇತ್ರವೆಂದರೆ ಗಂಗಾಜಲ ಪ್ರವಾಹದಿಂದ ನಾಲ್ಕು ಮೊಳದೂರದವರೆಗಿನ ಪ್ರದೇಶ. ಅದಕ್ಕೆ ನಾರಾಯಣನೇ ಸ್ವಾಮಿ. ಇನ್ನಾರೂ ಅಲ್ಲ. ಇಲ್ಲಿ ಮರಣ ಹೊಂದಿದರೆ ಜ್ಞಾನವೂ ಮುಕ್ತಿಯೂ ಕರಗತವಾಗುವುದು.

ಯಾರ ದರ್ಶನದಿಂದ ಪಾಪ ಬರುವುದೆಂಬುದನ್ನೂ ಹೇಳುತ್ತೇನೆ ಕೇಳು. ಪಾಪ ಮೂಲವಾಗಿದ್ದು ಶ್ರೇಯಸ್ಸಿನ ವಿಘ್ನವನ್ನು ಸೂಚಿಸುವ ದುಃಸ್ವಪ್ನವನ್ನೂ ಹೇಳುತ್ತೇನೆ

ಕೇಳು. ಗೋಬ್ರಾಹ್ಮಣ ಹತ್ಯೆ ಮಾಡುವವನು, ಕೃತಘ್ನ, ವಂಚಕ, ಮೂರ್ತಿಭಂಜಕ, ಮಾತಾಪಿತೃಘಾತಕ, ವಿಶ್ವಾಸಘಾತಕ, ಸುಳ್ಳುಸಾಕ್ಷಿ ನೀಡುವವ, ಅತಿಥಿಗೆ ವಂಚನೆ ಮಾಡುವವ, ಗ್ರಾಮಪುರೋಹಿತ, ದೇವಸ್ವ ಬ್ರಹ್ಮಸ್ವ ಅಪಹಾರಕ, ಅಶ್ವತ್ಥದ ಮರ ಕಡಿಯುವವ, ಶಿವವಿಷ್ಣು ನಿಂದಕ, ದೀಕ್ಷಾ ಆಚಾರ ಸಂಧ್ಯಾಹೀನನಾದ ದ್ವಿಜ, ಶೂದ್ರರ ಶವದಾಹ ಶ್ರಾದ್ಧಾನ್ನ ಭೋಜನ ಅಡಿಗೆ ಮಾಡುವ ದ್ವಿಜ, ಪತಿಪುತ್ರರಹಿತಳಾದ, ಮೂಗು ಕೊಯ್ದುಕೊಂಡಿರುವ ದೇವಬ್ರಾಹ್ಮಣನಿಂದಕಳಾದ ಪತಿಭಕ್ತಿ ವಿಷ್ಣುಭಕ್ತಿರಹಿತಳಾದ ಸ್ತ್ರೀ, ಚಂಡಾಲಿ, ವ್ಯಭಿಚಾರಿಣಿ, ಸದಾ ಕೋಪ ಮಾಡುವವ, ಜಾರಜ, ಚೋರ, ಮಿಥ್ಯಾವಾದಿ, ಶರಣಾಗತರನ್ನು ಹಿಂಸಿಸುವವ, ಮಾಂಸ ಕದಿಯುವವ, ಶೂದ್ರಸ್ತ್ರೀ ಸಂಗ ಮಾಡುವ ದ್ವಿಜ, ಬ್ರಾಹ್ಮಣ ಸ್ತ್ರೀಸಂಗ ಮಾಡುವ ಶೂದ್ರ, ಬಡ್ಡಿಯಿಂದ ಜೀವಿಸುವ ದ್ವಿಜ, ಅಗಮ್ಯಾಗಮನ ಮಾಡುವ ಚತುರ್ವರ್ಣದ ದುಷ್ಟ, ಇವರನ್ನು ಕಂಡರೆ ಪಾಪ ಬರುತ್ತದೆ. ತಾಯಿ ಮಲತಾಯಿ ಅತ್ತೆ, ಸೋದರಿ, ಗುರುಪತ್ನಿ, ಸೊಸೆ ಅತ್ತಿಗೆ, ತಾಯಿಯ ಸೋದರಿ, ಸೋದರತ್ತೆ, ಸೋದರಳಿಯನ ಹೆಂಡತಿ, ಸೋದರಮಾವನ ಹೆಂಡತಿ, ತಂದೆಯ ಸೋದರನ ಪತ್ನಿ, ರಜಸ್ವಲೆ, ತಂದೆಯ ತಾಯಿ, ತಾಯಿಯ ತಾಯಿ, ಇವರೆಲ್ಲರು ಅಗಮ್ಯ ಸ್ತ್ರೀಯರೆಂದು ಸಾಮವೇದದಲ್ಲಿ ಹೇಳಿದೆ. ಇವರನ್ನು ಕೆಡಿಸದೆ ಸದಾ ಕಾಪಾಡಿಕೊಂಡಿರಬೇಕು. ಕಾಮ ಭಾವನೆಯಿಂದ ಇವರನ್ನು ನೋಡುವುದು ಸ್ಪರ್ಶಿಸುವುದು ಬ್ರಹ್ಮಹತ್ಯೆಗೆ ಸಮಾನವಾದ ಪಾಪಕಾರ್ಯವಾಗುವುದು. ದೈವಾತ್ ಕೆಟ್ಟದೃಷ್ಟಿ ಅವರಮೇಲೆ ಬಿದ್ದರೆ, ಪ್ರಾಯಶ್ಚಿತ್ತವಾಗಿ ಸೂರ್ಯದರ್ಶನ ಹರಿಸ್ಮರಣಗಳನ್ನು ಮಾಡಬೇಕು. ರಾಹುಗ್ರಹಣಕಾಲದಲ್ಲಿ ಸೂರ್ಯನನ್ನೂ ಚಂದ್ರನನ್ನೂ ನೋಡಬಾರದು. ಪ್ರಥಮ ಅಷ್ಟಮ ಸಪ್ತಮ ದ್ವಾದಶ ನವಮ ದಶಮ ಸ್ಥಾನಗಳಲ್ಲಿ ಸೂರ್ಯನಿದ್ದರೆ ಸೂರ್ಯದರ್ಶನ ಮಾಡಬಾರದು. ಜನ್ಮನಕ್ಷತ್ರ ಅಷ್ಟಮ ಚತುರ್ಥ ಸ್ಥಾನಗಳಲ್ಲಿ ಚಂದ್ರನಿದ್ದರೆ ಚಂದ್ರದರ್ಶನವನ್ನೂ ಮಾಡಬಾರದು. ಭಾದ್ರಪದ ಮಾಸದ ಶುದ್ಧ ಚತುರ್ಥಿ ಹಾಗೂ ಕೃಷ್ಣಚತುರ್ಥಿ ದಿನಗಳಲ್ಲಿ ಉದಿಸುವ ಚಂದ್ರನನ್ನು ನಷ್ಟಚಂದ್ರ ಎನ್ನುತ್ತಾರೆ. ಅವನ ದರ್ಶನವನ್ನು ಮಾಡಬಾರದು. ದರ್ಶನ ಮಾಡಿದರೆ ಅಪವಾದಕ್ಕೆ ಗುರಿಯಾಗುತ್ತಾನೆ. ಅಕಸ್ಮಾತ್ ನೋಡಿದ ಪಕ್ಷದಲ್ಲಿ,

**ಸಿಂಹೋ ಪ್ರಸೇನಮವದೀತ್ ಸಿಂಹೋ ಜಾಂಬವತಾ ಹತಃ ।**
**ಸುಕುಮಾರಕ ಮಾ ರೋದಿಸ್ತವ ಹ್ಯೇಷಃ ಸ್ಯಮಂತಕಃ ॥**

''ಸಿಂಹವು ಪ್ರಸೇನನನ್ನು ಸಾಮಿಸಿತು; ಆ ಸಿಂಹ ಜಾಂಬವಂತನಿಂದ ಹತವಾಯಿತು. ಮಗು, ಅಳಬೇಡ. ಈಗ ಈ ಸ್ಯಮಂತಕಮಣಿ ನಿನ್ನದಂತಾಯಿತು,'' ಎಂಬ ಮಂತ್ರದಿಂದ ಜಲವನ್ನು ಅಭಿಮಂತ್ರಿಸಿ ಪಾನಮಾಡಬೇಕು. ಅದರಿಂದ ಶುದ್ಧಿ ಉಂಟಾಗುವುದು ಮತ್ತು ಅಪವಾದ ಕಲಂಕ ದೂರವಾಗುವುದು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಎಪ್ಪತ್ತೆಂಟನೆಯ ಅಧ್ಯಾಯ ಮುಗಿದುದು*

—o—

## ಸೂರ್ಯನಿಗೆ ಮುನಿಶಾಪ

**ಅಧ್ಯಾಯ - ೭೯**

**ನಂದ:-** ರಾಹುಗ್ರಹಣದಲ್ಲಿ ಸೂರ್ಯಚಂದ್ರರನ್ನು ನೋಡಬಾರದು ಏಕೆ? ಭಾದ್ರಪದ ಶುಕ್ಲ ಕೃಷ್ಣ ಚತುರ್ಥಿಗಳಲ್ಲಿ ಚಂದ್ರದರ್ಶನ ನಿಷಿದ್ಧವೇಕೆ? ಹೇಳು. ವೇದಗಳ ಜನಕನಾದ ನಿನ್ನನ್ನಲ್ಲದೆ ಈ ವಿಷಯದಲ್ಲಿ ಇನ್ನಾರನ್ನು ಕೇಳಬೇಕು? ವೇದಪುರಾಣಗಳ ರಹಸ್ಯವಿದು ವಿದ್ವಾಂಸರಿಗೂ ತಿಳಿಯದು.

**ಶ್ರೀಕೃಷ್ಣ:-** ನಂದ, ಕೇಳು, ಒಂದು ಪುರಾತನ ಕಥೆಯನ್ನು ಹೇಳುತ್ತೇನೆ. ಅದನ್ನು ಕೇಳಿದರೆ ತೀರ್ಥಸ್ನಾನ ಫಲ ಸಿಗುತ್ತದೆ. ಎಲ್ಲ ಪಾತಕಗಳನ್ನು ಕಂಡ ಪಾಪ ಈಕಥಾಶ್ರವಣದಿಂದ ತೊಡೆದುಹೋಗುತ್ತದೆ. ಒಮ್ಮೆ ಜಮದಗ್ನಿ ಮುನಿ ರೇಣುಕೆಯೊಂದಿಗೆ ನಿರ್ಜನವಾದ ನರ್ಮದಾತೀರದಲ್ಲಿ ವಿಹರಿಸಿದ. ಆಗತಾನೆ ಮದುವೆಯಾದ ಹೆಣ್ಣು, ನವಯುವತಿ, ರತ್ನಾಭರಣ ಭೂಷಿತೆ, ಬಿಳಿ ಸಂಪಿಗೆಯಂಥ ಮೈಬಣ್ಣ, ತೆಳುವಾದ ಸೀರೆ ಉಟ್ಟಿದಳು. ಮೈಯೆಲ್ಲ ರೋಮಾಂಚಗೊಂಡಿದ್ದಳು. ಕಾಮಬಾಣ ಪೀಡಿತಳಾಗಿ ಪ್ರಣಯಕಟಾಕ್ಷ ಬೀರುತ್ತಿದ್ದಳು. ಕೋಗಿಲೆಯ ಮಧುರಧ್ವನಿ, ಪರಿಮಳದ ಗಾಳಿ, ಹೂವಿನ ಹಾಸಿಗೆ. ಮುನಿಯೂ ಮೈಯೆಲ್ಲ ಶ್ರೀಗಂಧ ಲೇಪಿಸಿಕೊಂಡಿದ್ದ. ಹೂಮಾಲೆ ಧರಿಸಿದ್ದ. ಪ್ರಣಯ ಕೇಲಿಯ ಆನಂದದಲ್ಲಿ ಲೀನನಾಗಿದ್ದ. ಇದನ್ನು ಸೂರ್ಯ ಕಂಡು ಅಕ್ಷೇಪಿಸಿದ: ''ವೇದಜನಕನಾದ ಬ್ರಹ್ಮನ ಮೊಮ್ಮಗನ ಮಗನಾಗಿದ್ದು ನಾಲ್ಕು ವೇದಗಳನ್ನು ಬಲ್ಲವ ನೀನು ಮಹಾತಪಸ್ವಿ ತೇಜಸ್ವಿ, ನಿಮ್ಮಂಥವರ ಉಪದೇಶದಿಂದಲೇ ಬೇರೆ ಪಂಡಿತರು ಪಂಡಿತರಾಗಬೇಕು. ಹಾಗಿದ್ದರೂ ಧರ್ಮನಿಯಮವನ್ನು ಉಲ್ಲಂಘಿಸುತ್ತಿರುವೆ. ಏಕೆ? ಹಗಲಿನಲ್ಲಿ ಸ್ತ್ರೀಸಂಗ ಮಾಡುವುದನ್ನು ವೇದ ನಿಂದಿಸುತ್ತದೆ. ವೇದೋಕ್ತವಾದುದೇ ಧರ್ಮ. ವೇದನಿಂದಿತವಾದುದೇ ಅಧರ್ಮ. ನಾನು ಧರ್ಮಸಾಕ್ಷಿ. ಅದರಿಂದ ನೋಡಿ ಹೇಳುತ್ತಿದ್ದೇನೆ.''

ಸೂರ್ಯನ ಮಾತನ್ನು ಕೇಳಿ ಮುನಿಗೆ ಕೋಪ ಲಜ್ಜೆಗಳು ಏಕಕಾಲದಲ್ಲಿ ಬಂದುವು. ರೇಣುಕೆ ಲಜ್ಜೆಯಿಂದ ಬೇಗನೆ ಸೀರೆಯಿಂದ ಮೈ ಮುಚ್ಚಿಕೊಂಡಳು.

**ಜಮದಗ್ನಿ:-** ಯಾರು ನೀನು? ತಾನೊಬ್ಬನೆ ಪಂಡಿತನೆಂದು ತಿಳಿದು ಕೊಂಡಿರುವೆ. ನಾನು ಭೃಗು ಮುನಿಯ ಶಿಷ್ಯ, ನೀನು ಕಶ್ಯಪನ ಶಿಷ್ಯ. ನನಗೂ ನಾಲ್ಕು ವೇದಗಳು ಗೊತ್ತು. ವೇದಗಳು ಏನು ಹೇಳುತ್ತವೆ ಎನ್ನುವುದನ್ನು ಹೇಳುತ್ತೇನೆ ಕೇಳು.

**ಅಜ್ಞಾನೀ ಪುರುಷಃ ಶಶ್ವದ್ ಜಡಿತಶ್ಚ ಸ್ವಕರ್ಮಣಾ ।**
**ತೇಜೀಯಸಾಂ ನ ದೋಷಾಯ ವಹ್ನೇಃ ಸರ್ವಭುಜೋ ಯಥಾ ॥**

ಭಗವಂತನ ಅಪರೋಕ್ಷವಿಲ್ಲದವನು ಕರ್ಮಬದ್ಧನಾಗಿ ಜಡಪದಾರ್ಥದಂತೆ ಅಸ್ವತಂತ್ರನಾಗುತ್ತಾನೆ. ಅಪರೋಕ್ಷಿಗಳಿಗೆ ಪಾಪಲೇಪವಾಗುವುದಿಲ್ಲ. ಬೆಂಕಿ ಶುಚಿ ಅಶುಚಿಯೆನ್ನದೆ ಎಲ್ಲವನ್ನೂ ಭಕ್ಷಿಸುತ್ತದೆ. ಆದರೂ ಅಶುಚಿಯಾಗುವುದಿಲ್ಲ.

ನೀನೂ ಬೇರೆ ದೇವತೆಗಳೂ ಧರ್ಮನೂ ಕರ್ಮಸಾಕ್ಷಿಗಳು ಹೌದು. ಆದರೆ ಕರ್ಮಫಲದಾಯಕ ನಿನ್ನ ಮಗ ಯಮ. ನೀವು ಯಾರೂ ವಿಷ್ಣುಭಕ್ತರಾದ ನಮಗೆ ಶಾಸ್ತಿ ಮಾಡುವವರಲ್ಲ.

**ನ ವಾಸುದೇವಭಕ್ತಾನಾಮಶುಭಂ ವಿದ್ಯತೇ ಕ್ವಚಿತ್।**
**ಹರೇಃ ಸುದರ್ಶನಂ ಚಕ್ರಂ ಶಶ್ವದ್ ರಕ್ಷತಿ ವೈಷ್ಣವಾನ್ ॥**

ವಾಸುದೇವನ ಭಕ್ತರಿಗೆ ಎಂದೂ ಅನಿಷ್ಟವಿಲ್ಲ. ಏಕೆಂದರೆ ಹರಿಯ ಸುದರ್ಶನ ಚಕ್ರ ಅವರನ್ನು ಧರ್ಮಮಾರ್ಗದಲ್ಲಿ ಪ್ರೇರಿಸಿ ಕಾಪಾಡುತ್ತದೆ.

ಅಪರೋಕ್ಷಿಗಳು ಪ್ರಾರಬ್ಧ ನಿಮಿತ್ತ ಅಧರ್ಮಾಚರಣೆಗೈದಾಗ ಅವರನ್ನು ಸ್ವಯಂ ಭಗವಾನ್ ನಾರಾಯಣನಾಗಲಿ ಬ್ರಹ್ಮರುದ್ರರಾಗಲಿ ನೀನಾಗಲಿ ಯಮನಾಗಲಿ ಯಾರೂ ಶಿಕ್ಷಿಸುವುದಿಲ್ಲ. ರಾಜಕುಮಾರನಂತೆ ಸ್ವಚ್ಛಂದವಾಗಿ ನಾವಿರಬಲ್ಲೆವು. ಯಮನನ್ನೂ ಇಂದ್ರಾದಿದೇವತೆಗಳನ್ನೂ ನಾವು ಕ್ಷಣದಲ್ಲಿ ಸುಟ್ಟು ಬೂದಿಮಾಡಬಲ್ಲೆವು. ನನಗೆ ಧರ್ಮನಿಯಮವನ್ನು ಹೇಳಲು ನೀನಾರು? ಹೋಗು, ನಿನ್ನ ಸ್ಥಾನಕ್ಕೆ ಹಿಂದಿರುಗು. ನನಗೆ ಶಿಕ್ಷೆಮಾಡುವವನು ಭಗವಾನ್ ಶ್ರೀಕೃಷ್ಣ. ನನಗೆ ಈಗ ರಸಭಂಗ ಮಾಡಿದ್ದಕ್ಕೆ ನಿನಗೆ ಶಾಪನೀಡುತ್ತೇನೆ. ನಿನಗೆ ರಾಹುಗ್ರಹಣವಾಗುವುದು. ನಿನ್ನ ತೇಜಸ್ಸು ಮಂಕಾಗುವುದು, ಮೋಡಗಳೂ ನಿನ್ನನ್ನು ಆವರಿಸುವುವು. ನಿನ್ನ ದರ್ಶನವೂ ದೋಷಕರವಾಗುವುದು.'' ಮುನಿಯ ಮಾತನ್ನು ಕೇಳಿ ಸೂರ್ಯ ಕ್ಷಮೆ ಬೇಡಿದ.

**ಸೂರ್ಯ:-** ಮುನಿಯೆ, ಕ್ಷಮಿಸು. ಜ್ಞಾನಿಯು ಸದಾ ಶುದ್ಧನೆ. ಅವನನ್ನು ಭಗವಾನ್ ನಾರಾಯಣ ಬ್ರಹ್ಮ ಶಿವ ಗಣೇಶ ಶೇಷ ಧರ್ಮ ಎಲ್ಲರೂ ಹಾಗೆ ಸ್ತುತಿಸುತ್ತಾರೆ. ಆದರೂ

**ವೈಷ್ಣವಾನಾಂ ಕುತಃ ಕೋಪೋ ಹೃದಿ ಯೇಷಾಂ ಜನಾರ್ದನಃ।**

ಹೃದಯದಲ್ಲಿ ಭಗವಂತನನ್ನೇ ತುಂಬಿಕೊಂಡಿರುವ ವಿಷ್ಣುಭಕ್ತರಿಗೆ ಕೋಪವೆಲ್ಲಿ? ನಾವು ದೇವತೆಗಳು ವಿಪ್ರರನ್ನು ಆದರಿಸುತ್ತೇವೆ. ನೀವು ವಿಪ್ರರು ನಮ್ಮನ್ನು ಆದರಿಸುವಿರಿ. ಪರಸ್ಪರವಾಗಿ ಸ್ನೇಹ ಸಂಬಂಧವಿರುವಾಗ ನಡುವೆ ಈ ಕೋಪವೇಕೆ? ಅದರಿಂದ ನಾನೂ ನಿನಗೆ ಶಾಪನೀಡುತ್ತೇನೆ, ನನ್ನ ತೇಜಸ್ಸು ಮಂಕಾಗಲೆಂದು ನೀನು ಶಾಪಕೊಟ್ಟಿರುವಿ. ನೀನು ಕ್ಷತ್ರಿಯನಿಂದ ಪರಾಭವಗೊಂಡು ಕೊನೆಗೆ ಅವನ ಅಸ್ತ್ರದಿಂದಲೇ ಸಾಯುವಿ.

ಈ ಮಾತನ್ನು ಕೇಳಿ ಮುನಿಯು ಇನ್ನೂ ಹೆಚ್ಚು ಸಿಟ್ಟಾಗಿ ತಿರುಗಿ ಶಪಿಸಿದ, ''ನೀನೂ ಶಿವನಿಂದ ಪರಾಭವಗೊಳ್ಳುವಿ.'' ಇಬ್ಬರ ಕಲಹವನ್ನು ತಿಳಿದು ಕಶ್ಯಪನೂ ಬ್ರಹ್ಮನೂ ಬಂದು ತಡೆದರು.

**ಬ್ರಹ್ಮ:-** ಸೂರ್ಯ, ಶಾಂತನಾಗು, ನೀನು ಸಾಕ್ಷಾತ್ ನಾರಾಯಣ. ನಿಮ್ಮಂಥವರು ಬ್ರಾಹ್ಮಣರನ್ನು ಕಾಪಾಡಬೇಕು. ನಿನಗೆ ಬಂದ ಮುನಿಶಾಪವನ್ನು ನಾನು ಪರಿಹರಿಸುತ್ತೇನೆ. ಅದಕ್ಕೆಂದೆ ಭೃಗುಮುನಿಯ ಅಪೇಕ್ಷೆಯಂತೆ ನಾನು ಇಲ್ಲಿಗೆ

ಬಂದಿದ್ದೇನೆ. ಕಶ್ಯಪ ಮರೀಚಿಗಳೂ ನನ್ನನ್ನು ಕೇಳಿಕೊಂಡಿದ್ದಾರೆ. ಶಾಂತನಾಗು. ನೀನು ಸರ್ವಕರ್ಮಸಾಕ್ಷಿ. ನಿನ್ನನ್ನು ಸದಾ ಮೋಡಗಳು ಆವರಿಸುವುದಿಲ್ಲ. ಸದಾ ರಾಹುಗ್ರಹಣವೂ ಆಗುವುದಿಲ್ಲ. ಎಂದಾದರೊಮ್ಮೆ ಎಲ್ಲಿಯೋ ಕೆಲವೆಡೆ ನೀನು ಮೋಡಗಳಿಂದ ಆವೃತ್ತನಾಗುವೆ, ರಾಹುಗ್ರಸ್ತನಾಗುವೆ. ಆಗ ಕ್ಷಣಕಾಲ ನಿನ್ನ ದರ್ಶನ ವಿಲ್ಲದಂತಾಗುವುದು. ಬೇರೆ ಸಮಯದಲ್ಲಿ ಬೇರೆ ಕಡೆಗಳಲ್ಲಿ ನಿನ್ನ ದರ್ಶನ ಪುಣ್ಯಕರವೇ ಆಗುವುದು. ಅಸ್ತಕಾಲದಲ್ಲಿ ಮೋಡಗಳಿಂದ ಆವೃತ್ತನಾದ ಕಾಲದಲ್ಲಿ ಮಧ್ಯಾಹ್ನದಲ್ಲಿ ಅರ್ಧೋದಯದಲ್ಲಿ ನಿನ್ನ ದರ್ಶನ ನಿಷಿದ್ಧವಾಗುವುದು. ನೀರಲ್ಲಿ ನಿನ್ನ ಪ್ರತಿಬಿಂಬ ದರ್ಶನವೂ ನಿಷಿದ್ಧವಾಗುವುದು. ಭಾರ್ಯಾನಿಮಿತ್ತವಾಗಿ ಮಾವನಿಂದಲೂ ಮೈದುನನಿಂದಲೂ ನಿನ್ನ ತೇಜಸ್ಸು ಕಡಿಮೆಯಾಗುವುದು. ಇಲ್ಲದಿದ್ದರೆ ನಿನ್ನ ತೇಜಸ್ಸನ್ನು ನಿನ್ನ ಭಾರ್ಯೆ ಸಂಜ್ಞೆ ಸಹಿಸಲಾರಳು. ಮಾಲಿಸುಮಾಲಿ ಯುದ್ಧಪ್ರಸಂಗದಲ್ಲಿ ಶಿವನಿಂದ ನಿನಗೆ ಪರಾಭವ ಉಂಟಾಗುವುದು.'' ಹೀಗೆ ಸೂರ್ಯನನ್ನು ಸಮಾಧಾನ ಪಡಿಸಿ, ಜಮದಗ್ನಿಯನ್ನೂ ಸಂತೈಸಿ ನುಡಿದ.

''ಮಗು, ನೀನು ನಿನ್ನಾಶ್ರಮಕ್ಕೆ ಹೋಗು. ನೀನು ಕೋಪಿಸಿಕೊಂಡರೆ ಜಗತ್ತನ್ನೇ ಸುಡಬಲ್ಲೆ. ಸೂರ್ಯನನ್ನು ನೀನು, ನಿನ್ನನ್ನು ಸೂರ್ಯ ಕಾಪಾಡುತ್ತಿರಬೇಕು. ಇಬ್ಬರೂ ಪರಸ್ಪರವಾಗಿ ಆದರಿಸಬೇಕು. ಹರಿಯ ಅಂಶಭೂತನಾದ ಕಾರ್ತವೀರ್ಯಾರ್ಜುನನಿಂದ ನೀನು ಪರಾಭಗೊಳ್ಳುವಿ. ಅದು ನಿನ್ನ ಪ್ರಾರಬ್ಧಕರ್ಮ. ಅದನ್ನು ಯಾರೂ ತಪ್ಪಿಸಲಾರರು. ಆದರೆ ನಾರಾಯಣ ನಿನ್ನ ಮಗನಾಗಿ ಅವತರಿಸುತ್ತಾನೆ. ಕ್ಷತ್ರಿಯರ ವಂಶವನ್ನೇ ಇಪ್ಪತ್ತೊಂದು ಬಾರಿ ನಾಶಮಾಡುತ್ತಾನೆ. ಈ ಯಶಸ್ಸಿಗೆ ನಿನ್ನ ಮರಣವೇ ಕಾರಣವಾಗುತ್ತದೆ.''

ಹೀಗೆ ಹೇಳಿ ಬ್ರಹ್ಮ ತನ್ನ ಲೋಕಕ್ಕೆ ತೆರಳಿದ. ಜಮದಗ್ನಿಯೂ ಸೂರ್ಯನೂ ತಮ್ಮ ಸ್ಥಾನಗಳಿಗೆ ಹಿಂತಿರುಗಿದರು. ಇನ್ನು ಚೌತಿಯ ಚಂದ್ರನನ್ನು ಏಕೆ ನೋಡಬಾರದೆನ್ನುವಲ್ಲಿಯೂ ಕಥೆ ಹೇಳುತ್ತೇನೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರದನಾರಾಯಣಸಂವಾದದಲ್ಲಿ ಬಗವನ್ನಂದ ಸಂವಾದದಲ್ಲಿ ಎಪ್ಪತ್ತೊಂಬತ್ತನೆಯ ಅಧ್ಯಾಯ ಮುಗಿದುದು*

—o—

**ಶ್ರೀಕೃಷ್ಣ:-** ಹಿಂದೆ ಬೃಹಸ್ಪತಿಯ ಪತ್ನಿ ತಾರೆ ಸ್ವರ್ಗಗಂಗೆಯಲ್ಲಿ ಸ್ನಾನಮಾಡಿ ಒದ್ದೆ ಬಟ್ಟೆಯಲ್ಲಿ ಮನೆಗೆ ಹಿಂತಿರುಗುತ್ತಿದ್ದಳು. ನವಯುವತಿ, ತೆಳುವಾದ ಸೀರೆ ಉಟ್ಟಿದ್ದಳು. ಕೋಮಲಾಂಗಿ ಚಂದ್ರಮುಖಿ, ಗಜಗಮನೆ, ಪತಿಯಪಾದವನ್ನೆ ಸ್ಮರಿಸುತ್ತ ನಡೆಯುತ್ತಿದ್ದಳು. ಅಂದು ಭಾದ್ರಪದ ಮಾಸದ ಚತುರ್ಥಿ. ಚಂದ್ರ ದೇವಿಯನ್ನು ಕಂಡು ಅವಳ ರೂಪಕ್ಕೆ ಮರುಳಾಗಿ ಮೈ ಮರೆತ. ಕ್ಷಣದಲ್ಲಿ ಎಚ್ಚೆತ್ತು ಅವಳನ್ನೆತ್ತಿ ರಥದಲ್ಲಿ ಕೂಡಿಸಿಕೊಂಡು ಆಲಿಂಗಿಸಿದ, ಚುಂಬಿಸಿದ. ಅವಳು ನುಡಿದಳು.

**ತಾರೆ:-** ಬಿಡು ಬಿಡು ನನ್ನನ್ನು. ನಾನು ಗುರುಪತ್ನಿ, ಬ್ರಾಹ್ಮಣಸ್ತ್ರೀ, ಪತಿವ್ರತೆ. ಗುರುಪತ್ನಿಯ ಸಂಗ ನೂರ ಬ್ರಹ್ಮಹತ್ಯೆಗಳಿಗೆ ಸಮಾನ. ನೀನು ನನಗೆ ಮಗನಿಗೆ ಸಮಾನ. ನಾನು ತಾಯಿ. ಸಂಯಮದಿಂದ ವರ್ತಿಸು. ನಿನ್ನ ಈ ಅಕೃತ್ಯ ಗುರುವಿಗೆ ತಿಳಿದರೆ ನಿನ್ನನ್ನು ಸುಟ್ಟು ಭಸ್ಮಮಾಡುತ್ತಾನೆ. ನೀನು ಅವನಿಗೆ ಮಗನಿಗಿಂತ ಹೆಚ್ಚಿನ ಪ್ರೀತಿಯ ಶಿಷ್ಯ. ಪಾಪಿ, ತಾಯಿಯನ್ನು ಬಯಸಬೇಡ, ಸ್ವಧರ್ಮವನ್ನು ಕಾಪಾಡಿಕೊಳ್ಳು. ನನ್ನನ್ನು ಬಲಾತ್ಕರಿಸಿದರೆ ನಿನಗೆ ಸ್ತ್ರೀವಧೆಯ ಪಾಪ ಬರುವುದು.

ಚಂದ್ರ ತಾರೆಯ ಮಾತಿಗೆ ಬೆಲೆ ಕೊಡಲಿಲ್ಲ. ಅವಳು ಕುಪಿತಳಾಗಿ ಶಾಪ ನೀಡಿದಳು. ''ನೀನು ರಾಹುಗ್ರಸ್ತನಾಗು, ಮೋಡಗಳಲ್ಲಿ ಮರೆಯಾಗು, ನಿನ್ನ ದರ್ಶನ ಪಾಪಕಾರಣವಾಗಲಿ. ಅಪವಾದ ಕಳಂಕ ತರಲಿ. ನೀನು ಕ್ಷಯರೋಗಗ್ರಸ್ತನಾಗು.'' ಹೀಗೆ ತಾರೆ ಚಂದ್ರನನ್ನು ಶಪಿಸಿ ಮನ್ಮಥನಿಗೂ ಶಾಪವಿತ್ತಳು. ''ನೀನೂ ಸುಟ್ಟು ಬೂದಿಯಾಗು'' ಎಂದಳು. ಆದರೂ ಚಂದ್ರ ತಾರೆಯನ್ನು ಉಪಭೋಗಿಸಿ ಅವಳು ಅಳುತ್ತಿದ್ದಂತೆಯೆ ಬೆಟ್ಟಗುಡ್ಡಗಳಿಗೆ ಸರೋವರ ನದೀ ತೀರದ ನಿರ್ಜನ ಪ್ರದೇಶಗಳಿಗೆ ಪುಷ್ಪೋದ್ಯಾನಗಳಿಗೆ ಕರೆದೊಯ್ದ. ಹೂವಿನ ಹಾಸಿಗೆಯಲ್ಲಿ ಮಲಗಿಸಿ ಅವಳೊಡನೆ ವಿಹರಿಸಿದ. ಸುಖದಲ್ಲಿ ಮೈಮರೆತ. ಹಗಲುರಾತ್ರಿಗಳ ಭೇದ ಅವನಿಗೆ ತಿಳಿಯದಾಯಿತು. ಬಳಿಕ ಅವಳೊಂದಿಗೆ ರಥವೇರಿ ಪಶ್ಚಿಮ ಸಮುದ್ರದ ತೀರ ತ್ರಿಕೂಟ ಚಂದ್ರಸರೋವರ ಕ್ಷೀರಸಮುದ್ರ ಸ್ವರ್ಣಭೂಮಿ ಮುಂತಾದ ಸ್ಥಳಗಳಲ್ಲಿ ಸಂಚರಿಸಿದ. ವರುಣಲೋಕದಲ್ಲಿ ವಾಯುವಿನ ಉದ್ಯಾನದಲ್ಲಿ ಅಗ್ನಿಯ ಆಶ್ರಮದಲ್ಲಿ ಎಲ್ಲೆಡೆ ವಿಹಾರ ಮಾಡಿದ. ವರುಣ ಅವನಿಗೆ ಮದ್ಯವನ್ನು ನೀಡಿದ, ರತ್ನಮಾಲೆಯನ್ನಿತ್ತ. ವಾಯು ರತ್ನಛತ್ರವನ್ನು ನೀಡಿದ. ಅಗ್ನಿ ಶುಭ್ರವಾದ ವಸ್ತ್ರಗಳನ್ನಿತ್ತ. ಕೊನೆಗೆ ಶುಕ್ರಾಚಾರ್ಯನ ಬಳಿಗೆ ಹೋಗಿ ನಮಿಸಿ ಅವನನ್ನು ಮೊರೆಹೊಕ್ಕ. ಶುಕ್ರ ನುಡಿದ.

**ಶುಕ್ರ:-** ಚಂದ್ರ, ಬೃಹಸ್ಪತಿಯ ಪತ್ನಿಯನ್ನು ಬೃಹಸ್ಪತಿಗೆ ಹಿಂತಿರುಗಿಸು. ಅವನು ದೇವತೆಗಳೆಲ್ಲರಿಗೂ ಪೂಜ್ಯ. ಬ್ರಹ್ಮನ ಮೊಮ್ಮಗ. ನಿನಗೂ ಪ್ರೀತಿಯ ಗುರು. ಬೇಗನೆ ಅವನ ಪ್ರಿಯೆಯನ್ನು ಅವನಿಗೆ ನೀಡಿ ಶರಣಾಗತನಾಗು. ಗುರುಪತ್ನಿ ಮಾತೆಗೆ ಸಮಾನ. ಅವಳನ್ನು ಬಲಾತ್ಕರಿಸಿದರೆ ಸಾವಿರ ಬ್ರಹ್ಮಹತ್ಯೆಗಳನ್ನು ಮಾಡಿದಂತೆ ಕುಂಭಿಪಾಕನರಕಕ್ಕೆ ಸಾಧನವಾಗುತ್ತದೆ.

*ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ನಾರಾಯಣ ನಾರದ ಸಂವಾದದಲ್ಲಿ ಎಂಬತ್ತನೆಯ ಅಧ್ಯಾಯ ಮುಗಿದುದು*

## ಚಂದ್ರನಲ್ಲಿ ಕಲಂಕ

## ಅಧ್ಯಾಯ - ೮೧

**ಶ್ರೀಕೃಷ್ಣ:-** ಅಷ್ಟರಲ್ಲಿ ಅಲ್ಲಿಗೆ ಎಲ್ಲ ದೇವತೆಗಳು ಶಸ್ತ್ರಾಸ್ತ್ರಗಳನ್ನು ಧರಿಸಿ ಸೈನ್ಯ ಸಮೇತ ಬಂದರು. ಇಂದ್ರ ಐರಾವತವೇರಿ ಬಂದ. ಧರ್ಮ ಬಿಳಿ ಕುದುರೆಯನ್ನೇರಿ ಬಂದ. ಕುಬೇರ ವರುಣ ಅಗ್ನಿ, ಸೂರ್ಯ, ವಾಯುಗಳು ರಥದಲ್ಲಿ ಬಂದರು. ಯಮ ಮಹಿಷವಾಹನನಾಗಿ ಶಿವ ವೃಷಭವಾಹಸನಾಗಿ ಅನಂತ ನಾಗವಾಹನನಾಗಿ ಬಂದರು. ಆದಿತ್ಯರು ವಸುಗಳು ರುದ್ರರು ಸಿದ್ಧಗಂಧರ್ವ ಕಿನ್ನರರು ಎಲ್ಲರೂ ಬಂದರು. ಶುಕ್ರ ನಿರ್ಭಯನಾಗಿ ಚಂದ್ರನನ್ನು ಸಂತೈಸಿ, ದೇವತೆಗಳಿಗಿಂತ ಎರಡು ಪಟ್ಟು ಹೆಚ್ಚಿನ ಅಸುರಸೇನೆಯನ್ನು ಕರೆಸಿಕೊಂಡ. ಕ್ಷೀರಸಾಗರದ ತೀರದಲ್ಲಿ ರತ್ನಮಾಲಾ ನದೀ ತೀರದಲ್ಲಿ ಆ ಸೈನ್ಯವನ್ನು ನಿಲ್ಲಿಸಿದ. ಶುಕ್ರಾಚಾರ್ಯನ ಬಳಿಗೆ ವೃಷಭಾರೂಢನಾದ ಶಂಕರ, ರತ್ನಮಯ ರಥಾರೂಢನಾದ ಬ್ರಹ್ಮ ಇಬ್ಬರೂ ಬಂದರು. ಶುಕ್ರ ಅವರಿಗೆ ಮಣಿದು ಆಶೀರ್ವಾದ ಪಡೆದು ಭಕ್ತಿಯಿಂದ ರತ್ನಸಿಂಹಾಸನದಲ್ಲಿ ಕೂಡಿಸಿದ. ಅವರ ಪಾದಕಮಲಗಳನ್ನು ಪೂಜಿಸಿದ. ಬ್ರಹ್ಮ ಶುಕ್ರನಿಗೆ ನೀತಿಯನ್ನು ಉಪದೇಶಿಸಿದ.

**ಬ್ರಹ್ಮ:-** ಚಂದ್ರ ಈಗ ಮಾಡಿದ ಕೃತ್ಯ ವೇದದಲ್ಲಿ ನಿಂದಿತವಾಗಿದ್ದು ಮೂಲೋಕದಲ್ಲಿ ಬಲು ನಾಚಿಕೆಗೇಡಿನದಾಗಿದೆ. ಸ್ನಾನಮಾಡಿ ಮನೆಗೆ ಮರಳುತ್ತಿದ್ದ ಪತಿವ್ರತೆಯಾದ ಗುರುಪತ್ನಿಯನ್ನು ಕೂಡಿದ್ದಾನೆ. ನಿನ್ನಲ್ಲಿ ಶರಣಾಗತನಾಗಿದ್ದಾನೆ. ದೇವಸೈನ್ಯ ಯುದ್ಧ ಸನ್ನದ್ಧವಾಗಿ ಬಂದಿರುವುದನ್ನು ನೋಡು. ನಾನೂ ಶಿವನೂ ಅದಕ್ಕೆ ನಿನ್ನ ಬಳಿಗೆ ಬಂದಿದ್ದೇನೆ.

**ಶಿವ:-** ಶುಕ್ರ, ಚಂದ್ರನನ್ನು ತಂದು ನಮಗೆ ಒಪ್ಪಿಸು. ಆ ಪಾಪಿಯ ಶಿರವನ್ನು ಶೂಲದಿಂದ ತರಿಯುತ್ತೇನೆ. ಇಲ್ಲದಿದ್ದರೆ ಎಲ್ಲ ದೈತ್ಯರನ್ನೂ ಕ್ಷಣದಲ್ಲಿ ಸಂಹರಿಸುತ್ತೇನೆ. ನಾನು ಸಿಟ್ಟಾದರೆ ದೈತ್ಯರನ್ನು ರಕ್ಷಿಸುವವನಾರು ಹೇಳು. ಪಾಶುಪತಾಸ್ತ್ರ ದಾಯವ್ಯಾಸ್ತ್ರಗಳಿಂದ ಎಲ್ಲ ದೈತ್ಯರನ್ನೂ ಸುಟ್ಟು ಬಿಡುತ್ತೇನೆ. ನನ್ನ ಅಂಶನಾದ ದುರ್ವಾಸನಿಗೆ ಅಂಗಿರಮುನಿ ಗುರು. ಅವನ ಪುತ್ರನಾದ ಬೃಹಸ್ಪತಿ ನನಗೂ ಗುರುಪುತ್ರನೇ ಸರಿ. ಅವನು ಚಂದ್ರನನ್ನು ಸುಟ್ಟು ಬೂದಿ ಮಾಡಲು ಸಮರ್ಥನೇ. ಆದರೂ ಪ್ರೀತಿಯ ಶಿಷ್ಯನೆಂದು ಬಿಟ್ಟಿದ್ದಾನೆ. ಅವನು ಹಿಂದೆ ಉತಥ್ಯನ ಪತ್ನಿಯನ್ನು ಬಲಾತ್ಕರಿಸಿ ಉತಥ್ಯನ ಶಾಪ ಹೊಂದಿದ್ದರಿಂದಲೇ ಈಗ ಅವನ ಪತ್ನಿಯನ್ನು ಚಂದ್ರ ಬಲಾತ್ಕರಿಸಿದ್ದಾನೆ. ಪಾಪಿಯಾದ ಚಂದ್ರನನ್ನು ನನಗೊಪ್ಪಿಸು. ಇಲ್ಲದಿದ್ದರೆ ಪಾಪಿಗೆ ರಕ್ಷಣೆ ನೀಡುವ ನೀನೂ ಪಾಪಿಯಾಗುವಿ.

**ಶುಕ್ರ:-** ದೇವತೆಗಳಿಗಾಗಲಿ ದೈತ್ಯರಿಗಾಗಲಿ ಎಲ್ಲರಿಗೂ ಶಾಸನ ಮಾಡುವವನು ನೀನು. ನೀನಿಲ್ಲದೆ ಇನ್ನಾರು? ಅದರಿಂದ ದೇವತೆಗಳ ಪಕ್ಷ ವಹಿಸಿ ದೈತ್ಯರನ್ನು ನಾಶ ಮಾಡುವುದು ನಿನಗೆ ಉಚಿತವೆ? ಸಮಸ್ತ ಪ್ರಪಂಚವನ್ನು ಲಯಮಾಡುವ ನೀನು ದೈತ್ಯರನ್ನು ಕೊಂದರೆ ಅದೇನು ಪೌರುಷವೆನಿಸೀತೆ? ನೀನು ಪರಬ್ರಹ್ಮ, ನಿರ್ಗುಣನೂ ಸಗುಣನೂ ಆಗಿರುವೆ. ಗುಣಭೇದದಿಂದ ಮೂರ್ತಿಭೇದವಷ್ಟೆ. ನೀನು ಬೇರೆ ಅಲ್ಲ, ವಿಷ್ಣು ಬೇರೆ ಅಲ್ಲ. ಬಲಿಯ ಮನೆಬಾಗಿಲಲ್ಲಿ ಗದಾಪಾಣಿಯಾಗಿ ನೀನೆ ನಿಂತಿರುವಿ.

ಲೀಲೆಯಿಂದ ಇಂದ್ರನಿಗೆ ಸ್ವರ್ಗಸಾಮ್ರಾಜ್ಯವನ್ನೂ ನೀನೆ ಕೊಟ್ಟಿರುವಿ. ಶಂಭೋ, ಶಾಂತನಾಗು, ನನ್ನನ್ನು ಕ್ಷಮಿಸು: ಬ್ರಾಹ್ಮಣನಾದ ನನ್ನನ್ನು ಹಿಂಸಿಸಿದರೆ ಅದೇನು ಪೌರುಷವಾದೀತು? ನಾನಂತೂ ಜೀವಿಸಿರುವಷ್ಟು ಕಾಲ ಚಂದ್ರನನ್ನು ಕೈ ಬಿಡಲಾರೆ. ಅವನು ಪಾಪ ಮಾಡಿದ್ದಕ್ಕೆ ಲಜ್ಜಿತನಾಗಿದ್ದಾನೆ, ಶರಣಾಗತನಾಗಿದ್ದಾನೆ. ನಾನೂ ನಿನ್ನಲ್ಲಿ ಶರಣಾಗತನಾಗಿದ್ದೇನೆ. ಇನ್ನು ನಿನ್ನ ಮನಸಿಗೆ ತೋಚಿದಂತೆ ನೀನು ಮಾಡು.

ಶುಕ್ರನ ಮಾತನ್ನು ಕೇಳಿ ಶಿವ ಶಾಂತನಾಗಿ ಹೇಳಿದ, 'ಚಂದ್ರನನ್ನು ಕರೆದು ತಾ. ಅದರಿಂದ ಶುಭವೇ ಆಗುವುದು. ಬ್ರಹ್ಮನೂ ಹಾಗೇ ಹೇಳಿದ. ಆಗ ಶುಕ್ರ ತಾರೆಯೊಂದಿಗೆ ಚಂದ್ರನನ್ನು ತಂದು ಶಿವನ ಪಾದಕಮಲಗಳಿಗೆ ಅರ್ಪಿಸಿದ. ಶಿವ ಚಂದ್ರನನ್ನು ಆಲಿಂಗಿಸಿ ತನ್ನ ಪಾದಧೂಳಿಯನ್ನಿತ್ತು ಅವನನ್ನು ಪುನೀತನನ್ನಾಗಿಸಿದ. ಕೃಪೆಯಿಂದ ಅವನ ತಲೆಯ ಮೇಲೆ ಕೈಯಿಟ್ಟು ಅಭಯನೀಡಿದ. ಕ್ಷೀರಸಮುದ್ರದಲ್ಲಿ ಸ್ನಾನಮಾಡಿಸಿ ಶುದ್ಧೀಕರಿಸಿದ ಯೋಗಬಲದಿಂದ ಚಂದ್ರಮಂಡಲವನ್ನು ಎರಡಾಗಿ ವಿಭಾಗ ಮಾಡಿ ಒಂದು ಅರ್ಧವನ್ನು ತಲೆಯ ಮೇಲಿಟ್ಟುಕೊಂಡು ಕಾಪಾಡಿದ. ಚಂದ್ರ ಶೇಖರನೆನಿಸಿದ. ಇನ್ನೊಂದು ಅರ್ಧಶರೀರವನ್ನು ಲಜ್ಜಿತನಾದ ಚಂದ್ರಯೋಗಬಲದಿಂದ ತ್ಯಾಗಮಾಡಿದ. ಅದನ್ನು ಬ್ರಹ್ಮ ಕ್ಷೀರಸಮುದ್ರದಲ್ಲಿ ಹಾಕಿದ. ಕ್ಷೀರಸಮುದ್ರ ತೀರದಲ್ಲಿ ಚಂದ್ರನ ತಂದೆಯಾದ ಅತ್ರಿಮುನಿ ಪುತ್ರಶೋಕದಿಂದ ಕಣ್ಣೀರು ಸುರಿಸಿದಾಗ ಆ ಕಣ್ಣೀರು ಕ್ಷೀರಸಮುದ್ರದಲ್ಲಿ ಸೇರಿದೊಡನೆ ಅದರಿಂದ ಚಂದ್ರತಿರುಗಿ ಹುಟ್ಟಿಬಂದ. ಈಗ ಅವನು ನಿಷ್ಪಾಪಿ. ಬ್ರಹ್ಮಶಿವರು ದೇವಸಭೆಯಲ್ಲಿ ಅವನಿಗೆ ರಾಜ್ಯಾಭಿಷೇಕ ಮಾಡಿದರು. 'ಮಗು ನೀನು ಸ್ವಸ್ಥಾನಕ್ಕೆ ಮರಳಿ ರಾಜ್ಯಭಾರ ಮಾಡು. ನಿನಗೆ ಕ್ಷಯರೋಗ ಬರಲೆಂದು ತಾರೆ ಶಾಪಕೊಟ್ಟಿದ್ದು ವ್ಯರ್ಥವಾಗುವುದಿಲ್ಲ. ಪತಿವ್ರತೆಯ ಶಾಪ ಎಂದೂ ಹುಸಿಯಾಗುವುದಿಲ್ಲ. ಆದರೂ ನಿನಗ ಭಾದ್ರಪದ ಚತುರ್ಥಿಯಲ್ಲಿ ಮಾತ್ರ ನಿನ್ನ ದರ್ಶನ ನಿಷಿದ್ಧವೆನಿಸುವುದು. ಏಕೆಂದರೆ ಆ ದಿನದಲ್ಲಿ ನೀನು ತಾರೆಯನ್ನು ಬಲಾತ್ಕರಿಸಿರುವಿ. ಈ ಪಾಪದ ಕಳಂಕ ಚಂದ್ರಮಂಡಲದಲ್ಲಿ ಮೊಲದ ಆಕಾರವಾಗಿ ಕಾಣುತ್ತಿರಲಿ,'' ಎಂದು ಅನುಗ್ರಹಿಸಿದರು. ತಾರೆಯನ್ನೂ ಕರೆದು ಹೇಳಿದರು. ''ತಾರೆ, ಹೇಳು ನಿನ್ನ ಉದರದಲ್ಲಿರುವ ಗರ್ಭ ಯಾರದು? ಸಂಕೋಚವಿಲ್ಲದೆ ಹೇಳು. ಏಕೆಂದರೆ ಬಲಾತ್ಕಾರಕೊಳ್ಳಗಾದ ಮಾತ್ರಕ್ಕೆ ಪತಿವ್ರತಾಸ್ತ್ರೀ ಕೆಡುವುದಿಲ್ಲ. ಅವಳೂ ಆ ಪುರುಷನನ್ನು ಬಯಸಿದರೆ ಮಾತ್ರ ದೋಷವಾಗುವುದು.'' ತಾರೆ ಹೇಳಿದಳು. ''ಈ ಮಗು ಚಂದ್ರನದು.'' ಬಳಿಕ ಶಿವ ತಾರೆಯನ್ನು ಬೃಹಸ್ಪತಿಗೆ ಒಪ್ಪಿಸಿದ. ಬೃಹಸ್ಪತಿ ಅವಳನ್ನು ಸ್ವೀಕರಿಸಿ ಮನೆಗೆ ಕರೆದೊಯ್ದ. ಮುಂದೆ ತಾರೆ ಬುಧನಿಗೆ ಜನ್ಮವಿತ್ತಳು. ಚಂದ್ರ ಬುಧನನ್ನು ಮಗನೆಂದು ಸ್ವೀಕರಿಸಿ ಕರೆದೊಯ್ದ. ಈ ಚಂದ್ರನ ಕಲಂಕದ ಚರಿತ್ರೆಯನ್ನು ಶ್ರವಣ ಮಾಡಿದರೆ ಪಾಪ ಕಳಂಕ ಎಲ್ಲವೂ ಪರಿಹಾರವಾಗುವುದು. ನಂದ ನೀನಿನ್ನು ಗೋಕುಲಕ್ಕೆ ಹಿಂತಿರುಗಿ, ನನ್ನ ಉಪದೇಶವನ್ನು ಯಶೋದೆಗೂ ಎಲ್ಲ ಗೋಪಿಯರಿಗೂ ತಿಳಿಸು.

*ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣ ದ್ವಿತೀಯಭಾಗದಶ್ರೀಕೃಷ್ಣ ಜನ್ಮಖಂಡದಲ್ಲಿನ ನಾರಾಯಣನಾರದಸಂವಾದದಲ್ಲಿ ತಾರಾಹರಣವೆಂಬ ಎಂಬತ್ತೊಂದನೆಯ ಅಧ್ಯಾಯ ಮುಗಿದುದು*

—o—

# ದುಃಸ್ವಪ್ನ-ಪರಿಹಾರ

ಅಧ್ಯಾಯ - ೮೨

**ನಂದ:-** ಪ್ರಭು, ದುಃಸ್ವಪ್ನಗಳು ಯಾವುವು ಎಂಬುದನ್ನು ಹೇಳು.

ಶ್ರೀಕೃಷ್ಣ:- ಸ್ವಪ್ನದಲ್ಲಿ ತಾನು ನಕ್ಕಂತೆ ಕಂಡರೆ ವಿವಾಹಕ್ಕೂ, ನೃತ್ಯಗಾನಗಳನ್ನೂ ಕಂಡರೆ ಅದು ಮುಂದೆ ಬರಲಿರುವ ಆಪತ್ತಿಗೂ ಸೂಚಕವಾಗುತ್ತದೆ. ಹಲ್ಲು ಮುರಿದುದನ್ನು ಕಂಡರೆ ಧನಹಾನಿ. ಶರೀರದಲ್ಲಿಯೂ ಪೀಡೆ. ತೈಲಾಭ್ಯಂಜನ ಮಾಡಿ ಕತ್ತೆ ಒಂಟೆ ಕೋಣಗಳನ್ನೇರಿ ದಕ್ಷಿಣ ದಿಕ್ಕಿಗೆ ಹೋದರೆ ಮೃತ್ಯು. ಕಿವಿಯಲ್ಲಿ ದಾಸವಾಳದ ಹೂ ಅಶೋಕ ಕರವೀರ ಹೂಗಳಿಟ್ಟುಕೊಂಡರೆ, ಎಣ್ಣೆ, ಉಪ್ಪು ಕಂಡರೆ, ಆಪತ್ತು. ಮೂಗಿಲ್ಲದ ಕೃಷ್ಣವರ್ಣದ ನಗ್ನಳಾದ ಶೂದ್ರವಿಧವೆಯನ್ನು ಕಪರ್ದ ತಾಳ ಫಲಗಳನು ಕಂಡರೆ ಶೋಕ ಪ್ರಾಪ್ತಿ. ಬ್ರಾಹ್ಮಣ ಅಥವಾ ಬ್ರಾಹ್ಮಣಸ್ತ್ರೀ ತನ್ನಲ್ಲಿ ಕುಪಿತಳಾದರೆ ಆಪತ್ತು. ಮನೆಯಿಂದ ಲಕ್ಷ್ಮಿ ತೊಲಗುತ್ತಾಳೆ. ಕಾಡುಹೂ, ಕೆಂಪುಹೂ, ಪಲಾಶ ಹೂ, ಬಿಳಿ ಹತ್ತಿ ಬಟ್ಟೆಗಳನ್ನು ಕಂಡರೆ ದುಃಖ. ಕಪ್ಪುಸೀರೆ ಉಟ್ಟು ಹಾಡುತ್ತ ನಗುತ್ತಿರುವ ಕರಿಬಣ್ಣದ ವಿಧವಾ ಸ್ತ್ರೀಯನ್ನು ಕಂಡರೆ ಮೃತ್ಯು. ದೇವತಾ ಪ್ರತಿಮೆಗಳು ಕುಣಿಯುವುದು ಹಾಡುವುದು ನಗುವುದು ಕೈ ಚಪ್ಪಾಳೆಯಿಕ್ಕುವುದು ಧಾವಿಸುವುದು. ಮೃತ್ಯುಸೂಚಕ ಕಪ್ಪು ಬಟ್ಟೆ ಉಟ್ಟು ಕಪ್ಪು ಮಾಲೆ ಅನುಲೇಪ ಧರಿಸುವ ನಾರಿಯನ್ನು ಆಲಿಂಗಿಸಿದರೂ ಮೃತ್ಯು ಸಮೀಪಿಸುವುದು. ಮೃಗದ ಅಥವಾ ಮನುಷ್ಯನ ಅಸ್ಥಿಮಾಲೆಯನ್ನು ಕಂಡರೆ ಅಪತ್ತು. ಕತ್ತೆ ಒಂಟೆಗಳು ಎಳೆಯುವ ರಥವನ್ನು ಏಕಾಕಿಯಾಗಿ ಏರಿ ಆಗಲೆ ಎಚ್ಚತ್ತರೆ, ಮೃತ್ಯು ಹವಿಸ್ಸು ಹಾಲು ಜೇನು ಮಜ್ಜಿಗೆ ಬೆಲ್ಲಗಳನ್ನು ಮೈಗೆ ಲೇಪಿಸಿದಂತೆ ಕಂಡರೆ ಪೀಡೆ. ಉಗುರು ಕೂದಲುಗಳು ಬಿದ್ದಿರುವುದನ್ನೂ ಸ್ಮಶಾನದ ಬೆಂಕಿ ಬೂದಿಗಳನ್ನೂ ಕಂಡರೆ ಮೃತ್ಯು. ಸ್ಮಶಾನ, ಒಣಗಿದ ಸೌದೆ, ಹಲ್ಲು, ಕಬ್ಬಿಣ, ಶಮಿ ಕಪ್ಪು ಕುದುರೆಗಳನ್ನು ಕಂಡರೆ ದುಃಖ. ಪಾದರಕ್ಷೆ, ಹಲಗೆ, ಕೆಂಪುಹೂ, ಮಾಲೆ ಉದ್ದು ಹೆಸರುಗಳನ್ನು ಕಂಡರೆ ವ್ರಣ ಉಂಟಾಗುವುದು. ಕಾಗೆ ಕರಡಿ ಕೋತಿ, ಮಲ ಕೀವುಗಳನ್ನು ಕಂಡರೆ ವ್ಯಾಧಿ. ಒಡವೆ ಮಡಿಕೆ, ಕುಷ್ಠರೋಗಿ ಕೆಂಪು ಬಟ್ಟೆ ಜಟಾಧಾರಿ ಹಂದಿ ಕೋಣ ಕತ್ತೆ ಘೋರ ಅಂಧಕಾರ, ಗುಪ್ತಾರಿಗಳನ್ನು ಕಂಡರೆ ಆಪತ್ತು. ದುಷ್ಟವೇಷದ ಮ್ಲೇಚ್ಛನನ್ನೂ ಪಾಶ ಶಸ್ತ್ರಧಾರಿಯಾದ ಭಯಂಕರ ಯಮದೂತನನ್ನೂ ಕಂಡರೆ ಮೃತ್ಯು. ಬ್ರಾಹ್ಮಣ, ಬ್ರಾಹ್ಮಣಸ್ತ್ರೀ, ಬಾಲಕ, ಬಾಲಕಿ, ಮಗ, ಮಗಳು ವಿಲಾಪಗೈದಂತೆ ಕಂಡರೆ ದುಃಖ. ಕಪ್ಪು ಹೂ, ಕಪ್ಪು ಹೂಮಾಲೆ, ಶಸ್ತ್ರಾಸ್ತ್ರ ಧರಿಸಿದ ಸೈನ್ಯ, ವಿಕೃತಾಕಾರಳಾದ ಮ್ಲೇಚ್ಛಸ್ತ್ರೀಯನ್ನು ಕಂಡರೆ ಮೃತ್ಯು. ವಾದ್ಯ, ನೃತ್ಯ ಗಾಯನ ಕೆಂಪು ಬಟ್ಟೆ ಮೃದಂಗ ನುಡಿಸುವುದು ಇವನ್ನು ಕಂಡರೆ ದುಃಖ. ಮೃತರಾದ ಭಯಾನಕ ಮ್ಲೇಚ್ಛಸ್ತ್ರೀಪುರುಷರು ಆಲಿಂಗನ ಮಾಡಿದರೆ ಮೃತ್ಯು. ಹಲ್ಲುಗಳು ಬಿದ್ದಂತೆ ತಲೆಗೂದಲುಗಳು ಉದುರಿದಂತೆ ಕಂಡರೆ ಧನಹಾನಿ, ಶರೀರ

ಪೀಡೆ. ಕೊಂಬುಳ್ಳ ಪ್ರಾಣಿಗಳು, ಕೋರೆದಾಡೆ ಉಳ್ಳ ಮೃಗಗಳು, ಬಾಲಕರಾದ ಮಾನವರು ಉಪದ್ರವ ಮಾಡಿದರೆ ರಾಜಕುಲದಿಂದ ಭಯ. ಮರ ಕಡಿದು ಬೀಳುವುದು, ಕಲ್ಲುಗಳ ಮಳೆ, ಬೆಂಕಿ ಕೆಂಡ ಬೂದಿಗಳ ಸುರಿಯುವುದನ್ನು ಕಂಡರೆ ದುಃಖ. ಮನೆ ದೆಟ್ಟಗಳು ಉರುಳಿ ಬೀಳುವುದು. ಭಯಾನಕವಾದ ಧೂಮಕೇತು, ಹೆಗಲು ಮುರಿದ ಮನುಷ್ಯರನ್ನು ಕಂಡರೂ ದುಃಖ, ರಥ, ಮನೆ ಬೆಟ್ಟ, ಮರ, ಎತ್ತು ಆನೆ ಕುದುರೆ ಆಕಾಶಗಳಿಂದ ನೆಲದಲ್ಲಿ ಬಿದ್ದಂತೆ ಕಂಡರೆ ಆಪತ್ತು. ಎತ್ತರದಿಂದ ಕೆಳಗೆ ಬೂದಿ ಇದ್ದಿಲುಗಳಿಂದ ತುಂಬಿದ ಕ್ಷಾರಕುಂಡಗಳಲ್ಲಿ ಬಿದ್ದಂತೆ ಕಂಡರೆ ಮೃತ್ಯು. ತನ್ನ ತಲೆಯ ಮೇಲಿಂದ ಛತ್ರವನ್ನು ದುಷ್ಟನೊಬ್ಬ ಬಲಾತ್ಕಾರದಿಂದ ಕಿತ್ತುಕೊಂಡರೆ ತಂದೆ ಗುರು ಅಥವಾ ರಾಜನಿಗೆ ಆಪತ್ತು. ಮನೆಯಿಂದ ಹಸು ಕರುವಿನೊಂದಿಗೆ ಭಯದಿಂದ ಓಡಿಹೋದರೆ ಲಕ್ಷ್ಮಿಯೂ ತೊಲಗುವಳು. ಯಮದೂತರು ಮ್ಲೇಚ್ಛರು ತನ್ನನ್ನು ಪಾಶದಿಂದ ಕಟ್ಟಿ ಸೆಳೆದೊಯ್ದರೆ ಮೃತ್ಯು. ಜ್ಯೋತಿಷಿ, ಬ್ರಾಹ್ಮಣ, ಬ್ರಾಹ್ಮಣಸ್ತ್ರೀ ಗುರುಗಳು ಸಿಟ್ಟಾಗಿ ಶಪಿಸಿದರೆ ಆಪತ್ತು. ಕಾಗೆ ಕೋಳಿ ಕರಡಿಗಳು ಮೈಮೇಲೆ ಬಿದ್ದು ಆಕ್ರಮಣ ಮಾಡಿದರೆ ಮೃತ್ಯು. ಕೋಣ ಕರಡಿ ಒಂಟೆ ಹಂದಿ ಕತ್ತೆಗಳು ಕೋಪಗೊಂಡು ತನ್ನ ಬಳಿಗೆ ಧಾವಿಸಿ ಬಂದರೆ ರೋಗ.

ಕೆಂಪು ಗಂಧದ ಕಾಷ್ಠಗಳನ್ನು ತುಪ್ಪದಲ್ಲಿ ಅದ್ದಿ ಗಾಯತ್ರೀ ಮಂತ್ರದಿಂದ ಸಹಸ್ರ ಆಹುತಿಗಳನ್ನಿತ್ತರೆ ದುಃಸ್ವಪ್ನ ಸೂಚಿತವಾದ ಪೂರ್ವಜನ್ಮದ ಅಥವಾ ಈ ಜನ್ಮದ ಪಾಪ ಶಾಂತಿಯಾಗುತ್ತದೆ. ಸಹಸ್ರ ಮಧುಸೂದನ ಮಂತ್ರ ಜಪಮಾಡಿದರೂ ಪಾಪಶಾಂತಿ ಯಾಗುವುದು. ದುಃಸ್ವಪ್ನವೂ ಸುಸ್ವಪ್ನವಾಗುವುದು.

**ಅಚ್ಯುತಂ ಕೇಶವಂ ವಿಷ್ಣುಂ ಹರಿಂ ಸತ್ಯಂ ಜನಾರ್ದನಂ ।**
**ಹಂಸಂ ನಾರಾಯಣಂ ಚೈವ ಹ್ಯೇತನ್ನಾಮಾಷ್ಟಕಂ ಶುಭಂ ॥**

ಅಚ್ಯುತ ಕೇಶವ ವಿಷ್ಣು ಹರಿ ಸತ್ಯ ಜನಾರ್ದನ ಹಂಸ ನಾರಾಯಣ ಈ ಎಂಟು ನಾಮಗಳೂ ಮಂಗಳಕರವಾಗಿವೆ. ಶುಚಿಯಾಗಿ ಪೂರ್ವಾಭಿಮುಖವಾಗಿ ಕುಳಿತು ಹತ್ತು ಬಾರಿ ಜಪಿಸಿದರೆ ಪಾಪ ಪರಿಹಾರವಾಗುತ್ತದೆ. ದುಃಸ್ವಪ್ನ ಸುಸ್ವಪ್ನವಾಗುತ್ತದೆ.

**ವಿಷ್ಣುಂ ನಾರಾಯಣಂ ಕೃಷ್ಣಂ ಮಾಧವಂ ಮಧುಸೂದನಂ ।**
**ಹರಿಂ ನರಹರಿಂ ರಾಮಂ ಗೋವಿಂದಂ ದಧಿವಾಮನಂ ।**
**ಭಕ್ತ್ಯಾಚೇಮಾನಿ ನಾಮಾನಿ ದಶಭದ್ರಾಣಿ ಯೋ ಜಪೇತ್ ।**
**ಶತಕೃತ್ವೋ ಭಕ್ತಿಯುಕ್ತೋ ಜಪ್ತ್ವಾ ನೀರೋಗತಾಂ ವ್ರಜೇತ್ ॥**

ವಿಷ್ಣು ನಾರಾಯಣ ಕೃಷ್ಣ ಮಾಧವ ಮಧುಸೂದನ ಹರಿ ನರಹರಿ ರಾಮ ಗೋವಿಂದ ದಧಿವಾಮನ-ಮಂಗಳಕರವಾದ ಈ ಹತ್ತು ನಾಮಗಳನ್ನು ಭಕ್ತಿಯಿಂದ ಜಪಿಸುವವನು ನೂರು ಬಾರಿ ಜಪಿಸಿದರೆ ಬಂಧನದಿಂದ ಮುಕ್ತನಾಗುತ್ತಾನೆ. ಹತ್ತು ಲಕ್ಷ ಜಪಿಸಿದರೆ ಬಂಜೆ, ಮಕ್ಕಳನ್ನು ಪಡೆಯುತ್ತಾಳೆ. ಹವಿಷ್ಯಾನ್ನ ಉಣ್ಣುತ್ತ ಶುದ್ಧನಾಗಿ ಜಪಿಸಿದರೆ ದರಿದ್ರನು ಶ್ರೀಮಂತನಾಗುತ್ತಾನೆ. ನೂರು ಲಕ್ಷ ಜಪಿಸಿದರೆ ಜೀವನ್ಮುಕ್ತನಾಗುತ್ತಾನೆ.

**ಶಿವಂ ದುರ್ಗಾಂ ಗಣಪತಿಂ ಕಾರ್ತಿಕೇಯಂ ದಿನೇಶ್ವರಂ**
**ಧರ್ಮಂ ಗಂಗಾಂ ಚ ತುಲಸೀ ರಾಧಾಂ ಲಕ್ಷ್ಮೀಂ ಸರಸ್ವತೀಂ**

ಶಿವ ದುರ್ಗಾ ಗಣಪತಿ ಕಾರ್ತಿಕೇಯ ದಿನೇಶ್ವರ ಧರ್ಮ ಗಂಗಾ ತುಲಸೀ ರಾಧಾ ಲಕ್ಷ್ಮೀ ಸರಸ್ವತೀ ಎಂಬ ನಾಮಗಳನ್ನು ಸ್ನಾನಮಾಡಿ ಜಪಿಸಿದರೆ ಅಭೀಷ್ಟಸಿದ್ಧಿ. ಮತ್ತು ದುಃಸ್ವಪ್ನ ಸುಸ್ವಪ್ನವಾಗುವುದು.

**"ಓಂ ಹ್ರೀಂ ಶ್ರೀಂ ಕ್ಲೀಂ ದುರ್ಗತಿನಾಶಿನ್ಯೈ ಮಹಾಮಾಯಾಯೈ ಸ್ವಾಹಾ"**

ಎಂಬ ಹದಿನೇಳು ಅಕ್ಷರದ ಮಂತ್ರವನ್ನು ಶುಚಿಯಾಗಿ ಹತ್ತು ಬಾರಿ ಜಪಿಸಿದರೆ ದುಃಸ್ವಪ್ನ ಸುಸ್ವಪ್ನವಾಗುವುದು ಮತ್ತು ಈ ಮಂತ್ರ ಕಲ್ಪವೃಕ್ಷದಂತೆ ಎಲ್ಲ ಅಭೀಷ್ಟಗಳನ್ನು ನೀಡುವುದು. ನೂರು ಲಕ್ಷ ಬಾರಿ ಜಪಿಸಿದರೆ ಮಂತ್ರಸಿದ್ಧಿ ಯಾಗುವುದು. ಆಗ ಸರ್ವಸಿದ್ಧಿ.

**"ಓಂ ನಮೋ ಮೃತ್ಯುಂಜಯಾಯ ಸ್ವಾಹಾ"**

ಎಂಬ ಮಂತ್ರವನ್ನು ಲಕ್ಷ ಬಾರಿ ಜಪಿಸಬೇಕು. ಅದರಿಂದ ಮರಣ ಸೂಚಕ ಸ್ವಪ್ನವನ್ನು ಕಂಡವನೂ ನೂರುವರ್ಷ ಆಯುಷ್ಯ ಪಡೆಯುತ್ತಾನೆ.

ರಾತ್ರಿ ಕಂಡ ಸ್ವಪ್ನವನ್ನು ಈಶಾನ್ಯ ದಿಕ್ಕಿಗೆ ಮುಖಮಾಡಿ ಕುಳಿತು ವಿದ್ವಾಂಸರ ಮುಂದೆ ಹೇಳಬೇಕು ಹೊರತು ಮದ್ಯಪಾಯಿ ದರಿದ್ರ ನೀಚ ದೇವಬ್ರಾಹ್ಮಣನಿಂದಕ ಮೂರ್ಖ ಸ್ವಪ್ನಾಧ್ಯಾಯವನ್ನರಿಯದವ ಇಂಥವರ ಮುಂದೆ ಹೇಳಬಾರದು. ಅಶ್ವತ್ಥ ವೃಕ್ಷ ಜ್ಯೋತಿಷಿ ಬ್ರಾಹ್ಮಣ ಪಿತೃಸ್ಥಾನ ದೇವಸ್ಥಾನ ಪೂಜ್ಯವ್ಯಕ್ತಿ ವಿಷ್ಣುಭಕ್ತ ಮಿತ್ರರ ಮುಂದೆ ತಾನು ಕಂಡ ಸ್ವಪ್ನವೃತ್ತಾಂತವನ್ನು ಹಗಲಲ್ಲಿ ಹೇಳಬೇಕು.

ಹೀಗೆ ಇದು ದುಃಸ್ವಪ್ನಗಳು ಮತ್ತು ಅವುಗಳ ಪರಿಹಾರಗಳ ಬಗ್ಗೆ ತಿಳಿಯಬೇಕಾದ ವಿಶೇಷಾಂಶ, ಇದರ ಶ್ರವಣದಿಂದ ಪಾಪನಾಶ ಧನವೃದ್ಧಿ ಯಶೋವೃದ್ಧಿ ಆಯುಷ್ಯವೃದ್ಧಿಗಳುಂಟಾಗುವುವು. ನಂದ, ಇನ್ನೇನು ಕೇಳಲು ಬಯಸುವಿ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ*
*ನಾರಾಯಣನಾರದಸಂವಾದದಲ್ಲಿ ಭಗವನ್ನಂದ ಸಂವಾದದಲ್ಲಿ*
*ಎಂಬತ್ತೆರಡನೆಯ ಅಧ್ಯಾಯ ಮುಗಿದುದು*

—o—

## ಅಧ್ಯಾಯ - ೮೩

**ನಂದಗೋಪ:-** ಕೃಷ್ಣ, ನೀನು ವೇದಗಳ ಪ್ರವೃತ್ತಿಗೂ ಬ್ರಹ್ಮಾದಿ ದೇವತೆಗಳ ಉತ್ಪತ್ತಿಗೂ ಮೂಲಪುರುಷ. ವೇದೋಕ್ತ ಸಕಲ ಧರ್ಮಗಳ ಬಗ್ಗೆ ನೀನೆ ಹೇಳಬೇಕು. ನಿನ್ನನ್ನು ಬಿಟ್ಟು ಇನ್ನಾರನ್ನು ಕೇಳಲಿ? ಆದ್ದರಿಂದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಿಗೂ ಸನ್ಯಾಸಿ ಯತಿ ಬ್ರಹ್ಮಚಾರಿ ಬ್ರಾಹ್ಮಣ ವಿಧವಾಸ್ತ್ರೀ ಪತಿವ್ರತಾ ಸ್ತ್ರೀಯರುಗಳಿಗೂ ಗೃಹಸ್ಥರಾದ ಸ್ತ್ರೀಪುರುಷರಿಗೂ ವೇದವಿಹಿತವಾದ ಧರ್ಮಗಳೇನು? ಶಿಷ್ಯರು ಗುರುಗಳ ವಿಷಯದಲ್ಲಿ, ಗಂಡು ಮತ್ತು ಹೆಣ್ಣು ಮಕ್ಕಳು ತಂದೆ ತಾಯಿಯರ ವಿಷಯದಲ್ಲಿ ಆಚರಿಸಬೇಕಾದ ಧರ್ಮಗಳೇನು? ಸ್ತ್ರೀ ಜಾತಿ ಎಷ್ಟು ವಿಧ? ಭಕ್ತರು ಎಷ್ಟು ಬಗೆ? ಬ್ರಹ್ಮಾಂಡ ಎಷ್ಟು ಬಗೆ? ನಿತ್ಯ ಅನಿತ್ಯ ಪದಾರ್ಥಗಳು ಯಾವುವು? ಎಲ್ಲವನ್ನು ನನಗೆ ಹೇಳು.

**ಕೃಷ್ಣ:-** ಬ್ರಾಹ್ಮಣ ಪ್ರತಿದಿನ ಸಂಧ್ಯಾವಂದನೆ ಮಾಡಿ ಪರಿಶುದ್ಧನಾಗಿ ನನ್ನನ್ನು ಆರಾಧಿಸಬೇಕು. ನನಗೆ ನಿವೇದಿಸಿದ ಪ್ರಸಾದವನ್ನೆ ಭುಂಜಿಸಬೇಕು. ಬೇರೆ ಅನ್ನ ಮಲಕ್ಕೆ ಸಮಾನ. ಬೇರೆ ನೀರು ಮೂತ್ರಕ್ಕೆ ಸಮಾನ. ನನ್ನ ನೈವೇದ್ಯ ಉಂಡು ಶುಚಿಯಾಗಿ ತಪಸ್ಸು ಮಾಡುತ್ತ ಶಾಸ್ತ್ರಾಧ್ಯಯನ ಮಾಡುವವ ಜೀವನ್ಮುಕ್ತನೆನಿಸುತ್ತಾನೆ. ವ್ರತಾನುಷ್ಠಾನ ತೀರ್ಥಯಾತ್ರೆ ಶಿಷ್ಯರಿಗೆ ಶಾಸ್ತ್ರಹೇಳಿಕೊಡುವುದು ವಿಷ್ಣುಮಂತ್ರ ಗ್ರಹಣಪೂರ್ವಕ ಗುರುಸೇವೆ ಮಾಡಿ ಅವನ ಅನುಮತಿ ಪಡೆದು ಗೃಹಸ್ಥಧರ್ಮವನ್ನಾಶ್ರಯಿಸುವುದು ಗುರುದಕ್ಷಿಣೆ ಗುರುವಿನ ಪೋಷಣೆಗಳು ಇವೆಲ್ಲ ಬ್ರಾಹ್ಮಣಧರ್ಮಗಳು.

**ಸರ್ವೇಷಾಮಪಿ ವಂದ್ಯಾನಾಂ ಪಿತಾ ಚೈವ ಮಹಾನ್ ಗುರುಃ ।**
**ಪಿತುಃ ಶತಗುಣೈರ್ಮಾತಾ ಮಾತುಃ ಶತಗುಣೈಃ ಸುರಾಃ ।**
**ಮಂತ್ರದಸ್ತಂತ್ರದಶ್ಚೈವ ಸುರಾಣಾಂ ಚ ಚತುರ್ಗುಣಃ ॥**

ಪೂಜ್ಯರಲ್ಲೆಲ್ಲ ಪೂಜ್ಯನೆನಿಸುವವನು ತಂದೆ. ತಂದೆಗಿಂತ ನೂರು ಪಾಲು ಪೂಜ್ಯಳು ಮಾತೆ. ಮಾತೆಗಿಂತ ನೂರರಷ್ಟು ಪೂಜ್ಯರು ದೇವತೆಗಳು. ವೇದಮಂತ್ರಗಳನ್ನೂ ಪಂಚರಾತ್ರಾದಿ ತಂತ್ರಗಳನ್ನೂ ಉಪದೇಶಿಸುವ ಗುರು, ದೇವತೆಗಳಿಗಿಂತ ನಾಲ್ಕರಷ್ಟು ಹೆಚ್ಚು ಪೂಜ್ಯನೆನಿಸುತ್ತಾನೆ. ಗುರುವೆಂದರೆ ಭಗವಾನ್ ನಾರಾಯಣನೆ, ಪ್ರತ್ಯಕ್ಷ ಈಶ್ವರನೆ ಎಂದು ತಿಳಿದು, ಅವನಿಗೆ ಕೊಡುವುದೆಲ್ಲವೂ ದೇವತೆಗಳಿಗೆ ಸಿಗುತ್ತದೆ ಎಂದು ಶ್ರುತಿ ಹೇಳುತ್ತಿದೆ. ಗುರುವಿನ ರೂಪದಿಂದ ಹರಿಯೆ ಶರೀರಧಾರಿಯಾಗಿ ಬಂದು ಅದನ್ನು ಸ್ವೀಕರಿಸುತ್ತಾನೆ ಎಂದು ತಿಳಿಯಬೇಕು.

**ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರೇವ ಸ್ವಯಂ ಶಿವಃ ।**
**ಗುರೌ ಚ ಸರ್ವದೇವಾಶ್ಚ ತಿಷ್ಠಂತಿ ಸತತಂ ಮುದಾ ॥**

ಗುರುವಿನೊಬ್ಬನಲ್ಲಿಯೆ ಬ್ರಹ್ಮ ವಿಷ್ಣು ಶಿವ ಮತ್ತು ಇತರ ಸರ್ವದೇವತೆಗಳೂ ಪ್ರಸನ್ನರಾಗಿ ಸನ್ನಿಹಿತರಾಗಿರುತ್ತಾರೆ. ಗುರು ಸಂತುಷ್ಟನಾದರೆ ಅವನಲ್ಲಿರುವ ಹರಿ ಸಂತುಷ್ಟನಾಗುತ್ತಾನೆ. ಹರಿ ತೃಪ್ತನಾದರೆ ಸಕಲ ದೇವತೆಗಳೂ ತೃಪ್ತರಾಗುತ್ತಾರೆ. ಗುರುವೂ ಶಿಷ್ಯನನ್ನು ಮಗನಂತೆ ನೋಡಿಕೊಳ್ಳಬೇಕು. ಮನಃಪೂರ್ವಕ ಆಶೀರ್ವಾದ ಮಾಡಬೇಕು. ಇಲ್ಲದಿದ್ದಲ್ಲಿ ಬ್ರಹ್ಮಹತ್ಯಾ ಪಾತಕಕ್ಕೆ ಗುರಿಯಾಗುತ್ತಾನೆ.

**ಸ್ವಧರ್ಮನಿರತೋ ವಿಪ್ರೋ ಬ್ರಾಹ್ಮಣಶ್ಚ ಸದಾ ಶುಚಿಃ ।**
**ವಿಷ್ಣುಸೇವೀ ಸದಾ ವಿಪ್ರಸ್ತದನ್ಯೋಽಪ್ಯಶುಚಿಃ ಸದಾ ॥**

ಸ್ವಧರ್ಮವನ್ನಾಚರಿಸುತ್ತ ಸದಾ ವಿಷ್ಣುವನ್ನಾರಾಧಿಸುವ ಬ್ರಾಹ್ಮಣ ಸದಾ ಶುಚಿ. ಹಾಗೆ ಮಾಡದವ ಸರ್ವದಾ ಅಶುಚಿ. ಎತ್ತುಗಳಿಂದ ಜೀವಿಸುವುದು, ಶೂದ್ರರ ಮನೆಯಲ್ಲಿ ಅಡುಗೆ ಮಾಡಿ ಜೀವಿಸುವುದು, ದೇವಪೂಜೆಯಿಂದ ಜೀವಿಸುವುದು ಸಂಧ್ಯಾವಂದನೆ ಮಾಡದಿರುವುದು, ಹಗಲು ನಿದ್ದೆ ಮಾಡುವುದು ಶೂದ್ರರ ಶ್ರಾದ್ಧಾನ್ನ ಉಣ್ಣುವುದು, ಶೂದ್ರರ ಶವದಾಹ ಮಾಡುವುದು ಇವುಗಳಿಂದ ಬ್ರಾಹ್ಮಣನ ಬ್ರಹ್ಮವರ್ಚಸ್ಸು ನಶಿಸುವುದು.

ಶಾಲಗ್ರಾಮಪೂಜೆ ನೈವೇದ್ಯ ಪಾದೋದಕಗಳನ್ನು ಸೇವಿಸುವುದು ಇವುಗಳಿಂದ ಸರ್ವ ತೀರ್ಥಸ್ನಾನದ ಫಲ, ಸರ್ವಯಜ್ಞ ಫಲ. ನಿತ್ಯವೂ ಮೂರು ಹೊತ್ತೂ ಶಾಲಗ್ರಾಮ ಪೂಜೆ ಮಾಡಬೇಕು. ಏಕಾದಶಿ, ಕೃಷ್ಣಜನ್ಮಾಷ್ಟಮಿ, ಶಿವರಾತ್ರಿ, ರಾಮನವಮಿಗಳಲ್ಲಿ ಉಪವಾಸ ಮಾಡಬೇಕು. ಬ್ರಾಹ್ಮಣನ ಪಾದದಲ್ಲಿ ಎಲ್ಲ ತೀರ್ಥಗಳಿರುವುದರಿಂದ ಅವನ ಪಾದೋದಕ ಪಾನದಿಂದ ಸಕಲ ತೀರ್ಥಸ್ನಾನ ಫಲ; ಪಿತೃಗಳಿಗೂ ತೃಪ್ತಿ. ವಿಷ್ಣುಮಂತ್ರೋಪಾಸಕನಾದ ಬ್ರಾಹ್ಮಣನಿಗಿಂತ ಶ್ರೇಷ್ಠಮಾನವನು ಇನ್ನಿಲ್ಲ. ವೇದೋಕ್ತ ಪುರಾಣೋಕ್ತ ಅಥವಾ ಪಂಚರಾತ್ರೋಕ್ತ ವಿಷ್ಣುಮಂತ್ರವನ್ನು ಪರಿಗ್ರಹಿಸುವವನೆ ವೈಷ್ಣವನೆನಿಸುತ್ತಾನೆ. ಪಾವನನೆನಿಸುತ್ತಾನೆ. ಜೀವನ್ಮುಕ್ತನೂ ಆಗುತ್ತಾನೆ. ಏಳುಮಂದಿ ಹಿಂದಿನವರನ್ನೂ ಏಳುಮಂದಿ ಮುಂದಿನವರನ್ನೂ ಸೋದರರನ್ನೂ ತಾಯಿಯನ್ನೂ ವೈಷ್ಣವ ಉದ್ಧರಿಸುತ್ತಾನೆ. ವಿಷ್ಣುಕ್ಷೇತ್ರದಲ್ಲಿ ಪುರಶ್ಚರಣ ಪೂರ್ವಕವಾಗಿ ಮಂತ್ರ ಜಪಿಸಿದರೆ ತನ್ನ ಕುಲದ ಸಾವಿರ ಮಂದಿಯನ್ನು ಉದ್ಧರಿಸುತ್ತಾನೆ.

ವಯಸ್ಸು ಜ್ಞಾನ ವಿದ್ಯೆ ಜಾತಿಗಳಲ್ಲಿ ಹೀನನಾದವನಿಂದ ಮಂತ್ರೋಪದೇಶ ಪಡೆಯಬಾರದು. ರೋಗಿ, ವಂಶಹೀನ, ಭಾರ್ಯಾಹೀನ, ಮಂತ್ರತ್ಯಾಗಿಗಳಿಂದಲೂ ವಿಷ್ಣುಭಕ್ತಿರಹಿತರಾದ ಶೈವ ಶಾಕ್ತರಿಂದಲೂ ಮಂತ್ರ ಪಡೆಯಬಾರದು. ಎಲ್ಲ ಆಪತ್ತುಗಳಿಂದಲೂ ಶಿಷ್ಯನನ್ನು ರಕ್ಷಿಸಬಲ್ಲ ತೇಜಸ್ವಿಯಾದ ವಿಷ್ಣುಭಕ್ತ ಬ್ರಾಹ್ಮಣನಿಂದಲೆ ಮಂತ್ರವನ್ನು ಪರಿಗ್ರಹಿಸಬೇಕು. ವಯಸ್ಸಿನಲ್ಲಿ ಸಣ್ಣವರಿಂದ ಮಂತ್ರ ಪರಿಗ್ರಹಿಸಿದರೆ ಆಯುಷ್ಯ ಕಡಿಮೆಯಾಗುವುದು. ಅಜ್ಞಾನಿಯಿಂದ ಪಡೆದರೆ ಪಾಂಡಿತ್ಯ ನಶಿಸುವುದು. ವಿದ್ಯಾಹೀನನಿಂದ ಪಡೆದರೆ ಮೂಢತನ ಬರುವುದು. ಜಾತಿಹೀನನಿಂದ ಪಡೆದರೆ ಸಂಪತ್ತು ಕ್ಷಯಿಸುವುದು. ಮೂರ್ಖನಿಂದ ಪಡೆದರೆ ಮೂರ್ಖತನ. ಆಶ್ರಮಹೀನನಿಂದ ಪಡೆದರೆ ದುಃಖ. ತಂದೆಯಿಂದ ಪಡೆದರೆ ಯಶೋಹಾನಿ,

ಸನ್ಯಾಸಿಯಿಂದ ಪಡೆದರೆ ಮೃತ್ಯು. ರೋಗಿಯಿಂದ ಪಡೆದರೆ ರೋಗ. ವಂಶಹೀನನಿಂದ ಪಡೆದರೆ ವಂಶನಾಶ. ಭಾರ್ಯಾಹೀನನಿಂದ ಪಡೆದರೆ ಭಾರ್ಯಾನಾಶ. ಮಂತ್ರಹೀನನಿಂದ ಪಡೆದರೆ ಮಂತ್ರನಾಶ. ವಿಷ್ಣುಭಕ್ತಿಹೀನನಿಂದ ಪಡೆದರೆ ಭಕ್ತಿನಾಶ.

ವಿಷ್ಣುಭಕ್ತನಾದ ಬ್ರಾಹ್ಮಣ ವಿಷ್ಣುವಿಗೆ ಪಕ್ವಾನ್ನವನ್ನು ನಿವೇದಿಸಬಲ್ಲ. ಇತರರು ಅದನ್ನು ನಿವೇದಿಸಲು ಅರ್ಹರಲ್ಲ. ಓಂಕಾರೋಚ್ಚಾರಣೆ, ಹೋಮ, ಶಾಲಗ್ರಾಮಾರ್ಚನೆ, ಹರಿಗೆ ಪಕ್ವಾನ್ನ ನಿವೇದನಗಳನ್ನು ಇತರರು ಮಾಡಿದರೆ ಅಧಃಪಾತ. ಬ್ರಾಹ್ಮಣ ಹವಿಷ್ಯಾನ್ನ ಉಣಬೇಕು. ಮಾಂಸ ವರ್ಜಿಸಬೇಕು. ಪ್ರತಿದಿನ ಹೊಸ ಮಡಿಕೆಯಲ್ಲಿ ಪಾಕಮಾಡಬೇಕು. ಅಥವಾ ಒಂದು ಪಕ್ಷಕಾಲ ಒಂದು ಮಡಿಕೆಯಲ್ಲಿ ಪಾಕ ಮಾಡಬಹುದು. ಬಳಿಕ ಅದನ್ನು ಎಸೆಯಬೇಕು. ಸೂರ್ಯ ಚಂದ್ರಗ್ರಹಣ ಅಥವಾ ಜಾತಾಶೌಚ ಮೃತಾಶೌಚಗಳು ಬಂದಾಗ ಅಥವಾ ಅಶುಚಿ ಸಂಪರ್ಕವಾದಾಗ ಮಡಿಕೆಯನ್ನು ಪರಿತ್ಯಜಿಸಬೇಕು. ಹಗಲು ಎರಡು ಬಾರಿ ಊಟ ಮಾಡಕೂಡದು. ಶ್ರಾದ್ಧದಿನಗಳಲ್ಲಿ, ಪ್ರಯಾಣ ಯುದ್ಧ ನದೀತೀರಸಂಚಾರ ಎರಡು ಊಟ ಸ್ತ್ರೀಸಂಗಗಳನ್ನು ತ್ಯಜಿಸಬೇಕು. ಹವಿಷ್ಯಾನ್ನ ಉಂಡು ಸಂಯಮದಿಂದಿರಬೇಕು. ಶ್ರಾದ್ಧಾನ್ನವನ್ನು ವಿಷ್ಣುಭಕ್ತನಾದ ಬ್ರಾಹ್ಮಣನಿಗೆ ನೀಡಬೇಕು. ಸಂಧ್ಯಾಹೀನನಿಗೆ ಎತ್ತಿನಿಂದ ಜೀವಿಸುವವನಿಗೆ ಶೂದ್ರರಿಂದ ಯಾಗ ಮಾಡಿಸುವವನಿಗೆ ಮತ್ತು ಶೂದ್ರಾದಿಗಳಿಗೆ ನೀಡಬಾರದು. ಶ್ರಾದ್ಧಾನ್ನ ಉಂಡ ಬ್ರಾಹ್ಮಣ ಆ ದಿನದಲ್ಲಿ ಸ್ತ್ರೀಸಂಗ ಮಾಡಿದರೆ ನರಕ. ಎಲ್ಲ ಪಾಪಗಳಿಗಿಂತ ಕನ್ಯಾಶುಲ್ಕ ಸ್ವೀಕರಿಸಿ ಮಗಳನ್ನು ಮಾರಾಟ ಮಾಡುವುದೆ ದೊಡ್ಡಪಾಪ. ಮಗಳ ಮೈಯ ರೋಮಸಂಖ್ಯೆಯಷ್ಟು ವರ್ಷ ಕುಂಭೀಪಾಕ ನರಕ ಲಭಿಸುವುದು. ಆ ವಿವಾಹ ಮಾಡಿಸುವ ಪುರೋಹಿತನೂ ಕುಂಭೀಪಾಕದಲ್ಲಿ ಬೀಳುವನು.

ಕ್ಷತ್ರಿಯರಿಗೆ ಬ್ರಾಹ್ಮಣಸೇವೆ ವಿಷ್ಣುವಿನ ಆರಾಧನೆ ರಾಜ್ಯಪರಿಪಾಲನೆ ,ಧೈರ್ಯದಿಂದ ಯುದ್ಧದಲ್ಲಿ ಹೋರಾಡುವುದು ಬ್ರಾಹ್ಮಣರಿಗೆ ನಿತ್ಯದಾನ ಮಾಡುವುದು, ಶರಣಾಗತರನ್ನು ರಕ್ಷಿಸುವುದು, ಪ್ರಜೆಗಳನ್ನು ಮಕ್ಕಳಂತೆ ನೋಡಿಕೊಳ್ಳುವುದು. ಶಸ್ತ್ರಾಸ್ತ್ರ ನೈಪುಣ್ಯ, ಚತುರಂಗ ಸೈನ್ಯವನ್ನು ಇಟ್ಟುಕೊಳ್ಳುವುದು ಇವು ಕರ್ತವ್ಯಗಳು. ಯುದ್ಧಕ್ಕೆ ಆಹ್ವಾನಿಸಿದರೆ ಇಲ್ಲವೆನ್ನಬಾರದು. ಯುದ್ಧದಲ್ಲಿ ಮಡಿದರೆ ಯಶಸ್ಸು, ಸ್ವರ್ಗಲಾಭ. ವೈಶ್ಯರಿಗೆ ವ್ಯಾಪಾರ ಕೃಷಿ ಗೋಪಾಲನೆ, ಬ್ರಾಹ್ಮಣರನ್ನೂ ದೇವತೆಗಳನ್ನೂ ಆರಾಧಿಸುವುದು, ದಾನ ತಪಸ್ಸು ವ್ರತಾನುಷ್ಠಾನಗಳು ಕರ್ತವ್ಯಗಳು. ಶೂದ್ರರಿಗೆ ಬ್ರಾಹ್ಮಣಸೇವೆ ಕರ್ತವ್ಯ. ಬ್ರಾಹ್ಮಣರ ಸೊತ್ತನ್ನು ಅಪಹರಿಸಿದರೆ ಸಾವಿರ ಕೋಟಿಜನ್ಮಗಳಲ್ಲಿ ಹದ್ದು ಹಂದಿ ಮುಂತಾದ ಪ್ರಾಣಿಜನ್ಮ ಬರುವುದು. ಬ್ರಾಹ್ಮಣ ಸ್ತ್ರೀಸಂಗ ಮಾಡಿದರೆ ಕುಂಭೀಪಾಕ. ಬಳಿಕ ಸರ್ಪ, ಮಲಕ್ರಿಮಿ ಮುಂತಾದ ಜನ್ಮಗಳೇ ಬರುತ್ತವೆ; ಮಾನವಜನ್ಮ ಎಂದೂ ಸಿಗಲಾರದು. ಸನ್ಯಾಸಿಗಳು ಪೂರ್ವಕರ್ಮಗಳನ್ನು ಕಳೆದುಕೊಳ್ಳುತ್ತಾರೆ. ಮುಂದಿನ ಕರ್ಮಗಳ ಲೇಪವಾಗುವುದಿಲ್ಲ.

**ದಂಡಗ್ರಹಣಮಾತ್ರೇಣ ನರೋ ನಾರಾಯಣೋ ಭವೇತ್ ।**

ಸನ್ಯಾಸದೀಕ್ಷೆ ಪಡೆದು ದಂಡವನ್ನು ಪರಿಗ್ರಹಿಸುವ ನರನು ನಾರಾಯಣನಿಗೆ ಅತ್ಯಂತ ಪ್ರಿಯನೆನಿಸುತ್ತಾನೆ. ಅವನ ಪಾದಸ್ಪರ್ಶವಾದ ನೆಲ ಪಾವನವಾಗುವುದು. ಅವನ ಸ್ಪರ್ಶವಾದರೆ ನರನ ಪಾಪವೆಲ್ಲ ತೊಲಗುವುದು. ಅವನಿಗೆ ಭೋಜನ ನೀಡಿದರೆ ಅಶ್ವಮೇಧದ ಫಲ. ದರ್ಶನ ಮಾಡಿ ನಮಿಸಿದರೆ ರಾಜಸೂಯ ಯಾಗದ ಫಲ. ಸನ್ಯಾಸಿ ಸಾಯಾಹ್ನದಲ್ಲಿ ಹಸಿದು ಗೃಹಸ್ಥನ ಮನೆಯಲ್ಲಿ ಅನ್ನ ಬೇಡಬೇಕು. ಅವನು ಕೊಡುವ ಅನ್ನ ರುಚಿಯಾಗಿರಲಿ ಇಲ್ಲದಿರಲಿ, ಬಿಡಕೂಡದು. ಮಿಷ್ಟಾನ್ನವನ್ನೆ ಕೊಡೆಂದು ಬೇಡಬಾರದು. ಕೊಡದಿದ್ದರೆ ಕೋಪಿಸಿಕೊಳ್ಳಬಾರದು. ಹಣ ಸ್ವೀಕರಿಸಬಾರದು. ಒಂದೇ ಬಟ್ಟೆ ಉಡಬೇಕು. ಚಳಿ ಸೆಖೆಗಳನ್ನು ಸಮಾನವಾಗಿ ಕಾಣಬೇಕು. ಲೋಭ ಮೋಹ ಬಿಡಬೇಕು. ಒಂದು ಊರಲ್ಲಿ ಒಂದು ರಾತ್ರಿ ಮಾತ್ರವಿದ್ದು ಬೆಳಿಗ್ಗೆ ಇನ್ನೊಂದು ಊರಿಗೆ ಸಂಚರಿಸುತ್ತಿರಬೇಕು. ವಾಹನವೇರಿ ಸಂಚರಿಸುವುದು, ಹಣ ಸಂಗ್ರಹಿಸುವುದು, ಮನೆ ಕಟ್ಟಿಕೊಳ್ಳುವುದು ಇವುಗಳಿಂದ ಸನ್ಯಾಸಿ ಸ್ವಧರ್ಮ ಭ್ರಷ್ಟನೆನಿಸುತ್ತಾನೆ. ಕೃಷಿ ವ್ಯಾಪಾರ ನೀಚವೃತ್ತಿಗಳಿಂದಲೂ ಧರ್ಮಭ್ರಷ್ಟನಾಗುತ್ತಾನೆ. ಅವನು ಎಷ್ಟು ಒಳ್ಳೆಯ ಕಾರ್ಯ ಮಾಡಿದರೂ ಫಲವಿಲ್ಲ.

ಬ್ರಾಹ್ಮಣ ವಿಧವಾಸ್ತ್ರೀ ದಿನಕ್ಕೆ ಒಂದು ಬಾರಿ ಊಟ ಮಾಡಬೇಕು. ಸಾಯಂಕಾಲದಲ್ಲಿ ಹವಿಷ್ಯಾನ್ನ ಉಣಬೇಕು. ದಿವ್ಯವಸ್ತ್ರ ಗಂಧ ದ್ರವ್ಯ ತೈಲ ಮಾಲ್ಯ ಚಂದನ ಶಂಖ ಸಿಂದೂರಗಳನ್ನೂ ಒಡವೆಗಳನ್ನೂ ಪರಿತ್ಯಜಿಸಬೇಕು. ಮಲಿನವಸ್ತ್ರಧರಿಸಿ ನಾರಾಯಣನ ಸೇವೆ ಮಾಡಬೇಕು. ಅವನ ನಾಮವನ್ನು ಸದಾ ಉಚ್ಚರಿಸಬೇಕು. ಪರಪುರುಷರನ್ನು ಮಕ್ಕಳಂತೆ ನೋಡಬೇಕು. ಮಿಷ್ಟಾನ್ನ ಭೋಜನ ವೈಭವಗಳನ್ನು ತೊರೆಯಬೇಕು. ಏಕಾದಶಿ ಕೃಷ್ಣಜನ್ಮಾಷ್ಟಮೀ, ರಾಮನವಮೀ, ಶಿವರಾತ್ರಿ, ಅಘೋರಾಷ್ಟಮೀ ಚಂದ್ರ ಸೂರ್ಯಗ್ರಹಣ ದಿನಗಳಲ್ಲಿ ಉಪವಾಸವಿರಬೇಕು. ವಿಧವೆ, ಯತಿ, ಬ್ರಹ್ಮಚಾರಿ, ಸನ್ಯಾಸಿಗಳಿಗೆ ತಾಂಬೂಲವು ಮದ್ಯ ಗೋಮಾಂಸಗಳಿಗೆ ಸಮಾನವೆನಿಸುವುದು. ವಿಧವೆ ಮಂಚದಲ್ಲಿ ಮಲಗಬಾರದು. ವಾಹನವೇರಬಾರದು. ಕೇಶಸಂಸ್ಕಾರ ತೈಲಾಭ್ಯಂಗ ಕನ್ನಡಿ ನೋಡುವುದು ಪರಪುರುಷನ ಮುಖ ನೋಡುವುದು ಮೆರವಣಿಗೆ ನೃತ್ಯ ಉತ್ಸವ ಗಾಯನಗಳಲ್ಲಿ ಭಾಗವಹಿಸುವುದು ಇವೆಲ್ಲ ನಿಷಿದ್ಧ. ವೇದೋಕ್ತ ಧರ್ಮೋಪದೇಶಗಳನ್ನು ಶ್ರವಣ ಮಾಡುತ್ತಿರಬೇಕು.

ಪತಿವ್ರತಾಸ್ತ್ರೀ ಪತಿಯ ಪಾದೋದಕ ಪಾನಮಾಡಬೇಕು. ವ್ರತ ತಪಸ್ಸು ದೇವಾರ್ಚನೆಗಳೆಲ್ಲವನ್ನೂ ತೊರೆದು ಪತಿಸೇವೆ ಮಾಡಬೇಕು. ಅವನ ಅನುಮತಿ ಪಡೆಯದೆ ಯಾವ ವ್ರತ ತಪಸ್ಸುಗಳನ್ನೂ ಮಾಡಬಾರದು. ಪತಿಯನ್ನು ನಾರಾಯಣನಿಗಿಂತಲೂ ಹೆಚ್ಚೆಂದು ಭಾವಿಸಬೇಕು. ಪರಪುರುಷರ ದರ್ಶನ, ಮೆರವಣಿಗೆ ಉತ್ಸವ ನೃತ್ಯಗಾನಾದಿಗಳಲ್ಲಿ ಭಾಗವಹಿಸುವುದು ನಿಷಿದ್ಧ. ಪತಿಗೆ ಪ್ರಿಯವಾದ ಭಕ್ಷ್ಯವನ್ನೆ ತಾನೂ ಸೇವಿಸಬೇಕು. ಅವನ ಸಂಗವನ್ನು ಕ್ಷಣವೂ ಬಿಡಬಾರದು. ಅವನೊಡನೆ ಉತ್ತರಕ್ಕೆ ಪ್ರತ್ಯುತ್ತರ ಕೊಡಬಾರದು. ಅವನು ಹೊಡೆದರೂ ತಾನು ಕೋಪಿಸಿಕೊಳ್ಳಬಾರದು. ಹಸಿದಾಗ ಅನ್ನ ಬಾಯಾರಿದಾಗ ನೀರು ಕೊಡುತ್ತ ನಿದ್ರಾಭಂಗ ಮಾಡದೆ, ಯಾವ ಕಾರ್ಯಕ್ಕೂ ಪ್ರೇರಿಸದೆ ಇದ್ದು ಮಕ್ಕಳಿಗಿಂತ ನೂರು

ಪಾಲು ಹೆಚ್ಚು ಪ್ರೀತಿಯನ್ನು ಪತಿಯಲ್ಲಿ ಇಟ್ಟಿರಬೇಕು. ಪತಿಯನ್ನೆ ದೈವವೆಂದು ಗತಿಯೆಂದು ತಿಳಿಯಬೇಕು. ನಗುಮೊಗದಿಂದ ಭಕ್ತಿಯಿಂದ ಸೇವೆಮಾಡಬೇಕು. ಪತಿಯ ಮುಖದರ್ಶನದಿಂದ ಅಮೃತಪಾನದ ಸುಖ ಪಡೆಯಬೇಕು. ಇಂಥ ಪತಿವ್ರತೆಯ ಪತಿ ಸಕಲ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕ ಪಡೆಯುತ್ತಾನೆ.

ಪತಿವ್ರತೆಯ ಪಾದದಲ್ಲಿ ಭೂಮಂಡಲದ ಸಕಲ ತೀರ್ಥಗಳೂ ಸನ್ನಿಹಿತವಾಗಿರುತ್ತವೆ. ಎಲ್ಲ ದೇವತೆಗಳ ಸಾನ್ನಿಧ್ಯ ಅವಳಲ್ಲಿರುತ್ತದೆ. ಅವಳಿಗೆ ನೀಡುವ ಒಂದು ದಾನದಿಂದ ಎಲ್ಲ ತಪಸ್ಸಿನ, ವ್ರತದ, ದಾನದ ಫಲ ಲಭಿಸುತ್ತದೆ. ಪತಿವ್ರತೆಯ ಮನ ನೋಯಿಸಲು ಸ್ವಯಂ ನಾರಾಯಣನೂ ಬ್ರಹ್ಮರುದ್ರಾದಿ ದೇವತೆಗಳೂ ಮುನಿಗಳೂ ಭಯ ಪಡುತ್ತಾರೆ. ಪತಿವ್ರತೆಯ ಪಾದಧೂಳಿಯಿಂದ ಭೂಮಿ ಪಾವನವಾಗುತ್ತದೆ. ಅವಳಿಗೆ ನಮಸ್ಕರಿಸಿದರೆ ಸಕಲಪಾಪಪರಿಹಾರ. ಅವಳು ಕೋಪಗೊಂಡರೆ ಮೂಲೋಕವನ್ನೂ ಭಸ್ಮ ಮಾಡಬಲ್ಲಳು. ಪತಿವ್ರತೆಯ ಪತಿಯಾಗಲಿ ಪುತ್ರನಾಗಲಿ ನಿರ್ಭಯನಾಗಿರುತ್ತಾನೆ. ಅವನಿಗೆ ಯಾವ ದೇವತೆಗಳಿಂದಲೂ ಯಮನಿಂದಲೂ ಅಪಾಯವಿಲ್ಲ. ನೂರು ಜನ್ಮಗಳಲ್ಲಿ ಪುಣ್ಯ ಮಾಡಿದವರ ಮನೆಯಲ್ಲಿ ಇಂಥ ಪತಿವ್ರತೆ ಹುಟ್ಟುತ್ತಾಳೆ. ಅವಳ ತಂದೆ ತಾಯಿಗಳಿಗೆ ಜೀವನ್ಮುಕ್ತಿ ಲಭ್ಯ. ಪತಿವ್ರತೆ ಬೆಳಿಗ್ಗೆ ಎದ್ದು ರಾತ್ರಿ ಉಟ್ಟ ಬಟ್ಟೆ ಬದಲಿಸಿ ಪತಿಗೆ ನಮಿಸಬೇಕು. ಮನೆಕೆಲಸ ಮಾಡಿ ಸ್ನಾನಮಾಡಿ ಎರಡು ಶುಭ್ರ ವಸ್ತ್ರಗಳನ್ನು ಧರಿಸಿ ಹೂ ಮುಡಿದು ಪತಿಯನ್ನು ಪೂಜಿಸಬೇಕು. ಅವನಿಗೆ ಸ್ನಾನ ಮಾಡಿಸಿ ಬಟ್ಟೆಉಡಿಸಿ ಕಾಲುತೊಳೆದು ಆಸನದಲ್ಲಿಕೂಡಿಸಿ ಹಣೆಯಲ್ಲಿ ಶ್ರೀಗಂಧ ತಿಲಕವಿಟ್ಟು ಮೈಗೆ ಗಂಧಲೇಪಿಸಿ ಮಾಲೆಹಾಕಿ ಸಾಮವೇದೋಕ್ತ ಮಂತ್ರಪೂರ್ವಕವಾಗಿ ಭಕ್ಷ್ಯಭೋಜ್ಯಗಳನ್ನಿತ್ತು ನಮಿಸಬೇಕು.

**'ಓಂ ನಮಃ ಕಾಂತಾಯ ಶಾಂತಾಯ ಸರ್ವದೇವಾಶ್ರಯಾಯ ಸ್ವಾಹಾ'** ಎಂಬ ಮಂತ್ರದಿಂದ ಗಂಧ ಪುಷ್ಪಗಳನ್ನು ಸಮರ್ಪಿಸಬೇಕು. ಪಾದ್ಯ ಅರ್ಘ್ಯ ಧೂಪದೀಪ ನೈವೇದ್ಯ ಜಲ ತಾಂಬೂಲ ಸಮರ್ಪಣಗಳ ಕೊನೆಯಲ್ಲಿ ಈ ಸ್ತೋತ್ರ ಪಠಿಸಬೇಕು. 'ಪತಿದೇವನಿಗೆ ನಮಸ್ಕಾರ. ಶಾಂತದಾಂತ ಸರ್ವದೇವಾಶ್ರಯ ಬ್ರಹ್ಮ ಸ್ವರೂಪ ಪೂಜ್ಯ ಪಂಚಪ್ರಾಣಾಧಿದೇವ ಪರಮಾನಂದ ರೂಪಿಯಾದ ಪತಿಗೆ ನಮಸ್ಕಾರ.

**ಪತಿರ್ಬ್ರಹ್ಮಾ ಪತಿರ್ವಿಷ್ಣುಃ ಪತಿರೇವ ಮಹೇಶ್ವರಃ ।**
**ಪತಿಶ್ಚ ನಿರ್ಗುಣಾಧಾರೋ ಬ್ರಹ್ಮರೂಪ ನಮೋಽಸ್ತು ತೇ ॥**
**ಕ್ಷಮಸ್ವ ಭಗವನ್ ದೋಷಂ ಜ್ಞಾನಾಜ್ಞಾನಕೃತಂ ಚ ಯತ್ ।**
**ಪತ್ನೀಬಂಧೋ ದಯಾಸಿಂಧೋ ದಾಸೀದೋಷಂ ಕ್ಷಮಸ್ವ ಮೇ॥**

ಪತಿಯಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರು ಸನ್ನಿಹಿತರಾಗಿದ್ದಾರೆ. ಪ್ರಾಕೃತ ಗುಣರಹಿತನಾದ ನಾರಾಯಣನಿಗೆ ಅಧಿಷ್ಠಾನವಾಗಿದ್ದು ಆ ಪರಬ್ರಹ್ಮನಿಗೆ ಪ್ರತೀಕವಾಗಿರುವ ಪತಿಯೆ ನಿನಗೆ ನಮಸ್ಕಾರ. ನಾನು ತಿಳಿದೋ ತಿಳಿಯದೆಯೋ ಮಾಡಿದ ದೋಷಗಳನ್ನೆಲ್ಲ ಕ್ಷಮಿಸು. ನೀನು ನನಗೆ ಆಪ್ತಬಂಧು. ದಯಾಸಿಂಧು - ನಾನು ದಾಸಿ; ನನ್ನಲ್ಲಿ ತಪ್ಪುಗಳಿದ್ದಲ್ಲಿ ಕ್ಷಮಿಸಿಬಿಡು.'

ಈ ಸ್ತೋತ್ರ ಮಹಾ ಪುಣ್ಯಕರ. ಸೃಷ್ಟಿಯ ಆದಿಯಲ್ಲಿ ಲಕ್ಷ್ಮೀದೇವಿ ಹರಿಯನ್ನು ಈಸ್ತೋತ್ರದಿಂದ ಸ್ತುತಿಸಿದ್ದಳು. ಪಾರ್ವತಿಯೂ ಕೈಲಾಸದಲ್ಲಿ ಶಿವನನ್ನು ಹೀಗೆ ಸ್ತುತಿಸಿದಳು. ದೇವತಾ ಸ್ತ್ರೀಯರೂ ಮುನಿಪತ್ನಿಯರೂ ತಮ್ಮ ಪತಿಗಳನ್ನು ಹೀಗೇ ಸ್ತುತಿಸಿದರು. ಆದ್ದರಿಂದ ಎಲ್ಲ ಪತಿವ್ರತೆಯರಿಗೂ ಈ ಸ್ತೋತ್ರ ಶುಭಪ್ರದ. ಇದನ್ನು ಕೇಳಿದರೂ ಸರ್ವಾಭೀಷ್ಟಗಳು ಲಭಿಸುತ್ತವೆ. ಪುತ್ರರಿಲ್ಲದವರಿಗೆ ಪುತ್ರ, ನಿರ್ಧನರಿಗೆ ಧನ, ರೋಗಿಗಳಿಗೆ ಆರೋಗ್ಯ, ಬದ್ಧರಿಗೆ ಬಂಧಮುಕ್ತಿ ಸಿಗುವುದು. ಪತಿವ್ರತೆ ಈ ಸ್ತೋತ್ರದಿಂದ ಪತಿಯನ್ನು ಸ್ತುತಿಸಿದರೆ ಸಕಲತೀರ್ಥಸ್ನಾನ ಫಲ. ಸಕಲ ತಪಸ್ಸು ವ್ರತಗಳ ಫಲ. ಹೀಗೆ ಪತಿಯನ್ನು ಸ್ತುತಿಸಿ ನಮಸ್ಕರಿಸಿ ಅವನ ಅನುಜ್ಞೆ ಪಡೆದು ಊಟ ಮಾಡಬೇಕು. ಇದು ಪತಿವ್ರತಾಧರ್ಮ, ಇನ್ನು ಗೃಹಸ್ಥಧರ್ಮವನ್ನು ಹೇಳುತ್ತೇನೆ, ಕೇಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ಭಗವಂತ ಮತ್ತು ನಂದಗೋಪನ ಸಂವಾದವೆಂಬ ಎಂಬತ್ತಮೂರನೆ ಅಧ್ಯಾಯ ಮುಗಿಯಿತು*



## ಬ್ರಹ್ಮಾಂಡಸೃಷ್ಟಿ

**ಅಧ್ಯಾಯ - ೮೪**

**ಶ್ರೀಕೃಷ್ಣ:-** ಗೃಹಸ್ಥ ಸತತವಾಗಿ ಬ್ರಾಹ್ಮಣರಿಗೂ ದೇವತೆಗಳಿಗೂ ಪೂಜೆ ಸಲ್ಲಿಸಬೇಕು. ನಾಲ್ಕು ವರ್ಣಗಳಿಗೆ ಹೇಳಿದ ಸ್ವಧರ್ಮವನ್ನೂ ಆಚರಿಸಬೇಕು. ಅತಿಥಿ ಸತ್ಕಾರ ಮಾಡಬೇಕು. ಇದಕ್ಕೆ ತಪ್ಪಿದರೆ ಆತ ಅಶುಚಿ ಎನಿಸುತ್ತಾನೆ. ಶ್ರಾದ್ಧಾದಿ ಕರ್ಮಕಾಲದಲ್ಲಿಯೂ ಅತಿಥಿಸತ್ಕಾರ ಕಾಲದಲ್ಲಿಯೂ ದೇವತೆಗಳು ಗೃಹಸ್ಥನ ಮನೆಗೆ ಹಸುಗಳು ನೀರಿನಕಟ್ಟೆಗೆ ಬರುವಂತೆ ಬರುತ್ತಾರೆ. ಸಾಯಂಕಾಲದಲ್ಲಿ ಹಸಿದು ಅತಿಥಿ ಮನೆಗೆ ಬಂದಾಗ ಸತ್ಕಾರ ಮಾಡಿದರೆ ಆತ ಮನಃಪೂರ್ವಕವಾಗಿ ಹರಸಿ ಹೋಗುತ್ತಾನೆ. ಸತ್ಕಾರ ಮಾಡದಿದ್ದರೆ ಆ ಗೃಹಸ್ಥನಿಗೆ ಮೂಲೋಕದ ಎಲ್ಲ ಪಾಪಗಳೂ ಸಂಘಟಿಸುತ್ತವೆ. ಪಿತೃಗಳೂ ದೇವತೆಗಳೂ ಅಗ್ನಿಗಳೂ ನಿರಾಸೆಯಿಂದ ಅವನ ಮನೆ ಬಿಟ್ಟು ಹೋಗುತ್ತಾರೆ. ಅವನಿಗೆ ಗೋಹತ್ಯೆ ಸ್ತ್ರೀಹತ್ಯೆ ಕೃತಘ್ನತೆಗಳ ಪಾಪ ತಗಲುತ್ತವೆ. ಅತಿಥಿಯೂ ಪಾಪಗಳನ್ನು ಅವನಿಗೆ ಕೊಟ್ಟು ಅವನ ಪುಣ್ಯವನ್ನು ಒಯ್ಯುತ್ತಾನೆ. ಆದ್ದರಿಂದ ಗೃಹಸ್ಥನು ದೇವತೆಗಳು ಪಿತೃಗಳು ಅತಿಥಿಗಳು ಮುಂತಾದವರೆಲ್ಲರಿಗೂ ಸತ್ಕಾರ ಮಾಡಿ ತನ್ನ ಆಶ್ರಯದಲ್ಲಿರುವವರಿಗೂ ಅನ್ನ ನೀಡಿ ಕೊನೆಯಲ್ಲಿ ತಾನು ಉಣಬೇಕು.

ಮನೆಯಲ್ಲಿ ತಾಯಿ ಇಲ್ಲದಿದ್ದರೆ, ಹೆಂಡತಿಯೂ ಪರಪುರುಷರ ಸಂಗ ಮಾಡುತ್ತಿದ್ದರೆ ಅಂಥ ಗೃಹಸ್ಥ ಕಾಡಿಗೇ ಹೋಗುವುದು ಲೇಸು. ಮನೆಯಲ್ಲಿ ಹೆಚ್ಚು ಕಷ್ಟ. ಆ ಹೆಂಡತಿ ಪತಿಯನ್ನು ಸದಾ ದ್ವೇಷಿಸುತ್ತಾಳೆ. ವಿಷದಂತೆ ನೋಡುತ್ತಾಳೆ. ಅವನಿಗೆ ಅನ್ನ ನೀಡುವುದಿಲ್ಲ. ಯಥೇಚ್ಛ ಬೈಯುತ್ತಾಳೆ. ಹುಲ್ಲಿನಂತೆ ತಿರಸ್ಕರಿಸುತ್ತಾಳೆ.

ಋಷಿತುಲ್ಯನಾದ ಪೂಜ್ಯನಾದ ಪತಿಯನ್ನು ಅವಮಾನಿಸುವ ಆ ಪಾಪಿಷ್ಠೆಯ ಜೊತೆಗೆ ಪತಿ ಜೀವಿಸುತ್ತಿದ್ದರೆ ಜೀವನವಿಡೀ ಅವಳ ಕಟುಮಾತಿನ ಬೆಂಕಿಯಲ್ಲಿ ಬೆಂದು ಜೀವನ್ಮೃತನಾಗಿ ಬದುಕಬೇಕಾಗುತ್ತದೆ.

ಗೃಹಿಣಿಯ ಸದಾಚಾರ ಹೇಗಿರಬೇಕೆಂದು ಹೇಳುತ್ತೇನೆ. ಗೃಹಿಣಿ ಪತಿಯಲ್ಲಿಯೂ ದೇವತೆಗಳಲ್ಲಿಯೂ ಬ್ರಾಹ್ಮಣರಲ್ಲಿಯೂ ಭಕ್ತಿ ಇಟ್ಟಿರಬೇಕು. ಬೆಳಿಗ್ಗೆ ಎದ್ದೊಡನೆ ಪತಿಗೆ ನಮಸ್ಕರಿಸಿ ಮನೆಯಂಗಳ ಸಾರಿಸಿ ಮನೆಕೆಲಸಗಳನ್ನು ಮಾಡಿ ಸ್ನಾನ ಮಾಡಬೇಕು. ದೇವತೆಗಳಿಗೂ ಬ್ರಾಹ್ಮಣರಿಗೂ ಪತಿಗೂ ನಮಸ್ಕರಿಸಿ ಮನೆದೇವರನ್ನು ಪೂಜಿಸಬೇಕು. ಗೃಹಕೃತ್ಯ ಪೂರೈಸಿ ಪತಿಗೆ ಊಟ ಮಾಡಿಸಿ ಅತಿಥಿಸತ್ಕಾರ ಮಾಡಿ ತಾನೂ ಉಣಬೇಕು. ಮಗ ತಂದೆಯನ್ನು ಆದರಿಸಬೇಕು. ಶಿಷ್ಯ ಗುರುವಿಗೆ ವಿಧೇಯನಾಗಿರಬೇಕು. ಮಗನಾಗಲಿ ಶಿಷ್ಯನಾಗಲಿ ತಂದೆಯನ್ನೂ ಗುರುವನ್ನೂ ಕೆಲಸಕ್ಕೆ ಹಚ್ಚಬಾರದು. ತಮ್ಮ ಸರ್ವಸ್ವವನ್ನೂ ಅವರಿಗೆ ಸಮರ್ಪಿಸಬೇಕು. ಅವರನ್ನು ಬೇರೆ ಮನುಷ್ಯರಂತೆ ಕಾಣಬಾರದು. ಹಾಗೆ ಕಂಡರೆ ಬ್ರಹ್ಮಹತ್ಯಾಪಾಪ ಬರುತ್ತದೆ. ತಂದೆಗಿಂತ ಹೆಚ್ಚು ತಾಯಿಯನ್ನೂ, ತಾಯಿಗಿಂತ ಹೆಚ್ಚು ಗುರುವನ್ನೂ ಆದರಿಸಬೇಕು. ತಂದೆ ತಾಯಿ ಗುರು ಹೆಂಡತಿ ಶಿಷ್ಯ ಮಗ, ಅನಾಥಳಾದ ಸೋದರಿ ಮಗಳು ಮತ್ತು ಗುರುಪತ್ನಿ ಇವರೆಲ್ಲರನ್ನೂ ಗೃಹಸ್ಥ ಸದಾ ಕಾಪಾಡುತ್ತಿರಬೇಕು. ಸ್ತ್ರೀಜಾತಿ ಆದಿಸೃಷ್ಟಿಯಲ್ಲಿ ಶುದ್ಧವಾಗಿತ್ತು. ಅವರೆಲ್ಲ ಪತಿವ್ರತೆಯರೆ ಆಗಿದ್ದರು. ಪ್ರಕೃತಿಯ ಅಂಶಭೂತರಾಗಿದ್ದರು, ಪವಿತ್ರರಾಗಿದ್ದರು. ಕೇದಾರಕನ್ಯೆಯ ಶಾಪದಿಂದ ಈ ಪತಿವ್ರತಾ ಧರ್ಮ ನಶಿಸತೊಡಗಿತು. ಬ್ರಹ್ಮ ಅಂದಿನಿಂದ ಮೂರು ಬಗೆಯ ಸ್ತ್ರೀಯರನ್ನು ಸೃಷ್ಟಿಸತೊಡಗಿದ-ಉತ್ತಮರು ಮಧ್ಯಮರು ಮತ್ತು ಅಧಮರು ಎಂದು.

ಉತ್ತಮಸ್ತ್ರೀ ಪತಿಭಕ್ತೆಯಾಗಿದ್ದು ಪ್ರಾಣ ಹೋದರೂ ಶೀಲವನ್ನು ಬಿಡಲಾರಳು. ಪತಿಯನ್ನೂ ದೇವತೆಗಳನ್ನೂ ಬ್ರಾಹ್ಮಣರನ್ನೂ ಆರಾಧಿಸುತ್ತ ಪತಿಯ ಅನುಜ್ಞೆಯಿಂದ ವ್ರತ ಉಪವಾಸಗಳನ್ನೂ ಮಾಡುವಳು.

ಮಧ್ಯಮಸ್ತ್ರೀ ಗುರುಹಿರಿಯರ ಭಯದಿಂದ ಪರಪುರುಷರನ್ನು ಸೇರದೆ ಇದ್ದು ಪತಿಯನ್ನು ಸ್ವಲ್ಪಮಟ್ಟಿಗೆ ಸೇವಿಸುತ್ತಾಳೆ. ವ್ಯಭಿಚಾರಕ್ಕೆ ಸರಿಯಾದ ಸ್ಥಳ, ಕಾಲಾವಕಾಶ, ಕಾಮುಕ ಪುರುಷರ ದೌರ್ಲಭ್ಯದಿಂದಲೆ ಅವಳು ಪತಿವ್ರತೆಯಾಗಿ ಉಳಿಯುತ್ತಾಳೆ.

ಅಧಮಸ್ತ್ರೀ ಸ್ವಭಾವದಿಂದಲೆ ಶೀಲಕೆಟ್ಟವಳು. ಸದಾ ಕಟುನುಡಿ ನುಡಿಯುತ್ತ ಪತಿಯೊಡನೆ ಕಲಹ ಮಾಡುತ್ತಾಳೆ, ಪತಿಯನ್ನು ನಿಂದಿಸುತ್ತಾಳೆ. ಪರಪುರುಷರನ್ನು ಸೇರುತ್ತಾಳೆ. ಪತಿಯನ್ನು ವಿಷದಂತೆ ಕಾಣುತ್ತ ಅವನಿಗೆ ದುಃಖ ಕೊಡುತ್ತಾಳೆ. ಜಾರನ ಕೈಯಿಂದ ಉಪಾಯವಾಗಿ ಪತಿಯನ್ನು ಕೊಲ್ಲಿಸುತ್ತಾಳೆ. ಜಾರನನ್ನು ಮನ್ಮಥನಂತೆ ಕಾಣುತ್ತ ಪ್ರೇಮ ಕಟಾಕ್ಷ ಹರಿಸುತ್ತಾಳೆ. ಒಳ್ಳೆಯ ವೇಷ ತೊಟ್ಟ ಯುವಕ ಯಾರೇ ಇರಲಿ ಅವನನ್ನು ಕಂಡೊಡನೆ ಕಾಮಪರವಶಳಾಗುತ್ತಾಳೆ. ಪತಿಗೆ ಅನ್ನ ನೀಡದೆ ಸದಾ ಕಟು ನುಡಿ ನುಡಿಯುತ್ತಾಳೆ. ಗುರು ಹಿರಿಯರು ಅವಳನ್ನು ಎಷ್ಟೇ ನಿರ್ಬಂಧದಲ್ಲಿಟ್ಟರೂ ಅವಳು ಜಾರನನ್ನು ಸೇರುತ್ತಾಳೆ. ರಾಜರಿಗೂ ಅಂಥ ಸ್ತ್ರೀಯನ್ನು

ಅಂಕೆಯಲ್ಲಿಡಲು ಶಕ್ಯವಾಗದು. ಅವಳಿಗೆ ಸ್ವಾಭಾವಿಕವಾಗಿ ಪ್ರೀತಿ ಯಾರಲ್ಲಿಯೂ ಇಲ್ಲ. ಯಾರಿಂದ ತನ್ನ ಕಾರ್ಯಸಾಧನೆಯಾದೀತೋ ಅವರಲ್ಲಿ ಪ್ರೀತಿ. ಹಸುಗಳು ಹೊಸ ಹೊಸ ಹುಲ್ಲುಗಾವಲನ್ನು ಅರಸುತ್ತ ಹೋಗುವಂತೆ ಇವಳು ಹೊಸ ಹೊಸ ಪುರುಷರನ್ನು ಅರಸುತ್ತ ಹೋಗುತ್ತಾಳೆ. ಅವಳ ಪ್ರೀತಿ ಎಂದೂ ಮಿಂಚಿನ ಬಳ್ಳಿಯಂತೆ, ನೀರ ಮೇಲೆ ಬರೆದ ಗೆರೆಯಂತೆ ಕ್ಷಣಿಕ. ಸದಾ ಕಪಟದ ಮಾತು. ವ್ರತ ತಪಸ್ಸು ಧರ್ಮಾಚರಣೆ ಗೃಹಕೃತ್ಯ ಗುರುಸೇವೆ ದೇವತಾರಾಧನೆ ಒಂದೂ ಬೇಡ. ಜಾರನನ್ನು ಒಲಿಸುವುದೆಂದರೆ ಬಲು ಪ್ರೀತಿ. ಇದು ಮೂರು ಬಗೆಯ ಸ್ತ್ರೀಯರ ಸ್ವಭಾವ.

ಮೂರು ಬಗೆಯ ಭಕ್ತರ ಸ್ವಭಾವ ಹೇಗೆಂಬುದನ್ನೂ ಹೇಳುತ್ತೇನೆ. ಉತ್ತಮಭಕ್ತ ತೃಣಶಯ್ಯೆಯಲ್ಲಿ ಮಲಗುತ್ತಾನೆ. ಸಂಸಾರದ ಎಲ್ಲ ಸುಖಭೋಗ ತೊರೆಯುತ್ತಾನೆ. ಹರಿನಾಮ ಗುಣಕೀರ್ತನದಲ್ಲಿಯೆ ಮನಸ್ಸಿಟ್ಟು ಹರಿಯ ಪಾದಕಮಲವನ್ನೆ ಧ್ಯಾನಿಸುತ್ತ ಭಕ್ತಿಯಿಂದ ಪೂಜಿಸುತ್ತಾನೆ. ಅಣಿಮಾದಿ ಸಿದ್ಧಿಯನ್ನಾಗಲಿ ದೇವಪದವಿಗಳನ್ನಾಗಲಿ ಸಾಲೋಕ್ಯಾದಿ ಮೋಕ್ಷಗಳನ್ನಾಗಲಿ ಬಯಸದೆ ಹರಿದಾಸ್ಯ ಒಂದನ್ನೆ ಬಯಸುತ್ತಾನೆ. ಅಮೃತಪಾನವೂ ಬೇಡ ಭಕ್ತಿ ಒಂದೆ ನಿಶ್ಚಲವಾಗಿರಲಿ ಎನ್ನುತ್ತಾನೆ. ಹಸಿವು ಬಾಯಾರಿಕೆ ನಿದ್ದೆ ಲೋಭ ಮೋಹಾದಿಗಳನ್ನು ತೊರೆದು ಹಗಲಿರುಳು ಹರಿಧ್ಯಾನಾಸಕ್ತನಾಗುತ್ತಾನೆ.

ಮಧ್ಯಮಭಕ್ತ ಸದಾ ಶುಚಿಯಾಗಿದ್ದು ಫಲದಾಸೆ ಇಲ್ಲದೆ ಪೂರ್ವಕರ್ಮ ನಾಶಕವಾದ ಸತ್ಕರ್ಮಗಳನ್ನೆ ಸತತ ಮಾಡುತ್ತಾನೆ. ಯಾವ ನಿಷಿದ್ಧಕರ್ಮವನ್ನೂ ಮಾಡಲಾರ. ಎಲ್ಲವೂ ಕೃಷ್ಣನ ಅಧೀನ, ನಾನೇನೂ ಮಾಡುತ್ತಿಲ್ಲ ಎಂದು ತ್ರಿಕರಣ ಪೂರ್ವಕವಾಗಿ ಚಿಂತಿಸುತ್ತಾನೆ.

ಅಧಮಭಕ್ತನಿಗೆ ಇಂಥ ಚಿಂತನೆ ಇಲ್ಲ. ಇದು ಮೂರು ಬಗೆಯ ಭಕ್ತರ ಲಕ್ಷಣ.

ಬ್ರಹ್ಮಾಂಡ ಸೃಷ್ಟಿಯ ಬಗ್ಗೆ ಹೇಳುತ್ತೇನೆ. ವಿಷ್ಣುಭಕ್ತರಾದ ದೇವತೆಗಳೂ ಮುನಿಗಳೂ ಬಹುಪ್ರಯತ್ನದಿಂದ ಇದನ್ನು ಸ್ವಲ್ಪ ಮಟ್ಟಿಗೆ ತಿಳಿಯಬಲ್ಲರು. ನಾನು ಎಲ್ಲವನ್ನೂ ಬಲ್ಲೆ. ಬ್ರಹ್ಮ ಶೇಷ ಈಶ್ವರ ಧರ್ಮ ಸನತ್ಕುಮಾರ ನರ ನಾರಾಯಣರು ಕಪಿಲ ಗಣೇಶ ದುರ್ಗಾ ಲಕ್ಷ್ಮಿ ಸರಸ್ವತಿ ವೇದಗಳು ವೇದಮಾತೆ ಸರ್ವಜ್ಞಳಾದ ರಾಧೆ ಇವರೂ ಎಲ್ಲವನ್ನೂ ಬಲ್ಲರು. ಬೇರೆ ಯಾರೂ ತಿಳಿಯರು. ಆತ್ಮ ಆಕಾಶ ದಶದಿಕ್ಕುಗಳು ಪ್ರಕೃತಿ ಇವೆಲ್ಲ ಹೇಗೆ ನಿತ್ಯವೋ ಹಾಗೇ ಗೋಲೋಕವೂ ವೈಕುಂಠವೂ ನಿತ್ಯ. ನಿತ್ಯವಾದ ಆ ಗೋಲೋಕದ ರಾಸಮಂಡಲದಲ್ಲಿ ನಾನು ರಾಸಕ್ರೀಡೆ ಮಾಡ ಬಯಸಿದಾಗ ನನ್ನ ಶರೀರದ ಎಡಭಾಗದಿಂದ ರಾಧೆ ಆವಿರ್ಭವಿಸಿದಳು. ಆಕೆ ಹದಿನಾರು ವರ್ಷದ ನವಯುವತಿ, ಬಿಳಿಸಂಪಿಗೆಯಂಥ ಮೈಬಣ್ಣದವಳು. ಶರತ್ಕಾಲದ ಚಂದ್ರನಂತೆ ಹೊಳೆವವಳು. ನಗುಮೊಗದ ಕೋಮಲಾಂಗಿ. ರತ್ನಾಭರಣಗಳನ್ನು ತೊಟ್ಟು ಹಣೆಗೆ ಕಸ್ತೂರಿ ತಿಲಕವಿಟ್ಟು ರಾಸಕ್ರೀಡೆಯ ಆಸೆಯಿಂದ ಮೆಲ್ಲಡಿ ಇಡುತ್ತ ನನ್ನ ಮುಂದೆ ನಿಂತಳು. ಪ್ರೇಮ ಕಟಾಕ್ಷ ಬೀರಿದಳು. ರಾಸಮಂಡಲದಲ್ಲಿ ಪ್ರಾದುರ್ಭವಿಸಿ ನನ್ನೆಡೆಗೆ ಧಾವಿಸಿ ಬಂದುದರಿಂದ ರಾಧೆ ಎಂಬ ಹೆಸರು ಅವಳಿಗೆ ಒಪ್ಪುತ್ತದೆ. ಅವಳ ಪ್ರಕೃಷ್ಟವಾದ, ಅಂದರೆ ಉತ್ಕೃಷ್ಟವಾದ ಕೃತಿಗಳಿಂದ ಪ್ರಕೃತಿ ಎಂದೂ ಅವಳಿಗೆ ಹೆಸರು.

ಸರ್ವಕಾರ್ಯ ಶಕ್ತಿ ಉಳ್ಳವಳಾದ್ದರಿಂದ ಶಕ್ತಿ ಎಂದೂ ಹೆಸರು. ಸರ್ವಾಧಾರಳೂ ಸರ್ವಸ್ವರೂಪಳೂ ಆಗಿದ್ದು ಮಂಗಲಾರ್ಹಳೂ ಮಂಗಳ ನೀಡುವುದರಲ್ಲಿ ದಕ್ಷಳೂ ಆದ್ದರಿಂದ ಸರ್ವಮಂಗಳೆ ಎನಿಸಿದಳು. ವೈಕುಂಠದಲ್ಲಿ ಮಹಾಲಕ್ಷ್ಮಿ ಎನಿಸಿದವಳೂ ಅವಳೆ. ಸರಸ್ವತಿಯೂ ಅವಳೆ. ವೇದಮಾತೆ ಸಾವಿತ್ರಿಯೂ ಗಾಯತ್ರಿಯೂ ಧಾತ್ರಿಯೂ ಅವಳೆ. ದುರ್ಗನೆಂಬ ರಾಕ್ಷಸನನ್ನು ಕೊಂದುದರಿಂದ ಅವಳೆ ದುರ್ಗೆ. ಅವಳು ಸರ್ವದೇವತೆಗಳ ತೇಜಸ್ಸುಗಳಿಂದ ಆವಿರ್ಭವಿಸಿ ಸರ್ವದೈತ್ಯರ ಸಂಹಾರ ಮಾಡಿದಳು. ದುಃಖದಾರಿದ್ರ್ಯಗಳನ್ನು ಕಳೆದು ಎಲ್ಲರಿಗೂ ಆನಂದ ಕೊಡುವುದರಿಂದ ನಂದಾ ಎನಿಸಿದಳು. ದಕ್ಷಕನ್ಯೆಯಾಗಿ ಸತಿ ಎಂದೂ ಪರ್ವತರಾಜನ ಮಗಳಾಗಿ ಪಾರ್ವತಿ ಎಂದೂ ಸರ್ವಾಧಾರಳಾಗಿ ವಸುಂಧರೆ ಎಂದೂ ಕರೆಸಿಕೊಂಡಳು. ತುಲಸಿ ಗಂಗೆಯರೂ ಅವಳ ಅಂಶಭೂತರೆ. ಎಲ್ಲ ಸ್ತ್ರೀಯರೂ ಅವಳ ಅಂಶಭೂತರೆ.

ರಾಧೆಯೊಡನೆ ನಾನು ಬ್ರಹ್ಮನ ಆಯುಃಪರಿಮಿತಿಯಷ್ಟು ದೀರ್ಘಕಾಲ ವಿಹಾರ ಮಾಡಿದೆ. ನಮ್ಮ ಬೆವರ ನೀರಿನಿಂದ ಬ್ರಹ್ಮಾಂಡಗೋಲಕ ಜಲಪೂರ್ಣವಾಯಿತು. ನಾನು ರಾಧೆಯಲ್ಲಿ ಗರ್ಭಾಧಾನ ಮಾಡಿದೆ. ಬ್ರಹ್ಮನ ನೂರುವರ್ಷಗಳಷ್ಟು ಕಾಲ ಅವಳು ಗರ್ಭಧರಿಸಿ ಒಂದು ಶಿಶುವಿಗೆ ಜನ್ಮವಿತ್ತಳು. ಶಿಶುವಿಗೆ ಜನ್ಮ ನೀಡುವುದರಿಂದ ಯೌವನ ನಾಶವಾಗುವುದೆಂದು ಕೋಪದಿಂದ ರಾಧೆ ಆ ಶಿಶುವನ್ನು ಕಾಲಿಂದ ಕೆಳಗೆ ತಳ್ಳಿದಳು. ಶಿಶು ನೀರಲ್ಲಿ ಬಿದ್ದು ಮಹಾವಿರಾಟ್‌ಪುರುಷನೆನಿಸಿತು. ಶಿಶುವನ್ನು ನೀರಿಗೆ ಎಸೆದುದನ್ನು ಕಂಡು ನಿನಗೆ ಮಕ್ಕಳಾಗದಿರಲೆಂದು ನಾನು ರಾಧೆಗೆ ಶಾಪ ನೀಡಿದೆ. ಆದರಿಂದ ಅವಳಿಗೆ ಮಕ್ಕಳಿಲ್ಲ. ಆದರೆ ದುರ್ಗಾ ಲಕ್ಷ್ಮಿ ಸರಸ್ವತಿಯರೂ ಬೇರೆ ದೇವಿಯರೂ ಪುತ್ರವತಿಯರಾದರು. ಮಹಾವಿರಾಟ್‌ಪುರುಷ ಯೋಗಬಲದಿಂದ ನೀರಲ್ಲಿ ಸ್ಥಾವರರೂಪನಾಗಿ ಮಲಗಿದ. ನನ್ನ ಅಮೃತಮಯವಾದ ಅಂಗುಷ್ಠದಿಂದ ಅವನಿಗೆ ನಾನು ಅಮೃತಪಾನ ಮಾಡಿಸಿದೆ. ಅವನ ರೋಮಕೂಪಗಳು ಜಲಪೂರ್ಣ. ಅವುಗಳಲ್ಲಿ ಕ್ಷುದ್ರವಿರಾಟ್‌ಪುರುಷ ಮಲಗುತ್ತಾನೆ.

ಕ್ಷುದ್ರವಿರಾಟನ ನಾಭಿಯಿಂದ ಸಾವಿರ ದಳಗಳ ಒಂದು ಕಮಲ ಹುಟ್ಟಿತು. ಆದರಲ್ಲಿ ಬ್ರಹ್ಮ ಹುಟ್ಟಿದ. ಆದರಿಂದ ಆತ ಕಮಲೋದ್ಭವನೆಂದು ಪ್ರಸಿದ್ಧನಾಗಿದ್ದಾನೆ. ಆತ ಹುಟ್ಟಿದೊಡನೆ ನನ್ನನ್ನು ಹುಟ್ಟಿಸಿದ ತಂದೆ ತಾಯಿಗಳಾರು, ಬಂಧುಗಳಾರೆಂದು ಚಿಂತಿಸುತ್ತ ಮೂರು ಲಕ್ಷ ದಿವ್ಯ ವರ್ಷಗಳ ಕಾಲ ಹುಡುಕಿ ಐದು ಲಕ್ಷ ದಿವ್ಯ ವರ್ಷಕಾಲ ತಪಸ್ಸು ಮಾಡಿದ. ಆಗ ನಾನು ಬಂದು ಮಂತ್ರೋಪದೇಶ ನೀಡಿದೆ. ಏಳು ಲಕ್ಷ ದಿವ್ಯವರ್ಷಕಾಲ / ಮಂತ್ರಜಪದಿಂದ ನನ್ನಿಂದ ವರಪಡೆದು ಸೃಷ್ಟಿ ಮಾಡಲಾರಂಭಿಸಿದ.

ಹೀಗೆ ಪ್ರತಿ ಬ್ರಹ್ಮಾಂಡದಲ್ಲಿಯೂ ಬ್ರಹ್ಮ ವಿಷ್ಣು ಶಿವರೂ ದಿಕ್ಪಾಲಕರೂ ದ್ವಾದಶ ಆದಿತ್ಯರೂ ಏಕಾದಶರುದ್ರರೂ ನವಗ್ರಹರೂ ಅಷ್ಟವಸುಗಳೂ ಮೂರುಕೋಟಿ ದೇವತೆಗಳೂ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಜಾತಿಯ ಮಾನವರೂ ಯಕ್ಷ ಗಂಧರ್ವ ಕಿನ್ನರರೂ ಭೂತ ಪ್ರೇತಾದಿಗಳೂ ರಾಕ್ಷಸರೂ ಇನ್ನೂ ಎಲ್ಲ ಚರಾಚರ

ಜಂತುಗಳೂ ಉದ್ಭವಿಸುತ್ತಾರೆ. ಏಳು ಊರ್ಧ್ವ ಲೋಕಗಳು, ಏಳು ಪಾತಾಳಲೋಕಗಳು ಜನಿಸುತ್ತವೆ. ಭೂಲೋಕ ಸಪ್ತಸಾಗರ ಸಪ್ತದ್ವೀಪ ಕಾಂಚನ ಭೂಮಿ ಅಂಧಂತಮಸ್ಸುಗಳಿಂದ ಯುಕ್ತವಾಗಿ ಹುಟ್ಟಿ ನಡುವೆ ಜಂಬೂದ್ವೀಪದಲ್ಲಿ ಪುಣ್ಯಕ್ಷೇತ್ರವಾದ ಭಾರತವನ್ನೂ ಅದರಲ್ಲಿ ಗಂಗಾದಿ ತೀರ್ಥಗಳನ್ನೂ ಒಳಗೊಂಡಿರುತ್ತದೆ. ಈ ಎಲ್ಲ ಲೋಕಗಳಿಗಿಂತ ಮೇಲೆ ವೈಕುಂಠವಿದೆ. ಅದು ಯಾವುದನ್ನೂ ಆಶ್ರಯಿಸದೆ ನಿಂತಿದೆ. ವೇದಗಳಿಗೂ ಅದು ವರ್ಣನೆಗೆ ನಿಲುಕದುದು. ಯೋಗಿಗಳು ಭಕ್ತರು ಹೊರತು ಇನ್ನಾರೂ ಅದನ್ನು ಕಾಣಲಾರರು. ವೈಕುಂಠಕ್ಕಿಂತಲೂ ಮೇಲೆ ಐವತ್ತುಕೋಟಿ ಯೋಜನದ ಎತ್ತರದಲ್ಲಿ ಗೋಲೋಕವಿದೆ.

ಗೋಲೋಕ ನಿತ್ಯ. ಬಹಳ ರಮ್ಯವಾಗಿದೆ. ನೂರಾರು ಶಿಖರಗಳುಳ್ಳ ಬೆಟ್ಟ, ಪುಣ್ಯಕರವಾದ ವೃಂದಾವನ, ರಾಸಮಂಡಲ ಮತ್ತು ವಿರಜಾ ನದಿಗಳಿಂದ ಕೂಡಿದೆ. ನದಿಯ ಅಗಲ ಕೋಟಿ ಯೋಜನ. ಉದ್ದ ಅದಕ್ಕಿಂತ ನೂರರಷ್ಟು. ಆ ನದಿಯಲ್ಲಿ ಅಮೂಲ್ಯವಾದ ವಜ್ರ ಮಾಣಿಕ್ಯ ಕೌಸ್ತುಭಾದಿ ಮಣಿಗಳಿವೆ. ಎಲ್ಲೆಲ್ಲೂ ಅಮೂಲ್ಯ ರತ್ನಮಯವಾದ ಮನೆಗಳಿವೆ. ವಿಶ್ವಕರ್ಮನೂ ಅಂಥ ಮನೆಗಳನ್ನು ನೋಡಿರಲು ಶಕ್ಯವಿಲ್ಲ. ಗೋಪಿಯರೂ ಗೋಪಾಲಕರೂ ಕಾಮಧೇನುಗಳೂ ಅಲ್ಲಿ ವಾಸಿಸುತ್ತಾರೆ. ಅಸಂಖ್ಯ ಪಾರಿಜಾತಾದಿ ಕಲ್ಪವೃಕ್ಷಗಳು ಅಸಂಖ್ಯ ಸರೋವರಗಳೂ. ಅನೇಕ ಕೋಟಿ ಪುಷ್ಪೋದ್ಯಾನಗಳು ರಾಸಮಂಡಲದಲ್ಲಿವೆ. ಮನೆಗಳಲ್ಲಿ ಗೋಪ ಗೋಪಿಯರ ವಿಲಾಸಕ್ಕೆ ರತ್ನದೀಪಗಳು ಹೂವಿನ ಹಾಸಿಗೆಗಳು, ಕಸ್ತೂರೀ ಕುಂಕುಮಾದಿ ಸುಗಂಧ ದ್ರವ್ಯಗಳು, ತಾಂಬೂಲಾದಿ ಭೋಗಪದಾರ್ಥಗಳು ಸುಗಂಧಧೂಪಗಳು ರತ್ನ ಕನ್ನಡಿಗಳು. ಮೂರು ಕೋಟಿ ದಾಸಿಯರು. ವೃಂದಾವನದಲ್ಲಿ ಮಂದಾರಾದಿ ಕಲ್ಪವೃಕ್ಷಗಳು ಕಾಮಧೇನುಗಳು ಪುಷ್ಪೋದ್ಯಾನಗಳು ಕ್ರೀಡಾ ಸರೋವರಗಳು ರಾಸಯೋಗ್ಯ ಸ್ಥಳಗಳು ರತಿ ಮಂದಿರಗಳು ಇವೆಲ್ಲವೂ ಮನೋಹರವಾಗಿವೆ. ಅಸಂಖ್ಯ ಗೋಪಿಯರು ಈ ವೃಂದಾವನವನ್ನು ರಕ್ಷಿಸುತ್ತಿದ್ದಾರೆ. ಅದು ವರ್ತುಲಾಕಾರವಾಗಿದ್ದು ಮೂರು ಲಕ್ಷ ಯೋಜನ ವಿಸ್ತಾರವಾಗಿದೆ. ಅಲ್ಲಿ ಒಂದು ಮನೋಹರವಾದ ಅಕ್ಷಯ ವಟವೃಕ್ಷ ಸಾವಿರ ಯೋಜನ ಎತ್ತರವಾಗಿದ್ದು ಸುತ್ತಲೂ ಅದರ ನಾಲ್ಕರಷ್ಟು ವಿಸ್ತಾರವಾಗಿದೆ. ಗೋಪಿಯರಿಗೆ ಅದು ಕಲ್ಪವೃಕ್ಷ. ಬೇಡಿದ್ದನ್ನು ಕೊಡುತ್ತದೆ. ಮೂರುಲಕ್ಷ ರಾಧೆಯ ದಾಸಿಯರು ಅದರ ಬುಡದಲ್ಲಿ ವಿರಜಾನದೀತೀರದ ತಂಪಾದ ಸುಗಂಧ ಯುಕ್ತವಾದ ಗಾಳಿಯನ್ನು ಸೇವಿಸುತ್ತಾರೆ. ರಾಧೆ ಅವರ ನಡುವೆ ವಿಹರಿಸುತ್ತಾಳೆ. ಅವಳು ನನ್ನ ಪ್ರಾಣಪ್ರಿಯೆ. ಬ್ರಹ್ಮಾದಿ ದೇವತೆಗಳಿಂದಲೂ ಮುನಿಗಳಿಂದಲೂ ವಂದಿತೆ. ಅವಳೆ ಶ್ರೀದಾಮನ ಶಾಪದಿಂದ ಈಗ ವೃಷಭಾನುವಿನ ಮಗಳಾಗಿ ಜನಿಸಿದ್ದಾಳೆ. ಅಪ್ಪ, ಹೀಗೆ ಬ್ರಹ್ಮಾಂಡ ಸೃಷ್ಟಿಯ ಬಗ್ಗೆ ಎಲ್ಲವನ್ನೂ ಸಂಕ್ಷೇಪವಾಗಿ ಹೇಳಿದ್ದೇನೆ. ಇನ್ನೇನು ಕೇಳ ಬಯಸುವಿ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ಭಗವನ್ನಂದಸಂವಾದದಲ್ಲಿ ಎಂಬತ್ತನಾಲ್ಕನೆ ಅಧ್ಯಾಯ ಮುಗಿಯಿತು.*

**ನಂದ:-** ಕೃಷ್ಣ, ನಾಲ್ಕೂ ವರ್ಣದವರ ಭಕ್ಷ್ಯ ಅಭಕ್ಷ್ಯಗಳನ್ನೂ ಜೀವಿಗಳ ಕರ್ಮವಿಪಾಕವನ್ನೂ ಹೇಳು. ಸರ್ವೇಶ್ವರನಾದ ನಿನ್ನನ್ನು ಹೊರತು ಯಾರಲ್ಲಿ ಇದನ್ನು ಕೇಳಲಿ?

**ಕೃಷ್ಣ:-** ನಾಲ್ಕು ವರ್ಣದವರ ಭಕ್ಷ್ಯ ಅಭಕ್ಷ್ಯಗಳ ಬಗ್ಗೆ ವೇದೋಕ್ತ ಕ್ರಮದಿಂದ ಹೇಳುತ್ತೇನೆ. ಕಬ್ಬಿಣದ ಪಾತ್ರೆಯಲ್ಲಿ ನೀರು ಹಾಲು ಮೊಸರು ಮುಂತಾದುವನ್ನು ಅನ್ನ ಜೇನು ಎಳನೀರು ಬೆಲ್ಲ ಹಣ್ಣು ಗಡ್ಡೆಗಳನ್ನು ಸೇವಿಸಬಾರದೆಂದು ಮನು ಹೇಳಿದ್ದಾನೆ. ಕಂಚಿನ ಪಾತ್ರೆಯಲ್ಲಿ ಎಳನೀರನ್ನೂ ತಾಮ್ರ ಪಾತ್ರೆಯಲ್ಲಿ ಜೇನು ಹಾಲುಗಳನ್ನೂ ಸೇವಿಸಿದರೆ ಮದ್ಯಪಾನದ ಪಾಪ ಬರುತ್ತದೆ. ಹಾಲಿಗೆ ಉಪ್ಪು ಬೆರೆಸಿ ಕುಡಿದರೆ ಗೋಮಾಂಸ ತಿಂದ ಪಾಪ. ಜೇನಿನೊಡನೆ ತುಪ್ಪ ಎಣ್ಣೆ ಬೆಲ್ಲ ಸೇವಿಸಬಾರದು. ಎಮ್ಮೆಯ ಹಾಲು ಮೊಸರು ತುಪ್ಪ ಅವುಗಳಲ್ಲಿ ಮಾಡಿದ ಭಕ್ಷ್ಯಗಳು, ಗಂಡನೂ ಮಕ್ಕಳೂ ಇಲ್ಲದವರ ಅನ್ನ, ಇವನ್ನು ಸೇವಿಸಬಾರದು. ಒಂದು ಕೈಯಿಂದ ನೀರು ಕುಡಿಯಬಾರದು. ಇರುವೆಗಳಿಂದ ಕೂಡಿದ ಜೇನು ಹಾಲು ತುಪ್ಪ ಮೊಸರು ಬೆಲ್ಲ ಮುಂತಾದುವೂ ವರ್ಜ್ಯ. ಪಕ್ಷಿಗಳೂ ಕೀಟಗಳೂ ತಿಂದ ಹಣ್ಣು ಅಭೋಜ್ಯ. ಶೂದ್ರರು ಪಾಕಮಾಡಿದ ಅನ್ನ ಭಕ್ಷ್ಯಗಳು ಬ್ರಾಹ್ಮಣರಿಗೆ ವರ್ಜ್ಯ. ಅಶುಚಿಯಾದವರು ಮುಟ್ಟಿದ ನೀರು ಎಲ್ಲರಿಗೂ ಅಗ್ರಾಹ್ಯ.

ಜೀವಿಗಳ ಕರ್ಮವಿಪಾಕ ಪ್ರಬಲವಾದುದು. ಮಾಡಿದ ಕರ್ಮದ ಫಲವನ್ನು ಉಣದೆ ಕರ್ಮ ಅಳಿಯುವುದಿಲ್ಲ. ತೀರ್ಥಯಾತ್ರೆ ದೇವತಾರಾಧನೆಗಳಿಂದ ಸ್ವಲ್ಪ ಮಟ್ಟಿಗೆ ಕರ್ಮ ಪರಿಹಾರವಾಗಬಹುದು. ಯೋಗಿಗಳು ಕಾಯವ್ಯೂಹದಿಂದಲೂ ಕರ್ಮವನ್ನು ಪೂರ್ಣ ಅನುಭವಿಸಿ ಕಳೆಯಬಲ್ಲರು. ಪ್ರಾಯಶ್ಚಿತ್ತಗಳನ್ನು ಎಷ್ಟು ಮಾಡಿದರೂ ನನ್ನಲ್ಲಿ ಭಕ್ತಿಯಿರಿಸದಿದ್ದರೆ ಆ ಪ್ರಾಯಶ್ಚಿತ್ತಗಳು ಶುದ್ಧೀಕರಿಸಲಾರವು. ಹೆಂಡದ ಮಡಿಕೆಯನ್ನು ಯಾವ ನೀರೂ ಶುದ್ಧೀಕರಿಸದು. ಯಜ್ಞ ತಪಸ್ಸು ವ್ರತ ಉಪವಾಸ ತೀರ್ಥಯಾತ್ರೆ ದಾನ ಜಪ ನಿಯಮ ಭೂಪ್ರದಕ್ಷಿಣೆ ಪುರಾಣಶ್ರವಣ ಗುರು ದೇವತಾರಾಧನೆ ಸ್ವಧರ್ಮಾಚರಣೆ ಅತಿಥಿಪೂಜೆ ಬ್ರಾಹ್ಮಣಪೂಜೆ ಮುಂತಾದುವು ಯಾವುವೂ ವಿಷ್ಣುಭಕ್ತಿಯಿಲ್ಲದೆ ಕರ್ಮಪರಿಹಾರಕವಾಗಲಾರವು. ಬ್ರಾಹ್ಮಣನಿಗೆ ದಾನ ಮಾಡಿದರೆ ಪೂರ್ಣಫಲ. ಒಳ್ಳೆಯ ಹೊಲದಲ್ಲಿ ಬೀಜ ಬಿತ್ತಿದರೆ ಹೀಗೆ ಒಳ್ಳೆಯ ಫಲ ಸಿಗುವುದೋ ಹಾಗೆ. ಆದರೂ ಕರ್ಮದಿಂದ ಸ್ವರ್ಗ ಸಿಗಬಹುದು. ಮೋಕ್ಷ ದೊರಕದು. ಮೋಕ್ಷ ವಿಷ್ಣುವಿನ ಆರಾಧನೆಯೊಂದರಿಂದಲೆ ಸಿಗುವಂಥಹುದು. ಪಾಪಮಾಡಿದರೆ ನರಕವಾಸವೂ ಅನಂತರ ಹೀನಜನ್ಮವೂ

ವ್ಯಾಧಿಯೂ ಬರುವುದು. ಇವೆಲ್ಲವನ್ನೂ ಅನುಭವಿಸಿದಾಗಲೆ ಪಾಪ ಪರಿಹಾರ. ಗೋಹತ್ಯೆ ಬ್ರಹ್ಮಹತ್ಯೆಗಳನ್ನೂ ಬುದ್ಧಿಪೂರ್ವಕ ಉಪಪಾತಕಗಳನ್ನೂ ಮಾಡುವವರು ನರಕದಲ್ಲಿ ಹಾವಾಗಿ ಇನ್ನೊಂದು ಹಾವಿನ ಕಡಿತಕ್ಕೆ ತುತ್ತಾಗುವರು. ವಿಷಜ್ವಾಲೆಯಿಂದ ಹಸಿವು ಬಾಯಾರಿಕೆಗಳಿಂದ ವ್ಯಥೆಗೊಳಗಾಗುವರು. ಬಳಿಕ ಚಂಡಾಲಾದಿ ಹೀನ ಜನ್ಮಗಳೂ ಕುಷ್ಠಾದಿ ವ್ಯಾಧಿಗಳೂ ಬರುವುವು. ಬಳಿಕ ಲಕ್ಷಬ್ರಾಹ್ಮಣರಿಗೆ ಅನ್ನದಾನ ಮಾಡಿದಾಗ ಪಾಪಪರಿಹಾರ.

ಸ್ತ್ರೀಹತ್ಯೆ ಮಾಡಿದರೆ ಸ್ತ್ರೀರೋಮಗಳಷ್ಟು ವರ್ಷ ಕಾಲಸೂತ್ರ ನರಕವಾಸ. ಬಳಿಕ ಕ್ಷಯರೋಗ ಪ್ರಾಪ್ತಿ. ಲಕ್ಷ ಬ್ರಾಹ್ಮಣರಿಗೆ ಅನ್ನದಾನ ಮಾಡಿದಾಗ ಪಾಪ ಪರಿಹಾರ. ಭ್ರೂಣಹತ್ಯೆ ಮಾಡಿದರೆ ನೂರು ವರ್ಷ ಶುನೀಮುಖ ನರಕವಾಸ. ಬಳಿಕ ಕುದುರೆಯ ಜನ್ಮ. ಬಳಿಕ ವೈಶ್ಯ ಜನ್ಮದಲ್ಲಿ ಸ್ವರ್ಣದಾನದಿಂದ ಪಾಪ ಪರಿಹಾರ. ಬ್ರಾಹ್ಮಣ ಅಥವಾ ಕ್ಷತ್ರಿಯ ಯುದ್ಧದಲ್ಲಿ ಹೊರತು ಬೇರೆ ಕಾಲದಲ್ಲಿ ಕ್ಷತ್ರಿಯ ವಧೆ ಮಾಡಿದರೆ ಸಾವಿರ ವರ್ಷ ತಪ್ತಶೂಲ ನರಕವಾಸ. ಆನೆಯ ಜನ್ಮ, ಶೂದ್ರಜನ್ಮಗಳು, ಬಳಿಕ ಗಜದಾನದಿಂದ ಪಾಪಪರಿಹಾರ. ವೈಶ್ಯನನ್ನು ಅಥವಾ ಶೂದ್ರನನ್ನು ಕೊಲ್ಲುವ ವೈಶ್ಯ ನೂರುವರ್ಷ ಕ್ರಿಮಿಕುಂಡ ನರಕದಲ್ಲಿ ಇದ್ದು ಬೇಡರ ಜನ್ಮದಲ್ಲಿ ನೂರು ವರ್ಷ ಕ್ರಿಮಿವ್ಯಾಧಿಯನ್ನು ಅನುಭವಿಸಿ ಬ್ರಾಹ್ಮಣನಾಗಿ ಹುಟ್ಟಿ ತೀರ್ಥಕ್ಷೇತ್ರದಲ್ಲಿ ಅಶ್ವದಾನ ಮಾಡಿದಾಗ ಪಾಪ ಮುಕ್ತನಾಗುತ್ತಾನೆ. ವೈಶ್ಯನನ್ನು ಕೊಲ್ಲುವ ಶೂದ್ರನಿಗೂ ಅಷ್ಟೇ ಪಾಪವಿದೆ. ಶೂದ್ರಹಿಂಸೆ ಮಾಡುವ ಬ್ರಾಹ್ಮಣ ಅಶುಚಿಯಾಗುತ್ತಾನೆ. ಲಕ್ಷಗಾಯತ್ರೀ ಜಪದಿಂದ ಶುದ್ಧಿ.

ಕೋಳಿಯನ್ನು ಕೊಂದರೆ ಚತುರ್ವರ್ಣದವರಿಗೂ ನೂರು ವರ್ಷ ರೌರವ ನರಕ. ಬಳಿಕ ಕೋಳಿಯ ಜನ್ಮ. ಬಳಿಕ ಬ್ರಾಹ್ಮಣನಾಗಿ ಗಂಗಾಸ್ನಾನ ಮಾಡಿದಾಗ ಶುದ್ಧಿ. ಬೆಕ್ಕನ್ನು ಕೊಂದರೆ ಗಂಗಾಸ್ನಾನ ಮಾಡಬೇಕು. ಬ್ರಾಹ್ಮಣನಿಗೆ ಹದಿನೆಂಟು ತೊಲ ಉಪ್ಪು ದಾನ ಮಾಡಬೇಕು. ಸರ್ಪಹತ್ಯೆ ಮಾಡಿದರೆ ಬ್ರಹ್ಮಹತ್ಯೆಯ ಕಾಲಂಶ ಪಾಪ. ನೂರುವರ್ಷ ಅಸಿಪತ್ರ ನರಕವಾಸ. ಬಳಿಕ ಹಾವಿನ ಜನ್ಮ. ಬಳಿಕ ಮನುಷ್ಯನಾಗಿ ಅಲ್ಪಾಯುಷಿಯಾಗುತ್ತಾನೆ. ಬಳಿಕ ಆನೆ ಕುದುರೆಗಳಾಗಿ ಹುಟ್ಟಿ ಶೂದ್ರಜನ್ಮ ಪಡೆದು ವ್ಯಾಧಿಪೀಡಿತನಾಗುತ್ತಾನೆ. ನೂರುಮಂದಿ ಬ್ರಾಹ್ಮಣರಿಗೆ ಅನ್ನದಾನ ಮತ್ತು ರಜತದಾನಗಳಿಂದ ಶುದ್ಧಿ. ಕ್ಷುದ್ರಜಂತು ಹಿಂಸೆಯಿಂದ ಕ್ಷುದ್ರಜನ್ಮ ಪ್ರಾಪ್ತವಾಗುವುದು. ಆದರಿಂದ ಹಿಂಸೆ ಮಾಡದ ಜಂತುಗಳಲ್ಲಿ ಸದಾ ದಯೆ ದೋರಬೇಕು. ಕ್ರೂರ ಜಂತುಗಳನ್ನು ಹಿಂಸಿಸಿದರೆ ದೋಷವಿಲ್ಲ.

ಅಶ್ವತ್ಥಮರದ ಹಿಂಸೆಯಿಂದ ಬ್ರಹ್ಮಹತ್ಯೆಯ ಕಾಲಂಶ ಪಾಪ ಬರುತ್ತದೆ. ಅಸಿಪತ್ರ ನರಕದಲ್ಲಿ ನೂರುವರ್ಷವಾಸ. ಬಳಿಕ ಬೂರುಗಮರವಾಗಿ ಲಕ್ಷವರ್ಷವಿದ್ದು ವ್ಯಾಧಿಗ್ರಸ್ತ ಶೂದ್ರನಾಗಿ ಹುಟ್ಟುತ್ತಾನೆ. ಬ್ರಾಹ್ಮಣನಾಗಿ ಹುಟ್ಟಿ ಸುವರ್ಣದಾನ ಮಾಡಿದಾಗ ಪಾಪಮುಕ್ತಿ. ಸುಳ್ಳುಸಾಕ್ಷಿ ನೀಡುವುದು, ಕೃತಘ್ನತೆ, ವಿಶ್ವಾಸಘಾತುಕತನ, ಸ್ನೇಹಿತನನ್ನು ಕೊಲ್ಲುವುದು, ಬ್ರಾಹ್ಮಣನ ಧನ ಅಪಹರಿಸುವುದು, ಶೂದ್ರನ

ಶ್ರಾದ್ಧಾನ್ನ ಉಣ್ಣುವುದು, ಶೂದ್ರನ ಶವ ಸುಡುವುದು, ಶೂದ್ರನಿಗೆ ಅಡಿಗೆ ಮಾಡಿ ಜೀವಿಸುವುದು. ಎತ್ತಿನಿಂದ ಜೀವಿಸುವುದು, ಬಟ್ಟೆ ಒಗೆಯುವ ವೃತ್ತಿ, ಹಣಕ್ಕಾಗಿ ದೇವಪೂಜೆ ಮಾಡುವುದು ಈ ಪಾಪಗಳನ್ನು ಮಾಡಿದರೆ ಸಾವಿರ ವರ್ಷ ಕುಂಭೀಪಾಕ ನರಕ. ಸಾವಿರ ಕೋಟಿ ಹದ್ದಿನ ಜನ್ಮಗಳು, ನೂರು ಹಂದಿ ಜನ್ಮಗಳು, ಬಳಿಕ ವ್ಯಾಧಿಗ್ರಸ್ತನಾದ ಶೂದ್ರನಾಗಿ ಹುಟ್ಟಿ ನೂರು ತೊಲ ಚಿನ್ನದಾನ ಮಾಡಿದಾಗ ಪಾಪಮುಕ್ತಿ. ಬಟ್ಟೆ, ಹಾಲು ತುಪ್ಪ ಮುಂತಾದುವು ಬೆಳ್ಳಿ, ಮುತ್ತು ಇವುಗಳನ್ನೂ ಶೂದ್ರರ- ಧನವನ್ನೂ ಅಪಹರಿಸಿದರೆ ನೂರು ವರ್ಷ ಮೂತ್ರಕುಂಡ ನರಕವಾಸ. ಸಾವಿರ ವರ್ಷ ಬಕ ಜನ್ಮ. ಕುಷ್ಠವ್ಯಾಧಿಗ್ರಸ್ತನಾದ ಶೂದ್ರನ ಜನ್ಮ. ಬಳಿಕ, ಕುಷ್ಠ ಪೀಡಿತನಾದ ಬ್ರಾಹ್ಮಣನಾಗಿ ಹುಟ್ಟಿ ಹದಿನೆಂಟು ತೊಲ ಚಿನ್ನದಾನ ಮಾಡಿದಾಗ ಪಾಪಮುಕ್ತಿ. ಧಾನ್ಯಾಪಹಾರದಿಂದ ನೂರುವರ್ಷ ಅಮೇಧ್ಯಕುಂಡ ನರಕವಾಸ. ಏಳು ಜನ್ಮಗಳಲ್ಲಿ ದಾರಿದ್ರ್ಯದುಃಖ. ಚಿನ್ನವನ್ನು ಕದ್ದರೆ ಕುಷ್ಠರೋಗಿಯೂ ಪತಿತನೂ ಆಗುತ್ತಾನೆ. ಚಿನ್ನವನ್ನು ದಾನಪಡೆದರೆ ಅಮೇಧ್ಯಕುಂಡ ನರಕವಾಸ. ಬಳಿಕ ಬೇಡರ ಜನ್ಮ, ಬ್ರಾಹ್ಮಣನಾಗಿ ಹುಟ್ಟಿ ಚಿನ್ನದಾನ ಮಾಡಿದಾಗ ಪಾಪ ಪರಿಹಾರ. ಅಗಮ್ಯಾಗಮನದಿಂದ ರೌರವ ನರಕ. ಸಾಲಗ್ರಾಮದಾನ ಪಡೆದರೆ ಕಾಲಸೂತ್ರನರಕ ಪ್ರಾಪ್ತಿ. ಸದಾ ಕೋಪದಿಂದ ಏಳು ಜನ್ಮಗಳಲ್ಲಿ ಕತ್ತೆಯಾಗುತ್ತಾನೆ. ಸದಾ ಕಲಹ ಮಾಡಿದರೆ ಏಳು ಜನ್ಮಗಳಲ್ಲಿ ಕಾಗೆಯಾಗುತ್ತಾನೆ. ಅಹಂಕಾರದಿಂದ ಮತ್ತು ವೇದನಿಂದೆಯಿಂದ ಕಿವುಡನಾಗಿ ಹುಟ್ಟುತ್ತಾನೆ. ಸುಳ್ಳು ಮಾತಾಡಿದರೆ ಗಡ್ಡ ಮೀಸೆ ಇಲ್ಲದಾಗುತ್ತದೆ. ಕಟುನುಡಿಯಿಂದ ಹಲ್ಲಿಲ್ಲದಾಗುತ್ತದೆ. ನಿಜಸಂಗತಿಯನ್ನು ಅಪಲಾಪ ಮಾಡಿದರೆ ನಾಲಿಗೆ ಇಲ್ಲವಾಗುತ್ತದೆ. ಗ್ರಂಥಾಪಹಾರದಿಂದ ಮೂರ್ಖನೂ ವ್ಯಾಧಿಯುಕ್ತನೂ ಆಗುತ್ತಾನೆ. ದತ್ತಾಪಹಾರ ಮಾಡಿದರೆ ವಾಗ್ದಾನವನ್ನು ಮುರಿದರೆ ನರಕವಾಸ, ಮ್ಲೇಚ್ಛಜನ್ಮ. ಒಬ್ಬನೆ ಮೃಷ್ಟಾನ್ನ ಉಂಡರೆ ಕಾಲಸೂತ್ರ ನರಕವಾಸ. ಮಣ್ಣು ವಿಭೂತಿ ಗೋವಿನ ಸಗಣಿ ಮರಳು ಇವುಗಳ ಲಿಂಗವನ್ನು ಒಮ್ಮೆ ಪೂಜಿಸಿದರೆ ಒಂದು ಕಲ್ಪಕಾಲ ಸ್ವರ್ಗವಾಸ ಲಭಿಸುವುದು. ಬಳಿಕ ಭೂಮಿಯಲ್ಲಿ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ನೂರು ಲಿಂಗಪೂಜೆಗಳಿಂದ ರಾಜನಾಗುತ್ತಾನೆ. ಸಾವಿರ ಲಿಂಗ ಪೂಜೆಗಳಿಂದ ಚಕ್ರವರ್ತಿಯಾಗುತ್ತಾನೆ. ಹತ್ತು ಸಾವಿರ ಪೂಜೆಯಿಂದ ಭಾರತದೇಶಕ್ಕೆ ಒಡೆಯನಾಗುತ್ತಾನೆ. ಲಕ್ಷಲಿಂಗ ಪೂಜೆಯಿಂದ ಸಮಸ್ತ ಭೂಮಂಡಲಕ್ಕೆ ಒಡೆಯನಾಗುತ್ತಾನೆ.

ತೀರ್ಥಸ್ನಾನ ದಾನ ಬ್ರಾಹ್ಮಣಭೋಜನ ನಾರಾಯಣಾರ್ಚನ ತಪಸ್ಸುಗಳಿಂದ ಬ್ರಾಹ್ಮಣತ್ವ ವೈಷ್ಣವತ್ವ ಲಭಿಸುತ್ತದೆ. ವೈಷ್ಣವ ಬ್ರಾಹ್ಮಣನಿಂದ ಭೂಮಿ ಪಾವನವಾಗುವುದು. ಕುಲ ಉದ್ಧಾರವಾಗುವುದು. ಏಕಾದಶೀ ಕೃಷ್ಣಜನ್ಮಾಷ್ಟಮೀ ಶಿವರಾತ್ರಿ ಶ್ರೀರಾಮನವಮಿಗಳಲ್ಲಿ ಉಪವಾಸ ಮಾಡದ ಬ್ರಾಹ್ಮಣ ಪತಿತನಾಗುತ್ತಾನೆ. ಉಪವಾಸ ಸಾಮರ್ಥ್ಯವಿಲ್ಲದವನು ಹವಿಷ್ಯಾನ್ನ ಉಣಬಹುದು. ಅದಕ್ಕೂ ಅಶಕ್ತನಾದವನು ಬ್ರಾಹ್ಮಣರಿಗೆ ಭೋಜನ ಮಾಡಿಸಿದರೆ ಪಾಪಮುಕ್ತಿ. ಇಲ್ಲದಿದ್ದರೆ ಮೂಲೋಕದಲ್ಲಿ ಉತ್ಪನ್ನವಾಗುವ ಪಾಪಗಳೆಲ್ಲ ಅವನನ್ನೇ ಸೇರುತ್ತವೆ. ನರಕವಾಸ

ಲಭಿಸುತ್ತದೆ. ಬಳಿಕ ಚಂಡಾಲ ಜನ್ಮ ಬರುತ್ತದೆ. ಅರ್ಧ ರಾತ್ರಿ ಭೋಜನ ಮಾಡಿದರೆ ಸಾವಿರಕೋಟಿ ಜನ್ಮಗಳಲ್ಲಿ ಹದ್ದಾಗಿ ಹುಟ್ಟುತ್ತಾನೆ. ನೂರು ಜನ್ಮಗಳಲ್ಲಿ ಹಂದಿಯಾಗಿ ವನ್ಯಮೃಗವಾಗಿ ಹುಟ್ಟುತ್ತಾನೆ. ದೇವರ ಮೂರ್ತಿಗಳನ್ನು ಕದಿವವನು ಏಳು ಜನ್ಮಗಳಲ್ಲಿ ಕುರುಡ ಕಿವುಡ ದರಿದ್ರ ವ್ಯಾಧಿಯುಕ್ತನಾಗುತ್ತಾನೆ. ಭಾನುವಾರ ಮತ್ತು ಪಂಚಪರ್ವದಿನಗಳಲ್ಲಿ ಸ್ತ್ರೀ ತೈಲ ಮಧು ಮಾಂಸ ಸೇವಿಸಿದರೆ ಸಾವಿರ ವರ್ಷ ವಜ್ರದಂಷ್ಟ್ರನರಕ ವಾಸ ಲಭಿಸುವುದು. ಬಳಿಕ ಮ್ಲೇಚ್ಛ ಚಂಡಾಲ ವ್ಯಾಧಿಯುಕ್ತ ಶೂದ್ರಜನ್ಮಗಳು ಬರುತ್ತವೆ.

ಬ್ರಾಹ್ಮಣನನ್ನೂ ದೇವರನ್ನೂ ಕಂಡಾಗ ನಮಿಸದಿರುವವ ಮರಣ ಪರ್ಯಂತವೂ ಅಶುಚಿ ಎನಿಸುತ್ತಾನೆ. ಬ್ರಹ್ಮಹತ್ಯಾಪಾತಕಿಯಾಗುತ್ತಾನೆ. ಭಾರತದೇಶದಲ್ಲಿ ಬ್ರಾಹ್ಮಣನಾಗಿ ಹುಟ್ಟಲು ಅನೇಕ ಜನ್ಮಗಳಲ್ಲಿ ತಪಸ್ಸು ಮಾಡಿರಬೇಕು. ಸ್ವಧರ್ಮಾಚರಣೆ ಮಾಡುತ್ತಿರುವ ಬ್ರಾಹ್ಮಣ ಅಗ್ನಿಗಿಂತಲೂ ಪವಿತ್ರ, ತೇಜಸ್ವಿಯಾಗುತ್ತಾನೆ. ಅವನಿಗೆ ದೇವತೆಗಳೂ ಭಯಪಡುತ್ತಾರೆ. ನದಿಗಳಲ್ಲಿ ಗಂಗೆ, ತೀರ್ಥಗಳಲ್ಲಿ ಪುಷ್ಕರ, ಪಟ್ಟಣಗಳಲ್ಲಿ ಕಾಶಿ, ಜ್ಞಾನಿಗಳಲ್ಲಿ ಶಂಕರ, ಶಾಸ್ತ್ರಗಳಲ್ಲಿ ವೇದಗಳು, ವೃಕ್ಷಗಳಲ್ಲಿ ಅಶ್ವತ್ಥ, ತಪಸ್ಸುಗಳಲ್ಲಿ ವಿಷ್ಣುಪೂಜೆ, ವ್ರತಗಳಲ್ಲಿ ಉಪವಾಸ, ಇವು ಹೇಗೆ ಶ್ರೇಷ್ಠವೊ ಹಾಗೇ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣ ಶ್ರೇಷ್ಠ. ಅವನ ಪಾದಗಳಲ್ಲಿ ಎಲ್ಲ ತೀರ್ಥಗಳಿವೆ. ಅವನ ಪಾದದೂಳಿ ಸರ್ವವ್ಯಾಧಿ ಪರಿಹಾರಕ. ಅವನ ಆಶೀರ್ವಾದ ಸರ್ವಮಂಗಲದಾಯಕ.

ಈ ಕರ್ಮವಿಪಾಕಾಧ್ಯಾಯವನ್ನು ಶ್ರವಣ ಮಾಡಿದವನು ಹೇಳಿದವನಿಗೆ ಸುವರ್ಣ ರಜತ ವಸ್ತ್ರ ತಾಂಬೂಲಗಳನ್ನು ನೀಡಬೇಕು. ಅದರಿಂದ ಗೋಲೋಕ ಪ್ರಾಪ್ತವಾಗುತ್ತದೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ಭಗವನ್ನಂದಸಂವಾದವೆಂಬ ಎಂಬತ್ತೈದನೆ ಅಧ್ಯಾಯ ಮುಗಿಯಿತು.*

—o—

## ವೃಂದೆಯ ಚರಿತ್ರೆ

**ಅಧ್ಯಾಯ - ೮೬**

**ನಂದ:-** ಕೇದಾರಕನ್ಯೆಯ ಪ್ರಸ್ತಾವದಿಂದ ಕರ್ಮವಿಚಾರವನ್ನು ಹೇಳಿರುವಿ. ಇನ್ನು ಮುಂದೆ ಕೇದಾರಕನ್ಯೆಯ ಬಗ್ಗೆ ಅವಳು ಯಾರು, ಕೇದಾರರಾಜನು ಯಾರು, ಯಾವ ವಂಶದವನು ಎಂದು ಮುಂತಾದುದನ್ನು ವರ್ಣಿಸು.

**ಶ್ರೀಕೃಷ್ಣ:-** ಹಿಂದೆ ಬ್ರಹ್ಮನ ಮಗನಾದ ಸ್ವಾಯಂಭುವ ಮನು ಮತ್ತು ಶತರೂಪೆಯರಿಗೆ ಪ್ರಿಯವ್ರತ ಉತ್ತಾನಪಾದರೆಂಬ ಇಬ್ಬರು ಮಕ್ಕಳಾದರು. ಉತ್ತಾನಪಾದನ ಮಗನೆ ಮಹಾ ಕೀರ್ತಿಶಾಲಿಯಾದ ಧ್ರುವ. ಧ್ರುವನ ಮಗ ನಂದಸಾವರ್ಣಿ. ಅವನ ಮಗ ಕೇದಾರ. ಕೇದಾರರಾಜ ಸಪ್ತದ್ವೀಪ ಯುಕ್ತವಾದ ಭೂಮಿಗೆ ಒಡೆಯನಾಗಿದ್ದ. ವಿಷ್ಣುಭಕ್ತನಾಗಿದ್ದ. ಅವನ ರಕ್ಷಣೆಗಾಗಿ ಅವನ ಆಸ್ಥಾನದಲ್ಲಿ ಸುದರ್ಶನಚಕ್ರವಿದ್ದಿತು. ವರುಣ ಅವನಿಗೆ ಚಿನ್ನದ ಕೊಂಬುಗಳುಳ್ಳ ಲಕ್ಷ ಗೋವುಗಳನ್ನೂ ಶುಭ್ರವಾದ ವಸ್ತ್ರಗಳನ್ನೂ ಕೊಟ್ಟಿದ್ದ. ರಾಜ ನಿತ್ಯವೂ ಬ್ರಾಹ್ಮಣರಿಗೆ ಯಥೇಚ್ಛ ಚಿನ್ನ ಮುತ್ತು ಮಾಣಿಕ್ಯ ಮುಂತಾದ ರತ್ನಗಳನ್ನೂ ಲಕ್ಷ ಆನೆಗಳನ್ನೂ ಮೃಷ್ಟಾನ್ನಗಳನ್ನೂ ಕೊಡುತ್ತಿದ್ದ. ನೂರುಲಕ್ಷ ಬ್ರಾಹ್ಮಣರಿಗೆ ನಿತ್ಯ ಅನ್ನದಾನ ಮಾಡುತ್ತಿದ್ದ. ಹಾಲು ತುಪ್ಪ ಮೊಸರು ಜೇನು ಮುಂತಾದವುಗಳ ಹೊಳೆಗಳೆ ಹರಿಯುತ್ತಿದ್ದುವು. ಬೆಳಿಗ್ಗೆಯಿಂದ ಸಾಯಂಕಾಲದವರೆಗೂ ಭೋಜನ ನಡೆದೇಯಿದ್ದಿತು. ರಾಜ ಮಾತ್ರ ಹಣ್ಣು ಗೆಡ್ಡೆಗಳನ್ನು ಸೇವಿಸಿ ಜಿತೇಂದ್ರಿಯನಾಗಿ ವಿಷ್ಣುವಿಗೇ ಎಲ್ಲವನ್ನೂ ಅರ್ಪಿಸಿ ಆರಾಧನೆ ಮಾಡುತ್ತಿದ್ದ. ನಾಲ್ಕು ಯೋಜನ ಪರ್ಯಂತ ಅಧಿಕಾರ ಉಳ್ಳ ರಾಜ ನೃಪನೆನಿಸುತ್ತಾನೆ. ಅದಕ್ಕೆ ನೂರರಷ್ಟು ಅಧಿಕವಾಗಿ ಅಧಿಕಾರವಿದ್ದರೆ ಮಂಡಲೇಶ್ವರನೆನಿಸುತ್ತಾನೆ. ಅವನಿಗಿಂತ ಹತ್ತರಷ್ಟು ಅಧಿಕವಾಗಿ ಅಧಿಕಾರ ಉಳ್ಳವ ರಾಜೇಂದ್ರ. ಇಂಥ ರಾಜೇಂದ್ರರು ಐದು ಲಕ್ಷ ಮಂದಿ ಕೇದಾರರಾಜನಿಗೆ ಆನೆ ಕುದುರೆ ರತ್ನಗಳು ಮುಂತಾದ ಅಮೂಲ್ಯ ವಸ್ತುಗಳನ್ನು ಕಪ್ಪವಾಗಿ ಕೊಡುತ್ತಿದ್ದರು.

ಲಕ್ಷ್ಮೀ ದೇವಿ ಒಂದು ಅಂಶದಿಂದ ರಾಜನ ಯಜ್ಞಕುಂಡದಿಂದ ಕನ್ಯೆಯಾಗಿ ಪ್ರಾದುರ್ಭವಿಸಿ 'ರಾಜನೆ, ನಾನು ನಿನ್ನ ಮಗಳು' ಎಂದಳು. ರಾಜ ಅವಳನ್ನು ಮಗಳೆಂದು ಪರಿಗ್ರಹಿಸಿ ರಾಣಿಯ ಕೈಗೆ ನೀಡಿದ. ಮುಂದೆ ಈ ಕನ್ಯೆ ವೃಂದೆ ಎಂಬ ಹೆಸರಿನಿಂದ ಪ್ರಸಿದ್ಧಳಾದಳು. ವೃಂದೆ ಶ್ರೀಹರಿಯನ್ನು ಪತಿಯನ್ನಾಗಿ ಪಡೆಯಲು ಯಮುನಾ ತೀರದ ಒಂದು ಸುಂದರವಾದ ವನದಲ್ಲಿ ತಪಸ್ಸು ಮಾಡಿದಳು. ವೃಂದೆ ತಪಸ್ಸು ಮಾಡಿದ ವನವೆ ವೃಂದಾವನವೆನಿಸಿತು. ತಪಸ್ಸು ಪೂರ್ಣವಾದಾಗ ಬ್ರಹ್ಮ ವರನೀಡಿದ- 'ಮುಂದಿನ ಜನ್ಮದಲ್ಲಿ ಕೃಷ್ಣನನ್ನು ಪಡೆಯುವಿ' ಎಂದು. ಒಮ್ಮೆ ವೃಂದೆ ನದೀತೀರದಲ್ಲಿ ಹೂವಿನ ಹಾಸಿಗೆ ಮೇಲೆ ರತ್ನಾಭರಣ ಭೂಷಿತಳಾಗಿ ಹಸನ್ಮುಖದಿಂದ ಒರಗಿದ್ದಳು. ಧರ್ಮ ಅವಳನ್ನು ಪರೀಕ್ಷಿಸಲು ಸುಂದರ ಯುವಕನ

ರೂಪದಿಂದ ಅಲ್ಲಿಗೆ ಬಂದ. ಮೈಗೆಲ್ಲ ಶ್ರೀಗಂಧ ಪೂಸಿಕೊಂಡು ರತ್ನಾಭರಣಗಳನ್ನು ತೊಟ್ಟು ಸ್ತ್ರೀಯರಿಗೆ ಆಕರ್ಷಕವಾದ ರೂಪದಿಂದ ಹೊಳೆಯುತ್ತ ಮುಗುಳುನಗುತ್ತ ನಿಂತ. ಕೋಟಿ ಮನ್ಮಥರ ಸೌಂದರ್ಯದಿಂದ ಹೊಳೆವ ಹದಿನಾರುವರ್ಷ ವಯಸ್ಸಿನ ಬಂಗಾರದಂಥ ಬಣ್ಣದ ಮೈಯ ಆತನನ್ನು ಕಂಡು ವೃಂದೆ ಎದ್ದು ನಿಂತು ಬರಮಾಡಿಕೊಂಡು ಸಮೀಪದಲ್ಲಿ ಕುಳ್ಳಿರಿಸಿಕೊಂಡಳು. ಭಕ್ತಿಯಿಂದ ಹಣ್ಣು ಗಡ್ಡೆ ನೀರುಗಳನ್ನಿತ್ತು ಸತ್ಕರಿಸಿದಳು, ನಮಸ್ಕರಿಸಿದಳು. ಬ್ರಹ್ಮತೇಜಸ್ಸಿನಿಂದ ಜ್ವಲಿಸುತ್ತಿದ್ದ ಬ್ರಾಹ್ಮಣರೂಪದ ಆ ಧರ್ಮ ವೃಂದೆ ನೀಡಿದ ಸತ್ಕಾರವನ್ನು ಸ್ವೀಕರಿಸಿ ಸಂತುಷ್ಟನಾಗಿ ನುಡಿದ -

**ಧರ್ಮ:-** ಸುಂದರಿ, ನೀನಾರು? ನಿನ್ನ ಹೆಸರೇನು? ಯಾರ ಮಗಳು? ಈ ನಿರ್ಜನ ಪ್ರದೇಶದಲ್ಲಿ ಏನು ಮಾಡುತ್ತಿರುವಿ? ಈ ನಿನ್ನ ತಪಸ್ಸಿನ ಉದ್ದೇಶವೇನು, ನಿನ್ನ ಬಯಕೆ ಏನು? ಹೇಳು.

**ವೃಂದೆ:-** ಬ್ರಾಹ್ಮಣ, ನಾನು ಕೇದಾರ ರಾಜನ ಮಗಳು ವೃಂದೆ. ಹರಿಯನ್ನು ಪತಿಯನ್ನಾಗಿ ಹೊಂದಲು ತಪಸ್ಸು ಮಾಡುತ್ತಿದ್ದೇನೆ. ನೀನು ನನಗೆ ಅಭೀಷ್ಟವಾದ ಈವರವನ್ನು ನೀಡಲು ಸಮರ್ಥನಿದ್ದರೆ ನೀಡು. ಇಲ್ಲದಿದ್ದರೆ ಈ ಪ್ರಶ್ನೆಯಿಂದೇನು?

**ಧರ್ಮ:-** ನಿರ್ಗುಣ ನಿರಾಕಾರನಾದ ಆ ಕೃಷ್ಣಪರಮಾತ್ಮನನ್ನು ಪತಿಯನ್ನಾಗಿ ಪಡೆಯಲು ಲಕ್ಷ್ಮೀ ಸರಸ್ವತಿಯರನ್ನು ಬಿಟ್ಟು ಇನ್ನಾರಿಗೆ ಸಾಧ್ಯ? ಚತುರ್ಭುಜನಾಗಿ ವೈಕುಂಠದಲ್ಲಿರುವ ಆ ಕೃಷ್ಣನಿಗೆ ಲಕ್ಷ್ಮೀ ಸರಸ್ವತಿಯರು ಪತ್ನಿಯರು. ದ್ವಿಭುಜನಾಗಿ ಕೊಳಲೂದುವ ಬಾಲಗೋಪಾಲ ರೂಪನಾಗಿ ಗೋಲೋಕದಲ್ಲಿರುವ ಆತನಿಗೆ ಮಹಾಲಕ್ಷ್ಮೀ ಸ್ವರೂಪಳಾದ ರಾಧೆ ಪತ್ನಿ. ಈ ಕೃಷ್ಣ ಒಮ್ಮೆ ಕಣ್ಣು ಮುಚ್ಚಿದರೆ ಬ್ರಹ್ಮನ ನೂರುವರ್ಷದ ಆಯುಷ್ಯ ಮುಗಿದಂತಾಗುವುದು. ಒಬ್ಬ ಇಂದ್ರನ ಆಯುಷ್ಯ ಎಪ್ಪತ್ತೆರಡು ಮಹಾಯುಗಗಳು. ಹದಿನಾಲ್ಕು ಇಂದ್ರರ ಆಯುಷ್ಯ ಬ್ರಹ್ಮನಿಗೆ ಒಂದು ಹಗಲು ಅಷ್ಟೇರಾತ್ರಿ. ಈ ಗಣನೆಯಿಂದ ಬ್ರಹ್ಮನ ನೂರು ವರ್ಷದ ಆಯುಷ್ಯ ಕೃಷ್ಣನಿಗೆ ಒಂದು ಬಾರಿ ಕಣ್ಣು ಮುಚ್ಚಿ ತೆರೆಯುವ ಕಾಲ. ಇಂಥ ಕೃಷ್ಣನನ್ನು ಅನೇಕ ಕೋಟಿ ಕಲ್ಪಗಳಲ್ಲಿ ಸನಕಾದಿ ಮುನಿಗಳೂ ಆದಿಶೇಷನೂ ಭಕ್ತಿಯಿಂದ ಆರಾಧಿಸಿಯೂ ಅವನನ್ನು ಒಲಿಸಿಕೊಳ್ಳಲಾಗಲಿಲ್ಲ. ಸೃಷ್ಟಿಕರ್ತನಾದ ಚತುರ್ಮುಖನೂ ನಾಲ್ಕು ಮುಖಗಳಿಂದ ಅವನನ್ನು ಸತತವಾಗಿ ಸ್ತುತಿಸುತ್ತಿದ್ದಾನೆ. ಸಂಹಾರ ಕರ್ತನಾದ ರುದ್ರನೂ ಐದು ಮುಖಗಳಿಂದ ಅವನನ್ನು ಸ್ತುತಿಸುತ್ತಿದ್ದಾನೆ. ಪ್ರಪಂಚವನ್ನೆ ಮಾಯೆಯಿಂದ ಮೋಹಗೊಳಿಸುವ ವಿಷ್ಣುಮಾಯೆಯೆನಿಸಿದ ನಾರಾಯಣೀ ದುರ್ಗೆಯೂ ಅವನನ್ನು ಸದಾ ಸ್ತುತಿಸುತ್ತಿದ್ದಾಳೆ. ಸಕಲ ಕಾರ್ಯಗಳಲ್ಲಿಯೂ ಮೊದಲಿಗೆ ಪೂಜೆಗೊಳ್ಳುವ ಗಣಪತಿಯೂ ಅವನನ್ನು ಭಕ್ತಿಯಿಂದ ಸ್ತುತಿಸುತ್ತಾನೆ. ಇವರು ಯಾರೂ ಸ್ತೋತ್ರದಿಂದ ಕೃಷ್ಣನನ್ನು ಒಲಿಸಿಕೊಳ್ಳಲು ಸಮರ್ಥರಾಗಲಿಲ್ಲ. ಸರಸ್ವತಿಯೂ ಅವನನ್ನು ಪೂರ್ತಿ ಸ್ತೋತ್ರ ಮಾಡಲು ಶಕ್ತಳಲ್ಲ. ಅವನ ಭಯದಿಂದಲೆ ವಾಯು ಬೀಸುತ್ತಾನೆ. ಸೂರ್ಯ ಬೆಳಗುತ್ತಾನೆ. ಇಂದ್ರ ಮಳೆಗರೆಯುತ್ತಾನೆ, ಅಗ್ನಿ ಸುಡುತ್ತಾನೆ, ಮೃತ್ಯು ಜೀವಿಗಳನ್ನು ಸೆಳೆಯುತ್ತಾನೆ,

ಪೃಥಿವಿ ಸರ್ವವನ್ನೂ ಧರಿಸುತ್ತಾಳೆ, ಸಮುದ್ರಗಳೂ ಪರ್ವತಗಳೂ ಸ್ಥಿರವಾಗಿವೆ. ಗಂಗೆ ಮುಕ್ತಿದಾಯಕಳಾಗಿದ್ದಾಳೆ. ತುಲಸಿ ಪವಿತ್ರಳೆನಿಸಿದ್ದಾಳೆ. ನವಗ್ರಹರೂ ಅಷ್ಟ ದಿಕ್ಪಾಲಕರೂ ಅವನಿಗೆ ಅಂಜುತ್ತಾರೆ. ಇಂಥ ಕೃಷ್ಣನನ್ನು ನೀನು ಪತಿಯನ್ನಾಗಿ ಪಡೆಯಲು ಬಯಸುವುದು ಯುಕ್ತವಲ್ಲ. ಅವನು ಗೋಲೋಕದಲ್ಲಿ ರಾಧೆಗೆ ಮಾತ್ರ ವಶನಾಗುತ್ತಾನೆ. ಆದ್ದರಿಂದ ನೀನು ನನ್ನನ್ನೇ ಸೇವಿಸು. ನಾನು ರಾಜರುಗಳಿಗೆಲ್ಲ ಒಡೆಯ. ದೇವ ದಾನವರಿಗಿಂತ ಪ್ರಬಲ. ಆದ್ದರಿಂದ ನೀನು ನನ್ನವಳಾದರೆ ಮೂಲೋಕದಲ್ಲಿ ಲಭ್ಯವಿರುವ ಎಲ್ಲ ಸುಖ ನಿನ್ನದಾಗುತ್ತದೆ. ಏಳು ಸಮುದ್ರಗಳಾಚೆ ದೇವತೆಗಳ ವಿಹಾರಕ್ಕಾಗಿ ವಿಧಾತ ನಿರ್ಮಿಸಿದ ಪಟ್ಟಣದಲ್ಲಿ ನನ್ನೊಡನೆ ನೀನು ವಿಹರಿಸಬಹುದು. ದೇವೇಂದ್ರನ ನಂದನವನದಲ್ಲಾಗಲಿ ಸ್ವರ್ಣಮಯವಾದ ಲಂಕಾ ನಗರಿಯಲ್ಲಾಗಲಿ, ನಂದಕ ಪುಷ್ಪಭದ್ರಕಗಳಲ್ಲಾಗಲಿ, ಮೇರುಪರ್ವತದ ಗುಹೆಗಳಲ್ಲಾಗಲಿ, ಮಲಯಪರ್ವತದ ಶ್ರೀಗಂಧ ಜಾಜಿ ಮಲ್ಲಿಗೆ ಕೇದಿಗೆ ಸಂಪಿಗೆಗಳ ಪರಿಮಳಯುಕ್ತ ಮನೋಹರ ವನಪ್ರದೇಶಗಳಲ್ಲಾಗಲಿ ಕ್ಷೀರಸಾಗರದಲ್ಲಾಗಲಿ ನನ್ನೊಡನೆ ನೀನು ಸುಖವಾಗಿ ವಿಹರಿಸಬಹುದು. ಬ್ರಹ್ಮಲೋಕದಲ್ಲಾಗಲಿ ಇಂದ್ರ ವರುಣ ವಾಯು ಯಮ ಕುಬೇರ ಅಗ್ನಿ ಧರ್ಮ ಚಂದ್ರ ಲೋಕಗಳಲ್ಲಾಗಲಿ ರತ್ನದ್ವೀಪ ಮಣಿದ್ವೀಪ ಚಂದ್ರ ಸರೋವರಗಳಲ್ಲಾಗಲಿ ನಾವು ವಿಹರಿಸಬಹುದು.

ಹೀಗೆ ಹೇಳುತ್ತ ವೃಂದೆಯನ್ನು ಧರ್ಮ ಸಮೀಪಿಸಿದ. ಶೀಲಪರೀಕ್ಷೆಗಾಗಿಯೆ ಆತ ಬಂದಿದ್ದರೂ ಅದನ್ನರಿಯದೆ ವೃಂದೆ ಕೋಪಗೊಂಡು ನುಡಿದಳು-

'ಬ್ರಾಹ್ಮಣ, ತಾಳು, ಸೈರಿಸಿಕೊಳ್ಳು. ಸೈರಣೆಯೊಂದೆ ಬ್ರಾಹ್ಮಣರಿಗೆ ಎಲ್ಲ ತಪಸ್ಸುಗಳಿಗೆ ಮೂಲ. ಅದನ್ನು ಕಳೆದುಕೊಂಡು ಪರಸ್ತ್ರೀಸಂಗ ಮಾಡುವುದು ಅಧರ್ಮಿಗಳ ಸ್ವಭಾವ. ಅವರು ಆ ಅಧರ್ಮದಿಂದಲೆ ಅನಿಷ್ಟಗಳಿಗೀಡಾಗುವರು. ಸರ್ವನಾಶ ಹೊಂದುವರು. ಶೀಲವತಿಯರನ್ನು ಬಲಾತ್ಕರಿಸಿದರೆ ತಾಯಿಗೆ ಗಂಡನೆನಿಸಿದ ಪಾಪ. ಬ್ರಹ್ಮಹತ್ಯೆಗಿಂತ ನೂರರಷ್ಟು ಪಾಪ. ಸೂರ್ಯ ಚಂದ್ರರಿರುವಷ್ಟು ಕಾಲ ಕುಂಭೀಪಾಕ ನರಕಪ್ರಾಪ್ತಿ. ಒಂದು ಕ್ಷಣದ ಸುಖಕ್ಕೆ ಚಿರಕಾಲ ದುಃಖ ಅನುಭವಿಸಬೇಕಾಗುವುದು. ಇದು ದೀಪ ಜ್ವಾಲೆಗೆ ಪತಂಗ ಬಿದ್ದಂತೆ. ಗಾಳದ ಮಾಂಸದ ಚೂರಿಗೆ ಮೀನು ಸಿಕ್ಕಿಕೊಂಡಂತೆ. ಹಸಿದವ ವಿಷಬೆರೆತ ಅನ್ನ ಉಂಡಂತೆ. ಬಾಯಾರಿದವ ಮೇಲೆ ಹಾಲು ಒಳಗೆ ವಿಷ ತುಂಬಿದ ಪಾತ್ರೆ ಎತ್ತಿಕೊಂಡಂತೆ. ಪರಸ್ತ್ರೀಯ ಶರೀರ ನೋಡಲು ಸುಂದರವಾದರೂ ಅಧರ್ಮಕ್ಕೆ, ನಾಶಕ್ಕೆ, ನರಕ ಪ್ರಾಪ್ತಿಗೆ, ,ಯಮದಂಡಕ್ಕೆ ಮೂಲವೆನಿಸುತ್ತದೆ. ಬ್ರಾಹ್ಮಣ, ನೀನು ಈ ಪ್ರದೇಶ ನಿರ್ಜನವೆಂದುಕೊಂಡಿದ್ದರೆ ಅದು ತಪ್ಪು. ಎಲ್ಲದೇವತೆಗಳೂ ಲೋಕಪಾಲಕರೂ ಇಲ್ಲಿ ಇದ್ದಾರೆ. ಎಲ್ಲರ ಕರ್ಮಸಾಕ್ಷಿಯಾಗಿ ಜಾಜ್ವಲ್ಯಮಾನನಾಗಿರುವ ಧರ್ಮ ಇಲ್ಲಿಯೂ ಇದ್ದಾನೆ. ಪಾಪಿಗಳನ್ನು ಶಿಕ್ಷಿಸುವ ಯಮನೂ ಇದ್ದಾನೆ. ಸ್ವಯಂ ಕೃಷ್ಣಪರಮಾತ್ಮನಿದ್ದಾನೆ. ದುರ್ಗೆ ಶಿವ ಬ್ರಹ್ಮರಿದ್ದಾರೆ. ಎಲ್ಲ ಪ್ರಾಣಿಗಳಲ್ಲಿಯೂ ಕರ್ಮಸಾಕ್ಷಿಗಳಾಗಿ ಬುದ್ಧಿ ಮನ ಇಂದ್ರಿಯಗಳ ದೇವತೆಗಳಿದ್ದಾರೆ. ಎಲ್ಲಿ ಏಕಾಂತ ಪ್ರದೇಶವಿದೆ? ಎಲ್ಲಿ ರಹಸ್ಯವಿದೆ? ನಿನಗೆ ಇದರ

ಅರಿವಿಲ್ಲ. ಕ್ಷಮಿಸು, ಬ್ರಾಹ್ಮಣ, ಬ್ರಾಹ್ಮಣನನ್ನು ಕೊಲ್ಲಬಾರದೆಂದು ನಿನ್ನನ್ನು ಬಿಟ್ಟಿದ್ದೇನೆ. ಇಲ್ಲದಿದ್ದರೆ ಈಗಲೆ ಸುಟ್ಟು ಭಸ್ಮ ಮಾಡಬಲ್ಲೆ. ಆದ್ದರಿಂದ ಹೊರಟು ಹೋಗು.

ಬ್ರಾಹ್ಮಣ, ನಾನು ತಪಸ್ಸನ್ನು ಪ್ರಾರಂಭಿಸಿ ಇಂದಿಗೆ ಒಂದು ನೂರುಎಂಟು ಯುಗಗಳೇ ಸಂದಿವೆ. ಈಗ ನನ್ನ ತಂದೆತಾಯಿಗಳಿಲ್ಲ. ಅವರ ಗೋತ್ರವೂ ಇಲ್ಲ. ಸರ್ವಾಂತರ್ಯಾಮಿಯಾದ ಕೃಷ್ಣನೆ ನನಗೆ ರಕ್ಷಕ. ಅವನು ಸ್ಥಾಪಿಸಿದ ಧರ್ಮ ನನ್ನನ್ನು ರಕ್ಷಿಸುತ್ತಿದೆ. ಸೂರ್ಯ, ಚಂದ್ರ, ವಾಯು, ಅಗ್ನಿ, ಬ್ರಹ್ಮ, ಶಿವ, ದುರ್ಗೆಯರು ನನ್ನನ್ನುರಕ್ಷಿಸುತ್ತಿದ್ದಾರೆ. ಅನಾಥರಿಗೆ ಬಾಲರಿಗೆ ವೃದ್ಧರಿಗೆ ಎಲ್ಲ ದೇವತೆಗಳು ರಕ್ಷಣೆ ನೀಡುತ್ತಾರೆ. ಹಂಸದಲ್ಲಿ ಬಿಳುಪನ್ನು ಗಿಳಿಯಲ್ಲಿ ಹಸುರನ್ನು ನವಿಲಿನಲ್ಲಿ ಚಿತ್ರವನ್ನು ಇಟ್ಟ ಆ ಪರಮಾತ್ಮನೆ ನನ್ನನ್ನು ಸದಾ ಕಾಪಾಡುತ್ತಾನೆ. ನಾನು ಹೆಂಗಸೆಂದು ಧರ್ಮ ನನ್ನನ್ನು ಬಿಟ್ಟು ಹೋಗಲಾರದು. ಅದರಿಂದ ನೀನು ನನ್ನನ್ನು ತಾಯಿಯೆಂದು ತಿಳಿದು ಕ್ಷೇಮದಿಂದ ಹೊರಟು ಹೋಗು.

ಹೀಗೆ ಹೇಳಿ ವೃಂದೆ ಭೂಮಿಯಂತೆ ನಿಶ್ಚಲಳಾಗಿ ನಿಂತಳು. ಬ್ರಾಹ್ಮಣ ಇನ್ನೂ ತನ್ನ ಕಡೆಗೆ ಮುಂದುವರಿಯುತ್ತಿರುವುದನ್ನು ಕಂಡು ಕುಪಿತಳಾಗಿ ಕ್ಷಯಿಸು ಕ್ಷಯಿಸೆಂದು ಮೂರು ಬಾರಿ ಶಪಿಸಿದಳು. ಒಡನೆ ಸೂರ್ಯ ಬಂದು ತಡೆದ. ಬ್ರಹ್ಮ ವಿಷ್ಣು ಶಿವ ಮುಂತಾದವರೂ ಹೆದರಿ ಧಾವಿಸಿ ಬಂದರು. ಧರ್ಮ ಆಗಲೆ ಕ್ಷೀಣನಾಗಿ ನಿಶ್ಶೇಷ್ಟನಾಗಿದ್ದ. ವೃಂದೆಯ ಕೋಪಾಗ್ನಿಯಲ್ಲಿ ಬೆಂದು ಮಲಿನನಾಗಿದ್ದ. ದೇವತೆಗಳು ಅವನನ್ನು ಎದೆಗಪ್ಪಿಕೊಂಡು ಕಣ್ಣೀರು ಕರೆದರು. ವೃಂದೆಗೆ ಸಮಾಧಾನ ಹೇಳಿದರು.

**ವಿಷ್ಣು:-** ವೃಂದೆ, ಈತ ನನ್ನ ಭಕ್ತನಾದ ಧರ್ಮ. ಇವನನ್ನು ಕ್ಷಮಿಸು.

**ಬ್ರಹ್ಮ:-** ಧರ್ಮನಿಲ್ಲದಿದ್ದರೆ ಜಗತ್ತೆಲ್ಲವೂ ಅಂಧಕಾರ ಮಯವಾಗುವುದು ನಿಶ್ಚಿತ. ಸೂರ್ಯಚಂದ್ರರೂ ಶೇಷನೂ ಭೂಮಿಯೂ ನಡುಗುತ್ತಾರೆ.

**ಶಿವ:-** ಧರ್ಮನಿಲ್ಲದಿದ್ದರೆಜಗತ್ತೆನಾಶವಾದೀತು. ಅವನನ್ನು ಉಳಿಸು. ನಿನಗೆಶುಭವಾಗಲಿ.

**ಸೂರ್ಯ:-** ನಿನಗೆಅಭೀಷ್ಟವಾದವರಕೇಳು. ಆದರೆಧರ್ಮನನ್ನು ಉಳಿಸು. ಸೃಷ್ಟಿಯನ್ನುಕಾಪಾಡು.

**ಶೇಷ:-** ತಪಸ್ಸಿನಿಂದ ಧರ್ಮವನ್ನಾಚರಿಸುವೆ, ಧರ್ಮನನ್ನೆ ನಾಶ ಪಡಿಸುವೆ. ಏಕೆ? ಈಧರ್ಮನನ್ನು ಒಬ್ಬನನ್ನು ಕಾಪಾಡು. ಎಲ್ಲ ಧರ್ಮವೂ ನಿನ್ನನ್ನು ಕಾಪಾಡುತ್ತದೆ.

**ಚಂದ್ರ:-** ಬ್ರಹ್ಮನ ಆಜ್ಞೆಯಂತೆ ನಿನ್ನನ್ನು ಪರೀಕ್ಷಿಸಲು ಧರ್ಮ ಬ್ರಾಹ್ಮಣ ರೂಪದಿಂದ ಬಂದಿದ್ದಾನೆ. ಇದರಲ್ಲಿ ಅವನ ತಪ್ಪೇನಿಲ್ಲ. ಅವನಿಗೇಕೆ ಈಹಿಂಸೆ?

**ಇಂದ್ರ:-** ತಪಸ್ಸಿನಿಂದ ಧರ್ಮ, ಧರ್ಮದಿಂದ ಫಲ, ಮನುಷ್ಯರಿಗೆ. ಅಂಥ ಧರ್ಮ ಕ್ಷಯಿಸಿದರೆ ತಪಸ್ಸಿಗೆ ಫಲ ಹೇಗೆ ಸಿಕ್ಕೀತು?

**ವರುಣ:-** ಧರ್ಮನನ್ನು ಬದುಕಿಸಿದರೆ ಸನಾತನ ಧರ್ಮ ಉಳಿಯುತ್ತದೆ. ಅದು ಇಲ್ಲದಿದ್ದರೆ ಕರ್ಮಿಗಳ ಕರ್ಮವೆಲ್ಲ ನಿಷ್ಫಲವಾಗುವುದು.

**ವಾಯು:-** ಧರ್ಮನನ್ನು ಬದುಕಿಸು, ಜಗತ್ತನ್ನು ಪಾವನಗೊಳಿಸು. ಧರ್ಮನಾಶ ಹೊಂದಿದರೆ ನಿನ್ನ ತಪಸ್ಸಿನ ಪುಣ್ಯವೂ ಇಲ್ಲದಂತಾದೀತು.

**ಅಗ್ನಿ:-** ನೀನು ಈ ಭಾರತಭೂಮಿಗೆ ಧರ್ಮ ಸಂಪಾದನೆಗಾಗಿ ಬಂದಿರುವಿ. ಅದನ್ನು ಮರೆತು ಧರ್ಮನನ್ನು ನಾಶಗೊಳಿಸುತ್ತಿರುವೆ. ಹಾಗೆ ಮಾಡಬೇಡ. ಧರ್ಮನನ್ನು ಬದುಕಿಸು.

**ಯಮ:-** ವೇದೋಕ್ತ ಕರ್ಮ ಮಾಡುವವರಿಗೆ ಫಲವನ್ನು ಧರ್ಮಾನುಸಾರ ಕೊಡುತ್ತಿದ್ದಾನೆ. ಅಂಥ ಧರ್ಮನನ್ನು ಬೇಗನೆ ಬದುಕಿಸಿಕೊಡು.

ಹೀಗೆ ದೇವತೆಗಳಾಡಿದ ಮಾತುಗಳನ್ನು ಕೇಳಿ ವೃಂದೆ ಅವರಿಗೆ ನಮಿಸಿ ಹೇಳಿದಳು. 'ದೇವತೆಗಳೆ, ಈ ಬ್ರಾಹ್ಮಣ ಧರ್ಮನೆಂದು ನಾನು ತಿಳಿದಿರಲಿಲ್ಲ. ಆದರಿಂದ ಕೋಪಗೊಂಡು ಶಪಿಸಿದ್ದೇನೆ. ಈಗ ನಿಮ್ಮ ಅನುಗ್ರಹದಿಂದ ತಿರುಗಿ ಬದುಕಿಸುತ್ತೇನೆ.' ಹೀಗೆ ಹೇಳಿ ಧರ್ಮನಿಗೆ ಹರಸಿದಳು -

'ನಾನು ಸತ್ಯ ವಿಷ್ಣುಪೂಜೆ ವ್ರತ ತಪಸ್ಸುಗಳನ್ನು ಮಾಡಿರುವುದು ನಿಜವಾಗಿದ್ದರೆ, ನಾರಾಯಣ ಶಿವ ಬ್ರಹ್ಮಾದಿ ದೇವತೆಗಳು, ಯಜ್ಞ ತಪಸ್ಸುಗಳು ಸತ್ಯವಾಗಿರುವುದಾದರೆ ಈಬ್ರಾಹ್ಮಣರೂಪಿ ಧರ್ಮನ ಸಂತಾಪ ದೂರವಾಗಲಿ' ಅಷ್ಟರಲ್ಲಿ ಧರ್ಮನ ಪತ್ನಿ ಮೂರ್ತಿದೇವಿ ಶೋಕಾವಿಷ್ಟಳಾಗಿ ವಿಷ್ಣುಪಾದಗಳಿಗೆರಗಿ ಬೇಡಿಕೊಂಡಳು - 'ಹೇ ಪ್ರಭು, ಕರುಣಾಸಮುದ್ರ, ದೀನಬಂಧು, ನನ್ನಲ್ಲಿ ದಯೆದೋರು. ಬೇಗನೆ ನನ್ನ ಪತಿಯನ್ನು ಬದುಕಿಸಿಕೊಡು. ಪತಿಹೀನಳಾದ ನಾರಿ ಪಾಪಿಷ್ಠಳೆನಿಸುವಳು. ಕಣ್ಣಿಲ್ಲದ ಮುಖದಂತೆ ಪ್ರಾಣವಿಲ್ಲದ ಶರೀರದಂತೆ ಅಮಂಗಲಳೆನಿಸುವಳು. ಹೆಣ್ಣಿಗೆ ತಂದೆತಾಯಿಗಳು ಬಂಧುಗಳು ಏನು ಕೊಟ್ಟರೂ ಅದಕ್ಕೆ ಮಿತಿ ಇದೆ. ಪತಿಯಾದವನು ಕೊಡುವುದಕ್ಕೆ ಮಿತಿಯೆ ಇಲ್ಲ.' ಈ ಮಾತನ್ನು ಕೇಳಿ ಭಗವಂತ ವೃಂದೆಯನ್ನು ಕರೆದು ಹೇಳಿದ -

'ವೃಂದೆ, ನೀನು ತಪಸ್ಸು ಮಾಡಿ ಪಡೆದ ಬ್ರಹ್ಮಕಲ್ಪದವರೆಗಿನ ಆಯುಷ್ಯವನ್ನು ಧರ್ಮನಿಗೆ ಕೊಟ್ಟು ನೀನು ಗೋಲೋಕಕ್ಕೆ ಹೋಗು. ಬಳಿಕ ಶ್ವೇತವರಾಹ ಕಲ್ಪದಲ್ಲಿ ರಾಧೆಯ ಛಾಯೆಯಾಗಿ ವೃಷಭಾನುವಿನ ಮಗಳಾಗಿ ಜನಿಸುವಿ. ನನ್ನ ಅಂಶ ಸಂಭೂತನಾದ ರಾಪಾಣನೆಂಬವ ನಿನ್ನನ್ನು ಮದುವೆಯಾಗುತ್ತಾನೆ. ಆಗ ರಾಧೆಯೂ ಶ್ರೀದಾಮನ ಶಾಪದಿಂದ ವೃಷಭಾನುವಿನ ಮಗಳಾಗಿ ಜನಿಸಿರುತ್ತಾಳೆ. ಅವಳನ್ನು ರಾಪಾಣನಿಗೆ ಕೊಟ್ಟು ಮದುವೆ ಮಾಡು. ಆ ಸಮಯದಲ್ಲಿ ಅವಳು ನಿನ್ನನ್ನೇ ಕೊಟ್ಟು ತಾನು ಮಾಯವಾಗುತ್ತಾಳೆ. ಗೋಕುಲದ ಗೊಲ್ಲರೆಲ್ಲರೂ ನಿನ್ನನ್ನೆ ನಿಜವಾದ ರಾಧೆ ಎಂದು ತಿಳಿಯುತ್ತಾರೆ. ಆದರೆ ನಿಜವಾದ ರಾಧೆ ನನ್ನೆದೆಯಲ್ಲಿರುತ್ತಾಳೆ. ಛಾಯಾ ರಾಧೆಯಾದ ನೀನು ರಾಪಾಣನ ಬಳಿಯಲ್ಲಿರುತ್ತಿ. ರಾಧೆಯೊಡನೆ ರಾಸಕ್ರೀಡೆಯಾಡುವಾಗ ಎಲ್ಲ ಗೋಪಿಯರಂತೆ ನೀನೂ ನನ್ನ ಬಳಿ ಕ್ರೀಡಿಸುವಿ.' ಶ್ರೀಹರಿಯ ನುಡಿ ಕೇಳಿ ವೃಂದೆ ತನ್ನ ಆಯುಷ್ಯವನ್ನು ಧರ್ಮ ನಿಗಿತ್ತಳು. ಒಡನೆ ಧರ್ಮ ಮೊದಲಿಗಿಂತ ಸುಂದರನಾಗಿ ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುತ್ತ ಎದ್ದು ನಿಂತು ವಿಷ್ಣುವಿಗೆ ನಮಿಸಿದ.

**ವೃಂದೆ:-** 'ದೇವತೆಗಳೆ, ಕೇಳಿ. ನಾನು ಧರ್ಮನನ್ನು ಕ್ಷೀಣನಾಗೆಂದು ಮೂರು ಬಾರಿ ಶಪಿಸಿದ್ದೇನೆ. ನಾಲ್ಕನೆ ಬಾರಿಗೆ ಸೂರ್ಯ ತಡೆದುದರಿಂದ ಶಪಿಸಲಿಲ್ಲ. ನನ್ನ ಮಾತು ಸುಳ್ಳಾಗದು. ಅದರಿಂದ ಧರ್ಮ ಕೃತಯುಗದಲ್ಲಿ ಪೂರ್ಣನಾಗಿದ್ದರೂ ತ್ರೇತಾಯುಗದಲ್ಲಿ ಮೂರಂಶದಿಂದ, ದ್ವಾಪರದಲ್ಲಿ ಎರಡಂಶದಿಂದ, ಮತ್ತು ಕಲಿಯುಗ ಮೊದಲಿಗೆ ಒಂದೇ ಅಂಶದಿಂದ ಇದ್ದು ಕೊನೆಯಲ್ಲಿ ಹದಿನಾರನೆ ಒಂದಂಶದಿಂದ ಇರುತ್ತಾನೆ. ತಿರುಗಿ ಕೃತಯುಗದಲ್ಲಿ ಪೂರ್ಣನಾಗುತ್ತಾನೆ.' ಅಷ್ಟರಲ್ಲಿ ದೇವತೆಗಳು ನೋಡುತ್ತಿದಂತೆಯೆ ಗೋಲೋಕದಿಂದ ಅಮೂಲ್ಯ ರತ್ನಮಯವಾದ ಸುಂದರವಾದ ರಥ ವೇಗವಾಗಿ ಬಂದಿಳಿಯಿತು. ವೃಂದೆ ಹರಿಯನ್ನು ನಮಿಸಿದಳು. ಬ್ರಹ್ಮ ಶಿವ ಮುಂತಾದ ಎಲ್ಲ ದೇವತೆಗಳನ್ನೂ ನಮಿಸಿದಳು. ರಥವನ್ನೇರಿ ಗೋಲೋಕಕ್ಕೆ ಹೋದಳು. ದೇವತೆಗಳು ತಮ್ಮ ಲೋಕಗಳಿಗೆ ತೆರಳಿದರು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮ ಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಕೃಷ್ಣನಂದಸಂವಾದದಲ್ಲಿ ಎಂಬತ್ತಾರನೆ ಅಧ್ಯಾಯ ಮುಗಿಯಿತು.*



## ಧನ್ಯೋಪಾಖ್ಯಾನ

**ಅಧ್ಯಾಯ - ೮೭**

**ನಂದ:-** ಕೃಷ್ಣ, ವೇದಗಳಿಗೂ ಒಡೆಯನಾದ ನಿನ್ನನ್ನು ವೇದಗಳೆ ತಿಳಿಯಲಾರವು. ಬ್ರಹ್ಮ ರುದ್ರ ಶೇಷ ಮುಂತಾದ ದೇವತೆಗಳೂ ಅರಿಯಲಾರರು. ಆದರೂ ನನಗೆ ನಿನ್ನ ನಿಜಸ್ವರೂಪವನ್ನು ತಿಳಿಯುವ ಕುತೂಹಲ ಬಹಳವಾಗಿದೆ. ಅದರಿಂದ ನಿರ್ಜನವಾದ ಈಪ್ರದೇಶದಲ್ಲಿ ನನಗೆ ನೀನಾರೆಂಬುದನ್ನು ಹೇಳು. ನಂದ ಹೀಗೆ ಹೇಳುತ್ತಿರುವಷ್ಟರಲ್ಲಿಯೆ ಅಲ್ಲಿಗೆ ಅನೇಕ ಮಂದಿ ಬ್ರಹ್ಮರ್ಷಿಗಳು ಕೃಷ್ಣದರ್ಶನಕ್ಕಾಗಿ ಬಂದರು. ಪುಲಹ, ಪುಲಸ್ತ್ಯ, ಭೃಗು, ಅಂಗಿರಸ್, ಪ್ರಚೇತಸ್, ವಸಿಷ್ಠ, ದೂರ್ವಾಸ, ಕಣ್ವ, ಕಾತ್ಯಾಯನ, ಪಾಣಿನಿ, ಕಣಾದ, ಗೌತಮ, ಸನಕ, ಸನಂದನ, ಸನಾತನ, ಕಪಿಲ, ಆಸುರಿ, ವಾಯು, ಪಂಚಶಿಖ, ವಿಶ್ವಾಮಿತ್ರ, ವಾಲ್ಮೀಕಿ, ಕಶ್ಯಪ, ಪರಾಶರ, ವಿಭಾಂಡಕ, ಮರೀಚಿ, ಶುಕ್ರ, ಅತ್ರಿ, ಬೃಹಸ್ಪತಿ, ಗಾರ್ಗ್ಯ, ವಾತ್ಸ್ಯ, ವ್ಯಾಸ, ಜೈಮಿನಿ, ಮಿತವಾಕ್, ಋಷ್ಯಶೃಂಗ, ಯಾಜ್ಞವಲ್ಕ್ಯ, ಶುಕ, ಸೌಭರಿ, ಭರದ್ವಾಜ, ಸುಭದ್ರ, ಮಾರ್ಕಂಡೇಯ, ಲೋಮಶ, ವಿಟಂಕಣ, ಅಷ್ಟಾವಕ್ರ, ಶತಾನಂದ, ವಾಮದೇವ, ಭಾಗುರಿ, ಸಂವರ್ತ, ಉತಥ್ಯ, ನರ, ನಾರಾಯಣ, ನಾರದ, ಜಾಬಾಲಿ, ಪರಶುರಾಮ, ಅಗಸ್ತ್ಯ, ಪೈಲ, ಮೈತ್ರೇಯ, ಚ್ಯವನ, ವರರುಚಿ ಮುಂತಾದವರೆಲ್ಲ ಬಂದರು. ಕೃಷ್ಣ ಎದ್ದು ಅವರಿಗೆ ನಮಸ್ಕಾರ ಮಾಡಿ ಆಸನ ನೀಡಿ ಸತ್ಕಾರ ಮಾಡಿದ. ಕುಶಲ ಪ್ರಶ್ನೆ ಮಾಡಿದ.

ಅಷ್ಟರಲ್ಲಿ ಆಗಸದಲ್ಲಿ ಹೊಳೆಯುವ ತೇಜಃಪುಂಜನಾದ ಸನತ್ಕುಮಾರ ಮುನಿ ಕಾಣಿಸಿಕೊಂಡ. ಚಿನ್ನದ ಬಣ್ಣದಿಂದ ಹೊಳೆಯುತ್ತ ಐದು ವರ್ಷದ ನಗ್ನ

ಬಾಲಕನಂತೆ ಆತ ಕಾಣುತ್ತಿದ್ದ. ಎಲ್ಲ ಮುನಿಗಳೂ ಅವನಿಗೆ ನಮಸ್ಕರಿಸಿದರು. ಕೃಷ್ಣನೂ ನಮಸ್ಕರಿಸಿದ. ಆಸನವಿತ್ತು ಸತ್ಕರಿಸಿದ. ಮುನಿ ಹೇಳತೊಡಗಿದ - 'ಮುನಿಗಳೆ, ನಿಮ್ಮ ಕ್ಷೇಮದ ಬಗ್ಗೆ ಕೇಳುತ್ತೇನೆ, ಎಲ್ಲರ ಕ್ಷೇಮಕ್ಕೆ ಕಾರಣನಾದ ಕೃಷ್ಣನ ಕ್ಷೇಮದ ಬಗ್ಗೆ ಕೇಳುವುದು ನಿರರ್ಥಕ. ಆದ್ದರಿಂದ ನಿಮಗೆ ಕ್ಷೇಮವೇ? ಭಕ್ತಾನುಗ್ರಹಕ್ಕಾಗಿ ಶರೀರ ಧರಿಸಿ ಭೂಭಾರ ಹರಣಕ್ಕಾಗಿ ಅವತರಿಸಿರುವ ನಿರ್ಗುಣನಾದ ಈ ಕೃಷ್ಣಪರಮಾತ್ಮನ ದರ್ಶನಲಾಭ ನಿಮಗೆ ದೊರಕುತ್ತಿದೆ ತಾನೆ? ಅದಕ್ಕಾಗಿ ತಾನೆ ನೀವೆಲ್ಲರೂ ತಪಸ್ಸು ಮಾಡುತ್ತಿರುವಿರಿ?' ಈ ಮಾತನ್ನು ಕೇಳಿ ಕೃಷ್ಣ ಏನೂ ಅರಿಯದವನಂತೆ ಕೇಳತೊಡಗಿದ -

**ಕೃಷ್ಣ:-** ಮುನಿಯೆ, ಶರೀರಧಾರಿಗಳೆಲ್ಲರಿಗೂ ಕುಶಲ ಪ್ರಶ್ನೆ ಮಾಡಬೇಕಾದುದೇ. ಹೀಗಿರುವಾಗ ನನ್ನ ಬಗ್ಗೆ ಕುಶಲ ಪ್ರಶ್ನೆ ಹೇಗೆ ನಿರರ್ಥಕವೆನ್ನುತ್ತಿರುವೆ?

**ಸನತ್ಕುಮಾರ:-** ಪ್ರಭು, ಪ್ರಾಕೃತ ಶರೀರಧಾರಿಗಳಿಗೆ ಮಾತ್ರ ಕುಶಲ ಪ್ರಶ್ನೆ. ಅಪ್ರಾಕೃತ ನಿತ್ಯ ಶರೀರಿಯಾದ ನಿನ್ನ ಬಗ್ಗೆ ಕುಶಲ ಪ್ರಶ್ನೆ ಏಕೆ?

**ಕೃಷ್ಣ:-** ಶರೀರ ಧಾರಿಗಳೆಲ್ಲ ಪ್ರಾಕೃತ ಶರೀರಿಗಳೆ ಆಗಿರುತ್ತಾರೆ. ಅಪ್ರಾಕೃತವಾದ ಶರೀರವೆಂಬುದೆ ಇಲ್ಲ.

**ಸನತ್ಕುಮಾರ:-** ಶುಕ್ರ ಶೋಣಿತ ಮೇಲನದಿಂದಾದ ಶರೀರ ಮಾತ್ರವೆ ಪ್ರಾಕೃತವೆನಿಸುತ್ತದೆ. ಪ್ರಕೃತಿಗೊಡೆಯನಾದ ನಿನಗೆ ಅಂಥ ಪ್ರಾಕೃತ ಶರೀರ ಹೇಗೆ ಬಂದೀತು? ನಿನ್ನದು ಚಿನ್ಮಯವಾದ ನಿತ್ಯವಾದ ಶರೀರ. ಅದರಿಂದಲೆ ಚಿನ್ಮಯವಾದ ಎಲ್ಲ ಅವತಾರ ಶರೀರಗಳೂ ಹೊರಟು ಬರುತ್ತವೆ. ವೇದಗಳು ನಿನ್ನನ್ನು ಸನಾತನ ಜ್ಯೋತಿಃಸ್ವರೂಪನಾದ ಪರಮಾತ್ಮನೆಂದೆ ಹೊಗಳುತ್ತವೆ. ನಿನ್ನ ಮಾಯೆಯಿಂದಲೆ ನೀನು ಸಗುಣನೆನಿಸುವಿ ಎಂದು ವೇದ ವೇದಾಂಗಗಳು ಬಣ್ಣಿಸುತ್ತಿವೆ. ವೇದವೇತ್ತರೂ ಹಾಗೇ ತಿಳಿಯುತ್ತಾರೆ.

**ಕೃಷ್ಣ:-** ಮುನಿಯೆ, ನಾನು ಈಗ ವಸುದೇವನ ಮಗನಾಗಿದ್ದೇನೆ. ಶುಕ್ರ ಶೋಣಿತ ಮಯ ಶರೀರದಿಂದಲೆ ಇದ್ದೇನೆ. ನಾನು ಪ್ರಾಕೃತ ಶರೀರಿಯಲ್ಲವೆಂದೆ ಹೇಗೆ ಹೇಳುವಿ?

**ಸನತ್ಕುಮಾರ:-** ಕೃಷ್ಣ, ಪರಿಹಾಸ ಮಾಡಬೇಡ. ನೀನು ವಸುದೇವನ ಮಗನಾದ್ದರಿಂದ ವಾಸುದೇವನಲ್ಲ. ವಾಸು ಎಂದರೆ ಸಕಲ ಲೋಕಗಳಿಗೆ ಆವಾಸ ಸ್ಥಾನ ನೀನು. ರೋಮ ಕೂಪಗಳಲ್ಲಿ ಸಮಸ್ತ ವಿಶ್ವವನ್ನೆ ಧರಿಸಿದ ದೇವ. ಆದರಿಂದ ವಾಸುದೇವ. ಹೀಗೆ ನಾಲ್ಕು ವೇದಗಳಲ್ಲಿ ಪುರಾಣೇತಿಹಾಸಗಳಲ್ಲಿ ವರ್ಣಿಸಲಾಗಿದೆ. ಶುಕ್ರ ಶೋಣಿತಮಯ ದೇಹ ನಿನಗೆ ವೇದದಲ್ಲಿ ಎಲ್ಲಿ ಹೇಳಿದೆ? ಈ ವಿಷಯದಲ್ಲಿ ಈ ಮುನಿಗಳೆಲ್ಲ ಸಾಕ್ಷಿಗಳು. ಈ ಧರ್ಮನೆ ಸಾಕ್ಷಿ. ಎಲ್ಲ ವೇದಗಳೂ ಚಂದ್ರ ಸೂರ್ಯರೂ ಸಾಕ್ಷಿಗಳು. ಈ ಮಾತನ್ನು ಕೇಳಿ ಭೃಗುಮುನಿ ಎಲ್ಲ ಮುನಿಗಳ ಪರವಾಗಿ ಸನತ್ಕುಮಾರನನ್ನು ಪ್ರಶಂಸಿಸಿ ಸ್ವಾಗತಿಸಿ ಕುಶಲ ಪ್ರಶ್ನೆ ಮಾಡಿದ. ಆಗಮನ ಕಾರಣವನ್ನೂ ಕೇಳಿದ. ಕೃಷ್ಣನೂ ಮುನಿಯ ಆಗಮನ ಕಾರಣವನ್ನು ಪ್ರಶ್ನಿಸಿದ.

ಮುನಿ ತನ್ನಾಗಮನ ಕಾರಣವನ್ನು ತಿಳಿಸುತ್ತ ನುಡಿದ -

'ಭಗವನ್, ಕೃಷ್ಣ, ನೀನೆ ಧನ್ಯ, ನೀನೆ ಎಲ್ಲರಿಗೂ ಮಾನ್ಯ, ನೀನೆ ಸರ್ವೇಶ್ವರರಿಗೂ ಈಶ್ವರ. ನಿನಗಿಂತ ಮೇಲು ಇನ್ನಾರಿಲ್ಲ. ಈ ವಿಷಯವನ್ನು ನಿನ್ನಲ್ಲಿ ಖಚಿತ ಪಡಿಸಿಕೊಳ್ಳಲೆಂದೇ ನಾನು ಬಂದೆ.'

ಕೃಷ್ಣ ಸನತ್ಕುಮಾರನ ಮಾತನ್ನು ಅನುಮೋದಿಸಿದ. ಆದರೆ ದಕ್ಷಿಣಾಸಹಿತನಾಗಿಯೆ ತಾನು ಎಲ್ಲ ಯಜ್ಞ ವ್ರತ ತಪಸ್ಸುಗಳಿಗೆ ಫಲದಾಯಕನಾಗಿ ಧನ್ಯನೂ ಮಾನ್ಯನೂ ಆಗಿರುತ್ತೇನೆ ಎಂದ. ಮುನಿ ಇದನ್ನು ಕೇಳಿದೊಡನೆ ನನ್ನ ಸಂಶಯ ಪರಿಹಾರವಾಯಿತೆನ್ನುತ್ತ ಬೇಗನೆ ಅಲ್ಲಿಂದ ಹೊರಟ. ಮುನಿಗಳೆಲ್ಲರೂ ವಿಸ್ಮಿತರಾದರು. ಈ ಒಗಟಿನ ಮಾತಿನ ಆಂತರ್ಯ ತಿಳಿಯುವ ಕುತೂಹಲದಿಂದ ಸನತ್ಕುಮಾರನನ್ನು ತಡೆದು ನಿಲ್ಲಿಸಿ ಹೇಳಿದರು - 'ಮಹಾತ್ಮ, ನೀನು ಕೃಷ್ಣನ ಮುಂದೆ ಅದೇನು ಪ್ರಶ್ನೆ ಮಾಡಿದೆ? ಅದಕ್ಕೆ ಅವನೇನು ಉತ್ತರವಿತ್ತ? ನಿನ್ನ ಸಂದೇಹ ಹೇಗೆ ಪರಿಹಾರ ಗೊಂಡಿತು? ಎಲ್ಲವನ್ನೂ ವಿಸ್ತಾರವಾಗಿ ನಮಗೆ ಹೇಳು.'

**ಸನತ್ಕುಮಾರ:-** 'ನಾನು ಗೋಲೋಕಕ್ಕೆ ಹೋದೆ; ಅಲ್ಲಿ ರಾಧಾರಮಣ ದರ್ಶನ ನೀಡಲಿಲ್ಲ. ವೈಕುಂಠಕ್ಕೆ ಹೋದೆ; ಅಲ್ಲಿ ನಾರಾಯಣ ಸಿಗಲಿಲ್ಲ. ಕ್ಷೀರ ಸಮುದ್ರಕ್ಕೆ ಹೋದೆ; ಅಲ್ಲಿಯೂ ಶ್ರೀಹರಿ ಇರಲಿಲ್ಲ. ಸೋತುಹೋದೆ. ವಿಷಣ್ಣನಾದೆ. ಕ್ಷೀರಸಮುದ್ರ ತೀರದಲ್ಲಿ ಮಿಂದೆ. ಅಲ್ಲಿ ವಿಶಾಲವಾದ ಮರಳಿನ ನಡುವೆ ನೂರುಯೋಜನ ಪ್ರಮಾಣದ ಒಂದು ಆಮೆಯನ್ನು ಕಂಡೆ. ಮಹಾಕಾಯನಾದ ನೀನೆ ಧನ್ಯ ಎಂದೆ. ಅಲ್ಲ, ನನ್ನಂಥ ಎಲ್ಲ ಜಂತುಗಳಿಗೂ ಆಸರೆ ನೀಡುವ ಈ ಕ್ಷೀರಸಾಗರನೆ ಧನ್ಯ ಎಂದು ಹೇಳಿತು ಆಮೆ. ನಾನು ಕ್ಷೀರ ಸಾಗರನನ್ನು ಧನ್ಯ ಎಂದೆ. ಆತ ನನ್ನಂಥ ಸಪ್ತಸಾಗರಗಳನ್ನು ಹೊತ್ತ ಭೂಮಿ ಧನ್ಯಳು ಎಂದ. ನಾನು ಭೂಮಿಯನ್ನು ನೀನು ಧನ್ಯಳು ಎಂದೆ. ಅವಳು, ನಾನಲ್ಲ ಧನ್ಯೆ, ನನಗೆ ಆಧಾರನಾಗಿರುವ ಕೂರ್ಮನೆ ಧನ್ಯ ಎಂದಳು. ಕೂರ್ಮನನ್ನು ನೀನು ಧನ್ಯ ಎಂದೆ. ಅವನು ನನ್ನನ್ನೂ ವಾಯು ಧರಿಸುತ್ತಾನೆ. ಅವನೆ ಧನ್ಯ ಎಂದ. ವಾಯುವನ್ನು ನೀನೆ ಧನ್ಯ ಎಂದೆ ನಾನು. ಅವನು ಬ್ರಹ್ಮನೆ ಧನ್ಯನೆಂದ. ಬ್ರಹ್ಮನನ್ನು ಧನ್ಯ ಎಂದೆ ನಾನು. ಬ್ರಹ್ಮ ಮಹೇಶ್ವರನನ್ನು ಧನ್ಯನೆಂದು ಹೇಳಿದ. ಮಹೇಶ್ವರ ಗಣೇಶನನ್ನು ಧನ್ಯನೆಂದು ತಿಳಿಸಿದ. ಗಣೇಶ! ಮೊದಲ ಪೂಜೆಗೆ ಪಾತ್ರನಾದ ನೀನೇ ಧನ್ಯ ಎಂದೆ ನಾನು. ಅವನು ಒಪ್ಪಲಿಲ್ಲ. ನದಿಗಳಲ್ಲಿ ಗಂಗೆ, ತೀರ್ಥಗಳಲ್ಲಿ ಪುಷ್ಕರ, ಹೇಗೋ ಹಾಗೆ ಶಾಸ್ತ್ರಗಳಲ್ಲಿ ವೇದ ಶ್ರೇಷ್ಠ. ವೇದ ಹೇಳುವುದೇ ಧರ್ಮ. ಅದು ಸಾಕ್ಷಾತ್ ನಾರಾಯಣನ ಉಪದೇಶ. ಅದೇ ಧನ್ಯ ಎಂದ. ವೇದ ಯಜ್ಞವನ್ನು ಧನ್ಯ ಎಂದು ಹೊಗಳಿತು. ಯಜ್ಞ ಪುಣ್ಯವನ್ನು ಧನ್ಯ ಎಂದು ಕರೆಯಿತು. ಪುಣ್ಯಕ್ಕೂ ಫಲ ನೀಡುವವ ಶ್ರೀಕೃಷ್ಣ. ಅವನೆ ಧನ್ಯ ಎಂದಿತು ಪುಣ್ಯ. ಹೀಗೆ ಕೊನೆಯಲ್ಲಿ ಶ್ರೀಕೃಷ್ಣನೆ ಧನ್ಯ ಮಾನ್ಯ ಎಂದು ನಿಶ್ಚಯಿಸಿ ಎಲ್ಲಿಯೂ ಅವನನ್ನು ಕಾಣದೆ ಈ ಮಥುರಾ ಪಟ್ಟಣಕ್ಕೆ ಬಂದೆ. ಕೃಷ್ಣನನ್ನು ಕಂಡು ನೀನೆ ಧನ್ಯ ಎಂದೆ. ಆತ ಅದಕ್ಕೊಪ್ಪಿದ. ಆದರೆ ದಕ್ಷಿಣಾದೇವಿಯರ ಜೊತೆಗಿದ್ದಾಗಲೆ ನಾನು ಎಲ್ಲ

ಪುಣ್ಯಕರ್ಮಗಳಿಗೂ ಫಲ ನೀಡುತ್ತೇನೆ ಎಂದ. ಆದರಿಂದಲೆ ದಕ್ಷಿಣೆಯನ್ನು ನೀಡಿ ಋತ್ವಿಜರನ್ನು ತೃಪ್ತಿಪಡಿಸದಿದ್ದರೆ ಯಜ್ಞ ಫಲಪ್ರದವಾಗದು. ದಕ್ಷಿಣೆಯನ್ನು ಸಕಾಲದಲ್ಲಿ ಕೊಡಬೇಕು. ಒಂದು ದಿನ ವಿಲಂಬ ಮಾಡಿದರೆ ಎರಡರಷ್ಟು, ಒಂದು ತಿಂಗಳು ಕಳೆದರೆ ನೂರರಷ್ಟು ಎರಡು ತಿಂಗಳು ಕಳೆದರೆ ಸಾವಿರದಷ್ಟು ದಕ್ಷಿಣೆ ಕೊಡಬೇಕಾಗುವುದು. ಒಂದು ವರ್ಷ ಕಳೆಯಿತೆಂದರೆ ಯಜಮಾನನಿಗೆ ನರಕಪ್ರಾಪ್ತಿ. ದಕ್ಷಿಣೆ ನೀಡದ ಯಜಮಾನ ದಕ್ಷಿಣೆ ಸ್ವೀಕರಿಸದ ಋತ್ವಿಜ ಇಬ್ಬರೂ ನರಕ ಭಾಗಿಗಳಾಗುತ್ತಾರೆ. ಚಂಡಾಲರಾಗಿ ಹುಟ್ಟುತ್ತಾರೆ ವ್ಯಾಧಿಗ್ರಸ್ತರಾಗುತ್ತಾರೆ.'

ಸನತ್ಕುಮಾರರ ಈ ಮಾತನ್ನು ಕೇಳಿದಾಗ ದೇವತೆಗಳೂ ಮುನಿಗಳೂ ವಿಸ್ಮಿತರಾದರು. ನಂದನಿಗೂ ವಿಸ್ಮಯ ಉಂಟಾಯಿತು. ಈ ಕೃಷ್ಣ ನನ್ನ ಮಗನಲ್ಲ ಎಂದು ತಿಳಿದ. ಮಗನೆಂದು ತಿಳಿದ ಅಪರಾಧಕ್ಕೆ ಪಶ್ಚಾತ್ತಾಪಪಟ್ಟು ಲಜ್ಜೆತೊರೆದು ಕಣ್ಣೀರು ಸುರಿಸಿದ.

'ಪ್ರಭು, ನನ್ನ ಅಪರಾಧವನ್ನು ಕ್ಷಮಿಸು. ಅಮೂಲ್ಯ ಮಾಣಿಕ್ಯರತ್ನವನ್ನು ಮನೆಯಲ್ಲಿಟ್ಟುಕೊಂಡೂ ಅದರ ಬೆಲೆಯರಿಯದ ಮೂಢನಂತೆ ನಾನು ನಿನ್ನ ಮಹಿಮೆ ಅರಿಯದೆ ವಂಚಿತನಾದೆ. ನಾನು ಇನ್ನು ಮನೆಗೆ ಹೋಗಲಾರೆ. ಗೋಕುಲ ಯಮುನಾತೀರ ವೃಂದಾವನ ಯಾವುದೂ ನನಗೆ ಬೇಡ. ಯಶೋದೆಗೆ, ನಿನ್ನ ಪ್ರೀತಿಯ ರಾಧೆಗೆ, ನಿನ್ನ ಸ್ನೇಹಿತರಾದ ಗೋಪಬಾಲರಿಗೆ ನಾನೇನು ಹೇಳಲಿ?' ಎನ್ನುತ್ತ ಸಭೆಯ ನಡುವೆಯೆ ನಂದ ಮೂರ್ಛಿತನಾದ. ಕೃಷ್ಣ ಅವನನ್ನು ಆಲಿಂಗಿಸಿ ಸಂತೈಸಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಭಗವನ್ನಂದಸಂವಾದದಲ್ಲಿ ಎಂಬತ್ತೇಳನೆ ಅಧ್ಯಾಯ ಮುಗಿಯಿತು*

—o—

## ದುರ್ಗಾಸ್ತೋತ್ರ



**ಶ್ರೀಕೃಷ್ಣ** ನುಡಿದ, 'ಅಪ್ಪ, ಚೇತರಿಸಿಕೊಳ್ಳು, ಚೇತರಿಸಿಕೊಳ್ಳು, ಈ ಚರಾಚರ ಪ್ರಪಂಚವೆಲ್ಲ ನೀರ ಮೇಲಣ ಗುಳ್ಳೆಯಂತೆ ಅಶಾಶ್ವತ. ಮೋಹವನ್ನು ಬಿಡು. ಸರ್ವಮೋಹ ನಿವಾರಕಳಾದ ವಿಷ್ಣುಮಾಯೆಯನ್ನು ಸ್ತುತಿಸು. ತ್ರಿಪುರಯುದ್ಧದ ಭೀಕರ ಸಂದರ್ಭದಲ್ಲಿ ಶಿವನೂ ಆ ವಿಷ್ಣುಮಾಯೆಯನ್ನು ಸ್ತುತಿಸಿಯೆ ಅದರ ಬಲದಿಂದ ದೈತ್ಯನನ್ನು ಸಂಹರಿಸಿದ. ನಿನಗೂ ಆ ಸ್ತೋತ್ರವನ್ನು ಹೇಳುತ್ತೇನೆ ಕೇಳು. ಅದರಿಂದ ಸರ್ವವಿಘ್ನಪರಿಹಾರ. ಸರ್ವದುಃಖ ನಾಶ; ಐಶ್ವರ್ಯ ಕೀರ್ತಿ ಮುಂತಾದ ಎಲ್ಲ ಅಭೀಷ್ಟ ಸಿದ್ಧಿ.'

ನಂದಗೋಪ ಕೃಷ್ಣನನ್ನು ಬೇಡಿದ, 'ಜಗತ್ಪ್ರಭು, ಜಗನ್ಮಾತೆಯ ಆ ಸ್ತೋತ್ರವನ್ನು ನನಗೆ ಹೇಳು. ಭಕ್ತಿಯಿಂದ ಕೇಳುತ್ತೇನೆ.'

**ಶ್ರೀಕೃಷ್ಣ:-** 'ಮೋಹ ಪಾಶಗಳನ್ನು ಹರಿದು ಸರ್ವವಿಘ್ನಗಳನ್ನು ಕಳೆವ ಆಸ್ತೋತ್ರವನ್ನು ಹೇಳುತ್ತೇನೆ. ತ್ರಿಪುರಯುದ್ಧದಲ್ಲಿ ಭೀತಿಗೊಂಡ ಶಿವ ಬ್ರಹ್ಮನ ಪ್ರೇರಣೆಯಂತೆ ನಾರಾಯಣನಿಂದ ಆ ಸ್ತೋತ್ರವನ್ನು ಉಪದೇಶ ಹೊಂದಿದ. ಸ್ನಾನಮಾಡಿ ಕಾಲು ತೊಳೆದುಕೊಂಡು ಮಡಿಯುಟ್ಟು ಆಚಮನ ಮಾಡಿ ದರ್ಭೆಯನ್ನು ಹಿಡಿದು ವಿಷ್ಣುಸ್ಮರಣೆ ಮಾಡುತ್ತ ಕೈಮುಗಿದು ತಲೆಬಾಗಿ ದುರ್ಗೆಯನ್ನು ಸ್ತುತಿಸಿದ -

'ಮಹಾದೇವಿ ದುರ್ಗೆ, ನನ್ನನ್ನು ಕಾಪಾಡು. ನಾನು ಶತ್ರುವಶನಾಗಿದ್ದೇನೆ. ದಯಾಮಯಳಾದ ನೀನು ಭಕ್ತನಾದ ಅನುರಕ್ತನಾದ ನನ್ನನ್ನು ಕಾಪಾಡಬೇಕು. ನೀನು ಬ್ರಹ್ಮಾದಿ ದೇವತೆಗಳ ಜನನಿ. ಚಿನ್ಮಯ ಗುಣ ಸ್ವರೂಪಳಾಗಿ ಸಾಕಾರಳಾಗಿದ್ದರೂ ಪ್ರಾಕೃತ ಗುಣರಹಿತಳಾದ್ದರಿಂದ ನಿರಾಕಾರಳೂ ಆಗಿರುವೆ. ನಿತ್ಯಾನಂದ ಸ್ವರೂಪಳಾಗಿರುವೆ. ವೇದಮಾತೆಯಾಗಿರುವೆ. ವೈಕುಂಠದಲ್ಲಿಯೂ ಕ್ಷೀರಸಮುದ್ರದಲ್ಲಿಯೂ ಲಕ್ಷ್ಮೀಯಾಗಿರುವೆ. ಸ್ವರ್ಗದಲ್ಲಿ ಸ್ವರ್ಗಲಕ್ಷ್ಮೀ, ರಾಜರಲ್ಲಿ ರಾಜಲಕ್ಷ್ಮೀ, ಪಾತಾಳದಲ್ಲಿ ನಾಗಾದಿಲಕ್ಷ್ಮೀ, ಗೃಹಗಳಲ್ಲಿ ಗೃಹಲಕ್ಷ್ಮಿ ನೀನೆ. ವಾಗ್ದೇವತೆ ಸರಸ್ವತಿಯಾಗಿ ಬ್ರಹ್ಮನಲ್ಲಿಯೂ ನೀನೆ ಇರುವಿ. ಗೋಲೋಕದಲ್ಲಿ ಕೃಷ್ಣನೆದೆಯಲ್ಲಿಯೂ ನೀನೆ ಇರುವಿ. ವೃಂದಾವನದ ರಾಸಮಂಡಲದಲ್ಲಿ ಶತಶೃಂಗ ಪರ್ವತದ ಅಧಿದೇವತೆ ಚಿತ್ರಾವಲಿಯೂ ನೀನೆ ಆಗಿರುವಿ. ದಕ್ಷಕನ್ಯೆ ಗಿರಿಕನ್ಯೆಯರಾಗಿ ನೀನೆ ಅವತರಿಸುವಿ. ದೇವಮಾತೆ ಅದಿತಿಯೂ ಸರ್ವಾಧಾರಳಾದ ವಸುಂಧರೆ ಗಂಗೆ ತುಲಸಿ ಸ್ವಾಹಾ ಸ್ವಧಾ ಎಲ್ಲರೂ ನಿನ್ನ ಅಂಶಭೂತರೆ. ಸ್ತ್ರೀ ಪುರುಷ ನಪುಂಸಕರಲ್ಲೆಲ್ಲ ನೀನಿರುವಿ. ವೃಕ್ಷಗಳಲ್ಲಿ ವೃಕ್ಷರೂಪದಿಂದಿರುವಿ. ವಹ್ನಿಯ ದಾಹಶಕ್ತಿ ನೀರಿನ ಶೀತಗುಣ ಸೂರ್ಯನ ತೇಜಸ್ಸು ಪ್ರಭೆ, ಭೂಮಿಯ ಗಂಧಗುಣ, ಆಕಾಶದ ಶಬ್ದ,

ಚಂದ್ರನ ಶೋಭೆ, ಕಮಲದ ಕಾಂತಿ ಎಲ್ಲವೂ ನಿನ್ನ ಅಧೀನ. ಸೃಷ್ಟಿ ಸ್ಥಿತಿ ಲಯಗಳನ್ನು ಆಯಾ ಕಾಲದಲ್ಲಿ ನೀನೆ ನಡೆಸುವಿ. ಹಸಿವು ನೀರಡಿಕೆ ನಿದ್ರೆ ಬುದ್ಧಿ ಶ್ರದ್ಧೆ ತುಷ್ಟಿ ಪುಷ್ಟಿ ಶಾಂತಿ ಭ್ರಾಂತಿ ಕಾಂತಿ ಕೀರ್ತಿ ಲಜ್ಜೆ ಮಾಯೆ ಭುಕ್ತಿ ಮುಕ್ತಿ ಸರ್ವಶಕ್ತಿ ಸರ್ವಸಂಪತ್ ಎಲ್ಲವೂ ಲೋಕಕ್ಕೆ ನಿನ್ನಿಂದಲೆ, ನಿನ್ನ ಮಹಿಮೆಗಳನ್ನು ವೇದಗಳು ಬಣ್ಣಿಸುತ್ತಿವೆ. ನಿನ್ನನ್ನು ಅರಿಯಲಾರರು. ಸಾವಿರ ಮುಖ ಉಳ್ಳ ಆದಿಶೇಷನೂ ನಿನ್ನನ್ನು ಹೊಗಳಿ ಮುಗಿಸಲಾರ. ಸರಸ್ವತಿ ಪೂರ್ತಿಯಾಗಿ ಬಣ್ಣಿಸಲಾರಳು. ವೇದಗಳೆ ವರ್ಣಿಸಲಾರವು. ಬ್ರಹ್ಮ ವಿಷ್ಣುಗಳೂ ನಿನ್ನನ್ನು ಸ್ತುತಿಸಲಾರರು ಎಂದ ಮೇಲೆ ನಾನೆಷ್ಟರವನು? ಆದರೂ ದಯಾಮಯಿಯಾದ ನೀನು ಶತ್ರುಕ್ಷಯ ಮಾಡಿ ನನ್ನನ್ನು ಅನುಗ್ರಹಿಸು.' ಹೀಗೆ ಶಿವ ದುರ್ಗೆಯನ್ನು ಸ್ತುತಿಸಿ ರಥದಲ್ಲಿ ಕುಸಿದು ಬಿದ್ದ. ಆಗ ನಾರಾಯಣನ ಪ್ರೇರಣೆಯಿಂದ ದುರ್ಗೆ ಪ್ರಕಟಳಾದಳು. ಶಿವನ ಮುಂದೆ ನಿಂತು 'ಮಾಯಾಶಕ್ತಿಯಿಂದ ಅಸುರನನ್ನು ಗೆಲ್ಲು' ಎಂದಳು. ಅಷ್ಟರಲ್ಲಿ ವಿಷ್ಣು ವೃಷಭಾವತಾರ ತಾಳಿ ಬಂದು ಶಿವನ ರಥವನ್ನು ತಲೆಯಿಂದ ಎತ್ತಿ ಹಿಡಿದ. ಮಂತ್ರಪೂತವಾದ ಅಸ್ತ್ರವನ್ನೂ ಶಿವನಿಗಿತ್ತ. ಶಿವ ಆ ಆಯುಧವನ್ನು ಹಿಡಿದು ವಿಷ್ಣುವನ್ನು ಧ್ಯಾನಿಸುತ್ತ ತ್ರಿಪುರನನ್ನು ಹೊಡೆದು ನೆಲಕ್ಕೆ ಉರುಳಿಸಿದ. ಒಡನೆ ದೇವತೆಗಳು ಶಿವನನ್ನು ಹೊಗಳಿದರು. ಪುಷ್ಪವೃಷ್ಟಿ ಮಾಡಿದರು. ದುರ್ಗೆ ಶೂಲವನ್ನಿತ್ತಳು. ವಿಷ್ಣು ಪಿನಾಕಧನುಸ್ಸನ್ನಿತ್ತ. ಬ್ರಹ್ಮ ಶುಭಾಶೀರ್ವಾದ ನೀಡಿದ. ಮುನಿಗಳು ಹರ್ಷೋದ್ಗಾರ ಮಾಡಿದರು. ಅಪ್ಸರೆಯರು ಕುಣಿದರು. ಗಂಧರ್ವ ಕಿನ್ನರರು ಹಾಡಿದರು.

ಶಿವ ಮಾಡಿದ ಈ ದುರ್ಗಾಸ್ತೋತ್ರ ವಿಘ್ನಪರಿಹಾರಕ, ಶತ್ರುನಿವಾರಕ, ಪರಮೈಶ್ವರ್ಯ ದಾಯಕ. ಮೋಕ್ಷಪ್ರದ. ಹರಿಭಕ್ತಿ ನೀಡಿ ಸರ್ವಸಿದ್ಧಿಗಳನ್ನೂ ತಂದಿತ್ತು ಗೋಲೋಕವಾಸವನ್ನು ನೀಡುವುದು. ಬಂಜೆಯರಿಗೆ ಪುತ್ರ ಸಂತತಿ, ಬದ್ಧರಿಗೆ ಮುಕ್ತಿ, ಭೀತರಿಗೆ ಅಭಯ, ರೋಗಿಗಳಿಗೆ ಆರೋಗ್ಯ, ದರಿದ್ರರಿಗೆ ಧನ ನೀಡುವುದು. ಕಾಳ್ಗಿಚ್ಚಿನಲ್ಲಿ ಸಿಲುಕಿದವರೂ ಮರಣ ಬಾರದು. ಸಾಗರದಲ್ಲಿ ಬಿದ್ದರೂ ಅಪಾಯವಿರದು. ಕಳ್ಳಕಾಕರು, ಶತ್ರುಗಳು, ಹಿಂಸ್ರಜಂತುಗಳು ಎಲ್ಲವೂ ಮಣಿಯುವುವು. ತೈಜಸವಸ್ತುಗಳಲ್ಲಿ ರತ್ನ, ವರ್ಣಗಳಲ್ಲಿ ಬ್ರಾಹ್ಮಣವರ್ಣ, ನದಿಗಳಲ್ಲಿ ಗಂಗೆ, ಮಂತ್ರಗಳಲ್ಲಿ ಪ್ರಣವ, ಪತ್ರಗಳಲ್ಲಿ ತುಲಸಿ, ಹೂಗಳಲ್ಲಿ ಪಾರಿಜಾತ, ಕಟ್ಟಿಗೆಗಳಲ್ಲಿ ಶ್ರೀಗಂಧ, ತಪಸ್ಸುಗಳಲ್ಲಿ ವಿಷ್ಣುಪೂಜೆ, ವ್ರತಗಳಲ್ಲಿ ಏಕಾದಶಿ, ಜ್ಞಾನಿಗಳಲ್ಲಿ ಶಂಭು, ಸಿದ್ಧರಲ್ಲಿ ಗಣೇಶ, ದೇವತೆಗಳಲ್ಲಿ ವಿಷ್ಣು, ಶಾಸ್ತ್ರಗಳಲ್ಲಿ ವೇದ, ದೇವಿಯರಲ್ಲಿ ದುರ್ಗೆ, ಶಾಂತರಲ್ಲಿ ಲಕ್ಷ್ಮೀ, ವಿದ್ವಾಂಸರಲ್ಲಿ ಸರಸ್ವತಿ, ಸುಂದರಿಯರಲ್ಲಿ ರಾಧೆ, ಹೇಗೆ ಶ್ರೇಷ್ಠರೋ ಹಾಗೇ ಸ್ತೋತ್ರಗಳಲ್ಲಿ ಇದು ಶ್ರೇಷ್ಠ. ಇದನ್ನು ಮೀರಿಸುವ ಸ್ತೋತ್ರ ಇನ್ನೊಂದಿಲ್ಲ. ಹಿಂದೆ ಪುಷ್ಕರದಲ್ಲಿ ಸೂರ್ಯಗ್ರಹಣಕಾಲದಲ್ಲಿ ಬ್ರಹ್ಮನಿಗೆ ನಾನು ಇದನ್ನು ಉಪದೇಶಿಸಿದೆ. ಬ್ರಹ್ಮ ಶಿವನಿಗೆ, ಶಿವ ಸನಕಾದಿಗಳಿಗೆ, ಅವರು ದೂರ್ವಾಸರಿಗೆ, ಸನತ್ಕುಮಾರನು ಗೌತಮ ಪುಲಹ, ಪುಲಸ್ತ್ಯ, ಅಂಗಿರಸ, ಚಂದ್ರ, ಸೂರ್ಯರಿಗೆ, ಸೂರ್ಯನು ಯಮನಿಗೆ,

ಯಮ ಚಿತ್ರಗುಪ್ತನಿಗೆ ಈಸ್ತೋತ್ರವನ್ನು ಉಪದೇಶಿಸಿದರು. ಇದನ್ನು ಯಾರುಯಾರಿಗೋ ಉಪದೇಶಿಸಬಾರದು. ಪಾಪಿಗೆ ಕೊಡಬಾರದು. ರಹಸ್ಯವಾಗಿರಿಸಿಕೊಂಡು ನಾರಾಯಣ ಭಕ್ತನೂ ಜ್ಞಾನಿಯೂ ಶಾಂತನೂ ಆದ ಶಿಷ್ಯನಿಗೇ ಉಪದೇಶಿಸಬೇಕು. ಎತ್ತಿನಿಂದ ಜೀವಿಸುವ ಬ್ರಾಹ್ಮಣ, ಶೂದ್ರಸ್ತ್ರೀ ಪತಿಯಾದ ಬ್ರಾಹ್ಮಣ, ಶೂದ್ರರಿಗೆ ಅಡಿಗೆ ಮಾಡುವ ಬ್ರಾಹ್ಮಣ, ಶೂದ್ರ ಶ್ರಾದ್ಧಾನ್ನ ಉಣ್ಣುವ ಬ್ರಾಹ್ಮಣ. ವಿಶೇಷವಾಗಿ ಕನ್ಯಾವಿಕ್ರಯ ಮಾಡುವ ಬ್ರಾಹ್ಮಣ ಇವರಿಗೆ ಉಪದೇಶಿಸಕೂಡದು. ಒಂದು ಲಕ್ಷ ಬಾರಿ ಜಪಿಸಿದರೆ ಈ ಮಂತ್ರ ಸಿದ್ಧಿಸುವುದು. ಸಿದ್ಧಿಸಿತೆಂದರೆ ಅಗ್ನಿ ಜಲ ಪೃಥಿವೀಸ್ತಂಭಗಳೂ ಮನೋನಿಗ್ರಹವೂ ಲಭಿಸುವುದು. ಸಾವಿರ ಅಶ್ವಮೇಧಗಳಿಗಿಂತ ಸಮಸ್ತಭೂಪ್ರದಕ್ಷಿಣೆಗಿಂತ, ಸರ್ವತೀರ್ಥಸ್ನಾನಕ್ಕಿಂತ ಹೆಚ್ಚು ಪುಣ್ಯಕರ ಈ ಸ್ತೋತ್ರ.

ಅಪ್ಪ, ನನಗೆ ಪ್ರಾಣಕ್ಕೆ ಸಮವಾದ ಈ ಸ್ತೋತ್ರವನ್ನು ನಿನಗೆ ಹೇಳಿದೆ. ಆದರಿಂದ ಪಾರ್ವತಿಯನ್ನು ಸ್ತುತಿಸು.'

ಹೀಗೆ ಕೃಷ್ಣ ನಂದಗೋಪನಿಗೆ ಹೇಳಿದಾಗ ನಂದ ಪಾರ್ವತಿಯನ್ನು ಸ್ತುತಿಸಿದ. ದೇವಿ ಪ್ರೀತಳಾಗಿ ಅವನಿಗೆ ಗೋಲೋಕವಾಸದ ವರವಿತ್ತಳು. ದುರ್ಲಭವಾದ ತತ್ವಜ್ಞಾನ ನೀಡಿದಳು. 'ದುರ್ಲಭಜ್ಞಾನದಿಂದ ಮೋಹಗಳನ್ನು ನೀಗಿಕೊಂಡು ನೀನೀಗ ಪ್ರಸನ್ನನಾಗಿರುವಿ. ಈಗ ನೀನು ನಂದಗೋಕುಲಕ್ಕೆ ಹೋಗು' ಎಂದ ಕೃಷ್ಣ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಭಗವನ್ನಂದಸಂವಾದದಲ್ಲಿ ಎಂಬತ್ತೆಂಟನೆ ಅಧ್ಯಾಯ ಮುಗಿಯಿತು*

—o—

## ಶ್ರೀಕೃಷ್ಣ ಮತ್ತು ನಂದನ ಸಂವಾದ

**ಅಧ್ಯಾಯ - ೮೯**

ಶ್ರೀಕೃಷ್ಣ ಪುನಃ ನಂದಗೋಪನಿಗೆ ನುಡಿದ, 'ಅಪ್ಪ, ನೀನು ಎಲ್ಲ ತತ್ವಗಳನ್ನು ತಿಳಿದೆ. ಎಲ್ಲ ದೇವತೆಗಳನ್ನೂ ಋಷಿಗಳನ್ನೂ ಕಂಡೆ. ನನ್ನ ಉತ್ತಮವಾದ ನಾನಾ ಕಥೆಗಳನ್ನು ಕೇಳಿ ತಿಳಿದೆ. ಜನನ ಮರಣಗಳನ್ನು ನೀಗುವ ದುರ್ಗಾಸ್ತೋತ್ರವನ್ನೂ ತಿಳಿದೆ. ನೀನಿನ್ನು ನಂದಗೋಕುಲಕ್ಕೆ ಹೋಗು. ನಾನು ಹುಡುಗುತನದಿಂದ ಮಾಡಿದ ಅಪರಾಧವನ್ನೆಲ್ಲ ಕ್ಷಮಿಸು. ನಿಮಗೆ ನಾನು ಅರಮನೆಯ ಸುಖ ಭೋಗ ಭಾಗ್ಯಗಳನ್ನು ನೀಡಲಿಲ್ಲ. ಆದರೆ ಅದಕ್ಕೂ ಮಿಗಿಲಾದ ಸ್ವರ್ಗಕ್ಕಿಂತ ದುರ್ಲಭವಾದ ಗೋಲೋಕಸುಖ ನೀಡುತ್ತೇನೆ. ಸ್ವಲ್ಪ ಕಾಲ ಯಶೋದೆ ಗೋಪಿಯರು ಬಾಲಕರು ಬಂಧುಗಳು ಇವರೆಲ್ಲರ ನಡುವೆ ನನ್ನ ಪ್ರಿಯ ವಚನಗಳನ್ನೂ ಪರಿಹಾಸವನ್ನೂ ಅನುಭವಿಸುತ್ತ ಈ ಲೋಕದ ಸುಖ ಉಂಡು, ಬಳಿಕ ಯಶೋದೆ ಮುಂತಾದ ಬಂಧು ವರ್ಗದವರೊಂದಿಗೆ ಗೋಲೋಕಕ್ಕೆ ಹೋಗುವಿ. ನೂರು ಲಕ್ಷ ದಿವ್ಯ ರತ್ನ ಖಚಿತ ರಥಗಳು ನಿನಗಾಗಿ ಗೋಲೋಕದಿಂದ ಬರುವುವು. ನೀನೂ ನಿನ್ನ ಬಂಧುವರ್ಗದವರೂ ಪಾರ್ಥಿವ ಶರೀರ ತೊರೆದು ದಿವ್ಯದೇಹದಿಂದ ಗೋಲೋಕಕ್ಕೆ ಹೋಗುವಿರಿ. ಅಯೋನಿಜೆಯರಾದ ರಾಧೆಯೂ ರಾಧಾಮಾತೆಯಾದ ಕಲಾವತಿಯೂ ಅವರ ನಿತ್ಯಶರೀರಗಳಿಂದಲೆ ಹೋಗುವರು. ಸೀತೆಯ ಮಾತೆಯಾದ ವಸುಂಧರೆಯೂ ದುರ್ಗೆಯ ಮಾತೆಯಾದ ಮೇನಕೆಯೂ ಹಾಗೇ ಧನ್ಯೆಯರು. ಏಕೆಂದರೆಸೀತೆದುರ್ಗೆಯರೂ ಅಯೋನಿಜೆಯರು ಧನ್ಯೆಯರು. ಹೀಗೆ ದುರ್ಗೆಯೂ ನಾನೂ ನಿನಗೆ ವರ ನೀಡಿದ್ದೇವೆ. ನೀನಿನ್ನು ಹೋಗಬಹುದು.'

ಕೃಷ್ಣ ಹೀಗೆ ಹೇಳಿದಾಗ ನಂದಗೋಪ - 'ಚತುರ್ಯುಗಗಳ ಸನಾತನ ಧರ್ಮವನ್ನೂ ವಿಸ್ತಾರವಾಗಿ ನನಗೆ ಹೇಳು. ಕಲಿಯುಗದ ಕೊನೆ ಹೇಗಿರುತ್ತದೆ? ಕಲಿಯುಗದ ಗುಣ ದೋಷಗಳೇನು? ಭೂಮಿಯ ಗತಿ ಧರ್ಮದ ಪರಿಸ್ಥಿತಿ ಪ್ರಾಣಿಗಳ ಸ್ಥಿತಿ ಏನಾಗುವುದು? ಎಲ್ಲವನ್ನೂ ಹೇಳು.' ಎಂದ. ಕೃಷ್ಣ ಪುನಃ ಹೇಳತೊಡಗಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಭಗವನ್ನಂದಸಂವಾದದಲ್ಲಿ ಎಂಬತ್ತೊಂಬತ್ತನೆ ಅಧ್ಯಾಯ ಮುಗಿಯಿತು.*

—o—

## ಚತುರ್ಯುಗಧರ್ಮ



**ಕೃಷ್ಣ:-** 'ಕೃತಯುಗದಲ್ಲಿ ಧರ್ಮ ಪೂರ್ಣವಾಗಿರುತ್ತದೆ. ಎಲ್ಲರೂ ಧಾರ್ಮಿಕರು. ಸತ್ಯ ಪೂರ್ಣವಾಗಿರುತ್ತದೆ. ದಯೆಯೂ ಪೂರ್ಣವಾಗಿರುತ್ತದೆ. ನಾಲ್ಕು ವೇದಗಳೂ ವೇದಾಂಗಗಳೂ ವಿವಿಧ ಇತಿಹಾಸಗಳೂ ಸಂಹಿತೆಗಳೂ ಪುರಾಣ ಪಂಚರಾತ್ರ ಧರ್ಮಶಾಸ್ತ್ರಗಳೂ ಚೆನ್ನಾಗಿ ಬೆಳಗಿರುತ್ತವೆ. ಬ್ರಾಹ್ಮಣರೆಲ್ಲ ವೇದಾಧ್ಯಯನ ಸಂಪನ್ನರಾಗಿರುತ್ತಾರೆ. ಪುಣ್ಯಕರ್ಮಿಗಳೂ ತಪಸ್ವಿಗಳೂ ಆಗಿದ್ದು ನಾರಾಯಣನನ್ನು ಧ್ಯಾನಿಸುತ್ತಾರೆ ಜಪಿಸುತ್ತಾರೆ. ನಾಲ್ಕು ವರ್ಣದವರೂ ವಿಷ್ಣುಭಕ್ತರಾಗಿರುತ್ತಾರೆ. ಶೂದ್ರರು ಸತ್ಯಧರ್ಮ ಪರಾಯಣರಾಗಿದ್ದು ವಿಪ್ರರ ಸೇವೆ ಮಾಡುತ್ತಾರೆ. ರಾಜರೂ ಧಾರ್ಮಿಕರಾಗಿದ್ದು ಧರ್ಮದಿಂದ ಪ್ರಜಾರಕ್ಷಣೆ ಮಾಡುತ್ತಾರೆ. ಕೇವಲ ಹದಿನಾರನೆ ಒಂದಂಶ ಮಾತ್ರ ಪ್ರಜೆಗಳಿಂದ ಕರ ವಸೂಲಿ ಮಾಡುತ್ತಾರೆ. ಬ್ರಾಹ್ಮಣರಿಗೆ ಕರವಿಲ್ಲ. ಅವರು ಪೂಜ್ಯರಾಗಿದ್ದು ಸ್ವಚ್ಛಂದವಿರಲು ಅವಕಾಶವಿರುತ್ತದೆ. ಭೂಮಿ ಸಸ್ಯಭರಿತವಾಗಿರುತ್ತದೆ. ಶಿಷ್ಯರಿಗೆ ಗುರುಗಳಲ್ಲಿ ಮಕ್ಕಳಿಗೆ ತಂದೆ ತಾಯಿಗಳಲ್ಲಿ ಸ್ತ್ರೀಯರಿಗೆ ಪತಿಗಳಲ್ಲಿ ಭಕ್ತಿ ಇರುತ್ತದೆ. ಸ್ತ್ರೀಪುರುಷರು ಋತುಕಾಲದಲ್ಲಿ ಮಾತ್ರ ಸಂಗ ಮಾಡುತ್ತ ಸಂಯಮದಿಂದಿರುತ್ತಾರೆ. ಕಳ್ಳಕಾಕರ ಭಯವಿಲ್ಲ. ವ್ಯಭಿಚಾರವಿಲ್ಲ. ವೃಕ್ಷಗಳಲ್ಲಿ ಪುರ್ಣಫಲ, ಗೋವುಗಳಲ್ಲಿ ಕ್ಷೀರಸಮೃದ್ಧಿ. ಜನರೆಲ್ಲ ಎತ್ತರವಾದ ಸುಂದರ ಬಲಿಷ್ಠ ಶರೀರದವರು. ಕೆಲವು ಪುಣ್ಯವಂತರು ಆರೋಗ್ಯದಿಂದ ಲಕ್ಷ ವರ್ಷಕಾಲ ಜೀವಿಸುತ್ತಾರೆ. ನದಿಗಳು ಸದಾ ಜಲಪೂರ್ಣವಾಗಿರುತ್ತವೆ. ಎಲ್ಲ ಮನೆಗಳಲ್ಲಿ ಮಂಗಳಕಾರ್ಯಗಳು ಪಿತೃ ದೇವತಾರಾಧನೆಗಳು ನಡೆಯುತ್ತವೆ. ದೇವತೆಗಳನ್ನೂ ಮುನಿಗಳನ್ನೂ ಜ್ಞಾನಿಗಳನ್ನೂ ನಿಂದಿಸುವವರೆ ಇಲ್ಲ. ನಾರಾಯಣನ ನಾಮಕೀರ್ತನೆ ಮಾಡುತ್ತ ಆನಂದದಿಂದ ಅವನ ಉತ್ಸವಗಳನ್ನು ಆಚರಿಸುತ್ತಾರೆ. ಯಾರೂ ಆತ್ಮಪ್ರಶಂಸೆ ಮಾಡುವುದಿಲ್ಲ. ಇನ್ನೊಬ್ಬರ ಗುಣಗಳನ್ನೆ ಹೊಗಳುತ್ತಾರೆ. ಜನರಿಗೆ ಶತ್ರುಗಳೆ ಇಲ್ಲ. ಎಲ್ಲರೂ ಎಲ್ಲರಿಗೆ ಹಿತವರಾಗಿರುತ್ತಾರೆ. ಹೆಂಗಸರಾಗಲಿ ಗಂಡಸರಾಗಲಿ ಯಾರೂ ಮೂರ್ಖರಿರುವುದಿಲ್ಲ. ಎಲ್ಲರೂ ಜ್ಞಾನಿಗಳೆ. ಎಲ್ಲರಿಗೂ ರತ್ನಮಯವಾದ ಮನೆಗಳಿರುತ್ತವೆ. ಭಿಕ್ಷುಕರು ರೋಗಿಗಳು ಪಾಪಿಗಳು ಧೂರ್ತರು ಹಸಿವಿಂದ ಬಳಲುವವರು ದುರ್ಗತಿಗೀಡಾದವರು ಯಾರೂ ಇರುವುದಿಲ್ಲ. ಎಲ್ಲರೂ ಶೋಕರಹಿತರು ಆನಂದದಿಂದಿರುತ್ತಾರೆ. ಜರೆ ಆಧಿವ್ಯಾಧಿ ವಿಕಾರಗಳು ಯಾವುದೂ ಅವರಿಗೆ ಇರುವುದಿಲ್ಲ.

ಸತ್ಯಯುಗಕ್ಕೆ ಹೇಳಿದ ಗುಣ ಧರ್ಮಗಳೆ ಕಾಲುಭಾಗ ಕಡಿಮೆಯಾಗಿ ತ್ರೇತಾಯುಗ ದಲ್ಲಿಯೂ, ಅರ್ಧಾಂಶ ಕಡಿಮೆಯಾಗಿ ದ್ವಾಪರದಲ್ಲಿಯೂ ಕಂಡು ಬರುತ್ತವೆ.

ಕಲಿಯುಗದಲ್ಲಿ ಕಾಲು ಭಾಗ ಮಾತ್ರವೆ ಧರ್ಮ ಉಳಿಯುವುದು. ಅದೂ ಮೊದಲ ಭಾಗದಲ್ಲಿ. ಆಗಲೆ ಕಳ್ಳಕಾಕರು ಮುಂತಾದ ದುಷ್ಟರು ತಲೆದೋರುತ್ತಾರೆ. ಜನರು ಅಧರ್ಮವನ್ನು ಹೆಚ್ಚಾಗಿ ವ್ಯಕ್ತವಾಗಿಯೆ ಮಾಡುತ್ತಾರೆ. ಕೆಲವರು ಮಾತ್ರ ಗುಟ್ಟಾಗಿ ಅಧರ್ಮ ಆಚರಿಸುತ್ತಾರೆ. ರಾಜರು ಸ್ವಲ್ಪಮಾತ್ರ ಧರ್ಮಾಚರಣ ಮಾಡುತ್ತಾರೆ. ಬ್ರಾಹ್ಮಣರು ಸ್ವಲ್ಪಮಾತ್ರ ವೇದಾಧ್ಯಯನ ಮಾಡುತ್ತಾರೆ. ಎಲ್ಲರೂ ಸ್ವಚ್ಛಂದಗಾಮಿಗಳೆ. ಎಂದಿನವರೆಗೆ ತೀರ್ಥಕ್ಷೇತ್ರಗಳು ಸಾಧು ಸಜ್ಜನರು ಗ್ರಾಮದೇವತೆಗಳು ಶಾಸ್ತ್ರಾಭ್ಯಾಸ ದೇವತಾರಾಧನೆಗಳು ಭೂಮಿಯಲ್ಲಿ ಇರುತ್ತವೋ ಅಂದಿನವರೆಗೆ ಸ್ವಲ್ಪವಾದರೂ ಸತ್ಯ ತಪಸ್ಸು ಧರ್ಮಗಳಿರುತ್ತವೆ. ಅವು ಹೋದೊಡನೆ ಎಲ್ಲ ಧರ್ಮವೂ ಅದೃಶ್ಯವಾಗುತ್ತದೆ; ಅಮಾವಾಸ್ಯೆಯಲ್ಲಿ ಚಂದ್ರನು ಹೇಗೋ ಹಾಗೆ.

**ನಂದ:-** ಕೃಷ್ಣ, ತೀರ್ಥಕ್ಷೇತ್ರಗಳು ಎಷ್ಟು ಸಮಯ ಭೂಮಿಯಲ್ಲಿರುತ್ತವೆ? ಸಾಧು ಸಜ್ಜನರು, ಗ್ರಾಮದೇವತೆಗಳು, ಶಾಸ್ತ್ರಗಳು ಇವೆಲ್ಲ ಎಷ್ಟುಕಾಲ ಇರುತ್ತವೆ?

**ಕೃಷ್ಣ:-** ಕಲಿಯುಗದಲ್ಲಿ ಹತ್ತು ಸಾವಿರ ವರ್ಷಕಾಲ ಹರಿ ಭೂಮಿಯಲ್ಲಿರುತ್ತಾನೆ. ಮತ್ತು ದೇವತಾವಿಗ್ರಹಗಳೂ ಶಾಸ್ತ್ರಗಳೂ ಪುರಾಣಗಳೂ ಜನರಿಂದ ಆದರಿಸಲ್ಪಡುತ್ತವೆ. ಅದರ ಅರ್ಧಕಾಲ ಅಂದರೆ ಐದು ಸಾವಿರ ವರ್ಷಗಳವರೆಗೆ ಗಂಗಾದಿತೀರ್ಥಗಳಿರುತ್ತವೆ. ಅದರ ಅರ್ಧಕಾಲ ಗ್ರಾಮದೇವತೆಗಳೂ ವೇದಗಳೂ ಇರುತ್ತವೆ. ಕಲಿಯುಗದ ಕೊನೆಯಲ್ಲಿ ಅಧರ್ಮ ಪೂರ್ಣಪ್ರಮಾಣದಲ್ಲಿ ಬೆಳೆದಿರುತ್ತದೆ. ನಾಲ್ಕೂವರ್ಣಗಳೂ ಒಂದೇ ವರ್ಣವಾಗಿರುತ್ತವೆ. ಮಂತ್ರಶುದ್ಧವಾದ ವಿವಾಹ ನಡೆಯುವುದಿಲ್ಲ. ಕೇವಲ ಕಾಮಸುಖಕ್ಕಾಗಿ ಸ್ತ್ರೀಯರನ್ನು ಸ್ವೀಕರಿಸುತ್ತಾರಷ್ಟೆ. ಬ್ರಾಹ್ಮಣನಿಗೆ ಜನಿವಾರವಿಲ್ಲ. ಹಣೆಗೆ ತಿಲಕವಿಲ್ಲ. ಸಂಧ್ಯಾವಂದನೆ ಶಾಸ್ತ್ರಾಧ್ಯಯನಗಳಿಲ್ಲ. ಭಕ್ಷ್ಯ ಅಭಕ್ಷ್ಯಗಳೆಂಬ ಭೇದವಿಲ್ಲದೆ ಎಲ್ಲವನ್ನೂ ಎಲ್ಲರೂ ಜೊತೆ ಸೇರಿ ಉಣ್ಣುತ್ತಾರೆ. ಸ್ತ್ರೀಯರಲ್ಲಿ ಪಾತಿವ್ರತ್ಯ ನಿಯಮವಿಲ್ಲ. ಗಂಡಂದಿರನ್ನು ಕೆಲಸದ ಆಳುಗಳಂತೆ ನೋಡುತ್ತಾರೆ. ಜಾರನಿಗೇ ಮಿಷ್ಟಾನ್ನ, ಪತಿಗೆ ಉಪವಾಸ. ಮಗ ತಂದೆಗೆ, ಶಿಷ್ಯ ಗುರುವಿಗೆ ಬಯ್ಯುತ್ತಾನೆ. ಪ್ರಜೆಗಳು ರಾಜನಿಗೆ, ರಾಜ ಪ್ರಜೆಗಳಿಗೆ ಹೊಡೆಯುತ್ತಾರೆ. ಕಳ್ಳ ಕಾಕರ ಪೀಡೆ ಎಲ್ಲೆಡೆ ಉಂಟಾಗುತ್ತದೆ. ನೆಲದಲ್ಲಿ ಹಸುರು ಬೆಳೆಯುವುದಿಲ್ಲ. ಹಸುಗಳು ಹಾಲು ಕರೆಯುವುದಿಲ್ಲ. ಬ್ರಾಹ್ಮಣರು ಶೂದ್ರ ಸ್ತ್ರೀಯರನ್ನು ಶೂದ್ರರ ಬ್ರಾಹ್ಮಣ ಸ್ತ್ರೀಯರನ್ನು ಸೇರುತ್ತಾರೆ. ತಾಯಿಗಿಂತ ಹೆಂಡತಿ ಮುಖ್ಯಳಾಗುತ್ತಾಳೆ. ಭೃತ್ಯರು ರಾಜರನ್ನು ಸ್ತ್ರೀಯರು ಪತಿಗಳನ್ನು ಮಕ್ಕಳು ತಂದೆಯನ್ನು ಕೊಲ್ಲುತ್ತಾರೆ. ಎಲ್ಲರೂ ಹೊಟ್ಟೆ ತುಂಬಿಕೊಳ್ಳುವುದು ಕಾಮಸುಖ ಪಡೆಯುವುದೇ ಮುಖ್ಯ ಧ್ಯೇಯವೆಂದು ಬಗೆಯುತ್ತಾರೆ. ಇದರಿಂದ ಆರೋಗ್ಯ ಕೆಡುತ್ತದೆ. ಪಿತೃ ದೇವ ಬ್ರಾಹ್ಮಣ ಅತಿಥಿಗಳಿಗೆ ಪೂಜೆ ಇಲ್ಲವಾಗುತ್ತದೆ. ದಾರಿದ್ರ್ಯ ವ್ಯಾಧಿಗಳಿಂದ ಪೀಡಿತರಾಗಿ ಜನರು ಹೆಬ್ಬೆಟ್ಟಿನ ಗಾತ್ರದಷ್ಟೆ ಬೆಳೆಯುತ್ತಾರೆ. ಮರಗಳೂ ಗಿಡಗಳಂತಾಗುತ್ತವೆ. ತಾಳೆ ತೆಂಗು ಹಲಸು ಎಲ್ಲವೂ ಸಾಸಿವೆ ಕಾಳಿನಷ್ಟಾಗುತ್ತವೆ. ಜನರೆಲ್ಲ ಪಾಪಿಗಳಾಗಿ ಹಿಂಸ್ರ ಜಂತುಗಳ ಭಯದಿಂದ ಭೀತರಾಗಿರುತ್ತಾರೆ. ನದಿ ಕೊಳ ಸರೋವರಗಳೆಲ್ಲವುಗಳಲ್ಲೂ

ನೀರಿಲ್ಲದಾಗುವುದು. ಕಮಲಗಳಿಲ್ಲದಂತಾಗುವುದು. ಅಶ್ವತ್ಥದಂಥ ಮರಗಳನ್ನೂ ಜನರು ಕಡಿದು ನೆಲದಲ್ಲಿ ಎಲ್ಲಿಯೂ ಮರಗಳೆ ಇಲ್ಲದಂತೆ ಮಾಡುತ್ತಾರೆ. ಕೊನೆಯಲ್ಲಿ ದ್ವಾದಶಾದಿತ್ಯರು ಒಮ್ಮೆಲೆ ಉದಿಸಿ ಲೋಕವನ್ನು ಸುಡುತ್ತಾರೆ. ಬಳಿಕ ಅತಿವೃಷ್ಟಿಯಿಂದ ಎಲ್ಲ ನಾಶವಾಗುತ್ತದೆ. ಆಗಲೆ ಕಲಿಯುಗದ ಅವಸಾನ. ಮುಂದೆ ಸತ್ಯಯುಗ ಪ್ರಾರಂಭವಾಗುತ್ತದೆ.

ಅಪ್ಪ, ನಾಲ್ಕು ಯುಗಗಳ ಬಗ್ಗೆ ಎಲ್ಲವನ್ನೂ ಹೇಳಿದ್ದೇನೆ. ನೀನಿನ್ನು ನಂದಗೋಕುಲಕ್ಕೆ ಹೋಗಬಹುದು. ನಾನಿನ್ನೂ ಹಾಲು ಕುಡಿವ ಮಗು, ನಿನ್ನ ಮಗ. ಬೆಣ್ಣೆ ತುಪ್ಪ ಹಾಲು ಮೊಸರು ಮಜ್ಜಿಗೆ ಮಿಷ್ಟಾನ್ನಗಳನ್ನು ನಾನು ಅತ್ತು ರಂಪಮಾಡಿಯಾದರೂ ನಿಮ್ಮಿಂದ ಪಡೆದು ಉಂಡಿದ್ದೇನೆ. ಏಕೆಂದರೆ **'ಬಾಲಾನಾಂ ರೋದನಂ ಬಲಂ'** ಮಕ್ಕಳಿಗೆ ಅಳುವೆ ಬಲ ತಾನೆ? ಆದ್ದರಿಂದ ಹುಡುಗುತನದ ದೋಷಗಳನ್ನು ಕ್ಷಮಿಸು. ಅಪ್ಪ, ನೀನು ನಂದಗೋಕುಲದಲ್ಲಿ ನನ್ನ ಬಾಲ್ಯದ ಆಟ ಕೂಟಗಳ ಬಗ್ಗೆ ಬಂಧುಗಳಿಗೆ ಹೇಳುತ್ತ ಕಾಲಕಳೆ. ಕಾಲವೆ ಬಂಧುಗಳನ್ನು ಜೊತೆಗೂಡಿಸುತ್ತದೆ. ಕಾಲವೆ ಅಗಲಿಸುತ್ತದೆ. ಕಾಲವೆ ಜನರೊಳಗೆ ಮೈತ್ರಿ ವಿರೋಧಗಳಿಗೆ ಕಾರಣವಾಗುತ್ತದೆ. ಸುಖ ದುಃಖ ಭಯ ಶೋಕ ಜರೆ ಮರಣಗಳೆಲ್ಲ ಕರ್ಮಾನುಸಾರ ಕಾಲದಿಂದಲೆ ಆಗಿ ಹೋಗುತ್ತವೆ. ಎಲ್ಲವೂ ಕಾಲಾಧೀನ. ನೀನು ಚಿಂತಿಸ ಬೇಡ. ಇಲ್ಲದಿದ್ದರೆ ನೀನೆಲ್ಲೋ ನಂದ ಗೋಕುಲದಲ್ಲಿದ್ದವ. ನಾನೆಲ್ಲೋ ಮಥುರೆಯಲ್ಲಿ ಹುಟ್ಟಿದವ. ನಮ್ಮ ತಂದೆ ಕಂಸನ ಭಯದಿಂದ ನನ್ನನ್ನು ನಿನ್ನಲ್ಲಿ ತಂದು ಬಿಟ್ಟ. ನನಗೆ ನೀನು ತಂದೆಗಿಂತ ಹೆಚ್ಚಿನವನಾದೆ. ತಾಯಿ ತಾಯಿಗಿಂತ ಹೆಚ್ಚಿನವಳಾದಳು. ಆದರಿಂದ ನಾನೂ ಪಾರ್ವತಿಯೂ ನಿನಗೆ ದಿವ್ಯಜ್ಞಾನ ನೀಡಿರುವೆವು. ನೀನು ಭಾಗ್ಯಶಾಲಿ. ಹೋಗು, ನಿನ್ನ ಮನೆಗೆ ಹೋಗು.'

**ನಂದಗೋಪ:-** 'ಕೃಷ್ಣ ನಮ್ಮನ್ನು ನೀನು ಮರೆಯುವೆಯ? ಮನೋಹರವಾದ ವೃಂದಾವನವನ್ನು ಹಸುಗಳ ಹಿಂಡನ್ನು ಗೋಪಬಾಲಿಕೆಯರನ್ನು ಗೋಪಬಾಲರನ್ನು ಏಕೆ, ನಿನಗೆ ಪ್ರಾಣಕ್ಕಿಂತ ಹೆಚ್ಚಾದ ರಾಧೆಯನ್ನೂ ಮರೆಯುವಿಯ? ಬಾ, ಒಮ್ಮೆ ನಂದಗೋಕುಲಕ್ಕೆ ಬಂದು ಸ್ವಲ್ಪ ದಿನವಾದರೂ ಇದ್ದು ಹೋಗು.' ಹೀಗೆ ಹೇಳಿ ಕೃಷ್ಣನನ್ನು ಬಿಗಿದಪ್ಪಿ ಕಣ್ಣೀರ ಅಭಿಷೇಕ ಗೈದ. ಕೆನ್ನೆಗಳಿಗೆ ಮುದ್ದಿಟ್ಟ. ಆನಂದ-ಪರಮಾನಂದ ಮಗ್ನನಾದ ಕೃಷ್ಣ ತಿರುಗಿ ಹೇಳತೊಡಗಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ತೊಂಬತ್ತನೆ ಅಧ್ಯಾಯ ಮುಗಿಯಿತು*

—o—

## ಗೋಕುಲಕ್ಕೆ ಉದ್ಧವನ ನಿರ್ಗಮನ

ಅಧ್ಯಾಯ - ೯೧

'ಅಪ್ಪ, ನಿನ್ನ ಜೊತೆಗೇ ಉದ್ಧವನನ್ನು ಕಳಿಸುತ್ತೇನೆ. ಅವನು ನಿನಗೂ ಯಶೋದೆ ರೋಹಿಣಿಯರಿಗೂ ಗೋಪ ಬಾಲ ಬಾಲಕಿಯರಿಗೂ ನನ್ನ ಪ್ರಾಣಪ್ರಿಯೆಯಾದ ರಾಧೆಗೂ ಸಮಾಧಾನ ಹೇಳುತ್ತಾನೆ' ಎಂದ ಕೃಷ್ಣ. ಆಗಲೆ ವಸುದೇವ ದೇವಕಿ ಬಲರಾಮ ಉದ್ಧವ ಅಕ್ರೂರರೂ ಅಲ್ಲಿಗೇ ಬಂದರು. ನಂದಗೋಪನಿಗೆ ಸಮಾಧಾನದ ಮಾತುಗಳನ್ನಾಡಿದರು. ವಸುದೇವನೆಂದ - 'ನಂದಗೋಪ, ನೀನು ಒಳ್ಳೆಯ ಜ್ಞಾನಿ, ನನ್ನ ಒಳ್ಳೆಯ ಬಂಧು, ಸ್ನೇಹಿತ. ಈ ಮೋಹವನ್ನು ತಡೆದುಕೊ. ಹೋಗು ನಂದಗೋಕುಲಕ್ಕೆ. ಕೃಷ್ಣ ನನಗೆ ಹೇಗೋ ಹಾಗೇ ನಿನಗೂ ಮಗನೆ. ಮಗನಾಗಿಯೆ ಇರುತ್ತಾನೆ. ಗೋಕುಲ ಮಥುರೆಗಳಲ್ಲಿ ಏನಿದೆ ವ್ಯತ್ಯಾಸ? ಇಲ್ಲಿ ಆಗಾಗ ಹಬ್ಬ ಸಂತೋಷ ಕೂಟಗಳಲ್ಲಿ ಬಂದು ಮಗನನ್ನು ನೋಡಿಹೋಗು.'

ದೇವಕಿ:- 'ನಂದ, ನನಗೆ ಹೇಗೋ ಹಾಗೇ ನಿನಗೂ ಕೃಷ್ಣ ಮಗನೆ, ತಾನೆ? ಏಕೆ ದುಃಖಿಸುವಿ? ಹನ್ನೊಂದು ವರ್ಷಕಾಲ ನಿನ್ನ ಮನೆಯಲ್ಲಿ ಕೃಷ್ಣನಿದ್ದ. ಈಗ ಕೆಲವೆ ದಿನಗಳಲ್ಲಿ ನೀನು ಶೋಕಗ್ರಸ್ತನಾಗುವಿಯ? ಇನ್ನೂ ಒಂದೆರಡು ದಿನ ಬೇಕಾದರೆ ಇಲ್ಲಿಯೆ ಕೃಷ್ಣನ ಜೊತೆಗಿದ್ದು ನಿನ್ನ ಜನ್ಮ ಸಾರ್ಥಕ ಪಡಿಸಿಕೊಳ್ಳು.'

ಕೃಷ್ಣ ಉದ್ಧವನನ್ನು ಕರೆದು ಹೇಳಿದ. 'ಉದ್ಧವ, ನೀನೂ ನಂದಗೋಕುಲಕ್ಕೆ ಹೋಗು. ಅದರಿಂದ ನಿನಗೂ ಸಂತೋಷ. ಗೋಕುಲದವರಿಗೂ ಸಂತೋಷ. ನಾನಿತ್ತ ಅಧ್ಯಾತ್ಮ ಜ್ಞಾನವನ್ನು ಯಶೋದೆ ರೋಹಿಣಿ, ಗೋಪ ಬಾಲಕ ಬಾಲಕಿಯರು ಇವರೆಲ್ಲರಿಗೂ ಬೋಧಿಸು. ಅದರಿಂದ ಎಲ್ಲರ ದುಃಖ ನಿವಾರಣೆಯಾಗುವುದು. ನಂದ ಇಲ್ಲಿಯೆ ಕೆಲವು ದಿನ ಆನಂದದಿಂದಿರಲಿ. ಯಶೋದೆಗೆ ಈ ವಿಷಯವನ್ನೂ ನನ್ನ ವಿನಯ ಪ್ರೀತಿಗಳನ್ನೂ ತಿಳಿಸು.' ಹೀಗೆ ಹೇಳಿ ಕೃಷ್ಣ ವಸುದೇವ ದೇವಕಿಯರೊಂದಿಗೂ ಬಲರಾಮ ಅಕ್ರೂರರೊಂದಿಗೂ ಅರಮನೆಯೊಳಗೆ ನಡೆದ. ಉದ್ಧವ ಆ ರಾತ್ರಿ ಮಥುರೆಯಲ್ಲಿದ್ದು ಮರುದಿನ ಬೆಳಿಗ್ಗೆ ಮನೋಹರವಾದ ವೃಂದಾವನದ ಕಡೆಗೆ ಹೊರಟ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ತೊಂಬತ್ತೊಂದನೆ ಅಧ್ಯಾಯ ಮುಗಿಯಿತು*

—o—

# ಉದ್ಧವನಿಂದ ರಾಧಾಸ್ತೋತ್ರ

## ಅಧ್ಯಾಯ - ೯೨

ಶ್ರೀಕೃಷ್ಣನ ಆಜ್ಞೆಯಂತೆ ಉದ್ಧವನು ಗಣೇಶ ನಾರಾಯಣ ಶಿವ ದುರ್ಗಾ ಸರಸ್ವತಿ ಗಂಗೆ ಇವರನ್ನೆಲ್ಲ ನೆನೆದು ಸಂತೋಷದಿಂದ ನಂದಗೋಕುಲಕ್ಕೆ ಹೋರಟ. ಆಗ ಅವನಿಗೆ ಅನೇಕ ಶುಭಶಕುನಗಳು ಕಂಡುಬಂದುವು. ದುಂದುಭಿ ಘಂಟೆ ಶಂಖ ಮುಂತಾದವುಗಳ ಮಂಗಲಧ್ವನಿಗಳೂ ಸಂಗೀತಧ್ವನಿಯೂ ಕೇಳಿ ಬಂದುವು. ಪತಿ ಪುತ್ರವತಿಯಾದ ಪತಿವ್ರತೆ ಸ್ತ್ರೀ, ದೀಪ, ಹೂಮಾಲೆ, ಕನ್ನಡಿ, ತುಂಬಿದ ಕೊಡ, ಮೊಸರು, ಅರಳು, ಹಣ್ಣು, ಗರಿಕೆ, ಬಿಳಿಧಾನ್ಯ, ಬೆಳ್ಳಿ, ಚಿನ್ನ, ಜೇನು, ಬ್ರಾಹ್ಮಣ ಸಮೂಹ, ಕೃಷ್ಣಮೃಗ, ಬಸವ, ತುಪ್ಪ, ಹೊಸ ಮಾಂಸ, ಆನೆ, ರಾಜ, ಬಿಳಿಕುದುರೆ, ಪತಾಕೆ, ಮುಂಗುಸಿ, ಶಕುನದ ಹಕ್ಕಿ, ಬಿಳಿ ಹೂ, ಶ್ರೀಗಂಧ, ಇವೇ ಮುಂತಾದ ಶುಭಶಕುನವೆನಿಸುವ ವಸ್ತುಗಳನ್ನು ನೋಡುತ್ತ ವೃಂದಾವನವನ್ನು ಸೇರಿ ಅಲ್ಲಿ ಭಾಂಡೀರವೆಂಬ ಅಕ್ಷಯ ವಟವೃಕ್ಷದ ಬಳಿಗೆ ಬಂದ. ಅಲ್ಲಿ ಗೋಪಬಾಲಕರು ಕೃಷ್ಣ ರಾಮರ ವಿರಹದಿಂದ ದುಃಖಿಸುತ್ತ 'ಬಲ' 'ಕೃಷ್ಣ' ಎಂದು ಬಾರಿಬಾರಿಗೆ ಕೂಗುತ್ತಿದ್ದುದನ್ನು ಕಂಡ. ಅವರನ್ನು ಸಂತೈಸಿ ನಗರವನ್ನು ಪ್ರವೇಶಿಸಿದ. ಅಲ್ಲಿ ನಂದನ ಅರಮನೆ ಕಂಡ. ರತ್ನಕಲಶಗಳಿಂದ ಶೋಭಿಸುವ ಸುಂದರವಾದ ದ್ವಾರವನ್ನು ಪ್ರವೇಶಿಸಿ ರಥದಿಂದಿಳಿದು ಅಂಗಳದಲ್ಲಿ ನಿಂತ. ಯಶೋದೆ ರೋಹಿಣಿಯರು ಧಾವಿಸಿ ಬಂದು ಕುಶಲ ಪ್ರಶ್ನೆ ಮಾಡಿದರು. ಉದ್ಧವ ಹೇಳಿದ- 'ಬಲರಾಮ ಕೃಷ್ಣರೊಡನೆ ನಂದ ಆನಂದದಿಂದ ಮಧುರೆಯಲ್ಲಿದ್ದಾನೆ. ಕೃಷ್ಣನ ಉಪನಯನದವರೆಗಿದ್ದು ಬಳಿಕ ಹೊರಟು ಬರುತ್ತಾನೆ. ಮೊದಲಿಗೆ ನಾನು ನಿಮ್ಮೆಲ್ಲರ ಕ್ಷೇಮಸಮಾಚಾರವನ್ನು ಸರಿಯಾಗಿ ತಿಳಿದು ಮಥುರೆಗೆ ಹೊರಡುತ್ತೇನೆ.' ಯಶೋದೆ ರೋಹಿಣಿಯರು ಇದನ್ನು ಕೇಳಿ ಸಂತೋಷಗೊಂಡರು. ಅವನಿಗೆ ಮಿಷ್ಟಾನ್ನ ಉಣಬಡಿಸಿದರು. ಮಣಿ ರತ್ನ ಮುಂತಾದವುಗಳನ್ನಿತ್ತರು. ಮಂಗಳವಾದ್ಯಘೋಷ ಮಾಡಿಸಿದರು. ಬ್ರಾಹ್ಮಣರಿಗೆ ಅನ್ನದಾನ ಮಾಡಿದರು. ಅವರಿಂದ ವೇದಘೋಷ ಮಾಡಿಸಿದರು. ಶಿವ ಪಾರ್ವತಿಯರ ಪೂಜೆ ನಡೆಸಿದರು. ಕೃಷ್ಣನಿಗೆ ಶುಭವಾಗಲಿ ಎಂದು ಬ್ರಾಹ್ಮಣರಿಗೆ ಸುವರ್ಣದಾನ ಗೋ ದಾನಗಳನ್ನೂ ಮಾಡಿದರು. ಉದ್ಧವ, ಯಶೋದೆ ರೋಹಿಣಿಯರನ್ನೂ ಎಲ್ಲ ಗೋಪ ಗೋಪಿಯರನ್ನೂ ಸಂತೈಸಿ ಎಲ್ಲರೊಡನೆ ರಾಸ ಮಂಡಲದೊಳಗೆ ಪ್ರವೇಶಿಸಿದ.

ರಾಸಮಂಡಲವನ್ನು ಮೂರುಕೋಟಿ ಗೋಪಿಯರು ನೋಡಿಕೊಳ್ಳುತ್ತಿದ್ದರು. ಅದು ಚಂದ್ರಮಂಡಲದಂತೆ ವರ್ತುಲಾಕಾರದಲ್ಲಿದ್ದು ಮೂರುಲಕ್ಷ ಸುಂದರ ರತಿಗೃಹಗಳಿಂದ ಕೂಡಿತ್ತು. ಮಾಲತಿ ಚಂದನ ಚಂಪಕ ಕೇತಕಿ ಮಾಧವಿ ಬಕುಲ ವಂಜುಲ ಅಶೋಕ ಮಲ್ಲಿಕಾ ಪಲಾಶ ಶಿರೀಷ ಮುಂತಾದ ವೃಕ್ಷಗಳಿಂದ ಕೂಡಿದ, ಮನೋಹರವಾದ ಕಾಡು ಹೂಗಳಿಂದ ಗಮಗಮಿಸುವ, ಕೋಗಿಲೆಗಳ ಮಧುರ ಧ್ವನಿಯಿಂದ ದುಂಬಿಗಳ ಗಾನದಿಂದ ಉಲ್ಲಾಸ ತರುವ ವನದ ಶೋಭೆಯನ್ನು ನೋಡುತ್ತ, ಯಶೋದೆ ತೋರಿದ ದಾರಿಯಲ್ಲಿ ನಡೆಯುತ್ತ ರಾಧೆಯ ಅರಮನೆಗೆ ಬಂದ, ಉದ್ಧವ. ಬಹಳ ಏಕಾಂತ ಪ್ರದೇಶದಲ್ಲಿ ರತ್ನಮಯ ಕೋಟೆಗಳಿಂದ ಕಂದಕಗಳಿಂದ ಶತ್ರುಗಳಿಗೆ ಅಗಮ್ಯವಾಗಿತ್ತು ರಾಧೆಯ ಅರಮನೆ. ಮಿತ್ರರಿಗೆ

ಪ್ರವೇಶಿಸಲು ಸುಲಭವಾದ ರಹಸ್ಯ ಮಾರ್ಗಗಳಿದ್ದುವು. ವಿಶ್ವಕರ್ಮನಿರ್ಮಿತವಾದ ದಿವ್ಯರತ್ನಮಯವಾದ ಆಅರಮನೆಯನ್ನು ಮಹಾ ಬಲಶಾಲಿನಿಯರಾದ ಲಕ್ಷ ಗೋಪಿಯರು ಹೆಬ್ಬಾಗಿಲಲ್ಲಿ ದಂಡಪಾಣಿಗಳಾಗಿ ನಿಂತು ಕಾಯುತ್ತಿದ್ದರು. ಆ ಬಾಗಿಲನ್ನು ದಾಟಿ ಉದ್ಧವ ಕ್ರಮವಾಗಿ ಮುಂದಿನ ನಾಲ್ಕು ಬಾಗಿಲುಗಳನ್ನು ದಾಟಿದ. ಹೀಗೆ ಐದು ಬಾಗಿಲುಗಳನ್ನು ದಾಟಿ ಆರನೆ ಬಾಗಿಲಿಗೆ ಬಂದಾಗ ಅಲ್ಲಿ ಬಾಗಿಲು ಕಾಯುತ್ತಿದ್ದ ಒಂದು ಸಾವಿರ ಗೋಪಿಯರಲ್ಲಿ ಪ್ರಧಾನಳಾದ ಮಾಧವಿ ಉದ್ಧವನ ಪರಿಚಯ ಕೇಳಿದಳು. ಉದ್ಧವನಿಂದ ಎಲ್ಲವನ್ನೂ ತಿಳಿದು ಒಳಗೆ ಹೋಗಿ ರಾಧೆಯ ಸಖಿಯರಿಗೆ ತಿಳಿಸಿದಳು. ಒಡನೆ ಅವರೆಲ್ಲರೂ ಶಂಖ ಗಂಟೆ ಮೃದಂಗ ಭೇರಿಗಳ ಮಂಗಲಧ್ವನಿಮಾಡಿ ಸಂಭ್ರಮದಿಂದ ಉದ್ಧವನನ್ನು ರಾಧೆಯ ಬಳಿಗೆ ಕರೆತಂದರು. ಉದ್ಧವ ರಾಧೆಯನ್ನು ಕಂಡ. ಕುಹೂಯೋಗದ ಚಂದ್ರನ ಕಲೆಯಂತೆ ಸೊರಗಿದ್ದಳು ರಾಧೆ. ಶೋಕದಿಂದ ಹಾಸಿಗೆಯ ಮೇಲೊರಗಿದ್ದಳು. ಅನ್ನ ನೀರು ಬಿಟ್ಟು ನಿಶ್ಶೇಷ್ಟಳಾಗಿ ಸ್ವಲ್ಪವೆ ಉಸಿರಾಡುತ್ತಿದ್ದಳು. ತುಟಿ ಗಂಟಲುಗಳು ಒಣಗಿದ್ದುವು. ಉದ್ಧವನಿಗೆ ಅವಳನ್ನು ಕಂಡಾಗ ಮೈಯೆಲ್ಲ ನವಿರೆದ್ದಿತು. ಭಕ್ತಿಯಿಂದ ತಲೆ ಬಾಗಿ ನಮಿಸಿದ. ಹೀಗೆ ಸ್ತೋತ್ರ ಮಾಡಿದ -

'ಬ್ರಹ್ಮಾದಿ ದೇವತೆಗಳಿಂದ ವಂದಿಸಲ್ಪಡುವ ರಾಧೆಯ ಪಾದಕಮಲಗಳಿಗೆ ವಂದಿಸುತ್ತೇನೆ. ನಾಮ ಸಂಕೀರ್ತನದಿಂದಲೆ ಮೂಲೋಕವನ್ನು ಪಾವನ ಗೊಳಿಸುವಂಥವು ಈ ಪಾದಕಮಲಗಳು. ಗೋಕುಲವಾಸಿನಿ, ಶತಶೃಂಗನಿವಾಸಿನಿ, ತುಲಸೀವನವಾಸಿನಿ. ರಾಸಮಂಡಲ ವಾಸಿನಿ, ವಿರಜಾ ತೀರವಾಸಿನಿ, ವೃಂದಾವನ ವಿಲಾಸಿನಿ, ಕೃಷ್ಣವಕ್ಷಃಸ್ಥಿತೆ, ವೈಕುಂಠವಾಸಿನಿ, ವಿದ್ಯಾಧಿಷ್ಠಾತ್ರಿ, ಸರ್ವೈಶ್ವರ್ಯಾಧಿಷ್ಠಾತ್ರಿ, ಸಿಂಧುಸುತೆ, ಪದ್ಮನಾಭಪ್ರಿಯೆ, ವಿಷ್ಣುಮಾಯೆ, ವೇದಮಾತೆ, ದುರ್ಗವಿನಾಶಿನಿ, ದಕ್ಷಸುತೆ, ಶೈಲಸುತೆ, ಕೈಲಾಸವಾಸಿನಿ, ಸಂಹಾರರೂಪಿಣಿ, ಮಹಾಮಾರಿ, ಸ್ವಾಹಾ ಸ್ವಧಾ ಶಾಂತಿ ಕಾಂತಿ ತುಷ್ಟಿ ಪುಷ್ಟಿ ದಯಾದಿ ಸ್ವರೂಪಿಣಿ, ಸರ್ವಶಕ್ತಿ ಸ್ವರೂಪಿಣಿ, ಸರ್ವಮಾತೆ ಎನಿಸಿದ ದೇವಿ ರಾಧಿಕೆಗೆ ಇದೊ ನಮಸ್ಕಾರ. ರಾಧಾ ಮಾಧವರೊಳಗಿನ ಸಂಬಂಧ ಹಾಲು ಮತ್ತು ಅದರ ಬಿಳುಪು, ಪೃಥಿವಿ ಮತ್ತು ಗಂಧ, ಆಕಾಶ ಮತ್ತು ಶಬ್ದ, ಸೂರ್ಯ ಮತ್ತು ಪ್ರಕಾಶ ಇವುಗಳೊಳಗಿನ ಸಂಬಂಧದಂತೆ ಅವಿಭಾಜ್ಯ. ದೇವಿ, ಮಂಗಳೆ, ಚೇತರಿಸಿಕೊಳ್ಳು, ನನ್ನೊಡನೆ ಮಾತನಾಡು.' ಹೀಗೆ ಹೇಳುತ್ತ ಉದ್ಧವ ಪುನಃ ಪುನಃ ನಮಸ್ಕರಿಸಿದ.

ಉದ್ಧವ ಮಾಡಿದ ಈ ರಾಧಾಸ್ತೋತ್ರವನ್ನು ಭಕ್ತಿಯಿಂದ ಪಠಿಸಿದರೆ ಇಹದಲ್ಲಿ ಸುಖಪ್ರಾಪ್ತಿ. ಕೊನೆಗೆ ವಿಷ್ಣುಲೋಕ ಪ್ರಾಪ್ತಿ. ಬಂಧುವಿಯೋಗ ರೋಗ ಶೋಕಗಳಿಲ್ಲ. ಪುತ್ರರಿಲ್ಲದವರಿಗೆ ಪುತ್ರಪ್ರಾಪ್ತಿ. ದರಿದ್ರರಿಗೆ ಧನಲಾಭ. ಭೂರಹಿತರಿಗೆ ಭೂಲಾಭವಾಗವುದು. ರೋಗಿಗಳು ಬದ್ಧರು ಭೀತರು ಆಪತ್ತಿಗೆ ಸಿಲುಕಿದವರು ಎಲ್ಲರೂ ರೋಗಾದಿಗಳಿಂದ ಮುಕ್ತರಾಗುವರು. ಕೀರ್ತಿ ಇಲ್ಲದವರು ಉಜ್ಜ್ವಲ ಕೀರ್ತಿ ಹೊಂದುತ್ತಾರೆ. ಮೂರ್ಖರು ಪಂಡಿತರಾಗುತ್ತಾರೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರಾಧಾಸ್ತೋತ್ರವೆಂಬ ತೊಂಬತ್ತೆರಡನೆ ಅಧ್ಯಾಯ ಮುಗಿಯಿತು.*

## ರಾಧಾ ಉದ್ಧವರ ಸಂವಾದ

**ಅಧ್ಯಾಯ - ೯೩**

ಉದ್ಧವನು ಮಾಡಿದ ಸ್ತೋತ್ರವನ್ನು ಕೇಳಿ ರಾಧೆ ಎಚ್ಚೆತ್ತು ನೋಡಿದಳು. ಆಕಾರದಲ್ಲಿ ಕೃಷ್ಣನಂತೆ ಇರುವ ಉದ್ಧವನನ್ನು ಕಂಡು ದುಃಖದಿಂದ ನುಡಿದಳು. 'ವತ್ಸ, ನಿನ್ನ ಹೆಸರೇನು? ಯಾರು ನಿನ್ನನ್ನು ಕಳಿಸಿದರು? ಎಲ್ಲಿಂದ ಬಂದೆ? ಏಕೆ? ಹೇಳು. ಆಕಾರದಲ್ಲಿ ಕೃಷ್ಣನನ್ನು ಹೋಲುತ್ತಿರುವೆ. ಕೃಷ್ಣನ ಸೇವಕನಿರಬೇಕು. ಹೇಳು. ಕೃಷ್ಣ ಬಲರಾಮರು ಕ್ಷೇಮದಿಂದಿರುವರೆ? ನಂದ ಏಕೆ ಇನ್ನೂ ಮಥುರೆಯಲ್ಲಿಯೆ ಇದ್ದಾನೆ? ಕೃಷ್ಣ ತಿರುಗಿ ವೃಂದಾವನಕ್ಕೆ ಬರುವನೆ? ಅವನ ಮುಖಚಂದ್ರನ ದರ್ಶನ ನನಗೆ ಲಭಿಸುವುದೆ? ರಾಸಕ್ರೀಡೆಯಾಡುತ್ತ ನಾನು ಅವನ ಮೈಗೆ ಗಂಧ ಲೇಪಿಸುವೆನೆ? ಹೇಳು.'

**ಉದ್ಧವ:-** ' ದೇವಿ, ನಾನು ಉದ್ಧವನೆಂಬ ಕ್ಷತ್ರಿಯ. ಕೃಷ್ಣನ ಪರಿಚಾರಕ. ಕೃಷ್ಣ ಬಲರಾಮ ಮತ್ತು ನಂದರ ಕ್ಷೇಮ ಸಮಾಚಾರ ತಿಳಿಸಲು ಕೃಷ್ಣ ನನ್ನನ್ನು ಕಳಿಸಿದ್ದಾನೆ.'

**ರಾಧೆ:-** 'ಉದ್ಧವ, ನೋಡು, ಈ ಯಮುನಾತೀರ, ಈ ಸುಗಂಧ ಭರಿತವಾದ ಗಾಳಿ, ಆಟದ ಸ್ಥಳವಾದ ಈಚಲ ಮರದ ಬುಡ, ವೃಂದಾವನ, ಕೋಗಿಲೆಯ ಧ್ವನಿ, ಸುಗಂಧಮಯವಾದ ಈ ಹಾಸಿಗೆ, ಚತುರ್ವಿಧ ಅನ್ನಗಳು, ಮಧುಪಾನ, ಎದೆ ಕಲಕಿ ನೋವು ತರುವ ಆ ಪಾಪಿ ಮನ್ಮಥ, ರತ್ನ ದೀಪಗಳು, ರತಿ ಗೃಹಗಳು, ಪೂರ್ಣಚಂದ್ರ, ಹೂವಿನ ಹಾಸಿಗೆ, ತಾಂಬೂಲ, ಹೂಮಾಲೆಗಳು, ಬಿಳಿ ಚಾಮರ ಕನ್ನಡಿಗಳು. ಮುತ್ತು ಮಾಣಿಕ್ಯಗಳ ಹಾರಗಳು, ಈಉಪವನ ಸರೋವರಗಳು, ಉದ್ಯಾನಗಳು ಎಲ್ಲ ಮೊದಲಿನಂತೇ ಇವೆ. ಆದರೆ ನನ್ನ ಪ್ರಾಣನಾಥನೆಲ್ಲಿ? ಹಾ ಕೃಷ್ಣ, ರಮಾನಾಥ, ಪ್ರಾಣೇಶ್ವರ ಎಲ್ಲಿರುವೆ? ಈ ದಾಸಿ ನಿನಗೇನು ಅಪರಾಧ ಮಾಡಿದಳು? ನಾನು ದಾಸಿ ಎಂದ ಮೇಲೆ ನನ್ನಲ್ಲಿ ಅಪರಾಧಗಳಿದ್ದೇ ಇರುತ್ತವೆ.' ಹೀಗೆ ಹೇಳುತ್ತ ರಾಧೆ ಮೈ ಮರೆತಳು. ಉದ್ಧವ ಸಂತೈಸಿದ.

ರಾಧೆಯನ್ನು ನೋಡಿ ಉದ್ಧವನಿಗೆ ಪರಮಾಶ್ಚರ್ಯವಾಯಿತು. ಏಳು ಮಂದಿ ಸಖಿಯರು ಅವಳಿಗೆ ಸದಾ ಬಿಳಿ ಚಾಮರಗಳನ್ನು ಬೀಸುತ್ತಿದ್ದರು. ನೂರು ಕೋಟಿ ಗೋಪಿಯರು ಬೇರೆ ಬೇರೆ ಸೇವೆಗಳಲ್ಲಿ ತೊಡಗಿದ್ದರು. ಕಾಡಿಗೆ ಹೂಮಾಲೆ ಸಿಂದೂರ ಗೋರೋಚನ ಗಂಧಪಾತ್ರೆ ಕನ್ನಡಿ ಕುಂಕುಮ ಕಸ್ತೂರಿ ಸಂಪಿಗೆ ಮಧುಪಾತ್ರೆ ಸುಗಂಧ ತೈಲ ತಾಂಬೂಲ ಪಾನೀಯ ಜಲ ಆಟದ ಗೊಂಬೆ ಚೆಂಡು ರತ್ನಾಭರಣ ಶುಭ್ರವಾದ ಬಟ್ಟೆಗಳು ಭಕ್ಷ್ಯಗಳು ಹೂಮಾಲೆ ಬಾಚಣಿಗೆ ಅರಗಿನ ರಸ ನೆಲ್ಲಿರಸ ಮುಂತಾದವುಗಳನ್ನು ಹಿಡಿದು ಭಯದಿಂದ ದೂರ ನಿಂತಿದ್ದರು. ಕೆಲವರು ದುಃಖದಿಂದ ಅಳುತ್ತಿದ್ದರು. ಕೆಲವರು ಒಡತಿಯನ್ನು ಸಂತೈಸುತ್ತಿದ್ದರು. ಮೃದುವಾದ ತಾವರೆ ಎಲೆಯ ಮೆತ್ತನೆಯ ಹಾಸಿಗೆಯಲ್ಲಿ ಒಡತಿಯನ್ನು ಮಲಗಿಸಿ ಸೇವಿಸುತ್ತಿದ್ದರು. ಈಸ್ಥಿತಿಯಲ್ಲಿ ರಾಧೆಯನ್ನು ನೋಡಿ ಉದ್ಧವ ಭೀತನಾಗಿ ಮಧುರವಾಗಿ ನುಡಿದ -

'ದೇವಿ, ದೇವದೇವನಾದ ಕೃಷ್ಣನ ಪ್ರಾಣೇಶ್ವರಿ ನೀನು ಮೂಲಪ್ರಕೃತಿ. ಶ್ರೀದಾಮನ ಶಾಪದಿಂದ ಗೋಲೋಕದಿಂದ ಇಲ್ಲಿಗೆ ಬಂದಿರುವಿ ಎಂಬುದು ನನಗೆ ಗೊತ್ತು. ನಿನಗೆ ಶುಭವಾರ್ತೆ ಹೇಳಿ ವಿರಹದಿಂದ ನೊಂದ ನಿನ್ನ ಹೃದಯಕ್ಕೆ ಅಮೃತದ ಸೇಚನೆ ಮಾಡಬಯಸುತ್ತೇನೆ. ನಂದ ಆನಂದದಿಂದ ಮಧುರೆಯಲ್ಲಿಯೆ ಇದ್ದಾನೆ. ಕೃಷ್ಣನ ಉಪನಯನದವರೆಗೂ ಇರಲು ಅವನನ್ನು ವಸುದೇವ ನಿಮಂತ್ರಿಸಿದ್ದಾನೆ. ಉಪನಯನದ ಮಂಗಳಕಾರ್ಯವಾದೊಡನೆ ನಂದಕೃಷ್ಣ ಬಲರಾಮರನ್ನು ಕರೆದುಕೊಂಡು ಗೋಕುಲಕ್ಕೆ ಬರುತ್ತಾನೆ. ಕೃಷ್ಣ ಬಂದು ಮಾತೆ ಯಶೋದೆಗೆ ನಮಿಸಿ ರಾತ್ರಿಯಲ್ಲಿ ವೃಂದಾವನಕ್ಕೆ ಬರುತ್ತಾನೆ. ಅವನ ಮುಖಚಂದ್ರಮನನ್ನು ನೀನು ಬೇಗನೆ ನೋಡಲಿರುವಿ. ವಿರಹ ದುಃಖವನ್ನೆಲ್ಲ ಮರೆಯುವಿ. ಮಾತೆ, ಧೈರ್ಯತಾಳು, ಶೋಕ ಬಿಡು. ಶುಭ್ರವಾದ ಬಟ್ಟೆ ಉಟ್ಟು ಆಭರಣ ತೊಟ್ಟು ಗಂಧ ಕಸ್ತೂರೀ ಕುಂಕುಮಗಳನ್ನು ಧರಿಸು. ತಲೆ ಬಾಚಿಕೊಂಡು ಜಾಜಿಯ ಹೂ ಮುಡಿದು ಕೆನ್ನೆಗಳ ಮೇಲೆ ಮಕರಿಕೆ ಬರೆಸಿಕೊಳ್ಳು. ಬೈತಲೆಗೆ ಸಿಂದೂರವಿಟ್ಟು, ಅಂಗಾಲುಗಳಿಗೆ ಅರಗಿನ ರಸ ಹಚ್ಚಿಕೊಂಡು ರತ್ನ ಸಿಂಹಾಸನದಲ್ಲಿ ಮಂಡಿಸು. ಕೃಷ್ಣನೊಡನೆ ಮಧುಪಾನ ತಾಂಬೂಲ ಮೆಲ್ಲು, ರತ್ನಮಂಚದಲ್ಲಿ ಹೂವಿನ ಹಾಸಿಗೆಯಲ್ಲಿ ಕೃಷ್ಣನೊಡನೆ ಶಯನ ಮಾಡು. ಬಿಳಿಚಾಮರ ಹಿಡಿದ ಗೋಪಿಯರು ನಿನ್ನನ್ನು ಸೇವಿಸುತ್ತಾರೆ. ಕಾಲುಗಳನ್ನು ಒತ್ತುತ್ತಾರೆ.'

ಹೀಗೆ ಹೇಳಿ ಉದ್ಧವ ಬ್ರಹ್ಮಾದಿ ವಂದಿತವಾದ ರಾಧೆಯ ಪಾದಕಮಲಗಳಿಗೆ ಮಣಿದು ನಿಂತ. ರಾಧೆ ಬಹಳ ಪ್ರಸನ್ನಳಾಗಿ ಅವನಿಗೆ ಅಮೂಲ್ಯವಾದ ರತ್ನದುಂಗುರವನ್ನು ಬಹುಮಾನವಾಗಿ ಇತ್ತಳು. ಅದು ವಿಶ್ವಕರ್ಮ ನಿರ್ಮಿತವಾಗಿದ್ದು ದೊಡ್ಡ ದೀಪದಂತೆ ಬೆಳಗುತ್ತಿತ್ತು. ಜೊತೆಗೆ, ಅಗ್ನಿ ಹಿಂದೆ ರಾಸಮಂಡಲದಲ್ಲಿ ಕೃಷ್ಣನಿಗೆ ಕೊಟ್ಟಿದ್ದ ರತ್ನ ಕುಂಡಲಗಳನ್ನೂ ರತ್ನಾಭರಣಗಳನ್ನೂ ಶುಭ್ರವಸ್ತ್ರಗಳನ್ನೂ ನೀಡಿದಳು. ಸೂರ್ಯ ಕೃಷ್ಣನಿಗೆ ಕೊಟ್ಟಿದ್ದ ಸ್ಯಮಂತಕ ಮಣಿಯನ್ನೂ ನೀಡಿದಳು. ದೇವೇಂದ್ರನಿತ್ತ ರತ್ನಸಿಂಹಾಸನವನ್ನೂ ನೀಡಿದಳು. ವರುಣನು ಕೊಟ್ಟಿದ್ದ ಮಣಿಮಯವಾದ ಛತ್ರವನ್ನೂ ನೀಡಿದಳು. ಶಿವ ಕೊಟ್ಟಿದ್ದ ಮಣಿಮಯವಾದ ಜಪಮಾಲೆಯನ್ನೂ ನೀಡಿದಳು. ಚಂದ್ರನು ನೀಡಿದ್ದ ಚಂದ್ರಕಾಂತ ಮಣಿಯನ್ನೂ ನೀಡಿದಳು. ಧರ್ಮನಿತ್ತ ಮಧುಪರ್ಕ ಮಧುಪಾತ್ರಗಳನ್ನೂ ನೀಡಿದಳು. ಮಿಷ್ಟಾನ್ನ ಭೋಜನ ಮಾಡಿಸಿದಳು. ತಾಂಬೂಲ ಗಂಧಮಾಲ್ಯಗಳನ್ನೂ ನೀಡಿದಳು. ಶುಭಾಶೀರ್ವಾದವನ್ನೂ ಮಾಡಿದಳು. ಕೃಷ್ಣನು ರಾಸಮಂಡಲದಲ್ಲಿ ನೀಡಿದ ತತ್ತ್ವ ಜ್ಞಾನವನ್ನೂ ನೀಡಿದಳು. ಅವನ ವಂಶದಲ್ಲಿ ಮುಂದಿನ ನೂರು ತಲೆ ಮಾರುಗಳವರೆಗೂ ನಶಿಸದ ಸ್ಥಿರವಾದ ಸಂಪತ್ತನ್ನೂ ನೀಡಿದಳು. ವಿದ್ಯೆ ಯಶಸ್ಸು ಕೀರ್ತಿ ಸರ್ವಸಿದ್ಧಿ ಹರಿದಾಸ್ಯ ಹರಿಭಕ್ತಿಗಳನ್ನೂ ಅನುಗ್ರಹಿಸಿದಳು. ತಾನು ಶುಭ್ರವಸ್ತ್ರಗಳನ್ನು ಉಟ್ಟು ಅಮೂಲ್ಯ ರತ್ನಾಭರಣಗಳನ್ನೂ ಧರಿಸಿ ನೂರು ಕೋಟಿ ಗೋಪಿಯರಿಂದ ಪರಿವೃತಳಾಗಿ ಉದ್ಧವನನ್ನು ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ಉಪಚರಿಸಿದಳು. ಪುನಃ ಕೇಳಿದಳು - 'ಉದ್ಧವ, ಕೃಷ್ಣ ನಿಜವಾಗಿಯೂ ಬರುತ್ತಾನೆಯೆ? ನಿಜ ಹೇಳು. ಭಯ ಪಡಬೇಡ.

**ವರಂ ಕೂಪಶತಾತ್ ವಾಪೀ ವರಂ ವಾಪೀಶತಾತ್ ಕ್ರತುಃ।**
**ವರಂ ಕ್ರತುಶತಾತ್ ಪುತ್ರಃ ಸತ್ಯಂ ಪುತ್ರಶತಾ ಕಿಲ।**
**ನ ಹಿ ಸತ್ಯಾತ್ ಪರೋ ಧರ್ಮೋ ನಾನೃತಾತ್ ಪಾತಕಂ ಪರಂ॥**

ನೂರು ಬಾವಿ ತೋಡಿಸುವುದಕ್ಕಿಂತ ಒಂದು ಕೊಳವನ್ನು ನಿರ್ಮಿಸುವುದು, ನೂರು ಕೊಳಗಳಿಗಿಂತ ಒಂದು ಯಾಗ ಮಾಡುವುದು, ನೂರು ಯಾಗ ಮಾಡುವುದಕ್ಕಿಂತ ಒಬ್ಬ ಪುತ್ರನನ್ನು ಪಡೆಯುವುದು, ನೂರು ಪುತ್ರರನ್ನು ಪಡೆಯುವುದಕ್ಕಿಂತ ಸತ್ಯ ಧರ್ಮ ಪರಿಪಾಲನೆ ಮಾಡುವುದು ಮೇಲು. ಸತ್ಯವೆಂಬ ಧರ್ಮಕ್ಕಿಂತ ಮೇಲಾದ ಧರ್ಮ ಇನ್ನೊಂದಿಲ್ಲ; ಹೇಗೆ ಸುಳ್ಳಿಗಿಂತ ಮೇಲಾದ ಪಾಪಕರ್ಮ ಇನ್ನೊಂದಿಲ್ಲವೋ ಹಾಗೆ.' ಇದನ್ನು ಕೇಳಿ ಉದ್ಧವನೆಂದ. 'ಶ್ರೀಕೃಷ್ಣ ನಿಜವಾಗಿಯೂ ಬರುತ್ತಾನೆ. ನಿಜವಾಗಿಯೂ ನೀನು ಅವನ ಮುಖಚಂದ್ರನನ್ನು ಕಾಣುವಿ, ಕಂಡು ಎಲ್ಲ ಸಂತಾಪವನ್ನೂ ಕಳೆದುಕೊಳ್ಳುವಿ. ನಾನೆ ಮಧುರೆಗೆ ಹೋಗಿ ಅವನನ್ನು ಕಳಿಸಿಕೊಡುತ್ತೇನೆ. ನನಗೆ ಹೊರಡಲು ಅನುಜ್ಞೆ ನೀಡು. ಕೃಷ್ಣನ ಬಳಿಗೆ ಹೋಗಿ ನಿನ್ನ ಎಲ್ಲ ವೃತ್ತಾಂತವನ್ನೂ ಅವನಿಗೆ ತಿಳಿಸುತ್ತೇನೆ.'

**ರಾಧೆ:-** 'ಉದ್ಧವ, ಹೋಗು, ಆದರೆ ಮೊದಲಿಗೆ ನನ್ನ ದುಃಖದ ಕಥೆಯನ್ನು ಸ್ವಲ್ಪ ಕೇಳು. ಮಧುರೆಗೆ ಹೋಗಿ ನನ್ನನ್ನು ಮಾತ್ರ ಮರೆಯಬೇಡ. ನನ್ನ ಪ್ರಿಯಕರನನ್ನು ಇಲ್ಲಿಗೆ ಕಳಿಸಿಕೊಡಲೇ ಬೇಕು. ನಾರಿಯರ ಮನಸ್ಸನ್ನು ಯಾವ ಪಂಡಿತನೂ ಅರ್ಥಮಾಡಿಕೊಳ್ಳಲಾರ. ಅದು ವೇದಗಳಿಗೂ ಅಸಾಧ್ಯ. ಶಾಸ್ತ್ರಗಳಾದರೂ ಏನು ಹೇಳಬಲ್ಲವು? ನಾನು ಹೇಳುತ್ತೇನೆ. ಅದನ್ನು ನೀನು ಕೃಷ್ಣನಿಗೆ ಹೇಳು. ನನಗೆ ಅವನ ವಿರಹದಿಂದ ಮನೆ ಕಾಡುಗಳಲ್ಲಿ ಭೇದ ಕಾಣಿಸುತ್ತಿಲ್ಲ. ಪಶು-ಮನುಷ್ಯ, ನಿಜಸ್ವಪ್ನಗಳಲ್ಲಿಯೂ ಭೇದ ತಿಳಿಯುವುದಿಲ್ಲ. ಸೂರ್ಯ ಚಂದ್ರರ ಉದಯಾಸ್ತಗಳ ಪರಿವೆಯೂ ಇಲ್ಲ. ಈಗ ಒಂದು ಕ್ಷಣ ಕೃಷ್ಣನ ವಾರ್ತೆಯನ್ನು ನಿನ್ನ ಮುಖದಿಂದ ಕೇಳಿದ ಮೇಲೆ ಸ್ವಲ್ಪ ಚೈತನ್ಯ ಬಂದಂತಾಗಿದೆ. ಎಲ್ಲೆಲ್ಲಿಯೂ ಕೃಷ್ಣನ ರೂಪ ಕಾಣುತ್ತಿದೆ. ಅವನ ಕೊಳಲಿನ ಧ್ವನಿ ಕೇಳಿಸುತ್ತಿದೆ. ನನ್ನ ಕುಲ ಲಜ್ಜೆ ಭಯ ಇವಾವುದರ ಪರಿವೆಯೆ ಇಲ್ಲದೆ ಸದಾ ಕೃಷ್ಣನ ಬಗ್ಗೆ ಆಲೋಚಿಸುತ್ತಿದ್ದೇನೆ. ಜಗದೊಡೆಯನನ್ನು ಹೊಂದಿಯೂ ಅವನ ಮಾಯೆಯಿಂದ ನನಗೆ ಅಜ್ಞಾನ ಕವಿದಿತ್ತು. ಆದರಿಂದ ವೇದಗಳಿಗೂ ದೇವತೆಗಳಿಗೂ ಧ್ಯೇಯನಾದ ಆ ಪರಮಾತ್ಮನನ್ನು ಎಷ್ಟೋ ಬಾರಿ ಕೋಪದಿಂದ ಆಕ್ಷೇಪಿಸಿ ನುಡಿದುದುಂಟು. ಅದು ನನಗೆ ಎದೆಯಲ್ಲಿ ಮುಳ್ಳಿನಂತೆ ಚುಚ್ಚುತ್ತಿದೆ. ಅವನ ಗುಣಗಾನ ಧ್ಯಾನ ಉಪಾಸನೆಗಳಲ್ಲಿ ಕಳೆವ ಕಾಲವೆ ನನಗೆ ಹರ್ಷದಾಯಕವೆನಿಸುತ್ತದೆ. ಅವುಗಳಿಗೆ ವಿಘ್ನ ಬಂತೆಂದರೆ ಹೃದಯದಲ್ಲಿ ಸಂತಾಪ ಉಂಟಾಗುತ್ತಿದೆ. ಉದ್ಧವ, ನಾನು ಅವನೊಡನೆ ಆಡಿದ ಆ ಆಟಗಳನ್ನು ಪುನಃ ಆಡಬೇಕೆಂದು ನನಗೆ ಆಸೆಯಾಗದಿರುತ್ತದೆಯೆ? ಏಕಾಂತದಲ್ಲಿ ಅವನೊಡನೆ ಸಮಾಗಮದ ಸೌಭಾಗ್ಯ ಬೇಕೆನಿಸದಿರುತ್ತದೆಯೆ? ಅವನೊಡನೆ ವೃಂದಾವನಕ್ಕೆ ನಾನಿನ್ನು ಹೋಗಲಾರೆನೆ? ಅವನೆದೆಗೆ ಶ್ರೀಗಂಧ ಲೇಪಿಸಿ ಹೂಮಾಲೆ ಹಾಕಿ ಅವನ ಮುಖ ಕಮಲವನ್ನು

ನೋಡಲಾರೆನೆ? ಅವನೊಡನೆ ರಾಸಮಂಡಲ, ಚಂದನವನ, ಮಲಯ, ಮಾಧವೀವನ, ಮಧುವನ, ಶ್ರೀಖಂಡವನ, ಚಂದ್ರಸರೋವರ, ನಂದನವನ, ಭದ್ರಕ ಮುಂತಾದ ಸ್ಥಳಗಳಲ್ಲಿ ವಿಹರಿಸಲಾರೆನೆ? ವೈಶಾಖ ಮಾಸದಲ್ಲಿ ಅರಳಿದ ಜಾಜಿಯ ತೋಟಗಳಲ್ಲಿ ವಿಹರಿಸುವ ಆ ಮಧುರವಾದ ಅನುಭವ ಇನ್ನೆಲ್ಲಿ ದೊರಕೀತು? ಎಲ್ಲಿ ಆ ವೈಶಾಖದ ರಾತ್ರಿ? ಎಲ್ಲಿ ಮಧು? ಎಲ್ಲಿ ಮಾಧವ?''

ಹೀಗೆ ನುಡಿದು ಕೃಷ್ಣನ ಪಾದಕಮಲವನ್ನು ನೆನೆದು ತಿರುಗಿ ಮೈಮರೆತಳಾ ರಾಧೆ. ಮೈರೋಮಾಂಚಗೊಂಡು ಕಣ್ಣೀರು ಸುರಿಸಿದಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರಾಧಾಉದ್ಧವ ಸಂವಾದವೆಂಬ ತೊಂಬತ್ತ ಮೂರನೆ ಅಧ್ಯಾಯ ಮುಗಿಯಿತು*



## ರಾಧೆಯ ಸಖಿಯರಿಂದ ಕೃಷ್ಣನ ಗುಣಗಾನ — ಅಧ್ಯಾಯ - ೯೪

ಉದ್ಧವ ರಾಧೆಯನ್ನು ಸಂತೈಸತೊಡಗಿದ. ಅವಳ ಭಕ್ತಿಯ ಗಾಢತೆಯನ್ನು ನೋಡಿ ತನ್ನ ಭಕ್ತಿ, ಏಕೆ, ಇಡೀ ಜಗತ್ತೇ ತುಚ್ಛವೆನಿಸಿತು ಉದ್ಧವನಿಗೆ. 'ಜಗನ್ಮಾತೆ, ಸಮಾಧಾನ ತಾಳು. ಹಿಂದಿನಂತೆಯೆ ನಿನ್ನ ಸರ್ವಸ್ವವೆನಿಸಿದ ಕೃಷ್ಣ ನಿನಗೆ ಗೋಚರಿಸಲಿದ್ದಾನೆ. ನಿನಗಿದೋ ನಮಸ್ಕಾರ. ನಿನ್ನಿಂದ ಪ್ರಪಂಚ ಪಾವನವಾಗಿದೆ. ನಿನ್ನ ಪಾದಧೂಳಿಯಿಂದ ಈ ನೆಲ ಪಾವನವಾಗಿದೆ. ನಿನ್ನ ಸಖಿಯರಾದ ಈ ಗೋಪಿಯರೆ ಪುಣ್ಯಾತ್ಮರು. ಲೋಕ ನಿನ್ನನ್ನೆ ಹಾಡಿ ಹೊಗಳುತ್ತದೆ. ದೇವತೆಗಳೂ ಸನಕಾದಿಗಳೂ ನಿನ್ನ ಗುಣಗಾನವನ್ನೆ ಮಾಡುತ್ತಾರೆ. ಎಲ್ಲರಿಗೂ ಎಲ್ಲ ವಿಘ್ನ ಕಳೆದು ಹರಿಭಕ್ತಿ ನೀಡುವವಳು ನೀನು. ನೀನೆ ರಾಧೆ, ನೀನೆ ಕೃಷ್ಣ, ನೀನೆ ಪುರುಷ, ನೀನೆ ಪ್ರಕೃತಿ, ರಾಧಾ ಮಾಧವರಲ್ಲಿ ಭೇದ ವೇದಪುರಾಣಗಳಲ್ಲಿ ಎಲ್ಲಿಯೂ ಕಂಡು ಬರುವುದಿಲ್ಲ.'

ರಾಧೆ ಎಚ್ಚರಗೊಳ್ಳದಿದ್ದುದನ್ನು ಕಂಡು **ಮಾಧವಿ** ಎಂಬ ಗೋಪಿ ಉದ್ಧವನನ್ನು ಹಿಂದೆ ಸರಿಸಿ ತಾನೆ ರಾಧೆಯ ಮುಂದೆ ನಿಂತು ನುಡಿದಳು - 'ಆ ಕಳ್ಳ ಕೃಷ್ಣನಲ್ಲಿ ಅಂಥ ರೂಪ ಏನಿದೆ? ವೇಷ ಏನಿದೆ? ಸುಖ ಐಶ್ವರ್ಯ ಗೌರವ ಬಲ ಶೌರ್ಯಗಳಾದರೂ ಏನಿವೆ? ಆತ ಎಲ್ಲಿಂದ ಬಂದ? ಎಲ್ಲಿಗೆ ಹೋದ? ಬಾಲಕನಾಗಿದ್ದಾನೆ. ದನ ಕಾಯುವ ವೇಷ ತೊಟ್ಟಿದ್ದಾನೆ. ಅವನೇನೂ ರಾಜಕುಮಾರನಲ್ಲ. ಅವನನ್ನೇಕೆ ಸದಾ ಸ್ಮರಿಸುವೆ? ನೀನು ನಿನ್ನ ಬಗ್ಗೇ ಆಲೋಚಿಸು. ಯಾರಿಗೆ ಆಗಲಿ, ತನಗೆ ತನ್ನ ಹೊರತು ಇನ್ನಾರು ಪ್ರಿಯಕರರು?'

**ಮಾಲತಿ ಹೇಳಿದಳು:-** 'ರಾಧೆ, ನಿನಗೆ ಧಿಕ್ಕಾರ. ನೀನು ನಾಚಿಕೆ ಇಲ್ಲದವಳು. ನಿನ್ನಿಂದ ನಿನ್ನ ಬಾಳೇ ಹಾಳಾಯಿತು. ಹೆಣ್ಣಿನ ಕುಲಕ್ಕೆ ಅಪಮಾನವಾಯಿತು. ನಾರಿ ಯಾವಾಗಲೂ ತನ್ನ ರಹಸ್ಯವನ್ನು ಗೋಪ್ಯದಲ್ಲಿಡಬೇಕು. ವ್ಯಕ್ತ ಮಾಡಿದರೆ ಯಶಸ್ಸಿಗೆ

ಕುಂದು. ನಿನ್ನ ಆಂತರ್ಯ ಯಾರಿಗೂ ತಿಳಿಯದಂತೆ ಸಂಚರಿಸುತ್ತಾ ಇರು. ಅಂತರಂಗದಲ್ಲಿ ಮಾತ್ರ ಪತಿಯನ್ನು ಆಲೋಚಿಸುತ್ತಿರು. ಲೋಕದಲ್ಲಿ ಶತ್ರುಗಳೆಂಬ ಜಾತಿಯೆಂದಿಲ್ಲ. ಹಾಗೆಯೆ ಮಿತ್ರರೆಂಬ ಜಾತಿಯಿಲ್ಲ. ಒಬ್ಬನು ನಮ್ಮ ಕಾರ್ಯಕ್ಕೆ ಸಹಾಯ ಮಾಡಿದರೆ ಮಿತ್ರ, ವಿರೋಧ ಮಾಡಿದರೆ ಶತ್ರು ಆಗುತ್ತಾನೆ. ಆದರಿಂದ ಒಬ್ಬನು ಶತ್ರುವೋ ಮಿತ್ರನೋ ಎಂಬುದನ್ನು ಆಲೋಚಿಸದೆ ನಮ್ಮ ಕಾರ್ಯವನ್ನು ಅವನಿಂದ ಸಾಧಿಸಿಕೊಳ್ಳಬೇಕು. ಹಾಗೆ ಮಾಡದೆ ನಮ್ಮ ಕಾರ್ಯವನ್ನು ನಾವೇ ಕಳೆದುಕೊಂಡರೆ ಅದೇ ಮೂರ್ಖತನ. ಧನವನ್ನು ಅಪಹರಿಸುವವನು ಶತ್ರು. ಪ್ರಾಣಕ್ಕೆ ಅಪಾಯ ತರುವವನೂ ಶತ್ರು. ಕಟುನುಡಿ ನುಡಿವವನೂ ದುಃಖ ನೀಡುವವನೂ ಶತ್ರು. ಕೃಷ್ಣ ನಿನ್ನನ್ನು ಶೋಕಸಾಗರದಲ್ಲಿ ಮುಳುಗಿಸಿ ನಿನ್ನ ಚೈತನ್ಯ ಪ್ರಾಣಗಳನ್ನು ಸೆಳೆದು ನಿಷ್ಠುರನಾಗಿ ಹೋಗಿದ್ದಾನೆ. ಅಂಥವನನ್ನು ಏಕೆ ನೆನೆದು ಕೊರಗುವೆ? ಶೋಕವನ್ನು ಬಿಡು. ನಿನ್ನನ್ನು ನೀನು ಕಾಪಾಡಿಕೊಳ್ಳು. **ಕಃ ಪ್ರಿಯಃ ಸ್ವಾತ್ಮನಃ ಪರಃ?** ತನಗೆ ತನಗಿಂತ ಪ್ರಿಯರು ಯಾರು?'

**ಪದ್ಮಾವತಿ:-** 'ಸಖಿ, ನೀನು ಹಿಂದೆ ಯಮುನಾ ತೀರದಲ್ಲಿ ಕೃಷ್ಣನ ಮುಂದೆ ಹೇಳಿದುದುಂಟು, 'ಕೃಷ್ಣ, ಅರಸಿಕನಿಗೆ ರಸಾನುಭವವಿಲ್ಲ, ನಾರಿಯರಿಗೆ ಸುಖವಿಲ್ಲ. ಮಿಂಚಿನ ಜ್ವಾಲೆಯಂತೆ, ನೀರಲ್ಲಿ ಬರೆದ ರೇಖೆಯಂತೆ ದುಷ್ಟರ ಪ್ರೀತಿ ಇರುತ್ತದೆ. ಶಾಸ್ತ್ರವನ್ನು ಮೀರುವವರಲ್ಲಿ ನೀತಿನಿಯಮವಿಲ್ಲ. ದುರ್ಜನರಲ್ಲಿ ವಿಶ್ವಾಸಾರ್ಹತೆ ಇಲ್ಲ.' ಕೃಷ್ಣನ ಮುಖ ನೋಡುತ್ತ ನೀನಾಡಿದ ಈ ಮಾತನ್ನು ಕೃಷ್ಣ ಕೇವಲ ಮುಗುಳು ನಗೆಯಿಂದ ಕಡೆಗಣ್ಣ ನೋಟದಿಂದ ಮರೆಸಿದ. ನೀನೂ ಪುನಃ ಪುನಃ ಅವನನ್ನು ನೋಡಿ ಮೈಮರೆತೆ. ಮನೆಯನ್ನು ತೊರೆದೆ. ಹಿರಿಯರ ಮಾತುಗಳನ್ನೂ ಅಲಕ್ಷ್ಯ ಮಾಡಿದೆ. ಸಖಿಯರ ಮಾತನ್ನೂ ಕೇಳದೆ ಸತತ ಕೃಷ್ಣಧ್ಯಾನ ಮಾಡುತ್ತಿರುವೆ. ಅನ್ನ ನೀರು ತ್ಯಜಿಸಿರುವೆ. ಇದರಿಂದ ಏನು ಫಲ? ಕೃಷ್ಣ ಎಲ್ಲಿಯೊ ಮಧುರೆಯಲ್ಲಿದ್ದಾನೆ. ನೀನು ಎಲ್ಲಿಯೊ ಕದಲೀವನದಲ್ಲಿರುವೆ. ನೀನೀಗ ಪ್ರಾಣಗಳನ್ನು ತೊರೆದರೂ ಅವನು ಕಾಣಲು ಸಿಗಲಾರ. ನಿನ್ನನ್ನು ನೀನು ಕಾಪಾಡಿಕೊಂಡರೆ ಎಂದಾದರೂ ಅವನನ್ನು ನೋಡಬಲ್ಲೆ.'

**ಚಂದ್ರಮುಖಿ:-** ಉದ್ಧವ, ಎಲ್ಲ ಸುಖ ಸಂಪತ್ತೂ ಪ್ರಾಚೀನ ಕರ್ಮಾನು ಗುಣವಾಗಿಯೆ ದೊರಕುವುದು. ಶೋಕ ದುಃಖ ವಿಪತ್ತುಗಳೂ ಹಾಗೆಯೆ. ಪುಣ್ಯಭೂಮಿಯಾದ ಭಾರತದಲ್ಲಿ ಪ್ರಕೃತಿಗೆ ಅತೀತನಾದ ಮನೋಹರನಾದ ಕೃಷ್ಣನಂಥ ಪತಿ ಸಿಗಲು ತಪಸ್ಸು ಮಾಡಿರಬೇಕು. ಇಲ್ಲದಿದ್ದರೆ ಹೀಗೆ ಪ್ರಣಯ ಜ್ವರದಿಂದ ಕಾಮಬಾಣದಿಂದ ಶರೀರ ಸುಟ್ಟುಹೋಗುತ್ತದೆ, ಅಷ್ಟೆ. ನೋಡು, ಈ ಚಂದ್ರನೂ ನಮಗೆ ಹೇಗೆ ಶತ್ರುವಾದ? ಈ ವಸಂತ ಈ ಮನ್ಮಥರೂ ಹೇಗೆ ನಮ್ಮನ್ನು ನೋಯಿಸುತ್ತಿದ್ದಾರೆ? ಮನ್ಮಥನನ್ನು ಶಿವ ಸುಟ್ಟರೂ ಆತ ತಿರುಗಿ ಪ್ರಾದುರ್ಭವಿಸಿದ್ದಾನೆ. ಚಂದ್ರನನ್ನು ರಾಹು ನುಂಗಿದರೂ ಹಾಗೇ ವಮನ ಮಾಡಿದ್ದಾನೆ. ಮನ್ಮಥನ ದಹನವಾದಾಗ ವಸಂತ ಮಿತ್ರಶೋಕದಿಂದ ಅಸು ನೀಗಿದರೂ ಪುನಃ ಅವನೆ ವನದಲ್ಲಿ ಪ್ರಾದುರ್ಭವಿಸಿದ್ದಾನೆ. ಆದರಿಂದ ಅಮೃತದ

ಸಮುದ್ರನಾಗಿದ್ದ ಚಂದ್ರ ಈಗ ವಿಷಸಮುದ್ರದಂತಾಗಿದ್ದಾನೆ. ಹೂಮಾಲೆ ಬೆಂಕಿಯ ಜ್ವಾಲೆಯಂತಾಗಿದೆ. ಶ್ರೀಗಂಧ ಬೆಂಕಿಗೆ ಹಾಕಿದ ತುಪ್ಪದ ಆಹುತಿಯಂತಾಗಿದೆ. ಸುವಾಸನೆಯಿಂದ ಕೂಡಿದ ತಂಗಾಳಿಯೂ ಸಖಿಯ ಮೈಯನ್ನು ಸುಡುತ್ತಿದೆ. ಉದ್ಧವ, ನೀನೆ ನೋಡುತ್ತಿರುವೆ, ಸಖಿ ಅನ್ನ ನೀರು ಬಿಟ್ಟು ಕೇವಲ ಉಸಿರಾಟದಿಂದ ಜೀವಿಸುತ್ತಿದ್ದಾಳೆ. ಈಗ ನೀನು ಕೃಷ್ಣನ ಗುಣಗಾನ ಮಾಡಿದರೆ ಅದನ್ನು ಕೇಳಿ ಸಖಿ ಪುನಃ ಚೈತನ್ಯ ಪಡೆಯಬಹುದು.'

**ಶಶಿಕಲೆ:-** 'ಮಾಧವಿ, ಕೃಷ್ಣನನ್ನೇಕೆ ದೂರುವೆ? ಅವನ ಬಗ್ಗೆ ನಿನಗೇನು ಗೊತ್ತು? ಬ್ರಹ್ಮಾದಿ ದೇವತೆಗಳು ನಾಲ್ಕು ವೇದಗಳು ಅವನ ಪಾದಕಮಲವನ್ನು ಇನ್ನೂ ಧ್ಯಾನ ಮಾಡುತ್ತಿರುವರು. ಲಕ್ಷ್ಮೀ ಸರಸ್ವತಿ ಪಾರ್ವತಿ ಶೇಷ ಶಿವರೂ ಎಲ್ಲ ಮುನಿಗಳೂ ಮನುಗಳೂ ಇನ್ನೂ ಅವನನ್ನು ತಿಳಿದಿಲ್ಲ. ಸರ್ವವ್ಯಾಪ್ತನಾದ ಅವನಿಗೆ ರೂಪವೆಲ್ಲಿ? ನಿರ್ಗುಣನಿಗೆ ಗುಣಗಳೆಲ್ಲಿ? ಭೂಭಾರ ಹರಣಕ್ಕಾಗಿ ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಅವನು ತನ್ನ ಅಪ್ರಾಕೃತ ದಿವ್ಯರೂಪ ತೋರುತ್ತಾನಷ್ಟೆ. ಕೋಟಿ ಮನ್ಮಥರ ಲಾವಣ್ಯದಿಂದ ಮೆರೆಯುತ್ತಾನೆ ಆತ. ಅವನ ಕಾಲು ತೊಳೆದ ಗಂಗಾಜಲವನ್ನು ಶಿವ ಭಕ್ತಿಯಿಂದ ತಲೆಯಲ್ಲಿ ಹೊತ್ತಿದ್ದಾನೆ. ಪ್ರಪಂಚದಲ್ಲಿ ವೈರಾಗ್ಯ ತಾಳಿ ಶಿವ ಅವನ ಪವಿತ್ರಗುಣಗಳನ್ನೆ ಐದು ಮುಖಗಳಿಂದ ಗಾನ ಮಾಡುತ್ತಾನೆ. ಹಾಡುತ್ತಾನೆ, ಕುಣಿಯುತ್ತಾನೆ. ಆಹಾರ ಆಭರಣಗಳನ್ನೂ ವಸ್ತ್ರವನ್ನೂ ಪರಿತ್ಯಜಿಸಿ ದಿಗಂಬರನಾಗಿ ಪರಂಜ್ಯೋತಿ ಪರಬ್ರಹ್ಮಸ್ವರೂಪನಾದ ಕೃಷ್ಣನನ್ನು ಸದಾ ಧ್ಯಾನಿಸುತ್ತಾನೆ. ಬ್ರಹ್ಮನೂ ಅವನ ಕುರಿತೇ ತಪಸ್ಸು ಮಾಡುತ್ತ ತನ್ನೆಲ್ಲ ಆಯುಷ್ಯವನ್ನೂ ಅದಕ್ಕೇ ವ್ಯಯಮಾಡುತ್ತಿದ್ದಾನೆ. ಶೇಷ ಸನತ್ಕುಮಾರರೂ ಯೋಗಿಗಳಾದ ಸಿದ್ಧರೂ ಹಾಗೇ ಧ್ಯಾನ ಮಾಡುತ್ತಿದ್ದಾರೆ.'

**ಸುಶೀಲೆ:-** 'ಕೃಷ್ಣನ ಲಾವಣ್ಯಕ್ಕೆ ಸಾವಿರ ಮನ್ಮಥರೂ ಎಣೆಯಾಗಲಾರರು. ಇನ್ನು ಚಂದ್ರನಾಗಲಿ ಅಶ್ವಿನೀ ಕುಮಾರರಾಗಲಿ ಯಾವ ಲೆಕ್ಕ? ಬ್ರಹ್ಮ ವಿಷ್ಣು ಶಿವಾದಿ ದೇವತೆಗಳೂ ಮುನಿಗಳೂ ಮನುಗಳೂ ಸಿದ್ಧರೂ ಸದಾ ಅವನ ಪಾದಕಮಲ ಧ್ಯಾನ ಮಾಡುತ್ತಿದ್ದಾರೆ. ವೇದಗಳೂ ಅವನನ್ನು ಸ್ತೋತ್ರ ಮಾಡಲು ಅಶಕ್ತವಾದುವು. ಸರಸ್ವತಿಯೂ ಸೋತು ಜಡಳಾಗಿ ಕ್ಷಮಾಯಾಚನೆ ಮಾಡುತ್ತಿದ್ದಾಳೆ. ಶೇಷನೂ ನಡುಗುತ್ತಿದ್ದಾನೆ. ವೇದಜನಕನಾದ ಬ್ರಹ್ಮನೂ ಸ್ತೋತ್ರ ಮಾಡಲು ಅಸಮರ್ಥನಾಗಿದ್ದಾನೆ. ಎಂದ ಮೇಲೆ ಅಂಥ ಕೃಷ್ಣನನ್ನು ಮಾಧವಿ ನಿಂದಿಸುತ್ತಾಳೆ! ಅದನ್ನು ಕೇಳಿದ ನಮ್ಮ ಈ ಸಭೆಯೆ ಅಪವಿತ್ರವಾಯಿತು. ಗೋಪಿಯರ ಜೀವನ ವ್ಯರ್ಥವಾಯಿತು. ನಮ್ಮೆಲ್ಲರ ನಡುವೆ ಈ ರಾಧೆಯೊಬ್ಬಳೆ ಪುಣ್ಯವತಿ. ಹಗಲು ರಾತ್ರಿ ಕೃಷ್ಣನನ್ನೆ ಧ್ಯಾನಿಸುತ್ತಾಳೆ. ಯಾರ ನಾಮಸ್ಮರಣ ಮಾತ್ರದಿಂದ ಕೋಟಿ ಜನ್ಮಗಳಲ್ಲಿ ಮಾಡಿದ ಪಾಪಗಳೆಲ್ಲ ನಶಿಸುವವೋ ಆ ಕೃಷ್ಣನನ್ನು ಈಕೆ ಸದಾ ಧ್ಯಾನಿಸುತ್ತಾಳೆ.'

**ರತ್ನಮಾಲೆ:-** 'ಒಂದು ಎಡಗೈಯಿಂದಲೆ ಗೋವರ್ಧನ ಪರ್ವತವನ್ನು ಎತ್ತಿದವ ಕೃಷ್ಣ. ಜಗತ್ತಿಗೆ ಜನಕನಾದ ಆ ಕೃಷ್ಣನ ಶೌರ್ಯ ಸಾಮರ್ಥ್ಯಗಳನ್ನು

ಏನೆಂದು ಬಣ್ಣಿಸಲಿ? ಸಾವಿರ ಬೆಟ್ಟಗಳನ್ನೂ ಪುಡಿ ಮಾಡಬಲ್ಲ ಮಹಾದೈತ್ಯರು ಲಕ್ಷಗಟ್ಟಲೆ ಬಂದರೂ ಆತ ಅವರನ್ನೆಲ್ಲ ಅನಾಯಾಸವಾಗಿ ನಾಶ ಮಾಡಬಲ್ಲ. ಅವನ ಒಂದು ಅಂಶದಿಂದ ಪಾದುರ್ಭವಿಸಿದ ವರಾಹರೂಪಿವಿಷ್ಣು ಸಾವಿರಾರು ಬೆಟ್ಟಗಳಿಂದಲೂ ಅಸಂಖ್ಯ ದೈತ್ಯವೀರರುಗಳಿಂದಲೂ ಕೂಡಿದ ಭೂಮಿಯನ್ನು ಅನಾಯಾಸವಾಗಿ ತನ್ನ ಕೋರೆದಾಡೆಯ ತುದಿಯಿಂದ ಎತ್ತಿದನೆಂದರೆ ಅವನ ಶೌರ್ಯ ಸಾಮರ್ಥ್ಯ ಪೌರುಷಗಳನ್ನು ಯಾರಿಗೆ ತಾನೆ ಬಣ್ಣಿಸಲು ಶಕ್ಯ?

**ಪಾರಿಜಾತೆ:-** ಈ ಭೂಮಿ ಸಪ್ತದ್ವೀಪಗಳಿಂದಲೂ ಪರ್ವತ ಅರಣ್ಯ ಸಾಗರಗಳಿಂದಲೂ ಯುಕ್ತವಾಗಿದ್ದು ಸರ್ವಾಧಾರವಾಗಿದೆ. ಬ್ರಹ್ಮಲೋಕದವರೆಗೆ ಒಟ್ಟು ಏಳು ಊರ್ಧ್ವಲೋಕಗಳೂ ಪಾತಾಳದವರೆಗೆ ಏಳು ಅಧೋಲೋಕಗಳೂ ಇವೆ. ಈ ಎಲ್ಲ ಲೋಕಗಳನ್ನು ಹೊಂದಿರುವ ಇಡೀ ಬ್ರಹ್ಮಾಂಡವೆ ಮಹಾವಿಷ್ಣುವಿನ ರೋಮ ಕೂಪದಲ್ಲಿ ಪರಮಾಣುವಿನಂತೆ ಕುಳಿತಿದೆ. ಇಂಥ ಮಹಾವಿಷ್ಣು ಕೃಷ್ಣನ ಹದಿನಾರನೆ ಒಂದಂಶವೆಂದ ಮೇಲೆ ಆ ಕೃಷ್ಣನ ಶೌರ್ಯ ಸಾಮರ್ಥ್ಯ ಯಾರಿಗೆ ತಿಳಿದೀತು? ಈ ಮಾಧವಿ ಏನು ತಿಳಿಯಬಲ್ಲಳು?

**ಮಾಧವಿ:-** ಈ ಗೋಪಿಯರಿಗೆ ಬುದ್ಧಿ ಏನೂ ಸಾಲದು. ಉದ್ಧವ, ನಾನು ಹೇಳಿದುದೇನೆಂದು ತಿಳಿಯದೇ ಮಾತನಾಡುತ್ತಿದ್ದಾರೆ, ಇವರು. ನಾನು ಹೇಳುವುದೇನೆಂಬುದನ್ನು ಹೇಳುತ್ತೇನೆ, ಕೇಳು. ವಿಷ್ಣು ತನ್ನ ಸ್ವೇಚ್ಛೆಯಿಂದಲೆ ಸಗುಣನೂ ಆಗುವನು, ನಿರ್ಗುಣನೂ ಆಗುವನು. ಭೂಭಾರ ಕಳೆಯಲೆಂದು ಈಗ ಗೋಪ ವೇಷಧರಿಸಿ ಬಾಲಕನಾಗಿದ್ದಾನೆ. ವೇದಪುರಾಣಗಳಿಗೆ ನಿಲುಕದವ. ಸಿದ್ಧರು ಸತ್ಪುರುಷರು ಬ್ರಹ್ಮ ಶಿವ ಶೇಷ ಮುಂತಾದ ಭಕ್ತರೂ ಅವನನ್ನು ಅರಿಯರು. ಮೂಢಳಾದ ನಾನೇನು ಅರಿಯಬಲ್ಲೆ? ಆದರೂ ನಾನು ಇಷ್ಟು ಹೇಳಬಲ್ಲೆ. ಅವನದು ಏನೊ ಒಂದು ಅನಿರ್ವಚನೀಯ ಅಪ್ರಾಕೃತ ರೂಪ, ಅನಿರ್ವಚನೀಯವಾದ ಶೌರ್ಯ ಬಲ ವೀರ್ಯ ಯಶಸ್ಸು ಸಿದ್ಧಿಗಳು. ಅವನ ಎಲ್ಲ ಗುಣಗಳೂ ಹೀಗೆಯೆ ದಿವ್ಯ ಅಪ್ರಾಕೃತ. ಆದರಿಂದ ಸಗುಣನಾದ ಆ ಕೃಷ್ಣನ ಗುಣಗಳನ್ನು ಹೇಗೆ ಹೇಳಲಿ? ನಿರ್ಗುಣನಾದ ಅವನಲ್ಲಿ ನಮ್ಮಂತೆ ಪ್ರಾಕೃತ ಗುಣಗಳನ್ನಾದರೂ ಹೇಗೆ ಹೇಳಲಿ? ಅವನು ಪ್ರಕೃತಿಯಿಂದ ಆಚೆ ಇರುವವನೆಂಬುದನ್ನು ಈ ಗೋಪಿ ಏನು ಬಲ್ಲಳು? ಏನೂ ತಿಳಿಯದೆ ನನ್ನ ಮಾತನ್ನು ನಿಂದಿಸುತ್ತಿದ್ದಾಳೆ. ಅವನು ಪರಂಜ್ಯೋತಿಃಸ್ವರೂಪ. ಅನಿರ್ವಚನೀಯ. ಮೂಲೋಕದ ಜನನಿಯಾದ ಮಹಾಲಕ್ಷ್ಮಿ ದಾಸಿಯಂತೆ ಅವನ ಪಾದಕಮಲವನ್ನು ಸೇವಿಸುತ್ತಿದ್ದಾಳೆ. ವಿಷ್ಣುಮಾಯೆಯೆನಿಸಿದ ಮೂಲಪ್ರಕೃತಿ ಭಯಭಕ್ತಿಗಳಿಂದ ಅವನ ಬಲಭಾಗದಲ್ಲಿ ನಿಂತಿರುತ್ತಾಳೆ. ಸರಸ್ವತಿಯೂ ಪಾರ್ವತಿಯೂ ಸ್ತೋತ್ರ ಮಾಡಲಾರದೆ ಭಯದಿಂದ ಸುಮ್ಮನೆ ನಿಂತಿರುತ್ತಾರೆ. ವೇದಗಳೂ ಅಶಕ್ತಿಯಿಂದ ಸುಮ್ಮನಾಗುತ್ತವೆ.'' ಉದ್ಧವ ಗೋಪಿಯರ ಮಾತುಗಳನ್ನು ಕೇಳಿ ಭಕ್ತ್ಯುದ್ರೇಕದಿಂದ ಸರ್ವಾಂಗ ಪುಲಕಿತನಾಗಿ ಆನಂದಬಾಷ್ಪ ಸುರಿಸಿದ. ಮೈಮರೆತು ಕೃಷ್ಣನನ್ನು ನೆನೆದ. ಆ ಗೋಪಿಯರ ಮುಂದೆ ತಾನೆಷ್ಟು ಸಣ್ಣವನೆಂಬುದು ಅವನಿಗೆ ಆಗ ಅರಿವಾಯಿತು. ಭಕ್ತಿಯಿಂದ ಗೋಪಿಯರನ್ನು ಬಾಯಿತುಂಬ ಹೊಗಳಿದ.

'ಈ ಜಂಬೂದ್ವೀಪ ಧನ್ಯ. ಪವಿತ್ರವಾದ ಮಂಗಳಕರವಾದ ಭಾರತವರ್ಷ ಈದ್ವೀಪದಲ್ಲಿದೆ. ಇದು ಪುಣ್ಯವಂತರಿಗೆ ವ್ಯಾಪಾರಕೇಂದ್ರ; ಇಲ್ಲಿ ಯಥೇಚ್ಛ ಪುಣ್ಯ ಮಾಡಿ ಬೇರೆ ಕಡೆ ಅದರ ಫಲವನ್ನು ಅನುಭವಿಸಬಹುದು. ಈ ಭಾರತವರ್ಷ ಪವಿತ್ರವೇಕೆಂದರೆ ಇದು ಗೋಪಿಯರ ಪಾದಕಮಲಧೂಳಿಯಿಂದ ಪರಮಪಾವನ ವೆನಿಸಿದೆ. ಈ ಗೋಪಿಯರು ಭಾರತಸ್ತ್ರೀಯರಲ್ಲೆಲ್ಲ ಧನ್ಯರು, ಮಾನ್ಯರು. ಏಕೆಂದರೆ ಅವರು ನಿತ್ಯವೂ ಪುಣ್ಯಕರವಾದ ರಾಧೆಯ ಪಾದಕಮಲದ ದರ್ಶನಭಾಗಿಗಳಾಗಿದ್ದಾರೆ. ರಾಧೆಯ ಪಾದಕಮಲ ದೂಳನ್ನು ಸೇವಿಸಲು ಬ್ರಹ್ಮ ಅರವತ್ತು ಸಾವಿರ ವರ್ಷ ತಪಸ್ಸು ಮಾಡಿದ್ದಾನೆ. ಹಿಂದೆ ಗೋಲೋಕದಲ್ಲಿ ವಾಸಮಾಡುತ್ತಿದ್ದ ಕೃಷ್ಣನ ಪ್ರಾಣಕ್ಕಿಂತ ಹೆಚ್ಚಾದ ರಾಧೆ ಶ್ರೀದಾಮನ ಶಾಪದಿಂದ ಈಗ ವೃಷಭಾನುವಿನ ಮಗಳಾಗಿ ಹುಟ್ಟಿದ್ದಾಳೆ. ಇವಳಿಗಾಗಲಿ ಬೇರೆ ಗೋಪಿಯರಿಗಾಗಲಿ ಕೃಷ್ಣಭಕ್ತರಾದ ಬ್ರಹ್ಮಾದಿ ದೇವತೆಗಳು ಯಾರೂ ಹದಿನಾರನೆಯ ಒಂದು ಭಾಗಕ್ಕೂ ಸಮಾನರಾಗಲಾರರು.

ಕೃಷ್ಣಭಕ್ತಿಯ ಸವಿಯನ್ನು ಯೋಗೀಂದ್ರನಾದ ಶಿವ ಬಲ್ಲ. ರಾಧೆ, ಗೋಪಿಯರು, ಗೋಪಾಲಕರು, ಗೋಲೋಕವಾಸಿಗಳು ಬಲ್ಲರು. ಬ್ರಹ್ಮ ಬಲ್ಲ, ಸನತ್ಕುಮಾರ ಬಲ್ಲ. ಸಿದ್ಧರೂ ಭಕ್ತರೂ ಅಲ್ಪಸ್ವಲ್ಪ ಬಲ್ಲರು. ನಾನು ಈ ಗೋಕುಲಕ್ಕೆ ಬಂದು ಧನ್ಯನಾದೆ, ಕೃತಕೃತ್ಯನಾದೆ. ಗೋಪಿಯರಿಂದಲೂ ಗುರುಗಳಿಂದಲೂ ನಾನು ಇಲ್ಲಿ ನಿಶ್ಚಲವಾದ ಹರಿಭಕ್ತಿಯನ್ನು ಸಂಪಾದಿಸುವೆನು. ಇನ್ನು ನಾನು ಮಧುರೆಗೆ ಹಿಂತಿರುಗುವುದಿಲ್ಲ. ಜನ್ಮ ಜನ್ಮಗಳಲ್ಲಿಯೂ ಗೋಪಿಯರ ದಾಸನಾಗಿ ಅವರ ಮುಖದಿಂದ ಕೃಷ್ಣನ ಗುಣ ಕೀರ್ತನೆಗಳನ್ನು ಕೇಳುವೆನು. ಗೋಪಿಯರನ್ನು ಮೀರಿಸಿದ ಹರಿಭಕ್ತನಿಲ್ಲ. ಅವರಲ್ಲಿರುವ ಭಕ್ತಿಗೆ ಸಮಾನವಾದ ಭಕ್ತಿಯೂ ಯಾರಲ್ಲಿಯೂ ಇಲ್ಲ.

**ಕಲಾವತಿ:-** ಪಿತೃಗಳ ಮಾನಸಕನ್ಯೆಯರು ಧನ್ಯೆ, ಮೇನೆ, ಮತ್ತು ನಾನು ಕಲಾವತಿ, ಮೂವರು ಅಕ್ಕತಂಗಿಯರು ಒಮ್ಮೆ ಕ್ಷೀರಸಾಗರದ ನಡುವಿನ ಶ್ವೇತದ್ವೀಪದಲ್ಲಿ ವಿಷ್ಣುವಿನ ದರ್ಶನಕ್ಕೆ ಹೋದೆವು. ಅಲ್ಲಿ ಸನತ್ಕುಮಾರನನ್ನು ಕಂಡೆವು. ಆದರೆ ನಾವು ಎದ್ದು ನಿಂತು ನಮಸ್ಕಾರಾದಿಗಳನ್ನು ಮಾಡಲಿಲ್ಲ. ಆತ ಕೋಪಗೊಂಡು ಶಪಿಸಿದ. 'ನೀವು ಮೂರ್ಖರು, ಅಹಂಕಾರ ತೋರುತ್ತಿರುವಿರಿ. ಅದರಿಂದ ಭೂಮಿಯಲ್ಲಿ ಹುಟ್ಟಿ ಭೂಮಿಯ ಪ್ರಾಣಿಗಳಿಗೆ ಪ್ರಿಯರಾಗಿ ಬಾಳಿರಿ. ಸ್ವರ್ಗಕ್ಕೆ ಹೋಗದಿರಿ.' ಕೋಪ ಶಾಂತವಾದಾಗ ವರವನ್ನೂ ನೀಡಿದ. 'ಮೇನೆ ವಿಷ್ಣುವಿನ ಅಂಶಯುಕ್ತನಾದ ಹಿಮಾಲಯನಿಗೆ ಹೆಂಡತಿಯಾಗಲಿ, ಅವಳಿಗೆ ಪಾರ್ವತಿ ಮಗಳಾಗಿ ಜನಿಸುವಳು. ಧನ್ಯೆ ಯೋಗಿ ಜನಕರಾಜನ ಮಹಿಷಿಯಾಗಲಿ. ಅವಳಿಗೆ ಮಹಾಲಕ್ಷ್ಮಿ ಸೀತೆಯಾಗಿ ಮಗಳಾಗುವಳು. ಕಲಾವತಿ ದ್ವಾಪರದ ಕೊನೆಯಲ್ಲಿ ದುರ್ವಾಸರ ಶಿಷ್ಯನಾದ ವೃಷಭಾನುವೆಂಬ ವೈಶ್ಯನ ಮಡದಿಯಾಗಲಿ. ಅವಳಲ್ಲಿ ಗೋಲೋಕವಾಸಿನಿಯಾದ ರಾಧೆ ಶ್ರೀದಾಮನ ಶಾಪದಿಂದ ಮಗಳಾಗಿ ಹುಟ್ಟುವಳು. ಬ್ರಹ್ಮ ರುದ್ರ ಶೇಷರಿಗೆ ಪ್ರಭುವಾದ ವಿಷ್ಣು ಭೂಭಾರಹರಣಕ್ಕಾಗಿ ಪುಣ್ಯಭೂಮಿಯಾದ ಭಾರತದಲ್ಲಿ ಅವತರಿಸುವನು. ಕಲಾವತಿ ಮತ್ತು ವೃಷಭಾನು ರಾಧೆಯೊಂದಿಗೆ ಜೀವನ್ಮುಕ್ತರಾಗಿ ಗೋಲೋಕವನ್ನು

ಸೇರುವರು. ಸೀತೆಯೊಡನೆ ಧನ್ಯೆ ವೈಕುಂಠವನ್ನು ಸೇರುವಳು. ಮೇನಕೆಯೂ ಪಾರ್ವತಿಯ ವರದಿಂದ ವಿಷ್ಣುಲೋಕವನ್ನೆ ಸೇರುವಳು. ಆಪತ್ತಿಗೆ ಸಿಲುಕದೆ ಮಹಿಮೆ ಎಲ್ಲಿ ವ್ಯಕ್ತವಾಗುತ್ತದೆ? ಕರ್ಮದಿಂದ ಉದ್ಭವಿಸುವ ದುಃಖ ಹೋದಮೇಲೆ ತಾನೆ ದುರ್ಲಭವಾದ ಸುಖ ಲಭಿಸೀತು? ಆದರಿಂದ ಪಿತೃಗಳ ಕನ್ಯೆಯರಾಗಿ ಹುಟ್ಟಿ ಸ್ವರ್ಗಭೋಗ ವಿಲಾಸಗಳಲ್ಲಿ ಮುಳುಗಿದ್ದ ನಾವು ಸನತ್ಕುಮಾರರ ದರ್ಶನದಿಂದ ಕರ್ಮಕ್ಷಯ ಹೊಂದಿ ಮಹಾಪುಣ್ಯ ಸಂಪಾದಿಸಿದೆವು. ಬ್ರಹ್ಮ ವಿಷ್ಣು ಶಿವಾದಿಗಳಿಗೂ ಸಿದ್ಧರಿಗೂ ಪ್ರಭುವಾದ ಶ್ರೀಕೃಷ್ಣನ ಅಪ್ರಾಕೃತ ನಿರ್ಗುಣ ರೂಪವನ್ನು ಕಂಡೆವು.

**ತುಲಸಿ:-** ಎಲ್ಲ ಪ್ರಾಣಿಗಳಲ್ಲಿಯೂ ದೇವತೆಗಳು ಬೇರೆ ಬೇರೆಯಾಗಿ ನೆಲೆಸಿದ್ದಾರೆ. ಪ್ರಾಣ, ವಿಷ್ಣು ಶಿವ, ಬ್ರಹ್ಮ, ಲಕ್ಷ್ಮೀ, ಸರಸ್ವತಿಯರೂ ಧರ್ಮ ಪುರುಷನೂ ನಿರ್ಗುಣನಾದ ಪರಮಾತ್ಮನೂ ಇರುವರು. ಅಪ್ರಾಕೃತನಾದ ಪರಮಾತ್ಮನೆ ಕೃಷ್ಣ. ಅವನೆ ಎಲ್ಲರ ಕರ್ಮಸಾಕ್ಷಿ. ಕರ್ಮಮಾಡಿ ಸುಖದುಃಖಗಳನ್ನು ಉಣ್ಣುವ ಜೀವ ಅವನ ಪ್ರತಿಬಿಂಬ. ಅವನ ಕಣ್ಣುಗಳಲ್ಲಿ ಚಂದ್ರ ಸೂರ್ಯರಿರುವರು. ನಾಲಗೆಯಲ್ಲಿ ಸರಸ್ವತಿ. ಚರ್ಮದಲ್ಲಿ ಭೂದೇವಿ. ಬಾಹುಗಳಲ್ಲಿ ಲೋಕಪಾಲಕರು. ಇವರೆಲ್ಲ ಪರಮಾತ್ಮನ ಸೇವಕರು. ಅವನಿಗೆ ಪ್ರೀತಿಪಾತ್ರರು. ಅದರಿಂದ ಸಂತರು ಸದಾ ಸರ್ವವಿಧದಿಂದಲೂ ಪರಮಾತ್ಮನನ್ನು ಭಜಿಸುತ್ತಾರೆ. ಯೋಗಿಗಳು ಧ್ಯಾನಿಸುತ್ತಾರೆ. ಅವನು ಕರ್ಮಿಗಳ ಕರ್ಮಗಳಿಗೆ ಸಾಕ್ಷಿಯಾಗಿದ್ದು ಅಂತರ್ಯಾಮಿಯಾಗಿದ್ದು. ಆ ಕರ್ಮಗಳನ್ನು ಅವರಿಂದ ಮಾಡಿಸುತ್ತಾನೆ.

**ಕಾಳಿ:-** ಬಾಲಕರು ವೃದ್ಧರು ಯುವಕರು ಈ ಮೂರು ಬಗೆಯ ಮಾನವರೂ ದೇವಾದಿಗಳೂ ಆ ಪರಮಾತ್ಮನನ್ನು ತಿಳಿಯಬೇಕು. ಉದ್ಧವ, ನೀನು ಈಗ ಮೂರ್ಛಿತಳಾಗಿರುವ ರಾಧೆಯನ್ನು ಎಬ್ಬಿಸು. ಹೇಗೆ ಎಬ್ಬಿಸಬೇಕೆಂಬುದನ್ನು ನೀನು ಬಲ್ಲೆ ತಾನೆ!

ಉದ್ಧವ ರಾಧೆಯನ್ನು ಎಬ್ಬಿಸುತ್ತ ಹೇಳಿದ. 'ಜಗನ್ಮಾತೆಯೆ, ಏಳು, ನಾನು ಬಂದಿದ್ದೇನೆ ನೋಡು, ಉದ್ಧವ, ಕೃಷ್ಣಭಕ್ತರ ಕಿಂಕರರಿಗೆ ಕಿಂಕರ. ಮಾತೆ, ನನ್ನಲ್ಲಿ ಅನುಗ್ರಹ ಮಾಡು. ನಾನು ಮಧುರೆಗೆ ಹಿಂತಿರುಗುತ್ತೇನೆ. ಮರದ ಹೆಣ್ಣುಗೊಂಬೆಯಂತೆ, ಬಂಡಿಗೆ ಕಟ್ಟಿದ ಎತ್ತಿನಂತೆ ನಾನು ಕೃಷ್ಣನಿಗೆ ಅಧೀನನಲ್ಲವೆ?'

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರಾಧಾ ಉದ್ಧವ ಸಂವಾದರೂಪವಾದ ತೊಂಬತ್ತನಾಲ್ಕನೆ ಅಧ್ಯಾಯ ಮುಗಿಯಿತು*

—o—

## ರಾಧೆಯಿಂದ ಕೃಷ್ಣನ ಗುಣಗಾನ

**ಅಧ್ಯಾಯ - ೯೫**

**ಶ್ರೀನಾರಾಯಣ ಮುನಿ:-** ಉದ್ಧವನ ಮಾತನ್ನು ಕೇಳಿ ರಾಧೆ ಎಚ್ಚೆತ್ತು ರತ್ನ ಸಿಂಹಾಸನದಲ್ಲಿ ಕುಳಿತು ವ್ಯಥೆ ತುಂಬಿದ ಹೃದಯದಿಂದ ಮಧುರವಾಗಿ ಹೇಳ ತೊಡಗಿದಳು. ಏಳುಮಂದಿ ಗೋಪಿಯರು ಭಕ್ತಿಯಿಂದ ಅವಳಿಗೆ ಬಿಳಿಚಾಮರ ಬೀಸಿ ಸೇವಿಸುತ್ತಿದ್ದರು.

**ರಾಧೆ:-** ಉದ್ಧವ, ನೀನು ಮಧುರೆಗೆ ಹಿಂತಿರುಗು. ಆದರೆ ಅಲ್ಲಿನ ಸುಖ ಸಂಪತ್ತಿನಲ್ಲಿ ಮುಳುಗಿ ನನ್ನನ್ನು ಮರೆಯಬೇಡ. ಮರೆತರೆ ಅದಕ್ಕಿಂತ ಹೆಚ್ಚಿನ ಪಾಪ ಕಾರ್ಯವಿನ್ನೊಂದಿಲ್ಲ. ನನ್ನ ಮಾತುಗಳೆಲ್ಲವನ್ನೂ ಶ್ರೀಕೃಷ್ಣನಿಗೆ ಹೇಳಿ ಅವನನ್ನು ಇಲ್ಲಿಗೆ ಕರೆದು ತಾ. ನಾನು ಈಸ್ತ್ರೀಜನ್ಮದಲ್ಲಿ ಬೇರೆ ಯಾವ ಸ್ತ್ರೀಯೂ ಪಡೆಯದಂಥ ಉತ್ತಮ ಪತಿಯನ್ನು ಪಡೆದೆ. ಆದರೂ ಅವನನ್ನು ಅಗಲಿದ್ದೇನೆ. ನನಗಿಂತ ಹೆಚ್ಚು ದುಃಖಿಗಳು ಲೋಕದಲ್ಲಿ ಇನ್ನಾರು?

ಉದ್ಧವ, ನೀನು ನನ್ನನ್ನೇಕೆ ಎಚ್ಚರಿಸುವಿ? ನನಗೆ ಏಕೆ ಎಚ್ಚರ? ಆತ್ಮನಿಲ್ಲದ ದೇಹವಿದ್ದೇನು ಫಲ? ಪ್ರೀತಿಯಿಂದ ಸತಿಪತಿಗಳು ಒಂದಾಗಿರುವುದೆ ಪರಮ ಸೌಭಾಗ್ಯ. ಅದು ಎಂದಿಗೂ ಚಿರನೂತನ. ಈ ಪ್ರೇಮ, ರಹಸ್ಯ ಸಂಗಮಗಳು ಬಹಳ ದುರ್ಲಭ. ಈಗ ಅದರ ನೆನಪು ಮಾತ್ರ ಸದಾ ನನ್ನ ಮನಸ್ಸಿನಲ್ಲಿರುತ್ತದೆ. ರಾತ್ರಿ ನಿದ್ದೆಗೆಟ್ಟು ಅದನ್ನೆ ಆಲೋಚಿಸುತ್ತೇನೆ. ಆಲೋಚಿಸಿದಂತೆ ದುಃಖ ಹೆಚ್ಚುತ್ತದೆ. ದುಃಖಸಾಗರದಲ್ಲಿ ಮುಳುಗುತ್ತೇನೆ. ಉದ್ಧವ, ನನ್ನನ್ನು ಈ ದುಃಖಸಾಗರದಿಂದ ಮೇಲಕ್ಕೆತ್ತು. ಜೀವಿಗಳಿಗೆ ಹೀಗೆ ಅಭಯ ಪ್ರದಾನ ಮಾಡಿದರೆ ತೀರ್ಥಸ್ನಾನದ ಫಲ ದೊರಕುತ್ತದೆ. ನನಗೆ ಈಗ ನನ್ನ ಮನಸ್ಸೇ ಅಂಕೆಯಲ್ಲಿ ಇಲ್ಲದಾಗಿದೆ. ಸದಾ ಕೃಷ್ಣನ ಪಾದಕಮಲವನ್ನೆ ಚಿಂತಿಸುತ್ತೇನೆ. ಅವನ ಸದ್ಗುಣ, ಅವನ ಮಹಿಮೆ, ಅವನಿಗೆ ನನ್ನಲ್ಲಿರುವ ಸಾಗರದಂಥ ಅಗಾಧ ಪ್ರೇಮ ಇವುಗಳನ್ನು ನೆನೆದು ನೆನೆದು ನನ್ನ ಮನಸ್ಸು ಚಂಚಲವಾಗಿದೆ. ಒಂದು ಕ್ಷಣ ಸ್ಥಿರವಾಗಿ ನಿಲ್ಲದು. ಈ ಜಗತ್ತಿನಲ್ಲಿ ಬೇರೆಯಾವ ಹೆಣ್ಣಿಗೆ ಇಂಥ ದುಃಖ ಬಂದೀತು? ಶ್ರೀಕೃಷ್ಣನ ವಿರಹದುಃಖವೆಂದರೆ ಹೇಗಿದ್ದೀತೆಂದು ನನ್ನ ಹೊರತು ಇನ್ನಾರಿಗೆ ತಿಳಿದೀತು?

ರಾಧೆಯಂಥ ವಿರಹತಪ್ತೆ ಸುಖಸೌಭಾಗ್ಯವರ್ಜಿತೆ ಇನ್ನೊಬ್ಬಳು ಲೋಕದಲ್ಲಿ ಹಿಂದೆ ಇರಲಿಲ್ಲ, ಮುಂದೆಯೂ ಇರಲಾರಳು. ಕಲ್ಪವೃಕ್ಷದಂತಿರುವ ಜಗತ್ಪತಿಯಾದ ಪತಿಯನ್ನು ಹೊಂದಿರುವ ನನ್ನನ್ನು ವಿಧಿ ವಂಚಿಸಿತು. ಆ ವಿಧಿಗೆ ಕರುಣೆ ಎಂಬುದಿಲ್ಲ. ಅಂದು ಶ್ರೀಕೃಷ್ಣನ ಪಾದಕಮಲವನ್ನೂ ಮುಖಚಂದ್ರನನ್ನೂ ಕಂಡು ನನ್ನ ಜನ್ಮ ಸಫಲವಾಯಿತೆಂದು ತಿಳಿದಿದ್ದೆ. ಕಣ್ಣು ಮನಗಳು ತಂಪಾದುವೆಂದು ತಿಳಿದಿದ್ದೆ. ಅವನ ನಾಮಶ್ರವಣ ಮಾತ್ರದಿಂದ ನನ್ನ ಪಂಚಪ್ರಾಣಗಳು ನಲಿದುವು. ಸ್ಮರಣಮಾತ್ರದಿಂದ ನನ್ನ ಆತ್ಮ ವಿಕಸಿತವಾಯಿತು. ಸುರತ ಕಾಲದಲ್ಲಿ ದೊರೆತ ಅವನ ಸ್ಪರ್ಶದ ಸುಖವನ್ನು ಯಾವ ಸಂಪತ್ತಿನ ಸುಖಭೋಗದಿಂದಲೂ ಮರೆಯಲಾರೆ. ಅವನ ರೂಪ ಸೌಂದರ್ಯ

ಮೂಲೋಕವನ್ನು ಗೆಲ್ಲುವಂಥಹುದು. ಅವನ ಗುಣ ಮೂಲೋಕವನ್ನು ಮೀರಿಸಿದುದು. ಅವನು ಈ ಬ್ರಹ್ಮಸೃಷ್ಟಿಯಲ್ಲಿ ಸೇರಿದವನಲ್ಲ. ಅವನನ್ನು ಬ್ರಹ್ಮ ನಿರ್ಮಿಸಿಲ್ಲ, ಅವನೆ ಬ್ರಹ್ಮನನ್ನು ನಿರ್ಮಿಸಿದ. ಅವನೆ ಎಲ್ಲರಿಗೂ ಎಲ್ಲ ಅಭೀಷ್ಟಕೊಡುವವ. ಕೊಡುವುದರಲ್ಲಿ ಕಲ್ಪವೃಕ್ಷವನ್ನೂ ಮೀರಿಸುವವ. ಇಂಥ ಮನೋಹರನಾದ ಲಕ್ಷ್ಮೀರಮಣನನ್ನು ಪತಿಯಾಗಿ ಪಡೆದ ನಾನು ಅವನನ್ನು ಯಾವ ಸಂಪತ್ತಿನಿಂದ ಮರೆಯಲಿ? ಅವನ ಹೋಲಿಕೆ ಚಂದ್ರನಿಗಿಲ್ಲ, ಮನ್ಮಥನಿಗಿಲ್ಲ, ಅಶ್ವಿನೀ ಕುಮಾರರಿಗೂ ಇಲ್ಲ. ಎಲ್ಲಿಯೋ ಕೆಲವಂಶ ಸಾಮ್ಯವಿದ್ದೀತು, ಎಲ್ಲ ಸಾಮ್ಯ ಬರಲಾರದು. ಅವನ ಪಾದಕಮಲ ಬ್ರಹ್ಮ ರುದ್ರ ಶೇಷರೂ ಧ್ಯಾನಿಸುತ್ತಾರೆ. ಅಂಥ ಪ್ರಭುವನ್ನು ಯಾವ ಸಂಪತ್ತಿನಿಂದ ಮರೆಯಲಿ? ಬ್ರಹ್ಮಾದಿಗಳು ಕನಸಿನಲ್ಲಿಯೂ ಅವನ ರೂಪ ಸೌಂದರ್ಯವನ್ನು ಕಾಣುತ್ತಾರೆ, ಹಗಲು ರಾತ್ರಿ ಅವನನ್ನೆ ಧ್ಯಾನಿಸುತ್ತಾರೆ. ಅವನ ಧ್ಯಾನದಿಂದ ಬೆಟ್ಟ ಕರಗಿ ನೀರಾಗುತ್ತದೆ. ಒಣಗಿದ ಮರ ಹಸಿಯಾಗುತ್ತದೆ. ಬೀಸುವ ಗಾಳಿ ಸ್ತಬ್ಧವಾಗುತ್ತದೆ. ಸೂರ್ಯ ನಿಂತುಬಿಡುತ್ತಾನೆ. ಸಮುದ್ರ ಶಾಂತವಾಗುತ್ತದೆ. ಅಂಥ ಪ್ರಿಯಕೃಷ್ಣನನ್ನು ಹೇಗೆ ಮರೆಯಲಿ?

ಯಾರ ಭಯದಿಂದ ವಾಯು ಬೀಸುತ್ತಾನೆ, ಯಾರ ಭಯದಿಂದ ಸೂರ್ಯ ಉರಿಯುತ್ತಾನೆ, ಯಾರ ಭಯದಿಂದ ಇಂದ್ರ ಮಳೆಗರೆಯುತ್ತಾನೆ, ಯಾರ ಭಯದಿಂದ ಅಗ್ನಿ ಸುಡುತ್ತಾನೆ, ಯಾರ ಭಯದಿಂದ ಮೃತ್ಯು ಜಂತುಗಳ ಮೇಲೆ ಸವಾರಿ ಮಾಡುತ್ತಾನೆ. ಯಾರ ಭಯದಿಂದ ಮರಗಳು ಕಾಲಕಾಲಕ್ಕೆ ಹೂ ಹಣ್ಣು ಬಿಡುತ್ತವೆ, ಯಾರ ಭಯದಿಂದ ಸಮುದ್ರ ಮೇರೆ ಮೀರದಿರುತ್ತದೆ, ಯಾರ ಭಯದಿಂದ ಗ್ರಹಗಳು, ಮುನಿಗಳು, ದೇವತೆಗಳು ತಮ್ಮ ಕರ್ತವ್ಯಗಳನ್ನು ಮರೆಯದಿರುತ್ತಾರೆ, ಅವನು ಕಾಲಕ್ಕೆ ಕಾಲನಾದ, ಸೃಷ್ಟಿಕರ್ತನಿಗೂ ಸಂಹಾರಕನಾದ ಸ್ವತಂತ್ರನಾದ ಶ್ರೀಕೃಷ್ಣ. ಆ ಪ್ರಭುವನ್ನು ನಾನೆಂತು ಮರೆಯಲಿ? ಅವನ ವಿರಹದುಃಖದಿಂದ ನಾನು ಮೈ ಮರೆತೆನೆಂದರೆ ನನ್ನನ್ನು ಯಾರೂ ಎಚ್ಚರಿಸಲಾರರು. ಎಚ್ಚರಿಸಲು ಸಾವಿತ್ರಿ ಶಕ್ತಳಲ್ಲ, ಸರಸ್ವತಿ ಶಕ್ತಳಲ್ಲ, ವೇದ ವೇದಾಂಗಗಳಾಗಲಿ ದೇವತೆಗಳಾಗಲಿ ಸಾವಿರ ಮೊಗಗಳ ಶೇಷನಾಗಲಿ ವೇದಜನಕನಾದ ಬ್ರಹ್ಮನಾಗಲಿ ಯೋಗೇಶ್ವರರ ಗುರುಗಳಿಗೂ ಗುರುಗಳಾದ ಶಿವ ಗಣೇಶರಾಗಲಿ ಶಕ್ತರಲ್ಲ. ಆದದ್ದು ಆಗಿಹೋಯಿತು. ಈಗ ಏನು ಮಾಡಲಿ ಹೇಳು. ಸುಖ ದುಃಖಗಳಿಗೆ ಶುಭ ಅಶುಭಗಳಿಗೆಲ್ಲ ಕಾಲ ಕಾರಣ. ಉದ್ಧವ, ನೀನೂ ಗೋಕುಲವನ್ನು ಬಿಟ್ಟು ಹಿಂತಿರುಗಲು ಉತ್ಸುಕನಾಗಿರುವಿ. ನಿನಗೂ ಕೃಷ್ಣನ ವಿರಹ ದುಃಖಕರ ಹೊರತು ಸುಖಕರವಲ್ಲ. ಹೋಗು, ಕೃಷ್ಣನ ಮುಖಚಂದ್ರಮನನ್ನು ಕಾಣು. ಅದು, ಜನನ ಮರಣ ಜರೆಗಳನ್ನೂ ಕಳೆಯುವಂಥಹುದು.

ರಾಧೆಯ ಮಾತು ಕೇಳುತ್ತ, ವಿರಹ ದುಃಖದಿಂದ ಅವಳು ಅಳುವುದನ್ನು ನೋಡುತ್ತ ಉದ್ಧವ ತಡೆಯಲಾರದೆ ಜೋರಾಗಿ ಅತ್ತುಬಿಟ್ಟ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣ ನಾರದ ಸಂವಾದದಲ್ಲಿ ರಾಧಾ ಉದ್ಧವ ಸಂವಾದರೂಪವಾದ ತೊಂಬತ್ತೈದನೆ ಅಧ್ಯಾಯ ಮುಗಿಯಿತು*

**ಶ್ರೀನಾರಾಯಣ ಮುನಿಯು ಹೇಳಿದ:-** ಉದ್ಧವ ಶ್ರೀಕೃಷ್ಣಸ್ಮರಣ ಮಾಡಿ ರಾಧೆಯ ಪಾದಕಮಲಗಳಿಗೆ ತಲೆ ಬಾಗಿದ. ಮೈಯೆಲ್ಲ ರೋಮಾಂಚಗೊಂಡ. ಮಧುರೆಗೆ ಹೊರಟು ನಿಂತ. ಆದರೆ ರಾಧೆಯ ಅಗಲಿಕೆಯನ್ನು ಸಹಿಸಲಾರದೆ ಗಟ್ಟಿಯಾಗಿ ಅಳತೊಡಗಿದ.

ಮಾಧವಿ ಪ್ರೀತಿಯಿಂದ ನುಡಿದಳು - ಉದ್ಧವ, ಒಂದು ಕ್ಷಣ ನಿಲ್ಲು, ನಾನು ಹೇಳುವುದನ್ನು ಕೇಳು, ನಿನ್ನ ಮನಸ್ಸಿಗೆ ಬಹಳ ಇಷ್ಟವಾದ ನಿಗೂಢವಾದ ವೇದ ಪುರಾಣಗಳಲ್ಲಿಯೂ ಸಿಗದ ಉತ್ತಮ ತತ್ವಜ್ಞಾನ ಬೇಕಾಗಿದ್ದರೆ ಮೂಲೋಕದ ತಾಯಿಯಾದ ರಾಧೆಯಲ್ಲಿ ಪ್ರಶ್ನೆಗಳನ್ನು ಮಾಡಬಹುದು.

**ಉದ್ಧವ:-** ರಾಧೆಯನ್ನು ಕೇಳತೊಡಗಿದ -

**ಏಕಾಕೀ ಭವ ಮಾಯಾತಿ ಯಾತ್ಯೇಕಾಕೀ ಪುನಃಪುನಃ ।**
**ಪ್ರಾಣೀ ಕರ್ಮಾನುರೋಧೇನ ಸ್ವಕರ್ಮಫಲಭುಕ್ ಪುಮಾನ್ ॥**
**ಕರ್ಮಣಾ ಜಾಯತೇ ಜಂತುಃ ಕರ್ಮಣ್ಯೈವ ಪ್ರಲೀಯತೇ**
**ಸುಖಂ ದುಃಖಂ ಭಯಂ ಶೋಕಂ ಕರ್ಮಣ್ಯೈವಾಭಿಪದ್ಯತೇ ॥**

ಜೀವಿಗಳು ಏಕಾಕಿಯಾಗಿಯೆ ಹುಟ್ಟುತ್ತಾರೆ, ಏಕಾಕಿಯಾಗಿಯೆ ಪರಲೋಕ ಸೇರುತ್ತಾರೆ. ಕರ್ಮಾನುಸಾರ ತಾವು ಮಾಡಿದ್ದನ್ನು ತಾವು ಉಣ್ಣುತ್ತಾರೆ. ಜನನವೂ ಕರ್ಮದಿಂದಾಗುತ್ತದೆ. ಮರಣವೂ ಕರ್ಮದಿಂದಲೆ. ಸುಖ ದುಃಖ ಭಯ ಶೋಕವೆಲ್ಲವೂ ಕರ್ಮದಿಂದಲೆ ಪ್ರಾಪ್ತವಾಗುತ್ತವೆ. ದೇವಿ, ನೀನು ನನಗೆ ಅನುಗ್ರಹಿಸಿದ ರತ್ನ ಮುಂತಾದುವು ಯಾವುವೂ ನಾನು ಸಾಯುವಾಗ ನನ್ನ ಜೊತೆಗೆ ಬರುವುದಿಲ್ಲ ಎಂದಮೇಲೆ ನನಗೆ ಅವುಗಳಿಂದೇನು ಪ್ರಯೋಜನ? ಸಂಸಾರ ಸಾಗರವನ್ನು ನಾನು ದಾಟಬೇಕು. ದಾಟಿಸಬಲ್ಲ ನೌಕೆ ನೀನು. ಅಂಬಿಗ ಸ್ವಯಂ ಶ್ರೀಕೃಷ್ಣ. ಅದರಿಂದ ನನಗೆ ಸಂಸಾರ ತಾರಕವಾದ ತತ್ವಜ್ಞಾನವನ್ನು ಒಂದಿಷ್ಟು ದಯಪಾಲಿಸು. ಅದನ್ನು ಪಡೆದು ಕೃಷ್ಣನ ಬಳಿ ಸೇರುತ್ತೇನೆ. ಮೊದಲಿಗೆ ಕಾಲಗತಿಯನ್ನು ಉಪದೇಶಿಸು. ದೇವ- ಮಾನವ -ಪಿತೃ-ಬ್ರಹ್ಮ ಮಾನಗಳನ್ನು ವರ್ಣಿಸು. ಅದರಿಂದ ಕಾಲಗತಿಯನ್ನು ದಾಟಿ ಹರಿಪದವನ್ನು ನಾನು ಹೊಂದುವೆನು. ಅದಕ್ಕೆ ತಕ್ಕ ಉಪಾಯವನ್ನೂ ಹೇಳು. ಇದನ್ನು ಹೇಳಲು ನೀನೆ ಸಮರ್ಥಳು. ಬ್ರಹ್ಮ ರುದ್ರ ಶೇಷ ಮುಂತಾದವರು ಕೃಷ್ಣನ ಪಾದಕಮಲವನ್ನು ದೂರದಲ್ಲಿದ್ದು ಧ್ಯಾನಿಸುವವರು. ನೀನು ಹಾಗಲ್ಲ. ಅವನ ವಕ್ಷಃ ಸ್ಥಲದಲ್ಲೆ ವಾಸಿಸುತ್ತಿರುವಿ.'

ಉದ್ಧವನ ಮಾತನ್ನು ಕೇಳಿ ರಾಧೆ ನಕ್ಕಳು. ಸೆರಗಿಂದ ಕಣ್ಣೀರೊರೆಸಿಕೊಂಡು ಹೇಳತೊಡಗಿದಳು.

**ರಾಧೆ:-** ಉದ್ಧವ, ಮಾಧವಿ ಹೇಳಿದುದನ್ನು ಕೇಳಿ ನೀನು ನನ್ನನ್ನು ಕೇಳುತ್ತಿರುವಿ. ಆದರೆ ನಾನು ಹೆಣ್ಣು ಜಾತಿಯವಳು. ನನ್ನಲ್ಲಿ ಏನಿದೆ ತತ್ವಜ್ಞಾನ? ಶುದ್ಧವಾದ ಕಾಲಗತಿಯನ್ನು ತಿಳಿಯಬಲ್ಲವರು ಭಗವಾನ್ ಶ್ರೀಹರಿ, ಬ್ರಹ್ಮ ರುದ್ರ ಶೇಷರು, ನಾಲ್ಕು ವೇದಗಳು. ಆವೇದಾನುಸಾರವಾಗಿ ಅಲ್ಪ ಸ್ವಲ್ಪ ಎಲ್ಲ ಸಜ್ಜನರೂ ತಿಳಿಯುತ್ತಾರೆ. ನಾನು ಗೋಲೋಕದಲ್ಲಿ ರಾಸಮಂಡಲದಲ್ಲಿ ಶ್ರೀಕೃಷ್ಣನ ಮುಖದಿಂದ ಕೇಳಿದ್ದನ್ನು ಮತ್ತು ಗೋಲೋಕ ಬ್ರಹ್ಮಲೋಕ ವೈಕುಂಠ ಲೋಕಗಳಲ್ಲಿ ಕಣ್ಣಾರೆ ಕಂಡಿದ್ದನ್ನೂ ನಿನಗೆ ಹೇಳುತ್ತೇನೆ. ಯಾರಿಗೂ ಮೀರಲಾಗದ ಈ ಕಾಲಗತಿಯನ್ನು ಮೀರಿ ನಿಲ್ಲುವ ಉಪಾಯವನ್ನೂ ನಿನಗೆ ಹೇಳುತ್ತೇನೆ. ಯಾವ ಪರಮಾತ್ಮನಿಲ್ಲದೆ ಇದ್ದರೆ ಈ ಶರೀರ ತಕ್ಷಣ ಬಿದ್ದುಹೋಗುವುದೋ ಆ ಪರಮಾತ್ಮನ ಆರಾಧನೆಯಿಂದಲೆ ಕಾಲಗತಿಯನ್ನು ದಾಟಲು ಸಾಧ್ಯ. ಪುಣ್ಯಾತ್ಮರಾದ ಶ್ರೀಹರಿಯ ಶುದ್ಧ ಭಕ್ತರನ್ನು ಹೊರತು ಬೇರೆ ಎಲ್ಲ ಜೀವಿಗಳ ಆಯುಷ್ಯವನ್ನೂ ಸೂರ್ಯ ಅಪಹರಿಸುತ್ತಾನೆ. ಬ್ರಹ್ಮನ ಮಾನಸ ಪುತ್ರರಾದ ಸನಕಾದಿ ಮುನಿಗಳನ್ನು ನೋಡು. ಅವರ ವಯಸ್ಸು ಸ್ಥಿರವಾಗಿ ಒಂದೇ ರೀತಿ ಇರುತ್ತದೆ! ಅವರು ರುದ್ರಾದಿಗಳಿಗಿಂತಲೂ ಮೊದಲು ಜನಿಸಿದವರು. ಜ್ಞಾನಿಗಳಾದ ಗುರುಗಳಿಗೂ ಗುರುಗಳಾದವರು. ಇನ್ನೂ ಅನುಪನೀತರಾದ ಐದು ವರ್ಷ ವಯಸ್ಸಿನ ಬಾಲಕರಂತೆ ಇದ್ದಾರೆ. ಹೃದಯದಲ್ಲಿ ಬಹಳ ಪ್ರೌಢರು. ಕೃಷ್ಣಧ್ಯಾನ ಮಾಡುತ್ತ ಪವಿತ್ರರಾಗಿರುವರು. ದಿಗಂಬರರಾಗಿರುವರು. ವೇದ ವೇದಾಂಗಗಳನ್ನು ಸದಾ ವಿಚಾರಿಸುತ್ತ ಭಕ್ತಿಯಿಂದ ಹಗಲು ರಾತ್ರಿ ಹರಿಧ್ಯಾನನಿರತರಾಗಿರುವರು. ಹೊರಗೆ ಆಡಂಬರದ ಪೂಜೆ ಇಲ್ಲ. ಒಳಗೆ ಮನಸ್ಸಿನಲ್ಲಿಯೆ ಹರಿ ಪೂಜೆ ಮಾಡುತ್ತಾರೆ. ಅದರಿಂದ ಮೃತ್ಯುವನ್ನು ಗೆದ್ದಿದ್ದಾರೆ, ಕಾಲವೆಂಬ ಸರ್ಪವನ್ನೂ ಗೆದ್ದಿದ್ದಾರೆ. ಸನಕ ಸನಂದನ ಸನಾತನ ಸನತ್ಕುಮಾರ ಎಂದು ಇವರ ನಾಮಸ್ಮರಣೆ ಮಾಡಿದರೆ ಸಾಕು. ತೀರ್ಥಸ್ನಾನ ಫಲ ಲಭಿಸುವುದು. ಸಕಲ ಪಾಪ ಪರಿಹಾರ. ಹರಿಭಕ್ತಿ ವೃದ್ಧಿ. ಹರಿದಾಸ್ಯ ಲಾಭ.

ಮೃಕಂಡು ಮುನಿಯ ಮಗನಾದ ಮಾರ್ಕಂಡೇಯನನ್ನು ನೋಡು-ಕರ್ಮಠನಾದ ಬ್ರಾಹ್ಮಣೋತ್ತಮ ಆತ. ಒಂದು ಲಕ್ಷ ವರ್ಷಕಾಲ ಹರಿಯ ಕುರಿತು ತಪಸ್ಸು ಮಾಡಿ ಬ್ರಹ್ಮ ತೇಜಸ್ಸನ್ನೂ ಏಳು ಕಲ್ಪಗಳ ದೀರ್ಘಾಯುಷ್ಯವನ್ನೂ ಪಡೆದಿದ್ದಾನೆ. ವೋಢು, ಪಂಚಶಿಖ, ಲೋಮಶ, ಆಸುರಿಗಳನ್ನೂ ನೋಡು. ಬೇರೆ ಎಲ್ಲ ಕರ್ಮಗಳನ್ನೂ ತೊರೆದು ಹರಿಯ ಆರಾಧನೆಯೊಂದನ್ನೆ ಮಾಡಿ ನೂರು ಕಲ್ಪಗಳ ಆಯುಷ್ಯ ಪಡೆದಿದ್ದಾರೆ.

ಜಮದಗ್ನಿಯ ಮಗನಾದ ಪರಶುರಾಮ ಚಿರಜೀವಿ. ಹನುಮಂತ ಬಲಿ ವೇದವ್ಯಾಸ ಅಶ್ವತ್ಥಾಮರೂ ಚಿರಜೀವಿಗಳು. ವಿಭೀಷಣ, ಕೃಪ, ಜಾಂಬವಂತರೂ ಹರಿಯ ಆರಾಧನೆಯಿಂದ ಚಿರಜೀವಿತ್ವ ಪಡೆದಿದ್ದಾರೆ. ಹೀಗೇ ಸಿದ್ಧರಲ್ಲಿ, ಮುನಿಗಳಲ್ಲಿ, ಮಾನವರಲ್ಲಿ ಬಹು ಮಂದಿ ಹರಿಯ ಆರಾಧನೆಯಿಂದ ಚಿರಜೀವಿತ್ವ ಪಡೆದವರಿದ್ದಾರೆ. ದೈತ್ಯರಲ್ಲಿಯೂ ಪ್ರಹ್ಲಾದನನ್ನು ನೋಡು. ಹರಿದ್ವೇಷಿಯಾದ ಹಿರಣ್ಯಕಶಿಪುವಿನ ಮಗ. ಆದರೂ ಹರಿಯ ಆರಾಧನೆಯಿಂದ ಚಿರಾಯುವಾದ. ಕಾಲವನ್ನು ಗೆದ್ದ. ಅನೇಕ

ಜನ್ಮಗಳಲ್ಲಿ ಮಾಡಿದ ತಪಸ್ಸಿನ ಪ್ರಭಾವದಿಂದ ಭಾರತದಲ್ಲಿ ಜನ್ಮ ಪಡೆದೂ ಯಾರು ಹರಿಭಜನೆ ಮಾಡುವುದಿಲ್ಲವೊ ಅವರು ಮೂಢರು, ಮಹಾಪಾಪಿಗಳು. ವಾಸುದೇವನನ್ನು ಬಿಟ್ಟು ವಿಷಯಸುಖದಲ್ಲಿ ಮಗ್ನನಾಗುವವನು ಅಮೃತವನ್ನು ತೊರೆದು ಸ್ವೇಚ್ಛೆಯಿಂದ ವಿಷ ಉಣ್ಣುವ ಮಹಾ ಮೂಢನೆನ್ನಬೇಕು.

**ಅನೇಕಜನ್ಮತಪಸಾ ಲಬ್ಧ್ವಾ ಜನ್ಮ ಚ ಭಾರತೇ ।**
**ಯೇ ಹರಿಂ ತಂ ನ ಸೇವಂತೇ ತೇ ಮೂಢಾಃ ಕೃತಪಾಪಿನಃ ।**
**ವಾಸುದೇವಂ ಪರಿತ್ಯಜ್ಯ ವಿಷಯೇ ನಿರತೋ ಜನಃ ।**
**ತ್ಯಕ್ತ್ವಾಽಮೃತಂ ಮಹಾಮೂಢೋ ವಿಷಂ ಭುಂಕ್ತೇ ನಿಜೇಚ್ಛಯಾ ॥**

ಶ್ರೀಕೃಷ್ಣ ಹೊರತು ಜೀವಿಗಳಿಗೆ ಆಪತ್ತುಗಳಲ್ಲಿ ಯಾರು ಯಾರಿಗೆ ಸತಿ? ಯಾರು ಯಾರಿಗೆ ಪುತ್ರ? ಯಾರು ಯಾರಿಗೆ ಬಂಧು, ಬಾಂಧವ? ಅದರಿಂದ ಸಜ್ಜನರು ಸದಾ ಕೃಷ್ಣನನ್ನೆ ಭಜಿಸುತ್ತಾರೆ. ಹರಿಭಜನೆಯೊಂದೆ ಜನನ ಮರಣ ಜರೆ ವ್ಯಾಧಿಗಳನ್ನು ಕಳೆಯುವಂಥಹುದು. ಕಾಲಪ್ರಭಾವವನ್ನು ತಡೆಯುವುದಕ್ಕೂ ಅದೇ ಉಪಾಯ. ಪರಿಪೂರ್ಣಗುಣರಾಶಿರೂಪನಾದ ಆ ನಂದನಂದನನ ಭಜನೆಯೊಂದೆ ಸರ್ವಾನಿಷ್ಟ ಪರಿಹಾರಕ. ಉದ್ಧವ, ಇನ್ನು ಕಾಲಗತಿಯನ್ನು ನನಗೆ ತಿಳಿದಷ್ಟು ಹೇಳುತ್ತೇನೆ, ಕೇಳು. ಮಾನವರು ಪಿತೃಗಳು ದೇವತೆಗಳು ಬ್ರಹ್ಮ ನಾಗ ರಾಕ್ಷಸಾದಿಗಳು ಮತ್ತು ಇತರರ ಕಾಲ ಮಾನಗಳನ್ನೂ ಹೇಳುತ್ತೇನೆ. ಇದು ಬಹಳ ರಹಸ್ಯ; ಲಕ್ಷ್ಯವಿಟ್ಟು ಕೇಳು. ಎಲ್ಲಕ್ಕಿಂತ ಮಹತ್ತು ಎಂದರೆ ಸರ್ವಾಧಾರನಾದ ಮಹಾವಿರಾಟ್‌ಪುರುಷ. ಅವನ ರೋಮ ಕೂಪಗಳಲ್ಲಿ ಅಸಂಖ್ಯ ಬ್ರಹ್ಮಾಂಡಗಳು ಅಡಗಬಲ್ಲುವು.

ಎಲ್ಲಕ್ಕಿಂತ ಸೂಕ್ಷ್ಮವೆಂದರೆ ಪರಮಾಣು. ಸೂಕ್ಷ್ಮ ಪದಾರ್ಥಗಳಲ್ಲೆಲ್ಲ ಕೊನೆಯದು, ಅನೇಕ ಅಂಶಗಳಿದ್ದರೂ ಮಾನವರಿಗೆ ನಿರಂಶವೆಂದು ಭಾಸಮಾನ ವಾಗುವಂಥದ್ದು ಯಾವುದೊ ಅದು ಪರಮಾಣು. ಎರಡು ಪರಮಾಣುಗಳು ಸೇರಿದರೆ ಅದು ಅಣುವೆನಿಸುತ್ತದೆ. ಮೂರು ಅಣುಗಳು ಸೇರಿದರೆ ಅದು ತ್ರಸರೇಣುವೆನಿಸುತ್ತದೆ. ಮೂರು ತ್ರಸರೇಣು ಸೇರಿದಾಗ ತ್ರುಟಿ ಎನಿಸುತ್ತದೆ. ನೂರು ತ್ರುಟಿಗಳು ಒಂದು ವೇಧ ಎನಿಸುತ್ತದೆ. ಮೂರು ವೇಧಗಳೆ ಒಂದು ಲವ. ಮೂರು ಲವಗಳು ಒಂದು ನಿಮೇಷ. ಮೂರು ನಿಮೇಷಗಳು ಒಂದು ಕ್ಷಣ. ಐದು ಕ್ಷಣಗಳು ಒಂದು ಕಾಷ್ಠವಾಗುವುದು. ಹದಿನೈದು ಕಾಷ್ಠಗಳು ಒಂದು ಲಘು. ಹದಿನೈದು ಲಘುಗಳು ದಂಡವೆನಿಸುತ್ತದೆ. ಎರಡು ದಂಡಗಳು ಒಂದು ಮೂಹೂರ್ತ. ಅರವತ್ತು ದಂಡಗಳು ಒಂದು ತಿಥಿ. ಅದರ ಎಂಟನೆ ಒಂದು ಭಾಗವೆ ಒಂದು ಪ್ರಹರ. ನಾಲ್ಕು ಪ್ರಹರಗಳು ಒಂದು ರಾತ್ರಿ. ನಾಲ್ಕು ಪ್ರಹರಗಳು ಒಂದು ಹಗಲು. ಹದಿನೈದು ತಿಥಿಗಳು ಒಂದು ಪಕ್ಷ. ಶುಕ್ಲ ಕೃಷ್ಣ ಎಂದು ಎರಡು ಪಕ್ಷಗಳು ಸೇರಿದರೆ ಮಾಸವಾಗುವುದು. ಎರಡು ಮಾಸಗಳು ಒಂದು ಋತು. ಆರು ಋತುಗಳು ಒಂದು ವರ್ಷ. ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರ ಎಂದು ಆರು ಋತುಗಳು. ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ, ವತ್ಸರ ಎಂದು

ವರ್ಷಗಳು ಐದು ಬಗೆ. ಒಂದು ವರ್ಷದಲ್ಲಿ ಬರುವ ಹನ್ನೆರಡು ಮಾಸಗಳು ಇವು- ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರ, ಆಶ್ವಿನ, ಕಾರ್ತಿಕ, ಮಾರ್ಗ, ಪೌಷ, ಮಾಘ, ಫಾಲ್ಗುನ ಮತ್ತು ಚೈತ್ರ. ಚೈತ್ರ ವೈಶಾಖಗಳು ವಸಂತವೆನಿಸುತ್ತದೆ. ಜ್ಯೇಷ್ಠ ಆಷಾಢಗಳೆರಡು ಸೇರಿದರೆ ಗ್ರೀಷ್ಮ. ಶ್ರಾವಣ ಭಾದ್ರಗಳು ವರ್ಷ, ಆಶ್ವಿನ ಕಾರ್ತಿಕಗಳು ಶರತ್, ಮಾರ್ಗ ಪೌಷಗಳು ಹೇಮಂತ, ಮಾಘ ಫಾಲ್ಗುನಗಳು ಶಿಶಿರ. ಒಂದು ವರ್ಷದಲ್ಲಿ ಎರಡು ಅಯನಗಳು, ಉತ್ತರಾಯಣ ದಕ್ಷಿಣಾಯನಗಳೆಂದು. ಮಾಘ ಮುಂತಾದ ಆರು ಮಾಸಗಳು ಉತ್ತರಾಯಣ. ಮಾಘದಿಂದ ಆಷಾಢದವರೆಗೆ ಹಗಲು ವೃದ್ಧಿ. ಶ್ರಾವಣ ಮುಂತಾದ ಆರು, ದಕ್ಷಿಣಾಯನ. ಶ್ರಾವಣದಿಂದ ಪೌಷದವರೆಗೆ ರಾತ್ರಿಕಾಲ ವೃದ್ಧಿ. ಪಾಡ್ಯದಿಂದ ಪೂರ್ಣಿಮೆವರೆಗೆ ಶುಕ್ಲಪಕ್ಷ. ಪೂರ್ಣಿಮೆಯ ನಂತರದ ಪಾಡ್ಯದಿಂದ ಅಮಾವಾಸ್ಯೆಯವರೆಗೆ ಕೃಷ್ಣಪಕ್ಷ. ಪಾಡ್ಯ, ಬಿದಿಗೆ ತದಿಗೆ ಚೌತಿ ಪಂಚಮಿ ಷಷ್ಠಿ ಸಪ್ತಮಿ ಅಷ್ಟಮಿ ನವಮಿ ದಶಮಿ ಏಕಾದಶಿ ದ್ವಾದಶಿ ತ್ರಯೋದಶಿ ಚತುರ್ದಶಿ ಮತ್ತು ಕುಹೂ ಎಂದು ದಿನಗಣನೆ.

ಅಶ್ವಿನೀ ಭರಣಿ ಕೃತ್ತಿಕೆ ರೋಹಿಣಿ ಮೃಗಶಿರೆ ಆರ್ದ್ರೆ ಪುನರ್ವಸು ಪುಷ್ಯ ಆಶ್ಲೇಷ ಮಘೆ ಪೂರ್ವಫಲ್ಗುನಿ ಉತ್ತರಫಲ್ಗುನಿ ಹಸ್ತ ಚಿತ್ರೆ ಸ್ವಾತಿ ವಿಶಾಖೆ ಅನುರಾಧ, ಜ್ಯೇಷ್ಠೆ, ಮೂಲ, ಪೂರ್ವಾಷಾಢ ಉತ್ತರಾಷಾಢ ಶ್ರವಣ ಅಭಿಜಿತ್ ಧನಿಷ್ಠೆ ಶತಭಿಷೆ, ಪೂರ್ವಾಭಾದ್ರೆ, ಉತ್ತರಾ ಭಾದ್ರೆ ಮತ್ತು ರೇವತಿ ಎಂದು ಇಪ್ಪತ್ತೆಂಟು ನಕ್ಷತ್ರಗಳು. ಇವರೆಲ್ಲ ಚಂದ್ರನ ಪತ್ನಿಯರು. ಅವನು ಪ್ರತಿದಿನ ಕ್ರಮವಾಗಿ ಅವರೊಂದಿಗೆ ಇರುತ್ತಾನೆ. ಇಪ್ಪತ್ತೇಳು ನಕ್ಷತ್ರಗಳು ಚಂದ್ರನ ಪತ್ನಿಯರೆಂದು ಶ್ರುತಿಯಲ್ಲಿ ಹೇಳಿದ್ದರೂ ಅದು ಅಭಿಜಿತ್ತನ್ನು ಶ್ರವಣದ ಛಾಯೆ ಎಂದು ಪರಿಗಣಿಸಿ ಹೇಳಿದ್ದು. ವಸ್ತುತಃ ನಕ್ಷತ್ರಗಳು ಇಪ್ಪತ್ತೆಂಟು. ಒಮ್ಮೆ ವಸಂತಕಾಲದಲ್ಲಿ ಚಂದ್ರ ರೋಹಿಣಿಯೊಡನೆ ವಿಹರಿಸುತ್ತಿದ್ದುದನ್ನು ಕೋಪಗೊಂಡು ಶ್ರವಣ ತನ್ನ ಛಾಯೆಯನ್ನು ಚಂದ್ರನ ಬಳಿ ಬಿಟ್ಟು ತಾನು ತಂದೆಯ ಬಳಿಗೆ ಹೋದಳು. ಬಳಿಕ ತಂದೆಯನ್ನು ಕರೆದುಕೊಂಡು ಬಂದು ತನ್ನನ್ನು ಛಾಯೆಯೊಂದಿಗೆ ವಿಭಾಗ ಮಾಡಿಕೊಂಡಳು. ಆ ಛಾಯೆ ಅಭಿಜಿತ್ ನಕ್ಷತ್ರವೆನಿಸಿದಳು. ಇದನ್ನು ಶತಶೃಂಗ ಪರ್ವತದಲ್ಲಿ ನಾನು ಕೃಷ್ಣನ ಬಾಯಿಂದ ಕೇಳಿದ್ದೇನೆ. ಉದ್ಧವ, ನಾನು ಈಗ ಯೋಗ ಕರಣಗಳ ಬಗ್ಗೆ ಹೇಳುತ್ತೇನೆ, ಕೇಳು. ವಿಷ್ಕಂಭ, ಪ್ರೀತಿ, ಆಯುಷ್ಮಾನ್, ಸೌಭಾಗ್ಯ, ಶೋಭನ, ಅತಿಗಂಡ, ಸುಕರ್ಮ, ಧೃತಿ, ಶೂಲ, ಗಂಡ, ವೃದ್ಧಿ, ಧ್ರುವ, ವ್ಯಾಘಾತ, ಹರ್ಷಣ, ವಜ್ರ, ಸಿದ್ಧಿ, ವ್ಯತೀಪಾತ, ವರೀವಾನ್, ಪರಿಘ, ಶಿವ, ಸಿದ್ಧಿ, ಸಾಧ್ಯ, ಶುಭ, ಶುಕ್ಲ, ಬ್ರಹ್ಮ, ಐಂದ್ರ, ವೈಧೃತಿ - ಇವು ಯೋಗಗಳು. ಬವ, ಬಾಲವ, ಕೌಲವ, ತೈತಿಲ, ಗರ, ವಣಿಜ, ವಿಷ್ಟಿ, ಶಕುನಿ, ಚತುಷ್ಪಾತ್, ನಾಗ, ಕಿಂಸ್ತುಘ್ನ-ಇವು ಕರಣಗಳು. ಮಾನವರ ಒಂದು ಮಾಸ ಪಿತೃಗಳಿಗೆ ಒಂದು ಹಗಲು ಮತ್ತು ಒಂದು ರಾತ್ರಿ ಎನಿಸುತ್ತದೆ. ಶುಕ್ಲಪಕ್ಷವೆ ಹಗಲು, ಕೃಷ್ಣಪಕ್ಷವೆ ರಾತ್ರಿ. ಮಾನವರ ಒಂದು ವರ್ಷ ದೇವತೆಗಳಿಗೆ ಒಂದು ಹಗಲು ಮತ್ತು ಒಂದು ರಾತ್ರಿಯಾಗುತ್ತದೆ. ಉತ್ತರಾಯಣ ಹಗಲು, ದಕ್ಷಿಣಾಯನ ರಾತ್ರಿ.

ದೇವತೆಗಳ ಎಪ್ಪತ್ತೊಂದು ಚತುರ್ಯುಗಗಳು ಒಂದು ಮನ್ವಂತರವಾಗುವುದು. ಅದು ಒಬ್ಬ ಇಂದ್ರನ ಆಯುಷ್ಯವೆನಿಸುವುದು. ಇಂಥ ಹದಿನಾಲ್ಕು ಇಂದ್ರರು ಪದಚ್ಯುತಿ ಹೊಂದಿದರೆ ಬ್ರಹ್ಮನಿಗೆ ಒಂದು ಹಗಲು. ಅಷ್ಟೇ ದೀರ್ಘ ರಾತ್ರಿಯೂ ಇರುತ್ತದೆ. ಬ್ರಹ್ಮಲೋಕದಲ್ಲಿ ಸೂರ್ಯಸಂಚಾರವಿಲ್ಲ. ಅಲ್ಲಿ ಇಂದ್ರಪತನಗಳಿಂದಲೆ ಹಗಲು ರಾತ್ರಿಗಳನ್ನು ತಿಳಿಯುತ್ತಾರೆ. ಈರೀತಿಯಲ್ಲಿ ಮೂವತ್ತು ದಿನಗಳಾದರೆ ಬ್ರಹ್ಮನಿಗೆ ಒಂದು ಮಾಸವಾಗುವುದು. ಹನ್ನೆರಡು ಮಾಸಗಳು ಒಂದು ವರ್ಷ. ನೂರು ವರ್ಷ ಕಾಲ ಬ್ರಹ್ಮನಿಗೆ ಬ್ರಹ್ಮಪದವಿ ಇರುತ್ತದೆ. ಅವನ ಪದಚ್ಯುತಿಯಾದರೆ ಶ್ರೀಹರಿಗೆ ಒಂದು ನಿಮಿಷವಾದಂತೆ. ಬ್ರಹ್ಮನ ಪದಚ್ಯುತಿಯಿಂದ ವೈಕುಂಠದಲ್ಲಿ ಹಗಲು ರಾತ್ರಿಗಳಾಗುವುದಿಲ್ಲ. ಅಲ್ಲಿ ಸೂರ್ಯನ ಸಂಚಾರವೂ ಇಲ್ಲ. ಅದರಿಂದ ವೈಕುಂಠವಾಸಿಗಳಿಗೆ ಹಗಲು ರಾತ್ರಿಗಳೆ ತಿಳಿಯುವುದಿಲ್ಲ. ಅಲ್ಲಿ ಚಂದ್ರ ಗ್ರಹ ನಕ್ಷತ್ರ ರಾಶಿಗಳೂ ತಿರುಗುವುದಿಲ್ಲ. ಕೃಷ್ಣನೆ ಅಲ್ಲಿ ತನ್ನ ಮಂದಿರದಿಂದ ಹೊರಗೆ ಬಂದು ಉಜ್ವಲವಾಗಿ ಬೆಳಗಿ ಹಗಲು ಮಾಡುತ್ತಾನೆ. ಬಳಿಕ ಅವನು ಮಂದಿರದೊಳಗೆ ಪ್ರವೇಶಿಸಿದರೆ ಆಗ ರಾತ್ರಿ. ಇದು ವಿಷ್ಣುಲೋಕದಲ್ಲಿ ಕಾಲಗತಿ. ಕಾಲಸ್ವರೂಪ ಭಗವಂತನೆ ಆಗಿರುತ್ತಾನೆ. ಏಳು ಪಾತಾಳಲೋಕಗಳಲ್ಲಿಯೂ ಸೂರ್ಯಚಂದ್ರರ ಸಂಚಾರವಿಲ್ಲ. ಆದರೂ ಅಲ್ಲಿಯ ಜನರಿಗೆ ಹಗಲು ರಾತ್ರಿಗಳ ಬಗ್ಗೆ ಸಂದೇಹವಿರುವುದಿಲ್ಲ. ಏಕೆಂದರೆ ಹಗಲು ಹೊತ್ತು ಸರ್ಪಗಳ ಮಣಿ ಪ್ರಕಾಶಿಸುತ್ತದೆ. ಸಂಜೆ ಅಗ್ನಿ ಜ್ವಲಿಸುತ್ತದೆ. ರಾತ್ರಿ ತಮಸ್ಸು ಆವರಿಸುತ್ತದೆ.

ಕೃತ ತ್ರೇತಾ ದ್ವಾಪರ ಕಲಿ ಎಂದು ನಾಲ್ಕು ಯುಗಗಳು. ಅವು ಒಟ್ಟು ದೇವಮಾನದ ಹನ್ನೆರಡುಸಾವಿರ ವರ್ಷಗಳಾಗುತ್ತವೆ. ಹೇಗೆಂದರೆ ಕೃತಯುಗ ದೇವಮಾನದ ನಾಲ್ಕು ಸಾವಿರದ ಎಂಟುನೂರು ವರ್ಷಗಳು. ಅಂದರೆ, ಮಾನವ ಮಾನದಲ್ಲಿ ಹದಿನೇಳು ಲಕ್ಷದ ಇಪ್ಪತ್ತೆಂಟು ಸಾವಿರ ವರ್ಷಗಳು. ತ್ರೇತಾಯುಗ ದೇವಮಾನದಲ್ಲಿ ಮೂರು ಸಾವಿರದ ಆರುನೂರು ವರ್ಷಗಳು. ಮಾನವ ಮಾನದಲ್ಲಿ ಹನ್ನೆರಡು ಲಕ್ಷದ ತೊಂಬತ್ತಾರು ಸಾವಿರ ವರ್ಷಗಳು. ದ್ವಾಪರ ಯುಗ ದೇವಮಾನದಲ್ಲಿ ಎರಡು ಸಾವಿರದ ನಾನೂರು ವರ್ಷಗಳು, ಮಾನವಮಾನದಲ್ಲಿ ಎಂಟುಲಕ್ಷದ ಅರವತ್ತನಾಲ್ಕು ಸಾವಿರ ವರ್ಷಗಳು. ಕಲಿಯುಗ ದೇವಮಾನದಲ್ಲಿ ಒಂದು ಸಾವಿರದ ಇನ್ನೂರು ವರ್ಷಗಳು. ಮಾನವಮಾನದಲ್ಲಿ ನಾಲ್ಕು ಲಕ್ಷದ ಮೂವತ್ತೆರಡು ಸಾವಿರ ವರ್ಷಗಳು. ಅದರಿಂದ ಮಾನವಮಾನದ ನಲವತ್ತಮೂರು ಲಕ್ಷದ ಇಪ್ಪತ್ತು ಸಾವಿರ ವರ್ಷಗಳು ನಾಲ್ಕು ಯುಗಗಳ ಒಟ್ಟು ಪ್ರಮಾಣ.

ಉದ್ಧವ, ಇದು ನಾನು ಶ್ರೀಕೃಷ್ಣನಿಂದ ಕೇಳಿ ತಿಳಿದಿರುವ ಕಾಲಗಣನೆ. ಇನ್ನು ನೀನು ಶ್ರೀಕೃಷ್ಣನ ಮಧುರಾನಗರಿಗೆ ಹೊರಡು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರಾಧಾ ಉದ್ಧವ ಸಂವಾದದ ಕಾಲನಿರೂಪಣವೆಂಬ ತೊಂಬತ್ತಾರನೆ ಅಧ್ಯಾಯ ಮುಗಿಯಿತು.*

**ಶ್ರೀ ನಾರಾಯಣ ಮುನಿ:-** ನಾರದ, ಉದ್ಧವ ಹೊರಟಿದ್ದನ್ನು ಕಂಡು ರಾಧೆ ತಟ್ಟನೆ ಆಸನ ಬಿಟ್ಟೆದ್ದು ಗೋಪಿಯರೊಂದಿಗೆ ಬಂದು ಅವನಿಗೆ ಮಂಗಳಾಶೀರ್ವಾದ ಮಾಡುತ್ತ ತಲೆಯ ಮೇಲೆ ಕೈ ಇಟ್ಟಳು. ಮೃದುವಾದ ದೂರ್ವೆ ಅಕ್ಷತೆಗಳು, ಬಿಳಿಧಾನ್ಯ, ಹೂ ಹಣ್ಣು ಪತ್ರೆಗಳು, ಅರಳು, ಮೊಸರು, ಕನ್ನಡಿ, ಮಾವಿನ ಚಿಗುರಿಂದ ಕೂಡಿದ ಪೂರ್ಣಕಲಶ, ಗಂಧ, ಚಂದ್ರ ಕಸ್ತೂರಿ ಕೇಸರಿ ಹೂಮಾಲೆಗಳು, ದೀಪ ಕೆಂಪುಗಂಧ ಚಿನ್ನ ಬೆಳ್ಳಿ ಸುಮಂಗಲಿಯಾದ ಪುತ್ರವತಿ ಸ್ತ್ರೀ ಮುಂತಾದ ಮಂಗಳ ಪದಾರ್ಥಗಳನ್ನು ಉದ್ಧವನ ಮುಂದೆ ಇರಿಸಿದಳು. ಒತ್ತಿ ಬರುತ್ತಿದ್ದ ಕಣ್ಣೀರನ್ನು ತಡೆದುಕೊಂಡು ಅಂತರಂಗದಲ್ಲಿ ದುಃಖಿಸುತ್ತಲೆ ಉದ್ಧವನ ಪ್ರಯಾಣಕ್ಕೆ ಶುಭ ಕೋರಿದಳು -

**ಶುಭಂ ಭವತು ಮಾರ್ಗಸ್ತೇ ಕಲ್ಯಾಣಮಸ್ತು ಸಂತತಂ ।**
**ಜ್ಞಾನಂ ಲಭ ಹರೇಃ ಸ್ಥಾನಂ ಕೃಷ್ಣಸ್ಯ ಸುಪ್ರಿಯೋ ಭವ ॥**

'ನಿನಗೆ ಪ್ರಯಾಣ ಶುಭಕರವಾಗಲಿ. ನಿರಂತರ ಕಲ್ಯಾಣ ಒದಗಲಿ. ತತ್ವಜ್ಞಾನ ಹೊಂದು. ಹರಿಯ ಸ್ಥಾನವನ್ನು ಪಡೆ. ಕೃಷ್ಣನಿಗೆ ಬಲು ಪ್ರಿಯನೆನಿಸು.' ಕೃಷ್ಣಭಕ್ತಿ, ಕೃಷ್ಣ ದಾಸ್ಯಗಳೆಂದರೆ ಲೋಕದಲ್ಲಿ ಅತ್ಯುತ್ತಮವಾದ ಪದಾರ್ಥಗಳಲ್ಲೆಲ್ಲ ಅತ್ಯುತ್ತಮ. ಐದು ಬಗೆಯ ಮುಕ್ತಿಗಿಂತಲೂ ಹರಿಭಕ್ತಿ ಉತ್ತಮ. ಬ್ರಹ್ಮಪದವಿ, ಇಂದ್ರಪದವಿ, ದೇವಪದವಿ, ಯೋಗಸಿದ್ಧಿ, ಮೋಕ್ಷಗಳಿಗಿಂತಲೂ ದುರ್ಲಭ ಈ ಹರಿಭಕ್ತಿ. ಅನೇಕ ಜನ್ಮಗಳ ತಪಸ್ಸಿನಿಂದ ಭಾರತದಲ್ಲಿ ಜನಿಸಿದ ದ್ವಿಜನಿಗೂ ಹರಿಭಕ್ತಿ ದೊರೆತರೇ ಅವನ ಜನ್ಮಸಾರ್ಥಕ. ಅವನು ಕರ್ಮಕ್ಷಯ ಮಾಡಿಕೊಂಡು ಪಿತೃಕುಲ ಮಾತೃಕುಲ ಪತ್ನಿ ಗುರು ಶಿಷ್ಯರ ಸೇವಕರ ಕುಲಗಳಲ್ಲಿ ಸಾವಿರಾರು ಮಂದಿಯ ಉದ್ಧಾರ ಮಾಡಬಲ್ಲ.

ಕೃಷ್ಣನಿಗೆ ಸಮರ್ಪಿಸಿದ ಕರ್ಮವೆ ಪುಣ್ಯಕರ್ಮ. ಕೃಷ್ಣನಿಗೆ ಪ್ರೀತಿಕರವಾದ ಕರ್ಮವೆ ಶುಭಕರ್ಮ. ಹರಿಯ ಆರಾಧನೆಯೆ ಮಂಗಳಕರ. ಕೊನೆಯಲ್ಲಿ ಸುಖಕರ. ಅದೇ ವ್ರತವೆನಿಸುತ್ತದೆ. ಅದೇ ತಪಸ್ಸೆನಿಸುತ್ತದೆ. ಹರಿಯ ಪ್ರೀತಿಗಾಗಿ ಉಪವಾಸ ಮಾಡುವುದು ಹರಿದಾಸ್ಯಕ್ಕೆ ಸಾಧನ. ಸಮಸ್ತ ಪೃಥಿವೀ ದಾನ, ಭೂಪ್ರದಕ್ಷಿಣೆ, ತೀರ್ಥಸ್ನಾನ ವ್ರತ ತಪಸ್ಸು ಯಜ್ಞ ದಾನ ವೇದವೇದಾಂಗಪಠನ ಪಾಠನ, ಅಪಾಯದಲ್ಲಿ ಸಿಲುಕಿದವರ ರಕ್ಷಣ, ಜ್ಞಾನದಾನ, ಅತಿಥಿಸತ್ಕಾರ, ಶರಣಾಗತರಕ್ಷಣ, ಸರ್ವದೇವತಾರಾಧನ, ವಂದನ ಜಪಗಳು, ಬ್ರಾಹ್ಮಣಾರಾಧನ, ದೇವತಾರಾಧನ, ಪುರಶ್ಚರಣ, ಗುರುಶುಶ್ರೂಷೆ, ಪಿತೃಭಕ್ತಿ ಪಿತೃಪೋಷಣ ಎಲ್ಲವೂ ಶ್ರೀಕೃಷ್ಣನ ದಾಸ್ಯದ ಹದಿನಾರನೆ ಒಂದು ಭಾಗಕ್ಕೆ ಸಮಾನವಾಗಲಾರದು. ಆದರಿಂದ, ಉದ್ಧವ, ಶ್ರೀಕೃಷ್ಣನನ್ನು ಆರಾಧಿಸು. ಅವನೆ ಪರಮಾತ್ಮ. ಸರ್ವೇಶ್ವರ, ಪರಾತ್ಪರ, ನಿತ್ಯಸತ್ಯ, ಪ್ರಕೃತಿಯಿಂದಾಚೆ ಇರುವವ, ಪರಿಪೂರ್ಣ ಸದ್ಗುಣ, ಭಕ್ತರ ಮೇಲೆ ಅನುಗ್ರಹ ಮಾಡಲೆಂದೆ ಅವತರಿಸಿದವ, ಕರ್ಮ

ದೇವತೆಗಳ ಎಪ್ಪತ್ತೊಂದು ಚತುರ್ಯುಗಗಳು ಒಂದು ಮನ್ವಂತರವಾಗುವುದು. ಅದು ಒಬ್ಬ ಇಂದ್ರನ ಆಯುಷ್ಯವೆನಿಸುವುದು. ಇಂಥ ಹದಿನಾಲ್ಕು ಇಂದ್ರರು ಪದ ಚ್ಯುತಿ ಹೊಂದಿದರೆ ಬ್ರಹ್ಮನಿಗೆ ಒಂದು ಹಗಲು. ಅಷ್ಟೇ ದೀರ್ಘ ರಾತ್ರಿಯೂ ಇರುತ್ತದೆ. ಬ್ರಹ್ಮಲೋಕದಲ್ಲಿ ಸೂರ್ಯಸಂಚಾರವಿಲ್ಲ. ಅಲ್ಲಿ ಇಂದ್ರಪತನಗಳಿಂದಲೆ ಹಗಲು ರಾತ್ರಿಗಳನ್ನು ತಿಳಿಯುತ್ತಾರೆ. ಈರೀತಿಯಲ್ಲಿ ಮೂವತ್ತು ದಿನಗಳಾದರೆ ಬ್ರಹ್ಮನಿಗೆ ಒಂದು ಮಾಸವಾಗುವುದು. ಹನ್ನೆರಡು ಮಾಸಗಳು ಒಂದು ವರ್ಷ. ನೂರು ವರ್ಷ ಕಾಲ ಬ್ರಹ್ಮನಿಗೆ ಬ್ರಹ್ಮಪದವಿ ಇರುತ್ತದೆ. ಅವನ ಪದಚ್ಯುತಿಯಾದರೆ ಶ್ರೀಹರಿಗೆ ಒಂದು ನಿಮಿಷವಾದಂತೆ. ಬ್ರಹ್ಮನ ಪದಚ್ಯುತಿಯಿಂದ ವೈಕುಂಠದಲ್ಲಿ ಹಗಲು ರಾತ್ರಿಗಳಾಗುವುದಿಲ್ಲ. ಅಲ್ಲಿ ಸೂರ್ಯನ ಸಂಚಾರವೂ ಇಲ್ಲ. ಆದರಿಂದ ವೈಕುಂಠವಾಸಿಗಳಿಗೆ ಹಗಲು ರಾತ್ರಿಗಳೆ ತಿಳಿಯುವುದಿಲ್ಲ. ಅಲ್ಲಿ ಚಂದ್ರ ಗ್ರಹ ನಕ್ಷತ್ರ ರಾಶಿಗಳೂ ತಿರುಗುವುದಿಲ್ಲ. ಕೃಷ್ಣನೆ ಅಲ್ಲಿ ತನ್ನ ಮಂದಿರದಿಂದ ಹೊರಗೆ ಬಂದು ಉಜ್ವಲವಾಗಿ ಬೆಳಗಿ ಹಗಲು ಮಾಡುತ್ತಾನೆ. ಬಳಿಕ ಅವನು ಮಂದಿರದೊಳಗೆ ಪ್ರವೇಶಿಸಿದರೆ ಆಗ ರಾತ್ರಿ. ಇದು ವಿಷ್ಣುಲೋಕದಲ್ಲಿ ಕಾಲಗತಿ. ಕಾಲಸ್ವರೂಪ ಭಗವಂತನೆ ಆಗಿರುತ್ತಾನೆ. ಏಳು ಪಾತಾಳಲೋಕಗಳಲ್ಲಿಯೂ ಸೂರ್ಯಚಂದ್ರರ ಸಂಚಾರವಿಲ್ಲ. ಆದರೂ ಅಲ್ಲಿಯ ಜನರಿಗೆ ಹಗಲು ರಾತ್ರಿಗಳ ಬಗ್ಗೆ ಸಂದೇಹವಿರುವುದಿಲ್ಲ. ಏಕೆಂದರೆ ಹಗಲು ಹೊತ್ತು ಸರ್ಪಗಳ ಮಣಿ ಪ್ರಕಾಶಿಸುತ್ತದೆ. ಸಂಜೆ ಅಗ್ನಿ ಜ್ವಲಿಸುತ್ತದೆ. ರಾತ್ರಿ ತಮಸ್ಸು ಆವರಿಸುತ್ತದೆ.

ಕೃತ ತ್ರೇತಾ ದ್ವಾಪರ ಕಲಿ ಎಂದು ನಾಲ್ಕು ಯುಗಗಳು. ಅವು ಒಟ್ಟು ದೇವಮಾನದ ಹನ್ನೆರಡುಸಾವಿರ ವರ್ಷಗಳಾಗುತ್ತವೆ. ಹೇಗೆಂದರೆ ಕೃತಯುಗ ದೇವಮಾನದ ನಾಲ್ಕು ಸಾವಿರದ ಎಂಟುನೂರು ವರ್ಷಗಳು. ಅಂದರೆ, ಮಾನವ ಮಾನದಲ್ಲಿ ಹದಿನೇಳು ಲಕ್ಷದ ಇಪ್ಪತ್ತೆಂಟು ಸಾವಿರ ವರ್ಷಗಳು. ತ್ರೇತಾಯುಗ ದೇವಮಾನದಲ್ಲಿ ಮೂರು ಸಾವಿರದ ಆರುನೂರು ವರ್ಷಗಳು. ಮಾನವ ಮಾನದಲ್ಲಿ ಹನ್ನೆರಡು ಲಕ್ಷದ ತೊಂಬತ್ತಾರು ಸಾವಿರ ವರ್ಷಗಳು. ದ್ವಾಪರ ಯುಗ ದೇವಮಾನದಲ್ಲಿ ಎರಡು ಸಾವಿರದ ನಾನೂರು ವರ್ಷಗಳು, ಮಾನವಮಾನದಲ್ಲಿ ಎಂಟುಲಕ್ಷದ ಅರವತ್ತನಾಲ್ಕು ಸಾವಿರ ವರ್ಷಗಳು. ಕಲಿಯುಗ ದೇವಮಾನದಲ್ಲಿ ಒಂದು ಸಾವಿರದ ಇನ್ನೂರು ವರ್ಷಗಳು. ಮಾನವಮಾನದಲ್ಲಿ ನಾಲ್ಕು ಲಕ್ಷದ ಮೂವತ್ತೆರಡು ಸಾವಿರ ವರ್ಷಗಳು. ಆದರಿಂದ ಮಾನವಮಾನದ ನಲವತ್ತಮೂರು ಲಕ್ಷದ ಇಪ್ಪತ್ತು ಸಾವಿರ ವರ್ಷಗಳು ನಾಲ್ಕು ಯುಗಗಳ ಒಟ್ಟು ಪ್ರಮಾಣ.

ಉದ್ಧವ, ಇದು ನಾನು ಶ್ರೀಕೃಷ್ಣನಿಂದ ಕೇಳಿ ತಿಳಿದಿರುವ ಕಾಲಗಣನೆ. ಇನ್ನು ನೀನು ಶ್ರೀಕೃಷ್ಣನ ಮಧುರಾನಗರಿಗೆ ಹೊರಡು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರಾಧಾ ಉದ್ಧವ ಸಂವಾದದ ಕಾಲನಿರೂಪಣವೆಂಬ ತೊಂಬತ್ತಾರನೆ ಅಧ್ಯಾಯ ಮುಗಿಯಿತು.*

# ರಾಧಾಉದ್ಧವ ಸಂವಾದ

**ಅಧ್ಯಾಯ - ೯೭**

**ಶ್ರೀ ನಾರಾಯಣ ಮುನಿ:-** ನಾರದ, ಉದ್ಧವ ಹೊರಟಿದ್ದನ್ನು ಕಂಡು ರಾಧೆ ತಟ್ಟನೆ ಆಸನ ಬಿಟ್ಟೆದ್ದು ಗೋಪಿಯರೊಂದಿಗೆ ಬಂದು ಅವನಿಗೆ ಮಂಗಳಾಶೀರ್ವಾದ ಮಾಡುತ್ತ ತಲೆಯ ಮೇಲೆ ಕೈ ಇಟ್ಟಳು. ಮೃದುವಾದ ದೂರ್ವೆ ಅಕ್ಷತೆಗಳು, ಬಿಳಿಧಾನ್ಯ, ಹೂ ಹಣ್ಣು ಪತ್ರೆಗಳು, ಅರಳು, ಮೊಸರು, ಕನ್ನಡಿ, ಮಾವಿನ ಚಿಗುರಿಂದ ಕೂಡಿದ ಪೂರ್ಣಕಲಶ, ಗಂಧ, ಚಂದ್ರ ಕಸ್ತೂರಿ ಕೇಸರಿ ಹೂಮಾಲೆಗಳು, ದೀಪ ಕೆಂಪುಗಂಧ ಚಿನ್ನ ಬೆಳ್ಳಿ ಸುಮಂಗಲಿಯಾದ ಪುತ್ರವತಿ ಸ್ತ್ರೀ ಮುಂತಾದ ಮಂಗಳ ಪದಾರ್ಥಗಳನ್ನು ಉದ್ಧವನ ಮುಂದೆ ಇರಿಸಿದಳು. ಒತ್ತಿ ಬರುತ್ತಿದ್ದ ಕಣ್ಣೀರನ್ನು ತಡೆದುಕೊಂಡು ಅಂತರಂಗದಲ್ಲಿ ದುಃಖಿಸುತ್ತಲೆ ಉದ್ಧವನ ಪ್ರಯಾಣಕ್ಕೆ ಶುಭ ಕೋರಿದಳು -

**ಶುಭಂ ಭವತು ಮಾರ್ಗಸ್ತೇ ಕಲ್ಯಾಣಮಸ್ತು ಸಂತತಂ।**
**ಜ್ಞಾನಂ ಲಭ ಹರೇಃ ಸ್ಥಾನಂ ಕೃಷ್ಣಸ್ಯ ಸುಪ್ರಿಯೋ ಭವ॥**

'ನಿನಗೆ ಪ್ರಯಾಣ ಶುಭಕರವಾಗಲಿ. ನಿರಂತರ ಕಲ್ಯಾಣ ಒದಗಲಿ. ತತ್ವಜ್ಞಾನ ಹೊಂದು. ಹರಿಯ ಸ್ಥಾನವನ್ನು ಪಡೆ. ಕೃಷ್ಣನಿಗೆ ಬಲು ಪ್ರಿಯನೆನಿಸು.' ಕೃಷ್ಣಭಕ್ತಿ, ಕೃಷ್ಣ ದಾಸ್ಯಗಳೆಂದರೆ ಲೋಕದಲ್ಲಿ ಅತ್ಯುತ್ತಮವಾದ ಪದಾರ್ಥಗಳಲ್ಲೆಲ್ಲ ಅತ್ಯುತ್ತಮ. ಐದು ಬಗೆಯ ಮುಕ್ತಿಗಿಂತಲೂ ಹರಿಭಕ್ತಿ ಉತ್ತಮ. ಬ್ರಹ್ಮಪದವಿ, ಇಂದ್ರಪದವಿ, ದೇವಪದವಿ, ಯೋಗಸಿದ್ಧಿ, ಮೋಕ್ಷಗಳಿಗಿಂತಲೂ ದುರ್ಲಭ ಈ ಹರಿಭಕ್ತಿ. ಅನೇಕ ಜನ್ಮಗಳ ತಪಸ್ಸಿನಿಂದ ಭಾರತದಲ್ಲಿ ಜನಿಸಿದ ದ್ವಿಜನಿಗೂ ಹರಿಭಕ್ತಿ ದೊರೆತರೇ ಅವನ ಜನ್ಮಸಾರ್ಥಕ. ಅವನು ಕರ್ಮಕ್ಷಯ ಮಾಡಿಕೊಂಡು ಪಿತೃಕುಲ ಮಾತೃಕುಲ ಪತ್ನಿ ಗುರು ಶಿಷ್ಯರ ಸೇವಕರ ಕುಲಗಳಲ್ಲಿ ಸಾವಿರಾರು ಮಂದಿಯ ಉದ್ಧಾರ ಮಾಡಬಲ್ಲ.

ಕೃಷ್ಣನಿಗೆ ಸಮರ್ಪಿಸಿದ ಕರ್ಮವೆ ಪುಣ್ಯಕರ್ಮ. ಕೃಷ್ಣನಿಗೆ ಪ್ರೀತಿಕರವಾದ ಕರ್ಮವೆ ಶುಭಕರ್ಮ. ಹರಿಯ ಆರಾಧನೆಯೆ ಮಂಗಳಕರ. ಕೊನೆಯಲ್ಲಿ ಸುಖಕರ. ಅದೇ ವ್ರತವೆನಿಸುತ್ತದೆ. ಅದೇ ತಪಸ್ಸೆನಿಸುತ್ತದೆ. ಹರಿಯ ಪ್ರೀತಿಗಾಗಿ ಉಪವಾಸ ಮಾಡುವುದು ಹರಿದಾಸ್ಯಕ್ಕೆ ಸಾಧನ. ಸಮಸ್ತ ಪೃಥಿವೀ ದಾನ, ಭೂಪ್ರದಕ್ಷಿಣೆ, ತೀರ್ಥಸ್ನಾನ ವ್ರತ ತಪಸ್ಸು ಯಜ್ಞ ದಾನ ವೇದವೇದಾಂಗಪಠನ ಪಾಠನ, ಅಪಾಯದಲ್ಲಿ ಸಿಲುಕಿದವರ ರಕ್ಷಣ, ಜ್ಞಾನದಾನ, ಅತಿಥಿಸತ್ಕಾರ, ಶರಣಾಗತರಕ್ಷಣ, ಸರ್ವದೇವತಾರಾಧನ, ವಂದನ ಜಪಗಳು, ಬ್ರಾಹ್ಮಣಾರಾಧನ, ದೇವತಾರಾಧನ, ಪುರಶ್ಚರಣ, ಗುರುಶುಶ್ರೂಷೆ, ಪಿತೃಭಕ್ತಿ ಪಿತೃಪೋಷಣ ಎಲ್ಲವೂ ಶ್ರೀಕೃಷ್ಣನ ದಾಸ್ಯದ ಹದಿನಾರನೆ ಒಂದು ಭಾಗಕ್ಕೆ ಸಮಾನವಾಗಲಾರದು. ಅದರಿಂದ, ಉದ್ಧವ, ಶ್ರೀಕೃಷ್ಣನನ್ನು ಆರಾಧಿಸು. ಅವನೆ ಪರಮಾತ್ಮ. ಸರ್ವೇಶ್ವರ, ಪರಾತ್ಪರ, ನಿತ್ಯಸತ್ಯ, ಪ್ರಕೃತಿಯಿಂದಾಚೆ ಇರುವವ, ಪರಿಪೂರ್ಣ ಸದ್ಗುಣ, ಭಕ್ತರ ಮೇಲೆ ಅನುಗ್ರಹ ಮಾಡಲೆಂದೆ ಅವತರಿಸಿದವ, ಕರ್ಮ

ಮಾಡುವವರ ಕರ್ಮಕ್ಕೆ ಸಾಕ್ಷಿಯಾಗಿ ನಿರ್ಲಿಪ್ತನಾಗಿರುವವ. ಪರಂಜ್ಯೋತಿಃಸ್ವರೂಪ. ಪ್ರಪಂಚ ಕಾರಣಗಳಿಗೂ ಕಾರಣ. ಸರ್ವಸ್ವರೂಪ ಸರ್ವೇಶ ಸರ್ವ ಸಂಪತ್‌ಪ್ರದ ಭಕ್ತಿ ದಾಸ್ಯಗಳನ್ನು ನೀಡುವವ ತನ್ನ ಸಂಪತ್ತನ್ನು ನೀಡುವವ. ಜ್ಞಾತಿ ಎಂದು ಮತ್ಸರ ಪಡದೆ ಪರಮಾನಂದ ಸ್ವರೂಪನಾದ ನಂದನಂದನನನ್ನು ಆರಾಧಿಸು. ವೇದದ ಕೌಥುಮೀ ಶಾಖೆಯಲ್ಲಿ ಕೃಷ್ಣನ ಸಹಸ್ರನಾಮಗಳಿವೆ.'

ರಾಧೆಯ ಮಾತುಗಳನ್ನು ಕೇಳಿ ಉದ್ಧವ ಪರಮಾಶ್ಚರ್ಯಗೊಂಡ. ಪೂರ್ಣಜ್ಞಾನ ಪಡೆದು ಪರಿಪೂರ್ಣನೆನಿಸಿದ. ದಂಡಪ್ರಣಾಮ ಮಾಡಿ ಪಾದಸ್ಪರ್ಶಮಾಡಿ ಮೈರೋಮಾಂಚಗೊಂಡು ಆನಂದಾಶ್ರು ಸುರಿಸುತ್ತ ಭಕ್ತಿ ಪ್ರೇಮಗಳಿಂದ ಮತ್ತು ವಿಯೋಗ ದುಃಖದಿಂದ ಗಟ್ಟಿಯಾಗಿ ಅತ್ತ. ರಾಧೆಯೂ ಪ್ರೀತಿಯಿಂದ ಅತ್ತಳು. ಗೋಪಿಯರೂ ಅತ್ತರು. ಉದ್ಧವ ಮೈಮರೆತು ಬೀಳುತ್ತಿದ್ದಾಗ ರಾಧೆ ಅವನ ಮುಖ ಕಮಲಕ್ಕೆ ನೀರನ್ನು ಪ್ರೋಕ್ಷಿಸಿ ಚೈತನ್ಯ ತುಂಬಿದಳು, ಶುಭಾಶೀರ್ವಾದ ನೀಡಿದಳು - 'ಮಗು, ಚಿರಕಾಲ ಬಾಳು' ಎಂದಳು. ಉದ್ಧವ ಚೈತನ್ಯ ಪಡೆದು ಹೇಳತೊಡಗಿದ -

'ಭಾರತವರ್ಷದಿಂದ ಕೂಡಿದ ಜಂಬುದ್ವೀಪವೆ ಎಲ್ಲ ದ್ವೀಪಗಳಲ್ಲಿ ಧನ್ಯ. ಭಾರತ ವರ್ಷದಲ್ಲಿಯೂ ಪುಣ್ಯಕರವಾದುದು ವೃಂದಾವನ. ರಾಧೆಯ ಪಾದಕಮಲ ಧೂಳಿಯಿಂದ ಪವಿತ್ರವಾಗಿದ್ದು ದೇವತೆಗಳಿಗೂ ಇಷ್ಟವೆನಿಸುವಂಥದ್ದು. ಸಕಲ ತೀರ್ಥಗಳಿಗಿಂತಲೂ ಪವಿತ್ರವಾದ ರಾಧೆಯ ಪಾದಕಮಲ ಧೂಳಿನಿಂದ ಭೂದೇವಿ ಧನ್ಯಳು, ಮಾನ್ಯಳು, ತ್ರಿಲೋಕವಂದ್ಯಳು. ಹಿಂದೆ ಬ್ರಹ್ಮನು ಗೋಲೋಕದಲ್ಲಿ ರಾಧಾ ಕೃಷ್ಣರ ದರ್ಶನಕ್ಕಾಗಿ ಅರವತ್ತು ಸಾವಿರ ದಿವ್ಯ ವರ್ಷಕಾಲ ವೇದೋಕ್ತರೀತಿಯಿಂದ ತಪಸ್ಸು ಮಾಡಿದರೂ ದರ್ಶನ ಸಿಗಲಿಲ್ಲ. ಬಳಿಕ ಆಕಾಶವಾಣಿ ಕೇಳಿಸಿತು. 'ವರಾಹಕಲ್ಪದಲ್ಲಿ ಪವಿತ್ರ ಭಾರತವರ್ಷದ ವೃಂದಾವನದಲ್ಲಿ ಮಹಾರಮ್ಯವಾದ ರಾಸಮಂಡಲದ ರಾಸೋತ್ಸವದಲ್ಲಿ ದೇವತೆಗಳ ನಡುವೆ ರಾಧಾಕೃಷ್ಣರ ದರ್ಶನ ಲಭಿಸುವುದು.' ಇದನ್ನು ಕೇಳಿ ಬ್ರಹ್ಮ ತಪಸ್ಸನ್ನು ನಿಲ್ಲಿಸಿದ. ಬಳಿಕ ಈ ವೃಂದಾವನದಲ್ಲಿ ರಾಧಾಕೃಷ್ಣರನ್ನು ಕಂಡ. ಇಂಥ ಬ್ರಹ್ಮಾದಿ ದುರ್ಲಭವಾದ ನಿನ್ನ ಪಾದಕಮಲವನ್ನು ನಿತ್ಯ ದರ್ಶನ ಮಾಡುವ ಗೋಪ ಗೋಪಿಯರ ಜೀವನ ಸಫಲ, ಜನ್ಮ ಸಾರ್ಥಕ.

ಯೋಗೀಂದ್ರರು, ಮುನೀಂದ್ರರು, ಸಿದ್ಧೇಂದ್ರರು, ಎಲ್ಲ ವಿಷ್ಣುಭಕ್ತರು ಸದಾ ರಾಧೆಯನ್ನು ಆರಾಧಿಸುವರು. ರಾಧೆ ಪತಿವ್ರತೆ, ಪುಣ್ಯಕರಳು, ತೀರ್ಥಗಳಿಗಿಂತ ಪವಿತ್ರಳು, ಸ್ವತಃ ಶುದ್ಧಳು, ಬಹಳ ದುರ್ಲಭಳು. ಅವಳ ಪಾದಕಮಲ ಬ್ರಹ್ಮಾದಿಗಳಿಗೇ ದುರ್ಲಭ. ಆ ಪಾದನಖಗಳಿಗೆ ಕೃಷ್ಣನೆ ಅಲಕ್ತಕರಸ ಹಚ್ಚುತ್ತಾನೆ. ಅವಳ ಪೂಜೆ ಮಾಡುತ್ತಾನೆ, ಸ್ತೋತ್ರ ಮಾಡುತ್ತಾನೆ. ಗೋಲೋಕದ ರಾಸ ಮಂಡಲದಲ್ಲಿ ಸ್ವತಃ ಕೃಷ್ಣನೆ ಅವಳ ಪಾದಕಮಲಗಳಿಗೆ ಪಾರಿಜಾತ ಹೂಗಳನ್ನು ಚೆಲ್ಲುತ್ತಾನೆ, ಗಂಧಚಂದನ ಬಳಿಯುತ್ತಾನೆ, ದೂರ್ವೆ ಅಕ್ಷತೆಗಳನ್ನು ಹಾಕುತ್ತಾನೆ. ಅವಳ ಬಳಿ ಮೂವತ್ತು ಸಾವಿರಕೋಟಿ ಗೋಪಿಯರಿದ್ದಾರೆ, ಮೂವತ್ತಾರು ಸಖಿಯರಿದ್ದಾರೆ. ಅವರೆಲ್ಲರಿಗೂ ರಾಧೆ ಒಡತಿ. ಅವಳನ್ನು ದ್ವೇಷಿಸುವ ನಿಂದಿಸುವ ಅಪಹಾಸ ಮಾಡುವ ಪಾಪಿಗಳು

ನೂರುಬ್ರಹ್ಮಹತ್ಯೆಗಳ ಪಾಪಕ್ಕೆ ಈಡಾಗುವರು. ಕುಂಭೀಪಾಕ ರೌರವ ನರಕಗಳಲ್ಲಿ ಹದಿನಾಲ್ಕು ಮನ್ವಂತರ ಕಾಲ ಬೀಳುವರು. ಬಳಿಕ ಸಾವಿರ ದಿವ್ಯ ವರ್ಷಕಾಲ ಮಲಕ್ರಿಮಿಯಾಗಿ ಹುಟ್ಟುತ್ತಾರೆ. ವೇದದ ಕಾಣ್ವ ಶಾಖೆಯಲ್ಲಿ ಹಾಗೆ ಹೇಳಿದೆ ಎಂದು ಬ್ರಹ್ಮ ಹೇಳುತ್ತಿದ್ದಾನೆ.' ಹೀಗೆ ಹೇಳಿ ಹೊರಟ ಉದ್ಧವನಿಗೆ ಪುನಃ ರಾಧೆ ಹೇಳಿದಳು - 'ಮಗು, ಉದ್ಧವ, ಮಧುರೆಗೆ ಹೋಗಿ ಕೃಷ್ಣನ ಮುಂದೆ ಎಲ್ಲವನ್ನೂ ಹೇಳು. ಕೃಷ್ಣನ ದರ್ಶನ ನನಗೆ ಸಿಗುವಂತೆ ಮಾಡಲು ಪ್ರಯತ್ನಿಸು. ನನ್ನ ಆಸೆ ಪೂರೈಸದೆ ಜನ್ಮವೆ ನಿಷ್ಫಲವಾಗುತ್ತಿದೆ. ಆಸೆಯೆ ಮಹಾದುಃಖಕಾರಣ. ಆಸೆ ಇಲ್ಲದಿದ್ದರೇ ಪರಮ ಸುಖ.' ಹೀಗೆ ಹೇಳಿ ರಾಧೆ ಕಣ್ಣೀರು ಸುರಿಸಿದಳು. ಉದ್ಧವ ಅವಳನ್ನು ನಮಿಸಿ ಯಶೋದೆಯ ಅರಮನೆಗೆ ಹೊರಟು ಹೋದ. ಇತ್ತ ರಾಧೆ ಮೈಮರೆತು ಮಲಗಿದಳು. ಕೃಷ್ಣಧ್ಯಾನದಲ್ಲಿ ಲೀನಳಾದಳು. ಗೋಪಿಯರು ಕಣ್ಣೀರು ಹಾಕುತ್ತ ರಾಧೆಯನ್ನು ಕಮಲದ ಎಲೆಗಳ ಒದ್ದೆ ಹಾಸಿಗೆಯಲ್ಲಿ ಮಲಗಿಸಿದರು. ಆದರೆ ಅವಳ ಮೈಯ ಸ್ಪರ್ಶವಾದೊಡನೆ ಆ ಹಾಸಿಗೆ ಸುಟ್ಟು ಹೋಯಿತು. ಮತ್ತೆ ತಣ್ಣಗಿರುವ ಸ್ಥಳದಲ್ಲಿ ತಣ್ಣಗಿನ ಹಾಸಿಗೆ ಮೇಲೆ ಚಂದನ ರಸ ಬಳಿದು ಅದರ ಮೇಲೆ ರಾಧೆಯನ್ನು ಮಲಗಿಸಿದರು. ಆಗ ಆ ಗಂಧದ ನೀರೂ ಒಣಗಿತು. ವಿರಹ ಜ್ವರದಿಂದ ಬೇಯುತ್ತಿದ್ದ ರಾಧೆಗೆ ಒಂದು ನಿಮಿಷವೂ ನೂರು ಯುಗದಂತಾಯಿತು. 'ಉದ್ಧವ, ಉದ್ಧವ, ಬೇಗ ಹೋಗಿ ಕೃಷ್ಣನ ಬಳಿ ಎಲ್ಲವನ್ನೂ ಹೇಳು. ಬೇಗನೆ ಅವನನ್ನು ಕರೆದು ತಾ' ಎಂದು ಬಡಬಡಿಸುತ್ತ ಎಚ್ಚರವಿಲ್ಲದೆ ಮಲಗಿದ್ದ ರಾಧೆಯನ್ನು ಗೋಪಿಯರು ತಬ್ಬಿಕೊಂಡು ಅತ್ತರು, ಸಮಾಧಾನ ಪಡಿಸಿದರು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರಾಧಾ ಉದ್ಧವ ಸಂವಾದದಲ್ಲಿ ತೊಂಬತ್ತೇಳನೆ ಅಧ್ಯಾಯ ಮುಗಿಯಿತು.*

—o—

## ಶ್ರೀಕೃಷ್ಣ ಉದ್ಧವರ ಸಂವಾದ

**ಅಧ್ಯಾಯ - ೯೮**

**ಶ್ರೀನಾರಾಯಣ ಮುನಿ:-** 'ಉದ್ಧವ ಯಶೋದೆಯನ್ನು ನಮಿಸಿ ಬೇಗನೆ ಹೊರಟು ಖರ್ಜೂರ ವನದ ಎಡಭಾಗದ ಮಾರ್ಗವಾಗಿ ಯಮುನಾ ನದೀ ತೀರವನ್ನು ಸೇರಿದ. ಅಲ್ಲಿ ಸ್ನಾನ ಭೋಜನಗಳನ್ನು ತೀರಿಸಿ ಮಧುರೆಗೆ ಹೋಗಿ ಅಲ್ಲಿ ಆಲದ ಮರದ ಬುಡದಲ್ಲಿ ಏಕಾಂತದಲ್ಲಿ ಕೃಷ್ಣನನ್ನು ಕಂಡ. ಕೃಷ್ಣ ಹಸನ್ಮುಖನಾಗಿದ್ದ. ಉದ್ಧವ ಅಳುತ್ತ ದುಃಖದಿಂದ ಬೇಯುತ್ತ ಕಣ್ಣೀರು ಸುರಿಸುತ್ತಿದ್ದ, ಕಾತರನಾಗಿದ್ದ.

**ಕೃಷ್ಣ ನಗುತ್ತ ನುಡಿದ:-** 'ಬಾ, ಉದ್ಧವ, ಬಾ, ರಾಧೆ ಹೇಗಿರುವಳು, ಗೋಪಿಯರು ಹೇಗಿರುವರು? ಗೋಪ ಬಾಲಕರು ಚೆನ್ನಾಗಿರುವರೆ? ದನಕರುಗಳು ಚೆನ್ನಾಗಿವೆಯೆ? ತಾಯಿ ಯಶೋದೆ ಪುತ್ರವಿರಹದಿಂದ ತಪ್ತಳಾಗಿ ಈಗ ಹೇಗಿರುವಳು? ಎಲ್ಲವನ್ನೂ ಹೇಳು. ನಿನ್ನನ್ನು ಕಂಡಾಗ ಅವಳು ಏನು ಹೇಳಿದಳು? ನೀನೇನು ಹೇಳಿದೆ? ಅದಕ್ಕೆ ಅವಳೇನು ಹೇಳಿದಳು? ಆಪುಣ್ಯಕರವಾದ ಯಮುನಾ ತೀರವನ್ನೂ ಕಂಡೆಯ? ವೃಂದಾವನವನ್ನುಕಂಡೆಯ? ನಿರ್ಜನವಾದ ರಮ್ಯವಾದ ರಾಸಮಂಡಲವನ್ನು ಕಂಡೆಯ? ಲತಾವನ, ಈಜುಕೊಳ, ಹೂವಿನ ಉದ್ಯಾನಗಳನ್ನು ಕಂಡೆಯ? ಭಾಂಡೀರವೆಂಬ ಆಲದಮರದ ಬುಡದಲ್ಲಿ ಗೋಪಬಾಲಕರು ಆಟವಾಡುವುದನ್ನು ನೋಡಿದೆಯ? ಕೊಟ್ಟಿಗೆಗಳಲ್ಲಿ ದನಕರುಗಳನ್ನು ಕಂಡೆಯ? ರಾಧೆಯನ್ನು ಕಂಡೆಯ? ಅವಳು ಏನೆಂದಳು? ಎಲ್ಲವನ್ನೂ ಹೇಳು. ಗೋಪಿಯರು ಏನು ಹೇಳಿದರು? ಗೋಪಬಾಲಕರು ಏನೆಂದರು? ಹಿರಿಯ ಗೋಪಾಲಕರು ನಮ್ಮ ತಂದೆಯ ಸ್ನೇಹಿತರು ಏನು ಹೇಳಿದರು? ಬಲರಾಮನ ತಾಯಿ ರೋಹಿಣಿ ಏನು ಹೇಳಿದಳು? ಬೇರೆ ಬಂಧು ಜನರು ಏನು ಹೇಳಿದರು? ತಾಯಿಯ ಕೈಯಿಂದ ಸಿದ್ಧವಾದ ಅಪೂರ್ವವಾದ ಭಕ್ಷ್ಯ ಭೋಜ್ಯಗಳನ್ನು ಉಂಡೆಯ? ರಾಧೆಯ ಕೈಯಿಂದ ಏನು ತಿಂಡಿ ತಿನಿಸುಗಳನ್ನು ಉಂಡೆ? ಅವಳೊಡನೆ ನಿನ್ನ ಸಂಭಾಷಣೆ ಹೇಗಿತ್ತು? ಅವಳ ಸವಿನುಡಿಗಳನ್ನು ಆಲಿಸಿದೆಯ? ಗೋಪಗೋಪಿಯರು ಗೋಪಬಾಲಕರು ತಾಯಿ, ರಾಧೆ ಇವರಿಗೆಲ್ಲರಿಗೂ ನನ್ನಲ್ಲಿ ಪ್ರೀತಿ ವಿಶ್ವಾಸಗಳು ಹೇಗಿವೆ? ತಾಯಿ ನನ್ನನ್ನು ನೆನೆಯುತ್ತಿರುವಳೆ? ರೋಹಿಣಿ ನೆನೆಯುತ್ತಿರುವಳೆ? ರಾಧೆ ವಿರಹದಿಂದ ಕಾತರಳಾಗಿ ನನ್ನನ್ನು ನೆನೆಯುತ್ತಿರುವಳೆ? ಗೋಪಿಯರು ಗೋಪರು ಗೋಪಬಾಲಕರು ನೆನೆಯುತ್ತಿರುವರೆ? ಭಾಂಡೀರ ವಟವೃಕ್ಷದ ಬುಡದಲ್ಲಿ ಗೋಪಬಾಲಕರಿಗೆ ಜೊತೆಯಾಗಿ ಆಡಲು ಈಗ ನಾನಿಲ್ಲ. ನನ್ನನ್ನು ಬಿಟ್ಟು ಅವರು ಆಡುತ್ತಿರುವುದನ್ನು ನೋಡಿದೆಯ? ಬ್ರಾಹ್ಮಣಸ್ತ್ರೀಯರು ಕೊಟ್ಟ ಅನ್ನವನ್ನು ನಾವು ಉಂಡ ಆ ಸ್ಥಳವನ್ನು ಕಂಡೆಯ? ಇಂದ್ರಯಾಗದ ಸ್ಥಳವನ್ನು ಕಂಡೆಯ? ಗೋವರ್ಧನ ಬೆಟ್ಟವನ್ನು ಕಂಡೆಯ?'

ಶ್ರೀಕೃಷ್ಣನುಡಿದ ಮಾತುಗಳನ್ನು ಕೇಳಿ ಉದ್ಧವ ನುಡಿದ -

'ಪ್ರಭು, ನೀನು ಹೇಳಿದ ಎಲ್ಲ ಸ್ಥಳಗಳನ್ನೂ ನಾನು ಕಂಡೆ. ನಾನು ಭಾರತ ಭೂಮಿಯಲ್ಲಿ ಜನ್ಮ ತಳೆದುದು ಸಾರ್ಥಕವಾಯಿತು. ಭಾರತದಲ್ಲಿಯೆ ಅತಿ ಶ್ರೇಷ್ಠವಾದ ಪುಣ್ಯಸ್ಥಳ ವೃಂದಾವನವನ್ನೂ ಕಂಡೆ. ಆ ವ್ರಜಭೂಮಿಯಲ್ಲಿ ಬಲು ರಮ್ಯವಾದ ರಾಸಮಂಡಲವನ್ನೂ ಕಂಡೆ. ಅಲ್ಲಿ ಗೋಲೋಕವಾಸಿಗಳಾದ ಗೋಪಿಕೆಯರನ್ನೂ ಕಂಡೆ. ಅವರ ನಡುವೆ ರಾಸೇಶ್ವರಿಯಾದ ರಾಧೆಯನ್ನೂ ಕಂಡೆ. ಬಾಳೆತೋಟದ ನಿರ್ಜನ ಸ್ಥಳದಲ್ಲಿ ಸಖಿಯರ ನಡುವೆ ಕಮಲದ ಎಲೆಗಳ ಹಾಸಿಗೆ ಮೇಲೆ ಚಂದನರಸ ಬಳಿದು ಒದ್ದೆ ಮಾಡಿ ಅದರ ಮೇಲೆ ಮಲಗಿರುತ್ತಾಳೆ ರಾಧೆ. ರತ್ನಾಭರಣಗಳನ್ನು ಬದಿಗಿಟ್ಟು ಮಲಿನಳಾಗಿ ಬಿಳಿಬಟ್ಟೆ ಉಡುತ್ತಾಳೆ. ಅನ್ನ ನೀರು ಬಿಟ್ಟು ಕ್ಷೀಣಳಾಗಿ ಕ್ಷಣಕ್ಷಣಕ್ಕೂ ನಿಟ್ಟುಸಿರು ಬಿಡುತ್ತಾಳೆ. ಸಖಿಯರು ಬಿಳಿ ಚಾಮರ ಹಿಡಿದು ಸದಾ ಬೀಸುತ್ತಾರೆ. ವಿರಹತಾಪ ಪೀಡಿತಳಾದ ರಾಧೆ ಇನ್ನು ಒಂದು ಕ್ಷಣ ಬದುಕುವಳೊ ಇಲ್ಲವೊ ಹೇಳಲಾರೆ. ಹರಿ, ಯಾವುದು ನೆಲ, ಯಾವುದು ಜಲ, ಯಾವುದು ರಾತ್ರಿ ಯಾವುದು ಹಗಲು, ಯಾರು ಪಶುಗಳು ಯಾರು ಮಾನವರು ಎಂಬುದನ್ನೂ ತಿಳಿದುಕೊಳ್ಳಲು ಅವಳು ಈಗ ಸಮರ್ಥಳಾಗಿಲ್ಲ. ಯಾರು ಬಂಧುಗಳು ಯಾರು ಪರರು ಎಂಬುದನ್ನೂ ಗುರುತಿಸಲಾರಳು. ಬಾಹ್ಯಪ್ರಪಂಚವನ್ನೆ ಮರೆತು ನಿನ್ನ ಪಾದಧ್ಯಾನ ಒಂದನ್ನೆ ಮಾಡುತ್ತಿದ್ದಾಳೆ. ಅವಳನ್ನು ನೀನು ಉಪೇಕ್ಷಿಸಿದರೆ ಬದುಕಲಾರಳು. ಅದೊಂದು ಸ್ತ್ರೀಹತ್ಯೆಯೆ ಆಗುತ್ತದೆ. ಜ್ಞಾನಹೀನರಾದ ದಸ್ಯುಗಳೂ ಸ್ತ್ರೀಹತ್ಯೆ ಮಾಡಲು ಬಯಸಲಾರರು. ಅದರಿಂದ ಜಗನ್ನಾಥ, ನೀನು ಬೇಗನೆ ಬಾಳೆತೋಟಕ್ಕೆ ಹೋಗಬೇಕು. ನೀನು ಜಗನ್ನಾಥ. ನಿನ್ನ ರಕ್ಷಣೆಯಲ್ಲಿರುವ ಜಗತ್ತಿನಲ್ಲಿ ಅವಳೂ ಸೇರಿದವಳೆ, ಹೊರಗಲ್ಲ ತಾನೆ? ನಿನ್ನನ್ನೇ ನಂಬಿದ್ದಾಳೆ, ನಿನ್ನ ಪರಮಭಕ್ತಳು. ನೀನು ಅವಳನ್ನು ರಕ್ಷಿಸಲೆಬೇಕು, ಬಿಡಬಾರದು.

**ನ ಹಿ ರಾಧಾಪರಾ ಭಕ್ತಾ ನ ಭೂತಾ ನ ಭವಿಷ್ಯತಿ**

ರಾಧೆಗಿಂತ ಹೆಚ್ಚಿನ ಭಕ್ತಳಿಲ್ಲ, ಹಿಂದೆಯೂ ಇರಲಿಲ್ಲ ಮುಂದೆಯೂ ಇರುವುದಿಲ್ಲ. ಮನ್ಮಥನು ಶಿವನಿಗೆ ಸೋಲುತ್ತಾನೆ, ಆ ಶಿವನಿಗಿಂತ ಹೆಚ್ಚಿನವ ನೀನು. ನಿನ್ನಂಥ ಪತಿಯನ್ನು ಪಡೆದೂ ರಾಧೆ ಕಾಮತಾಪದಿಂದ ಬೇಯುತ್ತಿದ್ದಾಳೆ. ಇದು ನ್ಯಾಯವೆ? ಅವಳನ್ನು ವಸಂತ ಪೀಡಿಸುತ್ತಾನೆ, ಚಂದ್ರ ಬೆಳದಿಂಗಳಿನಿಂದ ಸುಡುತ್ತಾನೆ. ಪರಿಮಳದಿಂದ ಕೂಡಿದ ತಂಗಾಳಿಯೂ ಸುಡುತ್ತದೆ. ಅನಾಥೆ ಅವಳು, ಎಲ್ಲರಿಂದಲೂ ಪೀಡಿತಳಾಗುತ್ತಿದ್ದಾಳೆ. ಪುಟಕ್ಕಿಟ್ಟ ಚಿನ್ನದ ಬಣ್ಣದ ಮೈಯವಳು ಈಗ ಕಾಡಿಗೆಯಂತಾಗಿದ್ದಾಳೆ. ಬಂಗಾರದ ಬಣ್ಣದ ಕೂದಲಿನವಳು, ಬಾಚಿಕೊಳ್ಳುತ್ತಿಲ್ಲ, ವಸ್ತ್ರಾಲಂಕಾರವನ್ನೂ ಧರಿಸುವುದಿಲ್ಲ. ಹರಿ, ದೇವೋತ್ತಮನಾದ ಬ್ರಹ್ಮ ನಿನ್ನ ಭಕ್ತ. ಯೋಗೀಂದ್ರರ ಗುರುಗಳಿಗೂ ಗುರುವಾದ ಶಂಕರ ನಿನ್ನ ಭಕ್ತ. ಜ್ಞಾನಿವರೇಣ್ಯರಾದ ಸನತ್ಕುಮಾರ ಗಣೇಶರು ನಿನ್ನ ಭಕ್ತರು. ಎಷ್ಟು ಮಂದಿ ಮುನಿವರೇಣ್ಯರು ನಿನ್ನ ಭಕ್ತರಿರುವರು! ಆದರೆ ರಾಧೆಯಂಥ ಭಕ್ತರು ಯಾರೂ ಇಲ್ಲ. ಅವಳಂತೆ ಲಕ್ಷ್ಮಿಯೂ

ನಿನ್ನನ್ನು ಧ್ಯಾನಿಸಲಾರಳು. ಹರಿ ನಿನ್ನ ಬಳಿಗೆ ಬರುತ್ತಾನೆ ಎಂದು ಅವಳಿಗೆ ನಾನು ಮಾತು ಕೊಟ್ಟಿದ್ದೇನೆ. ನನ್ನ ಮಾತನ್ನು ನಡೆಸಿಕೊಡು, ಬೇಗ ಹೋಗು.' ಉದ್ಧವನ ಮಾತನ್ನು ಕೇಳಿ ಕೃಷ್ಣ ನಕ್ಕು ಹೇಳಿದ,

**ಸ್ತ್ರೀಷು ನರ್ಮವಿವಾಹೇಷು ವೃತ್ತ್ಯರ್ಥೇ ಪ್ರಾಣಸಂಕಟೇ ।**
**ಗವಾಮರ್ಥೇ ಬ್ರಾಹ್ಮಣಾರ್ಥೇ ನಾನೃತಂ ಸ್ಯಾಜ್ಜುಗುಪ್ಸಿತಂ ॥**

'ಸ್ತ್ರೀಯರಲ್ಲಿ, ಪರಿಹಾಸಗಳಲ್ಲಿ, ವಿವಾಹಗಳಲ್ಲಿ, ಜೀವಿಕೆಗಾಗಿ, ಪ್ರಾಣಾಪಾಯದಲ್ಲಿ ಅಥವಾ ಗೋಬ್ರಾಹ್ಮಣರ ಹಿತಕ್ಕಾಗಿ ಸುಳ್ಳು ಹೇಳಿದರೂ ತಪ್ಪಿಲ್ಲ.' ಆದರಿಂದ ನೀನು ಕೊಟ್ಟ ಮಾತನ್ನು ನಡೆಸದಿದ್ದರೆ ನಿನಗೆ ನರಕವಾಗುವುದು ಹೇಗೆ? ನನ್ನ ಭಕ್ತನಿಗೆಂದೂ ನರಕ ದರ್ಶನವಿಲ್ಲ. ಅವನು ಗೋಲೋಕಕ್ಕೇ ಹೋಗುತ್ತಾನೆ. ಆದರೂ ನಾನು ನಿನ್ನ ಮಾತನ್ನು ನಡೆಸಿಕೊಡುತ್ತೇನೆ. ಕನಸಿನಲ್ಲಿ ರಾಧೆ, ಗೋಪಿಯರು, ತಾಯಿ - ಎಲ್ಲರ ಬಳಿಗೂ ಹೋಗಿ ಬರುತ್ತೇನೆ.

ಉದ್ಧವ ಸಮಾಧಾನಗೊಂಡು ತನ್ನ ಮನೆಗೆ ಹೊರಟು ಹೋದ. ಕೃಷ್ಣ ಕನಸಿನಲ್ಲಿ ವಿರಹಶೋಕತಪ್ತವಾದ ಗೋಕುಲವನ್ನು ಪ್ರವೇಶಿಸಿದ. ಕನಸಿನಲ್ಲಿಯೆ ರಾಧೆಯೊಡನೆ ಸೇರಿ ವಿಹಾರ ಮಾಡಿದ, ತತ್ವಜ್ಞಾನವನ್ನೂ ಉಪದೇಶಿಸಿದ. ಕನಸಿನಲ್ಲೆ ಯಶೋದೆಯ ಬಳಿಗೂ ಹೋಗಿ 'ಸ್ತನಪಾನ ಮಾಡಿದ. ಕನಸಿನಲ್ಲಿಯೆ ಗೋಪಗೋಪಿಯರನ್ನೂ ಗೋಪಬಾಲಕರನ್ನೂ ಸಂತೋಷಗೊಳಿಸಿ ಹೊರಟು ಹೋದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ತೊಂಬತ್ತೆಂಟನೆ ಅಧ್ಯಾಯ ಮುಗಿಯಿತು*

—o—

## ಕೃಷ್ಣ ರಾಮರ ಉಪನಯನಕ್ಕೆ ಆಹ್ವಾನ

ಅಧ್ಯಾಯ - ೯೯

**ಶ್ರೀನಾರಾಯಣ ಮುನಿ ನುಡಿದ:-** ಈ ನಡುವೆ ವಸುದೇವನ ಮನೆಗೆ ಯಾದವರ ಕುಲಪುರೋಹಿತರಾದ ಗರ್ಗಮುನಿ ಬಂದ. ಜಟಾಧಾರಿಯಾಗಿ ಬ್ರಹ್ಮತೇಜಸ್ಸಿನಿಂದ ಬೆಳಗುತ್ತಿದ್ದನಾತ. ಶುಭ್ರವಾದ ಯಜ್ಞೋಪವೀತ, ದಂಡ ಛತ್ರಗಳನ್ನು ಧರಿಸಿದ್ದ. ಬಿಳಿಬಟ್ಟೆ ಉಟ್ಟಿದ್ದ. ತಪಸ್ವಿಯಾದ ಆ ಮುನಿಯನ್ನು ಕಂಡು ವಸುದೇವದೇವಕಿಯರು ಎದ್ದು ಇದಿರುಗೊಂಡರು; ಆಸನವಿತ್ತು ಸತ್ಕರಿಸಿದರು. ಮಧುಪರ್ಕವಿತ್ತರು. ಬಿಳಿಬಟ್ಟೆ ಗಂಧಮಾಲ್ಯಗಳನ್ನಿತ್ತರು. ಮಿಷ್ಟಾನ್ನ ಉಣಿಸಿ ತಾಂಬೂಲವಿತ್ತು ಪೂಜಿಸಿದರು. ಗರ್ಗ ಮುನಿ ಮನಸ್ಸಿನಲ್ಲಿಯೆ ಕೃಷ್ಣ ಬಲರಾಮರನ್ನು ನಮಿಸಿ, ನುಡಿದ - 'ವಸುದೇವ, ನೋಡು ನಿನ್ನ ಮಕ್ಕಳಾದ ಕೃಷ್ಣ ಬಲರಾಮರನ್ನು. ಅವರಿಗೆ ಈಗ ಮುಂಜಿ ಮಾಡಲು ಯೋಗ್ಯವಾದ ವಯಸ್ಸು.'

'ಮುನಿಯೆ, ಹಾಗಾದರೆ ಒಂದು ಶುಭ ಮುಹೂರ್ತವನ್ನು ನಿರ್ಧರಿಸು.'

'ಹಾಗೇ ಆಗಲಿ, ವಸುದೇವ, ನಾಡಿದ್ದೇ ಮುಂಜಿಮಾಡಿ ಬಿಡೋಣ. ಒಳ್ಳೆಯ ಚಂದ್ರಬಲ ತಾರಾಬಲದಿಂದ ಕೂಡಿದ ಮೂಹೂರ್ತ ಸಿಗುತ್ತಿದೆ.' ಮುನಿಯ ಮಾತನ್ನು ಕೇಳಿ ವಸುದೇವ ಎಲ್ಲ ಬಂಧುಗಳಿಗೂ ಉಪನಯನದ ಮಂಗಳಾಹ್ವಾನ ಪತ್ರಿಕೆಯನ್ನು ಕಳಿಸಿಕೊಟ್ಟ. ಹಾಲು ತುಪ್ಪ ಮೊಸರು ಜೇನು ಬೆಲ್ಲ ಮುಂತಾದವುಗಳ ಕಾಲುವೆಗಳನ್ನೆ ಸಿದ್ಧಗೊಳಿಸಿದ. ನಾನಾ ಬಗೆಯ ರತ್ನಾಭರಣಗಳನ್ನೂ ಬಟ್ಟೆಬರೆಗಳನ್ನೂ ಮುತ್ತು ಮಾಣಿಕ್ಯ ವಜ್ರ ಮುಂತಾದುವನ್ನೂ ಸಿದ್ಧಪಡಿಸಿದ. ಭಕ್ತವತ್ಸಲನಾದ ಕೃಷ್ಣ ಎಲ್ಲ ದೇವತೆಗಳನ್ನೂ ಮುನಿಗಳನ್ನೂ ಸಿದ್ಧರನ್ನೂ ಮನಸ್ಸಿನಲ್ಲಿಯೆ ಸ್ಮರಿಸಿ ಆಹ್ವಾನಿಸಿದ. ಆದರಿಂದ ಅವರೆಲ್ಲರೂ ಮಂಗಳಕಾರ್ಯದಲ್ಲಿ ಪಾಲುಗೊಳ್ಳಲು ಬಂದರು. ಅನೇಕ ಮಂದಿ ರಾಜರೂ ಬಂದರು. ದೇವಕನ್ಯೆಯರು ನಾಗಕನ್ಯೆಯರು ವಿದ್ಯಾಧರಿಯರು ಗಂಧರ್ವರು ಎಲ್ಲರೂ ತಮ್ಮ ವಾದ್ಯಸಾಮಗ್ರಿ ಸಮೇತರಾಗಿ ಬಂದರು. ಬ್ರಹ್ಮಚಾರಿ ಗೃಹಸ್ಥ ಯತಿಗಳೆಲ್ಲರೂ ಸೇರಿದರು. ಭೀಷ್ಮ ದ್ರೋಣ ಕರ್ಣ ಅಶ್ವತ್ಥಾಮ ಕೃಪರೂ ಧೃತರಾಷ್ಟ್ರನೂ ಕುಂತಿ ಮತ್ತು ಕುಂತಿಯ ಮಕ್ಕಳೂ ಬಂದರು. ಅತ್ರಿ ವಸಿಷ್ಠ ಚ್ಯವನ ಭರದ್ವಾಜ ಯಾಜ್ಞವಲ್ಕ್ಯ ಭೀಮ ಗಾರ್ಗ್ಯ ವತ್ಸ ಧರ್ಮ ಜೈಗೀಷವ್ಯ ಪರಾಶರ ಪುಲಹ ಪುಲಸ್ಯ ಅಗಸ್ತ್ಯ ಸೌಭರಿ ಸನಕ ಸನಂದನ ಸನಾತನ ಸನತ್ಕುಮಾರ ವೋಢು ಪಂಚಶಿಖ ದುರ್ವಾಸ ಅಂಗಿರಸ ವ್ಯಾಸ ಶುಕ ಕುಶಿಕ ಕೌಶಿಕ ಪರಶುರಾಮ ಋಷ್ಯಶೃಂಗ ವಿಭಾಂಡಕ ಶೃಂಗಿ ವಾಮದೇವ ಗೌತಮ ಕ್ರತು ಯತಿ ಆರುಣಿ ಶುಕ್ರ ಬೃಹಸ್ಪತಿ ಅಷ್ಟಾವಕ್ರ ವಾಮನ ವಾಲ್ಮೀಕಿ ಪಾರಿಭದ್ರ ಪೈಲ ವೈಶಂಪಾಯನ ಪ್ರಚೇತ ಪುರುಜಿತ್ ಭೃಗು ಮರೀಚಿ ಮಧುಜಿತ್ ಕಶ್ಯಪ ಅದಿತಿ ದಿತಿ ಸುಮಂತು ಸುಭಾನು ಕಾತ್ಯಾಯನ ಮಾರ್ಕಂಡೇಯ ಲೋಮಶ ಕಪಿಲ ಪಾಣಿನಿ ಪಾರಿಯಾತ್ರ ಪಾರಿಭದ್ರ ಸಂವರ್ತ ಉತಥ್ಯ ನರ ನಾರಾಯಣ ವಿಶ್ವಾಮಿತ್ರ ಶತಾನಂದ ಜಾಬಾಲಿ ತೈತಿಲ ಸಾಂದೀಪನಿ ಉಪಮನ್ಯು

ಗೌರಮುಖ ಮೈತ್ರೇಯ ಶ್ರುತಶ್ರವ ಕಠ ಕಚ ಕರಖ ಭರದ್ವಾಜ - ಈ ಎಲ್ಲ ಮುನಿಗಳೂ ತಮ್ಮ ಶಿಷ್ಯರ ಸಮೇತರಾಗಿ ವಸುದೇವನ ಮನೆಗೆ ಬಂದರು. ವಸುದೇವ ಅವರೆಲ್ಲರಿಗೂ ನೆಲದ ಮೇಲೆ ದಂಡಪ್ರಣಾಮ ಮಾಡಿದ. ಬ್ರಹ್ಮನೂ ಹಂಸವಾಹನನಾಗಿ ಮಂದಹಾಸ ಯುಕ್ತನಾಗಿ ಬಂದ. ಶಂಕರನೂ ರತ್ನವಿಮಾನವೇರಿ ಪಾರ್ವತೀ ಸಮೇತನಾಗಿ ಬಂದ. ನಂದಿ ಮಹಾಕಾಲ ವೀರಭದ್ರ ಸುಭದ್ರಕ ಮಣಿಭದ್ರ ಪಾರಿಭದ್ರ, ಕಾರ್ತಿಕೇಯ ಗಣಪತಿ, ಇಂದ್ರ, ಧರ್ಮ, ಚಂದ್ರ ಸೂರ್ಯ, ಕುಬೇರ, ವರುಣ ವಾಯು ಅಗ್ನಿ ಯಮ ಜಯಂತ ನಲ ಕುಬೇರ ಎಲ್ಲ ಗ್ರಹಗಳು ವಸುಗಳು ರುದ್ರರು ಆದಿತ್ಯರು ಶೇಷ ಎಲ್ಲರೂ ಬಂದರು. ಎಲ್ಲರಿಗೂ ವಸುದೇವ ಭಕ್ತಿಯಿಂದ ರೋಮಾಂಚಗೊಂಡು ತಲೆಬಾಗಿದ, ಸ್ತೋತ್ರ ಮಾಡಿದ -

'ಪರಬ್ರಹ್ಮನಿಗೆ ಪರಮಧಾಮವೆನಿಸಿದ ವಿಧಾತ, ಸ್ವಯಂ ನನ್ನ ಮನೆಗೆ ಬಂದೆ. ವೇದಗಳಿಗೆ ಜನಕ, ಪ್ರಪಂಚ ಸೃಷ್ಟಿಕರ್ತ ನೀನು. ದೇವ ಋಷಿ ಸಿದ್ಧರಿಗೆಲ್ಲ ಪರಮಗುರುವೆನಿಸಿದ, ಸ್ವಪ್ನದಲ್ಲಿಯೂ ತನ್ನ ಪಾದಕಮಲದರ್ಶನ ನೀಡದ, ಸ್ಮರಣ ಮಾತ್ರದಿಂದ ಸರ್ವಾನಿಷ್ಟ ಕಳೆವ ಶಿವ, ನೀನೂ ಬಂದೆ. ಎಲ್ಲ ಕಾರ್ಯಗಳಲ್ಲಿಯೂ ಅಗ್ರಪೂಜ್ಯ, ಎಲ್ಲ ಸಂಕಟಗಳನ್ನು ಕಳೆದು ಕಲ್ಯಾಣ ಉಂಟು ಮಾಡುವ ದೇವೋತ್ತಮ ಗಣೇಶ ನೀನೂ ಬಂದೆ. ದೇವಾದಿ ಪೂಜ್ಯನೆನಿಸಿದ ಕಾರ್ತಿಕೇಯ, ಸರ್ವದೇವೋತ್ತಮಳಾದ ಪರಾತ್ಪರಳಾದ ಮಹಾಲಕ್ಷ್ಮಿ, ಜಗದಾದಿ ರೂಪಿಣಿ ಪಾರ್ವತಿ, ಸರ್ವಶಕ್ತಿ ಸ್ವರೂಪಳಾದ ಮೂಲಪ್ರಕೃತಿ ನೀವೆಲ್ಲ ನನ್ನ ಮನೆಗೆ ಬಂದಿರಿ. ಸರ್ವದೇವತೆಗಳಿಂದ ಗಣಗಳಿಂದ ಕೂಡಿ ಭಕ್ತವತ್ಸಲೆಯಾದ ಕೃಪಾಮಯಿಯಾದ ದುರ್ಗೆ, ಶರತ್ಕಾಲದಲ್ಲಿ ಕೃಪೆಯಿಂದ ಸ್ವಯಂ ನನ್ನ ಮನೆಗೆ ಬಂದಿರುವಿ. ನಾನು ಧನ್ಯ ಕೃತಕೃತ್ಯ, ನನ್ನ ಜೀವನ ಸಫಲ.'

ಹೀಗೆ ಸ್ತೋತ್ರ ಮಾಡಿ ವಸುದೇವ ಎಲ್ಲರನ್ನೂ ರತ್ನ ಸಿಂಹಾಸನದಲ್ಲಿ ಕುಳ್ಳಿರಿಸಿ ಸತ್ಕರಿಸಿದ. ಬ್ರಹ್ಮಾದಿ ದೇವತೆಗಳನ್ನೂ ಮುನಿಗಳನ್ನೂ ಬ್ರಾಹ್ಮಣರನ್ನೂ ಪುರೋಹಿತನಾದ ಗರ್ಗ ಮುನಿಯನ್ನೂ ವರಣ ಮಾಡಿದ. ರತ್ನಾಭರಣಗಳನ್ನೂ ವಸ್ತ್ರಗಳನ್ನೂ ಇತ್ತು ಸತ್ಕರಿಸಿದ. ಮೊದಲಿಗೆ ಗಣೇಶನ ಪೂಜೆ ಮಾಡಿದ. ರತ್ನಸಿಂಹಾಸನದಲ್ಲಿ ಗಣೇಶನನ್ನು ಕೂಡಿಸಿ ಚಿನ್ನದ ಕಲಶಗಳಲ್ಲಿ ತುಂಬಿದ ಏಳು ತೀರ್ಥಗಳ ಜಲ, ಹೂವು ಗಂಧಗಳಿಂದ ಕೂಡಿದ ತಂಪಾದ ದೇವಗಂಗೆಯ ಜಲ, ಪುಷ್ಕರದ ಪುಣ್ಯತೀರ್ಥದಿಂದಲೂ ಶುದ್ಧವಾದ ಪಂಚಾಮೃತ ಪಂಚಗವ್ಯಗಳಿಂದಲೂ ಭಕ್ತಿಯಿಂದ ಮಂತ್ರಪೂರ್ವಕವಾಗಿ ಅಭಿಷೇಕ ಮಾಡಿದ. ಪಾರಿಜಾತದ ಹೂಮಾಲೆಗಳು ರತ್ನಾಭರಣಗಳು ಶುಭ್ರವಾದ ವಸ್ತ್ರಗಳು ಸುವಾಸನೆಯ ಹೂವು ಇವುಗಳಿಂದ ಪಾರ್ವತೀ ನಂದನನಾದ, ವಿಘ್ನಗಳಿಗೆ ವಿಘ್ನಕರನಾದ ಗಣೇಶನನ್ನು ಪೂಜಿಸಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಭಗವಂತನ ಉಪನಯನದಲ್ಲಿ ಗಣೇಶಾಭಿಷೇಕವೆಂಬ ತೊಂಬತ್ತೊಂಬತ್ತನೆ ಅಧ್ಯಾಯ ಮುಗಿಯಿತು*

# ದೇವತೆಗಳ, ಮುನಿಗಳ ಶ್ರೀಕೃಷ್ಣಸ್ತೋತ್ರ



**ಶ್ರೀ ನಾರಾಯಣ ಮುನಿ:-** ಅದಿತಿ ದಿತಿ ದೇವಕಿ ರೋಹಿಣಿ ರತಿ ಸರಸ್ವತಿ ಸಾವಿತ್ರಿ ಯಶೋದೆ ಲೋಪಾಮುದ್ರೆ ಅರುಂಧತಿ ಅಹಲ್ಯೆ ತಾರೆ ಇವರೆಲ್ಲರೂ ಸೇರಿ ಪಾರ್ವತಿಯನ್ನು ರತ್ನಸಿಂಹಾಸನದಲ್ಲಿ ಕೂಡಿಸಿ ಹೂಮಾಲೆ ವಸ್ತ್ರ ರತ್ನಾಭರಣಗಳಿಂದ ಪೂಜಿಸಿದರು. ದೇವಕಿ ಇಂದ್ರನು ತಂದಿತ್ತ ಪಾರಿಜಾತದ ಹೂಗಳಿಂದ ಪಾರ್ವತಿಯ ಪಾದಕಮಲಗಳನ್ನು ಅರ್ಚಿಸಿದಳು. ಬೈತಲೆಗೆ ಚಂದ್ರದ ಬೊಟ್ಟನ್ನೂ ಹಣೆಗೆ ಗಂಧದ ಬೊಟ್ಟನ್ನೂ ಅದರ ಸುತ್ತಲೂ ಕಸ್ತೂರಿ ಕುಂಕುಮ ಮುಂತಾದುವನ್ನೂ ಇಟ್ಟಳು. ಮಿಷ್ಟಾನ್ನ ಭೋಜನ ಮಾಡಿಸಿದಳು. ತಂಪಿನ ಸುವಾಸನೆಯ ನೀರನ್ನಿತ್ತಳು. ಪಚ್ಚೆ ಕರ್ಪೂರಾದಿ ಸುಗಂಧ ಭರಿತವಾದ ತಾಂಬೂಲ ನೀಡಿದಳು. ಪಾದನಖಗಳಿಗೆ ಅಲಕ್ತಕ ಕುಂಕುಮರಸಗಳನ್ನು ಬಳಿದು ಬಿಳಿಚಾಮರ ಬೀಸಿದಳು. ಹೀಗೆ ಪಾರ್ವತಿಯನ್ನು ಪೂಜಿಸಿ ಮುನಿಪತ್ನಿಯರನ್ನೂ ರಾಜಕನ್ಯೆಯರನ್ನೂ ದೇವಕನ್ಯೆಯರನ್ನೂ ನಾಗಕನ್ಯೆಯರನ್ನೂ ಮುನಿಕನ್ಯೆಯರನ್ನೂ ಪೂಜಿಸಿದಳು. ಮಂಗಲವಾದ್ಯಗಳು ಮೊಳಗಿದುವು ಬ್ರಾಹ್ಮಣಾರಾಧನಗಳು ನಡೆದುವು. ಮಧುರೆಯ ಗ್ರಾಮದೇವತೆಯಾದ ಭೈರವಿಯನ್ನೂ ಷಷ್ಠೀ ದೇವಿಯನ್ನೂ ಮಂಗಳಚಂಡಿಕೆಯನ್ನೂ ಪೂಜಿಸಿದ ಬಳಿಕ ವಸುದೇವ ಪುಣ್ಯಾಹವಾಚನ ಮಾಡಿಸಿ ವೇದಘೋಷವನ್ನೂ ಮಾಡಿಸಿದ.

ಚಿನ್ನದ ಕಲಶಗಳಲ್ಲಿ ತುಂಬಿದ ದೇವಗಂಗಾಜಲದಿಂದ ಕೃಷ್ಣ ಬಲರಾಮರನ್ನು ಸ್ನಾನ ಮಾಡಿಸಿದಳು. ರತ್ನಾಭರಣ ಗಂಧ ಪುಷ್ಪಾದಿಗಳಿಂದ ಅಲಂಕರಿಸಿದಳು. ಅಲಂಕೃತನಾಗಿ ಕಂಗೊಳಿಸುವ ಕೃಷ್ಣ ಬಲರಾಮನೊಂದಿಗೆ ದೇವತೆಗಳಿಂದ ಮುನಿಗಳಿಂದ ತುಂಬಿದ ಸಭಾಮಂದಿರವನ್ನು ಪ್ರವೇಶಿಸಿದ. ಬ್ರಹ್ಮ ಶಿವ ಶೇಷ ಧರ್ಮ ಸೂರ್ಯ ಷಣ್ಮುಖ ಗಣಪತಿ ಮುಂತಾದ ಎಲ್ಲ ದೇವತೆಗಳೂ ಮುನಿಗಳೂ ಎದ್ದುನಿಂತು ಸ್ತೋತ್ರ ಮಾಡಿದರು.

**ಬ್ರಹ್ಮ:-** ಪ್ರಭು, ನಿನ್ನ ಮಹಿಮೆಯನ್ನು ಮಾತಿನಿಂದ ವರ್ಣಿಸಲಾರೆವು ವೇದಗಳೂ ನಿನ್ನನ್ನು ಪೂರ್ತಿ ವರ್ಣಿಸಲಾರವು. ಇನ್ನಾರು ನಿನ್ನನ್ನು ವರ್ಣಿಸಬಲ್ಲರು?

**ಮಹಾದೇವ:-** ದೇಹಿಗಳ ದೇಹಗಳಲ್ಲಿ ಸದಾ ಅವರೊಂದಿಗೆ ಇದ್ದು ನಿರ್ಲಿಪ್ತನಾಗಿ ಕರ್ಮಫಲ ಉಣದೆ ಸಾಕ್ಷಿಯಾಗಿರುವ ಸರ್ವಶಕ್ತನಾದ ನೀನು ಪ್ರಾಕೃತ ರೂಪ ಗುಣ ಶೂನ್ಯನಾಗಿದ್ದು ನಿರ್ಗುಣನೆನಿಸಿರುವಿ. ನಿನ್ನನ್ನು ನಾನೇನು ಸ್ತುತಿಸಬಲ್ಲೆ?

**ಅನಂತ:-** ಪ್ರಭು, ನಾನು ನಿನ್ನನ್ನು ಏನು ತಿಳಿಯಬಲ್ಲೆ? ಅನಂತ ಕೋಟಿ ಬ್ರಹ್ಮಾಂಡಗಳಿಗೆ ಕಾರಣ ನೀನು. ನಿನ್ನ ರೋಮಕೂಪಗಳಲ್ಲಿ ಅಸಂಖ್ಯ ವಿಶ್ವಗಳೆ ಇವೆ. ಎಲ್ಲ ಬ್ರಹ್ಮ ವಿಷ್ಣು ಶಿವಾದಿ ದೇವತೆಗಳೂ ಅಲ್ಲಿಯೆ ಅಡಗಿದ್ದಾರೆ. ನಾನು ಸಣ್ಣ ನಾಗ. ಆನೆಯ ಮೇಲೆ ಸೊಳ್ಳೆಯಂತೆ ಮಹಾಕೂರ್ಮದ ಬೆನ್ನ ಮೇಲೆ ನನ್ನನ್ನು ಕುಳ್ಳಿರಿಸಿದವ

ನೀನು. ಪರಮಾಣುವಿಗಿಂತ ಸಣ್ಣ ವಸ್ತು ವಿಶ್ವದಲ್ಲಿ ಹೇಗೆ ಇಲ್ಲವೊ ಹಾಗೆ ಮಹಾವಿಷ್ಣುವಿಗಿಂತ ದೊಡ್ಡ ವಸ್ತುವಾಗಲಿ ಸಮಾನವಾದ ವಸ್ತುವಾಗಲಿ ಲೋಕದಲ್ಲಿ ಇಲ್ಲ. ಮಹಾವಿಷ್ಣುವಿಗಿಂತಲೂ ವ್ಯಾಪಕ ನೀನು. ನಿನಗಿಂತ ವ್ಯಾಪಕನಿನ್ನಾರೂ ಇಲ್ಲ. ಅಣೋರಣೀಯನೂ ನೀನೆ, ಮಹತೋ ಮಹೀಯನೂ ನೀನೆ. ಬ್ರಹ್ಮಾಂಡಕ್ಕೆ ಆಧಾರವಾದ ಜಲರೂಪ ನೀನು. ಜಲಾಧಾರನೂ ನೀನೆ. ಮಹಾವಾಯುವಾಗಿ ಶ್ವಾಸ ನಿಶ್ವಾಸ ಪ್ರೇರಕನೂ ನೀನೆ. ನಿತ್ಯನಾಗಿದ್ದೂ ಭಕ್ತರ ಮೇಲಿನ ವಾತ್ಸಲ್ಯದಿಂದ ಅವತಾರಗಳನ್ನು ತಾಳುವಿ. ನೀನು ನನಗೆ ಅನೇಕ ಮುಖಗಳನ್ನು ಕೊಟ್ಟಿರುವಿ. ಆದರಿಂದ ಆ ಎಲ್ಲ ಮುಖಗಳಿಂದ ನಿನ್ನನ್ನು ಸ್ತೋತ್ರ ಮಾಡುವ ಬಯಕೆ ನನಗೆ. ಆದರೆ ಅದಕ್ಕೆ ತಕ್ಕ ಜ್ಞಾನವನ್ನು ನೀನು ನನಗೆ ಕೊಡಲಿಲ್ಲ.

**ದೇವತೆಗಳು:-** ಪ್ರಭು, ಅನಂತ ಮಹಿಮನಾದ ನಿನ್ನನ್ನು ಅನಂತನೆ ಹೊಗಳಲು ಅಸಮರ್ಥನೆಂದಾದರೆ, ಸ್ವಯಂವಿಧಾತನೂ ಶಿವನೂ ಸರಸ್ವತಿಯೂ ಸ್ತುತಿಸಲಾರರೆಂದಾದರೆ ಇನ್ನು ನಾವೇನು ಸ್ತುತಿಸಬಲ್ಲೆವು?

**ಮುನಿಗಳು:-** ವೇದಗಳು ನಿನ್ನನ್ನು ಸ್ತುತಿಸಲಾರವೆಂದಾದರೆ ವೇದವೇತ್ತರಾದ ನಾವೇನು ನಿನ್ನನ್ನು ಸ್ತೋತ್ರಮಾಡಬಲ್ಲೆವು?

ದೇವತೆಗಳೂ ಮುನಿಗಳೂ ಮಾಡಿದ ಈ ಪುಣ್ಯಕರವಾದ ಸ್ತೋತ್ರವನ್ನು ಪೂಜಾಕಾಲದಲ್ಲಿ ಭಕ್ತಿಯಿಂದ ಪಠಿಸುವವನು ಈ ಲೋಕದಲ್ಲಿ ಸುಖವಾಗಿ ಬಾಳಿ, ನಿರ್ಮಲವಾದ ತತ್ವಜ್ಞಾನವನ್ನೂ ಸಂಪಾದಿಸಿ ರತ್ನಮಯ ವಿಮಾನವನ್ನೇರಿ ಗೋಲೋಕವನ್ನು ಸೇರುತ್ತಾನೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಭಗವಂತನ ಉಪನಯನದಲ್ಲಿ ನೂರನೆ ಅಧ್ಯಾಯ ಮುಗಿಯಿತು*

—o—

## ಶ್ರೀಕೃಷ್ಣರಾಮರ ಉಪನಯನ

ಅಧ್ಯಾಯ - ೧೦೧

**ಶ್ರೀನಾರಾಯಣ ಮುನಿ:-** ದೇವತೆಗಳೂ ಮುನಿಗಳೂ ಸ್ತೋತ್ರ ಮಾಡಿ ಶ್ರೀಕೃಷ್ಣನನ್ನು ನೋಡಿದರು. ಕೃಷ್ಣ ಸಭಾಂಗಣದಲ್ಲಿ ತಂದೆಯ ತೊಡೆಯ ಮೇಲೆ ಮಲಗಿ ಅಳುತ್ತಿದ್ದ! ಪೀತಾಂಬರ ಉಟ್ಟಿದ್ದ ನೀಲವರ್ಣದ ಕೃಷ್ಣ ಮಿಂಚಿನಿಂದ ಕೂಡಿದ ಕಪ್ಪು ಮೋಡದಂತೆ, ಬಕಪಕ್ಷಿಗಳ ಸಾಲಿನಿಂದ ಕಂಗೊಳಿಸುವ ಮಾಲತೀ ಮಾಲೆಯಂತೆ, ಕಸ್ತೂರೀಯುಕ್ತ ಚಂದನದಂತೆ, ಕಲಂಕಯುಕ್ತ ಚಂದ್ರನಂತೆ ಮನೋಹರವಾಗಿ ಕಾಣುತ್ತಿದ್ದ. ಭುಜಕೀರ್ತಿ ಬಳೆ ಕಾಲುಕಡಗ ಮುಂತಾದ ರತ್ನಾಭರಣಗಳಿಂದಲೂ ಶೋಭಿಸುತ್ತಿದ್ದ.

ವಸುದೇವ ಪಾಪಗ್ರಹದೃಷ್ಟಿಯಿಲ್ಲದ ಶುಭಗ್ರಹದೃಷ್ಟಿಯುಳ್ಳ ಶುಭಲಗ್ನದಲ್ಲಿ ದೇವತೆಗಳ ಋಷಿಗಳ ಆಜ್ಞೆ ಪಡೆದು ಸ್ವಸ್ತಿವಾಚನ ಪೂರ್ವಕವಾಗಿ ಶುಭಕರ್ಮ ಆರಂಭಿಸಿದ. ಬ್ರಾಹ್ಮಣರಿಗೆ ನೂರು ಸುವರ್ಣನಾಣ್ಯಗಳಿತ್ತು ದೇವತೆಗಳನ್ನೂ ಮುನಿಗಳನ್ನೂ ಗಣೇಶ ಸೂರ್ಯ ಅಗ್ನಿ ಶಂಕರರನ್ನೂ ಷೋಡಶೋಪಚಾರಗಳಿಂದ ಪೂಜೆ ಮಾಡಿದ. ನವಗ್ರಹಗಳಿಗೂ ಷೋಡಶ ಮಾತೃಕೆಯರಿಗೂ ಪೂಜೆಸಲ್ಲಿಸಿದ. ದೈವಿಕ ವೃದ್ಧಿಶ್ರಾದ್ಧವನ್ನೂ ಮಾಡಿ ವೇದೋಕ್ತಕ್ರಮದಿಂದ ಯಜ್ಞಮಾಡಿ ಕೃಷ್ಣ ರಾಮರಿಗೆ ಯಜ್ಞೋಪವೀತ ನೀಡಿದ. ಸಾಂದೀಪನಿಮುನಿ ಇಬ್ಬರಿಗೂ ಗಾಯತ್ರೀ ಮಂತ್ರ ಉಪದೇಶಿಸಿದರು. ಪಾರ್ವತೀದೇವಿ ಮೊದಲಿಗೆ ವಟುಗಳಿಗೆ ಭಿಕ್ಷೆ ಹಾಕಿದಳು. ಮುತ್ತು ಮಾಣಿಕ್ಯ ವಜ್ರಗಳಿಂದ ತುಂಬಿದ ಅಮೂಲ್ಯ ರತ್ನಪಾತ್ರೆಯನ್ನೆ ಇತ್ತಳು. ಬಿಳಿ ಹೂ ದೂರ್ವೆಗಳನ್ನು ನೀಡಿ ಶುಭಾಶೀರ್ವಾದ ಮಾಡಿದಳು. ಬಳಿಕ ಅದಿತಿ ದಿತಿ ಮುಂತಾದ ಮುನಿಪತ್ನಿಯರೂ ದೇವಕಿ ಯಶೋದೆ ರೋಹಿಣಿ ಸಾವಿತ್ರಿ ಸರಸ್ವತಿಯರೂ ಚಿನ್ನದ ಪಾತ್ರಗಳಲ್ಲಿ ರತ್ನಭಿಕ್ಷೆ ಇತ್ತರು. ಮುಂದೆ ದೇವಕನ್ಯೆಯರೂ ನಾಗಕನ್ಯೆಯರೂ ರಾಜಕನ್ಯೆಯರೂ ಬಂಧುಸ್ತ್ರೀಯರೂ ಮುಗುಳುನಗುತ್ತ ವಾತ್ಸಲ್ಯ ಪೂರ್ಣ ದೃಷ್ಟಿಯಿಂದ ನೋಡುತ್ತ ಭಿಕ್ಷೆ ನೀಡಿದರು. ಇಂದ್ರ ವರುಣ ವಾಯು ಚಂದ್ರ ಕುಬೇರ ಅಗ್ನಿ ಕಾಮರ ಪತ್ನಿಯರೂ ರತ್ನಾಭರಣಗಳ ಭಿಕ್ಷೆ ನೀಡಿದರು. ಕೃಷ್ಣ ರಾಮರು ಭಿಕ್ಷೆಯಲ್ಲಿ ಸ್ವಲ್ಪ ಗರ್ಗಮುನಿಗೂ ಇನ್ನು ಸ್ವಲ್ಪ ಸಾಂದೀಪನಿ ಮುನಿಗೂ ಇತ್ತರು.

ವಸುದೇವ ವೈದಿಕ ಕರ್ಮವೆಲ್ಲವನ್ನೂ ಮುಗಿಸಿ ಗರ್ಗಮುನಿಗೆ ದಕ್ಷಿಣೆ ಇತ್ತು ದೇವತೆಗಳಿಗೂ ಬ್ರಾಹ್ಮಣರಿಗೂ ಭೋಜನ ನೀಡಿದ. ಬಂದ ಎಲ್ಲ ಅತಿಥಿಗಳೂ ಕೃಷ್ಣರಾಮರಿಗೆ ಶುಭಾಶೀರ್ವಾದ ಮಾಡಿ ಸ್ವಸ್ಥಾನಗಳಿಗೆ ತೆರಳಿದರು. ನಂದ ಯಶೋದೆಯರು ಕೃಷ್ಣ ರಾಮರನ್ನು ಅಪ್ಪಿ ಮುದ್ದಿಟ್ಟರು. ಗಟ್ಟಿಯಾಗಿ ಅತ್ತರು. ಕೃಷ್ಣ ಅವರನ್ನು ಸಮಾಧಾನ ಪಡಿಸುತ್ತ ನುಡಿದ -

'ಅಮ್ಮ ಯಶೋದೆ, ಅಪ್ಪ ನಂದಗೋಪ, ನೀವು ಸಂತೋಷದಿಂದ ಊರಿಗೆ ಹಿಂತಿರುಗಿರಿ. ನೀವೆ ನಮ್ಮನ್ನು ಪೋಷಿಸಿದ ತಾಯಿ ತಂದೆಯರು. ನಾವು ಇಂದು ವೇದಾಧ್ಯಯನಕ್ಕಾಗಿ ಅವಂತೀ ನಗರದಲ್ಲಿ ಸಾಂದೀಪನಿ ಮುನಿಯ ಆಶ್ರಮಕ್ಕೆ ಹೋಗುವೆವು. ಅಧ್ಯಯನ ಮುಗಿಸಿದ ಬಳಿಕ ಕಾಲ ಬಂದಾಗ ನಾವು ನಿಮ್ಮನ್ನು ನೋಡುವೆವು. ಎಲ್ಲಕ್ಕೂ ಕಾಲ ಕಾರಣ. ಪರಸ್ಪರ ವಿಯೋಗ ಉಂಟುಮಾಡುವುದೂ ಕಾಲವೆ. ಸಮಾಗಮ ಉಂಟುಮಾಡುವುದೂ ಕಾಲವೆ. ಸುಖ ದುಃಖ ಹರ್ಷ ಶೋಕ ಎಲ್ಲವೂ ಕಾಲದ ಅಧೀನ. ನಾನು ನಿಮಗೆ ನೀಡಿರುವ ತತ್ವಜ್ಞಾನ ಯೋಗಿಗಳಿಗೂ ದುರ್ಲಭವಾದುದು. ಅಮ್ಮ ಯಶೋದೆ, ಆ ಎಲ್ಲ ತತ್ವಜ್ಞಾನವನ್ನು ನಂದ ಆನಂದದಿಂದ ನಿನಗೆ ಉಪದೇಶಿಸುವನು.'

ಜಗದೊಡೆಯನಾದ ಕೃಷ್ಣ ಹೀಗೆ ಹೇಳಿ ವಸುದೇವನ ಬಳಿಗೆ ಹೋಗಿ ಅವನಿಂದ ಅನುಜ್ಞೆ ಪಡೆದು ಸಾಂದೀಪನಿ ಮುನಿಯ ಆಶ್ರಮಕ್ಕೆ ತೆರಳಿದ. ನಂದ ಯಶೋದೆಯರು ವಸುದೇವ ದೇವಕಿಯರೊಡನೆ ಕೆಲಕಾಲ ಮಾತನಾಡಿ ಭಾರವಾದ ಹೃದಯದಿಂದ ಹೊರಟರು. ಅವರಿಗೆ ವಸುದೇವ ದೇವಕಿಯರು ವಸ್ತ್ರಾಭರಣಗಳನ್ನೂ ಮುತ್ತು ಮಾಣಿಕ್ಯ ವಜ್ರಗಳನ್ನೂ ಬಿಳಿ ಕುದುರೆ ಆನೆ ಚಿನ್ನದ ರಥಗಳನ್ನೂ ಆದರದಿಂದ ನೀಡಿದರು. ಅವರನ್ನು ಬೀಳ್ಕೊಡಲು ಯಮುನಾನದಿಯ ವರೆಗೆ ಹಿಂಬಾಲಿಸಿದರು. ಜೊತೆಗೆ ಅಕ್ರೂರ ಉದ್ಧವರೂ ಬಂದರು. ನದೀ ತೀರದಲ್ಲಿ ಎಲ್ಲರೂ ಕಣ್ಣೀರು ಸುರಿಸುತ್ತ ಪರಸ್ಪರ ಮಾತನಾಡಿ ಬೀಳ್ಕೊಟ್ಟರು.

ಕುಂತಿಯೂ ತನ್ನ ಮಕ್ಕಳೊಂದಿಗೆ ವಸುದೇವನ ಅನುಜ್ಞೆ ಪಡೆದು ಹಿಂತಿರುಗಿದಳು. ಈ ಉಪನಯನ ಮಹೋತ್ಸವದಲ್ಲಿ ನಾನಾ ಮಣಿ ಸುವರ್ಣ ರಜತ ಮುತ್ತು ಮಾಣಿಕ್ಯ ವಜ್ರಗಳನ್ನೂ ವಸ್ತ್ರಾಭರಣಗಳನ್ನೂ ಅಮೃತದಂಥ ಮಿಷ್ಟಾನ್ನ ಭೋಜನವನ್ನೂ ವಸುದೇವ ಬ್ರಾಹ್ಮಣರಿಗೆ ನೀಡಿದ. ವೇದಘೋಷ ಮಾಡಿಸಿದ. ಮಂಗಳಕರವಾದ ಹರಿನಾಮ ಸಂಕೀರ್ತನೆ ನಡೆಸಿದ. ಬಂಧುಗಳಿಗೂ ಯಥೇಚ್ಛ ವಸ್ತ್ರಾಭರಣಗಳಿಂದ ಪುರಸ್ಕಾರ ಮಾಡಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಭಗವಂತನ ಉಪನಯನವೆಂಬ ನೂರೊಂದನೆ ಅಧ್ಯಾಯ ಮುಗಿಯಿತು*

—o—

## ಸಾಂದೀಪನಿಮುನಿಯಲ್ಲಿ ಶ್ರೀಕೃಷ್ಣನ ವೇದಾಧ್ಯಯನ

ಅಧ್ಯಾಯ - ೧೦೨

**ಶ್ರೀನಾರಾಯಣ ಮುನಿ:-** ಕೃಷ್ಣ ಬಲರಾಮನೊಂದಿಗೆ ಸಾಂದೀಪನಿ ಮುನಿಯ ಆಶ್ರಮಕ್ಕೆ ಹೋಗಿ ಅಲ್ಲಿ ಗುರು ಗುರುಪತ್ನಿಯರನ್ನು ನಮಿಸಿ ಶುಭಾಶೀರ್ವಾದ ಪಡೆದ. ರತ್ನಮಣಿಗಳನ್ನು ನೀಡಿ ಕೇಳಿಕೊಂಡ:- 'ಗುರುಗಳೆ, ನಿಮ್ಮಿಂದ ನಾವು ವಿದ್ಯೆ ಕಲಿಯಲು ಬಯಸಿದ್ದೇವೆ. ಒಳ್ಳೆಯ ಒಂದು ಶುಭ ಮುಹೂರ್ತ ನೋಡಿ ನಮಗೆ ಪಾಠ ಹೇಳಿಕೊಡಿ.' ಮುನಿ 'ಹಾಗೇ ಆಗಲಿ' ಎನ್ನುತ್ತ ಸಂತೋಷದಿಂದ ಅವರನ್ನು ಸತ್ಕರಿಸಿದ. ಕೃಷ್ಣ ಮುನಿಗೆ ಮಧುಪರ್ಕಪ್ರಾಶನ ಮಾಡಿಸಿದ. ಗೋವಸ್ತ್ರ ಚಂದನ ಮಿಷ್ಟಾನ್ನ ಭೋಜನಗಳನ್ನೂ ಸುಗಂಧಯುಕ್ತವಾದ ತಾಂಬೂಲವನ್ನೂ ನೀಡಿದ. ಸಂತುಷ್ಟನಾದ ಮುನಿ ಕೃಷ್ಣನನ್ನು ಸ್ತುತಿಸಿದ - 'ಕೃಷ್ಣ, ನೀನು ಪರಬ್ರಹ್ಮ, ಸರ್ವಾಶ್ರಯ, ಸರ್ವೇಶ್ವರ, ಪರಾತ್ಪರ, ಸ್ವೇಚ್ಛಾಮಯ, ಸ್ವಯಂ ಜ್ಯೋತಿ, ನಿರ್ಲಿಪ್ತ, ಸ್ವತಂತ್ರ, ಭಕ್ತವತ್ಸಲ, ಭಕ್ತರಿಗೆ ಅನುಗ್ರಹ ಮಾಡಲೆಂದೆ ಭಕ್ತಕಲ್ಪತರು, ಭಕ್ತಪ್ರಾಣವಲ್ಲಭನಾದ ನೀನು ಸ್ವೇಚ್ಛೆಯಿಂದ ಬಾಲರೂಪ ತಳೆದಿರುವಿ. ಬ್ರಹ್ಮ ಶಿವ ಶೇಷ ವಂದ್ಯನಾದ ನೀನು ಭೂಭಾರ ಹರಣಕ್ಕಾಗಿ ಅವತರಿಸಿರುವಿ. ಸನಾತನ ಪರಂಜ್ಯೋತಿ ಪರಬ್ರಹ್ಮ ಸ್ವರೂಪನಾದ ನಿನ್ನನ್ನು ಯೋಗಿಗಳು ಮಾತ್ರ ತಿಳಿಯಬಲ್ಲರು. ಭಕ್ತರು ನಿನ್ನನ್ನು ಹೃದಯದಲ್ಲಿ ಹೀಗೆ ಸದಾ ಆನಂದದಿಂದ ಧ್ಯಾನಿಸುವರು -

ಮುರಲಿಯನ್ನು ಹಿಡಿದ ದ್ವಿಭುಜ ಸುಂದರ ಶ್ಯಾಮರೂಪ. ಚಂದನ ಬಳಿದ ಸರ್ವಾಂಗಗಳು. ಮುಖದಲ್ಲಿ ಮಂದಹಾಸ. ಪೀತಾಂಬರ ಉಟ್ಟು ವನಮಾಲೆಯಿಂದ ಭೂಷಿತನಾಗಿರುವಿ. ಕಡೆಗಣ್ಣ ನೋಟದ ಲೀಲೆಯಿಂದ ಮನ್ಮಥನನ್ನೂ ಮೀರಿಸುವಿ. ಸುಂದರವಾದ ಪಾದಗಳಿಗೆ ಅಲಕ್ತಕದ ಲೇಪ. ಎದೆಯಲ್ಲಿ ಹೊಳೆಯುವ ಕೌಸ್ತುಭಮಣಿ. ಮನೋಹರ ದಿವ್ಯ ಮೂರ್ತಿಯಾಗಿ ಭಕ್ತವತ್ಸಲನಾದ ನೀನು ಮಂದಹಾಸ ಸೂಸುತ್ತ ಪ್ರಸನ್ನನಾಗಿ ದೇವತೆಗಳಿಂದ ಸ್ತುತಿಸಲ್ಪಡುವಿ. ಜಗದೊಡೆಯನಾದ ದೇವದೇವ ನೀನು ಕೋಟಿ ಕಂದರ್ಪರ ಲೀಲೆ ತೋರುವಿ. ಅಮೂಲ್ಯ ರತ್ನಾಭರಣಗಳಿಂದಲೂ ಭೂಷಿತನಾಗಿ ಮನೋಹರನೆನಿಸಿರುವಿ. ಲೋಕಕ್ಕೆ ವರಪ್ರದರಾದ ದೇವತೆಗಳಿಗೂ ಎಲ್ಲ ವರ ನೀಡುವವ ನೀನು, ನಾಲ್ಕು ವೇದಗಳಿಗೂ ಕಾರಣ ನೀನು. ನೀನು ನನ್ನಲ್ಲಿ ಪಾಠ ಕಲಿಯಲು ಬಂದುದು ಒಂದು ಲೋಕವಿಡಂಬನೆ ಮಾತ್ರ. ಪಾಠವೆಂದೇ ಏನು? ನಿನ್ನ ವಿಹಾರ, ಓಡಾಟ, ಯುದ್ಧ ಮುಂತಾದುವೂ ಸ್ವಾತ್ಮಾರಾಮ ಪರಿಪೂರ್ಣನಾದ ನಿನಗೆ ಕೇವಲ ಲೋಕಶಿಕ್ಷಣದ ಉದ್ದೇಶದಿಂದ ಕೂಡಿರುತ್ತವೆ.'

**ಗುರುಪತ್ನಿ:-** ಕೃಷ್ಣ, ಇಂದು ನನ್ನ ಜನ್ಮ ಸಫಲವಾಯಿತು, ಬಾಳು ಸಾರ್ಥಕವಾಯಿತು. ನನ್ನ ಪಾತಿವ್ರತ್ಯ ಫಲಿಸಿತು. ಈ ತಪೋವನ ಸಾರ್ಥಕವಾಯಿತು. ನನ್ನ ಕೈ ನಿನಗೆ ಅನ್ನ ನೀಡಿ ಸಫಲವಾಯಿತು. ಆಶ್ರಮ ನಿನ್ನ ಪವಿತ್ರವಾದ ಪಾದಚಿಹ್ನೆಯಿಂದ ಪವಿತ್ರ ತೀರ್ಥಕ್ಷೇತ್ರಗಳಿಗಿಂತ ಪವಿತ್ರವೆನಿಸಿತು. ನಿನ್ನ ಪಾದದೂಳಿನಿಂದ ನಮ್ಮ ಮನೆಯಂಗಳ ಪಾವನವಾಯಿತು. ನಿನ್ನ ಪಾದಕಮಲಗಳು ನಮ್ಮ ಜನ್ಮ ಮರಣ ದುಃಖಗಳನ್ನು ದೂರ ಮಾಡಿದುವು.

**ತಾವದ್ ದುಃಖಂ ಚ ಶೋಕಶ್ಚ ತಾವದ್ ಭೋಗಶ್ಚ ರೋಗಕಃ।**
**ತಾವಜ್ಜನ್ಮಾನಿ ಕರ್ಮಾಣಿ ಕ್ಷುತ್ ಪಿಪಾಸಾದಿಕಾನಿ ಚ।**
**ಯಾವತ್ ತ್ವತ್ಪಾದಪದ್ಮಸ್ಯ ಭಜನಂ ನಾಸ್ತಿ ದರ್ಶನಂ॥**

ಎಲ್ಲಿಯವರೆಗೆ ನಿನ್ನ ಪಾದಕಮಲದ ಆರಾಧನೆ ಇಲ್ಲ, ದರ್ಶನವಿಲ್ಲ, ಅಲ್ಲಿಯವರೆಗೆ ಮಾತ್ರ ಲೋಕಕ್ಕೆ ದುಃಖ ಶೋಕ ಭೋಗ ರೋಗ ಜನ್ಮ ಕರ್ಮ ಹಸಿವು ಬಾಯಾರಿಕೆ ಮುಂತಾದುವು ಎಲ್ಲವೂ.'

**ಶ್ರೀಕೃಷ್ಣ:-** ತಾಯಿ, ಹಾಲುಗಲ್ಲದ ಹಸುಳೆಯಾದ ನನ್ನನ್ನು ನೀನು ಏಕೆ ಇಷ್ಟೊಂದು ಸ್ತೋತ್ರ ಮಾಡುವಿ? ನೀನು ಗೋಲೋಕಕ್ಕೇ ಹೋಗು. ಪ್ರಾಕೃತಿಕವಾದ ನಶ್ವರವಾದ ಶರೀರವನ್ನು ತೊರೆದು ಜನನ ಮರಣ ಜರೆಗಳಿಲ್ಲದ ನಿರ್ಮಲ ದೇಹದಿಂದ ಪತಿಸಮೇತಳಾಗಿ ಗೋಲೋಕಕ್ಕೆ ಹೋಗು.'

ಹೀಗೆ ಹೇಳಿ ಕೃಷ್ಣ ಒಂದು ತಿಂಗಳಲ್ಲಿ ನಾಲ್ಕು ವೇದಗಳನ್ನು ಪಠಿಸಿ ಹಿಂದೆ ಎಂದೋ ಮೃತನಾಗಿದ್ದ ಗುರುಪುತ್ರನನ್ನು ತಿರುಗಿ ಬದುಕಿಸಿಕೊಟ್ಟು ಜೊತೆಗೆ ಗುರುದಕ್ಷಿಣೆಯಾಗಿ ಮೂರುಲಕ್ಷ ರತ್ನಗಳು, ಐದುಲಕ್ಷ ಮಣಿಗಳು, ನಾಲ್ಕುಲಕ್ಷ ವಜ್ರಗಳು ಐದುಲಕ್ಷ ಮುತ್ತುಗಳು ಎರಡುಲಕ್ಷ ಮಾಣಿಕ್ಯಗಳು ದುರ್ಲಭವಾದ ಬಟ್ಟೆಬರೆಗಳು, ದುರ್ಗಾದೇವಿ ಕೊಟ್ಟಿದ್ದ ಹಾರ ಕೈಬಳೆ ರತ್ನದುಂಗುರಗಳು ಹತ್ತುಕೋಟಿಸುವರ್ಣಗಳು, ಅಮೂಲ್ಯ ರತ್ನಮಯವಾದ ಸ್ತ್ರೀಯರ ಆಭರಣಗಳು ಇವೆಲ್ಲವನ್ನೂ ಕೊಟ್ಟ. ಮುನಿ ಅವೆಲ್ಲವನ್ನೂ ತನ್ನ ಮಗನಿಗೆ ಕೊಟ್ಟು ಪತ್ನೀ ಸಮೇತನಾಗಿ ರತ್ನಮಯವಾದ ದಿವ್ಯವಿಮಾನವೇರಿ ಗೋಲೋಕಕ್ಕೆ ತೆರಳಿದ. ಹೀಗೆ ಅದ್ಭುತವಾದ ಗುರುಕುಲವಾಸವನ್ನು ಮುಗಿಸಿ ಕೃಷ್ಣ ರಾಮರು ಹಿಂತಿರುಗಿದರು.

ನಾರದ, ಬ್ರಾಹ್ಮಣಪ್ರಿಯನಾದ ಕೃಷ್ಣನ ಈ ಚರಿತ್ರ ಪುಣ್ಯಕರ. ಗುರು ಗುರುಪತ್ನಿಯರು ಮಾಡಿದ ಕೃಷ್ಣಸ್ತೋತ್ರವೂ ಮಹಾಪುಣ್ಯಕರ. ಭಕ್ತಿಯಿಂದ ಪಠಿಸುವವರಿಗೆ ಕೃಷ್ಣನಲ್ಲಿ ಅಚಲವಾದ ಭಕ್ತಿ ಉಂಟಾಗುವುದರಲ್ಲಿ ಸಂಶಯವಿಲ್ಲ. ಒಳ್ಳೆಯ ಕೀರ್ತಿ ಒಳ್ಳೆಯ ತತ್ತ್ವಜ್ಞಾನಗಳನ್ನು ಪಡೆದು ಈ ಲೋಕದಲ್ಲಿ ಸುಖವನ್ನು ಅನುಭವಿಸುತ್ತಾರೆ, ಕೊನೆಯಲ್ಲಿ ಹರಿಪದವನ್ನು ಸೇರುತ್ತಾರೆ. ಅಲ್ಲಿ ಶಾಶ್ವತವಾದ ಹರಿದಾಸ್ಯ ಅವರಿಗೆ ಲಭಿಸುತ್ತದೆ. ಇದರಲ್ಲಿ ಸಂಶಯವಿಲ್ಲ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಮುನಿಪತ್ನೀಸ್ತೋತ್ರವೆಂಬ ನೂರೆರಡನೆ ಅಧ್ಯಾಯ ಮುಗಿಯಿತು.*

**ಶ್ರೀನಾರಾಯಣ ಮುನಿ:-** 'ಶ್ರೀಕೃಷ್ಣ ಬಲರಾಮನೊಂದಿಗೆ ಮಧುರೆಗೆ ಬಂದು ತಾಯಿತಂದೆಗಳಿಗೆ ನಮಸ್ಕಾರ ಮಾಡಿದ. ಆಲದಮರದ ಬುಡದಲ್ಲಿ ಕುಳಿತು ಒಮ್ಮೆ ಗರುಡನನ್ನು ನೆನೆದ. ಸಮುದ್ರರಾಜನನ್ನೂ ವಿಶ್ವಕರ್ಮನನ್ನೂ ನೆನೆದ. ತಾನು ಗೋಪಾಲವೇಷ ತೊರೆದು ರಾಜವೇಷ ಧರಿಸಿದ, ಕೋಟಿ ಸೂರ್ಯರಂತೆ ಜ್ವಲಿಸುವ ತೇಜಸ್ಸಿನಿಂದ ಶತ್ರುಗಳನ್ನು ನಾಶಗೊಳಿಸುವ ಅಮೋಘವಾದ ಸುದರ್ಶನಚಕ್ರವನ್ನು ಹಿಡಿದ. ರತ್ನಮಯವಾದ ರಥದೊಂದಿಗೆ ಗರುಡ ಮುಂದೆ ಬಂದು ನಿಂತ. ಸಮುದ್ರರಾಜನೂ ಶಿಷ್ಯ ಪರಿವಾರ ಸಮೇತನಾದ ದೇವಶಿಲ್ಪಿ ವಿಶ್ವಕರ್ಮನೂ ನಡುಗುತ್ತ ಬಂದು ಮುಂದೆ ನಿಂತರು. ಎಲ್ಲರೂ ಭಕ್ತಿಯಿಂದ ತಲೆಬಾಗಿ ನಮಿಸಿದರು. ಕೃಷ್ಣ ನಗುತ್ತ ನುಡಿದ -

'ಸಮುದ್ರರಾಜ, ನನಗೆ ನೀನು ನೂರುಯೋಜನದಷ್ಟು ನೆಲವನ್ನು ನಗರ ನಿರ್ಮಾಣಕ್ಕಾಗಿ ಕೊಡು. ನನ್ನ ಅವತಾರ ಕಾರ್ಯ ಮುಗಿದಾಗ ನಿನಗೇ ಅದನ್ನು ಹಿಂತಿರುಗಿ ಕೊಡುತ್ತೇನೆ. ವಿಶ್ವಕರ್ಮ, ನೀನು ನಗರ ನಿರ್ಮಾಣ ಮಾಡಿಕೊಡು. ಆ ನಗರ ಮೂಲೋಕದಲ್ಲಿಯೆ ದುರ್ಲಭವೆನಿಸುವಂತಿರಬೇಕು. ರಮಣೀಯವಾಗಿದ್ದು ಸ್ತ್ರೀಯರಿಗೆ ಬಹು ಆಕರ್ಷಕವಿರಬೇಕು. ಭಕ್ತರಿಗೂ ವೈಕುಂಠದಂತೆ ಪ್ರಿಯವೆನಿಸಬೇಕು. ಎಲ್ಲ ಸ್ವರ್ಗಗಳಿಗಿಂತ ಶ್ರೇಷ್ಠವಾಗಿರಬೇಕು. ಗರುಡ, ನೀನು ಹಗಲುರಾತ್ರಿ ವಿಶ್ವಕರ್ಮನ ಬಳಿ ದ್ವಾರಕಾ ನಿರ್ಮಾಣ ಮುಗಿವವರೆಗೂ ಇರಬೇಕು.' ಎಲ್ಲರೂ 'ಹಾಗೇ ಆಗಲಿ' ಎಂದರು. ಕೃಷ್ಣ ನಗರನಿರ್ಮಾಣಕ್ರಮವನ್ನು ಹೇಳಲು ತೊಡಗಿದ -

ನೂರುಯೋಜನ ವಿಸ್ತಾರದ ನಗರ. ಉತ್ತಮ ಜಾತಿಯ ಪದ್ಮರಾಗ, ಮರಕತ, ಇಂದ್ರನೀಲ, ಸ್ಯಮಂತಕಮಣಿ, ಗಂಧಕ, ಚಂದ್ರಕಾಂತ, ಸ್ಫಟಿಕ, ಪಚ್ಚೆಮಣಿ, ಕರಿ ಹಳದಿ ಬಣ್ಣದ ಕಲ್ಲುಗಳು, ಗೋರೋಚನ, ದಾಳಿಂಬೆಬೀಜದಂಥ ತಾವರೆ ಬೀಜದಂಥ, ನೀಲಕಮಲದಂಥ ಕಲ್ಲುಗಳು, ಕಾಡಿಗೆಯಂಥ ಮಣಿಗಳು, ಬಿಳಿ ಸಂಪಿಗೆಯಂಥ ಪುಟಕ್ಕಿಟ್ಟ ಚಿನ್ನದಂಥ ಕಲ್ಲುಗಳು ಇವುಗಳಿಂದಲೆ ನಗರ ನಿರ್ಮಾಣವಾಗಬೇಕು. ವಾಸ್ತುಶಿಲ್ಪ ನಿಯಮಾನುಸಾರವಾಗಿ ಯಾವ ಯಾವ ಸ್ಥಳದಲ್ಲಿ ಏನೇನಿರಬೇಕೊ ಹಾಗೆ ನಿರ್ಮಿಸಬೇಕು. ಯಕ್ಷರ ಗುಂಪುಗಳು ಹಿಮಾಲಯದಿಂದ ನಗರ ನಿರ್ಮಾಣಕ್ಕೆ ಬೇಕಾಗುವ ಮಣಿಗಳನ್ನು ಹಗಲು ರಾತ್ರಿ ತಂದು ಹಾಕುತ್ತಾರೆ. ಕುಬೇರ ಕಳುಹಿಸುವ ಏಳುಲಕ್ಷ ಯಕ್ಷರ ಜೊತೆಗೆ ಶಂಕರ ಕಳಿಸುವ ಒಂದುಲಕ್ಷ ಬೇತಾಳಗಳು, ಒಂದುಲಕ್ಷ ಕೂಷ್ಮಾಂಡಗಳು, ಪಾರ್ವತಿ ಕಳಿಸುವ ದಾನವರು ಬ್ರಹ್ಮರಾಕ್ಷಸರು, ಇವರೆಲ್ಲರೂ ನಗರ ನಿರ್ಮಾಣ ಕಾರ್ಯಕ್ಕೆ ಸಿದ್ಧರಾಗುತ್ತಾರೆ.

ಹದಿನಾರು ಸಾವಿರದ ನೂರೆಂಟು ಪತ್ನಿಯರಿಗೆ ಯೋಗ್ಯವಾದ ಅಂತಃಪುರಗಳ ನಿರ್ಮಾಣವಾಗಬೇಕು. ಆಳದ ಕಂದಕಗಳು ಎತ್ತರದ ಗೋಡೆಗಳು ಹನ್ನೆರಡು ಶಾಲೆಗಳು ಸಿಂಹದ್ವಾರಗಳು ಚಿತ್ರವಿಚಿತ್ರವಾದ ಕೃತ್ರಿಮ ಬಾಗಿಲುಗಳು ಇರಬೇಕು. ನಿಷಿದ್ಧವಾದ ಮರಗಳನ್ನು ಕಟ್ಟಡ ನಿರ್ಮಾಣಕ್ಕೆ ಉಪಯೋಗಿಸಬಾರದು. ಎಲ್ಲ ಯಾದವರಿಗೂ ಅವರ ಸೇವಕರಿಗೂ ಯೋಗ್ಯವಾದ ಮನೆಗಳನ್ನು ನಿರ್ಮಿಸಬೇಕು. ಉಗ್ರಸೇನ ರಾಜನಿಗೆ ಮತ್ತು ನಮ್ಮ ತಂದೆಯಾದ ವಸುದೇವನಿಗೆ ಸಕಲ ಸೌಕರ್ಯಗಳಿಂದ ಕೂಡಿದ ಮಂಗಳಕರವಾದಅರಮನೆಗಳನ್ನುನಿರ್ಮಿಸಬೇಕು.

**ವಿಶ್ವಕರ್ಮ:-** ಜಗದ್ಗುರುವೆ, ಪ್ರಶಸ್ತ ವೃಕ್ಷಗಳು, ನಿಷಿದ್ಧ ವೃಕ್ಷಗಳು ಮಂಗಳಕರ ಅಮಂಗಳಕರಗಳು ಯಾವುವು? ನನಗೆ ಉಪದೇಶಿಸು. ವಾಸ್ತುಸ್ಥಾಪನೆಗೆ ಯಾವ ಪ್ರಾಣಿಗಳ ಅಸ್ಥಿಯನ್ನು ಉಪಯೋಗಿಸಿದರೆ ಶುಭ? ಯಾವ ಪ್ರಾಣಿಗಳ ಅಸ್ಥಿ ಅಶುಭ? ನೀರು ಯಾವ ದಿಕ್ಕಿನಲ್ಲಿದ್ದರೆ ಶುಭ? ಯಾವ ದಿಕ್ಕಿನಲ್ಲಿ ಅಶುಭ? ಯಾವ ಮರ ಶುಭ? ಯಾವ ದಿಕ್ಕಿನಲ್ಲಿ ಶುಭ? ಯಾವ ದಿಕ್ಕಿನಲ್ಲಿ ಅಶುಭ? ಮನೆಗಳ ಅಂಗಳಗಳ ವಿಸ್ತಾರವೆಷ್ಟಿರಬೇಕು? ಯಾವ ದಿಕ್ಕಿನಲ್ಲಿ ಹೂದೋಟವಿರಬೇಕು? ಪಾಗಾರಗಳು, ಕಂದಕಗಳು, ದ್ವಾರಗಳು ಗೃಹಗಳು ಯಾವ ಪ್ರಮಾಣದಲ್ಲಿರಬೇಕು? ಮನೆಯ ನಿರ್ಮಾಣಕ್ಕೆ ಯಾವ ಯಾವ ಮರಗಳ ಕಾಷ್ಠಗಳು ಪ್ರಶಸ್ತ? ಯಾವ ಯಾವ ಮರಗಳ ಕಾಷ್ಠಗಳು ಅಶುಭ? ಇವೆಲ್ಲವನ್ನೂ ಹೇಳು.

ಭಗವಂತ ಹೀಗೆ ಉಪದೇಶಿಸಿದ -

ವಿಶ್ವಕರ್ಮ, ಗೃಹಸ್ಥರ ಮನೆಯಲ್ಲಿ ತೆಂಗಿನ ಮರವಿದ್ದರೆ ಧನಪ್ರದ. ಅದು ಈಶಾನ್ಯ ಅಥವಾ ಪೂರ್ವ ದಿಕ್ಕಿನಲ್ಲಿದ್ದರೆ ಪುತ್ರಪ್ರದ. ಈ ವೃಕ್ಷ ಮನೆಗೆ ಯಾವ ದಿಕ್ಕಿನಲ್ಲಿದ್ದರೂ ಮಂಗಲ ಪ್ರದವೆ. ಮಾವಿನ ಮರ ಪೂರ್ವದಲ್ಲಿದ್ದರೆ ಸಂಪತ್ಪ್ರದ, ಸರ್ವತ್ರ ಶುಭದಾಯಕ. ಬೇಲ, ಹಲಸು, ನಿಂಬೆ, ಬೋರೆ ಗಿಡಗಳು ಪೂರ್ವದಲ್ಲಿ ಸಂತಾನದಾಯಕ, ದಕ್ಷಿಣದಲ್ಲಿ ಧನಪ್ರದ, ಸರ್ವತ್ರ ಸಂಪತ್‌ಪ್ರದ. ಗೃಹಸ್ಥನಿಗೆ ಇವುಗಳಿಂದ ಅಭಿವೃದ್ಧಿ ಉಂಟಾಗುತ್ತದೆ. ನೇರಳೆ ದಾಳಿಂಬೆ ಬಾಳೆ ನೆಲ್ಲಿ ಮರಗಳು ಪೂರ್ವದಿಕ್ಕಿನಲ್ಲಿ ಬಂಧುಪ್ರದ, ದಕ್ಷಿಣದಲ್ಲಿ ಮಿತ್ರಪ್ರದ, ಸರ್ವತ್ರ ಶುಭದಾಯಕ. ಸುವಾಕವೃಕ್ಷ ದಕ್ಷಿಣದಲ್ಲಿ ಧನಪುತ್ರಪ್ರದ, ಶುಭಕರ. ಪಶ್ಚಿಮದಲ್ಲಿ ಹರ್ಷದಾಯಕ, ಈಶಾನ್ಯದಲ್ಲಿ ಮತ್ತು ಸರ್ವತ್ರಸುಖಪ್ರದ. ಸಂಪಿಗೆ ಸರ್ವತ್ರಶುಭಪ್ರದ. ಸೋರೆ ಕುಂಬಳ ಆಯಾಂಬು ಮುತ್ತಗ ಖರ್ಜೂರ ಕರ್ಕಟಿ ಚಕವತ್ತಿ ಬದನೆ ಗಿಡಗಳೂ ಎಲ್ಲ ಬಗೆಯ ಬಳ್ಳಿಗಳೂ ಮಂಗಳಕರ. ನಿಷಿದ್ಧ ಮರಗಳೆಂದರೆ ಕಾಡಿನ ಮರಗಳು. ಅವು ಮನೆಗಳಲ್ಲಿಯೂ ನಗರಗಳಲ್ಲಿಯೂ ಇರಕೂಡದು. ಆಲದಮರ ಮನೆಯಲ್ಲಿ ನಿಷಿದ್ಧ. ಆಮರವಿರುವಲ್ಲಿ ಕಳ್ಳಕಾಕರ ಭಯ. ಆದರೆ ನಗರದಲ್ಲಿ ಅದು ಇರಬೇಕು. ಅದರ ದರ್ಶನ ಮಾತ್ರದಿಂದಲೆ ಪುಣ್ಯಲಭಿಸುವುದು. ಬೂರುಗದ ಮರ ಮನೆ ನಗರ ಪಟ್ಟಣಗಳಲ್ಲಿ ನಿಷಿದ್ಧ. ರಾಜರಿಗೆ ಸದಾ ದುಃಖಪ್ರದ. ಹುಣಿಸೆಮರ ನಗರಗಳಲ್ಲಿ ಗ್ರಾಮಗಳಲ್ಲಿ ನಿಷಿದ್ಧವಲ್ಲ. ಆದರೆ ಮನೆಗಳಲ್ಲಿ ನಿಷಿದ್ಧ. ಮನೆಗಳಲ್ಲಿದ್ದರೆ ಸದಾ ವಿದ್ಯಾಬುದ್ಧಿ ನಾಶಕ ಮತ್ತು ದುಃಖದಾಯಕ. ಅದರಿಂದ ಅದನ್ನು ಪ್ರಯತ್ನ

ಪೂರ್ವಕವಾಗಿ ಬಿಡಬೇಕು. ಖರ್ಜೂರ ಮತ್ತು ಮುಳ್ಳಿನಗಿಡಗಳು ಮನೆಯಲ್ಲಿ ನಿಷಿದ್ಧ. ಗ್ರಾಮನಗರಗಳಲ್ಲಿ ನಿಷಿದ್ಧವಲ್ಲ.

ಕಡಲೆ ಮುಂತಾದ ಧಾನ್ಯದ ಗಿಡಗಳು ಗ್ರಾಮ ನಗರ ಮನೆಗಳಲ್ಲಿ ಎಲ್ಲೆಡೆ ಮಂಗಳಕರ. ಕಬ್ಬು ಯಾವಾಗಲೂ ಶುಭಕರ. ಅಶೋಕ ಬಾಗೆ ಈಚಲ ಅರಿಶಿನ ಶುಂಠಿ ಅಳಲೆ ನೆಲ್ಲಿ ಇವೆಲ್ಲವೂ ಶುಭಕರ. ವಾಸ್ತುಭೂಮಿಯಲ್ಲಿ ಸ್ಥಾಪನೆ ಮಾಡಲು ಆನೆ ಕುದುರೆಗಳ ಅಸ್ಥಿ ಮಂಗಳಕರ. ಇತರ ಪ್ರಾಣಿಗಳ ಮೂಳೆಗಳು ಅಮಂಗಳಕರ, ವಿನಾಶಕಾರಿ. ಅವುಗಳಲ್ಲಿಯೂ ಕಪಿ ಮಾನವ ಕತ್ತೆ ಗೋ ಕೋಳಿ ನರಿ ಬೆಕ್ಕುಗಳ, ಎಲ್ಲ ಪಕ್ಷಿಗಳ ಹಂದಿಗಳ ಮೂಳೆಗಳು ಅಶುಭಕರ. ಮನೆಗೆ ಈಶಾನ್ಯ ಪೂರ್ವ ಪಶ್ಚಿಮ ಉತ್ತರ ದಿಕ್ಕುಗಳಲ್ಲಿ ನೀರಿರುವುದು ಮಂಗಳಕರ. ಬೇರೆ ದಿಕ್ಕುಗಳಲ್ಲಿ ಅಶುಭ.

ಮನೆಯ ಉದ್ದ ಅಗಲ ಸಮನಾಗಿರಬಾರದು. ಚೌಕವಾಗಿ ಸಮನಾಗಿದ್ದರೆ ಗೃಹಸ್ಥನಿಗೆ ಧನನಾಶ. ಉದ್ದ ಅಗಲಗಳನ್ನು ಎರಡೆರಡು ಭಾಗಗಳಾಗಿ ವಿಭಾಗಿಸಿದಾಗ ಶೇಷ ಶೂನ್ಯರಹಿತವಾಗಿರಬೇಕು. ಆಗ ಅದು ಶುಭಕರ. ಶೂನ್ಯಯುಕ್ತವಾಗಿದ್ದರೆ ಶೂನ್ಯಫಲ. ಅಗಲದಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಎರಡು ಹಸ್ತ ಪ್ರಮಾಣವನ್ನೂ ಉದ್ದದಲ್ಲಿ ದಕ್ಷಿಣದಿಂದ ಮೂರು ಹಸ್ತ ಪ್ರಮಾಣವನ್ನೂ ಬಿಟ್ಟು ಪಾಗಾರಕ್ಕೂ ಮನೆಗೂ ಬಾಗಿಲನ್ನಿಡಬೇಕು, ಹೊರತು ಸರಿಮಧ್ಯದಲ್ಲಿ ಇಡಬಾರದು. ಸ್ವಲ್ಪ ಹೆಚ್ಚು ಕಡಿಮೆ ಮಾಡಿದರೆ ಶುಭ. ಚೌಕವಾದ ಮನೆಯೂ ಚಂದ್ರವೇಧೆಯಿಂದ ಕೂಡಿದ್ದರೆ ಮಂಗಳಪ್ರದ. ಸೂರ್ಯವೇಧೆಯಿಂದ ಕೂಡಿದ್ದರೆ ಅಮಂಗಳಕರ. ಅಂಗಳವೂ ಸೂರ್ಯವೇಧೆಯಿಂದ ಕೂಡಿರಬಾರದು.

**ಶಿಬಿರಾಭ್ಯಂತರೇ ಭದ್ರಾ ಸ್ಥಾಪಿತಾ ತುಲಸೀ ನೃಣಾಂ ।**
**ಧನಪುತ್ರಪ್ರದಾತ್ರೀ ಚ ಪುಣ್ಯದಾ ಹರಿಭಕ್ತಿದಾ ॥**

ಮನೆಯ ಒಳಭಾಗದಲ್ಲಿ ಮಂಗಳದಾಯಕಳಾದ ತುಲಸಿಯನ್ನು ನೆಟ್ಟರೆ ಧನ ಪುತ್ರದಾಯಕಳಾಗಿ ಪುಣ್ಯವನ್ನೂ ಹರಿಭಕ್ತಿಯನ್ನೂ ನೀಡುವಳು.

**ಪ್ರಭಾತೇ ತುಲಸೀಂ ದೃಷ್ಟ್ವಾ ಸ್ವರ್ಣದಾನಫಲಂ ಲಭೇತ್ ॥**

ಪ್ರಾತಃಕಾಲದಲ್ಲಿ ತುಲಸೀದರ್ಶನ ಮಾಡಿದರೆ ಸುವರ್ಣದಾನದ ಫಲ ಲಭಿಸುವುದು. ಮಾಲತಿ ಯೂಥಿಕ ಕುಂದ ಮಾಧವಿ ಕೇದಿಗೆ ನಾಗೇಶ್ವರ ಮಲ್ಲಿಗೆ ನಾಗಸಂಪಿಗೆ ಬಕುಲ ಅಪರಾಜಿತೆ ಇವು ಶುಭಕರ. ಇವುಗಳ ತೋಟ ಮನೆಯ ಪೂರ್ವ ಅಥವಾ ದಕ್ಷಿಣದಲ್ಲಿದ್ದರೆ ಶುಭ. ಹದಿನಾರು ಹಸ್ತಪ್ರಮಾಣಕ್ಕಿಂತ ಹೆಚ್ಚು ಎತ್ತರದ ಮನೆಯನ್ನು ಗೃಹಸ್ಥ ಕಟ್ಟಿಕೊಳ್ಳಬಾರದು. ಇಪ್ಪತ್ತು ಹಸ್ತಕ್ಕಿಂತ ಹೆಚ್ಚು ಎತ್ತರದ ಪಾಗಾರವನ್ನೂ ಕಟ್ಟಿಸಬಾರದು. ಸೂತ್ರಧಾರ, ಎಣ್ಣೆಮಾಡುವವ, ಅಕ್ಕಸಾಲಿಗ, ರತ್ನವ್ಯಾಪಾರಿ, ಇವರನ್ನು ಗ್ರಾಮಮಧ್ಯದಲ್ಲಿಯೂ ಮನೆ ಸಮೀಪದಲ್ಲಿಯೂ ಇರಿಸಬಾರದು. ಅಲ್ಲಿ ಬ್ರಾಹ್ಮಣ ಕ್ಷತ್ರಿಯ ಉತ್ತಮ ಶೂದ್ರ ಮತ್ತು ಜ್ಯೋತಿಷಿಗಳನ್ನು ಇರಿಸಬೇಕು. ಹೊಗಳುಭಟ, ವೈದ್ಯ, ಹೂವಾಡಿಗರನ್ನೂ ಇರಿಸಬೇಕು. ಮನೆಯ ಸುತ್ತಲಿನ ಕಂದಕವು ನೂರು ಹಸ್ತ ಪ್ರಮಾಣ ಅಗಲ, ಹತ್ತು ಹಸ್ತದಷ್ಟು ಆಳವಿದ್ದರೆ

ಪ್ರಶಸ್ತ. ಅದರ ಬಾಗಿಲು ಸಂಕೇತಪೂರ್ವಕವಾಗಿರಬೇಕು. ಶತ್ರುಗಳಿಗೆ ದುರ್ಗಮವೂ ಮಿತ್ರರಿಗೆ ಸುಗಮವೂ ಆಗಿರಬೇಕು. ಮನೆಯನ್ನು ತಯಾರಿಸಲು ಬೂರುಗ ಹುಣಿಸೆ ಕಿರತಾಳೆ ಬೇವು ಲಕ್ಕಿ ದತ್ತೂರ ಆಲ ಅತ್ತಿ ಮರಗಳ ತೊಲೆ ಮುಂತಾದುವು ಅಮಂಗಳಕರ, ಅನಿಷ್ಟಕರ. ಮನೆಯ ಕೆಳಭಾಗದಲ್ಲಿ ಯಾವ ವೃಕ್ಷವನ್ನೂ ವಜ್ರ ಹಸ್ತವನ್ನೂ ರಾಜ ಉಪಯೋಗಿಸಬಾರದು. ಅದು ಮಕ್ಕಳನ್ನೂ ಹೆಂಡಿರನ್ನೂ ಧನಸಂಪತ್ತನ್ನೂ ನಾಶಮಾಡುವುದೆಂದು ಬ್ರಹ್ಮ ಹೇಳಿದ್ದಾನೆ. ವಿಶ್ವಕರ್ಮ, ಇದೆಲ್ಲವನ್ನೂ ಲೋಕದ ಜನರಿಗಾಗಿ ಹೇಳಿದ್ದೇನೆ. ನೀನು ಮರವನ್ನು ಉಪಯೋಗಿಸದೆಯೆ ಮನೆಗಳನ್ನು ಕಟ್ಟು. ಇದೀಗ ಉತ್ತಮವಾದ ಮೂಹೂರ್ತ ಒದಗಿ ಬಂದಿದೆ, ಹೋಗು.'

ಹೀಗೆ ಹೇಳಿ ಶ್ರೀಕೃಷ್ಣ ವಿಶ್ವಕರ್ಮನನ್ನೂ ಗರುಡನನ್ನೂ ಕಳಿಸಿಕೊಟ್ಟ. ಅವರು ಕೃಷ್ಣನನ್ನು ನಮಸ್ಕರಿಸಿ ಸಮುದ್ರತೀರದಲ್ಲಿ ಬೆಳೆದು ನಿಂತಿದ್ದ ಒಂದು ಆಲದ ಮರದ ಬುಡಕ್ಕೆ ಹೋಗಿ ರಾತ್ರಿಯಲ್ಲಿ ಮಲಗಿ ನಿದ್ರಿಸಿದರು. ಸ್ವಪ್ನದಲ್ಲಿ ಕೃಷ್ಣ ಹೇಳಿದ ಎಲ್ಲ ಲಕ್ಷಣಗಳಿಂದ ಒಪ್ಪುವ ಮನೋಹರವಾದ ದ್ವಾರವತೀನಗರವನ್ನು ಕಂಡರು. ಸ್ವಪ್ನದಲ್ಲಿಯೆ ಇತರ ಶಿಲ್ಪಿಗಳು ವಿಶ್ವಕರ್ಮನನ್ನು ಕಂಡು ಹಾಸ್ಯ ಮಾಡಿದರು. ಗರುಡನನ್ನೂ ಇತರ ಗರುಡಪಕ್ಷಿಗಳು ಹಾಸ್ಯ ಮಾಡಿದುವು. ಇಬ್ಬರೂ ಎಚ್ಚತ್ತು ನೋಡಿದಾಗ ಪ್ರತ್ಯಕ್ಷ ದ್ವಾರಕಾನಗರವಿತ್ತು. ಬ್ರಹ್ಮಾದಿಗಳ ನಗರವನ್ನು ಮೀರಿಸುವ ಚೆಲುವಿನ ನಗರ. ಅನೇಕ ರತ್ನಮಯವಾಗಿದ್ದು ಕಾಂತಿಯಿಂದ ಸೂರ್ಯನನ್ನು ಜಯಿಸುವ ನಗರ. ನೋಡಿ ನಾಚಿದರು ಗರುಡ ಮತ್ತು ವಿಶ್ವಕರ್ಮರು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ದ್ವಾರಕಾನಿರ್ಮಾಣಾರಂಭವೆಂಬ ನೂರಮೂರನೆ ಅಧ್ಯಾಯ ಮುಗಿಯಿತು*

—o—

**ಶ್ರೀನಾರಾಯಣ ಮುನಿ ನುಡಿದ:-** ಇದೇ ಸಮಯದಲ್ಲಿ ದ್ವಾರಕೆಯನ್ನೂ ಕೃಷ್ಣ ಬಲರಾಮರನ್ನೂ ಸಂದರ್ಶಿಸುವುದಕ್ಕಾಗಿ ಬ್ರಹ್ಮ, ಶಿವ, ಪಾರ್ವತಿ, ಶೇಷ, ಧರ್ಮ, ಸೂರ್ಯ, ಅಗ್ನಿ, ಕುಬೇರ, ವರುಣ, ವಾಯು, ಯಮ, ಇಂದ್ರ, ಚಂದ್ರ, ಏಕಾದಶ ರುದ್ರರು, ಸಪ್ತರ್ಷಿಗಳು, ವಸುಗಳು, ಆದಿತ್ಯರು, ದೈತ್ಯರು, ಗಂಧರ್ವರು, ಕಿನ್ನರರು ಮುಂತಾದವರೆಲ್ಲರೂ ವಿಮಾನಗಳಿಂದ ಆಕಾಶ ಮಾರ್ಗವಾಗಿ ಬಂದರು. ಆಲದಮರದ ಬುಡದಲ್ಲಿ ಶ್ರೀಕೃಷ್ಣನನ್ನು ಕಂಡು ಸ್ತೋತ್ರ ಮಾಡಿದರು. ಮುತ್ತು ಮಾಣಿಕ್ಯ ವಜ್ರ ಮುಂತಾದ ರತ್ನಮಯವಾಗಿ ಕಂಗೊಳಿಸುವ ಅತ್ಯಂತ ಮನೋಹರವಾದ ದ್ವಾರಕೆಯನ್ನು ಕಂಡರು. ಸುತ್ತಲೂ ಸಮಚೌಕವಾದ ನೂರುಯೋಜನ ವಿಸ್ತಾರದ ನಗರ ಅದು. ಆಳವಾದ ಏಳು ಕಂದಕಗಳು, ಒಂಬತ್ತು ಕೋಟೆಗಳು. ಒಳಗೆ ಒಂದು ಲಕ್ಷ ಈಜುಕೊಳಗಳಿದ್ದುವು. ದುಂಬಿಗಳಿಂದ ಕೂಡಿದ ಅರಳಿದ ತಾವರೆಗಳು ಮತ್ತು ಸುಗಂಧ ಬೀರುವ ಅರಳಿದ ನಾನಾ ಬಗೆಯ ಹೂಗಳುಳ್ಳ ಮೂರು ಲಕ್ಷ ಪುಷ್ಪೋದ್ಯಾನಗಳು. ನೂರು ಕೋಟಿ ತೆಂಗಿನಮರಗಳು ಅದರ ನಾಲ್ಕರಷ್ಟು ಅಡಿಕೆ ಮರಗಳು ಅದರ ನಾಲ್ಕರಷ್ಟು ಮಾವಿನ ಮರಗಳು ತಾಳೆ ಮರಗಳು ಹಲಸು ಅಶ್ವತ್ಥ ಬದರಿ ಬಿಲ್ವ ಅಮಟೆ ಆಲ ಬೂರುಗ ನೇರಳೆ ಈಚಲ ಬಿದಿರು ಹುಣಿಸೆ ಸಂಪಿಗೆ ಬಕುಳ ನಾಗೇಶ್ವರ ಹೇರಳೆ ನಿಂಬೆ ದಾಳಿಂಬೆ ಖರ್ಜೂರ ಶಮೀ ಕಬ್ಬು ನಾಗ ಸಂಪಿಗೆ ಅಳಲೆ ನೆಲ್ಲಿ ಅಮೃತಬಳ್ಳಿ ಸರ್ಜೇ ಮರ ಮೊರಟೇಗಿಡ ಕಿರತಾಳೆಗಿಡ ಶ್ರೀಗಂಧದ ಮರ ಏಳೆಲೆ ಬಾಳೆಗಿಡ ಮುಂತಾದ ನಾನಾ ಗಿಡಮರ ಬಳ್ಳಿಗಳಿಂದ ಸುತ್ತುವರಿದಿತ್ತು ಆ ದ್ವಾರಕಾನಗರ.

ಉತ್ತಮವಾದ ರತ್ನಗಳಿಂದ ನಿರ್ಮಿತವಾದ ಎತ್ತರದ ಮನೆಗಳನ್ನು ಮುತ್ತು ಮಾಣಿಕ್ಯ ವಜ್ರಗಳಿಂದ ಅಲಂಕರಿಸಲಾಗಿತ್ತು. ರತ್ನಕಲಶಗಳು, ಮಣಿಸೋಪಾನಗಳು, ಕಠಿನವಾದ ಅಗುಳಿ ಚಿಲುಕಗಳಿಂದ ಭದ್ರವಾದ ಬಾಗಿಲುಗಳು, ಇಂದ್ರನೀಲಮಣಿ ಮಯವಾದ ಸ್ತಂಬಗಳು, ಚಿತ್ರವಿಚಿತ್ರ ಕನ್ನಡಿಗಳು, ಸೂಕ್ಷ್ಮವಸ್ತ್ರಗಳು, ಬಿಳಿ ಚಾಮರಗಳು, ಪದ್ಮರಾಗ ಇಂದ್ರನೀಲಮಣಿಗಳಿಂದ ಪರಿಷ್ಕೃತವಾದ ಬೀದಿಗಳು, ರಾಜಮಾರ್ಗಗಳು. ಗ್ರೀಷ್ಮಕಾಲದ ಮಧ್ಯಾಹ್ನ ಸೂರ್ಯನಂತೆ ಹೊಳೆವ ರತ್ನಗಳ ಕಾಂತಿ ಎಲ್ಲೆಲ್ಲೂ ಹರಡಿತ್ತು. ಒಂದು ಲಕ್ಷ ಗವಾಕ್ಷಗಳಿದ್ದುವು. ಕುದುರೆಲಾಯಗಳಿಂದ ಪರಿಷ್ಕೃತವಾಗಿತ್ತು ಆ ನಗರ. ದೇವತೆಗಳು ನೋಡಿ ಆಶ್ಚರ್ಯಗೊಂಡರು. ಶ್ರೀಕೃಷ್ಣ ಎಲ್ಲ ಯಾದವರನ್ನೂ ಉಗ್ರಸೇನ ವಸುದೇವ ದೇವಕಿಯರನ್ನೂ ಕುಂತಿ ಪಾಂಡವರನ್ನೂ ನಂದ ಯಶೋದೆಯರನ್ನೂ ಗೋಪಾಲಕರನ್ನೂ ಮುನಿಗಳನ್ನೂ ನೆನೆದ. ಒಡನೆ ಅವರೆಲ್ಲರೂ ಬಂದರು. ಗಂಧರ್ವರು ಕಿನ್ನರರು ವಿದ್ಯಾಧರರು, ಹೊಗಳುಭಟರು ಜ್ಯೋತಿಷಿಗಳು ರಾಜರು ವೈದ್ಯರು ಯತಿಗಳು ಅವಧೂತರು ವಟುಗಳು ಮುನಿಗಳು ಸಿದ್ಧರು ಎಲ್ಲರೂ ಬಂದರು.

ಜ್ಞಾನಿಗಳಾದ ಗುರುಗಳಿಗೂ ಗುರುಗಳಾದ ಐದುವರ್ಷ ವಯಸ್ಸಿನವರಂತೆ ಕಾಣುವ ಸನಕ, ಸನಂದನ, ಸನಾತನ, ಸನತ್ಕುಮಾರರು ಮೂರು ಕೋಟಿ ಶಿಷ್ಯರೊಂದಿಗೆ ಬಂದರು. ಮೂರು ಲಕ್ಷ ಶಿಷ್ಯರೊಂದಿಗೆ ದೂರ್ವಾಸ, ಒಂದು ಲಕ್ಷ ಶಿಷ್ಯರೊಂದಿಗೆ ಕಶ್ಯಪ, ಮೂರು ಲಕ್ಷ ಶಿಷ್ಯರೊಂದಿಗೆ ವಾಲ್ಮೀಕಿ, ಒಂದುಲಕ್ಷ ಶಿಷ್ಯರೊಂದಿಗೆ ಗೌತಮ, ಕೋಟಿಶಿಷ್ಯರೊಂದಿಗೆ ಬೃಹಸ್ಪತಿ, ಮೂರುಕೋಟಿ ಶಿಷ್ಯರೊಂದಿಗೆ ಶುಕ್ರ, ಒಂದುಲಕ್ಷ ಶಿಷ್ಯರೊಂದಿಗೆ ಭರದ್ವಾಜ, ಮೂರುಕೋಟಿ ಶಿಷ್ಯರೊಂದಿಗೆ ಅಂಗಿರಸ, ಕೋಟಿಶಿಷ್ಯರೊಡನೆ ವಸಿಷ್ಠ, ಕೋಟಿ ಶಿಷ್ಯರೊಡನೆ ಪ್ರಚೇತ, ಮೂರುಲಕ್ಷ ಶಿಷ್ಯರೊಡನೆ ಪುಲಸ್ತ್ಯ, ಕೋಟಿ ಶಿಷ್ಯರೊಡನೆ ಅಗಸ್ತ್ಯ, ಒಂದು ಲಕ್ಷ ಶಿಷ್ಯರೊಡನೆ ಪುಲಹ, ಒಂದು ಲಕ್ಷ ಶಿಷ್ಯರೊಡನೆ ಕ್ರತು, ಮೂರು ಕೋಟಿ ಶಿಷ್ಯರೊಡನೆ ಅತ್ರಿ, ಐದು ಕೋಟಿ ಶಿಷ್ಯರೊಡನೆ ಭೃಗು, ಮೂರು ಕೋಟಿ ಶಿಷ್ಯರೊಡನೆ ಮರೀಚಿ, ಒಂದು ಸಹಸ್ರ ಶಿಷ್ಯರೊಡನೆ ಶತಾನಂದ, ಮೂರುಕೋಟಿ ಶಿಷ್ಯರೊಡನೆ ಋಷ್ಯಶೃಂಗ ವಿಭಾಂಡಕರು, ಕೋಟಿ ಶಿಷ್ಯರೊಡನೆ ಪಾಣಿನಿ, ಲಕ್ಷಶಿಷ್ಯರೊಡನೆ ಕಾತ್ಯಾಯನ, ಸಹಸ್ರಶಿಷ್ಯರೊಡನೆ ಯಾಜ್ಞವಲ್ಕ್ಯ, ಮೂರು ಕೋಟಿ ಶಿಷ್ಯರೊಡನೆ ವ್ಯಾಸ, ಲಕ್ಷ ಶಿಷ್ಯರೊಡನೆ ಕುಲಪುರೋಹಿತನಾದ ಗರ್ಗ, ಸಹಸ್ರ ಶಿಷ್ಯರೊಡನೆ ಗಾಲವ, ಸಹಸ್ರಶಿಷ್ಯರೊಡನೆ ಸೌಭರಿ, ಮೂರುಕೋಟಿ ಶಿಷ್ಯರೊಡನೆ ಮಾರ್ಕಂಡೇಯ, ಮೂರುಕೋಟಿ ಶಿಷ್ಯರೊಡನೆ ಸಾಂದೀಪನಿ ಮತ್ತು ದೇವಲರು, ಕೋಟಿ ಶಿಷ್ಯರೊಡನೆ ವೋಢು, ಲಕ್ಷ ಶಿಷ್ಯರೊಡನೆ ಪಂಚಶಿಖ, ನಾನು, ನನ್ನ ಸೋದರನಾದ ನರ ಎಲ್ಲರೂ ದ್ವಾರಕಾನಗರವನ್ನು ನೋಡಲು ಬಂದೆವು. ಮೂರುಕೋಟಿಶಿಷ್ಯರೊಡನೆ ವಿಶ್ವಾಮಿತ್ರ. ಮೂರುಕೋಟಿ ಶಿಷ್ಯರೊಡನೆ ಜರತ್ಕಾರು, ಮೂರುಕೋಟಿಶಿಷ್ಯರೊಡನೆ ಆಸ್ತಿಕ, ಮೂರು ಕೋಟಿ ಶಿಷ್ಯರೊಡನೆ ಪರಶುರಾಮ, ಒಂದು ಲಕ್ಷ ಶಿಷ್ಯರೊಡನೆ ವತ್ಸ, ಮೂರು ಲಕ್ಷ ಶಿಷ್ಯರೊಡನೆ ದಕ್ಷ, ಐದು ಕೋಟಿ ಶಿಷ್ಯರೊಡನೆ ಕಪಿಲ, ಮೂರು ಲಕ್ಷ ಶಿಷ್ಯರೊಡನೆ ಸಂವರ್ತ, ಮೂರು ಲಕ್ಷ ಶಿಷ್ಯರೊಡನೆ ಉತಥ್ಯ, ಸಾವಿರ ಶಿಷ್ಯರೊಡನೆ ಜೈಮಿನಿ, ಲಕ್ಷಶಿಷ್ಯರೊಡನೆ ಪೌಲ, ಸಾವಿರ ಶಿಷ್ಯರೊಡನೆ ಸುವರ್ಣ, ಲಕ್ಷ ಶಿಷ್ಯರೊಡನೆ ವೈಶಂಪಾಯನ, ಲಕ್ಷ ಶಿಷ್ಯರೊಡನೆ ಶೃಂಗಿ, ಲಕ್ಷಶಿಷ್ಯರೊಡನೆ ಉಪಮನ್ಯು, ಸಾವಿರ ಶಿಷ್ಯರೊಡನೆ ಗೌರಮುಖ, ಲಕ್ಷ ಶಿಷ್ಯರೊಡನೆ ಕಚ, ಮತ್ತು ಅಶ್ವತ್ಥಾಮ ದ್ರೋಣ ಕೃಪರು ಶಿಷ್ಯಸಮೇತರಾಗಿ ಬಂದರು. ಭೀಷ್ಮ ಕರ್ಣ ಶಕುನಿ ದುರ್ಯೋಧನ ಮತ್ತು ಇತರ ರಾಜರೂ ಬಂದರು.

ಶ್ರೀಕೃಷ್ಣ ಉಗ್ರಸೇನ ಮಹಾರಾಜನಿಗೆ ನುಡಿದ- 'ಮಹಾರಾಜ, ಇನ್ನು ನೀನು ದ್ವಾರಕಾಪುರ ಪ್ರವೇಶಮಾಡಿ ರಾಜ್ಯಾಭಿಷೇಕ ಮಾಡಿಸಿಕೊಳ್ಳು, ಈ ಮಂಗಲ ಕಾರ್ಯವಾದ ಬಳಿಕ ಈಗ ಇಲ್ಲಿಗೆ ಬಂದಿರುವ ಬ್ರಹ್ಮ ಶಿವ ಮುಂತಾದ ದೇವತೆಗಳೂ ಮುನಿಗಳೂ ಇತರ ಅತಿಥಿಜನರೂ ಹಿಂತಿರುಗುವರು. ಅದರಿಂದ ಈಗಲೆ ನೀನು ನನ್ನ ತಂದೆ ತಾಯಿಗಳೊಡನೆ ಎಲ್ಲ ಯಾದವರೊಡನೆ ಪುರಪ್ರವೇಶಮಾಡು.' ಉಗ್ರಸೇನ ಕ್ಷಣಕಾಲ ಅಧೀರನಾಗಿ ಕಾತರತೆಯಿಂದ ನುಡಿದ - 'ಕೃಷ್ಣ, ನಾನು ನನ್ನ ಜನ್ಮ ಭೂಮಿಯಾದ ಮಥುರೆಯನ್ನು ಬಿಟ್ಟು ದ್ವಾರಕೆಗೆ ಹೋಗಲಾರೆ. ಜನ್ಮಭೂಮಿ ಸಕಲ

ತೀರ್ಥಗಳಿಗಿಂತ ಶ್ರೇಷ್ಠ. ದೇವಕಾರ್ಯ ಪಿತೃಕಾರ್ಯಗಳಿಗೆ ಬಲು ಪ್ರಶಸ್ತ. ಅಲ್ಲಿ ಪಿತೃಗಳಿಗೆ ಪಿಂಡದಾನ ಮಾಡಿದರೆ ಮಹಾ ಪುಣ್ಯ. ಬೇರೆ ಕಡೆ ಮಾಡಿದರೆ ವ್ಯರ್ಥ. ದೇವತಾ ಕಾರ್ಯವೂ ಬೇರೆ ಕಡೆ ಮಾಡಿದರೆ ವ್ಯರ್ಥ. ಅಥವಾ ಅಲ್ಪ ಫಲಪ್ರದ.

**ಪುತ್ರಪೌತ್ರ ಕಲತ್ರೇಭ್ಯಃ ಪ್ರಾಣೇಭ್ಯಃ ಪ್ರೇಯಸೀ ಸದಾ ।**
**ದುರ್ಲಭಾ ಪೈತೃಕೀ ಭೂಮಿಃ ಪಿತುರ್ಮಾತುರ್ಗರೀಯಸೀ ॥**

ಮಕ್ಕಳು ಮೊಮ್ಮಕ್ಕಳು ಹೆಂಡಂದಿರುಗಳಿಂದಲೂ ಪ್ರಾಣಗಳಿಗಿಂತಲೂ ಜನ್ಮಭೂಮಿ ಹೆಚ್ಚು ಪ್ರಿಯ. ತಂದೆ ತಾಯಿಗಳಿಗಿಂತಲೂ ಹೆಚ್ಚಿನದು ಅದು, ದುರ್ಲಭ.

**ಮ್ರಿಯತೇ ಪೈತೃಕೀಭೂಮ್ಯಾಂ ತೀರ್ಥತುಲ್ಯಂ ಫಲಂ ಲಭೇತ್ ।**
**ಗಂಗಾಜಲಸಮಂ ಪೂತಂ ಪಿತೃಖಾತೋದಕಂ ಹರೇ ॥**
**ತತ್ರ ಸ್ನಾತ್ವಾ ಜಲೇ ಪೂತೇ ಗಂಗಾಸ್ನಾನಫಲಂ ಲಭೇತ್ ।**
**ಪಿತೃಣಾಂ ತರ್ಪಣಂ ತತ್ರ ಪವಿತ್ರಂ ದೇವಪೂಜನಂ ॥**

ಜನ್ಮಭೂಮಿಯಲ್ಲಿ ಮರಣ ಹೊಂದಿದರೆ ತೀರ್ಥಕ್ಷೇತ್ರಗಳಲ್ಲಿ ಮರಣಹೊಂದಿದ ಪುಣ್ಯಲಭಿಸುತ್ತದೆ. ಅಲ್ಲಿ ಪವಿತ್ರಜಲದಲ್ಲಿ ಸ್ನಾನ ಮಾಡಿದರೆ ಗಂಗಾಸ್ನಾನ ಫಲ ಲಭಿಸುತ್ತದೆ. ಪಿತೃಗಳಿಗೆ ತರ್ಪಣ ನೀಡಿದರೂ ದೇವಪೂಜೆಮಾಡಿದರೂ ಅದು ಪವಿತ್ರವೆನಿಸುತ್ತದೆ.

**ಶ್ರೀಕೃಷ್ಣ ನುಡಿದ** -ಮಹಾರಾಜ, ಜನ್ಮಭೂಮಿ ತೀರ್ಥಸಮಾನವೆನ್ನುತ್ತಿರುವಿ. ಇದು ನಿಜ. ಆದರೆ ದ್ವಾರಕೆಯನ್ನು ಮೀರಿಸುವ ತೀರ್ಥವಿನ್ನೆಲ್ಲಿ?

**ಸರ್ವತೀರ್ಥಪರಾ ಶ್ರೇಷ್ಠಾ ದ್ವಾರಕಾ ಬಹುಪುಣ್ಯದಾ ।**
**ಯಸ್ಯಾಃ ಪ್ರವೇಶಮಾತ್ರೇಣ ನರಾಣಾಂ ಜನ್ಮಖಂಡನಂ ॥**

**ದಾನಂ ಚ ದ್ವಾರಕಾಯಾಂ ಚ ಶ್ರಾದ್ಧಂ ಚ ದೇವಪೂಜನಂ ।**
**ಚತುರ್ಗುಣಂ ಚ ತೀರ್ಥಾನಾಂ ಗಂಗಾದೀನಾಂ ಚ ಭೂಮಿಪ ॥**

ದ್ವಾರಕೆ ಎಲ್ಲ ತೀರ್ಥಗಳಿಗಿಂತ ವಿಲಕ್ಷಣ, ಶ್ರೇಷ್ಠ, ಬಹು ಪುಣ್ಯದಾಯಕ. ಅದನ್ನು ಪ್ರವೇಶಿಸುವುದರಿಂದಲೆ ಜನನ ಮರಣಾದಿಗಳು ಇಲ್ಲವಾಗುತ್ತವೆ. ಅಲ್ಲಿ ಮಾಡುವ ದಾನ ಶ್ರಾದ್ಧ ದೇವತಾಪೂಜೆಗಳು ಗಂಗಾದಿತೀರ್ಥಗಳಲ್ಲಿ ಮಾಡಿದ್ದಕ್ಕಿಂತ ನಾಲ್ಕುಪಾಲು ಹೆಚ್ಚು ಫಲಪ್ರದ. ಆದರಿಂದ, ಉಗ್ರಸೇನ! ಬ್ರಹ್ಮಾದಿಗಳೊಂದಿಗೆ ಎಲ್ಲ ಮುನಿಗಳೊಂದಿಗೆ ಯಾದವರೊಂದಿಗೆ ದ್ವಾರಕೆಯನ್ನು ಪ್ರವೇಶಿಸು. ಅಲ್ಲಿ ಅರಮನೆಯಲ್ಲಿ ವಾಸಮಾಡು. ಮಹೇಂದ್ರನ ಅಮರಾವತಿಯನ್ನು ಮೀರಿಸಬಲ್ಲುದು ಈ ದ್ವಾರಕೆ. ಅದರಲ್ಲಿಯೂ ಸುಧರ್ಮವೆಂಬ ಸಭಾಭವನವಿದೆ. ಅಲ್ಲಿ ನೀನು ದೇವೇಂದ್ರನಂತೆ ಇರು. ರಾಜಮಹಾರಾಜರೆಲ್ಲರೂ ನಿನಗೆ ಕಪ್ಪಕಾಣಿಕೆ ಸಲ್ಲಿಸುತ್ತಾರೆ. ಧನದಲ್ಲಿ ಕುಬೇರನನ್ನು, ತೇಜಸ್ಸಿನಲ್ಲಿ ಸೂರ್ಯನನ್ನು ಸಂಪತ್ತಿನಲ್ಲಿ ಮಹೇಂದ್ರನನ್ನು ಯುದ್ಧ ಶೌರ್ಯದಲ್ಲಿ ದೇವತೆಗಳನ್ನು ಪುಣ್ಯಕರ್ಮಗಳಲ್ಲಿ ಮುನಿಗಳನ್ನು ತಪಸ್ಸಿನಲ್ಲಿ ತಪಸ್ವಿಗಳನ್ನು ವ್ರತಗಳಲ್ಲಿ ಸಂನ್ಯಾಸಿಗಳನ್ನು ಮೀರುತ್ತ ದ್ವಾರಕೆಯಲ್ಲಿ ವಾಸಮಾಡು.

## ಉಗ್ರಸೇನಸಮೋ ರಾಜಾ ನ ಭೂತೋ ನ ಭವಿಷ್ಯತಿ

ಉಗ್ರಸೇನನಂಥ ರಾಜ ಹಿಂದೆ ಇರಲಿಲ್ಲ, ಮುಂದೆಯೂ ಇರುವುದಿಲ್ಲ ಎನ್ನುವಂತೆ ಕೀರ್ತಿಭಾಜನನಾಗು. ನಿನ್ನ ಓಲಗದಲ್ಲಿ ಮಹಾಬಲಿಷ್ಠನಾದ ಭಗವಾನ್ ಬಲದೇವ ಇರುತ್ತಾನೆ. ಮೊರದಲ್ಲಿ ಒಂದು ಸಾಸುವೆ ಕಾಳಿನಂತೆ ಇಡಿ ಪ್ರಪಂಚ ಅವನ ಒಂದು ಫಣದಲ್ಲಿ ನಿಂತಿರುತ್ತದೆ. ಶೇಷನಿಗೆ ಬಲದಲ್ಲಿ ಸಮಾನನಾದ ದೇವನಿನ್ನೊಬ್ಬನಿಲ್ಲ. ಅವನ ಬಲಪರಾಕ್ರಮಾದಿ ಗುಣಗಳಿಗೆ ಅಂತವಿಲ್ಲ. ಅದರಿಂದ ಅನಂತನೆಂದೆ ಅವನಿಗೆ ಹೆಸರು. ಇಂಥ ಬಲರಾಮನ ಸಹಾಯ ಉಳ್ಳ ನಿನ್ನನ್ನು ಅಷ್ಟವಸುಗಳಾಗಲಿ, ಶಂಕರನನ್ನು ಹೊರತು ಬೇರೆ ರುದ್ರರಾಗಲಿ, ದ್ವಾದಶ ಆದಿತ್ಯರಾಗಲಿ, ದೇವತೆಗಳಿಂದೊಡಗೂಡಿದ ಮಹೇಂದ್ರನಾಗಲಿ ಗೆಲ್ಲಲು ಸಮರ್ಥರಾಗಲಾರರು.'

ಕೃಷ್ಣನ ಮಾತು ಕೇಳಿ ಉಗ್ರಸೇನನಿಗೆ ಸಮಾಧಾನವಾಯಿತು. ಯಾದವರೊಂದಿಗೆ ದ್ವಾರಕೆಯನ್ನು ಪ್ರವೇಶಿಸಿ ಇಂದ್ರನ ಅರಮನೆಯಂಥ ತನ್ನ ಅರಮನೆಯನ್ನು ಕಂಡ. ಆಅರಮನೆಯ ಬಾಗಿಲುಗಳಲ್ಲಿ ಶೂಲ ದಂಡ ಧಾರಿಗಳಾದ ಸಾವಿರದ್ವಾರಪಾಲಕರು ರಕ್ಷಿಸುತ್ತಿದ್ದರು. ಆರು ಬಾಗಿಲುಗಳನ್ನು ದಾಟಿ ಒಳಗೆ ಹೋದರೆ ಅಲ್ಲಿ ರತ್ನಮಯವಾದ ನೂರಾರು ಗಜಶಾಲೆಗಳಲ್ಲಿ ಕೋಟಿಮದ್ದಾನೆಗಳು. ಅವುಗಳಿಗಿಂತ ಆರುಪಾಲು ಅಧಿಕ ಸಂಖ್ಯೆಯಲ್ಲಿ ಕುದುರೆಗಳು. ಅವೂ ಸೂರ್ಯನ ಕುದುರೆಗಳನ್ನು ನಾಚಿಸುವಂತಿದ್ದುವು. ಆನೆಗಳೂ ಇಂದ್ರನ ಐರಾವತವನ್ನೂ ಧಿಕ್ಕರಿಸುತ್ತಿದ್ದುವು. ಹತ್ತುಕೋಟಿ ಹೇಸರಗತ್ತೆಗಳು. ಅವುಗಳಿಗೆ ಆರರಷ್ಟು ಕಾಲಾಳು ಸೈನ್ಯ. ಐದುಲಕ್ಷ ರಥಗಳು, ಐದುಲಕ್ಷ ಸಾರಥಿಗಳು. ಇನ್ನೂ ಒಳಗೆ ಹೋದರೆ ದೇವತೆಗಳು ಮುನಿಗಳು ಎಲ್ಲೆಡೆ ತುಂಬಿದ್ದಾರೆ. ರತ್ನಾಭರಣಗಳು ವಸ್ತ್ರಗಳು ರತ್ನ ಸಿಂಹಾಸನಗಳು ಎಲ್ಲೆಡೆ ಕಂಡು ಬರುತ್ತವೆ. ರತ್ನಮಯ ಬೀದಿಗಳು. ನೂರುಕೋಟಿ ಸೇವಕರಿಂದ ತುಂಬಿದ ಮನೋಹರವಾದ ಸುಧರ್ಮ ಸಭೆ. ಅದರಲ್ಲಿ ಮಂಗಳಕರವಾದ ಶಂಖನಾದ, ಮಂಗಳವಾದ್ಯ ಘೋಷ, ಮುನಿಗಳ ವೇದಮಂತ್ರ ಘೋಷಗಳೊಂದಿಗೆ ಉಗ್ರಸೇನ ಪ್ರವೇಶಿಸಿದ. ಅವನನ್ನು ನೋಡಿ ಬಲರಾಮ ಸಮೇತನಾದ ಶ್ರೀಕೃಷ್ಣನೂ ಬ್ರಹ್ಮ ಶಿವ ಶೇಷ ಮುಂತಾದ ದೇವತೆಗಳೂ ಮುನಿಗಳೂ ರಾಜರುಗಳೂ ಸಿದ್ಧರೂ ವಸುದೇವ ಮುಂತಾದ ಯಾದವರೂ ಎದ್ದುನಿಂತು ಗೌರವತೋರಿದರು.

ಶ್ರೀಹರಿ ಬ್ರಹ್ಮ ರುದ್ರ ಇಂದ್ರಾದಿ ದೇವತೆಗಳ ಮುನಿಗಳ, ಮತ್ತು ಗರ್ಗಾದಿ ಗುರುಜನರ ಅನುಜ್ಞೆ ಪಡೆದು ಉಗ್ರಸೇನ ರತ್ನಸಿಂಹಾಸನವನ್ನಲಂಕರಿಸಿದ. ಗರ್ಗ ಮುನಿ ಏಳು ತೀರ್ಥಗಳ ನೀರಿನಿಂದ ವೇದಮಂತ್ರ ಪೂರ್ವಕವಾಗಿ ಪೂರ್ಣಕುಂಭಾಭಿಷೇಕ ನಡೆಸಿದ. ಹಿಂದೆ ವರುಣ ಶ್ರೀಕೃಷ್ಣನಿಗೆ ಅರ್ಪಿಸಿದ್ದ ಬಿಳಿಯಾದ ಜೋಡಿವಸ್ತ್ರವನ್ನೂ ಪಾರಿಜಾತದ ಮಾಲೆಯನ್ನೂ ಚಂದನವನ್ನೂ ರತ್ನಾಭರಣಗಳನ್ನೂ ರತ್ನಮಯವಾದ ಶ್ವೇತಚ್ಛತ್ರವನ್ನೂ ಬಲರಾಮ ಉಗ್ರಸೇನನಿಗೆ ನೀಡಿದ. ಬ್ರಹ್ಮ ಕಮಂಡಲುವನ್ನೂ ಶಿವ ಶೂಲವನ್ನೂ ಪಾರ್ವತಿ ರತ್ನಮಾಲೆಯನ್ನೂ ಮಾಲತಿ ಹಾರವನ್ನೂ ಕೊಟ್ಟರು. ಬೇರೆ ದೇವತೆಗಳು ಮುನಿಗಳು ರಾಜರು ಸಿದ್ಧರು ಎಲ್ಲರೂ

ಬೇರೆ ಬೇರೆಯಾಗಿ ಉಡುಗೊರೆಗಳನ್ನಿತ್ತರು. ಹಿಂದೆ ವಾಯು ಕೃಷ್ಣನಿಗೆ ನೀಡಿದ್ದ ಬಿಳಿಚಾಮರವನ್ನು ವಸುದೇವ ಉಗ್ರಸೇನನಿಗಿತ್ತ. ನಂದನೂ ಅಲಂಕೃತವಾದ ಕಾಮಧೇನುವನ್ನಿತ್ತ. ಯಶೋದೆ ದೇವಕಿಯರು ರತ್ನಗಳನ್ನಿತ್ತರು. ಹರಿಯಾಜ್ಞೆಯಂತೆ ಅಕ್ರೂರ ಏಳುಮಂದಿ ಸೇವಕರಿಂದ ಬಿಳಿಚಾಮರ ಸೇವೆ ಮಾಡಿಸಿದ, ತಾನೂ ಶ್ವೇತಚ್ಛತ್ರ ಹಿಡಿದ, ರತ್ನದರ್ಪಣವನ್ನೂ ತೋರಿಸಿದ. ವಂದಿ ಮಾಗಧರೂ ಭಿಕ್ಷುಗಳೂ ಬ್ರಾಹ್ಮಣರೂ ಸ್ತುತಿಸಿದರು. ದೇವತೆಗಳೂ ಮುನಿಗಳೂ ಶುಭಾಶೀರ್ವಾದಗಳನ್ನಿತ್ತರು. ರಾಜಾ ಉಗ್ರಸೇನ ಬ್ರಾಹ್ಮಣರಿಗೆ ಭಕ್ತಿಯಿಂದ ಕೋಟಿ ರತ್ನಗಳನ್ನಿತ್ತ. ವಂದಿ ಮಾಗಧರಿಗೂ ಭಿಕ್ಷುಗಳಿಗೂ ನೂರು ನೂರು ರತ್ನಗಳನ್ನಿತ್ತ. ಎಲ್ಲ ಯಾದವರೂ ರಾಜನಿಗೆ ಅಭಿಷೇಕ ಮಾಡಿದರು; ದೇವತೆಗಳನ್ನೂ ಮುನಿಗಳನ್ನೂ ಸತ್ಕರಿಸಿದರು. ಸಂತೋಷದಿಂದ ತಮ್ಮ ಮನೆಗಳಿಗೆ ಹೊರಟು ಹೋದರು. ಮರುದಿನ ಬೆಳಿಗ್ಗೆ ಎಲ್ಲರೂ ಬಂದು ಸುಧರ್ಮಸಭೆಯನ್ನು ಅಲಂಕರಿಸಿದರು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ದ್ವಾರಕಾಪ್ರವೇಶ ಉಗ್ರಸೇನಾಭಿಷೇಕವೆಂಬ ನೂರನಾಲ್ಕನೆ ಅಧ್ಯಾಯ ಮುಗಿಯಿತು*



## ರುಕ್ಮಿಣೀ ಸ್ವಯಂವರಾಹ್ವಾನ

**ಅಧ್ಯಾಯ - ೧೦೫**

**ಶ್ರೀನಾರಾಯಣ ಮುನಿ:-** ಮಹಾಬಲ ಪರಾಕ್ರಮಿ ಪುಣ್ಯಾತ್ಮ ಸತ್ಯ ಶೀಲನಾದ ರಾಜ ವಿದರ್ಭ ದೇಶಾಧಿಪತಿ ಭೀಷ್ಮಕ. ನಾರಾಯಣನ ಅಂಶದಿಂದ ಯುಕ್ತನಾದವ. ಬೇಡಿದವರಿಗೆ ಸಕಲಸಂಪತ್ತನ್ನು ನೀಡುವ ಧರ್ಮಿಷ್ಠ. ಅವನ ಮಗಳು ರುಕ್ಮಿಣಿ. ಸ್ತ್ರೀಯರಲ್ಲೆಲ್ಲ ಅತ್ಯಂತ ಸುಂದರಿ. ಪುಟಕ್ಕಿಟ್ಟ ಚಿನ್ನದಂತೆ ಹೊಳೆವವಳು, ಸದ್ಗುಣಶೀಲಳು. ಶಾಂತಿ ಸಹನೆ ಮುಂತಾದ ಅನಂತಗುಣಗಳಿಂದ ತುಂಬಿದವಳು. ಇಂದ್ರ ವರುಣ ಚಂದ್ರ ಕುಬೇರ ಸೂರ್ಯ ಅಗ್ನಿಗಳ ಪತ್ನಿಯರೂ ಇನ್ನಿತರ ಯಾವ ಸುಂದರ ಸ್ತ್ರೀಯರೂ ರುಕ್ಮಿಣಿಯ ಹದಿನಾರನೆ ಒಂದು ಅಂಶಕ್ಕೂ ಸಮಾನರಾಗಲಾರರು. ಅವಳು ಬಾಲ್ಯಕ್ರೀಡೆಗಳಲ್ಲಿ ಆಸಕ್ತಳಾಗಿ ಆಕಾಶದಲ್ಲಿ ಚಂದ್ರಕಲೆಯಂತೆ ಪ್ರವರ್ಧಮಾನಳಾದಳು. ಶರತ್ಕಾಲದ ಚಂದ್ರನಂತೆ ಶೋಭಿಸಿದಳು. ವಿವಾಹಯೋಗ್ಯ ವಯಸ್ಸಿನಲ್ಲಿ ಕಾಲಿರಿಸಿದ ಮಗಳನ್ನು ಕಂಡು ತಂದೆ ಭೀಷ್ಮಕ ಚಿಂತಾಪರನಾದ. ಮಕ್ಕಳನ್ನೂ ಬ್ರಾಹ್ಮಣರನ್ನೂ ಪುರೋಹಿತರನ್ನೂ ಕರೆದು ಕೇಳಿದ -

'ನನ್ನ ಮಗಳಿಗೆ ಯೋಗ್ಯನಾದ ವರ ನಿಮ್ಮ ದೃಷ್ಟಿಯಲ್ಲಿ ಮುನಿಕುಮಾರರಲ್ಲಾಗಲಿ ದೇವಕುಮಾರರಲ್ಲಾಗಲಿ ರಾಜಕುಮಾರರಲ್ಲಾಗಲಿ ಯಾರಾದರೂ ಇರುವರೆ ಹೇಳಿ. ವಿವಾಹಯೋಗ್ಯ ವಯಸ್ಸಿಗೆ ಬೆಳೆದುನಿಂತ ಚೆಲುವೆಯಾದ ನನ್ನ ಮಗಳಿಗೆ ಬೇಗನೆ ಒಬ್ಬ ಯೋಗ್ಯನಾದ ನವಯೌವನಶಾಲಿಯಾದ ವರನನ್ನು ನೋಡಿರಿ. ಅವನು ಧರ್ಮಶೀಲ

ಸತ್ಯಸಂಧ ನಾರಾಯಣಭಕ್ತ ವೇದವೇದಾಂಗಜ್ಞಾನಿ ಪಂಡಿತ ಸುಂದರ ಮಂಗಳಕರ ಶಾಂತ ದಾಂತ ಕ್ಷಮಾಶೀಲ ಸದ್ಗುಣಶಾಲಿ ದೀರ್ಘಾಯುಷಿ ಮಹಾಕುಲಪ್ರಸೂತ ಎಲ್ಲೆಡೆ ಪ್ರತಿಷ್ಠಿತನಾಗಿರಬೇಕು. ಅವನು ರಾಜಕುಮಾರನಾಗಿದ್ದರೆ ಯುದ್ಧಶಾಸ್ತ್ರ ವಿಶಾರದ, ರಣರಂಗದಲ್ಲಿ ಸ್ಥಿರವಾಗಿ ನಿಂತು ಯುದ್ಧ ಮಾಡಬಲ್ಲ ಪ್ರತಾಪಶಾಲಿ ಮಹಾರಥಿಕನಾಗಿರಬೇಕು. ದೇವಕುಮಾರನಾಗಿದ್ದಲ್ಲಿ ಸಕಲ ದೈವೀ ಗುಣಸಂಪತ್ತುಳ್ಳವನಾಗಿರಬೇಕು. ಮುನಿಕುಮಾರನಾಗಿದ್ದಲ್ಲಿ ಚತುರ್ವೇದ ವಿಶಾರದ ವಾಗ್ಮಿ ವಿಚಾರಶೀಲ ಸಿದ್ಧಾಂತನಿಷ್ಠನಾಗಿರಬೇಕು.' ರಾಜನ ಮಾತನು ಕೇಳಿ ಗೌತಮಮುನಿಪುತ್ರನಾದ ಶತಾನಂದ ಹೇಳತೊಡಗಿದ. ಅವನು ರಾಜನಿಗೆ ಆಪ್ತನಾದ ಕುಲಪುರೋಹಿತ. ಒಳ್ಳೆಯ ವಾಗ್ಮಿ, ಪಂಡಿತ, ಧರ್ಮಿಷ್ಠ, ಭೂಲೋಕದಲ್ಲೆಲ್ಲ ಸಕಲ ತತ್ವಜ್ಞ, ಸರ್ವಕರ್ಮಗಳಲ್ಲಿ ನಿಷ್ಣಾತ. ಅವನು ಹೇಳಿದ-

'ರಾಜನೆ, ನೀನು ಧರ್ಮಜ್ಞ, ಧರ್ಮಶಾಸ್ತ್ರ ವಿಶಾರದ. ವೇದೋಕ್ತವಾದ ಪ್ರಾಚೀನ ಹೇಳಿಕೆಯೊಂದನ್ನು ನಿನಗೆ ಹೇಳುತ್ತೇನೆ ಕೇಳು. ಭೂಭಾರಹರಣಕ್ಕಾಗಿ ಸ್ವಯಂ ನಾರಾಯಣ ಭೂಮಿಯಲ್ಲಿ ವಸುದೇವಸುತನಾಗಿ ಅವತರಿಸಿದ. ಅವನು ಅತ್ಯಂತ ಸದ್ಗುಣಪೂರ್ಣ, ಸರ್ವಶಕ್ತ, ಸೃಷ್ಟಿಕರ್ತನಿಗೂ ತಂದೆ, ಬ್ರಹ್ಮ ಶಿವ ಶೇಷರಿಗೂ ವಂದ್ಯ, ಜ್ಯೋತಿಃಸ್ವರೂಪ, ಭಕ್ತರಲ್ಲಿ ಅನುಗ್ರಹ ಮಾಡಲೆಂದೆ ಅವತರಿಸಿದವ. ಎಲ್ಲರ ಅಂತರ್ಯಾಮಿ, ಪ್ರಕೃತಿಯಿಂದಾಚೆ ಇರುವವ, ನಿರ್ಲಿಪ್ತ. ಪೂರ್ಣಕಾಮ, ಸಕಲಕರ್ಮಸಾಕ್ಷಿ, ಸಕಲ ಸದ್ಗುಣ ಪರಿಪೂರ್ಣ. ಪ್ರತಿಯುಗದಲ್ಲಿಯೂ ಅವನು ಹೀಗೆ ಅವತರಿಸುವನೆಂದು ವೇದ ಪುರಾಣಾದಿಗಳು ವರ್ಣಿಸುತ್ತವೆ.

ರಾಜನೆ, ಈ ವಾಸುದೇವಕೃಷ್ಣನಿಗೆ ನಿನ್ನ ಮಗಳನ್ನಿತ್ತು ನೂರು ಮಂದಿ ಪಿತೃಗಳೊಂದಿಗೆ ಗೋಲೋಕವನ್ನು ಪಡೆ. ಸಾರೂಪ್ಯ ಮುಕ್ತಿಯನ್ನೂ ಪಡೆ. ಆ ಲೋಕದಲ್ಲಿಯೂ ಇದರಿಂದ ನಿನಗೆ ಎಲ್ಲರೂ ಗೌರವಾದರ ನೀಡುವರು. ಏಕೆಂದರೆ ಸರ್ವಪೂಜ್ಯನಾದ ಕೃಷ್ಣನಿಗೆ ಮಾವನಾಗಿ ಹಿರಿಯನೆನಿಸುವಿ. ಮಹಾಲಕ್ಷ್ಮೀ ಸ್ವರೂಪಳಾದ ರುಕ್ಮಿಣಿಯನ್ನು ಸರ್ವಸ್ವ ದಕ್ಷಿಣಾ ಸಮೇತವಾಗಿ ಕೃಷ್ಣನಿಗೆ ಧಾರೆ ಎರೆದು ಪುನರ್ಜನ್ಮವೆ ಇಲ್ಲದಂತೆ ಮಾಡಿಕೊಳ್ಳು. ಈ ಸಂಬಂಧ ವಿಧಿಲಿಖಿತವಾಗಿದ್ದು ಸರ್ವಸಮ್ಮತವೂ ಆಗಿದೆ. ಅದರಿಂದ ಬೇಗನೆ ದ್ವಾರಕಾನಗರದಲ್ಲಿ ಕೃಷ್ಣನ ಬಳಿಗೆ ಒಬ್ಬ ಬ್ರಾಹ್ಮಣನನ್ನು ಕಳಿಸು. ಸರ್ವಸಮ್ಮತವಾದ ಒಂದು ಶುಭಮುಹೂರ್ತವನ್ನು ಗೊತ್ತುಮಾಡು. ನಿತ್ಯಶರೀರಿಯಾದ ಆ ಪರಮಾತ್ಮನನ್ನು ಕರೆಸಿಕೊಂಡು ದರ್ಶನ ಮಾತ್ರದಿಂದಲೆ ಜನ್ಮಕರ್ಮಗಳನ್ನು ಅಳಿಸಿ ಮುಕ್ತಿಭಾಜನನಾಗು. ಅವನನ್ನು ನಾಲ್ಕು ವೇದಗಳೂ ಪೂರ್ತಿ ಅರಿಯಲಾರವು. ದೇವತೆಗಳೂ ಅರಿಯರು. ಸಿದ್ಧರು ಮುನಿಗಳು ಬ್ರಹ್ಮಾದಿ ದೇವತೆಗಳು ಧ್ಯಾನಿಸುವರು. ಧ್ಯಾನದಿಂದ ಪುನೀತರಾಗುವರು. ಆದರೂ ಅವನನ್ನು ಪೂರ್ತಿ ತಿಳಿಯಲಾರರು. ಸರಸ್ವತಿಯೂ ಕೂಡ ಅವನನ್ನು ಸ್ತುತಿಸಿ ಸೋತು ಜಡಳಾಗುವಳು. ವೇದಗಳೂ ಶಾಸ್ತ್ರಗಳೂ ಕೊನೆಗೆ ಸುಮ್ಮನಾಗುವುವು. ಸಾವಿರ ಮುಖದ ಶೇಷ, ಐದು ಮೊಗದ ಶಿವ, ನಾಲ್ಕು, ಮುಖದ ಬ್ರಹ್ಮ, ಕುಮಾರ ಷಣ್ಮುಖ, ಋಷಿಗಳು ಮುನಿಗಳು ಭಕ್ತರಾದ ಪರಮವೈಷ್ಣವರು ಅವನನ್ನು ಸ್ತುತಿಸಲಾರರು.

ಧ್ಯಾನಕ್ಕೂ ಅಗಮ್ಯ ಆತ. ಇಂಥವನನ್ನು ಬಾಲಕನಾದ ನಾನೇನು ಬಣ್ಣಿಸಲಿ? ಶತಾನಂದನ ಮಾತನ್ನು ಕೇಳಿ ಭೀಷ್ಮಕರಾಜ ಹಸನ್ಮುಖನಾಗಿ ಎದ್ದುನಿಂತು ಬೇಗನೆ ಅವನಿಗೆ ಆಲಿಂಗನವನ್ನಿತ್ತ. ನಾನಾ ರತ್ನ ಸುವರ್ಣ ವಸ್ತ್ರಾಭರಣಗಳನ್ನೂ ಕೊಟ್ಟ. ಆನೆ ಕುದುರೆಗಳನ್ನೂ ಉಳದೇ ಬೆಳೆಯುವ ಸಾರವತ್ತಾದ ಭೂಮಿಯನ್ನೂ ಗ್ರಾಮಗಳನ್ನೂ ಕೊಟ್ಟ. ಆದರೆ ಅಧಾರ್ಮಿಕನಾದ ರಾಜಕುಮಾರ ರುಕ್ಮಿ ಕುಪಿತನಾದ. ಕೋಪದಿಂದ ಕಂಪಿಸುತ್ತ ಮುಖ ಕಣ್ಣು ಕೆಂಪಗೆ ಮಾಡಿಕೊಂಡು ಎಲ್ಲ ಸಭಾಸದರ ಮುಂದೆ ಹೇಳಿದ- 'ಮಹಾರಾಜ, ನೀನು ಈ ಭಿಕ್ಷುಕ ಲೋಭಿಗಳ ದ್ರೋಹಿಗಳ ಮಾತನ್ನು ಕೇಳಬೇಡ. ನನ್ನ ಮಾತನ್ನು ಕೇಳು. ಅದು ಸತ್ಯ ಹಿತ ಮತ್ತು ಶ್ಲಾಘನೀಯ. ನಟರು ವೇಶ್ಯೆಯರು ಹೊಗಳುಭಟರು ಯಾಚಕರು ಬಡಗಿಗಳು ಮತ್ತು ಭಿಕ್ಷುಕರ ಮಾತು ಯಾವಾಗಲೂ ಸುಳ್ಳಾಗಿರುತ್ತದೆ. ತಲೆಹಿಡುಕರು ದಂಭಾಚಾರಿಗಳು ಸ್ತ್ರೀಲಂಪಟರು ಕಾಮಿಗಳು ದರಿದ್ರರು ಮೂರ್ಖರು ಹೊಗಳುತ್ತ ಮಾತನಾಡುವುದೆಲ್ಲವೂ ಸುಳ್ಳಾಗಿರುತ್ತದೆ.

ಕೃಷ್ಣ ಕಾಲಯವನನೆಂಬ ಮಹಾರಾಜನನ್ನು ಭಯದಿಂದ ಉಪಾಯವಾಗಿಯೆ ಕೊಲ್ಲಿಸಿ ಅವನ ಸಂಪತ್ತನ್ನು ದೋಚಿದವನು. ದ್ವಾರಕೆಯಲ್ಲಿ ಕೃಷ್ಣ ಅನುಭವಿಸುವುದೆಲ್ಲ ಕಾಲಯವನನ ಸಂಪತ್ತು. ಅವನು ದ್ವಾರಕೆಯನ್ನು ನಿರ್ಮಿಸಿಕೊಂಡುದುದೂ ಜರಾಸಂಧನ ಭಯದಿಂದ. ಜರಾಸಂಧನಂಥ ನೂರು ಮಂದಿಯನ್ನೂ ನಾನು ಏಕಾಕಿಯಾಗಿ ಕೊಲ್ಲಲು ಸಮರ್ಥನಾಗಿರುವೆ. ನಾನು ದುರ್ವಾಸರ ಶಿಷ್ಯ, ಯುದ್ಧಶಾಸ್ತ್ರ ವಿಶಾರದ. ಪ್ರಪಂಚವನ್ನೆ ಲಯ ಮಾಡಲು ಸಮರ್ಥ. ನನಗೆ ಸಮಾನರೆಂದರೆ ಒಬ್ಬ ಪರಶುರಾಮ. ಇನ್ನೊಬ್ಬ ಶಿಶುಪಾಲ. ಶಿಶುಪಾಲ ನನಗೆ ಮಿತ್ರ. ಅವನು ಬಲಿಷ್ಠ ಶೂರ, ಸ್ವರ್ಗವನ್ನೂ ಗೆಲ್ಲಬಲ್ಲವ. ನಾನೂ ಕ್ಷಣದಲ್ಲಿ ದೇವೇಂದ್ರನನ್ನು ಅವನ ಪರಿವಾರ ಸಹಿತವಾಗಿ ಗೆಲ್ಲಬಲ್ಲೆ. ದುರ್ಬಲನಾದ ಜರಾಸಂಧನನ್ನು ಯುದ್ಧದಲ್ಲಿ ಗೆದ್ದು ಕೃಷ್ಣ ತನ್ನನ್ನು ವೀರನೆಂದು ತಿಳಿದಿದ್ದಾನೆ. ಅವನು ರುಕ್ಮಿಣಿಯನ್ನು ಮದುವೆಯಾಗಲು ನಮ್ಮೂರಿಗೆ ಬಂದರೆ ಒಂದೇ ಕ್ಷಣದಲ್ಲಿ ಯಮ ಪಟ್ಟಣಕ್ಕೆ ಕಳಿಸಿಕೊಡುವೆ.

ಏನಾಶ್ಚರ್ಯ! ವೈಶ್ಯನಾದ ನಂದನ ಮನೆಯಲ್ಲಿ ದನ ಮೇಸುತ್ತಿದ್ದವ, ಗೋಪಿಯರೊಡನೆ ಅನೈತಿಕ ಸಂಬಂಧವಿಟ್ಟುಕೊಂಡವ, ಗೋಪಾಲಕರ ಎಂಜಲು ತಿನ್ನುತ್ತಿದ್ದವ, ಇಂಥ ಕೃಷ್ಣನಿಗೆ ದೇವಯೋಗ್ಯಳಾದ ರುಕ್ಮಿಣಿಯನ್ನು ಕೊಟ್ಟು ವಿವಾಹ ಮಾಡಲು ಹೊರಟಿರುವೆ! ಭಿಕ್ಷುಕನಾದ ಒಬ್ಬ ಬ್ರಾಹ್ಮಣನ ಮಾತು ಕೇಳಿ ಹಾಗೆ ಮಾಡಲು ನಿರ್ಧರಿಸಿರುವೆ! ಮಹಾರಾಜ, ನಿನಗೆ ಬುದ್ಧಿ ಇಲ್ಲ. ಕೃಷ್ಣ ರಾಜಕುಮಾರನಲ್ಲ, ಶೂರನಲ್ಲ. ಉತ್ತಮ ಕುಲದವನಲ್ಲ, ಶುಚಿಯಲ್ಲ, ದಾನಶೀಲನಲ್ಲ, ಧನಿಕನಲ್ಲ, ಯೋಗ್ಯನಲ್ಲ ಜಿತೇಂದ್ರಿಯನೂ ಅಲ್ಲ. ಆದರಿಂದ ಶಿಶುಪಾಲನಿಗೇ ಕನ್ಯಾದಾನ ಮಾಡು. ಅವನು ಬಲದಿಂದ ಶಿವನನ್ನು ಸಂತೋಷಗೊಳಿಸಿದವ, ರಾಜಕುಮಾರ. ಎಲ್ಲದೇಶದ ರಾಜರುಗಳಿಗೂ ಬಂಧುಗಳಿಗೂ ಮುನಿಗಳಿಗೂ ಬೇಗನೆ ಪತ್ರದ ಮೂಲಕ ಆಹ್ವಾನ ನೀಡು. ಅಂಗ ಕಲಿಂಗ ಮಗಧ ಸೌರಾಷ್ಟ್ರ ವಲ್ಕಲ ರಾಟ ವರೇಂದ್ರ ವಂಗ ಗುರ್ಜರ ಪೇಠರ ಮಹಾರಾಷ್ಟ್ರ ವಿರಾಟ ಮುದ್ಗಲ ಮುರಂಗ ಭಲ್ಲಕ ಗಲ್ಲಕ ಖರ್ವ ದುರ್ಗ ಈಎಲ್ಲ ದೇಶಗಳಿಗೆ ಬ್ರಾಹ್ಮಣರನ್ನು ಕಳಿಸು. ತುಪ್ಪ, ಜೇನುತುಪ್ಪ, ಮೊಸರು, ಹಾಲು,

ಎಣ್ಣೆಗಳ ಸಾವಿರ ಸಾವಿರ ಕಾಲುವೆಗಳನ್ನು ಹರಿಸು. ಬೆಲ್ಲ ಸಕ್ಕರೆ ಧಾನ್ಯಗಳು ಅವಲಕ್ಕಿ ಮಿಷ್ಟಾನ್ನ ರಾಶಿಗಳನ್ನೂ ಸಿದ್ಧಪಡಿಸು. ಗೋವು ಜಿಂಕೆ ಮೊಲ ಆಮೆ ಆಡುಗಳನ್ನೂ ಪಕ್ಷಿಗಳನ್ನೂ ಗ್ರಾಮದೇವತೆಗೆ ಬಲಿಕೊಟ್ಟು ಅವುಗಳ ಮಾಂಸದಡುಗೆ ಏರ್ಪಡಿಸು.' ಮಗನ ಮಾತನ್ನು ಕೇಳಿ ಭೀಷ್ಮಕ ಮಂತ್ರಿಗಳೊಡನೆ ಸಮಾಲೋಚನೆ ಮಾಡಿ ರುಕ್ಮಿಣೀ ಸ್ವಯಂವರಕ್ಕೆ ಮುಹೂರ್ತ ನಿಶ್ಚಯಿಸಿ ದ್ವಾರಕೆಗೆ ಒಬ್ಬ ಬ್ರಾಹ್ಮಣನನ್ನು ಕಳಿಸಿದ. ಎಲ್ಲ ರಾಜರಿಗೂ ಆಮಂತ್ರಣ ಕಳಿಸಿದ.

ಬ್ರಾಹ್ಮಣ ದ್ವಾರಕೆಗೆ ಬಂದು ರಾಜರುಗಳು ಮತ್ತು ದೇವತೆಗಳಿಂದ ತುಂಬಿದ ಸುಧರ್ಮಸಭೆಯಲ್ಲಿ ಉಗ್ರಸೇನನಿಗೆ ಮಂಗಳ ಪತ್ರಿಕೆಯನ್ನಿತ್ತ. ರಾಜ ಅದನ್ನು ಓದಿಸಿ ಕೇಳಿ ಸಂತುಷ್ಟನಾಗಿ ಸಾವಿರ ಸುವರ್ಣಗಳನ್ನು ದಾನಮಾಡಿದ. ಎಲ್ಲೆಡೆ ದುಂದುಭಿ ಮೊಳಗಿಸಿದ. ದೇವತೆಗಳು ಮುನಿಗಳು ರಾಜರು ಜ್ಞಾತಿಗಳು ಬಂಧುಗಳು ವಂದಿ ಮಾಗಧರು ಭಿಕ್ಷುಕರು ಎಲ್ಲರಿಗೂ ಭೋಜನವಿತ್ತ. ಶ್ರೀಕೃಷ್ಣನಿಗೆ ಮೂಲೋಕದಲ್ಲಿಯೆ ಎಣೆ ಇಲ್ಲದಂಥ ಉತ್ತಮ ಅಲಂಕಾರ ಮಾಡಿಸಿದ. ಸುಮುಹೂರ್ತದಲ್ಲಿ ಮಧುರ ವೇದಘೋಷದೊಂದಿಗೆ ಶ್ರೀಕೃಷ್ಣನನ್ನು ಪ್ರಯಾಣ ಹೊರಡಿಸಿದ. ಅವನ ಜೊತೆಗೆ ಮೊದಲಿಗೆ ಬ್ರಹ್ಮ ಸಾವಿತ್ರಿಯೊಂದಿಗೆ ರಥಾರೂಢನಾಗಿ ಹೊರಟ. ಬಳಿಕ ಶಿವ ಶೇಷ ಸೂರ್ಯ ಗಣೇಶ ಇಂದ್ರ ಚಂದ್ರ ವರುಣ ವಾಯು ಕುಬೇರ ಯಮ ಅಗ್ನಿ ಈಶಾನ ಮುಂತಾದ ಮೂರು ಕೋಟಿ ದೇವತೆಗಳು, ಆರು ಕೋಟಿ ಮುನಿಗಳು ಹೊರಟರು. ಮೂರುಲಕ್ಷ ಮದ್ದಾನೆಗಳು ಮತ್ತು ಮೂರುಲಕ್ಷ ಶ್ವೇತಚ್ಛತ್ರಗಳೊಂದಿಗೆ ರಾಜಾ ಉಗ್ರಸೇನ ಪ್ರಯಾಣ ಮಾಡಿದ. ನಕ್ಷತ್ರಗಳ ನಡುವೆ ಚಂದ್ರನಂತೆ ಹೊಳೆಯುತ್ತ ಪ್ರಸನ್ನವದನನಾಗಿ ಕುಂಡಿನಪುರದೆಡೆಗೆ ಸಾಗಿದ. ರತ್ನ ಖಚಿತವಾದ ರಥದಿಂದ ಮಹಾ ಬಲಶಾಲಿಯಾದ ಬಲದೇವನೂ ಹೊರಟ. ವಸುದೇವ ಉದ್ಧವ ನಂದ ಅಕ್ರೂರ ಸಾತ್ಯಕಿ ಗೋಪಾಲಕರು ಯಾದವರು, ದುರ್ಯೋಧನ ಮುಂತಾದ ಧೃತರಾಷ್ಟ್ರನ ಮಕ್ಕಳು, ಯುಧಿಷ್ಠಿರ ಭೀಮ ಅರ್ಜುನ ನಕುಲ ಸಹದೇವರು, ಭೀಷ್ಮ ದ್ರೋಣ ಕರ್ಣ ಅಶ್ವತ್ಥಾಮ ಕೃಪ ಶಕುನಿ ಶಲ್ಯರು ಮೂರುಕೋಟಿ ಭಟರು ನೂರು ಕೋಟಿ ಬ್ರಾಹ್ಮಣರು ಸಾವಿರ ಸನ್ಯಾಸಿಗಳು ಎರಡು ಸಾವಿರ ಯತಿಗಳು ಬ್ರಹ್ಮಚಾರಿಗಳು ಎರಡು ಸಾವಿರ ಅವಧೂತರು ಸಾವಿರ ಹೂವಾಡಿಗರು ಶಿಲ್ಪಕಾರರು ಲಕ್ಷಮಂದಿ ವಾದ್ಯನುಡಿಸುವವರು ಲಕ್ಷಮಂದಿ ನರ್ತಕರು ಹೊರಟರು. ನಾರದ, ಆ ಕಲ್ಪದಲ್ಲಿ ನೀನೆ ಉಪಬರ್ಹಣ ಗಂಧರ್ವನಾಗಿದ್ದು ಒಂದುಲಕ್ಷ ಗಾಯಕ ಗಂಧರ್ವರ ಮಧ್ಯದಲ್ಲಿ ಐವತ್ತು ಮಂದಿ ಸ್ತ್ರೀಯರೊಡನೆ ನೀನೂ ಒಬ್ಬನಾಗಿದ್ದಿ. ಹಾಗೇ ಒಂದುಲಕ್ಷ ಮಂದಿ ವಿದ್ಯಾಧರ ಸ್ತ್ರೀಯರು, ಲಕ್ಷಮಂದಿ ಅಪ್ಸರೆಯರು, ಮೂರುಲಕ್ಷ ಕಿನ್ನರರು, ಮೂರು ಲಕ್ಷ ಬೇರೆ ಗಂಧರ್ವರು ಪ್ರಯಾಣ ಮಾಡಿದರು.

ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ
ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರುಕ್ಮಿಣೀ ವಿವಾಹದಲ್ಲಿ
ನೂರೈದನೆ ಅಧ್ಯಾಯ ಮುಗಿಯಿತು

## ರುಕ್ಮಿಣೀವಿವಾಹಕ್ಕೆ ವಿರೋಧ

**ಅಧ್ಯಾಯ - ೧೦೬**

**ಶ್ರೀನಾರಾಯಣ ಮುನಿ:-** 'ಈ ನಡುವೆ ರಾಜಾ ಕಕುದ್ಮಿ ತನ್ನ ಮಗಳಾದ ರೇವತಿಗೆ ಯೋಗ್ಯವರನನ್ನು ಹುಡುಕುತ್ತ ಬ್ರಹ್ಮಲೋಕದವರೆಗೆ ಹೋಗಿ ಕೊನೆಗೆ ದ್ವಾರಕೆಗೆ ಬಂದ. ಕನ್ಯೆಯ ವಯಸ್ಸು ಆಗ ಇಪ್ಪತ್ತೇಳು ಯುಗಗಳಾಗಿದ್ದರೂ ಅವಳ ಯೌವನ ಸ್ಥಿರವಾಗಿತ್ತು. ಅಮೂಲ್ಯ ರತ್ನಾಭರಣಗಳಿಂದ ಅಲಂಕೃತಳಾದ ಆ ಕನ್ಯೆಯನ್ನು ರಾಜ ಬಲರಾಮನಿಗೆ ಕೊಟ್ಟು ವಿಧ್ಯುಕ್ತ ರೀತಿಯಿಂದ ಮದುವೆ ಮಾಡಿದ. ಜೊತೆಗೆ ಮೂರುಲಕ್ಷ ಮದ್ದಾನೆಗಳು ಹತ್ತುಲಕ್ಷ ಕುದುರೆಗಳು ಒಂದುಲಕ್ಷ ರಥಗಳು ಕೋಟಿ ಮಣಿರತ್ನ ಸುವರ್ಣ ವಸ್ತ್ರಾಭರಣಗಳನ್ನು ಬಳುವಳಿಯಾಗಿ ಕೊಟ್ಟ. ಬಳಿಕ ರತ್ನಮಯವಾದ ರಥವನ್ನೇರಿ ಕುಂಡಿನಪುರಕ್ಕೆ ಹೊರಟ. ಇತ್ತ ರೇವತೀ ವಿವಾಹ ಮಂಗಳಕಾರ್ಯ ಸಾಂಗವಾಗಿ ನೆರವೇರಿದ ಬಳಿಕ ದೇವಕಿ ರೋಹಿಣಿ ಯಶೋದೆ ಅದಿತಿ ದಿತಿ ಶಾಂತಿ ಮುಂತಾದ ಸುವಾಸಿನಿಯರು ರೇವತಿಯನ್ನು ಮನೆ ತುಂಬಿಸಿಕೊಂಡರು. ದೇವಕಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ದಾನ ದಕ್ಷಿಣೆಗಳನ್ನಿತ್ತು ಮಂಗಳಾಶೀರ್ವಾದ ಪಡೆದಳು. ಅತ್ತ ದೇವತೆಗಳೂ ಮುನಿಗಳೂ ಕುಂಡಿನಪುರವನ್ನು ಸೇರಿದರು. ಆ ನಗರದ ಸುತ್ತಲೂ ಆಳವಾದ ಏಳು ಕಂದಕಗಳಿದ್ದುವು. ಏಳು ಪ್ರಾಕಾರಗಳಿದ್ದುವು. ನೂರು ಬಾಗಿಲುಗಳು. ನಾನಾ ಬಗೆಯ ಮಣಿ ರತ್ನಗಳಿಂದ ವಿಶ್ವಕರ್ಮ ನಿರ್ಮಿಸಿದ ನಗರ. ನಗರದ ಹೊರಬಾಗಿಲಲ್ಲಿ ನಾಲ್ಕು ಮಂದಿ ಮಹಾರಥರು ರಕ್ಷಕರಾಗಿದ್ದರು. ಕೃಷ್ಣನ ಸೈನ್ಯ ನಗರದ್ವಾರದ ಬಳಿಗೆ ಬರುತ್ತಿದ್ದುದನ್ನು ಕಂಡು ರುಕ್ಮಿ ಶಿಶುಪಾಲ ದಂತವಕ್ರ ಸಾಲ್ವರಿಗೆ ಸಹನೆಯಾಗಲಿಲ್ಲ. ನಾನಾ ಶಸ್ತ್ರಾಸ್ತ್ರಗಳಿಂದ ಕೂಡಿ ಸಜ್ಜಾಗಿದ್ದ ರಥದಲ್ಲಿ ಯುದ್ಧಕ್ಕೆ ಅಣಿಯಾಗಿ ನಿಂತಿದ್ದ ರುಕ್ಮಿ ಕೃಷ್ಣನ ಬಗ್ಗೆ ಬಲು ನಿಷ್ಠುರವಾದ ಕರ್ಣ ಕಠೋರವಾದ ಮಾತುಗಳನ್ನಾಡಿದ. ದೇವತೆಗಳನ್ನೂ ಮುನಿಗಳನ್ನೂ ಅಪಹಾಸಗೈದ -

'ಏನಾಶ್ಚರ್ಯ! ಕಾಲದ ಪ್ರಭಾವ! ದುರದೃಷ್ಟ! ಯಾರೇನು ಮಾಡಬಲ್ಲರು? ನಾನಾದರೂ ಈ ದೇವೋತ್ತಮರೆಲ್ಲರ ಸಮ್ಮುಖದಲ್ಲಿ ಏನು ಹೇಳಲಿ? ದೇವತೆಗಳಿಗೆ ಯೋಗ್ಯಳಾದ ಸುಂದರಿಯಾದ ರುಕ್ಮಿಣಿಯನ್ನು ಕೈಹಿಡಿಯಲು ನಂದಗೋಪನ ಮನೆಯಲ್ಲಿ ದನಕಾಯುವ ಕೆಲಸ ಮಾಡುತ್ತಿದ್ದವನೊಬ್ಬ ಬರುತ್ತಿದ್ದಾನೆ! ಮಾತ್ರವಲ್ಲದೆ, ಅವನ ಸುತ್ತಮುತ್ತ ದೇವತೆಗಳು, ಮುನಿಗಳು! ಅವನೋ ಪ್ರತ್ಯಕ್ಷವಾಗಿ ಗೋಪಿಯರೊಡನೆ ಚೆಲ್ಲಾಟವಾಡಿದವ, ಗೋವಳರ ಎಂಜಲುಂಡವ. ಅವನಿಗೆ ಉಣ್ಣುವುದರಲ್ಲಾಗಲಿ ರತಿಕ್ರೀಡೆಯಲ್ಲಾಗಲಿ ಜಾತಿಯ ಗೊಡವೆಯೆ ಇಲ್ಲ! ಅವನೇನು ರಾಜಕುಮಾರನೆ? ಮುನಿಕುಮಾರನೆ? ಈ ವಸುದೇವನೂ ತಾನು ಕ್ಷತ್ರಿಯನಾಗಿದ್ದೂ ವೈಶ್ಯನಾದ ನಂದಗೋಪನ ಮನೆಯಲ್ಲಿ ಊಟ ಮಾಡುತ್ತಾನೆ! ದುರಾತ್ಮನಾದ ಕೃಷ್ಣ ಸಣ್ಣ ಶಿಶುವಾಗಿದ್ದಾಗಲೆ ಸ್ತ್ರೀಹತ್ಯೆ ಮಾಡಿದವ. ಕುಬ್ಜೆ ಅವನನ್ನು

ಕೂಡಿದ್ದರಿಂದ ಸತ್ತೇ ಹೋದಳು. ಕೇವಲ ಬಟ್ಟೆಗಾಗಿ ಜಗಳವಾಡಿ ಒಬ್ಬ ಅಗಸನನ್ನು ಕೊಂದ ಈತ! ಧರ್ಮಿಷ್ಠನಾದ ಉತ್ತಮ ರಾಜನಾಗಿದ್ದ ಕಂಸನನ್ನು ಮಧುರೆಯಲ್ಲಿ ಕೊಂದು ಬ್ರಹ್ಮಹತ್ಯೆಗೆ ಸಮಾನವಾದ ಪಾಪ ಕಟ್ಟಿಕೊಂಡಿರುವುದರಲ್ಲಿ ಸಂಶಯವಿಲ್ಲ.' ಸಾಲ್ವನೂ ಕೃಷ್ಣನನ್ನು ಹಳಿದ: 'ರುಕ್ಮಿ ಹೇಳಿದುದರಲ್ಲಿ ಅಸತ್ಯವೇನಿದೆ? ನಂದನ ಮನೆಯಲ್ಲಿ ದನಮೇಸುವವ ರುಕ್ಮಿಣಿಯ ಕೈಹಿಡಿಯುವುದೆಂದರೇನು?' ಶಿಶುಪಾಲನೂ ಉದ್ಗಾರ ಮಾಡಿದ -

'ಆಹಾ! ಏನಾಶ್ಚರ್ಯ! ಈ ಬ್ರಹ್ಮಾದಿ ದೇವತೆಗಳೂ ಮುನಿಗಳೂ ಬ್ರಹ್ಮಪುತ್ರರೂ ಸಾಮಾನ್ಯ ಮಾನವನಾದ ಕೃಷ್ಣನ ಮಾತು ಕೇಳಿ ಬಂದುಬಿಟ್ಟರು!' ದಂತವಕ್ರನೂ ಅದಕ್ಕೆ ದನಿಗೂಡಿಸಿದ - 'ನಂದನ ಮಗನ ಮಾತಿಗೆ ವಿಧೇಯರಾಗಿ ಮುನಿಗಳು ದೇವತೆಗಳು ಮತ್ತು ಬ್ರಹ್ಮಪುತ್ರರು ಜೊತೆಯಲ್ಲಿ ಹೇಗೆ ಬಂದರು?' ಈ ಮಾತುಗಳನ್ನು ಕೇಳಿ ದೇವತೆಗಳು ಮುನಿಗಳು ರಾಜರು ಬಲರಾಮಾದಿ ಯಾದವರೆಲ್ಲರಿಗೂ ಕೋಪ ಬಂದಿತು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರುಕ್ಮಿಣೀ ವಿವಾಹದಲ್ಲಿ ನೂರ ಆರನೆ ಅಧ್ಯಾಯ ಮುಗಿಯಿತು.*



## ಭೀಷ್ಮಕ ಕೃಷ್ಣನನ್ನು ಸ್ತುತಿಸಿದ್ದು

**ಅಧ್ಯಾಯ - ೧೦೭**

**ಶ್ರೀನಾರಾಯಣ ಮುನಿ:-** 'ಮಹಾಬಲಿಷ್ಠನಾದ ಬಲರಾಮ ಕೋಪಗೊಂಡು ಹಲಾಯುಧದಿಂದ ರುಕ್ಮಿಯ ರಥವನ್ನು ಮುರಿದ. ಕುದುರೆಗಳನ್ನೂ ಸಾರಥಿಯನ್ನೂ ಕೊಂದ. ನೆಲದ ಮೇಲೆ ನಿಂತಿದ್ದ ರುಕ್ಮಿಯ ಮೇಲೇರಿ ಹೋದ. ರುಕ್ಮಿ ಬಲರಾಮನನ್ನು ಕಟ್ಟಲು ನಾಗಾಸ್ತ್ರವನ್ನು ಪ್ರಯೋಗಿಸಿದ. ಬಲರಾಮ ಅದನ್ನು ಗರುಡಾಸ್ತ್ರದಿಂದ ಹಿಮ್ಮೆಟ್ಟಿಸಿದ. ರುಕ್ಮಿ ಕೋಪಗೊಂಡು ನೂರಾರು ಸೂರ್ಯರಂತೆ ಬೆಳಗುತ್ತ ಶತ್ರುಗಳನ್ನು ಮರ್ದಿಸುವ ಅಮೋಘವಾದ ಪಾಶುಪತಾಸ್ತ್ರವನ್ನೆತ್ತಿಕೊಂಡ. ಆದರೆ ಅಷ್ಟರಲ್ಲಿ ಬಲರಾಮ ಜೃಂಭಣಾಸ್ತ್ರದಿಂದ ರುಕ್ಮಿಯನ್ನು ನೆಲದ ಮೇಲೆ ಮೋಟುಮರದಂತೆ ಮೈಮರೆತು ನಿಲ್ಲುವಂತೆ ಮಾಡಿದ. ಇದನ್ನು ನೋಡಿ ಸಾಲ್ವ ಬಾಣಗಳನ್ನೆಸೆದ. ಶೈಲವೃಷ್ಟಿ, ಶಿಲಾವೃಷ್ಟಿ, ಜಲವೃಷ್ಟಿ, ಉರಿವ ಬೆಂಕಿ ಕೆಂಡಗಳವೃಷ್ಟಿ, ಬಾಣಗಳ ವೃಷ್ಟಿಗಳನ್ನು ಮಾಡಿದ. ಬಲರಾಮ ಅವೆಲ್ಲವನ್ನೂ ಪ್ರತ್ಯಸ್ತ್ರಗಳ ಬಲದಿಂದ ತಡೆದು ಹಲಾಯುಧದಿಂದ ಅವನ ರಥವನ್ನು ಪುಡಿಮಾಡಿದ. ಕುದುರೆಗಳನ್ನೂ ಸಾರಥಿಯನ್ನೂ ಕೊಂದ. ಅವನನ್ನೂ ಕೊಲ್ಲಲು ಹೊರಟಾಗ ಅಶರೀರವಾಣಿ ಕೇಳಿಸಿತು- 'ಬಲರಾಮ, ಸಾಲ್ವನನ್ನು ಬಿಟ್ಟುಬಿಡು. ಅವನನ್ನು ಮುಂದೆ ಕೃಷ್ಣ ಕೊಲ್ಲುತ್ತಾನೆ. ಈ ಅಲ್ಪನ ಮುಂದೆ ನಿನ್ನ ಪೌರುಷವನ್ನೇಕೆ ತೋರುವೆ? ಮೊರದಲ್ಲಿ ಸಾಸಿವೆ ಕಾಳಿನಂತೆ, ಫಣದಲ್ಲಿ ಬ್ರಹ್ಮಾಂಡವನ್ನೆ ಅನಾಯಾಸವಾಗಿ ಹೊರುವವ ನೀನು!'

ಇದನ್ನು ಕೇಳಿ ಬಲರಾಮ ನೇಗಿಲಿನಿಂದ ಅವನ ತಲೆಗೆ ಒಂದು ಏಟು ಹಾಕಿದ. ಆತ ಅದನ್ನು ಸಹಿಸದೆ ವೇದನೆಯಿಂದ ನೆಲದ ಮೇಲೊರಗಿದ. ಸಾಲ್ವ ಈ ರೀತಿ ಬಿದ್ದುದನ್ನು ಕಂಡು ಶಿಶುಪಾಲ ಬಂದು ಬಾಣಗಳ ಮಳೆಗರೆದ. ಬಲದೇವ ಅವನ ರಥವನ್ನು ನೇಗಿಲಿನಿಂದ ಪುಡಿ ಮಾಡಿದ. ಅವನ ಬಾಣಗಳನ್ನೂ ತನ್ನ ಅರ್ಧ ಚಂದ್ರಾಕಾರದ ಬಾಣಗಳಿಂದ ತಡೆಗಟ್ಟಿದ. ಅವನನ್ನು ಕೊಲ್ಲಲು ಮುನ್ನುಗ್ಗಿದ. ಆಗ ಶಂಕರ ಪ್ರತ್ಯಕ್ಷನಾಗಿ ಬಂದು ತಡೆದು ಹೇಳಿದ. 'ಬಲರಾಮ, ಇವನನ್ನೂ ಬಿಟ್ಟುಬಿಡು. ಈತ ಕೃಷ್ಣನ ಸೇವಕವರ್ಗಕ್ಕೆ. ಸೇರಿದವ ಕೃಷ್ಣನೆ ಕೊಲ್ಲುತ್ತಾನೆ.' ದಂತವಕ್ರ ಯುದ್ಧ ಮಾಡಲು ಬಂದು ನಿಂತೊಡನೆ ಬಲರಾಮ ನೇಗಿಲಿನಿಂದ ಹೊಡೆದು ಅವನ ಹಲ್ಲು ಮುರಿದ. ಎಲ್ಲರೂ ನೋಡಿ ನಕ್ಕರು.

ಬಲರಾಮನ ಪರಾಕ್ರಮವನ್ನು ಕಂಡು ಎಲ್ಲ ವಿರೋಧಿಗಳೂ ಪಲಾಯನ ಗೈದರು. ಯಾದವರೆಲ್ಲರೂ ಕುಂಡಿನಪುರವನ್ನು ಪ್ರವೇಶಿಸಿದರು. ಆಗ ಮಹಾಮುನಿ ಶತಾನಂದ ಕೋಟಿ ಶಿಷ್ಯರೊಡನೆ ಬಂದು ಕೃಷ್ಣನನ್ನು ಇದಿರುಗೊಂಡು ಪುರಪ್ರವೇಶ ಮಾಡಿಸಿದ. ನೂರು ದ್ವಾರಗಳಿಂದ ಕೂಡಿದ್ದು ಶತ್ರುಗಳಿಗೆ ಅಗಮ್ಯವೂ ಮಿತ್ರರಿಗೆ ಸುಗಮವೂ ಆದ ಆ ನಗರವನ್ನು ಎಲ್ಲರೂ ಪ್ರವೇಶಿಸಿದರು. ವಧು ರುಕ್ಮಿಣೀದೇವಿಯ ವರನಾದ ಶ್ರೀಕೃಷ್ಣನನ್ನು ಕಾಣಲು ದೇವಕನ್ಯೆಯರು, ನಾಗಕನ್ಯೆಯರು, ರಾಜಕನ್ಯೆಯರು, ಮುನಿಕನ್ಯೆಯರು ಎಲ್ಲರೂ ನಗುನಗುತ್ತ ಬಂದರು. ಎವೆಯಿಕ್ಕದೆ ನೋಡಿದರು, ಮಣಿಮಯವಾದ ರಥದ ಮೇಲೆ ನಿಂತ ಶ್ರೀಕೃಷ್ಣನನ್ನು. ನವಮೇಘಶ್ಯಾಮ, ಪೀತಾಂಬರ ಉಟ್ಟಿದ್ದಾನೆ. ಮೈ ಎಲ್ಲ ಶ್ರೀ ಗಂಧದಲೇಪ. ಕೊರಳಲ್ಲಿ ವನಮಾಲೆ, ರತ್ನಮಯವಾದ ಭುಜಕೀರ್ತಿ ಬಳೆ ರತ್ನಮಾಲೆ ಕರ್ಣಕುಂಡಲ ಕಾಲುಕಡಗಗಳನ್ನು ತೊಟ್ಟು ಮೋಹಕವಾದ ಮುಗುಳು ನಗು ನಗುತ್ತ ಮುರಲಿಯನ್ನು ಹಿಡಿದು ರತ್ನಕನ್ನಡಿಯನ್ನು ನೋಡುತ್ತ ನಿಂತ ಶರತ್ಕಾಲದ ಕಮಲದಂಥ ಕಣ್ಣು ಶರತ್ಕಾಲದ ಚಂದ್ರನಂಥ ಮುಖ ಉಳ್ಳ ಕೋಟಿ ಮನ್ಮಥರ ಲಾವಣ್ಯದಿಂದ ಕೂಡಿದ ಸತ್ಯನಿತ್ಯ ನಾಶರಹಿತ ಬ್ರಹ್ಮಾದಿವಂದ್ಯ ಪ್ರಕೃತಿಗೆ ಅತೀತ ಯೋಗಿಗಳ ಧ್ಯಾನಕ್ಕೂ ನಿಲುಕದ ಪರಮಾತ್ಮ ಆತ. ಅವನನ್ನು ನೋಡಿ ಸ್ತ್ರೀಯರು ಮೈ ಮರೆತರು. ರುಕ್ಮಿಣಿಯ ಬಾಳು ಸಾರ್ಥಕವಾಗುವುದೆಂದರು. ಭೀಷ್ಮಕನ ರಾಣಿ ಸುಭದ್ರೆಯೂ ಅಳಿಯನನ್ನು ಎವೆಯಿಕ್ಕದೆ ನೋಡಿದಳು. ಅವಳ ಕಣ್ಣು ಮುಖಗಳು ಆನಂದದಿಂದ ಅರಳಿದುವು. ರಾಜನೂ ಅರಳಿದ ಮೊಗದಿಂದ ಮಂತ್ರಿ ಪುರೋಹಿತರೊಡನೆ ಬಂದು ಕೃಷ್ಣನನ್ನು ಇದಿರುಗೊಂಡ. ದೇವತೆಗಳಿಗೂ ಮುನಿಗಳಿಗೂ ರಾಜರಿಗೂ ನಮಿಸಿ ಅವರಿಗೆ ಯೋಗ್ಯವಾದ ಸವಿಯಾದ ಭಕ್ಷ ಭೋಜ್ಯಗಳಿಂದ ತುಂಬಿದ ಬಿಡಾರಗಳನ್ನು ಕೊಟ್ಟ. ಸೇವಕರನ್ನು ಕರೆದು ಎಲ್ಲರಿಗೂ ಬೇಕಾದುದನ್ನು ಕೊಡಿರಿ ಕೊಡಿರಿ ಎನ್ನುತ್ತ ಹಗಲು ರಾತ್ರಿ ಎಲ್ಲರನ್ನೂ ಸತ್ಕರಿಸಿದ.

ದೇವತೆಗಳ ಮತ್ತು ಬಂಧುಗಳ ಜೊತೆಗೆ ವಸುದೇವ ರಾತ್ರಿಯನ್ನು ಸುಖವಾಗಿ ಕಳೆದು ಬೆಳಿಗ್ಗೆ ಸ್ನಾನ ಸಂಧ್ಯಾದಿಗಳನ್ನು ತೀರಿಸಿ ಶುಭ್ರವಸ್ತ್ರಗಳನ್ನು ಧರಿಸಿದ. ವೇದ ಮಂತ್ರಗಳಿಂದ ಕೃಷ್ಣನಿಗೆ ಮಂಗಳಕರ ಅಭ್ಯುದಯ ಕರ್ಮ ಮಾಡಿಸಿದ. ಎಲ್ಲ

ಮಾತೃಕೆಯರನ್ನೂ ದೇವತೆಗಳನ್ನೂ ಪೂಜಿಸಿ ವಸುಧಾರೆ ನೀಡಿ ವೃದ್ಧಿ ಶ್ರಾದ್ಧಾದಿಗಳನ್ನು ಮಾಡಿ ಬ್ರಾಹ್ಮಣರಿಗೂ ದೇವತೆಗಳಿಗೂ ಬಂಧುಗಳಿಗೂ ಭೋಜನ ಮಾಡಿಸಿದ. ಮಂಗಳ ವಾದ್ಯ ಮೊಳಗಿಸಿದ. ಕೃಷ್ಣನನ್ನು ಅಲಂಕರಿಸಿ ಪಲ್ಲಕಿಯಲ್ಲಿ ಕೂಡಿಸಿದ. ಇತ್ತ ಭೀಷ್ಮಕರಾಜನೂ ವಿವಾಹಕ್ಕೆ ಸಂಬಂಧಿಸಿದ ಎಲ್ಲ ಮಂಗಳಕಾರ್ಯಗಳನ್ನೂ ಪುರೋಹಿತರಿಂದ ವೇದಮಂತ್ರಪೂರ್ವಕವಾಗಿ ನೆರವೇರಿಸಿದ. ಭಟರಿಗೂ ಬ್ರಾಹ್ಮಣರಿಗೂ ಭಿಕ್ಷುಗಳಿಗೂ ಮಣಿರತ್ನ ಮಾಣಿಕ್ಯ ವಜ್ರಗಳನ್ನೂ ಭಕ್ಷ್ಯ ಭೋಜ್ಯಗಳನ್ನೂ ವಸ್ತ್ರಾಭರಣಗಳನ್ನೂ ಸಂತೋಷದಿಂದ ನೀಡಿದ. ಮಂಗಳವಾದ್ಯಗಳನ್ನು ಮೊಳಗಿಸಿದ. ರಾಜಪತ್ನಿಯರಿಂದ, ಮುನಿಪತ್ನಿಯರಿಂದ ಮದುಮಗಳಿಗೆ ಯಥೋಚಿತ ವಿಧಾನದಿಂದ ಮನೋಹರವಾಗಿ ಅಲಂಕಾರ ಮಾಡಿಸಿದ.

ವಿವಾಹಕ್ಕೆ ಯೋಗ್ಯವಾದ ಶುಭಲಗ್ನ ಬಂದೊದಗಿತು. ಲಗ್ನಾಧಿಪತಿಯುಕ್ತವಾಗಿದ್ದು ಅಶುಭಗ್ರಹರ ದೃಷ್ಟಿ ಇಲ್ಲದೆ ಶುಭಗ್ರಹರ ದೃಷ್ಟಿಯಿಂದ ಕೂಡಿದ, ಶಲಾಕಾದಿ ದುರ್ಯೋಗ ರಹಿತವಾದ ಚಂದ್ರಬಲ ತಾರಾಬಲ ಯುಕ್ತವಾದ ಶುಭ ನಕ್ಷತ್ರದಿಂದಲೂ ಕೂಡಿದ ಶುದ್ಧವಾದ ಲಗ್ನ. ದಾಂಪತ್ಯ ಸುಖಕರವಾದುದು, ತತ್ಕಾಲದಲ್ಲಿ ಮಾತ್ರವಲ್ಲದೆ ಮುಂದೆಯೂ ಸುಖದಾಯಕವಾದುದು. ಇಂಥ ಶುಭಮುಹೂರ್ತದಲ್ಲಿ ಕೃಷ್ಣ ವೇದಘೋಷ ವಾದ್ಯಘೋಷಗಳೊಂದಿಗೆ ದೇವಮುನಿ ಬ್ರಾಹ್ಮಣ ಬಂಧು ಬಾಂಧವ ಸಮೇತನಾಗಿ, ತಂದೆತಾಯಿಗಳು ಗೋಪಾಲಕರು ಭಟ ಜ್ಯೋತಿಷಿ ಸಂಗೀತನಾಟ್ಯ ಪಟುಗಳಾದ ವಿದ್ಯಾಧರಿ ಅಪ್ಸರೆಯರು ಮುಂತಾದವರೊಡನೆ ಭೀಷ್ಮಕನ ಅರಮನೆಯನ್ನು ಪ್ರವೇಶಿಸಿದ.

ವಿವಾಹ ಸಭಾಂಗಣ ಎಲ್ಲರೂ ಕುತೂಹಲದಿಂದ ನೋಡುವಂತೆ ಇದ್ದಿತು. ಸಾವಿರಾರು ಬಾಳೆಕಂಬಗಳಿಂದ ಪಟ್ಟೆಸೂತ್ರಗಳಿಂದ ಪರಿಷ್ಕರಿಸಲ್ಪಟ್ಟಿತ್ತು. ಸಂಪಿಗೆ ಶ್ರೀಗಂಧ ಮಾವುಗಳ ಚಿಗುರುಗಳು ನಾನಾ ಬಗೆಯ ಮಾಲೆಗಳು ಹಳದಿ ಕೆಂಪು ಬಿಳಿಬಣ್ಣಗಳ ಮಂಗಳ ಕಲಶಗಳು ಹಣ್ಣು ಚಿಗುರುಗಳು ದೂರ್ವೆ ಕಸ್ತೂರಿಗಂಧ ಕೇಸರಿಗಳು ಅರಳು ಇವುಗಳಿಂದ ಅಲಂಕರಿಸಲ್ಪಟ್ಟ ರತ್ನವೇದಿಕೆಗಳಲ್ಲಿ ಮುನಿಗಳೂ ಬ್ರಾಹ್ಮಣರೂ ರಾಜರೂ ಕುಳಿತಿದ್ದರು. ಕಸ್ತೂರಿ ಕೇಸರಿ ಗಂಧ. ಪರಿಮಳ ಯುಕ್ತವಾಗಿ ಮಿದುವಾಗಿ ತಣ್ಣನೆ ಬೀಸುವ ಗಾಳಿ, ನಾನಾ ಬಗೆಯ ಧೂಪಗಳು, ಅಲ್ಲಿ ಹರಡಿದ್ದುವು. ಸುತ್ತಲೂ ಗಂಧರ್ವರ ಮಧುರವಾದ ಸಂಗೀತ ಕೇಳಿ ಬರುತ್ತಿತ್ತು. ವಿದ್ಯಾಧರಿಯರ ನರ್ತನವಾಗುತ್ತಿತ್ತು. ಆಕರ್ಷಕವಾದ ಬಣ್ಣಬಣ್ಣದ ಚಿತ್ರಗಳು ಕಂಡು ಬಂದುವು. ನಾನಾ ಬಗೆಯ ಜನರ ಗುಂಪು ನೆರೆದಿತ್ತು. ಗುಪ್ತದ್ವಾರಗಳಿಂದ ಕಿಟಕಿಗಳಿಂದ ಯುವತಿಯರು ನೋಡುತ್ತಿದ್ದರು. ಮಂಗಲ ಕಲಶವನ್ನು ಹಿಡಿದು ನಿಂತಿದ್ದ, ಜ್ಞಾನಿಯಾದ ಪುರೋಹಿತ. ದರ್ಭೆಯನ್ನು ಹಿಡಿದು ದಾನವಸ್ತುಗಳಿಂದೊಡಗೂಡಿ ರಾಜ ನಿಂತಿದ್ದ. ಶ್ರೀಕೃಷ್ಣನೂ ದೇವತೆಗಳೂ ಮುನಿಗಳೂ ರಥದಿಂದಿಳಿದು ಸಭಾಂಗಣ ಪ್ರವೇಶಿಸಿದರು. ರಾಜ ಎಲ್ಲರಿಗೂ ನಮಸ್ಕರಿಸಿ ಆಸನವಿತ್ತು ಸತ್ಕರಿಸಿದ. ಭಕ್ತಿಯಿಂದ ಬೊಗಸೆಗಣ್ಣುಗಳಲ್ಲಿ ಆನಂದ ಬಾಷ್ಪ ಸುರಿಸುತ್ತ ಎಲ್ಲರನ್ನೂ, ವಸುದೇವ ವಾಸುದೇವರನ್ನೂ ಸ್ತುತಿಸಿದ.

'ಇಂದು ನನ್ನ ಜನ್ಮ ಸಫಲವಾಯಿತು, ಬಾಳು ಬಂಗಾರವಾಯಿತು. ಕೋಟಿ ಜನ್ಮಗಳ ಕರ್ಮಗಳು ಸಮೂಲ ನಾಶ ಹೊಂದಿದುವು. ಸಕಲಪ್ರಪಂಚ ಸೃಷ್ಟಿದಾತ, ಸಕಲಸಂಪತ್ ಪ್ರದಾಯಕ, ತಪಸ್ಸುಗಳಿಗೆಲ್ಲ ಫಲದಾತ, ಸ್ವಪ್ನದಲ್ಲಿಯೂ ಕಾಣಲು ಸಿಗದ ಪಾದಕಮಲದವನಾದ ಸೃಷ್ಟಿಕರ್ತಬ್ರಹ್ಮ ನಮ್ಮ ಮನೆಯಂಗಳಕ್ಕೆ ಬಂದಿದ್ದಾನೆ! ಆತ್ಮಾರಾಮರಾಗಿ ಪೂರ್ಣ ತೃಪ್ತಿಯಿಂದಿರುವ ಮಹಾಯೋಗಿಗಳು, ಸಿದ್ಧರು, ದೇವತೆಗಳು, ಮುನಿಗಳು ಕೂಡ ಜಿಜ್ಞಾಸೆಯಿಂದ ಮಂಗಳಕರವಾದ ಪ್ರಶ್ನೆಗಳನ್ನು ಮಾಡಿದಾಗ ಅವರಿಗೆ ತೃಪ್ತಿಯಾಗುವಂತೆ ತತ್ವೋಪದೇಶ ಮಾಡುವವ, ಧ್ಯಾನ ದೃಷ್ಟಿಗೂ ಕಾಣಿಸದವ ಇಂಥ ಶಿವ ನಮ್ಮ ಮನೆಯಂಗಳಕ್ಕೆ ಬಂದಿದ್ದಾನೆ! ಮೃತ್ಯುಂಜಯನಾಗಿ ಸರ್ವೇಶನಾಗಿದ್ದು ನರರ ದೃಷ್ಟಿಗೆ ಅಗೋಚರನಾದವ, ಸಾವಿರ ಫಣಗಳ ತುದಿಯಲ್ಲಿ ಚರಾಚರ ವಿಶ್ವವನ್ನು ಧರಿಸಿದವ, ವೇದಗಳಲ್ಲಿ ಅವನ ಮಹಿಮೆಗೆ ಪಾರವಿಲ್ಲ, ಇಂಥ ಶೇಷ ನಮ್ಮ ಮನೆಯಂಗಳಕ್ಕೆ ಬಂದಿದ್ದಾನೆ! ಸಕಲಾಭೀಷ್ಟದಾಯಕ ಸಕಲಕಾರ್ಯಗಳಲ್ಲಿ ಮೊದಲಿಗೆ ಪೂಜ್ಯ ದೇವಗಣಗಳಲ್ಲಿ ಶ್ರೇಷ್ಠನೆನಿಸಿದ ಗಣೇಶ ನಮ್ಮ ಮನೆಯಂಗಳಕ್ಕೆ ಬಂದಿದ್ದಾನೆ! ವಿಷ್ಣುಭಕ್ತರಾದ ಜ್ಞಾನಿಗಳಾದ ಮುನಿಗಳಲ್ಲಿ ಅಗ್ರಗಣ್ಯರಾದ ಪೂಜ್ಯ ಸನತ್ಕುಮಾರ ನಮ್ಮ ಮನೆಯಂಗಳಕ್ಕೆ ಬಂದಿದ್ದಾನೆ! ಬ್ರಹ್ಮನ ಮಕ್ಕಳು ಮೊಮ್ಮಕ್ಕಳು ಮರಿಮಕ್ಕಳು ಅವರ ವಂಶಜರು ಎಲ್ಲರೂ ಬ್ರಹ್ಮತೇಜಸ್ಸಿನಿಂದ ಜ್ವಲಿಸುವವರು. ಅವರು ಇಂದು ನಮ್ಮ ಮನೆಗೆ ಬಂದಿದ್ದಾರೆ! ನನ್ನ ಮನೆ ಇನ್ನು ಕಲ್ಪದ ಕೊನೆವರೆಗೂ ಪಾವನವಾಗಿರುತ್ತದೆ. ಯಾರ ಪಾದೋದಕದಿಂದ ತೀರ್ಥಗಳು ಶುದ್ಧವಾಗುವುವೋ ಅವರು ಇಂದು ನನ್ನ ಮನೆಯನ್ನು ಪಾವನಗೊಳಿಸಿದರು.

ಪೃಥಿವ್ಯಾಂ ಯಾನಿ ತೀರ್ಥಾನಿ ತಾನಿ ತೀರ್ಥಾನಿ ಸಾಗರೇ ।
ಸಾಗರೇ ಯಾನಿ ತೀರ್ಥಾನಿ ವಿಪ್ರಪಾದೇಷು ತಾನಿ ಚ ॥

ವಿಪ್ರಪಾದೋದಕಕ್ಲಿನ್ನಾ ಯಾವತ್ತಿಷ್ಠತಿ ಮೇದಿನೀ ।
ತಾವತ್ ಪುಷ್ಕರಪತ್ರೇಷು ಪಿಬಂತಿ ಪಿತರೋ ಜಲಂ ॥

ವಿಪ್ರಪಾದೋದಕಂ ಭುಕ್ತ್ವಾ ದತ್ವಾ ವಿಪ್ರಾಯ ದಕ್ಷಿಣಾಂ ।
ಸ್ನಾತಾನಾಂ ಸರ್ವತೀರ್ಥಾನಾಂ ಫಲಮಾಪ್ನೋತಿ ನಿಶ್ಚಿತಂ ॥

ನಿಕೃಂತನಂ ಚ ವಿಪದಾಂ ವ್ಯಾಧಿನಿರ್ಮೂಲಕಾರಣಂ ।
ಸುಖದಂ ಶುಭದಂ ಸಾರಂ ವಿಪ್ರಪಾದೋದಕಂ ನೃಣಾಂ ॥

ಭೂಮಿಯಲ್ಲಿ ಹರಿವ ತೀರ್ಥಗಳೆಲ್ಲ ಸಾಗರದಲ್ಲಿ ಸೇರುತ್ತವೆ. ಸಾಗರದಲ್ಲಿರುವ ತೀರ್ಥಗಳೆಲ್ಲ ವಿಪ್ರಪಾದಗಳಲ್ಲಿರುತ್ತವೆ. ವಿಪ್ರಪಾದೋದಕದಿಂದ ಮನೆಯಂಗಳ ಒದ್ದೆಯಾಗಿರುವಷ್ಟು ಕಾಲ ಪಿತೃಗಳು ತಾವರೆ ಎಲೆಯಲ್ಲಿ ಜಲಪಾನ ಮಾಡುವರು. ವಿಪ್ರಪಾದೋದಕವನ್ನು ಕುಡಿದರೆ, ವಿಪ್ರನಿಗೆ ದಕ್ಷಿಣೆ ನೀಡಿದರೆ ಸಕಲ ತೀರ್ಥಸ್ನಾನದ ಫಲ ಬರುವುದು ನಿಶ್ಚಿತ. ಆಪತ್ತುಗಳಿಗೆ ಪರಿಹಾರಕ, ವ್ಯಾಧಿಗಳಿಗೆ ಸಮೂಲ ನಾಶಕ, ಸುಖದಾಯಕ, ಮಂಗಳಕರ, ಮಾನವರಿಗೆ ವಿಪ್ರಪಾದೋದಕ.

**ನ ಗಂಗಾಸದೃಶಂ ತೀರ್ಥಂ ನ ದೇವೋ ಮಾಧವಾತ್ ಪರಃ।**
**ಸನತ್ಕುಮಾರಾದ್ ಭಕ್ತೋ ನ ನ ಹಿ ಕಲ್ಪತರೋಸ್ತರುಃ॥**
**ನ ಪುಷ್ಪಂ ಪಾರಿಜಾತಾಚ್ಚ ನ ವ್ರತಂ ಹರಿವಾಸರಾತ್।**
**ಪೂಜನೇನ ಹಿ ಪೂಜ್ಯಂ ಚ ನ ಪತ್ರಂ ತುಲಸೀಪರಂ॥**

ಗಂಗೆಗೆ ಸಮನಾದ ತೀರ್ಥವಿಲ್ಲ. ಮಾಧವನಿಗಿಂತ ಹೆಚ್ಚಿನ ದೇವನಿಲ್ಲ. ಸನತ್ಕುಮಾರನನ್ನು ಮೀರಿಸುವ ಭಕ್ತನಿಲ್ಲ. ಕಲ್ಪವೃಕ್ಷಕ್ಕಿಂತ ಶ್ರೇಷ್ಠ ವೃಕ್ಷವಿಲ್ಲ. ಪಾರಿಜಾತಕ್ಕಿಂತ ಹೆಚ್ಚಿನ ಪುಷ್ಪವಿಲ್ಲ. ಹರಿವಾಸರಕ್ಕಿಂತ ಉತ್ತಮ ವ್ರತವಿಲ್ಲ. ಪೂಜೆಯಿಂದ ಪೂಜ್ಯವೆನಿಸಿದ ಪತ್ರ ತುಲಸಿಗಿಂತ ಶ್ರೇಷ್ಠ ಇನ್ನೊಂದಿಲ್ಲ.

ನ ದೇವೀ ಪ್ರಕೃತೇಶ್ಚಾಪಿ ನಾಧಾರಃ ಪವನಾತ್ ಪರಃ।
ನ ಹಿ ಸ್ಥೂಲೋ ಮಹಾವಿಷ್ಣೋರ್ನ ಸೂಕ್ಷ್ಮಂ ಪರಮಾಣುತಃ॥
ನ ಬ್ರಾಹ್ಮಣಾತ್ ಪರಃ ಪೂತೋ ನಾಶ್ರಮಶ್ಚ ಪರಃ ಪ್ರಭುಃ।
ನ ದೇವೋ ನ ಪರಃ ಕೋಽಪಿ ಇತ್ಯಾಹ ಕಮಲೋದ್ಭವಃ॥

ಲಕ್ಷ್ಮೀಗಿಂತ ಶ್ರೇಷ್ಠಳಾದ ದೇವಿ ಇಲ್ಲ. ವಾಯುವಿಗಿಂತ ಹೆಚ್ಚಿನ ಆಧಾರವಿಲ್ಲ. ಮಹಾವಿಷ್ಣುವಿಗಿಂತ ದೊಡ್ಡ ವಸ್ತುವಿಲ್ಲ. ಪರಮಾಣುವಿಗಿಂತ ಸೂಕ್ಷ್ಮವಸ್ತು ಬೇರೆ ಇಲ್ಲ. ಬ್ರಾಹ್ಮಣನಿಗಿಂತ ಹೆಚ್ಚು ಪವಿತ್ರ ಇನ್ನೊಬ್ಬನಿಲ್ಲ. ಗೃಹಸ್ಥಾಶ್ರಮಕ್ಕಿಂತ ಶ್ರೇಷ್ಠ ಆಶ್ರಮವಿಲ್ಲ. ಹರಿಗಿಂತ ದೊಡ್ಡ ದೇವತೆ ಇಲ್ಲ, ಶ್ರೇಷ್ಠನೂ ಇಲ್ಲ ಎಂದು ಬ್ರಹ್ಮನ ಉಪದೇಶವಿದೆ. ಬ್ರಹ್ಮ ವಿಷ್ಣು ಶಿವಾದಿಗಳಿಗಿಂತಲೂ ಲಕ್ಷ್ಮೀಗಿಂತಲೂ ಶ್ರೇಷ್ಠನಾದವ, ಯೋಗಿಗಳಿಗೂ ಧ್ಯಾನಕ್ಕೆ ಸಿಲುಕದವ, ಆರಾಧನೆಗೆ ಒಲಿಯದವ, ನಿರ್ಗುಣ, ನಿರಾಕಾರ, ಭಕ್ತಾನುಗ್ರಹಕ್ಕಾಗಿ ಅವತರಿಸಿದವ ಶ್ರೀಕೃಷ್ಣ. ಪ್ರತ್ಯಕ್ಷವಾಗಿ ನನ್ನ ಮನೆಗೆ ಬಂದಿದ್ದಾನೆ. ಅವನ ಪಾದಕಮಲ ಬ್ರಹ್ಮ ಶಿವ ಶೇಷ ಕುಬೇರ ಗಣೇಶ ಸೂರ್ಯರಿಗೂ ಧ್ಯಾನಗೋಚರವಾಗದು. ಸರ್ವಾಂತರಾತ್ಮ ಸರ್ವಸಾಕ್ಷಿ, ನಿರ್ಲಿಪ್ತ, ಕರ್ಮನಿಷ್ಠರ ಕರ್ಮಗಳಿಗೆ ಮೂಲಕಾರಣನಾದವನು ನೀನು, ಕೃಷ್ಣ! ಕೆಲವರು ನಿನ್ನನ್ನು ಜ್ಯೋತಿಃಸ್ವರೂಪನೆನ್ನುತ್ತಾರೆ. ಕೆಲವರು ಜೀವರಿಗೆ ಬಿಂಬರೂಪನಾದ ಪರಮಾತ್ಮನೆಂದು ಹೇಳುತ್ತಾರೆ. ಕೆಲವು ಅಜ್ಞಾನಿಗಳು ಭ್ರಾಂತಿಯಿಂದ ನಿನ್ನನ್ನು ಪ್ರಕೃತಿಯ ಗುಣಗಳಿಂದ ಬದ್ಧನಾದ ಜೀವನೆಂದು ಹೇಳುತ್ತಾರೆ. ಕೆಲವರು ಜ್ಞಾನಿಗಳು ಸೂಕ್ಷ್ಮ ಬುದ್ಧಿಯಿಂದ ನೋಡಿ ನಿನ್ನನ್ನು ನಿತ್ಯ ಶರೀರಿ ಎಂದು ಹೇಳುತ್ತಾರೆ. ಈಶ್ವರ ಒಳಗೆ ಜ್ಯೋತಿಃ ಸ್ವರೂಪನಾಗಿದ್ದು ಹೊರಗೆ ದೇಹರೂಪನೂ ಆಗಿರದಿದ್ದರೆ ಸಾಕಾರವಾದ ತೇಜಸ್ಸು ಎಲ್ಲಿಂದ ಬಂದೀತು?'

ಹೀಗೆ ಭೀಷ್ಮಕ ಕೃಷ್ಣನನ್ನು ಸ್ತುತಿಸಿ ಹೃದಯದಲ್ಲಿ ವಿಷ್ಣುಸ್ಮರಣಪೂರ್ವಕವಾಗಿ ಲಕ್ಷ್ಮಿ ಸೇವಿಸುವ ಆ ಕೃಷ್ಣನ ಪಾದಕಮಲಕ್ಕೆ ಆನಂದದಿಂದ ಪಾದ್ಯವನ್ನಿತ್ತ. ದೂರ್ವೆ ಪುಷ್ಪಜಲಗಳಿಂದ ಕೂಡಿದ ಅರ್ಘ್ಯವನ್ನಿತ್ತ. ಮಧುಪರ್ಕವನ್ನೂ ಸರ್ವಾಂಗಗಳಿಗೆ ಪರಿಮಳ ಯುಕ್ತವಾದ ಗಂಧವನ್ನೂ ಅರ್ಪಿಸಿದ. ಇಂದ್ರನು ತಂದುಕೊಟ್ಟ ಪಾರಿಜಾತದ ಮಾಲೆಯನ್ನು ಕೊರಳಲ್ಲಿಟ್ಟ. ಕುಬೇರ ಕೊಟ್ಟ ಅಮೂಲ್ಯ ರತ್ನಾಭರಣಗಳನ್ನು

ತೊಡಿಸಿದ. ಅಗ್ನಿ ಕೊಟ್ಟ ಶುಭ್ರವಾದ ಜೋಡಿವಸ್ತ್ರವನ್ನು ಕೊಟ್ಟ. ವಿಶ್ವಕರ್ಮನಿರ್ಮಿತವಾದ ಉಜ್ವಲವಾದ ರತ್ನಕಿರೀಟವನ್ನು ತಲೆಯಲ್ಲಿಟ್ಟ. ಧೂಪ, ರತ್ನದೀಪ, ನೈವೇದ್ಯ ನಾನಾ ಪ್ರಕಾರದ ಹೂಗಳು, ರತ್ನಮಯ ಸಿಂಹಾಸನಗಳನ್ನೂ ಸಮರ್ಪಿಸಿದ. ಏಳು ತೀರ್ಥಗಳ ಜಲವನ್ನು ಪುನರಾಚಮನಕ್ಕೆ ನೀಡಿದ. ಪಚ್ಚಕರ್ಪೂರ ಮುಂತಾದ ಸುವಾಸನೆಯುಕ್ತವಾದ ತಾಂಬೂಲವಿತ್ತ. ಒಳ್ಳೆಯ ಹಾಸಿಗೆಯನ್ನೂ ಕುಡಿಯಲು ಸುವಾಸನೆಯ ನೀರನ್ನೂ ನೀಡಿದ. ಕೊನೆಯಲ್ಲಿ ಕೈ ಮುಗಿದು ಪುಷ್ಪಾಂಜಲಿಯನ್ನೂ ಸಮರ್ಪಿಸಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣ ನಾರದ ಸಂವಾದದಲ್ಲಿ ರುಕ್ಮಿಣೀ ವಿವಾಹದಲ್ಲಿ ನೂರವಳನೆ ಅಧ್ಯಾಯ ಮುಗಿಯಿತು*



## ಭೀಷ್ಮಕನಿಂದ ಕನ್ಯಾದಾನ

**ಅಧ್ಯಾಯ - ೧೦೮**

**ಶ್ರೀನಾರಾಯಣ ಮುನಿ:-** ಮಹಾಲಕ್ಷ್ಮೀ ಸ್ವರೂಪಳಾದ ದೇವಿ ರುಕ್ಮಿಣಿ ದೇವತೆಗಳು ಮತ್ತು ಮುನಿಗಳೊಂದಿಗೆ ಸಭೆಯ ಮಧ್ಯಕ್ಕೆ ಬಂದಳು. ಶುಭ್ರವಾದ ಸೀರೆ ಉಟ್ಟು ರತ್ನಾಭರಣ ಭೂಷಿತಳಾಗಿ ಸೊಂಪಾದ ಜಡೆಗಳನ್ನು ಹೊತ್ತು ಮೈಯೆಲ್ಲ ಗಂಧ ಲೇಪಿಸಿಕೊಂಡು ಹಣೆಗೆ ಕಸ್ತೂರಿ ಬೊಟ್ಟು ಇಟ್ಟುಕೊಂಡು ರತ್ನಕನ್ನಡಿ ನೋಡಿ ಮಂದಹಾಸ ಬೀರುತ್ತ ಪುಟಕ್ಕಿಟ್ಟ ಚಿನ್ನದಂತಹ ಮೈಕಾಂತಿಯಿಂದ ಹೊಳೆಯುತ್ತ ಬಂದಳು. ಮಾಲತಿಹೂವಿನ ಮಾಲೆಯಿಂದ ಅಲಂಕೃತಳಾಗಿದ್ದ ದೇವಿಯನ್ನು ಏಳು ಮಂದಿ ರಾಜಕುಮಾರರು ಕರೆತಂದು ರತ್ನಸಿಂಹಾಸನದಲ್ಲಿ ಕೂಡಿಸಿದರು. ದೇವತೆಗಳು ಮುನಿಗಳು ಸಿದ್ಧರು ರಾಜರು ಎಲ್ಲರೂ ದೇವಿಯನ್ನು ಕಣ್ತುಂಬ ನೋಡಿದರು. ದೇವಿ ಪತಿಗೆ ಏಳುಪ್ರದಕ್ಷಿಣೆ ಮಾಡಿ ಗಂಧದ ಚಿಗುರುಗಳಿಂದ ಸುವಾಸನೆಯ ತಣ್ಣೀರನ್ನು ಅಭಿಷೇಕಗೈದಳು. ಕೃಷ್ಣನೂ ದೇವಿಗೆ ಅಭಿಷೇಕ ಮಾಡಿದ ಬಳಿಕ ಶುಭ ಮುಹೂರ್ತದಲ್ಲಿ ಸತಿಪತಿಗಳು ಪರಸ್ಪರ ನಿರೀಕ್ಷಣಗೈದರು. ದೇವಿ ನಾಚಿ ತಲೆ ತಗ್ಗಿಸಿಕೊಂಡು ಶರೀರ ಕಾಂತಿಯಿಂದ ಬೆಳಗುತ್ತ ತಂದೆಯ ತೊಡೆಯ ಮೇಲೆ ಕುಳಿತಳು. ತಂದೆ ಭೀಷ್ಮಕ ವೇದಮಂತ್ರಪುರಃಸರವಾಗಿ ಕನ್ಯಾದಾನ ವಿಧಿಯಿಂದ ದೇವಿಯನ್ನು ಶ್ರೀಕೃಷ್ಣನಿಗೆ ನೀಡಿದ. ವಸುದೇವನ ಅನುಮತಿ ಪಡೆದು, 'ಸ್ವಸ್ತಿ' ಎನ್ನುತ್ತ, ಶಿವ ಪಾರ್ವತಿಯನ್ನು ಪರಿಗ್ರಹಿಸಿದಂತೆ ರುಕ್ಮಿಣಿಯನ್ನು ಪರಿಗ್ರಹಿಸಿದ, ಶ್ರೀಕೃಷ್ಣ. ಐದು ಲಕ್ಷ ಸುವರ್ಣಗಳನ್ನು ಪರಿಪೂರ್ಣನಾದ ಕೃಷ್ಣನಿಗೆ ದಕ್ಷಿಣೆಯಾಗಿ ಇತ್ತ, ಭೀಷ್ಮಕ. ವಿವಾಹ ಮಂಗಳ ಕಾರ್ಯ ಮುಗಿಯಿತು. ಮಗಳನ್ನು ಭೀಷ್ಮಕ ಎದೆಗೆ ಒತ್ತಿಕೊಂಡು ಅತ್ತುಬಿಟ್ಟ. ಎರಡೂ ಕಣ್ಣುಗಳಿಂದ ಹರಿವ ಬಾಷ್ಪಧಾರೆಯಿಂದ ದೇವಿಯನ್ನು ತೋಯಿಸಿ ಅನುನಯದ ಮಾತುಗಳನ್ನಾಡುತ್ತ ಅವಳನ್ನು ಕೃಷ್ಣನಿಗೆ ಒಪ್ಪಿಸಿ ಕೊಟ್ಟ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರುಕ್ಮಿಣೀವಿವಾಹದಲ್ಲಿ ನೂರೆಂಟನೆ ಅಧ್ಯಾಯ ಮುಗಿಯಿತು.*



## ರುಕ್ಮಿಣೀ ಕೃಷ್ಣರ ದ್ವಾರಕಾಪ್ರವೇಶ

ಅಧ್ಯಾಯ - ೧೧೯

**ಶ್ರೀನಾರಾಯಣ ಮುನಿ:-** 'ರಾಣಿ ಸುಭದ್ರೆ ಪತಿ ಪುತ್ರವತಿಯರಾದ ಸಾಧ್ವಿಯರಿಂದೊಡಗೂಡಿ ಉರುಟಾಣಿ ಮುಂತಾದ ಮಂಗಳಕಾರ್ಯ ಮಾಡಿಸಿ ದಂಪತಿಗಳನ್ನು ರತ್ನಮಂದಿರದೊಳಗೆ ಪ್ರವೇಶ ಮಾಡಿಸಿದಳು. ನಾನಾ ವಿಚಿತ್ರ ಚಿತ್ರಗಳಿಂದ ವಜ್ರ ಮುತ್ತು ಮಾಣಿಕ್ಯ ರತ್ನದೀಪಗಳಿಂದ ಕನ್ನಡಿಗಳಿಂದ ಶೋಭಿಸುತ್ತಿದ್ದ ಆ ಮಂದಿರದಲ್ಲಿ ಕೃಷ್ಣ ದುರ್ಗೆ ಸರಸ್ವತಿ ಸಾವಿತ್ರಿ ರತಿ ರೋಹಿಣಿ ದೇವಪತ್ನಿಯರು ರಾಜಪತ್ನಿಯರು ಮುನಿಪತ್ನಿಯರು ಮುಂತಾದವರನ್ನು ಕಂಡ. ಅವರು ಕೃಷ್ಣನನ್ನು ಕಂಡೊಂಡನೆ ರತ್ನಸಿಂಹಾಸನಗಳಿಂದ ಎದ್ದು ನಿಂತು ಆದರದಿಂದ ಒಂದು ರತ್ನಸಿಂಹಾಸನದಲ್ಲಿ ಕೂಡಿಸಿದರು. ಕೈ ಮುಗಿದು ಎಲ್ಲರೂ ಒಬ್ಬೊಬ್ಬರಾಗಿ ಸ್ತುತಿಸಿದರು. ಬಳಿಕ ರಾಣಿ ದಂಪತಿಗಳಿಗೆ ಭೋಜನ ಮಾಡಿಸಿ ಕರ್ಪೂರ ಸಹಿತ ತಾಂಬೂಲವನ್ನೂ ಸುವಾಸನೆಯ ಜಲವನ್ನೂ ಇತ್ತಳು. ದುರ್ಗೆ ಕೃಷ್ಣನಿಗೆ ಒಂದು ಮಂಗಲ ಪತ್ರಿಕೆಯನ್ನಿತ್ತಳು. ಎಲ್ಲ ದೇವಿಯರ ಅಭಿಮತದಂತೆ 'ಕೃಷ್ಣ, ನೀನು ಈ ಪತ್ರವನ್ನು ಓದಿ ಹೇಳು' ಎಂದಳು. ಕೃಷ್ಣ ಓದಿದ, 'ಲಕ್ಷ್ಮೀ ಸರಸ್ವತಿ ದುರ್ಗೆ ಸಾವಿತ್ರಿ ರಾಧೆ ತುಲಸಿ ಪೃಥಿವಿ ಗಂಗೆ ಅರುಂಧತಿ ಯಮುನೆ ಅದಿತಿ ಶತರೂಪೆ ಸೀತೆ ದೇವಹೂತಿ ಮೇನಕೆ ಈ ಎಲ್ಲ ದೇವಿಯರು ದಂಪತಿಗಳಿಗೆ ಮಂಗಳಾಶೀರ್ವಾದ ಮಾಡಲಿ.' ಇದನ್ನು ಕೇಳಿ ಎಲ್ಲ ದೇವಿಯರೂ ನಕ್ಕರು. ಬಳಿಕ ಅವರೆಲ್ಲರೂ ಒಬ್ಬೊಬ್ಬರಾಗಿ ದಂಪತಿಗಳಿಗೆ ಶುಭಕೋರಿದರು.

**ಪಾರ್ವತಿ:-** ರುಕ್ಮಿಣೀರಮಣ, ನಿನ್ನನ್ನು ರುಕ್ಮಿಣಿ ನಗುಮೊಗದಿಂದ ವೀಕ್ಷಿಸುತ್ತಿದ್ದಾಳೆ, ನೋಡು. ರೂಪಸಿ, ಸುಂದರಿ, ನವಯೌವನೆ ಅವಳು.

**ಸರಸ್ವತಿ:-** ದೇವಿ ನಿನಗೆ ಯೋಗ್ಯಳು. ಯುವತಿ, ರತ್ನಾಭರಣ ಭೂಷಿತಳು. ಬೇರೆ ರಾಜಕುಮಾರರನ್ನೆಲ್ಲ ಜರಿದು ನಿನ್ನನ್ನೆ ಬಯಸಿದವಳು.

**ಸಾವಿತ್ರಿ:-** ವರನಿಗೆ ತಕ್ಕ ವಧು. ಬ್ರಹ್ಮ ಮಾಡಿಸಿದ ಜೋಡಿ ಇದು. ನಿಪುಣೆಯಾದ ವಧು ನಿಪುಣನಾದ ವರನನ್ನು ಸೇರಿದರೇ ಚಂದ.

**ರತಿ:-** ಪರಮಾತ್ಮನೊಡನೆ ಸರಸವಾಡಲು ಲೋಕದಲ್ಲಿ ದೇವಿಯಲ್ಲದೆ ಇನ್ನಾರು ಸಮರ್ಥರು? ನೀನು ಧ್ಯಾನಕ್ಕೂ ನಿಲುಕದವ, ಆರಾಧನೆಗೂ ಒಲಿಯದವನಾದರೂ ದೇವಿ ಬೇರೆ ಎಲ್ಲರನ್ನೂ ಧಿಃಕರಿಸಿ ನಿನ್ನನ್ನೆ ಸೇರಿರುವಳು.

**ಗಾಯತ್ರಿ:-** ವರನಿಗೆ ತಕ್ಕ ಕನ್ಯೆ, ಜೊತೆಗೂಡಿರುವುದು ಭೀಷ್ಮಕ ರಾಜನ ಅರಮನೆಯಲ್ಲಿಯೇ ಸರಿ!

**ಸಾವಿತ್ರಿ:-** ನಿಜವಾಗಿ ಹೇಳು, ಜಗನ್ನಾಥ, ಈ ಎಲ್ಲ ದೇವಿಯರ ಮುಂದೆ ಹೇಳು, ನಿನಗೆ ರಾಧೆ ಹೇಗೆ, ಈ ರುಕ್ಮಿಣಿ ಹೇಗೆ?

**ಸರಸ್ವತಿ:-** ನಾನು ಹೇಳುತ್ತೇನೆ, ಸಾವಿತ್ರಿ, ಕೃಷ್ಣನಿಗೆ ರಾಧೆಯ ಮೇಲಿರುವಷ್ಟು ಪ್ರೀತಿ ರುಕ್ಮಿಣಿಯ ಮೇಲೆ ಇರಲಾರದು. ಏಕೆಂದರೆ ರಾಧೆ ಅನಾದಿಕಾಲದಿಂದ ಕೃಷ್ಣನ ಜೊತೆಗೇ ಇದ್ದವಳು, ಎಲ್ಲ ಕ್ರೀಡೆಗಳಲ್ಲಿಯೂ ಬೆರೆತವಳು. ಪ್ರಾಣಪ್ರಿಯೆ, ಪಂಚಪ್ರಾಣಗಳಿಗಿಂತ ಅಧಿಕಳು. ರುಕ್ಮಿಣಿ ಲಕ್ಷ್ಮೀ ಸ್ವರೂಪಳು, ಸಂಪತ್ತಿನ ಅಧಿದೇವತೆ, ಕೃಷ್ಣನ ಸರ್ವಶಕ್ತಿ ಸ್ವರೂಪಳು. ಬುದ್ಧಿಯ ಅಧಿದೇವತೆ ದುರ್ಗೆ. ವೇದಗಳಿಗೆ ಅಭಿಮಾನಿನಿ ವೇದಮಾತೆ ಎನಿಸಿದವಳು ನೀನು ಸಾವಿತ್ರಿ. ವಿದ್ಯೆಗಳಿಗೆ ಅಧಿದೇವತೆ ನಾನು ಸರಸ್ವತಿ. ಉಳಿದವರೆಲ್ಲ ನಮ್ಮ ಕಲೆಗಳಿಗೆ ಕಲಾಸ್ವರೂಪರು. ರಾಧೆಯಲ್ಲಿರುವ ಪ್ರೀತಿ, ಬ್ರಹ್ಮ -ಶಿವ ಶೇಷ ಗಣೇಶ, ಸೂರ್ಯ ಬೇರೆ ವಿಷ್ಣುಭಕ್ತರು, ಲಕ್ಷ್ಮೀ ಪಾರ್ವತಿ ಮತ್ತು ನಾನು ಇವರಲ್ಲಿ ಯಾರಲ್ಲೂ ಇಲ್ಲ. ಮೂಲೋಕದಲ್ಲಿ ಭೂಲೋಕ ಶ್ರೇಷ್ಠ. ಭೂಮಿಯಲ್ಲಿಯೂ ಭಾರತಶ್ರೇಷ್ಠ. ಭಾರತದಲ್ಲಿ ವೃಂದಾವನ ಶ್ರೇಷ್ಠ. ಏಕೆಂದರೆ ಅಲ್ಲಿ ರಾಧೆಯ ಪಾದಕಮಲದ ಚಿಹ್ನೆ ಇರುತ್ತದೆ. ಎಲ್ಲ ದೇವಿಯರಿಗಿಂತ ರಾಧೆ ಹೆಚ್ಚು ಪುಣ್ಯ ಮಾಡಿದ್ದಾಳೆ. ಏಕೆಂದರೆ ಕೃಷ್ಣ ತಾನೆ ಅವಳ ಪಾದಕಮಲದ ಉಗುರುಗಳಿಗೆ ಅಲಕ್ತಕ ರಸವನ್ನು ಹಚ್ಚಿದ್ದಾನೆ.' ಈ ಮಾತನ್ನು ಕೇಳಿ ಎಲ್ಲ ದೇವಿಯರೂ ನಕ್ಕರು.

**ಸರಸ್ವತಿ:-** 'ಎಲ್ಲ ದೇವಿಯರೂ ದೂರದಲ್ಲಿ ಕೃಷ್ಣನನ್ನು ಧ್ಯಾನಿಸುವವರು. ರಾಧೆ ಅವನ ವಕ್ಷಃಸ್ಥಳದಲ್ಲಿಯೆ ಇರುವವಳು. ಇತರ ದೇವಿಯರು ಆ ರಾಧೆಗೆ ನಮಸ್ಕಾರ ಮಾಡುತ್ತಲೆ ಅವಳಿಗೆ ತಮ್ಮನ್ನು ಹೋಲಿಸಿ ನೋಡುತ್ತಾರೆ ಎಂದರೆ ಏನಾಶ್ಚರ್ಯ!' ಸರಸ್ವತಿ ಹೇಳಿದ್ದನ್ನು ಕೇಳಿ ಸಾವಿತ್ರಿ, ಪಾರ್ವತಿ ಮತ್ತು ಇತರ ದೇವಿಯರೆಲ್ಲರೂ ಹೌದು ಹೌದು ಎಂದರು. ಲೋಪಾಮುದ್ರೆ ಅನಸೂಯೆ ಅಹಲ್ಯೆ ಅರುಂಧತಿ ಮುಂತಾದ ಋಷಿ ಪತ್ನಿಯರೂ ಇದೇ ರೀತಿ ಕೃಷ್ಣನೊಡನೆ ವಿನೋದದ ಮಾತುಗಳನ್ನಾಡಿದರು. ಬಳಿಕ ಭೀಷ್ಮಕ ದೇವತೆಗಳಿಗೆ ರಾಜರಿಗೆ ಮತ್ತು ಮುನಿಗಳಿಗೆ ಸತ್ಕಾರ ಪೂರ್ವಕವಾಗಿ ಪ್ರೀತಿಯಿಂದ ಭೋಜನ ಮಾಡಿಸಿದ. ಮಂಗಲ ವಾದ್ಯ ಸಂಗೀತಗಳ ನಡುವೆ ಭೋಜನಸಮಾರಂಭ ವೈಭವಪೂರ್ಣವಾಗಿ ಜರುಗಿತು. 'ತಿನ್ನಿರಿ ತಿನ್ನಿರಿ' ಎನ್ನುತ್ತ ಸೇವಕರು ಬಡಿಸುತ್ತಿದ್ದರೆ' ಇನ್ನು 'ಬಡಿಸಿರಿ ಬಡಿಸಿರಿ' ಎನ್ನುತ್ತಿದ್ದ ರಾಜ. ಮರುದಿನ ಬೆಳಿಗ್ಗೆ ಬ್ರಹ್ಮ ಶಿವ ಶೇಷ ಮುಂತಾದ ದೇವತೆಗಳೂ ರಾಜರೂ ತಮ್ಮ ತಮ್ಮ ರಥಗಳನ್ನೇರಿದರು. ರಾಜಾ ಉಗ್ರಸೇನ ಮತ್ತು ವಸುದೇವ ಶ್ರೀಕೃಷ್ಣನ ಪ್ರಯಾಣವನ್ನು ಏರ್ಪಡಿಸಿದರು. ರಾಣಿ ಸುಭದ್ರೆ ಮಗಳನ್ನು ಎದೆಗೆ ಅಪ್ಪಿಕೊಂಡು ಅಳುತ್ತ ಹೇಳಿದಳು-

'ಮಗಳೆ, ತಾಯಿಯಾದ ನನ್ನನ್ನು ಬಿಟ್ಟು ಹೋಗುತ್ತಿರುವಿ. ನಿನ್ನನ್ನು ಬಿಟ್ಟು ನಾನು ಹೇಗೆ ಬದುಕಲಿ? ನೀನಾದರೂ ನನ್ನನ್ನು ಬಿಟ್ಟು ಹೇಗೆ ಇರುವಿ? ಮಹಾಲಕ್ಷ್ಮೀ ನೀನು. ಮಾಯೆಯಿಂದ ಕನ್ಯೆಯ ರೂಪದಲ್ಲಿ ನನ್ನ ಮನೆಯಿಂದ

ಹೊರಟು ವಾಸುದೇವನ ರಾಣಿಯಾಗಿ ವಸುದೇವನ ಮನೆ ಸೇರುತ್ತಿರುವಿ.' ಹೀಗೆ ಹೇಳುತ್ತ ದುಃಖದ ಕಣ್ಣೀರಿಂದ ರುಕ್ಮಿಣಿಯನ್ನು ತೋಯಿಸಿದಳು. ಭೀಷ್ಮಕನೂ ಕಣ್ಣೀರ ಧಾರೆಯಿಂದ ಅವಳನ್ನು ಮೀಯಿಸಿದ. ಕನ್ಯೆಯನ್ನು ಕೃಷ್ಣನಿಗೆ ಒಪ್ಪಿಸಿದ. ರುಕ್ಮಿಣಿಯೂ ಅತ್ತಳು. ಕೃಷ್ಣನೂ ಸ್ವೇಚ್ಛೆಯಿಂದಲೆ ಅತ್ತ! ವಸುದೇವ ಮಗನನ್ನೂ ಸೊಸೆಯನ್ನೂ ರಥದಲ್ಲಿ ಕೂಡಿಸಿದ. ಭೀಷ್ಮಕ ಅಳಿಯನಿಗೆ ಬಳುವಳಿಯಾಗಿ ಒಂದು ಸಾವಿರ ಆನೆ, ಅದಕ್ಕೆ ಆರರಷ್ಟು ಕುದುರೆ, ಸಾವಿರ ದಾಸಿಯರು ಹತ್ತು ಸಾವಿರ ದಾಸರು, ಒಂದು ಸಾವಿರ ರತ್ನಾಭರಣಗಳು, ಐದು ಲಕ್ಷ ಸುವರ್ಣಗಳು ವಿಶ್ವಕರ್ಮ ನಿರ್ಮಿತವಾದ ಚಿನ್ನದ ನೀರಿನ ಪಾತ್ರೆ, ಭೋಜನ ಪಾತ್ರೆಗಳು, ತುಂಬ ಹಾಲು ಕೊಡುವ ಸಾವಿರ ಹಸುಗಳು, ಅಗ್ನಿಯಂತೆ ಶುಭ್ರವಾದ ಬಟ್ಟೆಗಳು ಇವನ್ನೆಲ್ಲ ನೀಡಿದ. ವಸುದೇವ ಉಗ್ರಸೇನರು ದೇವತೆಗಳಿಂದ ಮತ್ತು ಮುನಿಗಳಿಂದ ಸಮೇತರಾಗಿ ಆನಂದದಿಂದ ದ್ವಾರಕೆಗೆ ಹೋದರು. ಪುರಪ್ರವೇಶಮಾಡಿ ಮಂಗಳ ಕಾರ್ಯ ನಡೆಸಿದರು. ಮಂಗಳ ವಾದ್ಯಗಳನ್ನು ಮೊಳಗಿಸಿದರು. ದೇವಕಿ ರೋಹಿಣಿ ಯಶೋದೆಯರೂ ಅದಿತಿ ದಿತಿಯರೂ ರುಕ್ಮಿಣೀ ಕೃಷ್ಣರನ್ನು ಕಣ್ತುಂಬ ನೋಡುತ್ತ ಗೃಹಪ್ರವೇಶ ಮಾಡಿಸಿದರು. ದೇವತೆಗಳು ಮುನಿಗಳು ರಾಜರು ಮತ್ತು ಬಂಧುಗಳೆಲ್ಲರಿಗೂ ಭೋಜನವಿತ್ತು ದಕ್ಷಿಣೆ ತಾಂಬೂಲಗಳನ್ನು ನೀಡಿದರು. ಎಲ್ಲರೂ ಸಂತುಷ್ಟರಾಗಿ ಮನೆಗಳಿಗೆ ತೆರಳಿದರು. ಹೀಗೆ ದೇವಕಿ ಎಲ್ಲ ಮಂಗಳ ಕಾರ್ಯಗಳನ್ನು ನೆರವೇರಿಸಿದಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರುಕ್ಮಿಣೀವಿವಾಹದಲ್ಲಿ ನೂರಒಂಬತ್ತನೆ ಅಧ್ಯಾಯ ಮುಗಿಯಿತು*

—o—

## ಅಧ್ಯಾಯ - ೧೧೦

**ಶ್ರೀನಾರಾಯಣ ಮುನಿ:-** 'ವಿವಾಹೋತ್ಸವಕ್ಕೆ ಆಗಮಿಸಿದ ಬಂಧು ಬಳಗದವರೆಲ್ಲರೂ ಹೊರಟುಹೋದ ಮೇಲೆ ನಂದ ಯಶೋದೆಯರು ಕೃಷ್ಣನ ಬಳಿಗೆ ಬಂದರು. ಯಶೋದೆ ಆಗ ನುಡಿದಳು. 'ಮಗು, ಕೃಷ್ಣ, ತಂದೆಯಾದ ನಂದನಿಗೆ ಅಂದು ಜ್ಞಾನೋಪದೇಶ ಗೈದೆ. ತಾಯಿಯಾದ ನನ್ನ ಮೇಲೂ ಒಂದಿಷ್ಟು ಕೃಪೆಮಾಡು. ಭಯಂಕರವಾದ ಭವಸಾಗರದಲ್ಲಿ ಮುಳುಗಿರುವ ನನ್ನನ್ನು ಉದ್ಧಾರ ಮಾಡು. ಪ್ರಕೃತ್ಯಭಿಮಾನಿನಿಯಾದ ಚಿತ್ತವೃತ್ತಿ ಸಂಸಾರಸಾಗರವನ್ನು ದಾಟುವವರಿಗೆ ನೌಕೆ. ನೀನು ಅಂಬಿಗ.'

ಕೃಷ್ಣ ನಕ್ಕು ಹೇಳಿದ, 'ಅಮ್ಮ, ಯೋಗಾತ್ಮಕ, ವಿಷಯಾತ್ಮಕ, ಸಿದ್ಧ್ಯಾತ್ಮಕ, ಮೋಕ್ಷಾತ್ಮಕ ಮತ್ತು ಭಕ್ತ್ಯಾತ್ಮಕ ಎಂದು ಜ್ಞಾನ ಐದು ವಿಧ. ಅವುಗಳಲ್ಲಿ ಭಕ್ತ್ಯಾತ್ಮಕ ಜ್ಞಾನ ಶ್ರೇಷ್ಠ. ಯೋಗಾತ್ಮಕ ಜ್ಞಾನವೆಂದರೆ ಹಸಿವು ನೀರಡಿಕೆಗಳನ್ನು ತಡೆದುಕೊಂಡು ಮನಸ್ಸನ್ನು ಶುದ್ಧವಾಗಿರಿಸಿ ನಾಡಿಗಳನ್ನೂ ಶುದ್ಧೀಕರಿಸಿ ಷಟ್‌ಚಕ್ರಗಳನ್ನು ಭೇದಿಸುವ ಜ್ಞಾನ. ಇಂದ್ರಿಯಗಳನ್ನು ದಮನ ಮಾಡಿ ಲೋಭಾದಿಗಳನ್ನು ಗೆದ್ದು ಪರಮಾತ್ಮನನ್ನು ಚಿಂತಿಸುವ ಮೂಲಜ್ಞಾನ. ಮೂಲಾಧಾರ ಸ್ವಾಧಿಷ್ಠಾನ ಮಣಿಪೂರ ಅನಾಹತ ವಿಶುದ್ಧ ಆಜ್ಞಾ ಇವು ಆರು ಚಕ್ರಗಳು. ಅವುಗಳನ್ನು ಭೇದಿಸುವ ಯೋಗಾತ್ಮಕ ಜ್ಞಾನ ಸ್ತ್ರೀಯರಿಗೆ ದುರ್ಲಭ. ಮಂದಬುದ್ಧಿಯವರಿಗಂತೂ ಎಂದೂ ಸಿಗಲಾರದು. ವಿಷಯಭೋಗವಸ್ತುಗಳ ಬಗ್ಗೆ ಜ್ಞಾನವೆ ವಿಷಯಾತ್ಮಕ ಜ್ಞಾನ. ಇದು ಎಲ್ಲ ಜೀವಿಗಳಿಗೂ ಇರುವಂಥದ್ದು. ಸಿದ್ಧ್ಯಾತ್ಮಕ ಜ್ಞಾನ, ಯೋಗಸಾಧ್ಯವಾದುದು. ಇದು ಲಭಿಸುವುದು ನನ್ನ ಇಚ್ಛೆಯಿಂದ. ಮೋಕ್ಷಾತ್ಮಕ ಜ್ಞಾನ ನಿವೃತ್ತಿಮಾರ್ಗಕ್ಕೆ ಯೋಗ್ಯವಾದ ಜ್ಞಾನ. ಸನ್ಯಾಸಿಗಳಿಗೆ ಯೋಗ್ಯವಾದುದು. ಇದು ಮೋಕ್ಷಕ್ಕೆ ಕಾರಣ. ಆದರೆ ಮೋಕ್ಷವನ್ನೂ ಬಯಸದ ಏಕಾಂತಭಕ್ತ ಈ ಜ್ಞಾನವನ್ನೂ ಬಯಸುವುದಿಲ್ಲ. ಅವನಿಗೆ ಭಕ್ತ್ಯಾತ್ಮಕ ಜ್ಞಾನ ಯೋಗ್ಯ. ಅದನ್ನು ನಿನಗೆ ರಾಧೆಯೆ ಕೊಡುತ್ತಾಳೆ. ನೀನು ಅವಳನ್ನು ಮಾನವಳೆಂದು ತಿಳಿಯದೆ ಸೇವಿಸು. ಅವಳು ನಂದನಿಗೆ ನೀಡಿದ ಜ್ಞಾನವನ್ನು ನಿನಗೂ ನೀಡುವಳು. ಅದರಿಂದ ನಂದನ ಜೊತೆಗೆ ನೀನೂ ನಂದಗೋಕುಲಕ್ಕೆ ಹೋಗು.' ಹೀಗೆ ಹೇಳಿ ಕೃಷ್ಣ ನಂದಯಶೋದೆಯರನ್ನು ಕಳಿಸಿಕೊಟ್ಟ. ಅವರು ನಂದಗೋಕುಲದಲ್ಲಿ ಬಾಳೆಯ ತೋಟದಲ್ಲಿ ರಾಧೆಯನ್ನು ಕಂಡರು. ಆಗ ರಾಧೆ ಬಿಳಿ ಸೀರೆಯುಟ್ಟು ನಿರಾಹಾರಳಾಗಿ ಗಂಧದ ನೀರಿನಿಂದ ಒದ್ದೆಯಾದ ಕಮಲದಳಗಳ ಹಾಸಿಗೆ ಮೇಲೆ ಮೈಮರೆತು ಒರಗಿದ್ದಳು. ಕಣ್ಣುಗಳು ಬಾಷ್ಪದಿಂದ ಒದ್ದೆಯಾಗಿದ್ದುವು. ತುಟಿಗಳು ಒಣಗಿದ್ದುವು. ಕೃಷ್ಣಧ್ಯಾನದಲ್ಲಿ ಬಾಹ್ಯ ಪ್ರಪಂಚದ ಪರಿವೆಯೆ ಇರಲಿಲ್ಲ. ಸಖಿಯರು ಬಿಳಿಚಾಮರ ಬೀಸುತ್ತಿದ್ದರು. ಕನಸಿನಲ್ಲಿ ಕೃಷ್ಣನನ್ನು ಕಂಡು ಮುಖಕಮಲವೆತ್ತಿ ನೋಡುತ್ತ ಒಮ್ಮೆ ಅಳುತ್ತ ಇನ್ನೊಮ್ಮೆ ನಗುತ್ತ ಅವನಲ್ಲಿಯೆ

ಮನಸ್ಸು ನೆಟ್ಟಿದ್ದಳು ರಾಧೆ. ನೂರು ಕೋಟಿ ಗೋಪಿಯರು ಎಚ್ಚರದಿಂದ ಅವಳನ್ನು ರಕ್ಷಣೆ ಮಾಡುತ್ತಿದ್ದರು. ಏಳು ಬಾಗಿಲುಗಳಲ್ಲಿ ಅಂಗಳಗಳಲ್ಲಿಯೂ ಕೈಯಲ್ಲಿ ಬೆತ್ತ ಹಿಡಿದು ನಿಂತಿದ್ದರು. ನಂದಯಶೋದೆಯರು ಬಂದು ನಮಿಸಿದಾಗ ರಾಧೆಗೆ ದೈವಾತ್ ಎಚ್ಚರ ಉಂಟಾಗಿತ್ತು. ಅವಳು ಕೇಳಿದಳು -

'ಯಾರು ನೀನು? ಏಕೆ ಬಂದೆ? ಹೇಳು. ನನಗೆ ಬಾಹ್ಯದ ಪರಿಜ್ಞಾನವೆ ಉಂಟಾಗುತ್ತಿಲ್ಲ. ನೀನು ಮಾನವನೆ, ಪಶುವೆ? ಇದೇನು ನೀರೋ ನೆಲವೋ? ಇದೀಗ ಹಗಲೊ ರಾತ್ರಿಯೊ? ನೀನು ಹೆಣ್ಣೊ, ಗಂಡೊ, ನಪುಂಸಕನೊ? ಒಂದೂ ನನಗೆ ತಿಳಿಯುತ್ತಿಲ್ಲ.'

ರಾಧೆಯ ಮಾತು ಕೇಳಿ ನಂದನಿಗೆ ಆಶ್ಚರ್ಯವಾಯಿತು. ಯಶೋದೆಗೆ ಭಯವಾಯಿತು. ಆದರೂ ಬಳಿಯಲ್ಲಿದ್ದ ಗೋಪಿಯೊಡನೆ ಮಾತನಾಡಿಕೊಂಡು ಧೈರ್ಯ ಹೊಂದಿ ಬಳಿಗೆ ಹೋಗಿ ಸಂತಯಿಸಿದಳು-

'ರಾಧೆ, ತಾಳು, ಸಮಾಧಾನ ಪಟ್ಟುಕೊಳ್ಳು, ಒಂದು ಸುದಿನದಲ್ಲಿ ನೀನು ನಿನ್ನ ಪ್ರಾಣನಾಥನನ್ನು ಕಾಣುವೆ. ದೇವೇಶ್ವರಿ, ನಿನ್ನಿಂದ ಲೋಕ ಪಾವನವಾಯಿತು. ನಿನ್ನ ವಂಶ ಪವಿತ್ರವಾಯಿತು. ನಿನ್ನ ಪಾದಕಮಲ ಸೇವೆ ಮಾಡಿದ ಈ ಗೋಪಿಯರೆ ಪುಣ್ಯವತಿಯರು. ನಿನ್ನ ಪವಿತ್ರ ಮಂಗಳಕರ ಕೀರ್ತಿಯನ್ನು ಲೋಕ ಕೊಂಡಾಡುತ್ತದೆ. ನಾಲ್ಕುವೇದಗಳು ಪುರಾಣಗಳು ಕೊಂಡಾಡುತ್ತವೆ. ನಾನು ಯಶೋದೆ. ಈತ ನಂದ. ನೀನು ವೃಷಭಾನುವಿನ ಮಗಳು. ತಿಳಿಯಿತೆ? ಇನ್ನೂ ಕೇಳು. ನಾವು ದ್ವಾರಕಾನಗರದಿಂದ ಬಂದಿದ್ದೇವೆ. ಕೃಷ್ಣನ ಸನ್ನಿಧಾನದಿಂದ ಬಂದಿದ್ದೇವೆ. ಅವನೆ ನಮ್ಮನ್ನು ನಿನ್ನ ಬಳಿಗೆ ಕಳಿಸಿದ್ದಾನೆ. ದೇವಿ, ಕೃಷ್ಣನ ಶುಭ ಸಮಾಚಾರವನ್ನು ಕೇಳು. ಸಮಾಧಾನ ಮಾಡಿಕೊಳ್ಳು. ನೀನು ಬೇಗನೆ ಕೃಷ್ಣನನ್ನು ಕಾಣುವೆ. ನೀನೀಗ ನನಗೆ ಭಕ್ತಿ ರೂಪವಾದ ದಿವ್ಯಜ್ಞಾನ ನೀಡು. ನಿನ್ನ ಪತಿ ಅದಕ್ಕಾಗಿ ನಮ್ಮನ್ನು ನಿನ್ನ ಬಳಿಗೆ ಕಳಿಸಿದ್ದಾನೆ. ಇನ್ನು ಸ್ವಲ್ಪ ದಿನಗಳಲ್ಲಿಯೆ ಶ್ರೀದಾಮ ನಿನಗೆ ಕೊಟ್ಟ ಶಾಪದ ಅವಧಿ ಕಳೆದು ಹೋಗುತ್ತದೆ. ಬಳಿಕ ಬೇಗನೆ ಹರಿ ನಿನ್ನ ಬಳಿಗೆ ಬರುತ್ತಾನೆ.'

ಯಶೋದೆಯ ಮಾತು ಕೇಳಿ ಕೃಷ್ಣನ ಸಮಾಚಾರ ತಿಳಿದು ಅಮಂಗಲವನ್ನು ದೂರ ಮಾಡುವ ಕೃಷ್ಣನ ನಾಮಸ್ಮರಣೆ ಮಾಡಿದಳು ರಾಧೆ. ಚೈತನ್ಯ ತಂದುಕೊಂಡು ಹೇಳತೊಡಗಿದಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರಾಧಾಯಶೋದಾಸಂವಾದದಲ್ಲಿ ನೂರಹತ್ತನೆ ಅಧ್ಯಾಯ ಮುಗಿಯಿತು.*

—o—

## ಯಶೋದೆಗೆ ರಾಧೆಯ ಉಪದೇಶ

ಅಧ್ಯಾಯ - ೧೧೧

**ರಾಧೆ:-** ಜ್ಞಾನಾತ್ಮಕನಾದ ಬ್ರಹ್ಮರುದ್ರಶೇಷರಿಂದ ಪೂಜಿತನಾದ ಹರಿ ನಿನಗೆ ಜ್ಞಾನ ನೀಡಲಿಲ್ಲ! ನನ್ನ ಬಳಿಗೆ ನಿನ್ನನ್ನು ಕಳಿಸಿದ್ದಾನೆ! ನಾನೇನು ಉಪದೇಶ ನೀಡಬಲ್ಲೆ? ವೇದಗಳೂ ತಿಳಿಯಲಾರವು, ಸಂತರೂ ಯಾರೂ ತಿಳಿಯಲಾರರು, ನಾನು ಹೆಣ್ಣುಜಾತಿಯವಳು, ಅಬಲೆ, ಮೂಢೆ, ಜ್ಞಾನಕಾರ್ಯದಲ್ಲಿ ನಿರತಳೂ ಅಲ್ಲ. ಹರಿಯ ವಿರಹದಿಂದ ಬುದ್ಧಿಶಕ್ತಿಯೂ ಕುಂಠಿತವಾಗಿದೆ. ನಾನೇನು ಹೇಳಬಲ್ಲೆ? ಆದರೂ ಐದು ಬಗೆಯ ಜ್ಞಾನಗಳಲ್ಲಿ ಭಕ್ತ್ಯಾತ್ಮಕ ಜ್ಞಾನ ಸರ್ವಶ್ರೇಷ್ಠವಾಗಿದ್ದು, ಶ್ರೀಕೃಷ್ಣನ ಅನುಗ್ರಹದಿಂದ ಸ್ವಲ್ಪ ಹೇಳುತ್ತೇನೆ ಕೇಳು. ನಂದ, ಅನ್ಯಧರ್ಮಗಳನ್ನು ಪರಿತ್ಯಜಿಸಿ ವಿಷ್ಣುಧರ್ಮವಾಚರಿಸಿ ಭಯಮುಕ್ತನಾಗು. ಗೋಲೋಕ ಸೇರಿದ ಮೇಲೂ ಅನ್ಯಧರ್ಮವನ್ನು ಆಶ್ರಯಿಸಿದರೆ ಪತನ ಹೊಂದುತ್ತಾನೆ. ಕೃಷ್ಣನನ್ನು ಮಗನೆಂದು ಕಾಣಬೇಡ. ಪರಮಾತ್ಮನೆಂದು ತಿಳಿದು ಸೇವಿಸು. ಯಶೋದೆ, ನೀನೂ ಬೇರೆ ಎಲ್ಲ ಕರ್ಮಗಳನ್ನೂ ತೊರೆದು ಪುಣ್ಯಕ್ಷೇತ್ರವಾದ ವೃಂದಾವನಕ್ಕೆ ಹೋಗು. ನಿರ್ಮಲವಾದ ಯಮುನಾ ಜಲದಲ್ಲಿ ತ್ರಿಕಾಲ ಸ್ನಾನ ಮಾಡಿ ಚಂದನದಿಂದ ಅಷ್ಟದಳ ಪದ್ಮ ರಚಿಸಿ ಅದರಲ್ಲಿ ಗರ್ಗಮುನಿ ಉಪದೇಶಿಸಿದಂತೆ ಆನಂದಮಯನಾದ ಕೃಷ್ಣನನ್ನು ಧ್ಯಾನಿಸು. ಅದರಿಂದ ನೀನು ಗೋಲೋಕ ಪಡೆಯುವೆ. ಪ್ರಾರಬ್ಧಕರ್ಮ ನೀಗಿಕೊಂಡು ನೂರು ಮಂದಿ ಪಿತೃಗಳೊಡನೆ ವಿಷ್ಣುಲೋಕದಲ್ಲಿ ವಾಸ ಮಾಡುವೆ.

**ವೈಷ್ಣವೇನ ಸಹಾಲಾಪಂ ಕುರುಷ್ವ ಸತತಂ ಸತಿ ।**
**ವರಂ ಹುತವಹಜ್ವಾಲಾಂ ಭಕ್ತೋ ವಾಂಛತಿ ಪಂಜರಂ ।**
**ವರಂ ಚ ಕಂಟಕೇ ವಾಸಂ ವರಂ ಚ ವಿಷಭಕ್ಷಣಂ ।**
**ಹರಿಭಕ್ತಿವಿಹೀನಾನಾಂ ನ ಸಂಗಂ ನಾಶಕಾರಣಂ ॥**

ವೈಷ್ಣವರ ಜೊತೆ ಸಂಲಾಪ ಮಾಡುತ್ತಿರು. ಭಕ್ತ ಅಗ್ನಿಪ್ರವೇಶ ಮಾಡಿಯಾನು. ಪಂಜರದೊಳಗೆ ಬಂಧನವನ್ನೂ ಸಹಿಸಿಯಾನು. ಮುಳ್ಳಿನ ಮೇಲೂ ಮಲಗಿಯಾನು. ವಿಷವನ್ನೂ ಕುಡಿದಾನು. ಹರಿಭಕ್ತಿಹೀನರ ಸಂಗ ಅನರ್ಥಕಾರಣ, ಅದನ್ನು ಮಾತ್ರ ಬಯಸಲಾರ.

**ಸ್ವಯಂ ನಷ್ಟೋ ಭಕ್ತಿಹೀನೋ ಬುದ್ಧಿಭೇದಂ ಕರೋತಿ ಚ ।**

ಹರಿಭಕ್ತಿಹೀನನಾದವ ತಾನು ಅನರ್ಥಭಾಗಿಯಾಗುವುದು, ಮಾತ್ರವಲ್ಲದೆ, ಭಕ್ತರ ನಿರ್ಮಲಬುದ್ಧಿಯನ್ನೂ ಹಾಳು ಮಾಡುತ್ತಾನೆ.

**ಅಂಕುರೋ ಭಕ್ತಿವೃಕ್ಷಸ್ಯ ಭಕ್ತಸಂಗೇನ ವರ್ಧತೇ ।**
**ಪರಂ ಹರಿಕಥಾಲಾಪಪೀಯೂಷಾಸೇಚನೇನ ಚ**

ಹರಿಭಕ್ತಿ ಎಂಬ ವೃಕ್ಷದ ಅಂಕುರ ಹರಿಭಕ್ತರ ಸಂಗದಿಂದ ಬೆಳೆಯುತ್ತದೆ. ಹರಿಕಥೆಯ ಮಾತಿನ ಅಮೃತದ ಸೇಚನೆಯಿಂದ ಇನ್ನೂ ಹೆಚ್ಚಾಗಿ ಬೆಳೆಯುತ್ತದೆ.

**ಅಭಕ್ತಾಲಾಪದೀಪಾಗ್ನಿಜ್ವಾಲಾಯಾಃ ಕಲಯಾಪಿ ಚ ।**
**ಅಂಕುರಃ ಶುಷ್ಕತಾಂ ಯಾತಿ ಪುನಃ ಸೇಕೇನ ವರ್ಧತೇ ॥**

ಹರಿಭಕ್ತಿಯೆಂಬ ವೃಕ್ಷದ ಅಂಕುರ ಅಭಕ್ತರ ಮಾತೆಂಬ ದೀಪದಿಂದುಂಟಾಗುವ ಒಂದು ಸಣ್ಣ ಬೆಂಕಿಯ ಜ್ವಾಲೆಯಿಂದಲೂ ಒಣಗಿ ಹೋಗುತ್ತದೆ. ಅದಕ್ಕೆ ಪುನಃ ಹರಿಕಥಾಮೃತ ಸೇಚನೆ ಮಾಡಿದರೆ ಬೆಳೆಯುತ್ತದೆ.

**ತಸ್ಮಾದಭಕ್ತಸಂಗಂ ಚ ಸಾವಧಾನಾ ಪರಿತ್ಯಜ ।**
**ಯಥಾ ದೃಷ್ಟ್ವಾ ಕಾಲಸರ್ಪಂ ನರೋ ಭೀತ್ವಾ ಪಲಾಯತೇ ॥**

ಕಾಳಸರ್ಪವನ್ನು ಕಂಡರೆ ಮಾನವ ಹೇಗೆ ಹೆದರಿ ಪಲಾಯನ ಮಾಡುವನೋ ಹಾಗೆ ಹರಿಭಕ್ತ ಅಭಕ್ತರ ಸಂಗವನ್ನು ಪ್ರಯತ್ನದಿಂದ ದೂರದಲ್ಲಿ ಬಿಡಬೇಕು.

**ರಾಮನಾರಾಯಣಾನಂತಮುಕುಂದಮಧುಸೂದನ ।**
**ಕೃಷ್ಣಕೇಶವಕಂಸಾರೇ ಹರೇ ವೈಕುಂಠವಾಮನ ॥**
**ಇತ್ಯೇಕಾದಶ ನಾಮಾನಿ ಪಠೇದ್ವಾ ಪಾಠಯೇದಿತಿ ।**
**ಜನ್ಮಕೋಟಿಸಹಸ್ರಾಣಾಂ ಪಾತಕಾದೇವಮುಚ್ಯತೇ ॥**

ರಾಮ ನಾರಾಯಣ ಅನಂತ ಮುಕುಂದ ಮಧುಸೂದನ ಕೃಷ್ಣ ಕೇಶವ ಕಂಸಾರಿ ಹರಿ ವೈಕುಂಠ ವಾಮನ ಎಂದು ಹನ್ನೊಂದು ಹರಿನಾಮಗಳನ್ನು ತಾನು ಪಠಿಸಿದರೆ, ಇನ್ನೊಬ್ಬರಿಂದ ಹೇಳಿಸಿದರೆ, ಸಹಸ್ರಕೋಟಿ ಜನ್ಮಗಳ ಪಾಪಗಳಿಂದ ಬಿಡುಗಡೆಯಾಗುವುದು.

**ರಾ** ಎಂದರೆ ಪ್ರಪಂಚ. **ಮ** ಎಂದರೆ ಒಡೆಯ. **ಹರಿ** ಜಗದೊಡೆಯನಾದ್ದರಿಂದ ರಾಮನೆನಿಸುತ್ತಾನೆ. ರಮೆಯೊಡನೆ ಈತ ವಿಹರಿಸುತ್ತಾನೆ, ರಮೆ ಇವನೊಡನೆ ವಿಹರಿಸುತ್ತಾಳೆ; ಆದರಿಂದಲೂ ಹರಿ ರಾಮನೆನಿಸುತ್ತಾನೆ. **ರಾ** ಎಂದರೆ ಲಕ್ಷ್ಮೀ, **ಮ** ಎಂದರೆ ಪತಿ. ಲಕ್ಷ್ಮೀಪತಿಯಾದ್ದರಿಂದಲೂ ಹರಿಗೆ ರಾಮನೆಂದು ಹೆಸರು. ದಿವ್ಯ ಸಹಸ್ರನಾಮಗಳ ಸ್ಮರಣೆಯಿಂದ ಬರುವ ಫಲವೆಲ್ಲವೂ ರಾಮನಾಮೋಚ್ಚಾರಣ ಮಾತ್ರದಿಂದ ಲಭಿಸುತ್ತದೆ.

**ನಾರ** ಎಂದರೆ ನರರು ಮಾಡುವ ಪಾಪ. ಅಯನವೆಂದರೆ ಹೋಗಲಾಡಿಸುವುದು. ಪಾಪಕಳೆವವನಾದ್ದರಿಂದ ಹರಿ ನಾರಾಯಣನೆನಿಸುತ್ತಾನೆ. ಒಮ್ಮೆ ನಾರಾಯಣನಾಮ ಉಚ್ಚರಿಸಿದರೆ ಮುನ್ನೂರು ಕಲ್ಪಗಳಲ್ಲಿ ಗಂಗಾದಿ ಸಕಲ ತೀರ್ಥಸ್ನಾನ ಮಾಡಿದ ಫಲ ಲಭಿಸುವುದು. ನಾರವೆಂದರೆ ಮೋಕ್ಷದಾಯಕವಾದ ಪುಣ್ಯಕರ್ಮ. ಅಯನವೆಂದರೆ ಮೋಕ್ಷಜನಕವಾದ ಶಾಸ್ತ್ರ. ಇವೆರಡರ ಜ್ಞಾನ ನೀಡುವವನು ನಾರಾಯಣ. ನಾಲ್ಕು ವೇದಗಳಲ್ಲಿ ಪುರಾಣಗಳಲ್ಲಿ ಬೇರೆ ಶಾಸ್ತ್ರಗಳಲ್ಲಿ ಯೋಗಗಳಲ್ಲಿ ಜ್ಞಾನಿಗಳು ಹರಿಯ ಗುಣಗಳ ಅಂತವನ್ನು ಅರಿಯಲಾರರು. ಆದರಿಂದ ಅವನು ಅನಂತ. ಮುಕು ಎಂದರೆ

ಮೋಕ್ಷ. ಮೋಕ್ಷದಾಯಕನಾದುದರಿಂದ ಹರಿ ಮುಕುಂದನೆನಿಸುತ್ತಾನೆ. ಮಧುದೈತ್ಯನನ್ನು 'ಸೂದನ' ಅಂದರೆ ನಾಶಮಾಡಿದವ ಮಧುಸೂದನ. ಮಧು ಎಂದರೆ ಜೇನು ಮತ್ತು ಮದ್ಯ. ಜೇನು ಮದ್ಯಗಳಂಥ ಶುಭ ಅಶುಭ ಕರ್ಮಗಳನ್ನು ಕಳೆವವನಾದ್ದರಿಂದಲೂ ಹರಿ ಮಧುಸೂದನ. ಮೊದಲಿಗೆ ಜೇನಿನಂತೆ ಮಧುರವಾಗಿ ಭ್ರಾಂತಿಯಲ್ಲಿ ಕಾಣುವುದರಿಂದ ಅಶುಭಕರ್ಮ ಮಧುವೆನಿಸುತ್ತದೆ. ಅದನ್ನು ಕಳೆವವನು ಮಧುಸೂದನ.

**ಕೃಷ್** ಎಂದರೆ ಉತ್ಕೃಷ್ಟ **ಣ್** ಎಂದರೆ ಒಳ್ಳೆಯ ಭಕ್ತಿ '**ಅ** ಎಂದರೆ ನೀಡುವವ. ಉತ್ಕೃಷ್ಟವಾದ ಒಳ್ಳೆಯ ಭಕ್ತಿ ನೀಡುವವ ಕೃಷ್ಣ. **ಕೃಷ್** ಎಂದರೆ ಪರಮಾನಂದ. **ಣ್** ಎಂದರೆ ಹರಿದಾಸ್ಯ. ಮೋಕ್ಷದಲ್ಲಿ ಪರಮಾನಂದವನ್ನೂ ತನ್ನ ದಾಸ್ಯವನ್ನೂ ಕೊಡುವುದರಿಂದ ಕೃಷ್ಣನೆನಿಸುತ್ತಾನೆ. ಕೃಷ್ ಎಂದರೆ ಭಕ್ತರ ಕೋಟಿಜನ್ಮಾರ್ಜಿತ ಪಾಪ ಮತ್ತು ಕ್ಲೇಶ. ಅವುಗಳನ್ನು ಣ ಅಂದರೆ ನಾಶ ಮಾಡುವವ ಕೃಷ್ಣ. ದಿವ್ಯ ಸಹಸ್ರನಾಮಗಳನ್ನು ಮೂರು ಬಾರಿ ಪಠಿಸಿದ ಫಲ ಒಮ್ಮೆ ಕೃಷ್ಣನಾಮೋಚ್ಚರಣೆ ಮಾಡಿದರೆ ಲಭಿಸುತ್ತದೆ. ಕೃಷ್ಣನಾಮಕ್ಕಿಂತ ಹೆಚ್ಚಿನ ನಾಮ ಹಿಂದೆ ಇರಲಿಲ್ಲ, ಮುಂದೆ ಇರುವುದಿಲ್ಲ. ಎಲ್ಲ ನಾಮಗಳಿಗಿಂತ ಶ್ರೇಷ್ಠವಾದುದು ಕೃಷ್ಣನಾಮ ಎಂದು ವೇದ ಬಲ್ಲವರು ಹೇಳುತ್ತಾರೆ. ಯಾರು ಕೃಷ್ಣ ಕೃಷ್ಣ ಎಂದು ಸದಾ ಸ್ಮರಿಸುವರೋ ನೀರಿಂದ ಕಮಲ ಅರಳಿ ಹೇಗೆ ಮೇಲೆ ಬರುವುದೋ ಹಾಗೆ ನರಕದಿಂದ ಅವರು ಮೇಲೆದ್ದು ಬರುತ್ತಾರೆ. ಕೃಷ್ಣ ಎಂಬ ಮಂಗಲನಾಮ ಯಾರ ನಾಲಿಗೆಯಲ್ಲಿ ನಲಿಯುವುದೊ ಅವನ ಕೋಟಿ ಮಹಾಪಾಪಗಳೂ ತತ್‌ಕ್ಷಣ ಭಸ್ಮವಾಗುತ್ತವೆ. ಅಶ್ವಮೇಧ ಯಾಗಗಳನ್ನು ಸಾವಿರಗಟ್ಟಲೆ ಮಾಡಿದರೂ ಅದರ ಫಲಕ್ಕಿಂತ ಕೃಷ್ಣನಾಮ ಜಪದ ಫಲ ಅಧಿಕ. ಯಾಗ ಮಾಡಿದರೂ ಪುನರ್ಜನ್ಮ ಕಳೆಯುವುದಿಲ್ಲ. ಜಪ ಮಾಡಿದರೆ ಪುನರ್ಜನ್ಮವಿಲ್ಲ. ಎಲ್ಲ ಯಜ್ಞಗಳು ಲಕ್ಷಗಟ್ಟಲೆ ವ್ರತಗಳು ಎಲ್ಲ ತೀರ್ಥ ಸ್ನಾನಗಳು ತಪಸ್ಸುಗಳು ಉಪವಾಸಗಳು ಸಹಸ್ರಾರು ವೇದಪಾರಾಯಣಗಳು ಭೂಪ್ರದಕ್ಷಿಣೆಗಳು ಕೃಷ್ಣನಾಮ ಜಪದ ಹದಿನಾರನೆ ಒಂದಂಶಕ್ಕೆ ಸಮನಾಗದು. ಅವುಗಳ ಲೋಭಕ್ಕೆ ಸ್ವರ್ಗಮಾತ್ರವೆ ಫಲ. ಸ್ವರ್ಗಕ್ಕಿಂತ ಅಧಿಕವಾದ ವಿಷ್ಣುಲೋಕ, ಕೃಷ್ಣನಾಮಜಪ ಮಾಡುವವನಿಗೆ ಲಭಿಸುತ್ತದೆ.

ಕೇಶವ ನಾಮದಲ್ಲಿ **ಕ** ಎಂದರೆ ನೀರು ಮತ್ತು ಎಲ್ಲರ ಶರೀರ. ನೀರಲ್ಲಿಯೂ ಎಲ್ಲರ ಶರೀರದಲ್ಲಿಯೂ ವಾಸ ಮಾಡುವುದರಿಂದ ಕೇಶವನೆನಿಸುತ್ತಾನೆ. ಕಂಸ ಎಂದರೆ ಪಾಪ, ವಿಘ್ನ, ರೋಗ, ಶೋಕ ಮತ್ತು ಆ ಹೆಸರಿನ ಒಬ್ಬ ದಾನವ. ಪಾಪಾದಿಗಳಿಗೆ ವಿರೋಧಿಯೂ ದಾನವನನ್ನು ಕೊಂದವನೂ ಆದ್ದರಿಂದ ಕಂಸಾರಿ. ರುದ್ರರೂಪದಿಂದ ಪ್ರಪಂಚವನ್ನು ಲಯ ಗೈಯುವುದರಿಂದಲೂ ಭಕ್ತರ ಪಾಪಗಳನ್ನು ಪರಿಹರಿಸು ವುದರಿಂದಲೂ ಹರಿ ಎನಿಸುತ್ತಾನೆ. ಮಾಧವ ಎಂಬ ನಾಮದಲ್ಲಿ ಮಾ ಎಂದರೆ ಬ್ರಹ್ಮ ಸ್ವರೂಪಳಾದ ಮೂಲಪ್ರಕೃತ್ಯಭಿಮಾನಿನಿ ವಿಷ್ಣುಮಾಯೆ ಎನಿಸಿದ ನಾರಾಯಣನ ಪ್ರಿಯೆ ಮಹಾಲಕ್ಷ್ಮಿ. ಅವಳೆ ವೇದಮಾತೆ ಸರಸ್ವತಿ ರಾಧೆ ವಸುಂಧರೆ ಗಂಗೆ ಎಂದು ಮುಂತಾದ ರೂಪದವಳು. ಆ ಎಲ್ಲ ರೂಪಗಳಲ್ಲಿಯೂ ಅವಳಿಗೆ ಪತಿ ಶ್ರೀಕೃಷ್ಣ. ಅದರಿಂದ

ಮಾಧವನೆನಿಸುತ್ತಾನೆ. ಬ್ರಹ್ಮ ರುದ್ರ ಶೇಷಾದಿ ವಂದ್ಯ, ಸನಕಾದಿಗಳ ಧ್ಯಾನಕ್ಕೂ ನಿಲುಕದವ, ವೇದಪುರಾಣಗಳಿಂದಲೂ ಅನಿರ್ವಚನೀಯನೆನಿಸಿದ ಆನವನೀತ ಚೋರನನ್ನು ಭಕ್ತಿಯಿಂದ ಭಜಿಸು. ಹಾಲು ಎಲ್ಲಿ? ಮೊಸರು ಎಲ್ಲಿ? ತುಪ್ಪವೆಲ್ಲಿ? ಆಗತಾನೆ ತೆಗೆದ ಬೆಣ್ಣೆ ಎಲ್ಲಿ? ಮಜ್ಜಿಗೆ ಎಲ್ಲಿ? ಅವನ್ನು ಹರಿ ಕದಿಯುವುದೆಲ್ಲಿ? ಇದನ್ನು ತಿಳಿದರೆ ನಿನಗೆ ಸಂಸಾರ ಮೂಲದಲ್ಲಿ ಬಂಧನವೆಲ್ಲಿ? ಯೋಗಿಗಳು ಸಿದ್ಧರು ಮುನಿಗಳು ಬ್ರಹ್ಮಾದಿ ದೇವತೆಗಳು ಯೋಗಬಲದಿಂದ ಅವನನ್ನು ಬಂಧಿಸಲಾರರು, ತಮ್ಮ ರಕ್ಷಣೆಗೆ ಒಳಪಡಿಸಲಾರರು. ನೀನು ಅವನನ್ನು ಹೇಗೆ ಕಟ್ಟಿದೆ? ನಿನ್ನ ಹೃದಯಕಮಲದಲ್ಲಿರುವ ನಿನ್ನ ಪುತ್ರನನ್ನು ಸದಾ ಧ್ಯಾನದಿಂದ, ಪ್ರಯತ್ನಪೂರ್ವಕವಾಗಿ ಪ್ರೇಮಭಕ್ತಿಗಳ ಸ್ತೋತ್ರಪೂಜೆಗಳ ಮೂಲಕ ಆರಾಧಿಸು. ಯಶೋದೆ, ನಿನ್ನ ಮನಸ್ಸಿನ ಅಭಿಲಾಷೆ ಏನು ಹೇಳು. ಅದು ದೇವತೆಗಳಿಗೆ ದುರ್ಲಭವಾದರೂ ಸರಿಯೆ, ನಾನು ನಿನಗೆ ಕೊಡುತ್ತೇನೆ.

**ಯಶೋದೆ:-** ನನಗೆ ನಿಶ್ಚಲವಾದ ಹರಿಭಕ್ತಿ ಹರಿದಾಸ್ಯಗಳು ಬೇಕು. ನಿನ್ನ ನಾಮದ ಅರ್ಥವಿಸ್ತಾರವೇನು? ಅದನ್ನೂ ಹೇಳು.

**ರಾಧೆ:-** ನನ್ನ ಅನುಗ್ರಹದಿಂದ ನಿಶ್ಚಲವಾದ ಭಕ್ತಿ ದುರ್ಲಭವಾದ ಹರಿದಾಸ್ಯಗಳು ನಿನಗೆ ಲಭಿಸುವುವು. ನನ್ನ ನಾಮದ ಅರ್ಥವನ್ನೂ ಹೇಳುತ್ತೇನೆ. ಹಿಂದೆ ಭಾಂಡೀರವನದಲ್ಲಿ ಆಲದ ಬುಡದಲ್ಲಿ ನಂದ ನನ್ನನ್ನು ಕಂಡು ನನ್ನಿಂದ ಉಪದೇಶ ಪಡೆದಿದ್ದ. ಅದನ್ನು ಯಾರಿಗೂ ಹೇಳಬೇಡವೆಂದು ನಾನೆ ನಿಷೇಧಿಸಿದ್ದೆ. ನಾನೆ ನಿಜವಾಗಿ ರಾಧೆ. ರಾಪಾಣನ ಮಡದಿ ನನ್ನ ಛಾಯೆ ಮಾತ್ರ. ರಾಪಾಣ ಶ್ರೀಹರಿಯ ಅಂಶರೂಪನಾಗಿದ್ದು ಅವನ ಪಾರ್ಷದನಾಗಿರುವನು.

'ರಾಧಾ' ಎಂಬಲ್ಲಿ **ರಾ** ಎಂದರೆ ರೋಮಕೂಪಗಳಲ್ಲಿ ಬ್ರಹ್ಮಾಂಡಗಳನ್ನು ಧರಿಸಿದ ಮಹಾವಿಷ್ಣು. **ಧಾ** ಎಂದರೆ ಲೋಕಧಾರಕಳು, ಲೋಕಮಾತೆ. ವಿಷ್ಣು ಸಹಿತಳಾದ ಲೋಕಮಾತೆ ಎನಿಸುವುದರಿಂದ ಮೂಲಪ್ರಕೃತಿಯಾದ ನಾನು ರಾಧೆ ಎನಿಸುತ್ತೇನೆ. ನಾನು ಶ್ರೀದಾಮನ ಶಾಪದಿಂದ ವೃಷಭಾನುವಿನ ಮಗಳಾಗಿ ಹುಟ್ಟಿದ್ದೇನೆ. ನೂರುವರ್ಷಕಾಲ ನನಗೆ ಹರಿಯ ವಿಯೋಗವಿದೆ. ವೃಷಭಾನು ಹರಿಯ ಒಬ್ಬ ಶ್ರೇಷ್ಠ ಪಾರ್ಷದ. ನನ್ನ ತಾಯಿ ಕಲಾವತಿ ಪಿತೃಗಳ ಮಾನಸಪುತ್ರಿ. ನಾನೂ ನನ್ನ ತಾಯಿಯೂ ಅಯೋನಿಜೆಯರು. ನಿಮ್ಮೊಡನೆಯೆ ನಾನು ಹರಿಲೋಕವನ್ನು ಸೇರುತ್ತೇನೆ.

ಯಶೋದೆ, ನಾನು ನಿನಗೆ ಹೇಳಬೇಕಾದುದನ್ನೆಲ್ಲ ಹೇಳಿದ್ದೇನೆ. ಜ್ಞಾನಿಯಾದ ನಂದನೊಡನೆ ಗೋಕುಲಕ್ಕೆ ತೆರಳು. ನನಗೆ ಈಗ ಧ್ಯಾನಕಾಲ. ಅದಕ್ಕೆ ತೊಂದರೆ ಮಾಡಿದರೆ ಮಹಾ ಪಾಪ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ರಾಧಾಯಶೋದಾಸಂವಾದದಲ್ಲಿ ನೂರಹನ್ನೊಂದನೆ ಅಧ್ಯಾಯ ಮುಗಿಯಿತು*

—○—

## ದುರ್ವಾಸಮುನಿ ಕೃಷ್ಣ ಸಂವಾದ — ಅಧ್ಯಾಯ - ೧೧೨

**ಶ್ರೀನಾರಾಯಣ ಮುನಿ:-** ಶ್ರೀಕೃಷ್ಣ ದ್ವಾರಕೆಯಲ್ಲಿ ವಸುದೇವನ ಅನುಮತಿ ಪಡೆದು ರತ್ನಮಯವಾದ ರುಕ್ಮಿಣಿಯ ಅಂತಃಪುರವನ್ನು ಪ್ರವೇಶಿಸಿದ. ಅಲ್ಲಿ ರತ್ನಮಯವಾದ ಮಂಚದಲ್ಲಿ ಮಲಗಿದ ನವಯೌವನವತಿಯಾದ ದೇವಿಯನ್ನು ಕಂಡ. ಅವಳಿನ್ನೂ ನವವಧು, ಪ್ರೌಢಳಲ್ಲ, ನವಸಂಗಮಕ್ಕೆ ನಾಚಿದಳು. ಕೃಷ್ಣನಿಗೆ ನಮಿಸಿದಳು. ಕೃಷ್ಣ ಅವಳನ್ನು ರತ್ನಮಂಚದಲ್ಲಿ ರಮಿಸಿದ. ಮಂಗಳ ಮುಹೂರ್ತದಲ್ಲಿ ಮಂಗಳಾಂಗಿಯೊಡನೆ ರಮಿಸಿದಾಗ ಆ ಸುಖ ಸಂಭೋಗದಲ್ಲಿ ದೇವಿ ಮೈಮರೆತಿದ್ದಳು. ಅದರ ಫಲವಾಗಿ ಜನಿಸಿದವನೆ ಹಿಂದೆ ಶಿವನಿಂದ ಸುಟ್ಟು ಬೂದಿಯಾಗಿದ್ದ ಮನ್ಮಥ. ಅವನು ಪ್ರದ್ಯುಮ್ನನಾಗಿ ಜನಿಸಿ ಶಂಬರಾಸುರನನ್ನು ಕೊಂದು ಅವನ ಅರಮನೆಯಲ್ಲಿಯೆ ತನ್ನ ಮಡದಿಯಾದ ರತಿಯನ್ನು ಪಡೆದ. ರತಿ ಮಾಯಾವತಿ ಎಂಬ ಅಸುರನ ಅರಮನೆ ಸೇರಿ ಅವನಿಗೆ ಛಾಯೆಯನ್ನಿತ್ತು ತಾನು ಪ್ರದ್ಯುಮ್ನನನ್ನು ಸೇರಿದಳು.

**ನಾರದ:-** ಪ್ರದ್ಯುಮ್ನ ಶಂಬರಾಸುರನನ್ನು ಹೇಗೆ ಕೊಂದ? ಆ ಮಂಗಳ ಕಥೆಯನ್ನು ವಿಸ್ತಾರವಾಗಿ ಹೇಳು.

**ನಾರಾಯಣ ಮುನಿ:-** ರುಕ್ಮಿಣಿ ಪ್ರದ್ಯುಮ್ನನನ್ನು ಪ್ರಸವಿಸಿ ಏಳು ದಿನಗಳು ಕಳೆದಾಗಲೆ ಶಂಬರಾಸುರ ಮಾಯೆಯಿಂದ ಶಿಶುವನ್ನು ಅಪಹರಿಸಿ ತನ್ನ ಅರಮನೆಗೊಯ್ದ. ಮಕ್ಕಳಿಲ್ಲದ ಆದೈತ್ಯ ಶಿಶುವನ್ನು ಹೊಂದಿ ಸಂತುಷ್ಟನಾದ. ಮಾಯಾವತಿಯ ಕೈಗಿತ್ತ. ಮಾಯಾವತಿ ಹರ್ಷಗೊಂಡಳು. ಚೆನ್ನಾಗಿ ಮಗುವನ್ನು ಪೋಷಿಸಿ ಪಾಲಿಸಿ ಒಂದು ದಿನ ಏಕಾಂತದಲ್ಲಿ ಅವನೊಡನೆ ಕುಳಿತಿದ್ದಾಗ ಸರಸ್ವತಿ ಬಂದು ಹೇಳಿದಳು.

'ಮಾಯಾವತಿ, ಹಿಂದೆ ಶಿವನ ಕೋಪಾಗ್ನಿಯಲ್ಲಿ ಭಸ್ಮನಾದ ನಿನ್ನ ಪತಿಯೆ ಈ ಶಿಶು. ಇವನು ರುಕ್ಮಿಣಿಯ ಪುತ್ರ. ಶಂಬರಾಸುರ ಕದ್ದು ತಂದಿದ್ದಾನೆ. ಆದರಿಂದ ಈತ ನಿನ್ನ ಪತಿಯೆ ಹೊರತು ಪುತ್ರನಲ್ಲ. ಪ್ರದ್ಯುಮ್ನ, ಇವಳು ನಿನ್ನ ಮಡದಿ. ಇವಳೊಡನೆ ನೀನು ರಮಿಸಬಹುದು. ನೀನು ಮನ್ಮಥ, ರುಕ್ಮಿಣೀಪುತ್ರನಾಗಿ ಜನಿಸಿದವ. ದೈತ್ಯಪುತ್ರನಲ್ಲ. ಈ ನಿನ್ನ ಮಡದಿ ಇಂದಿನವರೆಗೂ ನಿನ್ನ ವಿರಹದಿಂದ ಹೆಣ್ಣು ಜಿಂಕೆಯಂತೆ ನಿತ್ಯ ಅಳುತ್ತಿದ್ದಳು.' ಹೀಗೆ ಹೇಳಿ ಸರಸ್ವತಿ ಬ್ರಹ್ಮಲೋಕಕ್ಕೆ ತೆರಳಿದಳು. ಸುಂದರನಾದ ಪ್ರದ್ಯುಮ್ನ ರತಿಯೊಡನೆ ಏಕಾಂತದಲ್ಲಿ ರಮಿಸತೊಡಗಿದ. ಒಂದು ದಿನ ಅವನು ಹೀಗೆ ರತಿಯೊಡನೆ ಏಕಾಂತದಲ್ಲಿ ರಮಿಸುವುದನ್ನು ಶಂಬರಾಸರ ನೋಡಿಬಿಟ್ಟ. ರತಿ ಎದೆಯ ಮೇಲೆ ಪ್ರದ್ಯುಮ್ನನನ್ನು ಮಲಗಿಸಿಕೊಂಡು ರತಿಸುಖ ಅನುಭವಿಸುತ್ತ ಮೈಮರೆತಿದ್ದುದನ್ನು ಕಂಡ ಅಸುರ ಕುಪಿತನಾಗಿ ಖಡ್ಗ ಹಿರಿದು ಗರ್ಜಿಸಿದ -

'ಪ್ರದ್ಯುಮ್ನ, ನಿನಗೆ ಧಿಕ್ಕಾರ. ನೀನು ಮಹಾ ಕಾಮುಕ, ಮೂರ್ಖ, ಪಂಡಿತನೆಂದು ತನ್ನನ್ನು ತಾನೆ ತಿಳಿದುಕೊಂಡವ, ಪಾತಕಿಗಳಲ್ಲೆಲ್ಲ ಮಹಾಪಾತಕಿಯಾದ ಮಾತೃಗಾಮಿ.

ಮಾಯಾವತಿ, ನಿನಗೂ ಧಿಕ್ಕಾರ. ನೀನು ವ್ಯಭಿಚಾರಿಣಿ, ಕಾಮುಕಿ, ಬುದ್ಧಿಶೂನ್ಯಳು, ಮಗನನ್ನು ತಬ್ಬಿಕೊಂಡು ಏಕಾಂತದಲ್ಲಿ ರತಿಸುಖ ಪಡೆಯುತ್ತಿರುವಿ.'

ಹೀಗೆ ಹೇಳಿ ಅಸುರ ಮಾಯಾವತಿಯನ್ನು ಕೊಲ್ಲಲು ಬಂದ. ಪ್ರದ್ಯುಮ್ನ ಅವನನ್ನು ಬಲವಾಗಿ ಹಿಂದೆ ತಳ್ಳಿದ. ಆತ ಬಲು ದೂರಕ್ಕೆ ಬಿದ್ದು ಮೂರ್ಛಿತನಾದ. ಪುನಃ ಎಚ್ಚರಗೊಂಡು ಕೋಪದಿಂದ ಉರಿಯುತ್ತ ನೂರಾರು ಸೂರ್ಯರಂತೆ ಪ್ರಳಯಾಗ್ನಿಯಂತೆ ಜ್ವಲಿಸುವ ಶಿವದತ್ತವಾದ ಶೂಲವನ್ನು ಹಿಡಿದು ನಿಂತ. ಇದನ್ನು ಕಂಡು ಬ್ರಹ್ಮ ರುದ್ರ ಶೇಷ ಮುಂತಾದ ದೇವತೆಗಳೆಲ್ಲ ಬಂದರು. ವಾಯು ಪ್ರದ್ಯುಮ್ನನಿಗೆ ಕಿವಿಯಲ್ಲಿ ಉಸುರಿದ, 'ಪ್ರದ್ಯುಮ್ನ, ದುರ್ಗತಿ ಕಳೆವ ಮಹಾಮಾಯೆಯಾದ ದುರ್ಗೆಯನ್ನು ನೆನೆ.' ಇದನ್ನು ಕೇಳಿ ಪ್ರದ್ಯುಮ್ನ ದೇವಿಯನ್ನು ನೆನೆದ. ಅದರಿಂದ ಆ ಶೂಲ ಅವನ ಮೈ ಮೇಲೆ ಮನೋಹರವಾದ ಮಾಲೆಯಂತೆ ಬಿದ್ದಿತು. ಒಡನೆ ಆತ ಬ್ರಹ್ಮಾಸ್ತ್ರದಿಂದ ಅಸುರನನ್ನು ಸುಲಭವಾಗಿ ವಧಿಸಿದ. ರತಿಯನ್ನು ಕರೆದುಕೊಂಡು ವಿಮಾನವೇರಿ ದ್ವಾರಕೆಗೆ ತೆರಳಿದ. ದೇವತೆಗಳೆಲ್ಲರೂ ದುರ್ಗೆಯನ್ನು ಸ್ತುತಿಸಿ ಹೊರಟು ಹೋದರು. ರುಕ್ಮಿಣಿ ಮಗನನ್ನು ಸ್ವಾಗತಿಸಿ ಮಂಗಳಕಾರ್ಯ ಮಾಡಿಸಿದಳು. ಶ್ರೀಕೃಷ್ಣ ವೇದಮಂತ್ರಾಶೀರ್ವಾದ ಉತ್ಸವಗಳನ್ನು ಮಾಡಿಸಿದ. ಪಾರ್ವತಿಯನ್ನು ಪೂಜಿಸಿ ಬ್ರಾಹ್ಮಣ ಭೋಜನ ಮಾಡಿಸಿದ.

ಶ್ರೀಕೃಷ್ಣ ಮುಂದೆ ಶುಭಮುಹೂರ್ತಗಳಲ್ಲಿ ಏಳು ಕನ್ನಿಕೆಯರನ್ನು ಪಾಣಿಗ್ರಹಣ ಮಾಡಿದ. ಕಾಲಿಂದಿ, ಸತ್ಯಭಾಮಾ, ಸತ್ಯಾ, ನಾಗ್ನಜಿತೀ, ಸತೀ, ಜಾಂಬವತೀ, ಲಕ್ಷ್ಮಣಾ - ಇವರೆ ಆ ಏಳು ಕನ್ನಿಕೆಯರು. ಅವರಲ್ಲಿ ಎಲ್ಲರಲ್ಲಿಯೂ ಹತ್ತು ಜನ ಗಂಡುಮಕ್ಕಳು ಒಬ್ಬಳು ಹೆಣ್ಣುಮಗಳು ಎನ್ನುವ ಕ್ರಮದಿಂದಲೇ ಮಕ್ಕಳನ್ನು ಹುಟ್ಟಿಸಿದ. ನರಕಾಸುರನನ್ನು ಕೊಂದು ಅವನ ಮಗನನ್ನು ರಾಜನನ್ನಾಗಿ ಮಾಡಿದ. ಆ ಯುದ್ಧದಲ್ಲಿ ಬಲಿಷ್ಠನಾದ ಮುರಾಸುರನನ್ನು ಕೊಂದ. ನರಕಾಸುರನ ಬಂದೀಖಾನೆಯಲ್ಲಿದ್ದ ಹದಿನಾರುಸಾವಿರ ಕನ್ನಿಕೆಯರನ್ನೂ ಶುಭಮುಹೂರ್ತದಲ್ಲಿ ಮದುವೆಯಾದ. ಅವರಲ್ಲಿಯೂ ಪ್ರತಿಯೊಬ್ಬರಲ್ಲಿ ಹತ್ತುಜನ ಗಂಡುಮಕ್ಕಳೂ ಒಬ್ಬಳು ಹೆಣ್ಣು ಮಗಳೂ ಜನಿಸಿದರು.

ಒಮ್ಮೆ ಮೂರು ಕೋಟಿ ಶಿಷ್ಯರೊಂದಿಗೆ ದುರ್ವಾಸರು ದ್ವಾರಕೆಗೆ ಬಂದರು. ಉಗ್ರಸೇನ ಮಹಾರಾಜ ವಸುದೇವ ಕೃಷ್ಣ ಅಕ್ರೂರ ಉದ್ಧವರು ಪುರೋಹಿತರೊಡನೆ ಬಂದು ಮುನಿಯನ್ನು ಷೋಡಶೋಪಚಾರಗಳಿಂದ ಸತ್ಕರಿಸಿ ನಮಿಸಿದರು. ಮುನಿ ಅವರಿಗೆ ಎಲ್ಲರಿಗೂ ಮಂಗಳಾಶೀರ್ವಾದವಿತ್ತ. ವಸುದೇವ ಏಕಾನಂಶೆ ಎಂಬ ಕನ್ಯೆಯನ್ನು ಮುನಿಗೆ ದಾನಮಾಡಿ ಮುತ್ತು ಮಾಣಿಕ್ಯ ವಜ್ರಗಳನ್ನು ಬಳುವಳಿಯಾಗಿತ್ತ. ರತ್ನಮಯವಾದ ಭವ್ಯಮಂದಿರವನ್ನೂ ನೀಡಿದ. ಮುನಿ ನವ ವಧುವಿನೊಡನೆ ಆ ಮಂದಿರದಲ್ಲಿ ರಮಿಸಿದ. ಒಂದು ದಿನ ಮುನಿ ಧ್ಯಾನದೃಷ್ಟಿಯಿಂದ ಕೃಷ್ಣನನ್ನು ಕಂಡಾಗ ಕೃಷ್ಣ ಏಕಕಾಲದಲ್ಲಿ ಒಂದು ಮನೆಯಲ್ಲಿ ರತ್ನಮಂಚದಲ್ಲಿ ಮಲಗಿದ್ದ, ಇನ್ನೊಂದು ಮನೆಯಲ್ಲಿ ಪುರಾಣಶ್ರವಣ ಮಾಡುತ್ತಿದ್ದ, ಮತ್ತೊಂದು ಮನೆಯ ಅಂಗಳದಲ್ಲಿ

ಉತ್ಸವನಿರತನಾಗಿದ್ದ, ಮತ್ತೊಂದು ಮನೆಯಲ್ಲಿ ಸತ್ಯಭಾಮೆಯ ಕೈಯಿಂದ ತಾಂಬೂಲ ಸ್ವೀಕರಿಸುತ್ತಿದ್ದ, ಇನ್ನೊಂದು ಮನೆಯಲ್ಲಿ ರುಕ್ಮಿಣಿಯ ಕೈಯಿಂದ ಬಿಳಿಚಾಮರದ ಸೇವೆಯನ್ನು ಕೈಗೊಳ್ಳುತ್ತಿದ್ದ. ಮತ್ತೊಂದು ಮನೆಯಲ್ಲಿ ಕಾಲಿಂದಿಯ ಕೈಯಿಂದ ಕಾಲು ಒತ್ತಿಸಿಕೊಳ್ಳುತ್ತಿದ್ದ. ಆ ಅದ್ಭುತವನ್ನು ಕಂಡು ಮುನಿ ವಿಸ್ಮಯಗೊಂಡು ರುಕ್ಮಿಣಿಯ ಮನೆಯ ಸುಧರ್ಮಸಭೆಯಲ್ಲಿ ಕೃಷ್ಣನ ಬಳಿಗೆ ಓಡಿ ಬಂದು ಸ್ತುತಿಸಿದ -

'ಜಗನ್ನಾಥನಿಗೆ ಜಯವಾಗಲಿ, ಜಯವಾಗಲಿ. ಎಲ್ಲವನ್ನೂ ಗೆದ್ದ ಎಲ್ಲವನ್ನೂ ಆಳಿದ ಎಲ್ಲಕ್ಕೂ ಒಡೆಯನಾದ ಎಲ್ಲಕ್ಕೂ ಕಾರಣನಾದ ಜನಾರ್ದನನೆ, ಪುರಾತನ ನಿರ್ಗುಣ ಆಶಾರಹಿತ ನಿರ್ಲಿಪ್ತ ನಿರ್ದೋಷ ನಿರಾಕಾರ, ಭಕ್ತರ ಮೇಲೆ ಅನುಗ್ರಹ ಮಾಡಲೆಂದೆ ಮೈದೋರುವವ, ಸತ್ಯಸ್ವರೂಪ, ಸನಾತನ, ನಿತ್ಯನೂತನ, ಬ್ರಹ್ಮ ರುದ್ರ ಶೇಷ ಕುಬೇರ ವಂದಿತ, ಲಕ್ಷ್ಮೀದೇವಿಯಿಂದ ಸೇವಿತವಾದ ಪಾದಕಮಲ ಉಳ್ಳವ, ಬ್ರಹ್ಮರೂಪ ಜ್ಯೋತಿರೂಪ ಅನಿರ್ವಚನೀಯ ವೇದಗಳಿಗೂ ತಿಳಿಯಲಾಗದ ಗುಣರೂಪಗಳುಳ್ಳವ ಮಹಾಕಾಶದಂತೆ ವ್ಯಾಪ್ತ ಸರ್ವಮಾನ್ಯನಾದ ಪರಮಾತ್ಮನೆ ನಿನಗೆ ನಮಸ್ಕಾರ.'

ಹೀಗೆ ಸ್ತೋತ್ರ ಮಾಡಿ ನಮಿಸಿ ನಿಂತರು ದುರ್ವಾಸರು. ಶ್ರೀಕೃಷ್ಣ ಪುರಾತನ ವೇದೋಕ್ತ ತತ್ವಜ್ಞಾನವನ್ನು ಮುನಿಗೆ ಉಪದೇಶಿಸಿದ - 'ಮುನಿಯೆ, ಭಯ ಪಡಬೇಡ. ನೀನು ಶಿವನ ಅಂಶ. ಜ್ಞಾನದೃಷ್ಟಿಯಿಂದ ನನ್ನನ್ನು ತಿಳಿಯೆಯ?

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಅಹಮಾತ್ಮಾ ಚ ಸರ್ವೇಷಾಂ ಶವಾಃ ಸರ್ವೇ ಮಯಾ ವಿನಾ ।**
**ಪ್ರಾಣಿದೇಹಾನ್ಮಯಿ ಗತೇ ಯಾಂತ್ಯೇವ ಸರ್ವಶಕ್ತಯಃ ॥**

ನಾನು ಸರ್ವಜಗತ್ತಿಗೂ ಮೂಲಕಾರಣ. ನನ್ನ ಪ್ರೇರಣೆಯಿಂದಲೆ ಎಲ್ಲಕ್ಕೂ ಪ್ರವೃತ್ತಿ. ಎಲ್ಲರಿಗೂ ನಾನು ಆತ್ಮ. ನಾನು ಹೊರಟು ಹೋದರೆ ಎಲ್ಲರೂ ಶವದಂತೆ ನಿಶ್ಚೇಷ್ಟರಾಗುತ್ತಾರೆ. ಅವರ ಎಲ್ಲ ಶಕ್ತಿಯೂ ಮರೆಯಾಗುತ್ತದೆ. ಜನನ ಕಾಲದಲ್ಲಿಯೂ ನಾನೊಬ್ಬನೆ ಎಲ್ಲರಲ್ಲಿಯೂ ಬೇರೆಬೇರೆಯಾಗಿ ವ್ಯಕ್ತನಾಗುತ್ತೇನೆ. ಯಾರು ಉಣ್ಣುವನೊ ಅವನಿಗೆ ಮಾತ್ರ ತೃಪ್ತಿ, ಇತರರಿಗೆ ಅಲ್ಲ. ಆದರಿಂದ ಎಲ್ಲರಲ್ಲಿಯೂ ಜೀವ, ಅವನ ಕರ್ಮ, ಫಲಾನುಭವಗಳೆಲ್ಲ ಬೇರೆಬೇರೆಯೆ. ಎಲ್ಲರೂ ಅಪೂರ್ಣರು. ಪರಿಪೂರ್ಣತಮ ನಾನೊಬ್ಬನೆ. ಗೋಲೋಕದ ರಾಸಮಂಡಲದಲ್ಲಿ ಶ್ರೀದಾಮನು ಕೊಟ್ಟ ಶಾಪದಿಂದ ರಾಧೆ ನನ್ನನ್ನು ಈಗ ನೋಡಲೂ ಅಸಮರ್ಥಳಾಗಿದ್ದಾಳೆ. ಆದರೆ ಅವಳಲ್ಲಿಯೂ ನಾನು ಒಂದು ಅಂಶದಿಂದ ಇದ್ದೇನೆ. ಎಲ್ಲರಲ್ಲಿಯೂ ಅಂಶ, ಅದರ ಅಂಶ, ಅದರ ಅಂಶರೂಪಗಳಿಂದ ಇದ್ದೇನೆ. ಹಾಗೇ ರುಕ್ಮಿಣಿಯ ಮನೆಯಲ್ಲಿ ಒಂದು ಅಂಶದಿಂದ, ಬೇರೆ ಪತ್ನಿಯರ ಮನೆಗಳಲ್ಲಿಯೂ ಬೇರೆ ಅಂಶಗಳಿಂದ ನಾನಿದ್ದೇನೆ.' ಹೀಗೆ ಹೇಳಿ ಶ್ರೀಕೃಷ್ಣ ಮನೆಯೊಳಗೆ ನಡೆದ. ದುರ್ವಾಸ ಪತ್ನಿಯನ್ನು ತೊರೆದು ತಪಸ್ಸಿಗೆ ಹೊರಟ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಮುನಿ ಕೃಷ್ಣ ಸಂವಾದವೆಂಬ ನೂರಹನ್ನೆರಡನೆ ಅಧ್ಯಾಯ ಮುಗಿಯಿತು.*

## ದುರ್ವಾಸ ಪಾರ್ವತಿ ಸಂವಾದ, ಯುಧಿಷ್ಠಿರನ ರಾಜಸೂಯಯಾಗ, ಗಣೇಶಪೂಜೆ

ಅಧ್ಯಾಯ - ೧೧೩

**ಶ್ರೀನಾರಾಯಣ ಮುನಿ ಹೇಳಿದ:-** 'ದುರ್ವಾಸಮುನಿ ಶಿಷ್ಯಸಮೇತನಾಗಿ ದ್ವಾರಕೆಯನ್ನು ಬಿಟ್ಟು ಶಿವನನ್ನು ಕಾಣಲು ಭಕ್ತಿಯಿಂದ ಕೈಲಾಸಕ್ಕೆ ನಡೆದ. ಅಲ್ಲಿ ಶಿವ ಪಾರ್ವತಿಯರನ್ನು ನಮಿಸಿ ಶ್ರೀಕೃಷ್ಣನ ಎಲ್ಲ ವೃತ್ತಾಂತವನ್ನೂ ಹೇಳಿದ. ತನ್ನ ಮನಸ್ಸಿನಲ್ಲಿ ವೈರಾಗ್ಯ ಉದಿಸಿದುದನ್ನೂ ತಪಸ್ಸು ಮಾಡುವ ಬಯಕೆಯನ್ನೂ ವ್ಯಕ್ತಮಾಡಿದ. ಮುನಿಯ ಮಾತನ್ನು ಕೇಳಿ ಪಾರ್ವತಿ ನಕ್ಕು ನುಡಿದಳು -

'ಧರ್ಮಸ್ವರೂಪ ನಿನಗೆ ತಿಳಿದಿಲ್ಲ. ತಾನು ಧರ್ಮಿಷ್ಠನೆಂದು ಮಾತ್ರ ಹೇಳಿಕೊಳ್ಳುತ್ತಿ. ಮಕ್ಕಳಿಲ್ಲದ ಸತಿಯನ್ನು ಬಿಟ್ಟು ತಪಸ್ಸಿಗೆ ಎಲ್ಲಿಗೆ ಹೋಗುವಿ? ಮಕ್ಕಳಿಲ್ಲದ ಯುವತಿಯಾದ ಉತ್ತಮಕುಲದ ಸತಿಯನ್ನು ಬಿಟ್ಟು ಸನ್ಯಾಸಿಯಾಗಿಯೋ ವ್ಯಾಪಾರಿಯಾಗಿಯೋ ತೀರ್ಥಯಾತ್ರೆ ತಪಸ್ಸುಗಳಿಗಾಗಿಯೋ ಮೋಕ್ಷಸಾಧನೆಗಾಗಿಯೋ ಶಾಶ್ವತವಾಗಿ ದೂರ ಹೋದರೆ ಅವನಿಗೆ ಮೋಕ್ಷವಿಲ್ಲ. ಧರ್ಮಹಾನಿ ಮಾತ್ರವೆ ಉಂಟಾಗುವುದು. ಆ ಸತಿಯ ಶಾಪದಿಂದ ನರಕವೂ ಲಭಿಸುವುದು. ಈ ಲೋಕದಲ್ಲಿ ಕೀರ್ತಿಯೂ ನಾಶವಾಗುವುದು ಎಂದು ಬ್ರಹ್ಮ ಹೇಳುತ್ತಿದ್ದಾನೆ. ಅದರಿಂದ ನೀನು ದ್ವಾರಕೆಗೇ ಹೋಗು. ನಿನ್ನ ಧರ್ಮವನ್ನು ಕಾಪಾಡಿಕೊಳ್ಳು. ಏಕಾನಂಶೆ ನನ್ನ ಅಂಶದಿಂದ ಹುಟ್ಟಿದವಳು. ಅವಳನ್ನು ಧರ್ಮದಿಂದ ಕಾಪಾಡು. ಸದಾ ಲಕ್ಷ್ಮೀಯಿಂದ ಆರಾಧಿಸಲ್ಪಡುವ, ಶಿವನಿಂದಲೂ ಸನಕಾದಿ ಮುನಿಗಳಿಂದಲೂ ಸ್ತೋತ್ರ ಮಾಡಲ್ಪಡುವ, ಬೇಡಿದವರಿಗೆ ಕಲ್ಪವೃಕ್ಷದಂತಿರುವ ಕೃಷ್ಣಪರಮಾತ್ಮನ ಪಾದಕಮಲವನ್ನು ಬಿಟ್ಟು ತಪಸ್ಸಿಗೆ ಎಲ್ಲಿಗೆ ಹೋಗುವಿ? ಮಗು, ಬಾಯಾರಿದವನು ಅಮೃತವನ್ನು ಬಿಟ್ಟು ಹೋಗುವುದುಂಟೆ? ಶ್ರೀಕೃಷ್ಣನ ಪಾದಕಮಲವನ್ನು ಸ್ವಪ್ನದಲ್ಲಿ ಆರಾಧಿಸಿದರೂ ನೂರಾರು ಜನ್ಮಗಳ ಪಾಪಗಳನ್ನು ಕಳೆದುಕೊಳ್ಳುತ್ತಾನೆ, ಸಂಶಯ ಬೇಡ. ಬಾಲ್ಯ ಕೌಮಾರ ಯೌವನಗಳಲ್ಲಿ ತಿಳಿದೊ ತಿಳಿಯದೆಯೋ ಮಾಡಿದ ಎಲ್ಲ ಪಾಪಗಳೂ ಭಸ್ಮವಾಗುವುವು. ಭಾರತವರ್ಷದಲ್ಲಿ ಪ್ರತ್ಯಕ್ಷವಾಗಿ ಶ್ರೀಕೃಷ್ಣನ ಪಾದಕಮಲವನ್ನು ಕಂಡವನು ತಕ್ಷಣವೆ ಜೀವನ್ಮುಕ್ತನಾಗಿ ಪೂಜ್ಯನೆನಿಸುತ್ತಾನೆ. ಕೋಟಿ ಜನ್ಮಗಳಲ್ಲಿ ಮಾಡಿದ ಪಾಪದಿಂದ ಬಿಡುಗಡೆ ಹೊಂದುತ್ತಾನೆ. ಅವನಿಂದ ಎಲ್ಲ ತೀರ್ಥಗಳೂ ಪವಿತ್ರವಾಗುವುವು. ಕೃಷ್ಣನಿಗಾಗಿ ಮಾಡಿದ ತಪಸ್ಸು ತಪಸ್ಸೆನಿಸುತ್ತದೆ, ಪುಣ್ಯ ಪುಣ್ಯವೆನಿಸುತ್ತದೆ. ತನ್ನ ಪುನರ್ಜನ್ಮವನ್ನು ಇಲ್ಲವಾಗಿಸುತ್ತದೆ. ಕೃಷ್ಣಭಕ್ತಿ ಹೀನನಾದ ಬ್ರಾಹ್ಮಣ ವೇದಪಾರಂಗತನಾದರೂ ಸರಿಯೆ, ಸಂಭಾಷಣೆಗೆ ಯೋಗ್ಯನಲ್ಲ. ಸಂಭಾಷಣ ಮಾಡಿದರೆ ಭಕ್ತನ ಭಕ್ತಿ ನಶಿಸುತ್ತದೆ. ಕೃಷ್ಣನ ನೈವೇದ್ಯ ಉಣ್ಣುವ ಬ್ರಾಹ್ಮಣ ಸ್ವಯಂ ಕೃಷ್ಣನಂತೆ ಅಗ್ನಿವಾಯು ಸಂಪರ್ಕವಿಲ್ಲದೆಯೂ ಪವಿತ್ರನೆನಿಸುತ್ತಾನೆ,

ಜಗತ್ತನ್ನೆ ಪವಿತ್ರಗೊಳಿಸಲು ಸಮರ್ಥನಾಗುತ್ತಾನೆ. ಕೃಷ್ಣನ ಸ್ಮರಣ ಮಾತ್ರದಿಂದಲೆ ಎಲ್ಲ ತಪಸ್ಸುಗಳ ಫಲ ಸಿಗುತ್ತಿರುವಾಗ ನೀನು ತಪಸ್ಸಿಗೆ ಎಲ್ಲಿಗೆ ಹೋಗುವಿ? ಕೃಷ್ಣಪರಮಾತ್ಮನಲ್ಲಿ ಭಕ್ತಿ ಹುಟ್ಟಿಸದ ಗುರು ಗುರುವಲ್ಲ, ಪರಮಶತ್ರು, ಅವನು ಶಿಷ್ಯನ ಜನ್ಮವನ್ನು ನಿಷ್ಫಲಗೊಳಿಸುತ್ತಾನೆ.'

ಪಾರ್ವತಿ ಹೀಗೆ ಹೇಳುತ್ತಿದ್ದಂತೆ ಶಿವ ಕೃಷ್ಣಭಕ್ತಿಯಲ್ಲಿ ಮೈಮರೆತು ಮೈಯೆಲ್ಲ ರೋಮಾಂಚಗೊಂಡು ಪಾರ್ವತಿಯನ್ನು ಹೊಗಳಿದ. ದುರ್ವಾಸಮುನಿ ಶಿವ ಪಾರ್ವತಿಯರ ಪಾದಕಮಲಗಳನ್ನು ನಮಿಸಿ ಕೃಷ್ಣನ ಪಾದಕಮಲಗಳನ್ನು ನೆನೆಯುತ್ತ ತಿರುಗಿ ದ್ವಾರಕೆಗೇ ನಡೆದ. ಹರಿಯನ್ನು ಕಂಡು ಸ್ತುತಿಸಿದ. ಏಕಾನಂಶೆಯ ಮನೆಗೆ ಹೋಗಿ ಅವಳೊಡನೆ ವಿಹರಿಸಿದ.

ಶ್ರೀಕೃಷ್ಣನನ್ನು ಅತ್ತ ಹಸ್ತಿನಾಪುರದಲ್ಲಿ ಯುಧಿಷ್ಠಿರ ನೆನೆಯುತ್ತಿದ್ದ. ಅದರಿಂದ ಕೃಷ್ಣ ಅಲ್ಲಿಗೆ ಹೋಗಿ ಕುಂತಿ ಯುಧಿಷ್ಠಿರ ಮತ್ತು ಅವನ ಸೋದರರನ್ನು ಮಾತನಾಡಿಸಿ ಉಪಾಯದಿಂದ ಜರಾಸಂಧ ಸಾಲ್ವರನ್ನು ನಾಶಗೊಳಿಸಿ ವಿಧ್ಯುಕ್ತ ದಕ್ಷಿಣೆಗಳೊಂದಿಗೆ ರಾಜಸೂಯ ಯಾಗವನ್ನು ಮಾಡಿಸಿದ. ಆ ಯಾಗದಲ್ಲಿ ಶಿಶುಪಾಲ ದಂತವಕ್ರರನ್ನೂ ಕೊಂದ. ದೇವತೆಗಳಿಂದ ರಾಜರುಗಳಿಂದ ತುಂಬಿದ ಸಭೆಯಲ್ಲಿ ಅವರು ಕೃಷ್ಣನನ್ನು ಬಹಳ ನಿಂದಿಸಿದರು. ಅವರ ಶರೀರಗಳು ಬಿದ್ದಾಗ ಅಲ್ಲಿಂದ ಹೊರಗೆ ಹೊರಟುಹೋದ ಜಯ ವಿಜಯರು ವೈಕುಂಠದ ಬಾಗಿಲು ಕಾಣದೆ ತಿರುಗಿ ಬಂದು ಕೃಷ್ಣನನ್ನು ಸ್ತುತಿಸಿದರು -

ಶ್ರೀಹರಿ, ವೇದವೇದಾಂಗಗಳಿಗೆ ಸುರ ಅಸುರರಿಗೆ ಪ್ರಾಕೃತರಾದ ದೇಹಿಗಳಿಗೆ ಎಲ್ಲರಿಗೂ ನೀನು ಜನಕ. ಸ್ವೇಚ್ಛೆಯಿಂದ ಸೂಕ್ಷ್ಮಸೃಷ್ಟಿ ಮಾಡಿ ಕಲ್ಪಭೇದವನ್ನೂ ಮಾಡುತ್ತಿ. ಬ್ರಹ್ಮ ರುದ್ರ ಶಿವ ಮನುಗಳು ಮುನಿಗಳು ವೇದಗಳು ಲೋಕಪಾಲಕರು ದಿಕ್ಪಾಲಕರು ಗ್ರಹಗಳು ಎಲ್ಲರಲ್ಲಿಯೂ ಒಂದೊಂದು ಅಂಶದಿಂದ ನೀನಿರುವಿ. ಪುರುಷರಲ್ಲಿಯೂ ಸ್ತ್ರೀಯರಲ್ಲಿಯೂ ನಪುಂಸಕರಲ್ಲಿಯೂ ನೀನೆ ಇರುವಿ. ನೀನು ಕಾರಣನೂ ಕಾರ್ಯನೂ ಆಗಿರುವಿ. ನೀನೆ ಜನ್ಯನೂ ಜನಕನೂ ಆಗಿರುವಿ. ಯಂತ್ರದ ದೋಷಕೆ ಯಂತ್ರ ನಡೆಸುವವನ ಅಧೀನ. ಎಲ್ಲರೂ ಯಂತ್ರರು, ನೀನು ಯಂತ್ರ ನಡೆಸುವವ. ಎಲ್ಲರೂ ನಿನ್ನ ಅಧೀನ. ಅದರಿಂದ ಮೂಢನಾಗಿದ್ದರೂ ನಿನ್ನ ದ್ವಾರಪಾಲಕನಾಗಿರುವುದರಿಂದ ನನ್ನ ಅಪರಾಧವನ್ನು ಕ್ಷಮಿಸು. ನಾನು ಬ್ರಾಹ್ಮಣಶಾಪ ಕ್ಕೊಳಗಾಗಿ ದುರ್ಬುದ್ಧಿ ಹೊಂದಿದೆ. ಕಾಪಾಡು, ಕಾಪಾಡು, ಜಗದ್ಗುರುವೆ!'

ಹೀಗೆ ಸ್ತೋತ್ರ ಮಾಡಿ ಜಯ ವಿಜಯರು ವೈಕುಂಠದ ಬಾಗಿಲನ್ನು ಸುಲಭವಾಗಿ ಸೇರಿದರು. ಅವರು ಮಾಡಿದ ಸ್ತೋತ್ರವನ್ನು ಕೇಳಿ ಎಲ್ಲರೂ ವಿಸ್ಮಯಗೊಂಡರು. ಕೃಷ್ಣ ಪರಿಪೂರ್ಣಪರಮಾತ್ಮನೆಂದು ತಿಳಿದರು. ಹೀಗೆ ಕೃಷ್ಣ ರಾಜಸೂಯಯಾಗ ಮಾಡಿಸಿ ಬ್ರಾಹ್ಮಣಭೋಜನ ಮಾಡಿಸಿದ. ಮುಂದೆ ಭೇದೋಪಾಯದಿಂದ ಕೌರವ ಪಾಂಡವರೊಳಗೆ ಯುದ್ಧ ಮಾಡಿಸಿ ಭೂಭಾರವನ್ನು ಇಳುಹಿದ. ದ್ವಾರಕೆಗೆ ಬಂದು ಉಗ್ರಸೇನನ ಇಚ್ಛೆಯಂತೆ ಬಹುಕಾಲ ವಾಸಮಾಡಿದ. ಓರ್ವ ಬ್ರಾಹ್ಮಣೆಯ ಮೃತ ಪುತ್ರರನ್ನು ಬದುಕಿಸಿಕೊಟ್ಟ. ಅದನ್ನು ತಿಳಿದ ದೇವಕಿ ತನ್ನ ಮೃತಪುತ್ರರನ್ನೂ ತಿರುಗಿ

ತಂದುಕೊಡೆಂದು ಬೇಡಿದಳು. ಕೃಷ್ಣ ಅವರನ್ನೂ ತಂದು ಕೊಟ್ಟ. ಸುದಾಮನೆಂಬ ದರಿದ್ರ ಬ್ರಾಹ್ಮಣ ಶರಣಾರ್ಥಿಯಾಗಿ ದ್ವಾರಕೆಗೆ ಬಂದಾಗ ಅವನ ಕೈಯಿಂದ ಭಕ್ತವತ್ಸಲನಾದ ಕೃಷ್ಣ ಅವಲಕ್ಕಿ ಕಾಳನ್ನು ಸ್ವೀಕರಿಸಿ ಅವನಿಗೆ ಮುಂದೆ ಏಳುತಲೆಗಳ ವರೆಗೂ ಸ್ಥಿರವಾಗಿ ನಿಲ್ಲಬಲ್ಲ ರಾಜ್ಯ ಸಂಪತ್ತನ್ನು ನೀಡಿದ. ಅವನ ರಾಜ್ಯ ಇಂದ್ರನ ಅಮರಾವತಿಯಂತಾಯಿತು. ಅವನು ಕುಬೇರನಂತೆ ದೊಡ್ಡ ಧನಿಕನಾದ. ಜೊತೆಗೆ ನಿಶ್ಚಲವಾದ ಹರಿಭಕ್ತಿಯನ್ನೂ ದುರ್ಲಭವಾದ ಹರಿದಾಸ್ಯವನ್ನೂ ಗೋಲೋಕದಲ್ಲಿ ಉತ್ತಮವಾದ ಸ್ಥಾನವನ್ನೂ ಅವನಿಗಿತ್ತ, ಶ್ರೀಕೃಷ್ಣ. ಪಾರಿಜಾತವನ್ನು ಹರಣ ಮಾಡಿ ದೇವೇಂದ್ರನ ಅಹಂಕಾರವನ್ನೂ ಕಳೆದ. ಸತ್ಯಭಾಮೆಯಿಂದ ಪುಣ್ಯಕವೆಂಬ ವ್ರತವನ್ನೂ ಅವಳ ಇಷ್ಟದಂತೆ ಮಾಡಿಸಿದ. ಆ ವ್ರತದಲ್ಲಿ ಸನತ್ಕುಮಾರರಿಗೆ ತನ್ನನ್ನು ದಕ್ಷಿಣೆಯಾಗಿ ಕೊಡಿಸಿದ. ಬ್ರಾಹ್ಮಣ ಸಂತರ್ಪಣೆ ಮಾಡಿಸಿ ಅವರಿಗೆ ರತ್ನಾದಿಗಳನ್ನು ಕೊಡಿಸಿದ. ಸತ್ಯಭಾಮೆಯ ಗೌರವವನ್ನು ಎಲ್ಲೆಡೆ ಅಭಿವೃದ್ಧಿ ಪಡಿಸಿದ. ರುಕ್ಮಿಣಿಗೂ ಉಳಿದ ಪತ್ನಿಯರಿಗೂ ಸೌಭಾಗ್ಯವನ್ನು ಹೆಚ್ಚಿಸಿದ.

ವಿಷ್ಣುಭಕ್ತರಾದ ದೇವತೆಗಳಿಗೂ ಬ್ರಾಹ್ಮಣರಿಗೂ ಎಲ್ಲೆಡೆ ಗೌರವಾದರಗಳನ್ನು ಹೆಚ್ಚಿಸಿದ. ನಿತ್ಯನೈಮಿತ್ತಿಕ ಕರ್ಮಗಳು ನಡೆಯುವಂತೆ ಮಾಡಿದ. ಉತ್ತಮವಾದ ಆಧ್ಯಾತ್ಮಿಕ ಜ್ಞಾನವನ್ನು ಉದ್ಧವನಿಗೆ ಅನುಗ್ರಹಿಸಿದ. ಯುದ್ಧರಂಗದಲ್ಲಿ ಅರ್ಜುನನಿಗೆ ಗೀತೆಯನ್ನು ಬೋಧಿಸಿದ. ಕೃಪಾನಿಧಿಯಾದ ಆತ ಕೃಪೆಯಿಂದ ಭೂಮಂಡಲದ ರಾಜ್ಯಲಕ್ಷ್ಮಿಯನ್ನು ನಿಷ್ಕಂಟಕಗೊಳಿಸಿ ಯುಧಿಷ್ಠಿರನಿಗಿತ್ತ. ವಿಷ್ಣುವಿನ ಪತ್ನಿಯಾದ ದುರ್ಗೆಯನ್ನು ಗ್ರಾಮದೇವತೆಯನ್ನಾಗಿ ಮಾಡಿ ಅವಳಿಗೆ ಕೋಟಿ ಹೋಮಗಳಿಂದ ಕೂಡಿದ ಯಜ್ಞಗಳನ್ನು ಏರ್ಪಡಿಸಿದ. ಪಾರ್ವತಿಯ ಪ್ರೀತಿಗಾಗಿಯೂ ನಾನಾ ಪ್ರಕಾರದ ನೈವೇದ್ಯ ಧೂಪದೀಪಗಳನ್ನು ಏರ್ಪಡಿಸಿ ಬ್ರಾಹ್ಮಣಾರಾಧನೆ ನಡೆಸಿದ.

ರೈವತ ಪರ್ವತದ ರಮ್ಯವಾದ ಅಮೂಲ್ಯ ರತ್ನಮಂದಿರದಲ್ಲಿ ಗಣೇಶ ಪೂಜೆಯನ್ನೂ ಮಾಡಿಸಿದ. ಐದು ಲಕ್ಷ ಎಳ್ಳುಂಡೆಗಳ ನೈವೇದ್ಯವನ್ನೂ ಏಳು ಲಕ್ಷ ಕಡುಬು ನೈವೇದ್ಯವನ್ನೂ ಹತ್ತು ಲಕ್ಷ ಅಪೂಪನೈವೇದ್ಯವನ್ನೂ ಕಳಿತ ಬಾಳೆ ಹಣ್ಣುಗಳನ್ನೂ ಮಿಷ್ಟಾನ್ನ ಪಾಯಸ ಸ್ವಸ್ತಿಕ ಪಿಷ್ಟಕ ತುಪ್ಪ ಬೆಣ್ಣೆ ಮೊಸರು ಹಾಲುಗಳ ನೈವೇದ್ಯವನ್ನೂ ಧೂಪ ದೀಪ ಪಾರಿಜಾತ ಪುಷ್ಪಮಾಲೆಗಳು ಚಂದನ ಗಂಧ ಶುಭ್ರವಸ್ತ್ರಗಳು ಇವೆಲ್ಲವನ್ನೂ ಕೊಡಿಸಿದ. ಕೋಟಿ ಹೋಮಗಳಿಂದ ಕೂಡಿದ ಯಜ್ಞವನ್ನೂ ಮಾಡಿಸಿದ. ಬ್ರಾಹ್ಮಣ ಭೋಜನವನ್ನೂ ನಡೆಸಿದ. ಹತ್ತು ಬಗೆಯ ವಾದ್ಯಗಳನ್ನು ಮೊಳಗಿಸಿದ. ಸಾಂಬನ ಕುಷ್ಠನಿವಾರಣೆಗಾಗಿ ಸೂರ್ಯನ ಪೂಜೆಯನ್ನೂ ಏರ್ಪಡಿಸಿದ. ಹವಿಷ್ಯಾನ್ನ ನಿಯಮದಲ್ಲಿ ಸಾಂಬನೂ ಅವನ ತಾಯಿಯೂ ಇರುವಂತೆ ಮಾಡಿ ಒಂದು ವರ್ಷಕಾಲ ಸೂರ್ಯಪೂಜೆ ಸ್ತೋತ್ರಗಳನ್ನು ಮಾಡಿಸಿದ. ಸೂರ್ಯ ಪ್ರತ್ಯಕ್ಷನಾಗಿ ಸಾಂಬನಿಗೆ ವರವಿತ್ತ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಗಣೇಶಪೂಜೆ ಎಂಬ ನೂರಹದಿಮೂರನೆ ಅಧ್ಯಾಯ ಮುಗಿಯಿತು.*

## ಉಷೆ ಅನಿರುದ್ಧರ ಗಾಂಧರ್ವವಿವಾಹ

## ಅಧ್ಯಾಯ - ೧೧೪

**ಶ್ರೀನಾರಾಯಣ ಮುನಿ:-** ಶ್ರೀಕೃಷ್ಣನ ಪುತ್ರನಾದ ಪ್ರದ್ಯುಮ್ನನ ಪುತ್ರ ಅನಿರುದ್ಧ. ಅವನಲ್ಲಿ ಬ್ರಹ್ಮನ ಅಂಶವಿತ್ತು. ನವಯೌವನ ಯುಕ್ತನಾದ ಆತ ಒಂದು ದಿನ ಹೂವಿನ ಹಾಸಿಗೆ ಮೇಲೆ ಏಕಾಂತದಲ್ಲಿ ಮಲಗಿದ್ದಾಗ ಕನಸಿನಲ್ಲಿ ಘಮಗಮಿಸುವ ಹೂದೋಟದಲ್ಲಿ ಮೈಗೆ ಗಂಧ ಬಳಿದುಕೊಂಡು ನಗುಮೊಗದಿಂದ ಮಲಗಿರುವ ಸುಂದರಿಯೋರ್ವಳನ್ನು ಕಂಡ. ಮನೋಹರವಾದ ಭುಜಕೀರ್ತಿ ಬಳೆ ರತ್ನಕುಂಡಲ ಮುಂತಾದ ರತ್ನಾಭರಣಗಳನ್ನು ಅವಳು ಧರಿಸಿದ್ದಳು. ನವಿರಾದ ಸೀರೆ ಉಟ್ಟಿದ್ದಳು. ಮಾಗಿದ ತೊಂಡೆ ಹಣ್ಣಿನಂಥ ತುಟಿ, ಶರತ್ಕಾಲದ ಕಮಲದ ಕಾಂತಿಯನ್ನೂ ಕೋಟಿ ಚಂದ್ರರ ಕಾಂತಿಯನ್ನೂ ಧಿಕ್ಕರಿಸುವ ಮುಖ, ಮುತ್ತಿನ ಸಾಲಿನಂತೆ ಹೊಳೆವ ದಂತಪಂಕ್ತಿ, ಮಾಲತಿ ಹೂಗಳಿಂದ ಅಲಂಕೃತವಾದ ಮೂರು ಜಡೆಗಳು, ಕಸ್ತೂರಿ ಕೇಸರಿ, ಅಲಕ್ತಕ, ಗಂಧ ಕಾಡಿಗೆಗಳಿಂದ ಮಕರಿಕೆಯನ್ನು ಬರೆದುಕೊಂಡ ಕಪೋಲಗಳು, ದಾಳಿಂಬೆಯ ಹೂವಿನಾಕಾರದ ಸಿಂದೂರದ ಬೊಟ್ಟು, ಬಿಳಿಯಾದ ಬಾಳೆ ಕಂಬದಂಥ ತೊಡೆಗಳು, ಉನ್ನತ ಹಾಗೂ ಪುಷ್ಟವಾದ ಸ್ತನಗಳು ಅವಳ ಅಂದವನ್ನು ಹೆಚ್ಚಿಸಿದ್ದುವು. ನಿತಂಬಭಾರದಿಂದ ಬಾಗಿದ್ದಳು ಅವಳು. ಮನ್ಮಥಬಾಣಕ್ಕೆ ಗುರಿಯಾಗಿ ಓರೆಗಣ್ಣಿಂದ ನೋಡುತ್ತಿದ್ದಳು. ಗಾಳಿಗೆ ಅವಳು ಉಟ್ಟ ಸೀರೆ ಮೇಲೆ ಹಾರುತ್ತಿತ್ತು. ಅನಿರುದ್ಧ ನೋಡಿ ಮೋಹಗೊಂಡ. ಸಂಪಿಗೆ ಬಣ್ಣದ ಮೈಯವಳು, ಪ್ರೌಢೆ, ಶೃಂಗಾರಕ್ರೀಡೆಯ ಬಯಕೆಯನ್ನು ವ್ಯಕ್ತ ಮಾಡುತ್ತಿದ್ದುದನ್ನು ಕಂಡು ಆತ ಮೃದು ಮನೋಹರವಾಗಿ ಮಾತನಾಡಿಸಿದ -

'ನೀನಾರು, ಸುಂದರಿ? ದೇವಿಯೊ, ಗಂಧರ್ವಿಯೊ, ಯಾರ ಮಗಳು? ಯಾರನ್ನು ಬಯಸಿರುವಿ? ಮೂಲೋಕದಲ್ಲಿಯೂ ಎಣೆಯಿಲ್ಲದ ಚೆಲುವಿನ ಮುದ್ದೆಯಾಗಿ ಮುನಿಗಳ ಮನಸ್ಸನ್ನೂ ಕಲಕುವವಳು. ನೀನು ಒಬ್ಬಳೆ ಇಲ್ಲಿ ಭಯಪಡದೆ ಹೇಗಿರುವಿ, ಹೇಳು. ನಾನು ಮೂಲೋಕದೊಡೆಯನಾದ ಕೃಷ್ಣನ ಮೊಮ್ಮಗ, ಪ್ರದ್ಯುಮ್ನನ ಪುತ್ರ, ಅನಿರುದ್ಧ. ಹೊಸಯೌವನದಲ್ಲಿ ಕಾಲಿರಿಸಿದವ. ಸ್ಫುರದ್ರೂಪಿ, ಶೃಂಗಾರಪ್ರಿಯ, ಕಾಮಶಾಸ್ತ್ರವಿಶಾರದ. ಕಾಮಿನಿಯರ ಬಯಕೆಯನ್ನು ತಣಿಸಲು ಸಮರ್ಥ. ನನ್ನೊಡನೆ ಸೇರು. ನನ್ನ ವೇಷಭೂಷಣ ಸುಂದರವಾಗಿವೆ. ಶೀಲ ಉತ್ತಮವಾಗಿದೆ. ರತಿಶೂರ, ರತಿರಸಜ್ಞ, ರತಿರಸಿಕ, ರತಿಪುತ್ರ, ರತಿರಸದಿಂದ ಮದಿಸಿದವ ನಾನು. ವ್ಯಾಧಿ ಇಲ್ಲದವ, ಯುವಕ. ರತಿಕಲಾಪ್ರವೀಣಳಾದ ನಿನ್ನಂಥ ಚೆಲುವೆ ಅಂಥವನೆ ಆದ ನನ್ನನ್ನು ಸೇರುವುದೆ ಚಂದ.' ಚೆಲುವೆ ನಾಚಿ ಕಣ್ಣು ಮುಖ ಮುಚ್ಚಿಕೊಂಡು ಓರೆಗಣ್ಣಿಂದ ನೋಡಿ ಮಾತನಾಡಿದಳು -

'ನೀನು ಕಾಮಪುತ್ರ, ಕಾಮದಿಂದ ವ್ಯಾಕುಲ ಮತ್ತು ಕಾಮಿನಿಯರಿಗೆ ಯೋಗ್ಯನೆನ್ನುವುದಾದರೆ ವಿವಾಹವನ್ನೇಕೆ ಆಲೋಚಿಸಲಿಲ್ಲ? ಮೂಲೋಕ

ದೊಡೆಯನಾದ ಕೃಷ್ಣನ ಮೊಮ್ಮಗ, ಯೋಗ್ಯನಾದ ಕಾಮನ ಪುತ್ರನೆಂದು ಹೇಳಿಕೊಳ್ಳುವಿ! ಎಲ್ಲರ ಮುಂದೆ ವಿವಾಹಿತಳಾದ ಧರ್ಮಪತ್ನಿ ಪತಿಯನ್ನು ಬಿಟ್ಟು ದೂರ ಹೋಗುವುದಿಲ್ಲ. ಬಯಸಿದಾಗೆಲ್ಲ ಸುಲಭವಾಗಿ ಒದಗಿ ಬರುತ್ತಾಳೆ. ಅನುರಾಗವಿಟ್ಟಿರುತ್ತಾಳೆ. ರಹಸ್ಯವಾಗಿ ಇಟ್ಟುಕೊಂಡ ಉಪಪತ್ನಿ ಹಾಗಲ್ಲ. ಅವಳು ಭಯ ಅನುರಾಗ ಹಣದಾಸೆ ಇವುಗಳಲ್ಲಿ ಯಾವುದಾದರೊಂದು ಇದ್ದರೆ ಮಾತ್ರ ಸಂಗಕ್ಕೆ ಒದಗುವವಳು. ಪತಿಯ ಅಧೀನದಲ್ಲಿಯೆ ಸದಾ ಇರುವುದಿಲ್ಲ. ಯಾವುದೊ ನಿಮಿತ್ತದಿಂದ ಪತ್ನಿಯಾಗಿರುವವಳು. ವೇದದಲ್ಲಿ ಆದರವಿಲ್ಲದವಳು. ಇಂಥವಳು ಪತಿಗೆ ನರಕಕ್ಕೆ ಸೋಪಾನಳಾಗುವುಳು. ಈ ಲೋಕ ಪರಲೋಕಗಳೆರಡರಲ್ಲಿಯೂ ಅಯಶಸ್ಸಿಗೆ ಕಾರಣಳಾಗುವಳು. ಸತ್ಕುಲದಲ್ಲಿ ಹುಟ್ಟಿದ ವಿಷ್ಣುಭಕ್ತನಾದ ಸತ್ಪುರುಷನೆಂದೂ ಇಂಥ ಪತ್ನಿಯಲ್ಲಿ ರಮಿಸಬಾರದು. ಭ್ರಾಂತಿಯಿಂದ ರಮಿಸಿದರೂ ಬೇಗನೆ ಎಚ್ಚೆತ್ತುಕೊಳ್ಳಬೇಕು. ಭ್ರಾಂತಿಯಿಂದ ರಮಿಸಲು ಹೊರಡುವುದು ಮಾನವನಿಗೆ ಸ್ವಾಭಾವಿಕ. ಎಚ್ಚತ್ತುಕೊಳ್ಳುವುದರಿಂದ ಮಹಾಫಲವಿದೆ. ಒಮ್ಮೆ ಎಚ್ಚೆತ್ತು ಪ್ರಾಯಶ್ಚಿತ್ತ ಮಾಡಿಕೊಂಡು ನಿವೃತ್ತಿಮಾರ್ಗ ಹಿಡಿದವನೂ ತಿರುಗಿ ಪಾಪಕಾರ್ಯಕ್ಕೆ ತೊಡಗಿದರೆ ಪ್ರಾಯಶ್ಚಿತ್ತ ಹಾಸ್ಯಾಸ್ಪದವಾಗುತ್ತದೆ. ಆನೆ ಮೈ ತೊಳೆದುಕೊಂಡರೂ ತಿರುಗಿ ಮಣ್ಣೆರಚಿಕೊಳ್ಳುವಂತೆ ಇದು.

ಸುಶೀಲೆಯಾದ ಸುಂದರಿಯಾದ ಧರ್ಮಪತ್ನಿ ಪತಿವ್ರತಿಯಾಗಿದ್ದು. ಬಯಸಿದಾಗೆಲ್ಲ ಸಂಗ ನೀಡುವಳು, ಪ್ರಿಯವಾದ ಮಾತುಗಳನ್ನಾಡುವಳು, ರತಿಸುಖ ನೀಡುವಳು. ಇಂಥವಳನ್ನು ವಯಸ್ಸಾಗಿ ಪುತ್ರವತಿಯೂ ಆಗಿದ್ದರೆ ಮಾತ್ರ ಬಿಟ್ಟು ತಪಸ್ಸಿಗೆ ಹೊರಡಬಹುದು. ಇಲ್ಲದಿದ್ದರೆ ಅವನ ತಪಸ್ಸು ಹಾಳಾಗುತ್ತದೆ. ಎಲ್ಲ ಕರ್ಮ ವ್ಯರ್ಥವಾಗುತ್ತದೆ. ದುಷ್ಕುಲದಲ್ಲಿ ಹುಟ್ಟಿ ದುಷ್ಟನಾಗಿ ಪರಸ್ತ್ರೀಯನ್ನು ಕೂಡಿದರೆ ಏಳು ತಲೆಗಳವರೆಗಿನ ಪಿತೃಗಳೊಂದಿಗೆ ನರಕ ಹೊಂದುತ್ತಾನೆ.

ನಾನು ಬಾಣಾಸುರನ ಮಗಳು ಉಷೆ. ಬಾಣ ಶಿವಭಕ್ತ. ಮೂಲೋಕವನ್ನೆ ಗೆದ್ದವ. ಶಿವನಂತೂ ಜಗದೊಡೆಯ. ಸ್ತ್ರೀ ಯಾವ ಕಾಲಕ್ಕೂ ಸ್ವತಂತ್ರಳಲ್ಲ. ಪರಾಧೀನಳು. ದುಷ್ಕುಲದಲ್ಲಿ ಹುಟ್ಟಿ ವ್ಯಭಿಚಾರ ನಿರತಳಾದವಳು ಮಾತ್ರ ಸ್ವತಂತ್ರಳಾಗಿರುವಳು. ಒಳ್ಳೆಯ ಕನ್ಯೆಯನ್ನು ತಂದೆಯೆ ಯೋಗ್ಯವರನಿಗೆ ನೀಡಬೇಕು. ಕನ್ಯೆ ತಾನೆ ಒಬ್ಬ ವರನನ್ನು ಸ್ವತಂತ್ರವಾಗಿ ಬಯಸಕೂಡದು. ಇದು ಸನಾತನಧರ್ಮ. ನೀನು ಯೋಗ್ಯವರ. ನಾನು ನಿನಗೆ ಯೋಗ್ಯಳಾದ ವಧು. ನೀನು ನನ್ನನ್ನು ಬಯಸುವಿಯಾದರೆ ಬಾಣನನ್ನು ಕೇಳು. ಶಿವನನ್ನೋ ಪಾರ್ವತಿಯನ್ನೋ ಕೇಳು.' ಹೀಗೆ ಹೇಳಿ ಸುಂದರಿ ಮರೆಯಾದಳು. ಒಡನೆ ಅನಿರುದ್ಧ ನಿದ್ದೆಯಿಂದ ಎಚ್ಚೆತ್ತು ಪ್ರೇಮದಿಂದ ವಿಹ್ವಲನಾದ. ಪ್ರಾಣವಲ್ಲಭೆಯನ್ನು ಕಾಣದೆ ವ್ಯಾಕುಲನಾದ. ವ್ಯಥೆಗೊಂಡ. ಅನ್ನ ನಿದ್ದೆಗಳನ್ನು ತೊರೆದು ಹುಚ್ಚನಂತಾದ. ಒಮ್ಮೆ ಮಲಗುತ್ತಾನೆ, ಒಮ್ಮೆ ಎದ್ದು ನಿಲ್ಲುತ್ತಾನೆ, ಒಮ್ಮೆ ಅಳುತ್ತಾನೆ ಇನ್ನೊಮ್ಮೆ ನಗುತ್ತಾನೆ. ಹೀಗೆ ವಿರಹ ದುಃಖದಿಂದ ಅಳುವ ಮಗನನ್ನು ಕಂಡು ತಾಯಿ ರತಿ ರುಕ್ಮಿಣಿ ದೇವಕಿ ಎಲ್ಲರೂ ಕೃಷ್ಣನಲ್ಲಿ ತಿಳಿಸಿದರು. ಅವನು ಎಲ್ಲವನ್ನು ಮೊದಲೆ ತಿಳಿದವ, ಸರ್ವಜ್ಞ. ನಕ್ಕು ಹೇಳಿದ-

'ಬಾಣನ ಮಗಳು ಉಷೆ ಶಿವಪಾರ್ವತಿಯರು ಜೊತೆಗಿರುವುದನ್ನು ನೋಡಿ ತಾನೂ ಹಾಗೆ ಒಬ್ಬ ಪತಿಯನ್ನು ಸೇರಬೇಕೆಂದು ಪಾರ್ವತಿಯಿಂದ ವರ ಪಡೆದಳು. ಬಳಿಕ ಪಾರ್ವತಿ ನಮ್ಮ ಅನಿರುದ್ಧನಿಗೆ ಸ್ವಪ್ನದಲ್ಲಿ ಉಷೆಯನ್ನು ತೋರಿಸಿ ಪ್ರಣಯೋನ್ಮಾದ ಉಂಟು ಮಾಡಿದಳು. ಈಗ ನಾನೂ ಉಷೆಗೆ ಸ್ವಪ್ನದಲ್ಲಿ ಅನಿರುದ್ಧನನ್ನು ತೋರಿಸಿ ಅವಳಲ್ಲಿ ಶೃಂಗಾರ ಭಾವವನ್ನು ಕೆರಳಿಸುತ್ತೇನೆ.'

ಕೃಷ್ಣ ಹಾಗೇ ಮಾಡಿದ. ಉಷೆ ರತ್ನಮಂಚದ ಮೇಲೆ ಹೂವು ಸುಗಂಧ ದ್ರವ್ಯಗಳಿಂದ ಸುವಾಸನೆಗೊಂಡ ಮೆತ್ತನೆಯ ಹಾಸಿಗೆಯಲ್ಲಿ ಮಲಗಿ ಸುಂದರವಾದ ಕನಸು ಕಂಡಳು. ನೀಲಮೇಘದಂತೆ ಹೊಳೆವ ನವಯುವಕ. ಕೋಟಿ ಮನ್ಮಥರಂತೆ ಆಕರ್ಷಿಸುವ ಪೀತಾಂಬರ ಉಟ್ಟು ಸರ್ವಾಭರಣಗಳಿಂದ ಸಿಂಗರಿಸಿಕೊಂಡು ಗಂಧಲೇಪನ ಮಾಡಿಕೊಂಡು ಹೂಮಾಲೆ ಧರಿಸಿ ನಗುಮೊಗದಿಂದ ರತ್ನಮಂಚದ ಮೇಲೆ ಮಲಗಿದ್ದಾನೆ. ಉಷೆ ಕಂಡು ಮೋಹಪರವಶಳಾಗಿ ಬಳಿಗೆ ಬಂದು ಕೇಳಿದಳು, 'ನೀನಾರು? ಬಾ ನನ್ನ ಬಳಿಗೆ. ನಾನು ನಿನ್ನೊಡನೆ ನವಸಂಗಮ ಬಯಸಿ ಬಂದಿದ್ದೇನೆ. ಅನುರಕ್ತಳೂ ಭಕ್ತಳೂ ಆದ ನನ್ನನ್ನು ನೀನು ಗಾಂಧರ್ವ ವಿಧಿಯಿಂದ ವಿವಾಹವಾಗು. ವಿವಾಹದ ಎಂಟು ಪ್ರಕಾರಗಳಲ್ಲಿ ಇದು ಬಹಳ ಸುಲಭ.

**ಅನುರಕ್ತಾಂ ಪ್ರಿಯಾಂ ಪ್ರಾಪ್ಯ ತ್ಯಜೇದ್ ಯಃ ಕಪಟೀ ಪುಮಾನ್।**
**ತಸ್ಮಾದ್ ಯಾತಿ ಮಹಾಲಕ್ಷ್ಮೀಃ ಶಾಪಂ ದತ್ವಾ ಸುದಾರುಣಂ ॥**

'ಅನುರಕ್ತಳೂ ಪ್ರಿಯೆಯೂ ಆದ ಕನ್ಯೆ ಬಳಿಗೆ ಬಂದರೂ ಕಪಟ ಬುದ್ಧಿಯಿಂದ ಅವಳನ್ನು ಪರಿತ್ಯಜಿಸಿದರೆ ಮಹಾಲಕ್ಷ್ಮಿ ಅವನಿಗೆ ಘೋರವಾದ ಶಾಪಕೊಟ್ಟು ದೂರ ಹೋಗುತ್ತಾಳೆ.' ಆಗ ಅನಿರುದ್ಧ ಹೇಳಿದ -

'ನಾನು ಶ್ರೀಕೃಷ್ಣನ ಮೊಮ್ಮಗ. ಪ್ರದ್ಯುಮ್ನನ ಮಗ. ಅವರ ಅನುಮತಿ ಇಲ್ಲದೆ ನಾನು ನಿನ್ನನ್ನು ಹೇಗೆ ವಿವಾಹವಾಗಲಿ?' ಹೀಗೆ ಹೇಳಿ ಅದೃಶ್ಯನಾದ. ಒಡನೆ ಉಷೆ ಎಚ್ಚತ್ತು ಅನಿರುದ್ಧನನ್ನು ಕಾಣದೆ ಕಳವಳಗೊಂಡಳು. ಸಖಿಯರ ನಡುವೆ ಅಳುತ್ತ ಸುಮ್ಮನೆ ಕುಳಿತಳು. ಸಖಿಯರಲ್ಲಿ ಒಬ್ಬಳು ಚಿತ್ರಲೇಖೆ ರಾಜಕುಮಾರಿಯನ್ನು ಸಂತೈಸುತ್ತ ಹೇಳಿದಳು-

'ಕುಮಾರಿ, ಸಮಾಧಾನ ಮಾಡಿಕೊಳ್ಳು. ನಿನಗೆ ಯಾರಿಂದ ಕಷ್ಟ ಒದಗಿತು? ಹೇಳು. ಸ್ವಯಂ ಶಿವ ಪಾರ್ವತಿಯರೇ ನಮ್ಮ ನಗರದಲ್ಲಿದ್ದಾರೆ.

**ಶಿವಸ್ಮರಣಮಾತ್ರೇಣ ಸರ್ವಾರಿಷ್ಟಂ ಪಲಾಯತೇ ।**
**ಶಿವಂ ಭವತಿ ಸರ್ವತ್ರ, ಶಿವ ಏವ ಶಿವಾಲಯಃ ॥**
**ಧ್ಯಾನಾದ್ ದುರ್ಗತಿನಾಶಿನ್ಯಾಃ ಸರ್ವದುರ್ಗಂ ವಿನಶ್ಯತಿ ।**
**ದದಾತಿ ಮಂಗಲಂ ತಸ್ಮೈ ಸರ್ವಮಂಗಲಮಂಗಲಾ ॥**

ಶಿವನ ಸ್ಮರಣಮಾತ್ರದಿಂದಲೆ ಎಲ್ಲ ಕಷ್ಟಗಳೂ ದೂರವಾಗುವುವು. ಎಲ್ಲೆಡೆ ಸುಖವೆ ಉಂಟಾಗುವುದು. ಮಂಗಳದಾಯಕನಾದ, ಮಂಗಲಗಳಿಗೆ ನೆಲೆ ಎನಿಸಿದವ,

**ಶಿವ. ದುರ್ಗತಿ ಕಳೆವ ಪಾರ್ವತಿಯ ಧ್ಯಾನದಿಂದ ಎಲ್ಲ ದುಃಖ ನಿವಾರಣೆಯಾಗುವುದು. ಸರ್ವಮಂಗಲಗಳಿಗೂ ಮಂಗಲ ರೂಪಳಾದ ಅವಳು ಮಂಗಲ ನೀಡುವಳು.'**

**ಚಿತ್ರಲೇಖೆ ಎಷ್ಟು ಹೇಳಿದರೂ ಉಷೆ ಸುಮ್ಮನಿದ್ದಳು. ಅನ್ನ ನಿದ್ದೆ ಬಿಟ್ಟು ಸದಾ ಅನಿರುದ್ಧನನ್ನೆ ಧ್ಯಾನಿಸಿದಳು. ಚಿತ್ರಲೇಖೆ ಕೊನೆಗೆ ಬಾಣನಿಗೂ ಅವನ ಪತ್ನಿಗೂ ಈ ವಿಷಯವನ್ನು ತಿಳಿಸಿದಳು. ಶಿವ ಪಾರ್ವತಿ ಸ್ಕಂದ ಗಣೇಶರಿಗೂ ಹೇಳಿದಳು. ಬಾಣ ಪತ್ನೀ ಸಮೇತನಾಗಿ ಶಿವನ ಬಳಿ ಬಂದು ದುಃಖ ಪರವಶನಾಗಿ ಕುಳಿತು ಬಿಟ್ಟ. ಶಿವ ಪಾರ್ವತಿಯರೂ ಸ್ಕಂದ ಗಣೇಶರೂ ನಕ್ಕರು. ಗಣೇಶ ನುಡಿದ-**

**ಯೋ ದದಾತಿ ಧ್ರುವಂ ದುಃಖಮನ್ಯಸ್ಮೈ ದಂಭಮೋಹಿತಃ ।**
**ಸೂಕ್ಷ್ಮಧರ್ಮವಿಚಾರೇಣ ಸ ವಿಂದತಿ ಚತುರ್ಗುಣಂ ॥**

'ಧರ್ಮಸೂಕ್ಷ್ಮವನ್ನು ವಿಚಾರಮಾಡಿದರೆ ಇನ್ನೊಬ್ಬರಿಗೆ ತೊಂದರೆ ಕೊಡುವವನು ಅದರ ನಾಲ್ಕರಷ್ಟು ತೊಂದರೆ ತಾನು ಅನುಭವಿಸಬೇಕಾಗುವುದೆಂಬುದು ಸ್ಪಷ್ಟವಾಗುತ್ತದೆ.' ಶಿವ ಪಾರ್ವತಿಯರು ಜೊತೆಗಿರುವುದನ್ನು ಕಂಡು ತಾನೂ ಹಾಗಿರಬೇಕೆಂದು ಬಯಸಿದ ಉಷೆಗೆ ಪಾರ್ವತಿ ವರನೀಡಿ ಸ್ವಪ್ನದಲ್ಲಿ ಅನಿರುದ್ಧನಿಗೆ ಉಷೆಯನ್ನು ತೋರಿಸಿದಳು, ಅವನನ್ನು ಪ್ರಣಯೋನ್ಮತ್ತನನ್ನಾಗಿ ಮಾಡಿದಳು. ಏನೂ ಹೇಳದೆ ಮೂಕಳಂತೆ ಶಿವನ ಬಳಿ ಕುಳಿತಳು. ಈಗ ಅದೆಲ್ಲವನ್ನೂ ತಿಳಿದ ಸರ್ವಜ್ಞನಾದ ಕೃಷ್ಣ ಉಷೆಗೆ ಸ್ವಪ್ನದಲ್ಲಿ ಅನಿರುದ್ಧನನ್ನು ತೋರಿ ಅವಳನ್ನು ಪ್ರಣಯೋನ್ಮಾದಕ್ಕೆ ಗುರಿ ಮಾಡಿದ್ದಾನೆ. ಅವಳು ಅನಿರುದ್ಧನನ್ನು ಸೇರಲು ಬಯಸಿದ್ದಾಳೆ. ಆದರೆ ಧರ್ಮದ ಭಯದಿಂದ ಸುಮ್ಮನಿದ್ದಾಳೆ.

ಧರ್ಮಭಯವಿಲ್ಲದ, ದುಷ್ಕುಲದಲ್ಲಿ ಹುಟ್ಟಿಬಂದ ಸ್ತ್ರೀಯಾಗಿದ್ದರೆ ಸುಂದರ ಪುರುಷನ ದರ್ಶನದಿಂದ ಪರವಶಳಾಗಿ ಅನ್ನ ನಿದ್ದೆಗಳನ್ನು ಬಿಡುವುದು ಮಾತ್ರವಲ್ಲದೆ ಪತಿ ಪುತ್ರರನ್ನೂ ಮನೆ ಆಸ್ತಿ ಪಾಸ್ತಿಗಳನ್ನೂ ಬಿಟ್ಟುಬಿಡುತ್ತಾಳೆ. ಕುಲಕ್ಕೆ ಯೋಗ್ಯವಾದ ಲಜ್ಜೆಯನ್ನೂ ಬಿಡುತ್ತಾಳೆ. ಪುರುಷ ಅತಿನೀಚನಾಗಿದ್ದರೂ ಯುವಕನಾಗಿ ಶೃಂಗಾರ ಲೀಲೆಯಲ್ಲಿ ಪ್ರವೀಣನಾಗಿದ್ದರೆ ಸಾಕು, ಜಾತಿ, ಧರ್ಮಗಳನ್ನೂ, ಏಕೆ, ಪ್ರಾಣವನ್ನಾದರೂ ಬಿಡಲು ಸಿದ್ಧಳಿರುತ್ತಾಳೆ. ಆದರಿಂದ ಗೃಹಸ್ಥ ತನ್ನ ಪ್ರಾಣಕ್ಕಿಂತ ಹೆಚ್ಚಾಗಿ ಅಂಥ ಯುವತಿಯಾದ ಹೆಂಡತಿಯನ್ನು ರಕ್ಷಣೆ ಮಾಡಬೇಕಾಗುತ್ತದೆ. ಅವಳನ್ನು ನಂಬಬಾರದು. ಮಾತು ಸವಿಯಾಗಿದ್ದರೂ ಹೃದಯ ಕತ್ತಿಯ ಅಲುಗಿನಂತಿರುತ್ತದೆ. ಅವಳ ಮನಸ್ಸನ್ನು ಯಾರೂ ತಿಳಿಯಲಾರರು.

ಚಿತ್ರಲೇಖೆ ಈಗಲೆ ದ್ವಾರಕೆಗೆ ಹೋಗಲಿ. ಅನಿರುದ್ಧನನ್ನು ಅವನಿಗೆ ತಿಳಿಯದಂತೆಯೆ ಯೋಗಬಲದಿಂದ ಇಲ್ಲಿಗೆ ಹೊತ್ತು ತರಲಿ.'

ಶಿವನೂ ಇದಕ್ಕೆ ಸಮ್ಮತಿಸಿದ. ಗಣೇಶನಿಗೆ ಹೇಳಿದ. 'ಬಾಣನಿಗೆ ತಿಳಿಯದಂತೆ ಈಶುಭಕಾರ್ಯವನ್ನು ನೀನು ನಡೆಸಿಕೊಡಬೇಕು.'

ಚಿತ್ರಲೇಖೆ ಬೇಗನೆ ಹೊರಟಳು. ಯಾರಿಗೂ ಪ್ರವೇಶಿಸಲಾಗದ ದ್ವಾರಕೆಯ ಅರಮನೆಯನ್ನು ಸುಲಭವಾಗಿ ಹೊಕ್ಕಳು. ನಿದ್ರಿಸುತ್ತಿದ್ದ ಅನಿರುದ್ಧನನ್ನು ಯೋಗ

ಬಲದಿಂದ ಹೊತ್ತು ಒಂದು ಮುಹೂರ್ತದೊಳಗೆ ಬಾಣನ ಶೋಣಿತಪುರಕ್ಕೆ ತಂದಿರಿಸಿದಳು. ಶಂಖನಾದ ಗೈದಳು. ಇತ್ತ ದ್ವಾರಕೆಯಲ್ಲಿ ಅಂತಃಪುರದ ಸ್ತ್ರೀಯರೆಲ್ಲ ಹಾಹಾಕಾರ ಮಾಡಿದರು. 'ಮಗುವನ್ನು ಬಾಣ ಅಪಹಾರ ಮಾಡಿದ. ಮಗು ಈಗ ಎಲ್ಲಿದೆಯೊ ಏನೊ!' ಎಂದು ಕಳವಳಿಸಿದರು. ಸರ್ವಜ್ಞನಾದ ಕೃಷ್ಣ ಅವರನ್ನು ಸಂತೈಸಿ ಸಾಂಬ ಪ್ರದ್ಯುಮ್ನ ಸಾತ್ಯಕಿಗಳೊಡನೆ ಹೊರಟು ಸುದರ್ಶನ ಪಾಂಚಜನ್ಯ ಕೌಮೋದಕೀ ಪದ್ಮಗಳನ್ನು ಧರಿಸಿ ಗರುಡಾರೂಢನಾಗಿ ಶೋಣಿತಪುರದ ಕಡೆಗೆ ಹೊರಟ.

ಅನಿರುದ್ಧ ತಂದೆ ತಾಯಿಗಳನ್ನು ನೆನೆದು ಅಳತೊಡಗಿದುದನ್ನು ಕಂಡು ಚಿತ್ರಲೇಖೆ ಸಮಾಧಾನ ಪಡಿಸುತ್ತ ಸ್ನಾನಮಾಡಿಸಿ ಗಂಧ ಮಾಲ್ಯಗಳನ್ನಿತ್ತು ಆಭರಣಗಳಿಂದಲೂ ಸಿಂಗರಿಸಿ ಕನ್ಯೆಯ ಅಂತಃಪುರದೊಳಗೆ ಕರೆತಂದಳು. ಅಂತಃ ಪುರಕ್ಕೆ ಬಲವಾದ ಕಾವಲು ಇದ್ದರೂ ಯೋಗಬಲದಿಂದ ಒಳಗೆ ಪ್ರವೇಶಿಸಿದಳು. ಉಷೆ ಈಗ ಅಂತಃಪುರದಲ್ಲಿ ಬಂದಿಯಾಗಿದ್ದಳು. ಅನ್ನ ಉಣದೆ ಕೃಶಳಾಗಿದ್ದಳು. ಸಖಿಯರು ಅವಳನ್ನು ಉಪಚರಿಸುತ್ತಿದ್ದರು. ಚಿತ್ರಲೇಖೆ ಅವಳನ್ನು ಕಂಡು ಸಮಾಧಾನಪಡಿಸಿ ಸ್ನಾನ ಮಾಡಿಸಿ ವಸ್ತ್ರಾಭರಣಗಳನ್ನು ತೊಡಿಸಿದಳು. ಗಂಧಮಾಲ್ಯ ತಿಲಕಾದಿಗಳಿಂದ ಸಿಂಗರಿಸಿದಳು. ವಧೂ ವರರನ್ನು ಸಮ್ಮುಖದಲ್ಲಿ ಕುಳ್ಳಿರಿಸಿ ಪರಸ್ಪರ ಸಂಭಾಷಣೆ ಮಾಡಿಸಿದಳು. ತಾನು ಬಯಸಿದ ಪತಿಯನ್ನು ಪಡೆದು ಉಷೆ ಆನಂದಭರಿತಳಾದಳು. ಅವಳನ್ನು ಗಾಂಧರ್ವವಿಧಿಯಿಂದ ವಿವಾಹವಾದ ಅನಿರುದ್ಧ. ಬಳಿಕ ನವದಂಪತಿಗಳು ಅನ್ಯೋನ್ಯ ಪ್ರೀತಿಯಿಂದ ಬಹುಕಾಲ ಜೊತೆಗಿದ್ದರು. ಹಗಲು ರಾತ್ರಿಗಳು ಉರುಳುತ್ತಿದ್ದುದೆ ಅವರಿಗೆ ತಿಳಿಯುತ್ತಿರಲಿಲ್ಲ. ಉಷೆ ಆ ನವಸಂಗಮದಲ್ಲಿ ಮೈ ಮರೆತಳು.

ಮಗಳು ರಹಸ್ಯವಾಗಿ ಅನಿರುದ್ಧನ ಜೊತೆಗಿದ್ದ ಸಮಾಚಾರವನ್ನು ಕಾವಲುಗಾರರು ಬಾಣನಿಗೆ ವರದಿ ಮಾಡಿದರು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಬಾಣಯುದ್ಧದಲ್ಲಿ ಉಷೆ ಅನಿರುದ್ಧರ ಸಂವಾದವೆಂಬ ನೂರಹದಿನಾಲ್ಕನೆ ಅಧ್ಯಾಯ ಮುಗಿಯಿತು.*

—o—

## ಬಾಣ ಅನಿರುದ್ಧರ ಸಂವಾದ

## ಅಧ್ಯಾಯ - ೧೧೫

**ಶ್ರೀ ನಾರಾಯಣ ಮುನಿ:-** 'ಕಾವಲುಗಾರರು ಭಯದಿಂದ ಓಡಿಬಂದು ಬಾಣನನ್ನೂ ಶಿವ ಪಾರ್ವತಿ ಸ್ಕಂದ ಗಣೇಶರನ್ನೂ ಕಂಡು ದಂಡಪ್ರಣಾಮ ಮಾಡಿ ಹೇಳಿದರು - 'ಕಾಲಕೆಟ್ಟು ಹೋಯಿತು! ಅನ್ಯಾಯ ನಡೆಯಿತು! ಪ್ರೌಢೆಯಾದ ಕನ್ಯೆ ವರನನ್ನು ತಾನೆ ಆರಿಸಿಕೊಂಡಳು! ಪ್ರಭು! ಅಯೋಗ್ಯರ ಒಡನಾಟ ಒಳ್ಳೆಯವರಿಗೆ ದುಃಖಕಾರಣವಾಗುತ್ತದೆ. ಏಕೆಂದರೆ ಮನುಷ್ಯನಿಗೆ ಸತ್ಪರಿಣಾಮ ದುಷ್ಪರಿಣಾಮಗಳು ಸಂಸರ್ಗದಿಂದ ಉಂಟಾಗುತ್ತವೆ. ಚಿತ್ರಲೇಖೆ ಸ್ವಯಂ ದೂತಿಯಾಗಿ ಯುದ್ಧ ಶೂರನಾದ ಮಹಾವೀರನಾದ ಯುವಕನೂ ವ್ಯಾಧಿರಹಿತನೂ ಮನ್ಮಥನಿಗಿಂತಲೂ ಸುಂದರನೂ ಆದ ಒಬ್ಬ ಪುರುಷನನ್ನು ಅಂತಃಪುರದೊಳಗೆ ತರಿಸಿ ರಾಜಕುಮಾರಿಯೊಡನೆ ಏಕಾಂತದಲ್ಲಿ ಜೊತೆಗೂಡಿಸಿದ್ದಾಳೆ. ರಾಜಕುಮಾರಿಗೆ ಹಗಲು ರಾತ್ರಿಗಳ ಭೇದವೆ ತಿಳಿಯದಂತಾಗಿದೆ. ಈಗ ಅವಳು ಗರ್ಭಿಣಿಯಾಗಿದ್ದಾಳೆ. ಒಳ್ಳೆಯ ಕುಲದಲ್ಲಿ ಹುಟ್ಟಿದ್ದರೂ ಎರಡು ಕುಲಗಳನ್ನು ಸುಡುವಂಥ ಉರಿವ ಕೆಂಡದಂತಾಗಿದ್ದಾಳೆ. ಮಹಾರಾಜ, ನಿಮಗೆ ಈಗ ಮೊಮ್ಮಗನೋ ಮೊಮ್ಮಗಳೊ ಬರಲಿದ್ದಾಳೆ. ಪ್ರೌಢೆಯಾದ ನಮ್ಮ ಮಗಳನ್ನು ನೋಡಿ. ನಾಗರಿಕರಿಂದ ತುಂಬಿದ ಈ ನಗರವನ್ನು ನೋಡಿ. ನಿಮ್ಮ ಮಗಳ ಮೈಯೆಲ್ಲ ನಖಕ್ಷತಗಳಿರುತ್ತವೆ. ರಹಸ್ಯವಾಗಿ ಪುರುಷನ ಸಂಗ ಮಾಡಿದ್ದಾಳೆ ನಗು ಮೊಗದ ಆ ಚಂಚಲಾಕ್ಷಿ'.

ಇದನ್ನು ಕೇಳಿ ಬಾಣನಿಗೆ ನಾಚಿಕೆ ಕೋಪಗಳು ಏಕಕಾಲದಲ್ಲಿ ಬಂದುವು. ಆತ ಯುದ್ಧ ಮಾಡಬೇಕೆಂದು ನಿಶ್ಚಯಿಸಿದ. ಶಿವ ತಡೆದ. ಪಾರ್ವತಿ ಸ್ಕಂದ ವಿನಾಯಕರೂ ತಡೆದರು. ಭೈರವಿ ಭದ್ರಕಾಳಿ ಯೋಗಿನಿಯರು ರುದ್ರರು ಭೂತ ಪ್ರೇತ ಕೂಷ್ಮಾಂಡ ಬೇತಾಳ ಬ್ರಹ್ಮರಾಕ್ಷಸರು ಯೋಗಿಗಳು ಸಿದ್ಧರು ಮುಂತಾದವರೂ ಯುದ್ಧ ಬೇಡವೆಂದರು. ಗ್ರಾಮದೇವಿಯಾದ ಕೋಟರಿಯೂ ತಾಯಿ ಮಗನಿಗೆ ಉಪದೇಶಿಸುವಂತೆ ನಾನಾ ಬಗೆಯಿಂದ ಉಪದೇಶಿಸಿದಳು. ಬಾಣ ಯಾರ ಮಾತನ್ನೂ ಕೇಳಲಿಲ್ಲ. ಸ್ವಯಂ ತಾನು ಮೂಢ. ತಿಳಿದವನೆಂಬ ಅಹಂಕಾರ ಮಾತ್ರವಿತ್ತು. ಶಿವ ಆತನ ಭವಿಷ್ಯದ ಒಳ್ಳೆಯದಕ್ಕಾಗಿ ನೀತಿಶಾಸ್ತ್ರಸಂಮತವಾದ ಹಿತನುಡಿಗಳನ್ನಾಡಿದ - ಬಾಣ, ಕೇಳು ಒಂದು ಪುರಾತನ ಇತಿಹಾಸ ಹೇಳುತ್ತೇನೆ. ಭೂಭಾರ ಹರಣಕ್ಕಾಗಿ ಭಗವಾನ್ ಶ್ರೀಕೃಷ್ಣ ಎಲ್ಲ ರಾಜರನ್ನೂ ನಾಶಮಾಡಿ ದ್ವಾರಕೆಯಲ್ಲಿ ಮೆರೆಯುತ್ತಿದ್ದಾನೆ. ಅವನ ರೋಮಗಳು ಸಕಲ ಪ್ರಪಂಚಕ್ಕೆ ಆವಾಸಸ್ಥಾನವಾದ್ದರಿಂದ ಅವನು ವಾಸುದೇವನೆನಿಸಿದ್ದಾನೆ. ಅವನು ಸೃಷ್ಟಿಕರ್ತನಿಗೂ ತಂದೆ. ಬ್ರಹ್ಮ ವಿಷ್ಣು ಶಿವಾದಿಗಳೆಲ್ಲರಿಗೂ ಒಡೆಯ. ಪ್ರಕೃತಿಬಂಧರಹಿತ. ಪ್ರಾಕೃತ ಗುಣರಹಿತನಾದ ಪರಬ್ರಹ್ಮ. ಅವನು ಜೀವರ ಶರೀರ ಬಿಟ್ಟು ಹೋದರೆ ಶರೀರ ಶವವಾಗುತ್ತದೆ. ಅವನೊಡನೆ ಯುದ್ಧ ಶಕ್ಯವಿಲ್ಲ. ಅವನಿಗೆ ಶಸ್ತ್ರದಿಂದ ಹೊಡೆದರೆ ಆಕಾಶಕ್ಕೆ

ಹೊಡೆದಂತೆ, ದಿಕ್ಕುಗಳಿಗೆ ಹೊಡೆದಂತೆ. ಅವನ ಮಗ ಪ್ರದ್ಯುಮ್ನನಾಗಲಿ, ಅವನ ಮಗ ಅನಿರುದ್ಧನಾಗಲಿ ಮಹಾಬಲ ಪರಾಕ್ರಮಶಾಲಿಗಳು, ಮೂಲೋಕವನ್ನೆ ಕ್ಷಣದಲ್ಲಿ ನಾಶ ಮಾಡಬಲ್ಲವರು. ಎಲ್ಲ ದೇವತೆಗಳೂ ದೈತ್ಯರೂ ಸೇರಿದರೂ ಅನಿರುದ್ಧನ ಹದಿನಾರನೆ ಒಂದಂಶಕ್ಕೆ ಸಮನಾಗಲಾರರು.

**ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ಬಲಂ।**
**ತಯೋರ್ವಿವಾಹೋ ಮೈತ್ರೀ ಚ ನ ತು ಪುಷ್ಟವಿಪುಷ್ಟಯೋಃ॥**

ಸಂಪತ್ತಿನಿಂದ ಬಲದಿಂದ ಸಮಾನರಾದವರೊಳಗೆ ಮಾತ್ರ ವಿವಾಹಸಂಬಂಧ ಮೈತ್ರಿಗಳು ಶೋಭಿಸುತ್ತವೆ. ಐಶ್ವರ್ಯಬಲವಿಲ್ಲದವನಿಗೆ ಉಳ್ಳವನೊಡನೆ ಅವು ಶೋಭಿಸುತ್ತವುದಿಲ್ಲ. ನಿನ್ನ ತಂದೆ ದೈತ್ಯರಲ್ಲೆಲ್ಲ ಶ್ರೇಷ್ಠ. ಅವನನ್ನು ಒಂದು ಕ್ಷಣದಲ್ಲಿ ಹರಿಯ ಅವತಾರನಾದ ವಾಮನ ಸುತಲಲೋಕಕ್ಕೆ ತಳ್ಳಿದ. ವೃಂದಾವನ ಪತಿಯಾದ ಆ ಕೃಷ್ಣಪರಮಾತ್ಮನ ಅಂಶದ ಒಂದು ಸಣ್ಣ ಅಂಶಕ್ಕೆ ನಾವೆಲ್ಲರೂ ಸಮಾನರು.'

**ಪಾರ್ವತಿ:-** ಬ್ರಹ್ಮ ಶಿವ ಶೇಷ ಸೂರ್ಯ ಗಣೇಶ ಸನತ್ಕುಮಾರ ಕಪಿಲ ನರ ನಾರಾಯಣ ಮನುಗಳು ಮುನಿಗಳು ಸಿದ್ಧರು ಯೋಗಿಗಳು ಎಲ್ಲರೂ ಅವನನ್ನು ಹೃದಯ ಕಮಲದಲ್ಲಿ ಧ್ಯಾನ ಮಾಡುವವರೆ. ಅವನು ಧ್ಯಾನಕ್ಕೆ ನಿಲುಕದವ, ಸರ್ವಕಾರಣ, ಸರ್ವೇಶ್ವರ, ಪರಾತ್ಪರ.

**ಗಣೇಶ:-** 'ಬಾಣ, ನಿನ್ನಂಥ ಮೂಢನಾದ ಪುತ್ರ ಜನಿಸಿದುದು ವಿಷ್ಣುಭಕ್ತನಾದ ಬಲಿಯ ದೌರ್ಭಾಗ್ಯ. ಪ್ರಹ್ಲಾದನ ದೌರ್ಭಾಗ್ಯ.'

**ಸ್ಕಂದ:-** 'ತಮ್ಮ, ಹಿರಣ್ಯಕಶಿಪು, ಹಿರಣ್ಯಾಕ್ಷ, ಮಧುಕೈಟಭರು ಮುಂತಾದವರ ಬಗ್ಗೆ ನೀನು ಕೇಳಿಲ್ಲವೆ? ಅವರೆಲ್ಲರೂ ನಿನ್ನ ಪೂರ್ವಿಕರು. ಮಹಾಬಲ ಪರಾಕ್ರಮಶಾಲಿಗಳು. ಆದರೇನು? ಅವರೆಲ್ಲರನ್ನೂ ವಿಷ್ಣು ಸುಲಭವಾಗಿ ಯಮಲೋಕಕ್ಕೆ ಅಟ್ಟಿದ. ಸ್ವಯಂ ನಾರಾಯಣನೆ ಒಬ್ಬನನ್ನು ಕೊಲ್ಲಲು ಬಂದರೆ ಅವನನ್ನು ಯಾರು ತಾನೆ ರಕ್ಷಿಸಬಲ್ಲರು?'

ಎಲ್ಲರ ಮಾತನ್ನು ಕೇಳಿ ಬಾಣನ ಮುಖ ಕಣ್ಣುಗಳು ಕೋಪದಿಂದ ಕೆಂಪಾದುವು. ಬಿಲ್ಲು ಹಿಡಿದು ಯಮನಂತೆ ನಿಂತು ನುಡಿದ -

ಅಮ್ಮ, ಅಪ್ಪ ಕೇಳಿರಿ, ಗಣೇಶ ಸ್ಕಂದರೆ ನೀವೂ ಕೇಳಿ. ಶುಭ ಅಶುಭಗಳು ಜೀವರ ಪ್ರಾಚೀನ ಕರ್ಮಗಳನ್ನು ಅನುಸರಿಸಿರುತ್ತವೆ. ಯಾರಿಗೆ ತಾನೆ ತಾನು ಮಾಡಿದ್ದಕ್ಕೆ ವ್ಯತಿರಿಕ್ತವಾಗಿ ಫಲ ಉಣಲು ಸಿಗುತ್ತದೆ? ನೂರು ಬಾಣಗಳ ಏಟಿಗೆ ತುತ್ತಾದರೂ ಮರಣ ಕಾಲ ಬಾರದೆ ಒಬ್ಬನು ಸಾಯುವುದಿಲ್ಲ. ಮರಣ ಕಾಲ ಬಂದಿತೆಂದರೆ ಒಂದು ಹುಲ್ಲುತುದಿ ತಾಗಿದರೂ ಬದುಕುವುದಿಲ್ಲ-

**ನಾನಾಪ್ತಕಾಲೋ ಮ್ರಿಯತೇ ವಿದ್ಧಃ ಶರಶತೈರಪಿ।**
**ತೃಣಾಗ್ರೇಣಾಪಿ ಸಂಸ್ಪೃಷ್ಟಃ ಪ್ರಾಪ್ತಕಾಲೋ ನ ಜೀವತಿ॥**

ಜನ್ಮ ತಳೆವಾಗಲೆ ಯಾರಿಗೆ ಯಾವುದರಿಂದ ಮರಣವೆಂದು ಬ್ರಹ್ಮನು

**ಬರೆದಿರುತ್ತಾನೋ ಅವನಿಗೆ ಅದರಿಂದ ಮರಣ. ಇದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. ಯುದ್ಧಕ್ಕೆ ಭಯ ಪಡುವವ ಬದುಕಿದ್ದು ಏನೂ ಫಲವಿಲ್ಲ. ಗೆದ್ದರೆ ಕೀರ್ತಿ ಸತ್ತರೆ ಸ್ವರ್ಗ ಸಿಕ್ಕೇ ಸಿಗುತ್ತದೆ. ಶಿವ ಪಾರ್ವತೀ ಗಣೇಶ ಸ್ಕಂದರ ರಕ್ಷಣೆಯಲ್ಲಿರುವ** ನಗರವನ್ನು ಹೊಕ್ಕು ಕನ್ಯೆಯನ್ನು ಒಬ್ಬನು ಅಪಹರಿಸುತ್ತಿದ್ದಾನೆ, ಕನ್ಯೆ ಗರ್ಭಿಣಿಯಾಗಿದ್ದಾಳೆ ಎಂದು ತುಂಬಿದ ಸಭೆಯಲ್ಲಿ ಕಾವಲು ಪಡೆಯವ ಹೇಳುತ್ತಿದ್ದಾನೆ ಎಂದರೆ ಇದು ನನ್ನ ಕಿವಿಗೆ ವಜ್ರಾಯುಧದಂತೆ ಕಟುವಾಗಿದೆ. ಅದರಿಂದ ನಾನೀಗ ಆ ಅನಿರುದ್ಧನನ್ನೂ ಕನ್ಯೆಯನ್ನೂ ಇಬ್ಬರನ್ನೂ ವಧಿಸುತ್ತೇನೆ. ಇಲ್ಲದಿದ್ದರೆ ಉರಿವ ಬೆಂಕಿಗೆ ಹಾರಿ ಶರೀರತ್ಯಾಗ ಮಾಡುತ್ತೇನೆ.'

**ಕೋಟರಿ:-** 'ಮಗು, ನಾನು ನಿನಗೆ ತಾಯಿ. ನಾನು ಹೇಳುತ್ತೇನೆ ಕೇಳು. ಕನ್ಯೆಯನ್ನು ಒಬ್ಬ ವರ ಪರಿಗ್ರಹಿಸಿದನೆಂದರೆ ಅವಳನ್ನು ತಿರುಗಿ ಇನ್ನೊಬ್ಬನಿಗೆ ಕೊಡಲಾಗದು. ಕೃಷ್ಣನ ಮೊಮ್ಮಗ ಮತ್ತು ಪ್ರದ್ಯುಮ್ನನ ಮಗ ಅನಿರುದ್ಧ. ಅವನಿಗೆ ಮಗಳನ್ನು ಸ್ವೇಚ್ಛೆಯಿಂದ ದಾನಮಾಡು. ಅದರಿಂದ ಭಾರತದೇಶದಲ್ಲಿ ಹುಟ್ಟಿ ನೀನು ನಿನ್ನನ್ನೂ ನಿನ್ನ ಹಿಂದಿನ ಏಳು ತಲೆಮಾರಿನ ಪಿತೃಗಳನ್ನೂ ಪವಿತ್ರಗೊಳಿಸುವಿ. ಕನ್ಯಾದಾನದೊಂದಿಗೆ ನಿನ್ನ ಸರ್ವಸ್ವವನ್ನೂ ಬಳುವಳಿಯಾಗಿ ಕೊಡು. ಒಳ್ಳೆಯ ಕೀರ್ತಿ ಪಡೆ. ಇಲ್ಲದಿದ್ದರೆ ಯುದ್ಧದಲ್ಲಿ ಕೃಷ್ಣ ನಿನ್ನನ್ನು ಕೊಲ್ಲುತ್ತಾನೆ. ಅವನು ಸುದರ್ಶನಚಕ್ರ ಪ್ರಯೋಗಿಸಿದನೆಂದರೆ ನಿನ್ನನ್ನು ಯಾರು ತಾನೆ ಕಾಪಾಡಬಲ್ಲರು?'

ಕೊಟರಿಯ ಮಾತು ಕೇಳಿಯೂ ಬಾಣನ ಕೋಪ ಶಾಂತವಾಗಲಿಲ್ಲ. ರಥವೇರಿ ಅನಿರುದ್ಧನನ್ನು ಕೊಲ್ಲಲು ಹೊರಟ. ಶಿವನಾಜ್ಞೆಯಂತೆ ಸ್ಕಂದ ಸೇನಾಪತಿಯಾಗಿ ಯುದ್ಧಕ್ಕೆ ಸನ್ನದ್ಧನಾದ. ಬಾಣ ಸ್ವಸ್ತಿವಾಚನ ಮಾಡಿಸಿದ. ಗಣೇಶ ಶಿವ ಪಾರ್ವತಿ ಕೋಟರಿ ಎಲ್ಲರೂ ಬಾಣನಿಗೆ ಮಂಗಳಾಶೀರ್ವಾದ ಮಾಡಿದರು. ಅಷ್ಟಭೈರವರೂ ಏಕಾದಶ ರುದ್ರರೂ ಯುದ್ಧಕ್ಕೆ ಶಸ್ತ್ರಾಸ್ತ್ರಗಳನ್ನು ಕೈಗೆತ್ತಿಕೊಂಡರು.

ಇತ್ತ ಪಾರ್ವತಿ ಮತ್ತು ಬಾಣಪತ್ನಿಯರು ಬೇಗನೆ ಒಬ್ಬ ದೂತನನ್ನು ಅನಿರುದ್ಧನ ಬಳಿಗೆ ಕಳಿಸಿದರು. ಆತನೆಂದ, 'ಕುಮಾರ ಅನಿರುದ್ಧ, ಎದ್ದೇಳು, ನಿನಗೆ ಶುಭವಾಗಲಿ. ಯುದ್ಧಕ್ಕೆ ಸಿದ್ಧನಾಗಿ ಬೇಗನೆ ಹೊರಗೆ ಬಾ.' ಇದನ್ನು ಕೇಳಿ ಉಷೆ ಭಯದಿಂದ ನಡುಗಿದಳು. ಅಳುತ್ತ ಪಾರ್ವತಿಯನ್ನು ನೆನೆದಳು. 'ದೇವಿ, ನನ್ನ ಪ್ರಾಣನಾಥನನ್ನು ಕಾಪಾಡು. ಘೋರ ದಾರುಣ ಸಂಗ್ರಾಮದಲ್ಲಿಯೂ ಅವನಿಗೆ ಭಯವಿಲ್ಲ. ಆದರೂ ನೀನು ಅಭಯ ನೀಡಬೇಕು. ಲೋಕಮಾತೆ ನೀನು. ಎಲ್ಲ ಮಕ್ಕಳಲ್ಲಿಯೂ ಪ್ರೀತಿ ನಿನಗೆ ಸಮಾನವೆ ತಾನೆ?' ಎಂದಳು.

ಅನಿರುದ್ಧ ಯುದ್ಧಸನ್ನದ್ಧನಾದ. ಶಸ್ತ್ರವನ್ನು ಹಿಡಿದು ಉಷೆ ನೀಡಿದ ರಥದಲ್ಲಿ ಕುಳಿತು ಹೊರಟ. ಇದಿರಿಗೆ ಬಾಣ ಶಸ್ತ್ರಪಾಣಿಯಾಗಿ ನಿಂತಿದ್ದ. ಅವನ ಮುಖ ಕಣ್ಣುಗಳು ಕೆಂಪಾಗಿದ್ದುವು. ಕೋಪದಿಂದ ಉರಿಯುತ್ತಿದ್ದ ಆತ. ವಿಷದಂತೆ ತೀಕ್ಷ್ಣವಾದ ಮಾತುಗಳನ್ನಾಡುತ್ತಿದ್ದ. 'ದುಷ್ಟ, ಅನಿರುದ್ಧ, ನೀತಿಶಾಸ್ತ್ರವನ್ನು ಗಾಳಿಗೆ ತೂರಿದೆ ನೀನು. ಚಂದ್ರವಂಶದಲ್ಲಿ ಹುಟ್ಟಿ ಕುಲವನ್ನೆ ಸುಡುವ ಬೆಂಕಿಕೆಂಡವಾದೆ. ಪುಣ್ಯಕ್ಷೇತ್ರವಾದ

ಭಾರತದಲ್ಲಿ ಪಾಪಕಾರ್ಯಮಾಡಿ ಅಯಶಸ್ಸನ್ನು ಸಂಪಾದಿಸಿದೆ. ನಿನ್ನ ತಂದೆ ಶಂಬರನನ್ನು ಕೊಂದು ಅವನ ಪತ್ನಿಯನ್ನು ಕೂಡಿದ. ಆಗ ಹುಟ್ಟಿದವ ನೀನು, ಕುಲಕ್ಕೆ ಯೋಗ್ಯವಾದುದನ್ನೇ ಮಾಡಿಬಿಟ್ಟೆ. ನಿನ್ನ ತಾತ ಕೃಷ್ಣ ವಸುದೇವನ ಮಗನಾಗಿ ಮಧುರೆಯಲ್ಲಿ ಕ್ಷತ್ರಿಯನಾಗಿ ಜನ್ಮತಳೆದು ಗೋಕುಲದಲ್ಲಿ ನಂದನ ಮಗನಾಗಿ ವೈಶ್ಯನಾಗಿ ಬೆಳೆದ. ವೃಂದಾವನದಲ್ಲಿ ನಂದನ ದನ ಮೇಸಿದ. ಸ್ತ್ರೀಲಂಪಟನಾಗಿ ಗೋವಳರ ಹೆಣ್ಣುಗಳನ್ನು ಕೂಡಿದ. ಹುಟ್ಟಿದೊಡನೆ ಪೂತನೆಯನ್ನು ಕೊಂದು ಸ್ತ್ರೀಹತ್ಯಾಪಾತಕ ಮಾಡಿದ. ಮಧುರೆಗೆ ಬಂದೊಡನೆ ಕುಬ್ಜೆಯನ್ನು ಕೂಡಿ ಅವಳನ್ನೂ ಕೊಂದ. ದುರ್ಬಲನಾದ ನರಕಾಸುರನನ್ನು ಕೊಂದು ಅವನ ಬಳಿ ಇದ್ದ ಹೆಣ್ಣುಗಳನ್ನೆಲ್ಲ ತಾನು ಸ್ವೀಕರಿಸಿದ. ಸ್ತ್ರೀಲಂಪಟನಾದ ಮಗನನ್ನೂ ಮನೆಗೆ ಸೇರಿಸಿಕೊಂಡ. ಭೀಷ್ಮಕ ಒಬ್ಬ ದುರ್ಬಲ ಮಾನವ. ಅವನ ಮಗ ರುಕ್ಮಿಯೂ ಅಷ್ಟೆ. ಅವರನ್ನು ಗೆದ್ದು ದೇವಯೋಗ್ಯಳಾದ ಕನ್ನಿಕೆ ರುಕ್ಮಿಣಿಯನ್ನು ಕೃಷ್ಣ ಅಪಹರಿಸಿದ. ಸತ್ರಾಜಿತ ಸೂರ್ಯನ ಭಕ್ತ. ಅವನಿಂದ ಸ್ಯಮಂತಕ ಮಣಿಯನ್ನು ಪಡೆದಿದ್ದ. ಅವನನ್ನು ಉಪಾಯದಿಂದ ಕೊಲ್ಲಿಸಿದ ಕೃಷ್ಣ ಆ ಮಣಿಯನ್ನೂ ಕನ್ಯೆ ಸತ್ಯಭಾಮೆಯನ್ನೂ ಅಪಹರಿಸಿದ. ಕೌರವ ಪಾಂಡವರೊಳಗೆ ವಿರೋಧ ಹುಟ್ಟಿಸಿ ಯುಧಿಷ್ಠಿರನ ರಾಜಸೂಯ ಯಾಗದಲ್ಲಿ ಶಿಶುಪಾಲನನ್ನು ಕೊಂದ. ದಂತವಕ್ರ ಸಾಲ್ವ ಜರಾಸಂಧರಂಥ ರಾಜರ ಸಮೂಹವನ್ನೆ ನಾಶಗೊಳಿಸಿದ. ಸ್ವತಃ ದುರ್ಬಲನಾಗಿದ್ದು ರಾಜರ ಭಯದಿಂದ ಸಮುದ್ರದ ನಡುವೆ ದ್ವಾರಕೆಯಲ್ಲಿ ವಾಸಮಾಡಿದ. ಸೋದರನಾದ ಇಂದ್ರನನ್ನೂ ಪರಾಭವಗೊಳಿಸಿ ದುರ್ಲಭವಾದ ಸ್ವರ್ಗದ ಪಾರಿಜಾತವನ್ನು ಅಪಹರಿಸಿದ. ತಾಯಿಯ ಸೋದರನಾದ ಕಂಸನನ್ನು ಕೊಂದು ಅವನ ಸರ್ವಸ್ವವನ್ನೂ ಅಪಹರಿಸಿದ ಪಾತಕಿ ಕೃಷ್ಣ. ಕರಡಿಯನ್ನೂ ಯುದ್ಧದಲ್ಲಿ ಸೋಲಿಸಿ ಅವನ ಮಗಳನ್ನೂ ತಂದುಕೊಂಡ. ಅವನ ಸೋದರತ್ತೆ ಕುಂತಿಯೂ ಪಾಂಡು ಧರ್ಮ ವಾಯು ಇಂದ್ರರೆಂದು ನಾಲ್ಕು ಮಂದಿಯನ್ನು ಕಾಮಿಸಿದಳು. ದ್ರೌಪದಿಯೂ ಐದುಮಂದಿ ಸೋದರರನ್ನು ಮದುವೆಯಾದಳು. ಕೃಷ್ಣನ ಅಣ್ಣ ಬಲರಾಮನೂ ಪರಮಲಂಪಟ, ಸದಾ ಮದ್ಯಪಾನ ಮಾಡುವವ. ತಮ್ಮನಾದ ಕೃಷ್ಣನ ಹೆಂಡತಿ ಯಮುನೆಯನ್ನೇ ಬಯಸಿ ಕರೆದವ. ಅವನ ಸೋದರಿಯಾದ ಸುಭದ್ರೆಯನ್ನು ಅರ್ಜುನ ಅಪಹರಿಸಿದ. ಅವಳು ಅವನಿಗೆ ಸೋದರಮಾವನ ಮಗಳು, ವಿವಾಹಕ್ಕೆ ಅಯೋಗ್ಯಳು. ನಿನ್ನ ಕುಲವೆ ಹೀಗೆ.' ಬಾಣನ ಈ ಮಾತುಗಳನ್ನು ಕೇಳಿ ಅನಿರುದ್ಧ ಕುಪಿತನಾದ. ಆದರೂ ಯೋಗ್ಯವಾದ ಪ್ರತ್ಯುತ್ತರವನ್ನೆ ಕೊಟ್ಟ -

'ನನ್ನ ತಂದೆ ಮನ್ಮಥ. ಅವನು ಮೊದಲಿಗೆ ಬ್ರಹ್ಮನ ಪುತ್ರ; ಪರಿಶುದ್ಧನಾದವ. ಅಸ್ತ್ರದಿಂದ ಮೂಲೋಕವನ್ನು ವಶಮಾಡಿಕೊಂಡವ. ಕರ್ಮವಶದಿಂದ ಶಿವನ ಕೋಪಾಗ್ನಿಯಲ್ಲಿ ಬೆಂದು ಬೂದಿಯಾದರೂ ಈಗ ಕೃಷ್ಣಪರಮಾತ್ಮನಿಗೆ ಮಗನಾಗಿದ್ದಾನೆ. ನನ್ನ ತಾಯಿ ರತಿಯೂ ಪತಿವ್ರತೆ; ಪತಿಶೋಕದಿಂದ ಅಳುತ್ತಿರುವಾಗಲೆ ಶಂಬರ ಅವಳನ್ನು ಅಪಹರಿಸಿ ತನ್ನ ಮನೆಯಲ್ಲಿ ಇಟ್ಟುಕೊಂಡ. ಆಗ ಉಪಾಯದಿಂದ ತನ್ನಂತೆಯೆ ಇರುವ ಇನ್ನೊಬ್ಬಳು ಸ್ತ್ರೀಯನ್ನು ಅವನ ಅಂತಃಪುರಕ್ಕೆ ಕಳಿಸಿ ತನ್ನ ಶೀಲ ಕಾಪಾಡಿಕೊಂಡಿದ್ದಳು. ನನ್ನ ತಂದೆ ಆ ಶಂಬರನನ್ನು ಕೊಂದು ಪ್ರಿಯಪತ್ನಿಯನ್ನು

ಕರಕೊಂಡು ದ್ವಾರಕೆಗೆ ಬಂದ. ಇದಕ್ಕೆ ಚಂದ್ರ ಸೂರ್ಯರು ಸಾಕ್ಷಿಗಳು. ನನ್ನ ತಾತನಾದ ಕೃಷ್ಣನ ಬಗ್ಗೆ ನಿನಗೆ ಏನು ತಿಳಿದಿದೆ. ನೀನು ಮೂಢ. ಅವನನ್ನು ಯಾವ ಸಂತರೂ ತಿಳಿಯಲಾರರು. ನಾಲ್ಕುವೇದಗಳೂ ತಿಳಿಯವು. ಸಮಸ್ತ ವಿಶ್ವವೂ ಅವನ ರೋಮಗಳಲ್ಲಿ ನೆಲೆಸಿರುವುದರಿಂದ ಅವನಿಗೆ ವಾಸುದೇವ ಎಂದು ಹೆಸರು. ಇದರ ಬಗ್ಗೆ ವಿಶೇಷವಾಗಿ ಸಾಕ್ಷಾತ್ ಶಿವನನ್ನೆ ಕೇಳು. ನೀನು ಅವನ ಸೇವಕ ತಾನೆ? ಆ ಕೃಷ್ಣನ ಭೃತ್ಯನಾದ ಬಲಿಯ ಪುತ್ರನೆ ನೀನು.

ಕೃಷ್ಣ ಗೋಕುಲದಲ್ಲಿ ವೈಶ್ಯಪುತ್ರನಾಗಿ ಬೆಳೆದನೆನ್ನುವುದು ನಿನ್ನ ಅಜ್ಞಾನವನ್ನೆ ತೋರಿಸುತ್ತದೆ. ಕ್ಷತ್ರಿಯ ವೈಶ್ಯರೊಳಗೆ ಪರಸ್ಪರ ಸಹಭೋಜನ ವೇದವಿಹಿತವೆ ಆಗಿದೆ. ನಂದನೂ ಹಿಂದೆ ದ್ರೋಣನೆಂಬ ಪ್ರಜಾಪತಿ. ಧರಾದೇವಿ ಅವನ ಪತ್ನಿ. ಅವರು ತಪಸ್ಸು ಮಾಡಿ ವರ ಪಡೆದು ಕೃಷ್ಣನನ್ನು ಮಗನನ್ನಾಗಿ ಪಡೆದರು. ಆ ದ್ರೋಣನೆ ನಂದ. ಧರೆಯೆ ಯಶೋದೆ. ವೃಷಭಾನುವಿನ ಮಗಳು ರಾಧೆ ಸುದಾಮನ ಶಾಪದಿಂದ ಪತಿಯಾಜ್ಞೆ ಪಡೆದು ಗೋಲೋಕದಿಂದ ಪವಿತ್ರವಾದ ಭಾರತಕ್ಷೇತ್ರಕ್ಕೆ ಬಂದು ಜನ್ಮ ತಳೆದವಳು. ಮೂವತ್ತುಕೋಟಿ ಗೋಪಿಯರೊಂದಿಗೇ ಅವಳು ಬಂದಿದ್ದರಿಂದ ಕೃಷ್ಣ ತನ್ನ ಪತ್ನಿಯರೇ ಆದ ಆಗೋಪಿಯರೊಡನೆ ವಿಹರಿಸಿದ. ಗೋಪರೆಲ್ಲರೂ ಹರಿಯಂಶೆಯ ತೇಜಸ್ವಿಗಳಾಗಿದ್ದು ಹರಿಯ ಸೇವೆ ಮಾಡುತ್ತಿದ್ದವರು. ಹರಿಯೂ ಈ ಗೋಪರೂ ದನ ಮೇಸುವುದು ಬರಿ ಲೀಲೆಯಷ್ಟೆ. ಪೂತನೆ ಬಲಿಯ ಮಗಳೆ. ನಿನ್ನ ಸೋದರಿ. ಬಂಜೆಯಾಗಿದ್ದ ಅವಳು ವಾಮನನನ್ನು ನೋಡಿ ಇಂಥ ಒಬ್ಬ ಮಗನಿಗೆ ನಾನು ಸ್ತನ್ಯಪಾನ ಮಾಡಿಸುವಂತಾಗಬೇಕೆಂದು ಬಯಸಿದಳು. ಹರಿ ಅವಳ ಬಯಕೆಯನ್ನೀಡೇರಿಸಿದ. ತಾನೆ ಕೃಷ್ಣನಾಗಿ ಅವಳ ಸ್ತನ್ಯಪಾನ ಮಾಡಿದ. ಅವಳನ್ನು ರತ್ನಮಯ ವಿಮಾನದಲ್ಲಿ ಕೂಡಿಸಿ ಗೋಲೋಕಕ್ಕೆ ಕಳಿಸಿದ. ಕುಬ್ಜೆಯೂ ಪೂರ್ವಜನ್ಮದಲ್ಲಿ ರಾವಣನ ತಂಗಿ ಶೂರ್ಪಣಖಿಯಾಗಿದ್ದಳು. ಅವಳು ಶ್ರೀರಾಮನನ್ನು ನೋಡಿ ಕಾಮಿಸಿದಾಗ ಲಕ್ಷ್ಮಣ ಅವಳ ಮೂಗನ್ನು ಕುಯ್ದಿದ್ದ. ಮುಂದೆ ಅವಳು ಬ್ರಹ್ಮನನ್ನು ತಪಸ್ಸಿನಿಂದ ಒಲಿಸಿಕೊಂಡು ಪರಮಾತ್ಮನ ಮಡದಿಯಾಗುವ ವರ ಬೇಡಿ ಪಡೆದಳು. ಅದರಂತೆ ಕುಬ್ಜೆಯಾಗಿ ಹುಟ್ಟಿ ಕೃಷ್ಣನನ್ನು ಆಲಿಂಗಿಸಿ ಗೋಲೋಕಕ್ಕೆ ಹೋದಳು. ಅಲ್ಲಿ ಗೋಪಿಯಾದಳು. ನರಕಾಸುರ ಪೂರ್ವಜನ್ಮದ ಕರ್ಮಾನುಗುಣವಾಗಿ ಕೃಷ್ಣನಿಂದ ಮರಣ ಹೊಂದಿದ. ಅವನ ಮನೆಯಲ್ಲಿದ್ದ ಕನ್ಯೆಯರನ್ನು ಕೃಷ್ಣ ಮದುವೆಯಾದ. ಇದಕ್ಕೆ ಸೂರ್ಯ ಚಂದ್ರರು ಸಾಕ್ಷಿಗಳು. ಭೀಷ್ಮಕನ ಕನ್ಯೆ ರುಕ್ಮಿಣಿ ಮಹಾಲಕ್ಷ್ಮೀ ಸ್ವರೂಪಳು; ಶ್ರೀಕೃಷ್ಣನ ಪ್ರಿಯ ಸತಿ. ಬ್ರಹ್ಮನ ಪ್ರಾರ್ಥನೆಯಂತೆ ಕೃಷ್ಣನ ಮಡದಿಯಾಗಲೆಂದೆ ವೈಕುಂಠದಿಂದ ಬಂದಿದ್ದಳು. ಸತ್ರಾಜಿತನ ಮಗಳು ಸತ್ಯಭಾಮೆಯೂ ಭೂದೇವೀ ಸ್ವರೂಪಳು. ರಾಜ ಅವಳನ್ನು ಶ್ರೀಕೃಷ್ಣನಿಗೆ ಮದುವೆ ಮಾಡಿಕೊಟ್ಟ, ಮಣಿಯನ್ನೂ ಬಳುವಳಿಯಾಗಿ ಇತ್ತ. ಕೃಷ್ಣ ಭೂಭಾರ ಹರಣಕ್ಕಾಗಿ ಅವತರಿಸಿದ್ದರಿಂದ ಕೌರವ ಪಾಂಡವರೊಳಗೆ ಯುದ್ಧ ಉಂಟುಮಾಡಿ ಭೂಭಾರ ಹರಣ ಮಾಡಿದ್ದಾನೆ. ಶಿಶುಪಾಲ ದಂತವಕ್ರರು ವೈಕುಂಠದಲ್ಲಿ ದ್ವಾರಪಾಲಕರಾಗಿದ್ದ ಜಯ ವಿಜಯರು. ಸನತ್ಕುಮಾರರ ಶಾಪದಿಂದ ಮೂರು ಜನ್ಮ ಪಡೆದವರು. ಮೊದಲಿಗೆ

ಹಿರಣ್ಯಾಕ್ಷ ಹಿರಣ್ಯಕಶಿಪುಗಳಾಗಿ ಹುಟ್ಟಿದರು. ಹಿರಣ್ಯಕಶಿಪು ನಿನ್ನ ಪೂರ್ವಿಕ. ಹಿರಣ್ಯಾಕ್ಷ ವರುಣನನ್ನು ಗೆದ್ದ ಪರಾಕ್ರಮಿ. ಹರಿ ನರಸಿಂಹ ರೂಪದಿಂದ ಹಿರಣ್ಯಕಶಿಪುವನ್ನೂ ವರಾಹ ರೂಪದಿಂದ ಹಿರಣ್ಯಾಕ್ಷನನ್ನೂ ಕೊಂದ. ಎರಡನೆ ಜನ್ಮದಲ್ಲಿ ಅವರು ರಾವಣ ಕುಂಭಕರ್ಣರಾಗಿ ಹುಟ್ಟಿ ಶ್ರೀರಾಮನಿಂದ ಹತರಾದರು. ಮೂರನೇ ಜನ್ಮದಲ್ಲಿ ಶಿಶುಪಾಲ ದಂತವಕ್ರರಾಗಿ ಹುಟ್ಟಿ ಶ್ರೀಕೃಷ್ಣನಿಂದ ಹತರಾಗಿದ್ದಾರೆ. ಜರಾಸಂಧ ಸಾಲ್ವ ಕಂಸ ಮುಂತಾದ ದುರಾತ್ಮರನ್ನು ಭೂಭಾರ ಕಳೆಯಲೆಂದೆ ಶ್ರೀಕೃಷ್ಣ ಕೊಂದ. ಅವನು ಲಕ್ಷ್ಮೀಪತಿ. ಅವರ ಸಂಪತ್ತನ್ನು ದೋಚಿ ಇವನಿಗೇನಾಗಬೇಕಾಗಿದೆ? ಸತ್ಯಭಾಮೆಯ ಮುಂದೆ ಅವಳ ಪುಣ್ಯಕವ್ರತಕ್ಕಾಗಿ ಸ್ವರ್ಗದಿಂದ ಪಾರಿಜಾತವನ್ನು ತಂದು ಕೊಡುವೆನೆಂದು ಪ್ರತಿಜ್ಞೆ ಮಾಡಿದ್ದರಿಂದ ಆ ಪ್ರತಿಜ್ಞೆಯಂತೆ ಪಾರಿಜಾತವನ್ನು ಅಪಹರಿಸಿದ. ವ್ರತವನ್ನು ಪೂರ್ತಿಗೊಳಿಸಿದ. ಜಾಂಬವತಿ ದುರ್ಗೆಯ ಅಂಶಳಾಗಿ ಕರಡಿಯ ಮಗಳಾಗಿ ಹುಟ್ಟಿದವಳು. ಅವಳ ತಪಸ್ಸಿನ ಫಲವಾಗಿ ಶ್ರೀಕೃಷ್ಣ ಅವಳನ್ನು ಮದುವೆಯಾದ. ಪಾಂಡವರು ಧರ್ಮ ವಾಯು ಇಂದ್ರರಿಂದ ಹುಟ್ಟಿದರೂ ಅವರು ಪಾಂಡುವಿನ ಕ್ಷೇತ್ರಜ ಪುತ್ರರು. ಕುಂತಿ ಪಾಂಡುವಿನ ಆಜ್ಞೆಪಡೆದೆ ಅವರಿಂದ ಮಕ್ಕಳನ್ನು ಪಡೆದಿದ್ದಳು. ಆದರಿಂದ ಯುಧಿಷ್ಠಿರ ಧರ್ಮಪುತ್ರನೆಂದೂ ಭೀಮ ವಾಯುಪುತ್ರನೆಂದೂ ಅರ್ಜುನ ಇಂದ್ರಪುತ್ರನೆಂದೂ ಪ್ರಸಿದ್ಧರಾದರು. ಅವರೆಲ್ಲರೂ ಧಾರ್ಮಿಕರು. ಸಾಕ್ಷಾತ್ ಶಿವನೆ ಅರ್ಜುನನಿಗೆ ಪಾಶುಪತಾಸ್ತ್ರವನ್ನು ಕೊಟ್ಟಿದ್ದಾನೆ. ಈ ನಿಯೋಗ ಪದ್ಧತಿ ಇಂದು ರೂಢಿಯಲ್ಲಿದೆ. ಕಲಿಯುಗದಲ್ಲಿ ಮಾತ್ರ ಇದು ನಿಷಿದ್ಧವೆನಿಸುತ್ತದೆ.

**ಅಶ್ವಮೇಧಂ ಗವಾಲಂಭಂ ಸಂನ್ಯಾಸಂ ಪಲಪೈತೃಕಂ ।**
**ದೇವರೇಣ ಸುತೋತ್ಪತ್ತಿಂ ಕಲೌ ಪಂಚ ವಿವರ್ಜಯೇತ್ ॥**

ಅಶ್ವಮೇಧಯಾಗ, ಗೋಮೇಧಯಾಗ, ಸಂನ್ಯಾಸ, ಮಾಂಸದಿಂದ ಪಿತೃ ಶ್ರಾದ್ಧ, ಗಂಡನ ಸೋದರರಿಂದ ಸಂತಾನ ಪಡೆಯುವುದು ಈ ಐದನ್ನು ಕಲಿಯುಗದಲ್ಲಿ ಬಿಡಬೇಕು.

ದ್ರೌಪದಿಗೆ ಐದು ಮಂದಿ ಗಂಡಂದಿರಾಗಿರುವುದು ಶಿವನ ವರದಿಂದ. ಬಲರಾಮ ನಿತ್ಯವೂ ಪವಿತ್ರವಾದ ಹೂವಿನ ಮಕರಂದ ರಸವನ್ನು ಕುಡಿಯುತ್ತಾನೆ. ಹೊರತು ಮದ್ಯವನ್ನಲ್ಲ. ಅವನು ಯಮುನೆಯನ್ನು ಆಹ್ವಾನಿಸಿದುದು ಕೇವಲ ಸ್ನಾನಕ್ಕಾಗಿ, ಸುಭದ್ರೆಯನ್ನು ಅರ್ಜುನನಿಗೆ ಶ್ರೀಕೃಷ್ಣನೆ ಕೊಟ್ಟಿದ್ದ. ಅವಳು ಸೋದರ ಮಾವನ ಮಗಳಾಗಿದ್ದರೂ ದಾಕ್ಷಿಣಾತ್ಯರಲ್ಲಿ ವಾಡಿಕೆ ಇರುವುದರಿಂದ ಮದುವೆಯಾದ. ಬೇರೆ ದೇಶಗಳಲ್ಲಿ ಮಾತ್ರ ಇದು ನಿಷಿದ್ಧ ಎನ್ನುತ್ತಾನೆ ಬ್ರಹ್ಮ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಬಾಣ ಅನಿರುದ್ಧರ ಸಂವಾದವೆಂಬ ನೂರಹದಿನೈದನೆ ಅಧ್ಯಾಯ ಮುಗಿಯಿತು*

—o—

## ಬಾಣಾಸುರ ಅನಿರುದ್ಧರ ಯುದ್ಧ

**ಅಧ್ಯಾಯ - ೧೧೬**

ಅನಿರುದ್ಧನ ಮಾತನ್ನು ಕೇಳಿ ಬಾಣನಿಗೆ ಸಮಾಧಾನವಾಯಿತು. ಆತನೆಂದ, 'ಅನಿರುದ್ಧ, ನೀನು ಸರಿಯಾಗಿ ತಿಳಿದಿರುವಿ. ನೀನು ಹೇಳಿದುದು ನಿಜವೆ. ಶಿವನೂ ನನಗೆ ಹಾಗೇ ಹೇಳಿದ್ದಾನೆ. ನಾನೂ ಮನಸ್ಸಿನಲ್ಲಿ ಹಾಗೇ ತಿಳಿದಿದ್ದೇನೆ. ಆದರೆ ಶಿವನ ವರದಿಂದ ದ್ರೌಪದಿ ಐದು ಮಂದಿ ಗಂಡಂದಿರನ್ನು ವಿವಾಹವಾದಳೆಂದು ನೀನು ಹೇಳಿದ್ದನ್ನು ಸ್ವಲ್ಪ ವಿಸ್ತಾರವಾಗಿ ಹೇಳು. ನಿನ್ನ ತಾಯಿಯನ್ನು ಶಂಬರ ಅಪಹರಿಸಿದುದು ಹೇಗೆ? ದೇವತೆಗಳು ಅವಳನ್ನು ಹೇಗೆ ಬಿಟ್ಟು ಕೊಟ್ಟರು? ಅವನು ದೇವತೆಗಳನ್ನು ಹೇಗೆ ಪರಾಭವಗೊಳಿಸಿದ?'

**ಅನಿರುದ್ಧ ನುಡಿದ:-** 'ಒಮ್ಮೆ ಶ್ರೀರಾಮ ಸೀತಾಲಕ್ಷ್ಮಣ ಸಮೇತನಾಗಿ ಪಂಚವಟಿಯಲ್ಲಿ ಕುಳಿತಿದ್ದಾಗ ಸೀತೆ ಹೇಳಿದಳು- 'ಈ ಹೇಮಂತ ಋತುವಿನಲ್ಲಿ ನೀರು ನಿರ್ಮಲವಾಗಿದೆ, ರುಚಿಕರವಾಗಿದೆ. ಅನ್ನ ಆಹಾರ ಪದಾರ್ಥಗಳೂ ಮಧುರವಾಗಿ ತಂಪಾಗಿರುತ್ತವೆ.' ಶ್ರೀರಾಮ ಹಣ್ಣುಗಳನ್ನು ಕಿತ್ತು ತಂದು ಸೀತೆಗೂ ಲಕ್ಷ್ಮಣನಿಗೂ ಕೊಟ್ಟ. ತಾನೂ ಭಕ್ಷಿಸಿದ. ಲಕ್ಷ್ಮಣ ಮಾತ್ರ ಹಣ್ಣು ತಿನ್ನಲಿಲ್ಲ, ನೀರು ಕುಡಿಯಲಿಲ್ಲ. ಏಕೆಂದರೆ ಮುಂದೆ ರಾವಣ ಸೀತೆಯನ್ನು ಅಪಹರಿಸಿದಾಗ ಲಂಕೆಯ ಯುದ್ಧದಲ್ಲಿ ಇಂದ್ರಜಿತ್ತನ್ನು ಲಕ್ಷ್ಮಣ ಕೊಲ್ಲ ಬೇಕಾಗಿದೆ. ಆದರೆ ಹದಿನಾಲ್ಕು ವರ್ಷಕಾಲ ಅನ್ನ ನಿದ್ದೆಗಳನ್ನು ತೊರೆದ ಯೋಗಿಯ ಕೈಯಿಂದಲೆ ಇಂದ್ರಜಿತ್ತನ ವಧೆ ಸಾಧ್ಯ. ಅದಕ್ಕಾಗಿ ಲಕ್ಷ್ಮಣ ಅನ್ನ ನಿದ್ರೆಗಳನ್ನು ತೊರೆದ. ಇದೇ ಸಮಯದಲ್ಲಿ ಶ್ರೀ ರಾಮನನ್ನು ಕಾಣಲು ಬ್ರಾಹ್ಮಣವೇಷದಿಂದ ಅಗ್ನಿ ಬಂದು ಹೇಳಿದ - 'ಶ್ರೀರಾಮ, ನೀನು ಸೀತೆಯ ರಕ್ಷಣೆಗೆ ಯತ್ನಿಸು. ಏಕೆಂದರೆ ಇನ್ನು ಏಳು ದಿನಗಳೊಳಗೆ ರಾವಣ ಬರುತ್ತಾನೆ. ಅವನು ದುಷ್ಟರಾಕ್ಷಸ. ಅವನು ಬರುವುದನ್ನು ಯಾರೂ ತಡೆಯಲಾರರು. ಬ್ರಹ್ಮ ಬರೆದದ್ದನ್ನು ಯಾರು ತಾನೆ ಅಳಿಸುವರು? ದೈವಕ್ಕಿಂತ ಪ್ರಬಲ ಇನ್ನೊಂದಿಲ್ಲ.'

ಶ್ರೀರಾಮ ನುಡಿದ, 'ನೀನು ಸೀತೆಯನ್ನು ಕರೆದುಕೊಂಡು ಹೋಗು. ಅವಳ ಛಾಯೆ ಇಲ್ಲಿ ಇರಲಿ. ಹೆಂಡತಿ ಇಲ್ಲದೆ ಕರ್ಮ ಮಾಡಿದರೆ ಲೋಕ ಒಪ್ಪುವುದಿಲ್ಲ.' ಸೀತೆ ಅಳುತ್ತಿದ್ದಂತೆ ಅಗ್ನಿ ಅವಳನ್ನು ಕರೆದುಕೊಂಡು ಹೋದ. ಸೀತೆಯಂತೆಯೆ ಕಾಣುವ ಅವಳ ಛಾಯೆ ಶ್ರೀರಾಮನ ಬಳಿ ಇದ್ದಳು. ಆ ಛಾಯೆಯನ್ನು ರಾವಣ ಸುಲಭವಾಗಿ ಅಪಹರಿಸಿದ. ಬಳಿಕ ಶ್ರೀರಾಮ ರಾವಣನನ್ನು ಕೊಂದು ಅವಳನ್ನು ಬಿಡಿಸಿಕೊಂಡ. ಅಗ್ನಿ ಪರೀಕ್ಷೆಯ ಕಾಲದಲ್ಲಿ ಛಾಯೆ ಅಗ್ನಿಪ್ರವೇಶ ಮಾಡಿದಳು. ಅಗ್ನಿ ಅವಳನ್ನು ತನ್ನ ಬಳಿ ಜೋಪಾನವಾಗಿಟ್ಟುಕೊಂಡು ಸೀತೆಯನ್ನು ರಾಮನಿಗಿತ್ತ. ಸೀತೆಯನ್ನು ಕರೆದು ಕೊಂಡು ರಾಮ ಅಯೋಧ್ಯೆಗೆ ತೆರಳಿದ. ಇತ್ತ ಛಾಯೆ ಅಗ್ನಿಯ ಬಳಿ ದುಃಖದಿಂದ ವಾಸಮಾಡಿದಳು. ನಾರಾಯಣ ಸರೋವರದಲ್ಲಿ ದೇವಮಾನದ ನೂರು ವರ್ಷಕಾಲ ಶಿವನನ್ನು ಕುರಿತು ತಪಸ್ಸು ಮಾಡಿದಳು. ಶಿವ ಪ್ರತ್ಯಕ್ಷನಾಗಿ ನಿನಗೆ ಏನು ವರಬೇಕೆಂದು ಕೇಳಿದ. ಛಾಯೆ ಒಂದೇ ಸಮನೆ ಐದು ಬಾರಿ 'ಪತಿಂ ದೇಹಿ' ಎಂದಳು. ಶಿವ 'ಹಾಗೇ ಆಗಲಿ' ಎಂದ. 'ಐದು ಬಾರಿ ಪತಿವರವನ್ನು ಕೇಳಿದ್ದರಿಂದ ಹರಿಯ ಅಂಶಯುಕ್ತರಾದ ಐದು ಮಂದಿ ಇಂದ್ರರು ನಿನ್ನ ಪತಿಗಳಾಗುವರು' ಎಂದ. ಈಗ ಆ ಐದು ಮಂದಿ ಇಂದ್ರರೆ ಪಂಚ ಪಾಂಡವರು. ಆ ಛಾಯೆಯೆ ಯಜ್ಞಕುಂಡದಿಂದ ಉದ್ಭವಿಸಿ ಬಂದ ದ್ರೌಪದಿ. ಅವಳು ಕೃತಯುಗದಲ್ಲಿ

ವೇದವತಿ, ತ್ರೇತೆಯಲ್ಲಿ ಸೀತೆ, ದ್ವಾಪರದಲ್ಲಿ ದ್ರೌಪದಿ, ಕೃಷ್ಣೆ ಎನಿಸಿದಳು. ಕೃಷ್ಣಭಕ್ತೆಯಾದ್ದರಿಂದ ಕೃಷ್ಣೆ ಎಂದು ಹೆಸರು. ಮುಂದೆ ಅವಳು ಇಂದ್ರರ ಸ್ವರ್ಗಲಕ್ಷ್ಮಿಯಾಗುವವಳು. ಅರ್ಜುನ ದ್ರೌಪದಿಯನ್ನು ಸ್ವಯಂವರದಲ್ಲಿ ಗೆದ್ದು ತಂದಾಗ ತಾಯಿಕುಂತಿಯ ಮುಂದೆ 'ಅಮ್ಮ ಭಿಕ್ಷೆ ತಂದಿದ್ದೇನೆ' ಎಂದ. 'ಐವರೂ ಸೇರಿ ಸ್ವೀಕರಿಸಿ' ಎಂದಳು ಕುಂತಿ. ಹಿಂದೆ ಶಿವನಿತ್ತ ವರ, ಈಗ ತಾಯಿ ಹೇಳಿದ ಮಾತು ಈ ಎರಡು ಕಾರಣಗಳಿಂದ ದ್ರೌಪದಿಗೆ ಪಂಚ ಪಾಂಡವರು ಪತಿಗಳಾದರು.

ಮನ್ಮಥನ ರಾಣಿ ರತಿದೇವಿ ಈ ಕಥೆಯನ್ನು ಕೇಳಿ ದ್ರೌಪದಿಯನ್ನು ನಿಂದಿಸಿದಳು. ಅದರಿಂದ ಕುಪಿತನಾದ ಬ್ರಹ್ಮ ಅವಳಿಗೆ ಶಪಿಸಿದ. 'ನಿನ್ನ ಪತಿ ಶಿವನಿಂದ ಸುಟ್ಟು ಬೂದಿಯಾದಾಗ ನೀನು ಶಂಬರಾಸುರನ ವಶಳಾಗುವಿ. ಅವನು ಎಲ್ಲ ದೇವತೆಗಳನ್ನೂ ಗೆದ್ದು ನಿನ್ನನ್ನು ಅಪಹರಿಸುತ್ತಾನೆ. ಆದರೂ ನಿನ್ನ ಪಾತಿವ್ರತ್ಯ ಕೆಡುವುದಿಲ್ಲ. ನಿನ್ನಂತೆ ಇರುವ ಛಾಯೆಯನ್ನು ಅಸುರನ ಬಳಿಗೆ ಕಳಿಸಿ, ನಿನ್ನ ಪತಿ ನಿನ್ನನ್ನು ಸೇರುವವರೆಗೂ ಅಲ್ಲಿ ಇರುವಿ.' ಹೀಗೆ ನನ್ನ ತಾಯಿ ಅಸುರನ ಮನೆಯಲ್ಲಿದ್ದೂ ಶೀಲ ಕಾಪಾಡಿಕೊಂಡಿದ್ದಳು. ಬಾಣ, ದೇವತೆಗಳ ಚರಿತ್ರೆ ಹೀಗೇ ನಿಗೂಢವಾಗಿರುತ್ತದೆ.'

ಹೀಗೆ ಅನಿರುದ್ಧ ಹೇಳುತ್ತಿದ್ದಾಗಲೆ ಬಾಣನ ಸೇನಾಧಿಪತಿ ಸುಭದ್ರ ಬಂದು ಯುದ್ಧಕ್ಕೆ ನಿಂತ. ಪ್ರಳಯಾಗ್ನಿಯಂತಿರುವ ಶೂಲವನ್ನು ಎಸೆದ. ಅನಿರುದ್ಧ ಅದನ್ನು ಅರ್ಧಚಂದ್ರಾಕಾರದ ಬಾಣದಿಂದ ತುಂಡರಿಸಿದ. ಸುಭದ್ರ ಶಕ್ತಿಯನ್ನು ಎಸೆದಾಗ ನಾರಾಯಣಾಸ್ತ್ರದಿಂದ ಅದನ್ನು ಹಿಮ್ಮೆಟ್ಟಿಸಿದ. ನಾರಾಯಣಾಸ್ತ್ರ ಲೋಕವನ್ನೆ ಸುಡುವ ನೂರಾರು ಸೂರ್ಯರಂತೆ ಜ್ವಲಿಸುತ್ತ ಆಕಾಶದಲ್ಲಿ ಅಡಗಿತು. ಬಳಿಕ ಅನಿರುದ್ಧ ಖಡ್ಗವನ್ನು ಹಿರಿದು ಸುಭದ್ರನ ಮೇಲೇರಿ ಹೋದ. ಅವನನ್ನೂ ಅವನ ಸಾರಥಿಯನ್ನೂ ಅನಾಯಾಸವಾಗಿ ಕತ್ತರಿಸಿದ. ಆಗ ಬಾಣ ನೂರುಬಾಣಗಳನ್ನು ಒಮ್ಮೆಲೆ ಎಸೆದ. ಅನಿರುದ್ಧ ಅವೆಲ್ಲವನ್ನೂ ಆಗ್ನೇಯಾಸ್ತ್ರದಿಂದ ದಹಿಸಿದ. ಬಾಣ ಲೋಕವನ್ನೆ ಸುಡುವ ಬ್ರಹ್ಮಾಸ್ತ್ರ ಪ್ರಯೋಗಿಸಿದರೆ ಅನಿರುದ್ಧ ಪ್ರತಿಯಾಗಿ ಬ್ರಹ್ಮಾಸ್ತ್ರವನ್ನೆ ಪ್ರಯೋಗಿಸಿ ಶಾಂತಗೊಳಿಸಿದ. ಬಾಣ ಪಾಶುಪತಾಸ್ತ್ರವನ್ನೆತ್ತಿದಾಗ ಗಣೇಶ ಸ್ಕಂದರೂ ಶಿವನೂ ತಡೆದರು. ಅನಿರುದ್ಧ ಜೃಂಭಣಾಸ್ತ್ರ ಪ್ರಯೋಗಿಸಿದ. ಬಾಣ ಆಗ ನಿಶ್ಚೇಷ್ಟನಾದ. ಒಡನೆ ನಿದ್ರಾಸ್ತ್ರವನ್ನೂ ಪ್ರಯೋಗಿಸಿ ಅವನನ್ನು ನಿದ್ರೆಗೊಳಿಸಿದ, ಖಡ್ಗ ಹಿರಿದು ಕೊಲ್ಲಲು ಬಂದ ಅನಿರುದ್ಧ. ಸ್ಕಂದ ಅವನನ್ನು ತಡೆದು ಇದಿರಿಸಿ ನೂರು ಬಾಣಗಳನ್ನು ಎಸೆದ. ಅವನ್ನು ಶಕ್ತ್ಯಾಯುಧದಿಂದ ನಿವಾರಿಸಿ ಸ್ಕಂದನ ರಥವನ್ನೂ ಮುರಿದ. ಸ್ಕಂದ ಕುಪಿತನಾಗಿ ಗದೆಯಿಂದ ಅನಿರುದ್ಧನ ರಥವನ್ನು ಮುರಿದ. ಅನಿರುದ್ಧ ಸ್ಕಂದನ ಬಿಲ್ಲನ್ನು ಅರ್ಧಚಂದ್ರದಿಂದ ಕತ್ತರಿಸಿದ. ಸ್ಕಂದ ಗದೆಯನ್ನು ಬೀಸಿದರೆ ಅದನ್ನು ಕೈಯಲ್ಲಿ ಹಿಡಿದ ಅನಿರುದ್ಧ. ಸ್ಕಂದ ಶೂಲದಿಂದ ಇರಿಯಲು ಬಂದರೆ ಅವನನ್ನೂ ಎತ್ತಿ ದೂರಕ್ಕೆ ಎಸೆದ. ಆತ ತಿರುಗಿ ಬಂದಾಗ ಅನಿರುದ್ಧ ಅವನನ್ನು ನೆಲದಲ್ಲಿ ಬೀಳಿಸಿ ಖಡ್ಗವನ್ನೆತ್ತಿದ. ಆಗ ಗಣೇಶ ಬಂದು ಅವರಿಬ್ಬರನ್ನೂ ತಡೆದ. ಸ್ಕಂದ ಅನಿರುದ್ಧರಿಬ್ಬರೂ ಹೊರಟು ಹೋದರು. ಗಣೇಶ ಶಿವನ ಬಳಿಯಲ್ಲಿ ಎಲ್ಲವನ್ನೂ ನಿವೇದಿಸಲು ತೆರಳಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣ ನಾರದಸಂವಾದದಲ್ಲಿ ಬಾಣಯುದ್ಧವೆಂಬ ನೂರಹದಿನಾರನೆ ಅಧ್ಯಾಯ ಮುಗಿಯಿತು*

## ಶಿವ ಗಣೇಶರ ಸಂವಾದ

**ಅಧ್ಯಾಯ - ೧೧೭**

**ಶ್ರೀನಾರಾಯಣ ಮುನಿ:-** ಗಣೇಶ ಶಿವನ ಬಳಿಗೆ ಹೋಗಿ ನಮಿಸಿ ಬಾಣ ಅನಿರುದ್ಧರ ಯುದ್ಧವನ್ನೂ ಸುಭದ್ರನ ವಧವನ್ನೂ ಸ್ಕಂದ ಅನಿರುದ್ಧರ ಯುದ್ಧವನ್ನೂ ಅನಿರುದ್ಧನ ಪರಾಕ್ರಮವನ್ನೂ ಒಂದೊಂದಾಗಿ ಕ್ರಮದಿಂದ ಬಣ್ಣಿಸಿ ಹೇಳಿದ. ಅದನ್ನು ಕೇಳಿ ಶಿವ ನಕ್ಕು ಸವಿನುಡಿಯಿಂದ ವೇದ ಸಮ್ಮತವಾದ ರಹಸ್ಯವನ್ನು ಹೇಳತೊಡಗಿದ-

'ಗಣೇಶ, ನನ್ನ ಮಾತು ಕೇಳು. ಅದು ಹಿತ, ಸತ್ಯ, ನೀತಿಗಳಿಂದ ತುಂಬಿದ್ದು ಕೊನೆಯಲ್ಲಿ ಸುಖ ತರುವಂಥದ್ದು. ಅಸಂಖ್ಯ ವಿಶ್ವಗಳು ಎಲ್ಲವೂ ಶ್ರೀಕೃಷ್ಣನಿಂದಾದುವು. ಅವನು ಕಾರಣಗಳಿಗೂ ಕಾರಣ. ಗೋಲೋಕದಲ್ಲಿ ದ್ವಿಭುಜನಾದ ರಾಧಾರಮಣನೀತನೆ. ಗೋಪವೇಷ ಧರಿಸಿ ಗೋಪರು ಗೋಪಿಯರು ಕಾಮಧೇನುಗಳು ಇವರಿಂದ ಕೂಡಿ ಪುಣ್ಯಕರ ವೃಂದಾವನದಲ್ಲಿ ರಾಸಮಂಡಲದಲ್ಲಿ ಸಂಚರಿಸುತ್ತ ಮುರಳೀಗಾನ ಮಾಡುತ್ತ ಶತಶೃಂಗ ಪರ್ವತದ ಆಲದ ಮರದ ಬುಡದಲ್ಲಿ, ಭಾಂಡೀರ ವೃಕ್ಷದ ಬಳಿಯಲ್ಲಿ, ವಿರಜಾನದೀತೀರದಲ್ಲಿ ವಿಹರಿಸುತ್ತ ಬ್ರಹ್ಮ ರುದ್ರ ಶೇಷರಿಂದ ವಂದಿಸಲ್ಪಡುವವನು ಇವನೆ. ನೀಲಮೇಘಶ್ಯಾಮ, ಪೀತಾಂಬರಧಾರಿಯಾಗಿ ಶೋಭಿಸುವವನು ಇವನೆ. ಮೋಡಗಳ ನಡುವೆ ಮಿಂಚು ಹೊಳೆವಂತೆ ಗೋಕುಲದ ರಾಸಮಂಡಲದಲ್ಲಿ ಕೃಷ್ಣನೊಡನೆ ಗೋಪಿಯರು ಹೊಳೆಯುತ್ತಾರೆ. ಮನ್ಮಥ ಅವನ ಮಗ, ಪೂರ್ಣಬಲ ಉಳ್ಳವ. ಅವನ ಮಗ ಅನಿರುದ್ಧನೂ ಮಹಾಬಲಪರಾಕ್ರಮಿ. ಅವನೊಡನೆ ಮಹಾಸಂಗ್ರಾಮಕ್ಕೆ ಇಳಿದ ಬಾಣ ಸಾಯದಂತೆ ಅವನ ರಕ್ಷಣೆಗಾಗಿ ನಾನೆ ಸ್ಕಂದನನ್ನು ಕಳಿಸಿದೆ. ಸ್ಕಂದ ಅನಿರುದ್ಧರು ಯುದ್ಧದಲ್ಲಿ ಸಮಾನರು. ಅಷ್ಟಭೈರವರು, ಏಕಾದಶ ರುದ್ರರು, ಅಷ್ಟವಸುಗಳು, ಇಂದ್ರಾದಿ ದೇವತೆಗಳು, ದ್ವಾದಶಾದಿತ್ಯರು, ಎಲ್ಲ ದೈತ್ಯರು, ದೇವತೆಗಳಲ್ಲಿ ಮೊದಲಿಗನಾದ ಸ್ಕಂದ, ಎಲ್ಲ ಗಣಗಳಿಂದ ಸಮೇತನಾದ ಬಾಣ ಇವರು ಯಾರೂ ಯುದ್ಧದಲ್ಲಿ ಅನಿರುದ್ಧನನ್ನು ಗೆಲ್ಲಲಾರರು. ಅನಿರುದ್ಧನಲ್ಲಿ ಬ್ರಹ್ಮನ ಅಂಶವಿದೆ. ಪ್ರದ್ಯುಮ್ನ ಮನ್ಮಥನೆ. ಬಲರಾಮ ಶೇಷನೆ, ಕೃಷ್ಣನಂತೂ ಪ್ರಕೃತಿಯಿಂದಾಚೆ ಇರುವ ಪರಮಾತ್ಮ. ಇಂಥ ಶ್ರೀಹರಿ ಕೋಟಿಸೂರ್ಯರ ಕಾಂತಿಯಿಂದ ಬೆಳಗುವ ಅಮೋಘ ಸುದರ್ಶನಚಕ್ರವನ್ನು ಹಿಡಿದು ಬೇಗನೆ ಬರುತ್ತಾನೆ. ಅದರಿಂದ ಮಂಗಳಸ್ವರೂಪ ವಿಘ್ನನಾಶಕನಾದ ನೀನು ಬಾಣನನ್ನು ರಕ್ಷಿಸು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಬಾಣಯುದ್ಧದಲ್ಲಿ ಶಿವಲಂಬೋದರ ಸಂವಾದವೆಂಬ ನೂರಹದಿನೇಳನೆ ಅಧ್ಯಾಯ ಮುಗಿಯಿತು.*

—o—

## ಅಧ್ಯಾಯ - ೧೧೮

**ಶ್ರೀ ನಾರಾಯಣ ಮುನಿ:-** ಗಣೇಶನಿಗೆ ಹೀಗೆ ಹೇಳಿ ಶಿವ ಒಳಗೆ ನಡೆದ. ಅಲ್ಲಿ ದುರ್ಗೆ ಭೈರವಿ, ಭದ್ರಕಾಳಿ ಉಗ್ರಚಂಡಿ ಕೋಟರಿಯರು ಸಿಂಹಾಸನಗಳಲ್ಲಿ ಮಂಡಿಸಿದ್ದರು. ಅವರೆಲ್ಲರೂ ಎದ್ದು ಶಿವನನ್ನು ನಮಿಸಿದರು. ಗಣೇಶ, ಷಣ್ಮುಖ, ಬಾಣ, ವೀರಭದ್ರ, ನಂದಿ, ಸುನಂದಕ, ಮಹಾಕಾಲ, ಅಷ್ಟಭೈರವರು, ಸಿದ್ಧರು, ಯೋಗಿಗಳು, ಏಕಾದಶ ರುದ್ರರು ಎಲ್ಲರೂ ಅಲ್ಲಿ ಬಂದು ಸೇರಿದರು. ಆಗ ಸಿಂಹದ್ವಾರದಲ್ಲಿ ಮಣಿಭದ್ರ ಬಂದು ಬಿನ್ನವಿಸಿದ -

'ಮಹೇಶ್ವರ, ಅಸಂಖ್ಯ ಯಾದವ ಸೈನ್ಯ ಬಂದಿದೆ. ಬಲರಾಮ ಪ್ರದ್ಯುಮ್ನ ಸಾಂಬ ಸಾತ್ಯಕಿ ಉಗ್ರಸೇನ ಭೀಮ ಅರ್ಜುನ ಅಕ್ರೂರ ಉದ್ಧವ ಜಯಂತ ಇವರೆಲ್ಲರೂ ಬಂದಿದ್ದಾರೆ. ಉತ್ತಮವಾದ ರಥದಲ್ಲಿ ಬ್ರಹ್ಮನಿಗೂ ತಂದೆಯಾದ ಪೂಜ್ಯ ಪರಮೇಶ್ವರ ಶ್ರೀಕೃಷ್ಣನೂ ಬಂದಿದ್ದಾನೆ. ಸೇವಕರಾದ ಏಳುಜನ ಗೋಪರು ಅವನಿಗೆ ಬಿಳಿಚಾಮರ ಬೀಸುತ್ತಿದ್ದಾರೆ. ಕೋಟಿ ಮನ್ಮಥರಂತೆ ಪ್ರಕಾಶಮಾನನಾಗಿ ವನಮಾಲೆ ಧರಿಸಿ ಕೋಟಿ ಸೂರ್ಯರಂತೆ ಹೊಳೆವ ಸುದರ್ಶನಚಕ್ರ ಕೌಮೋದಕೀಗದೆ ಅಮೋಘವಾದ ಶೂಲ ಮಹಾಶಂಖಗಳನ್ನು ಹಿಡಿದು ಬರುತ್ತಿದ್ದಾನೆ. ಒಂದು ಲಕ್ಷ ಮಹಾರಥರು, ಮೂರುಕೋಟಿ ರಥಿಕರು, ಮೂರುಕೋಟಿ ಗಜಗಳು, ಮೂರುಕೋಟಿ ಮಲ್ಲರು, ನೂರು ಕೋಟಿ ಅಶ್ವಗಳು, ಅವರಿಗಿಂತ ಏಳು ಪಾಲು ಅಧಿಕ ಖಡ್ಗಧಾರಿಗಳು, ಅವರಿಗಿಂತ ಎರಡು ಪಾಲು ಅಧಿಕ ಧನುರ್ಧಾರಿಗಳು, ಇವರೆಲ್ಲರೊಡನೆ ಶ್ರೀಕೃಷ್ಣ ಶೋಣಿತಪುರಕ್ಕೆ ಬಂದಿದ್ದಾನೆ. ಅಂದು ಶ್ರೀರಾಮ ಲಂಕೆಯನ್ನು ಮುತ್ತಿದ. ಆ ಲಂಕೆ ಸಾವಿರ ತಾಲಪ್ರಮಾಣದಷ್ಟು ಉನ್ನತವಾಗಿತ್ತು. ಉರಿವ ಬೆಂಕಿಯ ಜ್ವಾಲೆಯಂತೆ ಉಜ್ವಲವಾಗಿತ್ತು. ಸುರ ಅಸುರರು ಯಾರೂ ದಾಟಲಾಗದಂಥ ಕಂದಕಗಳಿಂದ ಕೂಡಿತ್ತು. ದೇವಗಂಗೆಯ ನೀರಿನ ಮಳೆ ಸುರಿಯುತ್ತಿತ್ತು. ಇಂಥ ಲಂಕೆಯನ್ನು ರಾಮ ಸುತ್ತುವರಿದು ಮುತ್ತಿದಂತೆ ಶ್ರೀಕೃಷ್ಣ ನಮ್ಮ ಶೋಣಿತಪುರವನ್ನು ಮುತ್ತುತ್ತಿದ್ದಾನೆ. ಗಗನಚುಂಬಿ ಪ್ರಾಕಾರಗಳಿಂದ ಕೂಡಿದ ರತ್ನಮಯವಾದ ನಮ್ಮ ಪಟ್ಟಣವನ್ನು ಪಕ್ಷಿರಾಜನಾದ ಗರುಡ ನಾಶ ಮಾಡುತ್ತಿದ್ದಾನೆ. ಬಲರಾಮ ನೇಗಿಲುಗಳಿಂದ ಲಕ್ಷಮಲ್ಲರನ್ನು ಮುರಿದು, ಮೂರು ಲಕ್ಷ ಉದ್ಯಾನಗಳನ್ನು ಪ್ರಾಕಾರ ಸಹಿತವಾಗಿ ಧ್ವಂಸಮಾಡಿದ್ದಾನೆ. ಮಹಾದ್ವಾರಕ್ಕೆ ಬಂದು ದ್ವಾರಪಾಲಕರನ್ನು ಕೊಂದು ಒಳಗೆ ಪ್ರವೇಶಮಾಡಿದ್ದಾನೆ.'

ಇದನ್ನು ಕೇಳಿ ಶಿವ ಎಲ್ಲ ದೇವತೆಗಳ ಮುಂದೆ ಪಾರ್ವತಿ ಭದ್ರಕಾಳಿ ಕುಮಾರಸ್ವಾಮಿ ಗಣೇಶ ಅಷ್ಟಭೈರವರು ರುದ್ರರು ವೀರಭದ್ರ ಮಹಾಕಾಲ ನಂದಿ ಮತ್ತು ಎಲ್ಲ ಸೇನಾನಾಯಕರಿಗೆ ಹೇಳಿದ-

'ಗೋಲೋಕಾಧಿಪತಿ ಪೂಜ್ಯ ಶ್ರೀಕೃಷ್ಣ ಬಂದಿದ್ದಾನೆ. ಕ್ಷಣಮಾತ್ರದಲ್ಲಿ ಸಕಲ ಪ್ರಪಂಚವನ್ನು ನಾಶ ಮಾಡಲು ಅವನು ಸಮರ್ಥ. ಈ ಒಂದು ಪಟ್ಟಣ ಅವನಿಗೆ

ಯಾವ ಲೆಕ್ಕ? ನೀವೆಲ್ಲ ಸೇರಿ ನಾನಾ ಉಪಾಯಗಳಿಂದ ಬಾಣನನ್ನು ಕಾಪಾಡಲು ಯತ್ನಿಸಿರಿ. ಬಾಣ ಗಣೇಶನನ್ನು ಸ್ಮರಿಸಿ ಯುದ್ಧಕ್ಕೆ ಹೊರಡಲಿ. ಅವನ ಬಲಭಾಗದಲ್ಲಿ ಸ್ಕಂದ, ಮುಂಭಾಗದಲ್ಲಿ ಗಣೇಶ, ಎಡ ಭಾಗದಲ್ಲಿ ಭೈರವರು ರುದ್ರರು ನಂದಿ ಮಹಾಕಾಲ ವೀರಭದ್ರ ಮತ್ತು ಉಳಿದ ಸೈನಿಕರು ಹೊರಡಲಿ. ಮೇಲ್ಭಾಗದಲ್ಲಿ ದುರ್ಗೆ ಭದ್ರಕಾಳಿ ಉಗ್ರಚಂಡಿ ಕೋಟರಿಯರು ಹೊರಡಲಿ. ದುರ್ಗೆ, ನೀನು ಬಾಣನನ್ನು ಕಾಪಾಡು. ನೀನು ಶ್ರೀಕೃಷ್ಣನ ಶಕ್ತಿ, ನಾರಾಯಣಿ, ಸಕಲ ಮಂಗಲಗಳಿಗೂ ಮಂಗಲಳಾದ ವಿಷ್ಣುಮಾಯೆ, ಲೋಕಮಾತೆ. ಅಮೋಘವಾದ ಸುದರ್ಶನಚಕ್ರದಿಂದ ಬಾಣನನ್ನು ಕಾಪಾಡು. ಗಣೇಶ ಸ್ಕಂದರಿಗಿಂತಲೂ ಹೆಚ್ಚಾಗಿ ಬಾಣ ನನಗೆ ಪ್ರೀತಿಪಾತ್ರ. ನೀನು ಬಾಣನ ತಲೆ ಮೇಲೆ ಪಾದಧೂಳಿ ಹಾಕು. ಕೈಯನ್ನಿಡು.'

ಶಿವನ ಮಾತನ್ನು ಕೇಳಿ ದುರ್ಗೆ ನಗುತ್ತ ಮಧುರವಾಗಿ ಕಾಲೋಚಿತವಾದ ಯಥಾರ್ಥ ಮಾತುಗಳನ್ನಾಡಿದಳು -

'ಬಾಣ, ಮುತ್ತು ಮಾಣಿಕ್ಯ ವಜ್ರ ಮುಂತಾದ ರತ್ನಗಳೊಂದಿಗೆ ರತ್ನಾಭರಣಗಳಿಂದ ಅಲಂಕೃತಳಾದ ಕುಮಾರಿ ಉಷೆಯನ್ನೂ ರತ್ನಾಭರಣಗಳಿಂದ ಅಲಂಕೃತನಾದ ಉತ್ತಮ ವರನೆನಿಸಿದ ಅನಿರುದ್ಧನನ್ನೂ ಕೃಷ್ಣನ ಮುಂದೆ ಒಯ್ದು ಒಪ್ಪಿಸು. ನಿಷ್ಕಂಟಕವಾದ ರಾಜ್ಯವನ್ನು ಆಳು. ಪರಮಾತ್ಮನೊಡನೆ ಯುದ್ಧ ಮಾಡಿ ಏನು ಪ್ರಯೋಜನ? ಅವನು ಶರೀರದಿಂದ ಹೊರಗೆ ಹೋದರೆ ಜೊತೆಗೇ ಪ್ರಾಣಗಳೂ ಇಂದ್ರಿಯಗಳೂ ಹೊರಟು ಹೋಗುವುವು. ಜೀವನೂ ಹೊರಟು ಹೋಗುವನು. ಅವನ ಶಕ್ತಿಯಾದ ನಾನು, ಮನೋಭಿಮಾನಿಬ್ರಹ್ಮ ಜ್ಞಾನಾತ್ಮಕಶಿವ ಎಲ್ಲರೂ ಹೊರಟು ಹೋಗುವೆವು. ದೇಹ ತಕ್ಷಣವೆ ಬೀಳುವುದು. ಮಂಗಳ ರಹಿತವಾಗಿ ಶವವೆನಿಸುವುದು. ಶಿವ, ಕೃಷ್ಣನ ಚಕ್ರದ ತೇಜಸ್ಸಿನ ಮುಂದೆ ಯಾರು ತಾನೆ ಯುದ್ಧಕ್ಕೆ ನಿಲ್ಲಬಲ್ಲ? ಬಾಣ, ಆಕಾಶವನ್ನು ಗುದ್ದಲು ಸಾಧ್ಯವೆ? ತನ್ನನ್ನು ತಾನು ಗುದ್ದುವುದುಂಟೆ, ಹೇಳು. ಪರಮಾತ್ಮ ಆಕಾಶದಂತೆ. ಮತ್ತು ಎಲ್ಲ ಆತ್ಮಗಳಿಗೆ ಪರಮಾತ್ಮ ಆತ. ನಿತ್ಯ, ಸತ್ಯ, ಪರಿಪೂರ್ಣಗುಣ ಉಳ್ಳವ. ನನಗೆ ಗಣೇಶ ಕಾರ್ತಿಕೇಯರಂತೆ ನೀನೂ ಪ್ರೀತಿಪಾತ್ರ. ಕೃಷ್ಣನಿಗಿಂತ ಪ್ರಿಯ ನನಗೆ ಯಾರೂ ಇಲ್ಲ. ವೈಕುಂಠದಲ್ಲಿ ಮಹಾಲಕ್ಷ್ಮಿ, ಗೋಲೋಕದಲ್ಲಿ ರಾಧಿಕೆ, ಶಿವಲೋಕದಲ್ಲಿ ದುರ್ಗೆ, ಬ್ರಹ್ಮಲೋಕದಲ್ಲಿ ಸರಸ್ವತಿ ನಾನೆ. ಶಿವ, ನಾನು ಹಿಂದೆ ದಕ್ಷಕನ್ಯೆಯಾಗಿ ನಿನ್ನ ನಿಂದೆಯನ್ನು ಕೇಳಿ ತಾಳಲಾರದೆ ಶರೀರತ್ಯಾಗ ಮಾಡಿದೆ. ಹಿಮಾಲಯನ ಮಗಳಾಗಿ ಜನಿಸಿದೆ. ರಕ್ತಬೀಜಾಸುರನೊಡನೆ ಯುದ್ಧ ಮಾಡುವಾಗ ಕಾಳಿಯಾದೆ. ವೇದ ಮಾತೆ ಸಾವಿತ್ರಿ ನಾನೆ. ಜನಕಪುತ್ರಿ ಸೀತೆ, ದ್ವಾರಕೆಯಲ್ಲಿರುವ ರುಕ್ಮಿಣಿ ನಾನೆ. ಸುದಾಮನ ಶಾಪದಿಂದ ವೃಷಭಾನುವಿನ ಕನ್ಯೆಯಾಗಿ ಹುಟ್ಟಿ ವೃಂದಾವನದಲ್ಲಿ ಕೃಷ್ಣನ ಧರ್ಮಪತ್ನಿಯಾದೆ. ಎಲ್ಲ ತಿಳಿದಿರುವ ನಿನಗೆ ನಾನೇನು ಹೇಳಲಿ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಬಾಣಯುದ್ಧದಲ್ಲಿ ನೂರ ಹದಿನೆಂಟನೆ ಅಧ್ಯಾಯ ಮುಗಿಯಿತು*

## ಬಲಿ ಪಠಿಸಿದ ಶ್ರೀಕೃಷ್ಣನ ಸ್ತೋತ್ರ

**ಅಧ್ಯಾಯ - ೧೧೯**

**ಶ್ರೀ ನಾರಾಯಣ ಮುನಿ:-** ಪಾರ್ವತಿಯ ಮಾತು ಕೇಳಿ ಗಣೇಶ ಶಿವ ಸ್ಕಂದ ಕಾಳಿ ಎಲ್ಲರೂ ಅವಳನ್ನು ಹೊಗಳಿದರು. ಶಿವ ಜಗನ್ಮಾತೆಯಾದ ಜ್ಯೋತಿಃ ಸ್ವರೂಪಳಾದ ಮೂಲಪ್ರಕೃತಿಗೆ ಹೀಗೆ ಹೇಳಿದ - 'ದೇವೇಶ್ವರಿ, ನೀನು ಹೇಳಿದುದೆಲ್ಲವೂ ವೇದಸಮ್ಮತವಾದುದು. ಪರಮಾತ್ಮನೊಡನೆ ಯುದ್ಧವೆಂಬುದು ಅಯುಕ್ತವೂ ಹೌದು ಉಪಹಾಸಾಸ್ಪದವೂ ಹೌದು. ಬಾಣ ಕನ್ಯೆಯನ್ನು ಚಿನ್ನದ ಆಭರಣಗಳಿಂದ ಅಲಂಕರಿಸಿ ದಾನ ಮಾಡಲಿ. ಅದೇ ಸಮಂಜಸವಾಗುವುದು. ಕೀರ್ತಿ ತರುವುದು. ಎಲ್ಲ ಕರ್ಮಗಳಿಗಿಂತ ಅದು ಮಂಗಳಕರ. ಕನ್ಯಾದಾನ ಮಾಡದೆ ಯುದ್ಧಕ್ಕೆ ನಿಂತರೆ ಸೋತು ಹಿಮ್ಮೆಟ್ಟುತ್ತಾನೆ. ಹಿರಣ್ಯಕಶಿಪುವಿನ ಕುಲದಲ್ಲಿ ಹುಟ್ಟಿ ಯುದ್ಧದಲ್ಲಿ ಹೀಗೆ ಸೋತು ಹಿಮ್ಮೆಟ್ಟಿದರೆ ಅಪಯಶಸ್ಸು. ಆದರೂ ಬಾಣ ಯುದ್ಧವನ್ನೆ ಮಾಡುವುದಾದರೆ ಅವನು ಸನ್ನದ್ಧನಾಗಿ ಮುಂದೆ ಹೋಗಲಿ. ನಾವು ಹಿಂದಿನಿಂದ ಬರುತ್ತೇವೆ.'

ದುರ್ಗೆ ನಾನಾ ರೀತಿಯಿಂದ ಬಾಣನಿಗೆ ಹಿತವನ್ನು ಬೋಧಿಸಿದಳು. ಬಾಣ ಒಪ್ಪಲಿಲ್ಲ. ಅವಳ ಮಾತಿನ ಯಥಾರ್ಥತೆಯನ್ನು ಮನಗಾಣಲಿಲ್ಲ. ಆಗ ಆ ಸಭೆಗೆ ಮಹಾಧರ್ಮಿಷ್ಠ ವೈಷ್ಣವಾಗ್ರಣಿಯಾದ ಬಲಿ ಬಂದ. ರತ್ನಖಚಿತವಾದ ರಥವೇರಿ ಬಂದಿದ್ದ ಆತ. ಏಳು ಜನ ದೈತ್ಯರು ಅವನಿಗೆ ಬಿಳಿ ಚಾಮರ ಬೀಸುತ್ತಿದ್ದರು. ಅಸ್ತ್ರ ಕೋವಿದರಾದ ಏಳು ಲಕ್ಷ ದೈತ್ಯರು ಅವನನ್ನು ಸುತ್ತುವರಿದಿದ್ದರು. ಅವನು ರಥದಿಂದಿಳಿದು ಗಣೇಶ ಪಾರ್ವತಿ ಶಿವ ಸ್ಕಂದರಿಗೆ ನಮಿಸಿದ. ಅವರನ್ನು ಹೊರತು ಎಲ್ಲ ಸಭಾಸದರೂ ಎದ್ದುನಿಂತು ಬಲಿಗೆ ಗೌರವ ತೋರಿದರು. **ಶಿವ ಹೇಳಿದ -**

'ಬಲಿಯೆ, ನೀನು ಚತುರ. ಸರ್ವಸಂಪತ್ತನ್ನೂ ನೀಡುವವ ವಿಷ್ಣುಭಕ್ತ.

**ಅಯಂ ಹಿ ಪರಮೋ ಲಾಭೋ ವೈಷ್ಣವಾನಾಂ ಸಮಾಗಮಃ ।**
**ತೀರ್ಥಾನ್ಯಪಿ ಚ ಪೂತಾನಿ ವೈಷ್ಣವಸ್ಪರ್ಶಮಾತ್ರತಃ ॥**

ವಿಷ್ಣುಭಕ್ತರ ಸಮಾಗಮವೆಂಬುದೆ ದೊಡ್ಡ ಲಾಭ. ವೈಷ್ಣವನ ಸ್ಪರ್ಶ ಮಾತ್ರದಿಂದಲೆ ತೀರ್ಥಗಳೂ ಪಾವಿತ್ರ್ಯ ಪಡೆಯುತ್ತವೆ.

**ಸರ್ವೇಷಾಮಾಶ್ರಮಾಣಾಂ ಚ ಪೂಜಿತೋ ಬ್ರಾಹ್ಮಣಃ ಶುಚಿಃ ।**
**ತತೋಽಧಿಕಃ ಪೂಜಿತೋಽಪಿ ಬ್ರಾಹ್ಮಣೋ ಯದಿ ವೈಷ್ಣವಃ ॥**

ಎಲ್ಲ ಆಶ್ರಮದವರಿಗೂ ಶುಚಿಯಾದ ಬ್ರಾಹ್ಮಣ ಪೂಜ್ಯನೆ. ಅದರಲ್ಲಿಯೂ ಆ ಬ್ರಾಹ್ಮಣ ವೈಷ್ಣವನಾಗಿದ್ದರೆ ಇನ್ನೂ ಹೆಚ್ಚು ಪೂಜ್ಯನೆನಿಸುತ್ತಾನೆ.

**ನ ಹಿ ಪೂತಂ ಚ ಪಶ್ಯಾಮಿ ವೈಷ್ಣವಬ್ರಾಹ್ಮಣಾತ್ ಪರಂ ।**
**ಸ ಪೂತಃ ಪವನಾದೇವ ಸ ಪೂತಶ್ಚ ಹುತಾಶನಾತ್ ॥**

ವೈಷ್ಣವಬ್ರಾಹ್ಮಣನಿಗಿಂತ ಅಧಿಕ ಶುದ್ಧನಾದವನನ್ನು ನಾನೆಲ್ಲಿಯೂ ಕಾಣೆ. ಅವನು ಗಾಳಿಗಿಂತ ಶುದ್ಧ. ಬೆಂಕಿಗಿಂತಲೂ ಶುದ್ಧ.

**ತೀರ್ಥೇಭ್ಯೋಽಪಿ ಚ ಸರ್ವೇಭ್ಯೋ ಬಿಭೇತಿ ಚ ತತೋಽಸುರ ।**
**ನ ಹಿ ಪಾಪಾನಿ ತದ್ದೇಹೇ ವಹ್ನೌ ಶುಷ್ಕತೃಣಾದಿವತ್ ॥**

ಎಲ್ಲ ತೀರ್ಥಗಳಿಗಿಂತ ಹೆಚ್ಚು ಬ್ರಾಹ್ಮಣನಿಗೇ ಪಾಪ ಹೆದರುತ್ತದೆ. ಎಷ್ಟು ಪಾಪಗಳು ಬಂದರೂ ಅವನ ದೇಹದಲ್ಲಿ ಬೆಂಕಿಯಲ್ಲಿ ಬಿದ್ದ ಒಣ ಹುಲ್ಲುಗಳಂತೆ ದಗ್ಧವಾಗುವುವು.

**ಬಲಿ ನುಡಿದ:-** 'ಜಗದೀಶ್ವರ, ನಾನು ನಿನ್ನ ಭೃತ್ಯ. ನನ್ನನ್ನು ನೀನು ಹೊಗಳಬಾರದು. ಏಕೆ ಹೊಗಳುವಿ? ನೀನೆ ನನಗೆ ಪರಮೈಶ್ವರ್ಯ ಕೊಟ್ಟವನು. ಈಗ ಅದೃಷ್ಟವಶದಿಂದ ಎಲ್ಲ ಲೋಕಗಳಿಗಿಂತ ಕೆಳಗಿನದಾದ ಸುತಲಲೋಕದಲ್ಲಿ ನನ್ನನ್ನು ಇರಿಸಿದಿ. ವಾಮನ ರೂಪದಿಂದ ನನ್ನ ಸಂಪತ್ತನ್ನು ಕಸಿದು ನನಗಿಂತ ಹೆಚ್ಚಿನ ಭಕ್ತನಾದ ಇಂದ್ರನಿಗೆ ಕೊಟ್ಟಿರುವಿ. ಈಗ ನನಗೆ ಪ್ರಾಣಕ್ಕೆ ಸಮನಾದ ಬಾಣನಿಗೆ ಹಿತವನ್ನು ಹೇಳು. ಪರಮಾತ್ಮನೊಡನೆ ಯುದ್ಧವೆಂದರೆ ದೇವತೆಗಳಿಗೂ ಅನುಚಿತವಾಗುವುದು.' ಹೀಗೆ ಹೇಳಿ ಬಲಿ ಶಿವನಿಗೆ ತಲೆಬಾಗಿ ನಮಿಸಿದ. ಸಾಮವೇದದಲ್ಲಿ ಹೇಳಿದಂತೆ ಸ್ತೋತ್ರ ಮಾಡಿದ. ಭಕ್ತಿ ಪರವಶತೆಯಿಂದ ಪುಳಕಿತನಾಗಿ ಕಣ್ಣಲ್ಲಿ ನೀರು ತುಂಬಿಕೊಂಡು ಶುಕ್ರಾಚಾರ್ಯರು ಉಪದೇಶಿಸಿದ್ದ ಏಕಾದಶಾಕ್ಷರ ಮಂತ್ರ ಜಪಿಸುತ್ತ ಹೃದಯಕಮಲದಲ್ಲಿ ಭಗವಂತನನ್ನು ಧ್ಯಾನಿಸಿದ. ಬಳಿಕ ಹೀಗೆ ಸ್ತೋತ್ರ ಮಾಡಿದ -

ಅದಿತಿದೇವಿ ವ್ರತದಿಂದ ನಿನ್ನನ್ನು ಒಲಿಸಿಕೊಂಡು ಪ್ರಾರ್ಥಿಸಿದಾಗ ನೀನು ವಾಮನನಾಗಿ ಅವತರಿಸಿ ನನ್ನನ್ನು ವಂಚಿಸಿದಿ. ಸಂಪದ್ರೂಪಳಾದ ಮಹಾಲಕ್ಷ್ಮಿಯನ್ನು ನನ್ನ ಸೋದರನಾದ, ನನಗಿಂತಲೂ ಹೆಚ್ಚು ಭಕ್ತನಾದ ಇಂದ್ರನಿಗೆ ಕೊಟ್ಟೆ. ಈಗ ನನ್ನ ಮಗ ಬಾಣ ನಿನ್ನ ಕಿಂಕರ. ಭಕ್ತರ ಬಂಧುವಾದ ನೀನು ಅವನನ್ನು ಇಂದಿನವರೆಗೂ ಕಾಪಾಡಿರುವಿ. ತಾಯಿ ಮಗನನ್ನು ಪೋಷಿಸುವಂತೆ ಪಾರ್ವತಿ ಅವನನ್ನು ಪೋಷಿಸಿದಳು. ಅವನ ಮಗಳನ್ನು ಅಪಹರಿಸಿದ ಅನಿರುದ್ಧ ಈಗ ಅವನನ್ನೇ ಕೊಲ್ಲಲು ಹೊರಟಿದ್ದಾನೆ. ಸ್ಕಂದ ನಡುವೆ ಬಂದು ತಡೆದುದಾಯಿತು. ಇದೀಗ ಪುನಃ ನೀನೆ ಕೊಲ್ಲಲು ಬಂದಿರುವಿ. ನಿನ್ನ ಮೊಮ್ಮಗನಿಗೆ ಬುದ್ಧಿ ಹೇಳಬಾರದೆ? ನೀನು ಸರ್ವೇಶ್ವರ, ಸರ್ವರಲ್ಲಿಯೂ ಸಮಾನ ಪ್ರೀತಿ ಉಳ್ಳವನೆಂದು ವೇದಗಳು ಹೇಳುತ್ತವೆ. ಆದರೆ ಇದೀಗ ನೀನು ಪಕ್ಷಪಾತ ತೋರುತ್ತಿರುವಿ! ನೀನು ಕೊಲ್ಲಲು ಬಂದರೆ ರಕ್ಷಿಸಬಲ್ಲವರು ಯಾರು ಲೋಕದಲ್ಲಿ? ಸುದರ್ಶನಚಕ್ರದ ತೇಜಸ್ಸು ಕೋಟಿಸೂರ್ಯರಿಗೆ ಸಮಾನ. ದೇವತೆಗಳ ಯಾವ ಅಸ್ತ್ರದಿಂದಲೂ ತಡೆಯಲಾಗದ ಆ ಸುದರ್ಶನ ಅಸ್ತ್ರಗಳಲ್ಲೆಲ್ಲ ಅತ್ಯಂತ ಶ್ರೇಷ್ಠ. ಅಸ್ತ್ರಗಳಲ್ಲಿ ಸುದರ್ಶನ ಹೇಗೆ ಶ್ರೇಷ್ಠವೋ ಹಾಗೆ ದೇವತೆಗಳಲ್ಲಿ ನೀನು ಶ್ರೇಷ್ಠ. ವಿಷ್ಣು ಸತ್ವಗುಣಕ್ಕೆ ಆಧಾರ. ಶಿವನೂ ಸತ್ವಗುಣಕ್ಕೆ ಆಧಾರ. ಸೃಷ್ಟಿಕರ್ತನಾದ ಬ್ರಹ್ಮ ರಜೋಗುಣಕ್ಕೆ ಆಧಾರ. ಲಯಕರ್ತನಾದ ಕಾಲಾಗ್ನಿರುದ್ರ ತಮೋಗುಣಕ್ಕೆ ಆಧಾರ.

ಅವನೆ ಶಂಕರನ ಅಂಶ. ಬೇರೆ ರುದ್ರರು ಅವನ ಕಲೆಗಳು. ನೀನು ನಿರ್ಗುಣ, ಪ್ರಕೃತಿಯಿಂದಾಚೇ ಇರುವವ. ಎಲ್ಲರಿಗೂ ನೀನು ಪರಮಾತ್ಮ. ಎಲ್ಲರ ಪ್ರಾಣಗಳು ವಿಷ್ಣುಸ್ವರೂಪಿಗಳು. ಮನಸ್ಸು ಬ್ರಹ್ಮ, ಜ್ಞಾನ ಶಿವ, ಬುದ್ಧಿ ಪ್ರಕೃತಿ. ಜೀವರೆಲ್ಲರೂ ನಿನಗೆ ಪ್ರತಿಬಿಂಬರು. ಅವರು ತಮ್ಮ ಕರ್ಮದ ಫಲ ಉಣ್ಣುವರು. ನೀನು ಉಣ್ಣದೆ ಸಾಕ್ಷಿಯಾಗಿ ನೋಡುತ್ತಿರುವಿ. ನೀನು ಶರೀರದಿಂದ ಹೊರಟು ಹೋದರೆ ಎಲ್ಲ ದೇವತೆಗಳೂ ರಾಜನ ಹಿಂದೆ ಭಟರಂತೆ ಹೊರಟು ಹೋಗುವರು. ಒಡನೆ ಶರೀರ ಪಾತವಾಗುತ್ತದೆ. ನೀನಿಲ್ಲದ ಆಶರೀರ ಶವವೆನಿಸುತ್ತದೆ, ಅಸ್ಪೃಶ್ಯವೆನಿಸುತ್ತದೆ. ಇದನ್ನು ಜ್ಞಾನಿಗಳೂ ನಿನ್ನ ಮಾಯೆಯಿಂದ ವಂಚಿತರಾಗಿ ತಿಳಿಯದಿರುವುದುಂಟು. ನಿನ್ನನ್ನು ಭಜಿಸುವ ಸಜ್ಜನರು ಮಾತ್ರ ಈ ಮಾಯೆಯನ್ನು ದಾಟಬಲ್ಲರು. ಮೂರು ಗುಣಗಳಿಂದ ಕೂಡಿದ ಪ್ರಕೃತಿಯ ಅಭಿಮಾನಿನಿ ದುರ್ಗೆಯೆ ವೈಷ್ಣವೀ ಮಾಯೆ. ಆ ನಿನ್ನ ಮಾಯೆಯನ್ನು ಯಾರೂ ಅತಿಕ್ರಮಿಸಲಾರರು. ಬ್ರಹ್ಮ ವಿಷ್ಣು ಶಿವರು ನಿನ್ನ ಅಂಶಗಳು. ಎಲ್ಲ ವಿಶ್ವಕ್ಕೂ ಆಶ್ರಯನಾದ ಮಹಾ ವಿರಾಟ್‌ಪುರುಷನೂ ಜಲದಲ್ಲಿ ವಾಸಮಾಡುತ್ತಾನೆ, ನೀನು ಗೋಕುಲದಲ್ಲಿ ವಾಸಮಾಡುವಂತೆ. ಅವನು ವಾಸು. ನೀನು ಅವನಿಗೆ ದೇವನಾದ್ದರಿಂದ ವಾಸುದೇವನೆನಿಸಿರುವೆ. ಹಾಗೆ ಪುರಾಣಗಳು ಹೇಳುತ್ತವೆ.

ಸೂರ್ಯ ಚಂದ್ರ ಅಗ್ನಿ ವಾಯು ವರುಣ ಕುಬೇರ ಯಮ ಇಂದ್ರ ಶೇಷ ಈಶಾನ ನಿಋತಿ ಮುನಿಗಳು ಮನುಗಳು ಗ್ರಹಗಳು ಚರ ಅಚರ ಜಂತುಗಳು ಎಲ್ಲರೂ ನಿನ್ನ ಕಲಾಂಶ ಸಂಭೂತರು. ನೀನು ಸಾಕ್ಷಾತ್ ಜ್ಯೋತಿರೂಪನಾದ ಪರಬ್ರಹ್ಮ. ನಿನ್ನನ್ನೆ ಯೋಗಿಗಳು ಸದಾ ಧ್ಯಾನ ಮಾಡುವರು. ನೀಲಮೇಘಶ್ಯಾಮ, ಪೀತಾಂಬರಧಾರಿ, ಮಂದಹಾಸಯುಕ್ತ ಪ್ರಸನ್ನ ಮುಖದಿಂದ ಭಕ್ತರನ್ನು ಅನುಗ್ರಹಿಸುವವ, ಗಂಧವನ್ನು ಸರ್ವಾಂಗಗಳಿಗೆ ಬಳಿದುಕೊಂಡಿರುವವ, ದ್ವಿಭುಜನಾಗಿ ಕೈಯಲ್ಲಿ ಕೊಳಲು ಹಿಡಿದವ, ತಲೆಯಲ್ಲಿ ನವಿಲ ಗರಿ ಧರಿಸಿದವ. ಮಾಲತೀ ಮಾಲೆಯಿಂದ ಅಲಂಕೃತನಾದವ, ಕಪೋಲಗಳಲ್ಲಿ ಹೊಳೆವ ಅಮೂಲ್ಯ ರತ್ನ ಕುಂಡಲಗಳು, ಕೈಯಲ್ಲಿ ದಿವ್ಯ ರತ್ನದುಂಗುರಗಳು ಮತ್ತು ಧ್ವನಿಗೈವ ಕಾಲು ಕಡಗಗಳನ್ನು ಧರಿಸಿರುವವ, ಶರತ್ಕಾಲದ ಕಮಲದಂಥ ಕಣ್ಣುಗಳು, ಶರತ್ಕಾಲದ ಹುಣ್ಣಿಮೆ ಚಂದ್ರನನ್ನು ನಾಚಿಸುವ ಮುಖ, ಕೋಟಿಚಂದ್ರರಿಗೆ ಸಮಾನವಾದ ಕಾಂತಿ ಅವನದು. ಕೋಟಿ ಗೋಪಿಯರು ನಸುನಗುತ್ತ ನೋಡುತ್ತಿದ್ದಾರೆ. ಗೋಪರು ಬಿಳಿಚಾಮರಗಳನ್ನು ಬೀಸುತ್ತಿದ್ದಾರೆ. ಗೋಪಬಾಲಕನಂತೆ ಕಾಣುತ್ತ ರಾಧೆಯನ್ನು ಆಲಿಂಗಿಸುತ್ತಿರುವ ಆತನನ್ನು ಬ್ರಹ್ಮ ಶೇಷ ರುದ್ರರು ವಂದಿಸುತ್ತಿದ್ದಾರೆ. ಸಿದ್ಧರು ಮುನಿಗಳು ಯೋಗಿಗಳು ನಮಿಸಿ ಸ್ತೋತ್ರ ಮಾಡುತ್ತಿದ್ದಾರೆ. ವೇದಗಳಿಗೂ ವರ್ಣಿಸಲಾಗದಂಥವನು. ಅಣೋರಣೀಯನೂ ಮಹತೋಮಹೀಯನೂ ಸತ್ಯನೂ ನಿತ್ಯನೂ ಪ್ರಕೃತಿಯಿಂದಾಚೆ ಇರುವವನೂ ನಿರ್ಲಿಪ್ತನೂ ಆದ ಭಗವಂತ ಅವನು ಎಂದು ಯೋಗಿಗಳು ನಿನ್ನನ್ನು ಧ್ಯಾನಿಸುತ್ತಾರೆ. ಕಮಲೆಯು ಕಮಲಗಳಿಂದ ಅರ್ಚಿಸುವ ನಿನ್ನ ಪಾದಕಮಲಗಳಿಗೆ ದೂರ್ವೆ ಅಕ್ಷತೆಗಳಿಂದ ಕೂಡಿದ ಜಲವನ್ನು ಸಮರ್ಪಿಸಲು ಉತ್ಸುಕರಾಗಿರುತ್ತಾರೆ.

ವೇದಗಳೂ ನಿನ್ನನ್ನು ಸ್ತೋತ್ರ ಮಾಡಲು ಶಕ್ತವಾಗಲಾರವು. ಸರಸ್ವತಿಯಾಗಲಿ ಶೇಷ ಶಿವ ಬ್ರಹ್ಮ ಗಣೇಶ ಸೂರ್ಯ ಇಂದ್ರ ಚಂದ್ರ ಕುಬೇರರಾಗಲಿ ಸ್ತೋತ್ರ ಮಾಡಲು ಶಕ್ತರಾಗಲಾರರು. ಇನ್ನು ಬೇರೆ ಮಂದಬುದ್ಧಿಯ ಜನರು ಏನು ಸ್ತೋತ್ರ ಮಾಡಬಲ್ಲರು? ಅಂಥ ತ್ರಿಗುಣಾತೀತನಾದ ನಿನ್ನನ್ನು ನಾನೇನು ಸ್ತುತಿಸಬಲ್ಲೆ? ನಾನು ಬುದ್ಧಿಶೂನ್ಯನಾದ ಅಸುರ. ಸುರನಲ್ಲ ಆದರಿಂದ ಕ್ಷಮಿಸು.' ಹೀಗೆ ಬಲಿ ಸ್ತುತಿಸಿದಾಗ ಶ್ರೀಕೃಷ್ಣ ಅಭಯ ನೀಡಿದ -

'ಭಯ ಪಡಬೇಡ, ಬಲಿ, ಸುತಲಲೋಕಕ್ಕೆ ಹೋಗು. ನನ್ನ ಅನುಗ್ರಹದಿಂದ ನಿನ್ನ ಪುತ್ರ ಅಜರಾಮರನಾಗಿರುತ್ತಾನೆ. ಆ ಮೂರ್ಖನ ಅಹಂಕಾರವನ್ನು ಕಳೆಯುತ್ತೇನೆ ಹೊರತು ಕೊಲ್ಲುವುದಿಲ್ಲ. ಪ್ರಹ್ಲಾದನಿಗೆ ನಾನು ವರ ಕೊಟ್ಟಿದ್ದೇನೆ, ನಿನ್ನ ವಂಶದವರನ್ನು ನಾನು ಕೊಲ್ಲುವುದಿಲ್ಲ ಎಂದು. ನಿನ್ನ ಮಗನಿಗೆ ಉತ್ತಮವಾದ ಮೃತ್ಯುಂಜಯ ವಿದ್ಯೆಯನ್ನು ನೀಡುತ್ತೇನೆ. ನೀನು ಮಾಡಿದ ಈ ಸ್ತೋತ್ರ ಸಾಮವೇದೋಕ್ತವಾದುದು. ಹಿಂದೆ ಬ್ರಹ್ಮ ಸನತ್ಕುಮಾರನಿಗೆ ಸೂರ್ಯಗ್ರಹಣ ಕಾಲದಲ್ಲಿ ಪುಣ್ಯಕರವಾದ ಸಿದ್ಧಾಶ್ರಮದಲ್ಲಿ ಉಪದೇಶಿಸಿದ. ಬಳಿಕ ಪಾರ್ವತಿ ಗಂಗಾತೀರದಲ್ಲಿ ಗೌತಮನಿಗೆ ಉಪದೇಶಿಸಿದಳು. ವಿರಜಾನದೀ ತೀರದಲ್ಲಿ ನಾನೂ ಬ್ರಹ್ಮ ಶಿವರಿಗೆ ಉಪದೇಶಿಸಿದೆ. ಕುಮಾರನೂ ಭೃಗುಮುನಿಗೆ ಉಪದೇಶಿಸಿದ. ನೀನೂ ಇದನ್ನು ಬಾಣನಿಗೆ ಉಪದೇಶಿಸು. ಅವನು ಈ ಸ್ತೋತ್ರದಿಂದ ನನ್ನನ್ನು ಸ್ತುತಿಸಲಿ. ಈ ಸ್ತೋತ್ರವನ್ನು ಗುರುಮುಖದಿಂದ ಉಪದೇಶ ಪಡೆದು ಸ್ನಾನಮಾಡಿ ಪೂಜಾಕಾಲದಲ್ಲಿ ನಿತ್ಯವೂ ಭಕ್ತಿಯಿಂದ ಪಠಿಸಿದರೆ ಕೋಟಿ ಜನ್ಮಾರ್ಜಿತ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ.

ಈ ಸ್ತೋತ್ರ ಎಲ್ಲ ವಿಪತ್ತುಗಳನ್ನು ಕಳೆಯುವುದು. ಎಲ್ಲ ಸಂಪತ್ತುಗಳನ್ನೂ ಕೊಡುವುದು. ದುಃಖ ಶೋಕಗಳನ್ನು ತಡೆಯುವುದು. ಘೋರವಾದ ಸಂಸಾರ ಸಾಗರವನ್ನು ದಾಟಿಸುವುದು. ಗರ್ಭವಾಸವಿಲ್ಲದಂತೆ ಮಾಡುವುದು. ಜರೆ ಮರಣಗಳನ್ನು ಪರಿಹರಿಸುವುದು. ಬಂಧನವನ್ನು ಕಳೆಯುವುದು. ರೋಗಗಳನ್ನು ತಡೆಯುವುದು. ಭಕ್ತನಿಗೆ ಶೋಭೆ ತರುವುದು. ಈ ಸ್ತೋತ್ರ ಪಠಿಸುವವ ಸರ್ವತೀರ್ಥಸ್ನಾನಗಳ ಸರ್ವಯಜ್ಞಗಳ ಎಲ್ಲ ವ್ರತಗಳ ತಪಸ್ಸುಗಳ ಫಲಗಳನ್ನು ಪಡೆಯುತ್ತಾನೆ. ಸರ್ವದಾನಗಳ ಫಲವನ್ನೂ ಪಡೆಯುವುದು ನಿಶ್ಚಿತ. ಒಂದು ಲಕ್ಷ ಬಾರಿ ಪಠಿಸಿದರೆ ಈ ಸ್ತೋತ್ರ ಸಿದ್ಧಿಸುವುದು. ಈ ಸ್ತೋತ್ರ ಸಿದ್ಧಿಸಿತೆಂದರೆ ಎಲ್ಲವೂ ಸಿದ್ಧಿಸಿದಂತೆ. ಈ ಲೋಕದಲ್ಲಿ ದೇವ ತುಲ್ಯನಾಗುತ್ತಾನೆ. ಕೊನೆಯಲ್ಲಿ ಹರಿಪದವನ್ನು ಪಡೆಯುತ್ತಾನೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಬಾಣಯುದ್ಧದ ಬಲಿಕೃತ ಶ್ರೀಕೃಷ್ಣ ಸ್ತೋತ್ರವೆಂಬ ನೂರಹತ್ತೊಂಬತ್ತನೆ ಅಧ್ಯಾಯ ಮುಗಿಯಿತು.*

—○—

## ಬಾಣಾಸುರ ಕೃಷ್ಣರ ಯುದ್ಧ



**ಶ್ರೀನಾರಾಯಣ ಮುನಿ:-** 'ಶ್ರೀಕೃಷ್ಣ ಉದ್ಧವ ಬಲರಾಮರೊಡನೆ ಮಂತ್ರಾಲೋಚನೆ ಮಾಡಿ ಒಬ್ಬ ದೂತನನ್ನು ಕಳಿಸಿದ. ಆ ದೂತ ಶಿವ ಗಣಪತಿ ದುರ್ಗೆ ಸ್ಕಂದ ಭದ್ರಕಾಳಿ ಉಗ್ರಚಂಡಿ ಕೋಟರಿಯರು ಇದ್ದಲ್ಲಿಗೆ ಬಂದು ನಮಿಸಿ ಹೇಳಿದ -

'ಮಹೇಶ್ವರ, ಬಾಣ ಯುದ್ಧ ಮಾಡಲಿ, ಇಲ್ಲವೆ ಉಷಾ ಅನಿರುದ್ಧರನ್ನು ಕರೆದುಕೊಂಡು ಬಂದು ಶರಣಾಗಲಿ. ಯುದ್ಧಕ್ಕೆ ಕರೆದಾಗ ಭಯದಿಂದ ಬಾರದಿರುವವನು ಸತ್ತ ಮೇಲೆ ಏಳು ಮಂದಿ ಪಿತೃಗಳೊಂದಿಗೆ ನರಕದಲ್ಲಿ ಬೀಳುವನು ಎಂದು ಶ್ರೀಕೃಷ್ಣ ಹೇಳುತ್ತಾನೆ.'

ದೂತನ ಮಾತನ್ನು ಕೇಳಿ ಸಭೆಯಲ್ಲಿ ಪಾರ್ವತಿ ಶಿವನ ಮುಂದೆ ಬಾಣನಿಗೆ ಹೇಳಿದಳು. 'ಬಾಣ, ಹೋಗು, ಮಗಳನ್ನೂ, ಜೊತೆಗೆ ಬಳುವಳಿಯನ್ನೂ ಕೃಷ್ಣನ ಮುಂದಿರಿಸಿ ಶರಣಾಗು. ಅವನು ಎಲ್ಲರಿಗೂ ಒಡೆಯ. ಎಲ್ಲ ಸಂಪತ್ತುಗಳನ್ನೂ ಕೊಡುವ ಕೃಪಾಳು, ಭಕ್ತವತ್ಸಲ.'

ಪಾರ್ವತಿಯ ಮಾತನ್ನು ಎಲ್ಲ ದೇವತೆಗಳೂ ಹೊಗಳಿದರು. ಪಾರ್ವತಿಯನ್ನು ಧನ್ಯೆ ಧನ್ಯೆ ಎಂದರು. ಬಾಣನಿಗೆ ಮಾತ್ರ ಕೋಪವೆ ಬಂದಿತು. ಎದ್ದು ತಕ್ಷಣ ಬಿಲ್ಲನ್ನು ಕೈಗೆತ್ತಿಕೊಂಡು ಶಿವನಿಗೆ ನಮಿಸಿ ಹೊರಟು ಹೋದ. ಎಲ್ಲರೂ ತಡೆದರು. ಆದರೂ ಕೋಪದಿಂದ ನಡುಗುತ್ತ ಕೆಂಗಣ್ಣಿನಿಂದ ನೋಡುತ್ತ ಮೂರು ಕೋಟಿ ದೈತ್ಯರ ಸೈನ್ಯದೊಂದಿಗೆ ಯುದ್ಧಕ್ಕೆ ಹೊರಟ. ಅವನ ಜೊತೆಗೆ ಕುಭಾಂಡ ಕೂಪಕರ್ಣ ನಿಕುಂಭ ಕುಂಭ ಎಂಬ ಸೇನಾಧಿಪತಿಗಳೂ ಯುದ್ಧ ಸನ್ನದ್ಧರಾಗಿ ಹೊರಟರು.

ಉನ್ಮತ್ತಭೈರವ, ಸಂಹಾರಭೈರವ, ಅಸಿತಾಂಗಭೈರವ, ರುರುಭೈರವ, ಮಹಾಭೈರವ, ಕಾಲಭೈರವ, ಪ್ರಚಂಡಭೈರವ, ಕ್ರೋಧಭೈರವ ಎಂಬ ಎಂಟು ಭೈರವರು, ಏಕಾದಶ ರುದ್ರರಿಂದೊಡಗೂಡಿದ ಕಾಲಾಗ್ನಿರುದ್ರ, ಉಗ್ರಚಂಡಾ, ಪ್ರಚಂಡಾ, ಚಂಡಿಕಾ, ಚಂಡಿ ನಾಯಿಕಾ, ಚಂಡೇಶ್ವರಿ, ಚಾಮುಂಡಾ, ಚಂಡಿ, ಚಂಡಕಪಾಲಿಕಾ ಎಂಬ ಎಂಟುಮಂದಿ ನಾಯಿಕೆಯರು, ಶೋಣಿತಪುರದ ಗ್ರಾಮದೇವತೆಯಾದ ಕೋಟರಿ ಮತ್ತು ಇಂದ್ರಾಣೀ ವೈಷ್ಣವೀ ಬ್ರಹ್ಮಾಣೀ ಕೌಮಾರೀ ನಾರಸಿಂಹೀ ವಾರಾಹೀ ಮಾಹೇಶ್ವರೀ ಭೈರವೀ ಎಂಬ ಎಂಟು ಶಕ್ತಿಗಳು, ರಥವೇರಿ ಹೊರಟರು.

ರಕ್ತವರ್ಣದವಳು ಮೂರುಕಣ್ಣಿನವಳು ನಾಲಿಗೆಯನ್ನು ಹೊರಗೆ ಚಾಚಿ ಭಯಂಕರಳಾಗಿರುವವಳು ಶೂಲ ಶಕ್ತಿ ಗದೆ ಖಡ್ಗ ಖರ್ಪರಗಳನ್ನು ಹಿಡಿದಿರುವವಳು - ಇಂಥ ಭದ್ರಕಾಳಿಯೂ ಹೊರಟಳು. ಶೂಲವನ್ನು ಹಿಡಿದು ವೃಷಭವನ್ನೇರಿ ಶಿವನೂ ಹೊರಟ. ಮಯೂರವಾಹನವೇರಿ ಬಿಲ್ಲು ಹಿಡಿದು ಸ್ಕಂದನೂ ಹೊರಟ. ಹೀಗೆ ಗಣೇಶ ಪಾರ್ವತಿಯರನ್ನು ಹೊರತು ಎಲ್ಲರೂ ಹೊರಟರು.

ಬಾಣ ಶಂಖಧ್ವನಿ ಮಾಡಿ ಪಾರ್ವತೀಪತಿಯನ್ನು ನಮಿಸಿ ಯುದ್ಧಕ್ಕೆ ನಿಂತ. ಗ್ರೀಷ್ಮಕಾಲದ ಮಧ್ಯಾಹ್ನಸೂರ್ಯನಂತೆ ಹೊಳೆವ ಅತಿ ಪ್ರಚಂಡವಾದ ಅಂಜನಾಸ್ತ್ರವನ್ನು ಪ್ರಯೋಗಿಸಿದ. ಅದನ್ನು ಸಾತ್ಯಕಿ ನೋಡಿ ತಲೆಬಾಗಿದ. ಒಡನೆ ಅದು ಅವನನ್ನು ಸುಡದೆ ಆಕಾಶದಲ್ಲಿ ಮೇಲೇರಿ ಮರೆಯಾಯಿತು. ಬಾಣ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದ. ಅದನ್ನು ವಾರುಣಾಸ್ತ್ರದಿಂದ ಸಾತ್ಯಕಿ ಶಾಂತಗೊಳಿಸಿದ. ಬಾಣನ ವಾಯ್ವಸ್ತ್ರವನ್ನು ಪರ್ವತಾಸ್ತ್ರದಿಂದ ತಡೆದ. ನಾರಾಯಣಾಸ್ತ್ರವನ್ನು ಬ್ರಹ್ಮಾಸ್ತ್ರದಿಂದಲೂ ನಾಗಾಸ್ತ್ರವನ್ನು ಗರುಡಾಸ್ತ್ರದಿಂದಲೂ ತಡೆದ. ಬಾಣ ಶಿವನ ಶೂಲವನ್ನೆಸೆದ. ಸಾತ್ಯಕಿ ದುರ್ಗಾಸ್ತುತಿ ಮಾಡಿ ಆ ಶೂಲವನ್ನು ಕೊರಳಿಗೆ ಮಾಲೆಯಾಗಿ ಮಾಡಿಕೊಂಡ. ಬಾಣ ಪಾಶುಪತಾಸ್ತ್ರ ಎಸೆಯಲು ಉದ್ಯುಕ್ತನಾದಾಗ ಸಾತ್ಯಕಿ ಅವನನ್ನು ಜೃಂಭಣಾಸ್ತ್ರದಿಂದ ಜೃಂಭಿತನನ್ನಾಗಿಸಿದ. ಒಡನೆ ಸ್ಕಂದ ಅರ್ಧಚಂದ್ರ ಪ್ರಯೋಗ ಮಾಡಿದ. ಅದನ್ನು ಪ್ರದ್ಯುಮ್ನ ಬಾಣದಿಂದ ತುಂಡರಿಸಿದ. ಸ್ಕಂದನ ಗದೆಯನ್ನೂ ವೈಷ್ಣವಾಸ್ತ್ರದಿಂದ ತಡೆದ. ಸ್ಕಂದ ನಾರಾಯಣಾಸ್ತ್ರವೆಸೆದಾಗ ಕೃಷ್ಣ ಹೇಳಿಕೊಟ್ಟಂತೆ ಆ ಅಸ್ತ್ರಕ್ಕೆ ನೆಲದ ಮೇಲೆ ದಂಡಪ್ರಣಾಮ ಮಾಡಿದ. ಅದು ಹೊರಟು ಹೋಯಿತು. ಸ್ಕಂದನ ಶಕ್ತ್ಯಾಯುಧವನ್ನು ಪ್ರದ್ಯುಮ್ನ ನಾರಾಯಣಾಸ್ತ್ರದಿಂದ ತಡೆದ. ಬ್ರಹ್ಮಾಸ್ತ್ರವನ್ನು ಪ್ರತಿ ಬ್ರಹ್ಮಾಸ್ತ್ರದಿಂದ ಶಾಂತಗೊಳಿಸಿದ. ಸ್ಕಂದ ಪಾಶುಪತಾಸ್ತ್ರ ಎಸೆಯಲು ಹೊರಟಾಗ ಪ್ರದ್ಯುಮ್ನ ನಿದ್ರಾಸ್ತ್ರದಿಂದ ಅವನನ್ನು ನಿದ್ದೆಗೊಳಿಸಿದ. ಹೀಗೆ ಬಾಣ ಜೃಂಭಿತನಾಗಿ, ಸ್ಕಂದ ನಿದ್ರಿತನಾಗಿ ಸುಮ್ಮನಿದ್ದುದನ್ನು ಕಂಡು ಭದ್ರಕಾಳಿ ಪ್ರದ್ಯುಮ್ನನನ್ನು ರಥಸಮೇತವಾಗಿ ನುಂಗಿದಳು. ಬಾಣ ಸ್ಕಂದರನ್ನು ಎತ್ತಿಕೊಂಡು ಪಾರ್ವತಿಯ ಬಳಿಗೆ ತಂದಳು. ಪಾರ್ವತಿ ಸ್ಕಂದನನ್ನು ಎಚ್ಚರಿಸಿದಳು. ಬಾಣನನ್ನು ಸ್ವಸ್ಥನನ್ನಾಗಿ ಮಾಡಿದಳು. ಅಷ್ಟರಲ್ಲಿ ಪ್ರದ್ಯುಮ್ನ ರಥಸಮೇತ ಭದ್ರಕಾಳಿಯ ಮೂಗಿನ ಹೊಳ್ಳೆಯ ಮಾರ್ಗವಾಗಿ ಹೊರಬಂದು ರಣರಂಗಕ್ಕೆ ಧಾವಿಸಿದ. ಯಾದವರು ಸಂತೋಷದಿಂದ ನಕ್ಕರು. ಶಿವನ ಸೈನಿಕರು ಭಯದಿಂದ ವಿಹ್ವಲರಾದರು. ಅವರ ಗಂಟಲು ಒಣಗಿತು. ಅದನ್ನು ನೋಡಿ ಬಾಣ ಕೋಪದಿಂದ ರಥವೇರಿ ತಿರುಗಿ ಯುದ್ಧಕ್ಕೆ ನಿಂತ. ಸ್ಕಂದನೂ ಬಂದು ನಿಂತ. ಬಾಣನ ಐದು ಬಾಣಗಳನ್ನು ಬಲರಾಮ ಅರ್ಧಚಂದ್ರ ಬಾಣದಿಂದ ಕತ್ತರಿಸಿದ. ರಥವನ್ನೂ ನೇಗಿಲಿನಿಂದ ಮುರಿದ. ಸಾರಥಿಯನ್ನೂ ಕುದುರೆಗಳನ್ನೂ ಕೊಂದ. ಬಾಣನನ್ನೂ ಕೊಲ್ಲಲು ಬಂದಾಗ ಕಾಲಾಗ್ನಿರುದ್ರ ಬಂದು ತಡೆದ. ಬಲರಾಮ ಅವನ ರಥ ಸಾರಥಿ ಕುದುರೆಗಳನ್ನೂ ನೇಗಿಲಿನಿಂದ ಧ್ವಂಸಗೊಳಿಸಿದ. ಆಗ ಕುಪಿತನಾದ ಕಾಲರುದ್ರ ಉಗ್ರವಾದ ಜ್ವರವನ್ನು ಪ್ರಯೋಗಿಸಿದ. ಆಗ ಎಲ್ಲ ಯಾದವರೂ ಜ್ವರ ಗ್ರಸ್ತರಾದರು. ಶ್ರೀಕೃಷ್ಣ ವೈಷ್ಣವಜ್ವರವನ್ನು ಸೃಷ್ಟಿ ಮಾಡಿ ಕಳಿಸಿದ. ಅದು ಶೈವ ಜ್ವರದೊಂದಿಗೆ ಘೋರ ಯುದ್ಧ ಮಾಡಿ ಆಕ್ರಮಿಸಿತು. ಶೈವಜ್ವರ ನಿಶ್ಶೇಷವಾಗಿ ಬಿದ್ದು ಕೃಷ್ಣನನ್ನು ಸ್ತುತಿಸಿತು. -

'ಜಗನ್ನಾಥ, ಭಕ್ತರ ಮೇಲೆ ಅನುಗ್ರಹ ಮಾಡಲೆಂದೆ ಅವತರಿಸಿದವ ನೀನು. ನಮ್ಮೆಲ್ಲರಿಗೂ ನಾಥ, ಪೂರ್ಣಪುರುಷ. ನಿನಗೆ ಭಕ್ತರೆಲ್ಲರೂ ಸಮಾನ. ನನ್ನ ಪ್ರಾಣಗಳನ್ನು ಕಾಪಾಡು.'

ಕೃಷ್ಣ ಈ ಮಾತನ್ನು ಕೇಳಿ ತಾನು ಸೃಷ್ಟಿಸಿದ ಜ್ವರವನ್ನು ಅಂತರ್ಧಾನಗೊಳಿಸಿದ. ಶೈವಜ್ವರ ರಣರಂಗದಿಂದ ಪಲಾಯನ ಮಾಡಿತು. ಬಾಣ ಪುನಃ ಬಂದು ಸಾವಿರ ಬಾಣಗಳನ್ನು ಮಂತ್ರಪೂರ್ವಕವಾಗಿ ಪ್ರಯೋಗಿಸಿದ. ಅರ್ಜುನ ಅವುಗಳನ್ನು ತನ್ನ ಬಾಣಗಳಿಂದ ಅನಾಯಾಸವಾಗಿ ತಡೆದ. ಬಾಣನ ಶಕ್ತ್ಯಾಯುಧವನ್ನೂ ತುಂಡರಿಸಿದ. ಆಗ ಬಾಣ ಪ್ರಪಂಚಲಯಕಾರಿಯಾದ ನೂರು ಸೂರ್ಯರಂತೆ ಜ್ವಲಿಸುವ ಅತಿ ಘೋರವಾದ ಪಾಶುಪತಾಸ್ತ್ರವನ್ನು ಪ್ರಯೋಗಿಸಿದ. ಶ್ರೀಕೃಷ್ಣ ಸುದರ್ಶನಚಕ್ರದಿಂದ ಪಾಶುಪತಾಸ್ತ್ರವನ್ನೂ ಇದಿರಿಸಿದ. ಪ್ರಳಯಾಗ್ನಿಜ್ವಾಲೆಯಂತಿದ್ದ ಭೀಕರವಾದ ಅಮೋಘವಾದ ಆ ಪಾಶುಪತಾಸ್ತ್ರ ತಿರುಗಿ ಶಿವನ ಕೈಯನ್ನೆ ಸೇರಿತು. ಬಾಣನ ಮೈಯಿಂದ ನೆತ್ತರ ಕೋಡಿ ಹರಿಯಿತು. ಆತ ಮೂರ್ಛೆಗೊಂಡು ನಿಶ್ಚೇಷ್ಟನಾಗಿ ಬಿದ್ದ. ಆಗ ಶಿವ ಬಂದು ಅವನನ್ನು ಮೋಹದಿಂದ ತಬ್ಬಿಕೊಂಡು ಕಣ್ಣೀರು ಸುರಿಸಿದ. ಶಿವನ ಕಣ್ಣೀರೆ ಒಂದೆಡೆ ಸೇರಿ ಒಂದು ಸರೋವರ ನಿರ್ಮಾಣವಾಯಿತು. ಬಾಣನಿಗೆ ಪ್ರಜ್ಞೆ ಉಂಟುಮಾಡಿ ಎತ್ತಿತಂದು ಶ್ರೀಕೃಷ್ಣನ ಪಾದಕಮಲದಲ್ಲಿ ಸಮರ್ಪಿಸಿದ. ಬಲಿ ಪಠಿಸಿದ ವೇದೋಕ್ತವಾದ ಸ್ತೋತ್ರದಿಂದ ಸ್ತುತಿಸಿದ. ಹರಿ ಬಾಣನಿಗೆ ಮೃತ್ಯುಂಜಯ ವಿದ್ಯೆಯನ್ನು ಉಪದೇಶಿಸಿ ಕರಕಮಲದಿಂದ ಮೈದಡವಿ ಅಜರಾಮರನನ್ನಾಗಿ ಮಾಡಿದ.

ಬಾಣ ಬಲಿಪಠಿಸಿದ ಸ್ತೋತ್ರದಿಂದ ಕೃಷ್ಣನನ್ನು ಸ್ತುತಿಸಿ ರತ್ನಾಭರಣಗಳಿಂದ ಅಲಂಕೃತಳಾದ ಕನ್ಯೆಯನ್ನು ತಂದು ದೇವತೆಗಳ ಸಭೆಯಲ್ಲಿ ಕೃಷ್ಣನಿಗೆ ಅರ್ಪಿಸಿದ. ಐದು ಲಕ್ಷ ಆನೆಗಳು, ಅವುಗಳಿಗಿಂತ ನಾಲ್ಕು ಪಾಲು ಅಧಿಕವಾದ ಕುದುರೆಗಳು, ರತ್ನಾಭರಣ ಭೂಷಿತೆಯರಾದ ಸಾವಿರ ದಾಸಿಯರು ಕರುಗಳಿಂದ ಕೂಡಿದ ಸಾವಿರ ಗೋವುಗಳು, ನೂರು ಲಕ್ಷ ಮಾಣಿಕ್ಯ ಮತ್ತು ಮುಂತಾದ ರತ್ನಗಳು, ನೂರು ಲಕ್ಷ ವಜ್ರಗಳು, ಸಾವಿರ ಚಿನ್ನದ ನೀರಿನ ಪಾತ್ರೆಗಳು, ಬೆಂಕಿಯಂತೆ ಶುದ್ಧವಾದ ತೆಳು ಬಟ್ಟೆಗಳು ಮುಂತಾದುವನ್ನೂ ಬಾಣ ಶಿವನಾಜ್ಞೆಯಂತೆ ಕೃಷ್ಣನಿಗೆ ಭಕ್ತಿಯಿಂದ ಸಮರ್ಪಿಸಿದ. ತಾಂಬೂಲ ಚೂರ್ಣಗಳಿಂದ ತುಂಬಿದ ಸಾವಿರ ಪಾತ್ರೆಗಳನ್ನೂ ಕೊಟ್ಟ. ಗಟ್ಟಿಯಾಗಿ ಅತ್ತು ತಾನು ಮಾಡಿದ ಅಪರಾಧವನ್ನು ಭಕ್ತಿಯಿಂದ ತೊಳೆದುಕೊಂಡ. ಕೃಷ್ಣ ಅವನಿಗೆ ವೇದೋಕ್ತವಾದ ಹಿತವಚನಗಳನ್ನು ನುಡಿದು ವರನೀಡಿ ಶಿವನ ಅನುಮತಿ ಪಡೆದು ದ್ವಾರಕೆಗೆ ತೆರಳಿದ. ಬಾಣನ ಕನ್ಯೆಯನ್ನು ರುಕ್ಮಿಣಿಯ ಮತ್ತು ದೇವಕಿಯ ವಶಕ್ಕೆ ಕೊಟ್ಟ. ದೊಡ್ಡ ಹಬ್ಬವನ್ನಾಚರಿಸಿದ, ಮಂಗಳಕಾರ್ಯ ನಡೆಸಿದ. ಬ್ರಾಹ್ಮಣರಿಗೆ ಭೋಜನ ಮಾಡಿಸಿ ದಕ್ಷಿಣೆ ನೀಡಿದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಬಾಣಯುದ್ಧವೆಂಬ ನೂರಿಪ್ಪತ್ತನೆ ಅಧ್ಯಾಯ ಮುಗಿಯಿತು*



# ಶೃಗಾಲ ವಾಸುದೇವನ ಮೋಕ್ಷ

ಅಧ್ಯಾಯ - ೧೨೧

**ಶ್ರೀನಾರಾಯಣ ಮುನಿ:-** ಶ್ರೀಕೃಷ್ಣ ಸುಧರ್ಮಸಭೆಯಲ್ಲಿದ್ದಾಗ ಬ್ರಹ್ಮತೇಜಸ್ಸಿನಿಂದ ಹೊಳೆವ ಬ್ರಾಹ್ಮಣನೊಬ್ಬ ಬಂದು ಭಕ್ತಿಯಿಂದ ಸ್ತೋತ್ರಮಾಡಿ ಮಧುರವಾಗಿ ವಿನಯದಿಂದ ಹೇಳಿದ- 'ಶ್ರೀಕೃಷ್ಣ, ಮಂಡಲೇಶ್ವರನಾದ ಶೃಗಾಲ ವಾಸುದೇವ ನನ್ನ ಮೂಲಕ ನಿನಗೆ ಹೀಗೆ ಹೇಳಿಕಳಿಸಿದ್ದಾನೆ - 'ವೈಕುಂಠದಲ್ಲಿರುವ ಚತುರ್ಭುಜನಾದ ವಾಸುದೇವ ನಾನೆ, ನಾನೆ ಲಕ್ಷ್ಮೀಪತಿ, ಪ್ರಪಂಚ ಸೃಷ್ಟಿಕರ್ತ, ಬ್ರಹ್ಮನನ್ನೂ ಪಾಲಿಸುತ್ತಿರುವವ; ಬ್ರಹ್ಮನ ಪ್ರಾರ್ಥನೆಯಂತೆ ಭೂಭಾರಹರಣಕ್ಕಾಗಿ ಭಾರತದೇಶದಲ್ಲಿ ಅವತರಿಸಿದ್ದೇನೆ' ಹೀಗೆ ಹೇಳಿಕೊಳ್ಳುತ್ತ ನೀನು ವಸುದೇವನಿಂದ ವೈಶ್ಯನಾಗಿ ಹುಟ್ಟಿ ಕ್ಷತ್ರಿಯನೆಂದು ಅಹಂಕಾರಪಡುತ್ತ ಜನರಲ್ಲಿ ಪರಸ್ಪರ ಕಲಹ ಉಂಟುಮಾಡಿ ಜನರನ್ನು ಜನರಿಂದಲೆ ನಾಶಪಡಿಸಿರುವಿ. ದುರ್ಬಲರಾದ ರಾಜರನ್ನು ಬಲಿಷ್ಠರಾಜರೊಡನೆ ಹೋರಾಡುವಂತೆ ಮಾಡಿ ಕೊಲ್ಲಿಸಿದಿ. ದುರ್ಯೋಧನ ಜರಾಸಂಧ ಮುಂತಾದ ದುರ್ಬಲ ರಾಜರನ್ನು ಬಲಿಷ್ಠನಾದ ಭೀಮನ ಕೈಯಿಂದ ಕೊಲ್ಲಿಸಿದಿ. ದ್ರೋಣ ಭೀಷ್ಮ ಕರ್ಣ ಮುಂತಾದವರನ್ನು ಪರಾಕ್ರಮಿಯಾದ ಅರ್ಜುನನ ಮೂಲಕ ವಧಿಸಿದಿ, ಮಹಾಧೂರ್ತ ನೀನು. ಪ್ರಸಿದ್ಧರಾದ ಇಲ್ಲವೆ ಅಪ್ರಸಿದ್ಧರಾದ ದುರ್ಬಲ ರಾಜರನ್ನು ಬಲಿಷ್ಠರ ಮೂಲಕ ಅನಾಯಾಸವಾಗಿ ಕೊಲ್ಲಿಸುವವ ನೀನು. ಸ್ವತಃ ನೀನೆ ಕೊಂದಿರುವ ಶಿಶುಪಾಲ ದಂತವಕ್ರ ಕಂಸ ನರಕ ಕೇಶಿ ಮುರ ಮುಂತಾದವರು ದುರ್ಬಲರೆ ಆಗಿದ್ದರು. ಅವರನ್ನೂ ನೀನು ಕಪಟದಿಂದ ಕೊಂದೆ, ಧರ್ಮಯುದ್ಧದಿಂದಲ್ಲ. ನೀನು ಬಾಲ್ಯದಿಂದಲೂ ಅಧಾರ್ಮಿಕನಾಗಿದ್ದಿ. ಪೂತನೆಯನ್ನು ಕೊಂದು ಸ್ತ್ರೀ ಹತ್ಯಾಪಾಪ ಮಾಡಿದಿ. ಬಟ್ಟೆಗಾಗಿ ಜಗಳವಾಡಿ ಅಗಸನನ್ನು ಕೊಂದಿ.

ಹಿರಣ್ಯಕಶಿಪು ಹಿರಣ್ಯಾಕ್ಷ ಮಧು ಕೈಟಭರನ್ನು ಕೊಂದು ಸೃಷ್ಟಿಯನ್ನು ರಕ್ಷಿಸಿದವ ನಾನೆನ್ನುವಿ. ನಾನೇ ಬ್ರಹ್ಮ, ನಾನೇ ಶಿವ, ನಾನೇ ಜಗದ್ರಕ್ಷಕನಾದ ದುಷ್ಟನಾಶಕನಾದ ವಿಷ್ಣು ಎಂದು ಹೇಳಿಕೊಳ್ಳುವಿ. ಎಲ್ಲ ಮನುಗಳೂ ಮುನಿಗಳೂ ನನ್ನ ಕಲಾಸಂಭೂತರೆಂದೂ ನಾನು ಸ್ವಯಂನಾರಾಯಣ, ಪ್ರಕೃತಿಯಿಂದಾಚೆ ಇರುವವ ಎಂದು ಹೇಳಿಕೊಳ್ಳುವಿ. ಇದನ್ನೆಲ್ಲ ನಾನು ದಯೆಯಿಂದ ಕ್ಷಮಿಸಿದ್ದೇನೆ. ಆದುದು ಆಯಿತು. ಈಗ ನೀನು ನನ್ನೊಡನೆ ಯುದ್ಧ ಮಾಡು. ನಿನಗೆ ಅಹಂಕಾರ ಅತಿಯಾಗಿದೆ ಎಂದು ದೂತರ ಮೂಲಕ ಕೇಳಿದ್ದೇನೆ. ಇಂಥ ಅಹಂಕಾರಿಗಳ ದಮನ ಮಾಡುವುದು, ತಲೆ ಎತ್ತಿ ಉದ್ಧತರಾಗಿರುವವರನ್ನು ಬೀಳಿಸುವುದು ರಾಜರಿಗೆ ಪರಮ ಧರ್ಮ. ಭೂಮಿಯನ್ನು ಆಳುವ ದೊರೆ ನಾನು. ಅದರಿಂದ ಶಂಖಚಕ್ರ ಗದಾ ಪದ್ಮಗಳನ್ನು ಹಿಡಿದು ದ್ವಾರಕೆಗೆ ಬರುತ್ತಿದ್ದೇನೆ. ನೀನು ಸ್ವತಃ ಸೈನ್ಯ ಸಮೇತನಾಗಿ ಬಂದು ಯುದ್ಧ ಮಾಡು. ಇಲ್ಲವೆ, ನನಗೆ ಶರಣಾಗು. ಇಲ್ಲದಿದ್ದರೆ ಒಂದು ಕ್ಷಣದಲ್ಲಿ ದ್ವಾರಕೆಯನ್ನು ಸುಟ್ಟು ಬೂದಿ ಮಾಡುತ್ತೇನೆ. ನಿನ್ನನ್ನು ನಿನ್ನ ಮಕ್ಕಳು ಪರಿವಾರದೊಂದಿಗೆ,

ಬಂಧುಗಳೊಂದಿಗೆ, ಸೈನ್ಯದೊಂದಿಗೆ, ಒಂದು ಕ್ಷಣದಲ್ಲಿ ಅನಾಯಾಸವಾಗಿ ಯಾರ ಸಹಾಯವೂ ಇಲ್ಲದೆ ಸುಟ್ಟು ಬಿಡಲು ನಾನು ಸಮರ್ಥನಾಗಿದ್ದೇನೆ. ವೃದ್ಧ ತಾಪಸನಾದ ಶಂಕರನನ್ನು ಗೆದ್ದೆ, ಬ್ರಾಹ್ಮಣಶಾಪದಿಂದ ರೋಗಗ್ರಸ್ತನಾದ ಇಂದ್ರನನ್ನು ಗೆದ್ದೆ ಎಂದು ನೀನೆ ನಿನ್ನನ್ನು ವೀರನೆಂದು ಹೇಳಿಕೊಳ್ಳುತ್ತಿರುವೆ. ಹೆಂಡತಿಗೆ ವಶನಾಗಿ ಪಾರಿಜಾತ ಹೂವಿಗಾಗಿ ವ್ಯರ್ಥವಾಗಿ ಇಂದ್ರನೊಡನೆ ಕಾದಿರುವೆ. ಸ್ತ್ರೀಲಂಪಟನಾಗಿ ಗೋಕುಲದಲ್ಲಿ ರಾಧೆಗೆ ಅಧೀನನಾಗಿರುವೆ. ಇದೀಗ ಸತ್ಯಭಾಮೆ ಮುಂತಾದ ಹೆಂಡಿರುಗಳಿಗೆ ಸೇವಕನಂತಿರುವೆ.'

ಬ್ರಾಹ್ಮಣ ಹೀಗೆ ಹೇಳಿ ಸುಮ್ಮನಾದ. ಶ್ರೀಕೃಷ್ಣನೂ ಅವನ ಪರಿವಾರದವರೂ ಕೇಳಿ ಗೊಳ್ಳೆಂದು ನಕ್ಕರು. ಬ್ರಾಹ್ಮಣನಿಗೆ ಚತುರ್ವಿಧವಾದ ಅನ್ನ ಉಣಿಸಿ ಸತ್ಕರಿಸಿರು. ಮಾತಿನಿಂದ ಉಂಟಾದ ನೋವನ್ನು ಸಹಿಸಿಕೊಂಡು ರಾತ್ರಿಯನ್ನು ಕಳೆದರು. ಶ್ರೀಕೃಷ್ಣ ಮರುದಿನ ಬೆಳಿಗ್ಗೆ ರಥವೇರಿ ಪರಿವಾರ ಸಮೇತನಾಗಿ ಹೊರಟು ಶೃಗಾಲವಾಸುದೇವನ ಪಟ್ಟಣಕ್ಕೆ ಬಂದಿಳಿದ. ಶೃಗಾಲನು ಇದನ್ನು ಕೇಳಿ ಕೃತ್ರಿಮ ಭುಜಗಳನ್ನು ಕಟ್ಟಿಕೊಂಡು ಚತುರ್ಭುಜನಾಗಿ ಕೃಷ್ಣನ ಮುಂದೆ ಬಂದು ನಿಂತ. ಕೃಷ್ಣ ಲೌಕಿಕ ರೀತಿಯನ್ನು ಅನುಸರಿಸಿ ಅವನಲ್ಲಿ ಮೈತ್ರಿಯನ್ನು ತೋರಿದ. ಆಲಿಂಗಿಸಿ ಸ್ನೇಹಪೂರ್ಣ ದೃಷ್ಟಿಯಿಂದ ನೋಡಿ ಮಧುರವಾಗಿ ಮಾತನಾಡಿದ. ರಾಜ ಕೃಷ್ಣನನ್ನು ಅರಮನೆಗೆ ಆಮಂತ್ರಿಸಿದ. ಕೃಷ್ಣ ಆ ಆಮಂತ್ರಣವನ್ನು ಸ್ವೀಕರಿಸಲಿಲ್ಲ. ರಾಜ ಈಗ ಕೃಷ್ಣನ ದರ್ಶನ ಮಾತ್ರದಿಂದಲೆ ಭಯ ಭೀತನಾಗಿದ್ದ. ಅವನ ದಂಭಾಚಾರವೂ ಹೊರಟು ಹೋಗಿತ್ತು, ಬೇಡಿಕೊಂಡ -

'ಪ್ರಭು, ಶ್ರೀಹರಿ, ನಾನು ಸುಭದ್ರ, ವೈಕುಂಠದಲ್ಲಿ ಜಯ ವಿಜಯರಂತೆ ದ್ವಾರಪಾಲಕನಾಗಿದ್ದವ. ಲಕ್ಷ್ಮೀದೇವಿಯ ಶಾಪದಿಂದ ಭೂಮಿಯಲ್ಲಿ ಹುಟ್ಟಿದ್ದೇನೆ. ನೀನು ಸರ್ವಜ್ಞ. ಎಲ್ಲವನ್ನೂ ತಿಳಿದಿರುವಿ. ಚಕ್ರದಿಂದ ನನ್ನ ಶಿರಸ್ಸನ್ನು ತರಿದು ದ್ವಾರಕೆಗೆ ಹಿಂದಿರುಗು. ವಿಲಂಬ ಮಾಡಬೇಡ. ನೂರು ವರ್ಷಗಳ ಶಾಪದ ಅವಧಿ ಮುಗಿದಿದೆ. ಮುಂದೆ ನಾನು ನಿನ್ನ ಲೋಕವನ್ನೆ ಸೇರುವೆ.'

ಶ್ರೀಕೃಷ್ಣನೆಂದ, 'ಮೊದಲಿಗೆ ನೀನು ನನ್ನ ಮೇಲೆ ಶಸ್ತ್ರಪ್ರಯೋಗ ಮಾಡು. ಬಳಿಕ ನಾನು ನಿನ್ನೊಡನೆ ಯುದ್ಧಮಾಡುವೆ. ನನಗೆ ಎಲ್ಲವೂ ಗೊತ್ತು. ಸುಖವಾಗಿ ವೈಕುಂಠಕ್ಕೆ ಹೋಗು.' ಶೃಗಾಲ ಕೃಷ್ಣನ ಮೇಲೆ ಹತ್ತು ಬಾಣಗಳನ್ನು ಎಸೆದ. ಅವು ಕೃಷ್ಣನಿಗೆ ನಮಿಸಿ ವೇಗವಾಗಿ ಆಕಾಶದಲ್ಲಿ ಮೇಲೇರಿ ಕಣ್ಮರೆಯಾದುವು. ಶೃಗಾಲ ಪ್ರಳಯಾಗ್ನಿ ಜ್ವಾಲೆಯಂತೆ ಜ್ವಲಿಸುವ ಗದೆಯನ್ನು ಬೀಸಿದ. ಅದೂ ಕೃಷ್ಣನ ಮೈಗೆ ತಾಕಿದೊಡನೆ ಕ್ಷಣದಲ್ಲಿ ಮುರಿದು ಬಿದ್ದಿತು. ಹಾಗೇ ಧನುಸ್ಸೂ ಖಡ್ಗವೂ ಎಲ್ಲ ಶಸ್ತ್ರಗಳೂ ಕ್ಷಣದಲ್ಲಿ ಮುರಿದು ಬಿದ್ದುವು. ನಿರಾಯುಧನಾದ ರಾಜನನ್ನು ಕರುಣೆಯಿಂದ 'ಹೋಗು, ಮನೆಗೆ, ಇನ್ನಷ್ಟು ಆಯುಧಗಳನ್ನು ಹೊತ್ತು ತಾ' ಎಂದ. ರಾಜನೆಂದ -

'ನಾಥ, ಆಕಾಶದ ಜೊತೆಗೆ ಗುದ್ದಾಟ ಶಕ್ಯವೆ? ತನ್ನೊಡನೆ ತಾನು ಹೋರಾಡುವುದು ಯಾರಿಗಾದರೂ ಶಕ್ಯವೆ? ನಿನ್ನೊಡನೆ ಯುದ್ಧವೆಂದರೆ ಹೀಗೇ. ಲೋಕೋದ್ಧಾರಕನಾದ ನೀನು ನನ್ನನ್ನು ಸಂಸಾರದಿಂದ ಉದ್ಧರಿಸು. ಭಯಂಕರವಾದ

ಸಂಸಾರ ಸಮುದ್ರವನ್ನು ಬತ್ತಿಸು. ವಿಷಕ್ಕಿಂತ ಘೋರವಾದ ವಿಷಯ ಭೋಗವನ್ನು ನೀಗಿಸು. ಮಾಯೆಯ ಬಂಧನವನ್ನು ಬಿಡಿಸು. ಮೋಹಜಾಲವನ್ನು ಕತ್ತರಿಸು. ಕರ್ಮಗಳಿಗೆ ಒಡೆಯ ನೀನು. ಬ್ರಹ್ಮನಿಗೂ ಜನಕ ನೀನು. ಶುಭಫಲ ನೀಡುವವ, ಸರ್ವಸಂಪತ್ಪ್ರದ ನೀನು. ಪ್ರಾರಬ್ಧವನ್ನು ಕಳೆವವನೂ ನೀನೆ. ನಾನು ಈನಶ್ವರ ಪಾಂಚಭೌತಿಕ ಶರೀರವನ್ನು ಬಿಟ್ಟು ನಿನ್ನ ವೈಕುಂಠದ ಏಳನೆ ದ್ವಾರಕ್ಕೆ ಹೋಗುವೆ.'

ಶೃಗಾಲನ ಕರುಣಾಜನಕವಾದ ಈ ಪ್ರಾರ್ಥನೆಯನ್ನು ಕೇಳಿದ ಕೃಷ್ಣ ಕರುಣೆಯಿಂದ ಕಣ್ಣೀರು ಸುರಿಸಿದ. ಆಗ ಸುರಿದ ಕಣ್ಣೀರ ಬಿಂದುಗಳಿಂದ 'ಬಿಂದುಸರ'ವೆಂಬ ದಿವ್ಯವಾದ ಉತ್ತಮ ತೀರ್ಥ ನಿರ್ಮಾಣವಾಯಿತು. ಅದರ ನೀರನ್ನು ಸ್ಪರ್ಶಿಸಿದ ಮಾತ್ರಕ್ಕೆ ಜೀವನ್ಮುಕ್ತಿ ಲಭಿಸುವುದು. ಏಳು ಜನ್ಮಗಳ ಪಾಪಗಳಿಂದ ಬಿಡುಗಡೆಯಾಗುವುದು. ಇದರಲ್ಲಿ ಸಂಶಯವಿಲ್ಲ.

**ಶ್ರೀಕೃಷ್ಣ ಕೇಳಿದ:-** 'ರಾಜನೆ, ನಿನಗೆ ಇಂಥ ನಿರ್ಮಲ ಬುದ್ಧಿ ಹೇಗೆ ಬಂದಿತು? ದೂತನ ಮೂಲಕ ನಿಷ್ಠುರವಾದ ಕ್ರೂರ ಮಾತುಗಳನ್ನು ಹೇಗೆ ಹೇಳಿ ಕಳಿಸಿದೆ?'

**ಶೃಗಾಲನೆಂದ:-** 'ನಾಥ, ನಾನು ಅಷ್ಟು ಕ್ರೂರವಾಗಿ ಮಾತನಾಡಿದ್ದರಿಂದ ಕೋಪಗೊಂಡು ನೀನು ಇಲ್ಲಿಗೆ ಬಂದು ದರ್ಶನ ಕೊಟ್ಟೆ. ಇಲ್ಲದಿದ್ದರೆ ನಿನ್ನ ದರ್ಶನ ನನಗೆ ಸ್ವಪ್ನದಲ್ಲಿಯೂ ದುರ್ಲಭ.'

ಹೀಗೆ ಹೇಳಿ ಶೃಗಾಲ ಯೋಗಬಲದಿಂದ ಪ್ರಾಕೃತದೇಹವನ್ನು ತ್ಯಜಿಸಿ ಕೃಷ್ಣನ ದರ್ಶನ ಮಾಡುತ್ತ ವಿಮಾನದಿಂದ ವೈಕುಂಠಕ್ಕೆ ತೆರಳಿದ. ಆಗ ಅವನ ತೇಜೋ ಮಯವಾದ ದಿವ್ಯಶರೀರ ಏಳು ತಾಳಪ್ರಮಾಣದಷ್ಟು ಎತ್ತರವಿತ್ತು. ಆ ಶರೀರದಿಂದ ಶ್ರೀಕೃಷ್ಣನ ಪಾದಕಮಲಗಳಿಗೆ ವಂದಿಸಿ ಹೊರಟುಹೋದ. ಶ್ರೀಕೃಷ್ಣ ದ್ವಾರಕೆಗೆ ಹಿಂತಿರುಗಿ ತಂದೆ ತಾಯಿಗಳಿಗೆ ನಮಿಸಿದ. ಹೂವು ಶ್ರೀ ಗಂಧಗಳ ಪರಿಮಳದಿಂದ ತುಂಬಿದ ರುಕ್ಮಿಣಿಯ ಅಂತಃಪುರವನ್ನು ಪ್ರವೇಶಿಸಿದ. ಹೂವಿನ ಹಾಸಿಗೆಯಲ್ಲಿ ದೇವಿಯೊಡನೆ ಆ ರಾತ್ರಿಯನ್ನು ಕಳೆದ. ದೇವಿ ಅವನನ್ನು ಆಲಿಂಗಿಸಿಕೊಂಡು ಮೈಮರೆತಿದ್ದಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಶೃಗಾಲವಾಸುದೇವಮೋಕ್ಷಣವೆಂಬ ನೂರ ಇಪ್ಪತೊಂದನೆ ಅಧ್ಯಾಯ ಮುಗಿಯಿತು.*

—o—

**ನಾರದಮುನಿ:-** 'ಪೂಜ್ಯನೆ, ಕೃಷ್ಣನ ಮಡದಿಯರೆಲ್ಲರ ವಿವಾಹ ವೃತ್ತಾಂತವನ್ನು ವರ್ಣಿಸಿರುವಿ. ಸ್ಯಮಂತಕ ಮಣಿಯ ಉಪಾಖ್ಯಾನವನ್ನು ಕೇಳಿಲ್ಲ. ಕೇಳಲು ಬಯಸಿದ್ದೇನೆ, ಹೇಳು.'

**ಶ್ರೀ ನಾರಾಯಣ ಮುನಿ:-** 'ಭಾದ್ರಪದ ಶುದ್ಧ ಚತುರ್ಥೀದಿನದಲ್ಲಿ ಚಂದ್ರ ತಾರೆಯನ್ನು ಪರಿಗ್ರಹಿಸಿದ. ಕೃಷ್ಣಪಕ್ಷದ ಚತುರ್ಥಿಯಲ್ಲಿ ಬಿಟ್ಟುಬಿಟ್ಟ. ಬೃಹಸ್ಪತಿ ಅವಳನ್ನು ಸ್ವೀಕರಿಸಿದ. ಆದರೆ ಆಗ ಅವಳು ಗರ್ಭಿಣಿಯಾಗಿದ್ದಳು. ಬೃಹಸ್ಪತಿ ಅವಳನ್ನು ನಿಂದಿಸಿದ. ಆದರಿಂದ ಅವಳು ಕೋಪದಿಂದ ಚಂದ್ರನಿಗೆ ಶಾಪವಿತ್ತಳು -

'ಪಾಪಿಯಾದ ನಿನ್ನನ್ನು ಯಾರೂ ದರ್ಶನ ಮಾಡದಿರಲಿ. ದರ್ಶನ ಮಾಡಿದರೆ ಅವರೂ ಪಾಪಿಗಳಾಗಲಿ.'

ಇದನ್ನು ಕೇಳಿ ಚಂದ್ರ ನಾರಾಯಣಸರೋವರದಲ್ಲಿ ನಾರಾಯಣನ ಕುರಿತು ತಪಸ್ಸು ಮಾಡಿ ಪಾಪದಿಂದ ಬಿಡುಗಡೆ ಹೊಂದಿದ. ತಪಸ್ಸಿನ ಕ್ಲೇಶವನ್ನು ಅನುಭವಿಸಿದ ಚಂದ್ರನನ್ನು ಕಂಡು ಭಗವಾನ್ ಪುರುಷೋತ್ತಮ ದಯೆಯಿಂದ ನುಡಿದ-

'ನಿನಗೆ ಎಲ್ಲ ಕಾಲದಲ್ಲಿ ಈ ಶಾಪದ ಕಲಂಕವಿರುವುದಿಲ್ಲ. ಭಾದ್ರಪದ ಮಾಸದ ಶುಕ್ಲಕೃಷ್ಣ ಪಕ್ಷಗಳ ಚತುರ್ಥಿಗಳಲ್ಲಿ ಮಾತ್ರ ನೀನು ಉದಿಸುವಾಗ ಯಾರು ನಿನ್ನನ್ನು ಸಂಕಲ್ಪಪೂರ್ವಕವಾಗಿ ದರ್ಶನ ಮಾಡುವರೋ ಅವರಿಗೆ ಪಾಪದ ಕಳಂಕ ಅಂಟಿಕೊಳ್ಳುವುದು.' ಅಂದಿನಿಂದ ಭಾದ್ರಪದ ಶುಕ್ಲಪಕ್ಷದ ಅಥವಾ ಕೃಷ್ಣ ಪಕ್ಷದ ಚತುರ್ಥಿಯಲ್ಲಿ ಉದಿಸುವ ಚಂದ್ರನನ್ನು ದರ್ಶನ ಮಾಡಬಾರದೆಂದು ನಿಷೇಧ. ಶ್ರೀ ಹರಿ ತಾನೇ ಅಂದು ಚಂದ್ರದರ್ಶನ ಮಾಡಿ ತನ್ನ ಮಾತನ್ನು ನಡೆಸಿಕೊಡುವುದಕ್ಕಾಗಿ ಪಾಪಕಳಂಕವನ್ನು ಹೊತ್ತುಕೊಂಡ. ಬಳಿಕ ಆ ಕಲಂಕದಿಂದ ಮುಕ್ತನೂ ಆದ. ಇದು ಕೇವಲ ಲೋಕ ಶಿಕ್ಷಣಕ್ಕಾಗಿ ಭಗವಂತ ತೋರಿದ ಒಂದು ಲೀಲೆಯಷ್ಟೆ.

ಸತ್ರಾಜಿತ ಸೂರ್ಯಭಕ್ತ. ಪುಷ್ಕರದಲ್ಲಿ ತಪಸ್ಸು ಮಾಡಿ ಸೂರ್ಯನಿಂದ ಸ್ಯಮಂತಕವೆಂಬ ಶ್ರೇಷ್ಠ ಮಣಿಯನ್ನು ಪಡೆದ. ಆ ಮಣಿ ಪ್ರತಿದಿನ ಇಪ್ಪತ್ತು ಸಾವಿರ ವರಹ ತೂಕದ ಚಿನ್ನವನ್ನು ಕೊಡುತ್ತಿತ್ತು. ವಿಷ್ಣುವಿನ ವಿಶೇಷ ಸನ್ನಿಧಾನ ಆ ಮಣಿಯಲ್ಲಿ ಇದ್ದಿತು. ಸತ್ರಾಜಿತ ಸತ್ಯಭಾಮೆಯನ್ನು ಕೃಷ್ಣನಿಗೆ ಭಕ್ತಿಯಿಂದ ನೀಡಿ ಬಳುವಳಿಯಾಗಿ ಮಣಿಯನ್ನು ಕೊಡಬೇಕೆಂದಿದ್ದ. ಆದರೆ ಅವನ ತಮ್ಮ ಪ್ರಸೇನ ದುರ್ಬುದ್ಧಿಯವನು, ಅವನಿಗೆ ಮರಣಕಾಲ ಬಂದಿತ್ತು. ಅವನು ಅಣ್ಣನನ್ನು ತಡೆದು ಮಣಿಯನ್ನು ಧರಿಸಿಕೊಂಡು ಕಾಶೀಯಾತ್ರೆಗೆ ಹೊರಟ. ದಾರಿಯಲ್ಲಿ ಒಂದು ಸಿಂಹ ಅವನನ್ನು ಕೊಂದು ಮಣಿಯನ್ನು ಒಯ್ದಿತು. ಕಲಿಂಗ ರಾಜಕುಮಾರ ಬ್ರಾಹ್ಮಣಶಾಪದಿಂದ ಪಶುಯೋನಿಯಲ್ಲಿ ಜನಿಸಿ, ಕರಡಿಯಾಗಿದ್ದ. ಅವನು

ಈ ಸಿಂಹವನ್ನು ಕೊಂದು ಮಣಿಯನ್ನು ರತ್ನಮಯವಾದ ತನ್ನ ಪಟ್ಟಣಕ್ಕೊಯ್ದು. ಇತ್ತ ದ್ವಾರಕೆಯಲ್ಲಿ ಜನರು ಮಣಿಯನ್ನು ಕೃಷ್ಣನೆ ಅಪಹರಿಸಿದವನು, ಹೇಗೆ ಅಪಹರಿಸಿದನೆಂಬುದನ್ನು ಮಾತ್ರ ಅರಿಯೆವು ಎಂದು ಆಡಿಕೊಳ್ಳತೊಡಗಿದರು. ಕೃಷ್ಣ ಇದನ್ನು ಕೇಳಿ ಈ ಅಪವಾದದ ಕಳಂಕವನ್ನು ಕಳೆಯಲು ಘೋರ ಅರಣ್ಯವನ್ನು ಹೊಕ್ಕು ಕಳ್ಳರ ಹೆಜ್ಜೆಯ ಗುರುತನ್ನು ಅನುಸರಿಸಿ ನಡೆದ. ಒಂದು ಕಡೆ ಸತ್ತು ಬಿದ್ದಿದ್ದ ಪ್ರಸೇನ ಕಂಡುಬಂದ. ಇನ್ನೊಂದೆಡೆ ಸಿಂಹ ಸತ್ತು ಬಿದ್ದಿತ್ತು. ಮಣಿ ಪ್ರಸೇನನಲ್ಲಿಯೂ ಇರಲಿಲ್ಲ. ಸಿಂಹದಲ್ಲಿಯೂ ಇರಲಿಲ್ಲ. ಸರ್ವಜ್ಞನಾದ ಕೃಷ್ಣ ಎಲ್ಲ ತಿಳಿದು ಕರಡಿಯ ಮನೆಗೆ ಹೋಗಿ ಅಲ್ಲಿ ಒಬ್ಬಳು ದಾದಿ ಅಳುವ ಮಗುವನ್ನು ಮಡಿಲಲ್ಲಿಟ್ಟು ಕೊಂಡಿರುವುದನ್ನು ಕಂಡ. ಅವಳು ಮಗುವಿಗೆ ಹೇಳುತ್ತಿದ್ದಳು. 'ಮಗು, ಈ ಮಣಿ ನಿನಗೇ ತೆಗೆದುಕೊಳ್ಳು,

**ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾ ಹತಃ ।**
**ಸುಕುಮಾರಕ ಮಾರೋದೀಸ್ತವ ಹ್ಯೇಷಃ ಸ್ಯಮಂತಕಃ ॥**

'ಸಿಂಹವು ಪ್ರಸೇನನನ್ನು ಕೊಂದಿತು. ಸಿಂಹವನ್ನು ಜಾಂಬವಂತ ಕೊಂದ. ಮಗು ಅಳಬೇಡ. ಈ ಸ್ಯಮಂತಕ ಮಣಿ ನಿನ್ನದಾಯಿತು.' ಎಂದಳು.

ದಾದಿಯು ಹೇಳಿದ ಈ ಶ್ಲೋಕವನ್ನು ನೆನೆದು ನೀರು ಕುಡಿದರೆ ದೈವಾತ್ ಕ್ಷೀಣಚಂದ್ರನನ್ನು ಕಂಡ ದೋಷ ಪರಿಹಾರ. ಡಾಂಭಿಕರು ವೇದನಿಂದಕರು ಬುದ್ಧಿಪೂರ್ವಕವಾಗಿ ಕಂಡರೆ ಅಪವಾದದ ಕಳಂಕ ಹೊರಬೇಕಾಗುವುದೆಂದು ಬ್ರಹ್ಮ ಹೇಳಿದ್ದಾನೆ. ದಾದಿಯ ಮಾತನ್ನು ಕೇಳಿ ಕೃಷ್ಣ ಮಗುವಿನ ಕೈಯಿಂದ ಮಣಿಯನ್ನು ಎತ್ತಿಕೊಂಡ. ದಾದಿ ಇದನ್ನು ಜಾಂಬವಂತನ ಮುಂದೆ ಹೇಳಿದಳು. ಜಾಂಬವಂತ ಬಂದು ಕೃಷ್ಣನಿಗೆ ನಮಿಸಿ ಕನ್ಯೆ ಜಾಂಬವತಿಯನ್ನಿತ್ತು ಬಳುವಳಿಯಾಗಿ ಮಣಿಯನ್ನೂ ಕೊಟ್ಟ. ಕೃಷ್ಣ ದ್ವಾರಕೆಗೆ ಬಂದು ಯಾದವರಿಗೆ ಮಣಿಯನ್ನು ತೋರಿಸಿದ. ಆಗ ಶುದ್ಧನಿಷ್ಕಳಂಕನೆನಿಸಿದ.

ನಾರದ, ಇದು ಉತ್ತಮವಾದ ಸ್ಯಮಂತಕೋಪಾಖ್ಯಾನ. ಇದನ್ನು ಅಧ್ಯಯನ ಮಾಡಿದರೆ ಶ್ರವಣ ಮಾಡಿದರೆ ಅಪವಾದದ ಕಳಂಕ ದೂರವಾಗುವುದು. ಇದನ್ನು ನಾನು ಧರ್ಮನ ಮುಖದಿಂದ ಕೇಳಿದಂತೆ ಹೇಳಿದ್ದೇನೆ. ಅತ್ಯಂತ ದುರ್ಲಭ ಈ ಉಪಾಖ್ಯಾನ. ಇನ್ನೇನು ಕೇಳ ಬಯಸುವಿ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಸ್ಯಮಂತಕಮಣಿಹರಣವೆಂಬ ನೂರಇಪ್ಪತ್ತೆರಡನೆ ಅಧ್ಯಾಯ ಮುಗಿಯಿತು*

—○—

## ಅಧ್ಯಾಯ - ೧೨೩

**ನಾರದ:-** ಯೋಗೀಶ್ವರರ ಗುರುಗಳಿಗೂ ಗುರುವೆನಿಸಿರುವ ಪೂಜ್ಯನೆ, ನಾನು ಪುರಾಣಗಳಲ್ಲಿಯೂ ದುರ್ಲಭವಾದ ಗಣೇಶ ಪೂಜೆಯ ಆಖ್ಯಾನವನ್ನು ಸಾಮಾನ್ಯವಾಗಿ ಸಂಕ್ಷೇಪದಿಂದ ಬ್ರಹ್ಮನಿಂದ ಕೇಳಿ ತಿಳಿದಿದ್ದೇನೆ. ಅದನ್ನು ವಿಸ್ತಾರವಾಗಿ ಕೇಳುವ ಬಯಕೆ ಉಂಟಾಗಿದೆ. ಹಿಂದೆ ದೇವತೆಗಳು ಸಿದ್ಧಾಶ್ರಮದಲ್ಲಿ ಗಣೇಶನಿಗೆ ದೊಡ್ಡ ಪೂಜೆ ಮಾಡಿದರು. ಆಗ ಶ್ರೀದಾಮನ ಶಾಪದ ನೂರು ವರ್ಷದ ಅವಧಿ ಮುಗಿದು ರಾಧಾಮಾಧವರು ಪುನಃ ಜೊತೆ ಸೇರಿದರು. ರಾಧೆ ಆಗ ಗಣೇಶನಿಗೆ ಮೊದಲ ಪೂಜೆ ಹೇಗೆ ಮಾಡಿದಳು? ಬ್ರಹ್ಮ ವಿಷ್ಣು ಶಿವ ಮುಂತಾದ ದೇವೋತ್ತಮರಿರುವಾಗ, ನಾಗರಲ್ಲಿ ಶ್ರೇಷ್ಠನಾದ ಶೇಷನಿರುವಾಗ, ರಾಜರಲ್ಲಿ ಶ್ರೇಷ್ಠರಾದ ರಾಜರುಗಳು, ಅಸುರರಲ್ಲಿ ಶ್ರೇಷ್ಠರಾದ ಅಸುರರು, ಬಲಿಷ್ಠರಾದ ಗಂಧರ್ವರು ರಾಕ್ಷಸರೆಲ್ಲ ಇರುವಾಗ ಎಲ್ಲರನ್ನೂ ಬಿಟ್ಟು ಗಣೇಶನಿಗೆ ಅಗ್ರಪೂಜೆ ಹೇಗೆ ಮಾಡಿದಳು? ಅದನ್ನು ವಿಸ್ತಾರವಾಗಿ ನನಗೆ ಹೇಳು.

**ನಾರಾಯಣ:-**

**ತ್ರೈಲೋಕ್ಯೇ ಪೃಥಿವೀ ಧನ್ಯಾ ಮಾನ್ಯಾ ಪುಣ್ಯವತೀ ಸತೀ ।**
**ತತ್ರ ಭಾರತವರ್ಷಂ ಚ ಕರ್ಮಣಾಂ ಫಲದಂ ಶುಭಂ ॥**

ಮೂಲೋಕಗಳಲ್ಲಿ ಭೂಲೋಕವೆ ಧನ್ಯ, ಮಾನನೀಯ, ಪುಣ್ಯಕರ, ನಿರ್ಮಲ, ಆಭೂಲೋಕದಲ್ಲಿಯೂ ಭಾರತವರ್ಷ ಶ್ರೇಷ್ಠ. ಅದು ಕರ್ಮಗಳಿಗೆ ಶುಭ ಫಲ ನೀಡುತ್ತದೆ.

**ಧನ್ಯಂ ಯಶಸ್ಯಂ ಪೂಜ್ಯಂ ಚ ಪುಣ್ಯಕ್ಷೇತ್ರೇ ಚ ಭಾರತೇ ।**
**ಸಿದ್ಧಾಶ್ರಮಂ ಮಹಾಪುಣ್ಯಕ್ಷೇತ್ರಂ ಮೋಕ್ಷಪ್ರದಂ ಶುಭಂ ॥**

ಪುಣ್ಯಕ್ಷೇತ್ರವಾದ ಭಾರತದಲ್ಲಿಯೂ ಸಿದ್ಧಾಶ್ರಮ ಶ್ರೇಷ್ಠ ಪೂಜ್ಯ. ಏಕೆಂದರೆ ಅದು ಮಹಾಪುಣ್ಯಕರ, ಯಶಸ್ಕರ, ಮೋಕ್ಷದಾಯಕ.

ಸಿದ್ಧಾಶ್ರಮದಲ್ಲಿ ಭಗವಾನ್ ಸನತ್ಕುಮಾರ ತಪಸ್ಸು ಮಾಡಿ ಸಿದ್ಧಿಹೊಂದಿದ. ಸ್ವಯಂ ಬ್ರಹ್ಮನೂ ಇಲ್ಲಿಯೆ ತಪಸ್ಸು ಮಾಡಿ ಸಿದ್ಧಿಪಡೆದ. ಯೋಗೀಶ್ವರರೂ ಮುನೀಶ್ವರರೂ ಸಿದ್ಧೇಶ್ವರರೂ ಆದ ಕಪಿಲಾದಿಗಳೂ ಇಲ್ಲಿಯೆ ಸಾಧನೆ ಮಾಡಿದರು. ದೇವೇಂದ್ರನೂ ನೂರು ಯಾಗಗಳನ್ನು ಇಲ್ಲಿಯೆ ನಡೆಸಿದ. ಅದರಿಂದ ಸಿದ್ಧಾಶ್ರಮವೆಂದರೆ ಎಲ್ಲರಿಗೂ ಅತ್ಯಂತ ದುರ್ಲಭ. ಅಲ್ಲಿಯೆ ಗಣೇಶನ ನಿತ್ಯ ಸನ್ನಿಧಾನವಿದೆ. ವೈಶಾಖ ಹುಣ್ಣಿಮೆಯಂದು ದೇವತೆಗಳು ಅಮೂಲ್ಯ ರತ್ನ ನಿರ್ಮಿತವಾದ ಮಂಗಲಕರವಾದ ಗಣೇಶನ ಪ್ರತಿಮೆಯನ್ನು ಪೂಜಿಸುವರು. ನಾಗರು ಮಾನವರು ದೈತ್ಯರು ಗಂಧರ್ವರು ರಾಕ್ಷಸರು ಸಿದ್ಧರು ಮುನಿಗಳು ಮತ್ತು ಸನಕಾದಿ ಯೋಗಿಗಳೂ ಪೂಜಿಸುವರು.

ಅಂದು ವೈಶಾಖ ಹುಣ್ಣಿಮೆ. ಸಿದ್ಧಾಶ್ರಮಕ್ಕೆ ಎಲ್ಲ ನಾಗರೊಡನೆ ಶೇಷ ಬಂದ. ಎಲ್ಲ ದೇವತೆಗಳೂ ಬಂದರು. ಮನುಗಳು, ಮುನಿಗಳು ರಾಜರು ಬಂದರು. ಗಣೇಶನ ಪೂಜೆಗೆ ಸಂತೋಷದಿಂದ ಬಂದರು. ಭಗವಾನ್ ಕೃಷ್ಣನೂ ದ್ವಾರಕಾವಾಸಿಗಳೊಂದಿಗೆ ಬಂದ. ಗೋಕುಲವಾಸಿಗಳೊಂದಿಗೆ ನಂದನೂ ಬಂದ. ಕೋಟಿ ಮದ್ದಾನೆಗಳ ಬಲ ಉಳ್ಳ ನೂರು ಕೋಟಿ ಗೋಲೋಕವಾಸಿ ಗೋಪಿಯರೊಡನೆ ಕೃಷ್ಣನ ಪ್ರಾಣೇಶ್ವರಿಯಾದ ರಾಧೆಯೂ ಬಂದಳು. ಶ್ರೀದಾಮನ ಶಾಪದ ಅವಧಿಯಾದ ನೂರು ವರ್ಷಗಳು ಕಳೆದಾಗ ಸ್ನಾನ ಮಾಡಿ ಶುದ್ಧವಾದ ಎರಡು ವಸ್ತ್ರಗಳನ್ನುಟ್ಟು ನಿರಾಹಾರಳಾಗಿ ಮಣಿ ಮಂಟಪವನ್ನು ಪ್ರವೇಶಿಸಿದಳು. ಲೋಕಪಾವನೆಯಾದರೂ ಕಾಲು ತೊಳೆದು ಕೊಂಡು ಬಂದಿದ್ದಳು. ಶ್ರೀಕೃಷ್ಣಪ್ರಾಪ್ತಿಯನ್ನು ಬಯಸಿ ಸಂಕಲ್ಪಮಾಡಿ ಗಣೇಶನನ್ನು ಗಂಗೋದಕದಿಂದ ಸ್ನಾನ ಮಾಡಿಸಿದಳು. ಬಿಳಿ ಹೂಗಳನ್ನೇರಿಸಿ ಸಾಮ ವೇದೋಕ್ತ ಕ್ರಮದಿಂದ ಧ್ಯಾನ ಮಾಡಿದಳು. ನಾಲ್ಕು ವೇದಗಳಿಗೂ ಅಷ್ಟವಸುಗಳಿಗೂ ಎಲ್ಲ ಲೋಕಗಳಿಗೂ ಜನನಿ ಅವಳು, ಜ್ಞಾನಿಗಳೆಲ್ಲರಿಗೂ ಜನನಿ, ಬುದ್ಧಿರೂಪಳು ಭಗವತಿ ರಾಧೆ ಆದರೂ ತನ್ನ ಮಗನಾದ ಗಣೇಶನನ್ನು ಧ್ಯಾನಿಸಿದಳು.

ಗಿಡ್ಡವಾದ ಸ್ಥೂಲಕಾಯ, ದೊಡ್ಡ ಹೊಟ್ಟೆ, ಆನೆಯ ಮುಖ, ಏಕದಂತ, ಅಗ್ನಿ ವರ್ಣದವ, ಬ್ರಹ್ಮತೇಜಸ್ಸಿನಿಂದ ಜ್ವಲಿಸುತ್ತಿದ್ದಾನೆ. ಸಿದ್ಧರಿಗೂ ಯೋಗಿಗಳಿಗೂ ಜ್ಞಾನಿಗಳಿಗೂ ಗುರುಗಳಿಗೆ ಗುರು. ಮುನೀಶ್ವರರೂ ಬ್ರಹ್ಮ ಶಿವ ಶೇಷ ಮುಂತಾದ ದೇವತೆಗಳೂ ಇವನನ್ನು ಧ್ಯಾನಿಸುತ್ತಿದ್ದಾರೆ. ಸನಾತನ ಭಗವತ್ ಸ್ವರೂಪ, ಬ್ರಹ್ಮಸ್ವರೂಪ, ಪರಮ ಮಂಗಳರೂಪ, ಮಂಗಲಗಳಿಗಾಶ್ರಯ, ಸರ್ವವಿಘ್ನನಿವಾರಕ, ಶಾಂತ, ಸರ್ವಸಂಪತ್‌ಪ್ರದಾಯಕ, ಸಂಸಾರ ಸಮುದ್ರವನ್ನು ದಾಟಿಸುವ ಅಂಬಿಗ, ಶರಣಾಗತರಾದ ದೀನದಲಿತರನ್ನು ಸದಾ ಕಾಪಾಡುವವನು, ಭಕ್ತವತ್ಸಲ, ಭಕ್ತರೊಡೆಯ - ಇಂಥ ಗಣೇಶನನ್ನು ಧ್ಯಾನಿಸಿದಳು.

ಸರ್ವಾಂಗ ಶೋಧನವೆಂಬ ನ್ಯಾಸವನ್ನೂ ಮಾಡಿ ರಾಧೆ ಹೂವನ್ನು ಅರ್ಪಿಸಿದಳು. ಪುನಃ ಅದೇ ಧ್ಯಾನ ಮಾಡಿ ಲಂಬೋದರನ ಪಾದಕಮಲದಲ್ಲಿ ಹೂವನ್ನಿಟ್ಟಳು. ಏಳು ತೀರ್ಥಗಳ ತಂಪಾದ ಪರಿಮಳ ಯುಕ್ತವಾದ ಜಲದಿಂದ ಲಕ್ಷ್ಮ್ಯಾದಿಪೂಜಿತವಾದ ಪಾದಕಮಲದಲ್ಲಿ ಪಾದ್ಯವನ್ನು ಅರ್ಪಿಸಿದಳು. ದೂರ್ವೆ ಅಕ್ಷತೆ ಬಿಳಿ ಹೂಗಳಿಂದ ಕೂಡಿದ ಪರಿಮಳಯುಕ್ತವಾದ ಚಂದನ ಜಲದಿಂದ ತಲೆಯ ಮೇಲೆ ಅರ್ಘ್ಯವನ್ನು ಅರ್ಪಿಸಿದಳು. ಸುಂದರವಾದ ಪಾರಿಜಾತದ ಮಾಲೆಯನ್ನು ಕೊರಳಿಗೆ ತೊಡಿಸಿದಳು. ಕಸ್ತೂರಿ ಕುಂಕುಮ ಯುಕ್ತವಾದ ಪರಿಮಳದ ಗಂಧವನ್ನು ಸರ್ವಾಂಗಗಳಿಗೆ ಅರ್ಪಿಸಿದಳು. ಪರಿಮಳದ ಬಿಳಿ ಹೂಗಳನ್ನು ಪಾದಕಮಲದಲ್ಲಿಟ್ಟಳು. ಸುಗಂಧ ಯುಕ್ತ ಧೂಪವನ್ನು ಕೊಟ್ಟಳು. ಕತ್ತಲೆ ಕಳೆವ ತುಪ್ಪದ ದೀಪ ತೋರಿದಳು. ಚೋಷ್ಯ ಚರ್ವ್ಯ ಲೇಹ್ಯ ಪೇಯವೆಂದು ನಾಲ್ಕು ಬಗೆಯಾದ ಅಮೃತದಂತೆ ಸ್ವಾದುವಾದ ಮನೋಹರವಾದ ವಿವಿಧ ನೈವೇದ್ಯವನ್ನಿಟ್ಟಳು. ಮೂಲೋಕದಲ್ಲಿ ದುರ್ಲಭವಾದ ಮಧುರವಾದ ಪಕ್ವಫಲಗಳನ್ನೂ ಗ್ರಾಮ್ಯ ವನ್ಯ ಗಡ್ಡೆ ಗೆಣಸುಗಳನ್ನೂ ಮಧುರವಾದ ರಸಭರಿತ

ಎಳ್ಳುಂಡೆಗಳನ್ನೂ ಯವ, ಗೋಧಿಹಿಟ್ಟುಗಳಿಂದ ಮಾಡಿದ ತುಪ್ಪ ಸಕ್ಕರೆ ಬೆರೆಸಿದ ಅಪ್ಪ ಲಡ್ಡುಗಳನ್ನೂ ಹಾಲು ತುಪ್ಪ ಜೇನುತುಪ್ಪ ಬೆಲ್ಲ ಮೊಸರು ಪಾಯಸ ಕಡುಬು ಹೋಳಿಗೆಗಳನ್ನೂ ಬಾಳೆಹಣ್ಣುಗಳ ರಾಶಿಯನ್ನೂ ರುಚಿಯಾದ ಮೇಲೋಗರಗಳಿಂದ ಯುಕ್ತವಾದ ಶಾಲ್ಯಾನ್ನಗಳನ್ನೂ ಅರ್ಪಿಸಿದಳು. ಅಮೂಲ್ಯ ರತ್ನಮಯ ಸಿಂಹಾಸನವನ್ನು ನೀಡಿದಳು. ವಹ್ನಿಶುದ್ಧವಾದ ಅಮೂಲ್ಯ ಜೋಡಿವಸ್ತ್ರವನ್ನೂ ಕೊಟ್ಟಳು. ಕರ್ಪೂರಾದಿ ಸುಗಂಧಯುಕ್ತವಾದ ಉತ್ತಮ ತಾಂಬೂಲವಿತ್ತಳು. ಎಳು ತೀರ್ಥಗಳಿಂದ ತಂದ ಪರಿಮಳಯುಕ್ತವಾದ ಪವಿತ್ರ ಜಲವನ್ನು ಕುಡಿಯಲು ಕೊಟ್ಟಳು. ಅಮೂಲ್ಯ ರತ್ನಖಚಿತವಾದ ದುರ್ಲಭವಾದ ಬಿಳಿ ಚಾಮರ ನೀಡಿದಳು. ಹೂಗಂಧಗಳಿಂದ ಕೂಡಿದ ತೆಳುವಾದ ಬಿಳಿ ಬಟ್ಟೆಯಿಂದ ಮಾಡಿದ ಪರಿಷ್ಕೃತವಾದ ಹಾಸಿಗೆಯನ್ನಿತ್ತಳು. ಕರುಸಮೇತ ಕಾಮಧೇನುವನ್ನು ನೀಡಿದಳು. ದಿವ್ಯವಾದ ಬೀಜಾಕ್ಷರ ಯುಕ್ತವಾದ ಈ ಮಂತ್ರದಿಂದ ಪುಷ್ಪಾಂಜಲಿಯನ್ನು ಅರ್ಪಿಸಿದಳು -

**'ಓಂ ಗಂ ಗೌಂ ಗಣಪತಯೇ ವಿಘ್ನವಿನಾಶಿನೇ ಸ್ವಾಹಾ'**

ಈ ಷೋಡಶಾಕ್ಷರ ಗಣಪತಿಮಂತ್ರದಿಂದ ಷೋಡಶೋಪಚಾರ ಸಲ್ಲಿಸಿ ಸಾವಿರ ಬಾರಿ ಜಪಿಸಿದಳು. ಭಕ್ತಿಯಿಂದ ತಲೆಬಾಗಿ ಕಣ್ಣುಗಳಲ್ಲಿ ನೀರು ಸುರಿಸುತ್ತ ಪುಲಕಿತಳಾಗಿ ಸ್ತೋತ್ರ ಮಾಡಿದಳು -

'ಪರಂಜ್ಯೋತಿ, ಪರಬ್ರಹ್ಮ, ಪರಮೇಶ್ವರ, ವಿಘ್ನನಿವಾರಕ, ಸುಂದರ, ದೇವಾಸುರ ಸಿದ್ಧರಿಂದ ಹೊಗಳಲ್ಪಡುವವ, ದೇವತೆಗಳೆಂಬ ಕಮಲಗಳನ್ನು ಅರಳಿಸುವಲ್ಲಿ ಸೂರ್ಯನಂತಿರುವವ, ಮಂಗಲಗಳಿಗೆ ಮನೆ ಎನಿಸಿರುವವ. ಇಂಥ ಪರಾತ್ಪರನಾದ ಗಣೇಶನನ್ನು ಸ್ತುತಿಸುತ್ತೇನೆ.'

ಈ ಸ್ತೋತ್ರ ಮಹಾಪುಣ್ಯಕರ. ವಿಘ್ನ ಶೋಕಗಳನ್ನು ಕಳೆಯುವುದು. ಬೆಳಿಗ್ಗೆ ಎದ್ದು ಪಠಿಸಿದರೆ ಸಕಲ ವಿಘ್ನಗಳಿಂದ ಬಿಡುಗಡೆ ಉಂಟಾಗುವುದು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ*
*ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ*
*ನೂರ ಇಪ್ಪತ್ತಮೂರನೆ ಅಧ್ಯಾಯ ಮುಗಿಯಿತು*

—o—

**ಶ್ರೀನಾರಾಯಣ ಮುನಿ ನುಡಿದ:-** ರಾಧೆ ವಿಧ್ಯುಕ್ತವಾಗಿ ಗಣೇಶನನ್ನು ಪೂಜಿಸಿ ಸ್ತೋತ್ರಮಾಡಿ ಅಮೂಲ್ಯ ರತ್ನಾಭರಣಗಳನ್ನು ಸರ್ವಾಂಗಗಳಿಗೆ ತೊಡಿಸಿದಳು. ಗಣೇಶ ಲೋಕಮಾತೆಗೆ ಮಧುರವಾಗಿ ನುಡಿದ -

'ಜಗನ್ಮಾತೆ, ನೀನು ಮಾಡುವ ಪೂಜೆ ಲೋಕದ ಜನರಿಗೆ ಧರ್ಮಶಿಕ್ಷಣ ನೀಡುವುದಕ್ಕಾಗಿ ಇದೆ. ನೀನು ಬ್ರಹ್ಮಸ್ವರೂಪಳು. ಕೃಷ್ಣನ ವಕ್ಷಃಸ್ಥಲದಲ್ಲಿರುವವಳು. ಯಾರ ಪಾದಕಮಲವನ್ನು ಬ್ರಹ್ಮ ಶಿವ ಶೇಷ ಮುಂತಾದ ದೇವತೆಗಳೂ ಸನಕಾದಿ ಮುನಿಗಳೂ ಜೀವನ್ಮುಕ್ತರಾದ ಭಕ್ತರೂ ಕಪಿಲಾದಿ ಸಿದ್ಧರೂ ಧ್ಯಾನಿಸುತ್ತಿರುವರೋ ಆ ಕೃಷ್ಣಪರಮಾತ್ಮನ ಪ್ರಾಣೇಶ್ವರಿ ಪ್ರೇಯಸಿ ನೀನು. ಅವನ ಶರೀರದ ಎಡಭಾಗದಿಂದ ರಾಧೆ, ಬಲಭಾಗದಿಂದ ಮಾಧವ ಉದ್ಭವಿಸಿರುವರು. ಜಗನ್ಮಾತೆಯಾದ ಮಹಾಲಕ್ಷ್ಮಿ ನಿನ್ನ ಶರೀರದ ಎಡಭಾಗದಿಂದ ಬಂದವಳು. ಸರ್ವಾಶ್ರಯನಾದ ವಸುವಿಗೆ ನೀನು ಜನನಿ. ವೇದಗಳಿಗೂ ಎಲ್ಲ ಜಗತ್ತಿಗೂ ನೀನೆ ಜನನಿ. ನೀನೆ ಮೂಲಪ್ರಕೃತಿ. ಸೃಷ್ಟಿಯಲ್ಲಿರುವ ಎಲ್ಲ ಪ್ರಾಕೃತ ಪದಾರ್ಥಗಳೂ ಎಲ್ಲ ಕಾರ್ಯವಸ್ತುಗಳೂ ನಿನ್ನ ವಿಭೂತಿಸ್ವರೂಪಗಳು. ನೀನು ಎಲ್ಲಕ್ಕೂ ಕಾರಣರೂಪಳು; ಬ್ರಹ್ಮಪ್ರಳಯವೆಂದರೆ ನಿನಗೂ ಹರಿಗೂ ಒಮ್ಮೆ ಕಣ್ಣು ಮುಚ್ಚುವ ಕಾಲ.

ಮೊದಲಿಗೆ ರಾಧೆಯ ನಾಮವನ್ನು ಬಳಿಕ ಕೃಷ್ಣನಾಮವನ್ನೂ ಉಚ್ಚರಿಸುವ ಜ್ಞಾನಿಯೆ ಯೋಗಿ, ಅವನು ಅನಾಯಾಸವಾಗಿ ಗೋಲೋಕವನ್ನು ಸೇರುತ್ತಾನೆ. ವ್ಯತ್ಯಾಸ ಮಾಡಿದರೆ ಮಹಾಪಾಪಿಯಾಗುತ್ತಾನೆ. ಬ್ರಹ್ಮಹತ್ಯಾಪಾತಕಕ್ಕೆ ಗುರಿಯಾಗುತ್ತಾನೆ. ಎಲ್ಲಲೋಕಗಳಿಗೂ ನೀನು ತಾಯಿ. ಹರಿ ತಂದೆ. ತಂದೆಗಿಂತಲೂ ತಾಯಿ ಹೆಚ್ಚು ಪೂಜ್ಯಳು, ವಂದ್ಯಳು. ನಿನ್ನನ್ನು ನಿಂದಿಸುತ್ತ ಬೇರೆ ದೇವತೆಗಳನ್ನಾಗಲಿ ಸರ್ವಕಾರಣನಾದ ಕೃಷ್ಣನನ್ನಾಗಲಿ ಯಾರು ಪುಣ್ಯಕ್ಷೇತ್ರದಲ್ಲಿ ಭಜಿಸುವನೋ ಅವನು ಮಹಾ ಮೂಢ. ಅವನ ಕುಲ ನಾಶಹೊಂದುವುದು. ಇಹದಲ್ಲಿ ಅವನಿಗೆ ದುಃಖ ಶೋಕಗಳು ತಪ್ಪುವುದಿಲ್ಲ. ಪರದಲ್ಲಿಯೂ ಚಂದ್ರ ಸೂರ್ಯರಿರುವಷ್ಟು ಕಾಲ ನರಕಯಾತನೆ ಇರುತ್ತದೆ.

ಗುರು ಎಂದರೆ ಜ್ಞಾನ ನೀಡುವವ. ಮಂತ್ರತಂತ್ರಜ್ಞಾನವೆ ಜ್ಞಾನ. ಯಾವುದರಿಂದ ನಿಮ್ಮಲ್ಲಿ ಭಕ್ತಿ ಉಂಟಾಗುವುದೊ, ಅದೇ ಮಂತ್ರ. ಅದೇ ತಂತ್ರ. ಅನ್ಯ ದೇವತೆಗಳ ಮಂತ್ರವನ್ನು ಜನ್ಮಜನ್ಮಗಳಲ್ಲಿ ಭಜಿಸಿದವರು ದುರ್ಲಭವಾದ ದುರ್ಗಾಪಾದಕಮಲದಲ್ಲಿ ಭಕ್ತರಾಗುವರು. ಬಳಿಕ ಜಗತ್ಕಾರಣನಾದ ಶಿವನ ಮಂತ್ರವನ್ನು ಭಜಿಸಿ ನಿಮ್ಮ ದುರ್ಲಭವಾದ ಪಾದಕಮಲವನ್ನು ಪಡೆಯುತ್ತಾರೆ. ನಿಮ್ಮ ಪಾದಕಮಲವನ್ನು ಪಡೆದ ಪುಣ್ಯವಂತ ಅರೆಕ್ಷಣದಲ್ಲಿ ನಿಮ್ಮ ಹದಿನಾರನೆ ಒಂದಂಶವನ್ನು ಪಡೆದು

ದೇವತ್ವವನ್ನೆಂದೂ ಕಳೆದುಕೊಳ್ಳಲಾರ. ಭಕ್ತಿಯಿಂದ ನಿಮ್ಮ ಮಂತ್ರ ಸ್ತೋತ್ರ ಕವಚಗಳನ್ನು ವಿಷ್ಣುಭಕ್ತನಿಂದ ಉಪದೇಶ ಪಡೆದರೆ ಕರ್ಮದ ಮೂಲವೆ ನಾಶ ಹೊಂದುವುದು. ತನ್ನ ಕುಲದ ಸಾವಿರ ಪೂರ್ವಕರು ತನ್ನೊಂದಿಗೇ ಉದ್ಧಾರ ಹೊಂದುತ್ತಾರೆ. ಗುರುವನ್ನು ವಸ್ತ್ರಾಭರಣ ಚಂದನಗಳಿಂದ ವಿಧಿವತ್ತಾಗಿ ಪೂಜಿಸಿ ಈ ಮಂತ್ರಕವಚವನ್ನು ಧರಿಸಿದರೆ ಅವನು ವಿಷ್ಣುತುಲ್ಯನಾಗುತ್ತಾನೆ. ಮಾತೆ, ನನಗೆ ನೀನು ನೀಡಿದ ಎಲ್ಲ ವಸ್ತುಗಳನ್ನೂ ಬ್ರಾಹ್ಮಣನಿಗೆ ಕೊಡು. ಆಗ ಅವು ಸಾರ್ಥಕವಾಗುವುವು. ನಾನೂ ಉಣ್ಣುತ್ತೇನೆ.

**ದೇವೇ ದೇಯಾನಿ ದಾನಾನಿ ದೇವೇ ದೇಯಾ ಚ ದಕ್ಷಿಣಾ ।**
**ತತ್ ಸರ್ವಂ ಬ್ರಾಹ್ಮಣೇ ದದ್ಯಾತ್ ತದಾನಂತ್ಯಾಯ ಕಲ್ಪತೇ ॥**

ದೇವತೆಗಳಿಗೆ ನೀಡುವ ದಾನ ದಕ್ಷಿಣೆಗಳನ್ನು ಬ್ರಾಹ್ಮಣನಿಗೆ ನೀಡಿದರೆ ಅದು ಅನಂತ ಫಲ ನೀಡುತ್ತದೆ. ಬ್ರಾಹ್ಮಣನ ಮುಖವೆ ಮುಖ್ಯವಾಗಿ ದೇವತೆಗಳ ಮುಖ. ಬ್ರಾಹ್ಮಣ ಭುಂಜಿಸಿದ್ದೆಲ್ಲ ದೇವತೆಗಳಿಗೇ ತಲುಪುತ್ತದೆ.'

ಗಣೇಶನ ಮಾತನ್ನು ಕೇಳಿ ರಾಧೆ ಗಣೇಶನ ಮುಂದೆ ಇಟ್ಟಿದ್ದ ಎಲ್ಲ ವಸ್ತುಗಳನ್ನೂ ಬ್ರಾಹ್ಮಣರಿಗೆ ಉಣಿಸಿದಳು. ತತ್‌ಕ್ಷಣದಲ್ಲಿ ಗಣೇಶ ತೃಪ್ತನಾದ. ಅದೇ ಸಮಯದಲ್ಲಿ ಬ್ರಹ್ಮ ಶಿವ ಶೇಷರು ಶ್ರೀಕೃಷ್ಣನನ್ನು ಪೂಜಿಸಲು ಆಲದ ಮರದ ಬುಡಕ್ಕೆ ಬಂದರು. ಶಿವನ ಚಾರನೊಬ್ಬ ಶ್ರೀಕೃಷ್ಣನ ಬಳಿಗೆ ಬಂದು ಹೇಳತೊಡಗಿದ. ಅವನು ಭಯಭೀತನಾಗಿದ್ದ, ಗಂಟಲು ಒಣಗಿತ್ತು.

'ಪ್ರಭು, ವೃಷಭಾನುವಿನ ಮಗಳಾದ ರಾಧೆ ಸ್ವಸ್ತಿವಾಚನ ಪೂರ್ವಕವಾಗಿ ಗಣೇಶನಿಗೆ ಮೊದಲ ಪೂಜೆ ಸಲ್ಲಿಸಿದ್ದಾಳೆ. ಅವಳಿಗೆ ಮೂವತ್ತು ಕೋಟಿ ಬಲಿಷ್ಠರಾದ ಗೋಪಿಯರ ಬಲವಿದೆ. ಅವರು ತಡೆಯುತ್ತಿದ್ದರೂ ನಾನು ನಿಮಗೆ ಅದನ್ನು ಹೇಳುತ್ತಿದ್ದೇನೆ. ಮೊದಲಿಗೆ ಗಣೇಶನನ್ನು ಪೂಜಿಸಿದರೆ ಅನಂತ ಫಲ, ನಡುವೆ ಪೂಜಿಸಿದರೆ ಮಧ್ಯಮ ಫಲ, ಕೊನೆಯಲ್ಲಿ ಪೂಜಿಸಿದರೆ ಅಲ್ಪ ಫಲ ಎಂದು ಹೇಳುತ್ತ, ದೇವತೆಗಳು ಮುನಿಗಳು ದೇವತಾಸ್ತ್ರೀಯರು ಎಲ್ಲರೂ ಇರುತ್ತಿರುವಾಗಲೆ, ಗೋಪಿಯರಿಂದೊಡಗೂಡಿ ಗೋಪಿ ಗಣೇಶನನ್ನು ಪೂಜಿಸಿದಳು.'

ದೂತನ ಮಾತನ್ನು ಕೇಳಿ ಎಲ್ಲ ದೇವತೆಗಳೂ ನಕ್ಕು ಬಿಟ್ಟರು. ಮುನಿಗಳೂ ರಾಜರು ಎಲ್ಲ ದೇವತಾಸ್ತ್ರೀಯರೂ ರುಕ್ಮಿಣಿ ಮುಂತಾದ ಮಹಿಷಿಯರೂ ಸರಸ್ವತಿ ಸಾವಿತ್ರಿ ಪಾರ್ವತಿ ರೋಹಿಣಿ ಸಂಜ್ಞಾ ಸ್ವಾಹಾ ಮುಂತಾದವರೂ ಮುನಿಪತ್ನಿಯರೂ ಎಲ್ಲರೂ ಸಂತೋಷದಿಂದ ಗಣೇಶನ ಪೂಜೆಗೆ ಹೊರಟರು. ಎಲ್ಲರೂ ಬಗೆಬಗೆಯ ವಸ್ತುಗಳಿಂದ ಪೂಜೆ ಮಾಡಿದರು. ಲಡ್ಡು ಹೋಳಿಗೆ ಮಧುರವಾದ ಫಲಗಳು, ಹಾಲು ಜೇನು ಮೊಸರು ತುಪ್ಪ ಮುಂತಾದವುಗಳನ್ನು ಸಮರ್ಪಿಸಿದರು. ಪೂಜೆ ಮುಗಿಸಿ ಸುಖಾಸನದಲ್ಲಿ ಕುಳಿತರು.

ಪಾರ್ವತಿ ರಾಧೆಯ ಬಳಿಗೆ ಬಂದಳು. ರಾಧೆ ಬೇಗನೆ ಎದ್ದು ಆದರದಿಂದ ಮಾತನಾಡಿಸಿದಳು. ಇಬ್ಬರೂ ಒಬ್ಬರಿಗೊಬ್ಬರು ತಬ್ಬಿಕೊಂಡು ಮುದ್ದಿಸಿದರು.

**ಪಾರ್ವತಿ:-** ರಾಧೆ, ನಿನ್ನ ಬಗ್ಗೆ ನಾನೇನು ಕೇಳಲಿ? ಮಂಗಲಗಳಿಗೆ ಆಶ್ರಯಳು ನೀನು. ಶ್ರೀದಾಮನ ಶಾಪ ವಿಮೋಚನೆಯಾಯಿತು. ನಿನ್ನ ವಿರಹ ಜ್ವಾಲೆ ಆರಿತು. ನನ್ನ ಮನಸ್ಸು ಪ್ರಾಣಗಳು ಸದಾ ನಿನ್ನಲ್ಲಿಯೆ ಇರುತ್ತವೆ. ನಿನ್ನ ಮನಸ್ಸು ಪ್ರಾಣಗಳು ನನ್ನಲ್ಲಿ. ನಮ್ಮಲ್ಲಿ ಭೇದವಿಲ್ಲ. ಶಕ್ತಿ ಪುರುಷರಲ್ಲಿಯೂ ಭೇದವಿಲ್ಲ. ನನ್ನ ಭಕ್ತರು ಯಾರು ನಿನ್ನನ್ನು ನಿಂದಿಸಿದರೂ, ಹಾಗೇ ನಿನ್ನ ಭಕ್ತರು ಯಾರು ನನ್ನನ್ನು ನಿಂದಿಸಿದರೂ ಸೂರ್ಯ ಚಂದ್ರರಿರುವಷ್ಟು ಕಾಲ ಕುಂಭೀಪಾಕ ನರಕ ಲಭಿಸುವುದು.

ರಾಧಾ ಮಾಧವರೊಳಗೆ ಭೇದವೆಣಿಸಿದರೂ ಅವರಿಗೆ ಕುಲನಾಶ ಉಂಟಾಗುವುದು. ಚಿರಕಾಲ ನರಕವಾಸ, ಬಳಿಕ ಹಂದಿಯ ಜನ್ಮ. ಅರವತ್ತು ಸಾವಿರ ವರ್ಷಗಳ ಕಾಲ ತಿರುಗಿ ಅಷ್ಟು ಕಾಲ ಮಲಕ್ರಿಮಿಯ ಜನ್ಮವೆತ್ತ ಬೇಕಾಗುವುದು.

ರಾಧೆ, ನನ್ನ ಪುತ್ರನಾದ ಗಣೇಶನನ್ನು ನೀನೆ ಮೊದಲಿಗೆ ಪೂಜಿಸಿದವಳು, ನಾನಲ್ಲ. ಅವನು ನಿನಗೆ ಹೇಗೋ ಹಾಗೆ ನನಗೂ ಆದಿಯಲ್ಲಿ ಪೂಜ್ಯನೆನಿಸುತ್ತಾನೆ. ದೇವಿ, ಹಾಲಿಗೂ ಬಿಳುಪಿಗೂ ಹೇಗೋ ಹಾಗೆ ರಾಧೆಗೂ ಮಾಧವನಿಗೂ ಯಾವಜ್ಜೀವನ ಪರ್ಯಂತವೂ ವಿಯೋಗವಿರುವುದಿಲ್ಲ. ಭಾರತದಲ್ಲಿಯೆ ಮಹಾತೀರ್ಥ ಪುಣ್ಯಕ್ಷೇತ್ರವೆನಿಸಿದ ಸಿದ್ಧಾಶ್ರಮದಲ್ಲಿ ಗಣೇಶನನ್ನು ಪೂಜಿಸಿ ಗೋವಿಂದನ ಸಮಾಗಮ ಹೊಂದುತ್ತಿರುವಿ. ರಾಸೇಶ್ವರಿಯಾದ ನೀನು ರಸಿಕಳು. ಶ್ರೀಕೃಷ್ಣ ರಸಿಕಾಗ್ರೇಸರ. ರಸಿಕಳು ರಸಿಕನನ್ನು ಸೇರುವುದೇ ಚಂದ. ಶ್ರೀದಾಮನ ಶಾಪ ಪಡೆದು ನೂರುವರ್ಷಗಳ ಬಳಿಕ ಈಗ ಕೃಷ್ಣನನ್ನು ಸೇರು. ನಾನು ಹೇಳುತ್ತೇನೆ, ಈಗಲೆ ನೀನು ನಿನ್ನನ್ನು ಸಿಂಗರಿಸಿಕೊಳ್ಳು. ಪ್ರೇಯಸಿಯರಿಗೆ ತಾವು ಬಯಸಿದ ಪುರುಷರನ್ನು ಸೇರುವುದು ಬಹಳ ದುರ್ಲಭವಾದ ಹಬ್ಬ.'

ಪಾರ್ವತಿಯ ಮಾತಿನಂತೆ ರಾಧೆಗೆ ಸಖಿಯರೆಲ್ಲರೂ ಶೃಂಗಾರ ಮಾಡಿದರು. ರತ್ನ ಸಿಂಹಾಸನದಲ್ಲಿ ಕುಳ್ಳಿರಿಸಿದರು. ರತ್ನಮಾಲೆ ರತ್ನಮಾಲೆಯನ್ನು ಕೊರಳಲ್ಲಿ ಹಾಕಿದಳು. ಪದ್ಮಮುಖಿ ಬಲಕ್ಕೈಗೆ ಲೀಲಾಪದ್ಮ ಕೊಟ್ಟಳು; ಪಾದಪದ್ಮಗಳಿಗೆ ಅಲಕ್ತಕರಸ ಲೇಪಿಸಿದಳು. ಸುಂದರಿ ಎಂಬ ಗೋಪಿ ಚಂದನಯುಕ್ತವಾದ ಸುಂದರವಾದ ಸಿಂದೂರವನ್ನು ಬೈತಲೆಯ ಕೆಳಭಾಗದಲ್ಲಿಟ್ಟಳು. ಮಾಲತಿ ತಲೆಗೂದಲನ್ನು ಹೆಣೆದು ಮಾಲತೀ ಮಾಲೆಯನ್ನು ಮುಡಿಸಿದಳು. ಚಂದನೆ ಕಸ್ತೂರೀ ಕುಂಕುಮಯುಕ್ತವಾದ ಚಂದನವನ್ನು ಸ್ತನಗಳಿಗೆ ಬಳಿದಳು. ಮಾಲಾವತಿ ಅರಳಿದ ನವಮಲ್ಲಿಗೆಯಿಂದ ಕೂಡಿದ ಘಮಘಮಿಸುವ ಸಂಪಿಗೆ ಮಾಲೆಯನ್ನು ತೊಡಿಸಿದಳು. ರಸಿಕೆ ಎಂಬ ಗೋಪಿ ರತ್ನಾಭರಣಗಳಿಂದ ರಾಧೆಯನ್ನು ಮಹಾರಸಿಕಳನ್ನಾಗಿ ಸಿಂಗರಿಸಿದಳು. ಲಲಿತೆ ಕಣ್ಣಿಗೆ ಕಾಡಿಗೆ ಹಚ್ಚಿ ಲಲಿತವಾದ ಸೀರೆ ಉಡಿಸಿದಳು. ಪಾರಿಜಾತೆಯು ಇಂದ್ರನು ಕೊಟ್ಟ ಸುವಾಸನೆ ಬೀರುವ ಪಾರಿಜಾತವನ್ನು ಕೈಯಲ್ಲಿಟ್ಟಳು. ಸುಶೀಲೆ ಕೃಷ್ಣನ ಬಳಿ ರಾಧೆ ಯಥೋಚಿತವಾಗಿ ಹೇಗೆ ನಡೆದುಕೊಳ್ಳಬೇಕೆಂದು ಶೀಲವನ್ನು ಉಪದೇಶಿಸಿದಳು. ಕಲಾವತಿ ರಾಧೆಗೆ ಸುದೀರ್ಘವಿರಹಕಾಲದಲ್ಲಿ ಮರೆತಿರಬಹುದಾಗಿದ್ದ ಸ್ತ್ರೀಯರ ಹದಿನಾರು ಕಲೆಗಳನ್ನು ನೆನಪಿಸಿದಳು. ಸುಧಾಮುಖಿ ಸುಧೆಯಂತೆ ಮಧುರವಾದ ಶೃಂಗಾರದ ನುಡಿಗಳನ್ನು ಹೇಗೆ

ಆಡಬೇಕೆಂದು ನೆನಪು ಮಾಡಿಕೊಟ್ಟಳು. ಕಮಲೆ ಕಮಲದಳಗಳಿಂದ, ಸಂಪಿಗೆದಳಗಳಿಂದ ಕೋಮಲವಾದ ಹಾಸಿಗೆ ಸಿದ್ಧಪಡಿಸಿದಳು. ಚಂಪಾವತಿ ಕೃಷ್ಣನಿಗಾಗಿ ಸಂಪಿಗೆ ಹೂವನ್ನು ದೇವಿಯ ಕೈಯಲ್ಲಿಟ್ಟಳು. ಕದಂಬಮಾಲೆ ಕದಂಬ ಹೂವಿನ ಗೊಂಚಲನ್ನು ಕೈಗಿಟ್ಟಳು. ಕೃಷ್ಣಪ್ರಿಯೆ ಕೃಷ್ಣನಿಗಾಗಿ ಕರ್ಪೂರಾದಿಗಳಿಂದ ಗಮಗಮಿಸುವ ತಾಂಬೂಲವನ್ನೂ ಸುವಾಸನೆಯ ನೀರನ್ನೂ ಸಿದ್ಧಪಡಿಸಿಕೊಟ್ಟಳು. ಇತ್ತ ಸಿದ್ಧಾಶ್ರಮದ ನೆಲ ಜಲ ಎಲ್ಲವೂ ಗೋರೋಚನದ ಕಾಂತಿಯಿಂದ ಹೊಳೆಯ ತೊಡಗಿತು. ಎಲ್ಲರೂ ಅಚ್ಚರಿಗೊಂಡು ಶ್ರೀಕೃಷ್ಣನನ್ನು ಕೇಳಿದರು.

**ಸರ್ವಜ್ಞನಾದ ಭಗವಂತ ನುಡಿದ:-** 'ಶ್ರೀದಾಮನ ಶಾಪದಿಂದ ರಾಧೆ ಕಾಂತಿಹೀನಳಾಗಿ ನನ್ನ ವಿರಹತಾಪದಿಂದ ಬೆಂದು ಎಲ್ಲ ಜ್ಞಾನವನ್ನು ಮರೆತಿದ್ದಳು. ನೂರು ವರ್ಷಗಳು ಕಳೆದ ಮೇಲೆ ಈಗ ಎಲ್ಲವನ್ನೂ ಜ್ಞಾಪಿಸಿಕೊಂಡು ತನ್ನ ಕಾಂತಿಯಿಂದ ಈ ಆಶ್ರಮವನ್ನು ಬೆಳಗುತ್ತಿದ್ದಾಳೆ. ಅವಳ ಕಾಂತಿ ಪರಮಾಹ್ಲಾದಕರ. ಕೋಟಿ ಚಂದ್ರರಂತೆ ಹೊಳೆಯುತ್ತದೆ. ನೋಡಲು ಕಣ್ಣಿಗೂ ತಂಪು.'

ಶ್ರೀಕೃಷ್ಣನ ಮಾತನ್ನು ಕೇಳಿದಾಗ ಮುನಿಗಳು ಮನುಗಳು ಬ್ರಹ್ಮ ಶಿವ ಮುಂತಾದ ದೇವತೆಗಳು ದೇವಿಯರು ಎಲ್ಲರೂ ಆಶ್ರಮಕ್ಕೆ ಧಾವಿಸಿದರು. ರಾಧೆಯ ದರ್ಶನ ಮಾಡಿ ಭಕ್ತಿಯಿಂದ ತಲೆ ಬಾಗಿದರು.

ಬಿಳಿ ಸಂಪಿಗೆ ಹೂವಿನಂಥ ಎಣೆಯಿಲ್ಲದ ಕಾಂತಿಯವಳು, ಊರ್ಧ್ವರೇತಸ್ಕರಾದ ಮುನಿಗಳ ಮನಸ್ಸನ್ನೂ ಮೋಹಗೊಳಿಸುವ ಚೆಲುವೆ. ಸೊಂಪಾದ ತಲೆಗೂದಲಿನ ಸುಂದರಿ. ಕೋಟಿಚಂದ್ರರ ಕಾಂತಿಯನ್ನು ನಾಚಿಸುವ ಮೊಗದವಳು. ಕಾಡಿಗೆಯಿಂದ ಹೊಳೆವ ಶರತ್ಕಾಲದ ಕಮಲದಂಥ ಕಣ್ಣಿನವಳು. ಮಹಾಲಕ್ಷ್ಮೀ ಸ್ವರೂಪಳು. ಪರಮಾತ್ಮನ ಪ್ರಾಣೇಶ್ವರಿ. ಗುಣಾತೀತಳು. ಭಕ್ತರಲ್ಲಿ ಅನುಗ್ರಹ ಮಾಡಲೆಂದೆ ಅವತರಿಸುವವಳು. ಪತಿತಪಾವನಳು. ಬ್ರಹ್ಮನ ಜನನಿ. ಮಹಾವಿಷ್ಣುವಿನ ಪ್ರಿಯೆ. ಲೋಕಮಾತೆ, ರಾಸೇಶ್ವರಿ, ಮಹಾರಸಿಕಳು, ಅಗ್ನಿಶುದ್ಧವಾದ ಸೀರೆ ಉಟ್ಟವಳು, ಬಿಳಿಚಾಮರ ಹಿಡಿದು ಏಳುಮಂದಿ ಗೋಪಿಯರು ಬೀಸುತ್ತಿದ್ದಾರೆ. ನಾಲ್ಕು ಮಂದಿ ಪ್ರೀತಿಯ ಸಖಿಯರು ಪಾದಕಮಲಗಳನ್ನು ಸೇವಿಸುತ್ತಿದ್ದಾರೆ. ಅಮೂಲ್ಯ ರತ್ನಾಭರಣಗಳಿಂದ ಅಲಂಕೃತಳಾಗಿದ್ದಾಳೆ. ಸುಂದರವಾದ ಕುಂಡಲಗಳಿಂದ ಕಪೋಲಗಳು ಶೋಭಿಸುತ್ತಿವೆ. ಗರುಡನ ಕೊಕ್ಕನ್ನು ನಾಚಿಸುವ ಮೂಗಿಗೆ ಶ್ರೇಷ್ಠ ಮುತ್ತಿನ ಮೂಗುತಿ. ಮೈ ಎಲ್ಲ ಕುಂಕುಮ ಅಲಕ್ತಕ ಕಸ್ತೂರಿ ಚಂದನಗಳ ಲೇಪ. ಗಜಗಮನೆಯಾದ ಕೋಮಲಾಂಗಿ ಮನ್ಮಥನ ಅಸ್ತ್ರದ ವಿಜಯಸ್ವರೂಪಳು. ಕ್ರೀಡಾಕಮಲ ಪಾರಿಜಾತ ಪುಷ್ಪ ರತ್ನದರ್ಪಣಗಳನ್ನು ಹಿಡಿದು ವಿಚಿತ್ರ ರತ್ನಸಿಂಹಾಸನದಲ್ಲಿ ಕುಳಿತಿದ್ದಾಳೆ. ಹೃದಯಕಮಲದಲ್ಲಿ ಕೃಷ್ಣಪರಮಾತ್ಮನನ್ನು ಧ್ಯಾನಿಸುತ್ತಿದ್ದಾಳೆ. ಕಾಯ ವಾಕ್ ಮನಸ್ಸುಗಳಿಂದ ಸ್ವಪ್ನ ಜಾಗರಗಳೆರಡರಲ್ಲಿಯೂ ಕೃಷ್ಣನ ಪ್ರೇಮಸೌಭಾಗ್ಯವನ್ನೆ ನೆನೆಯುತ್ತಿದ್ದಾಳೆ. ಶುದ್ಧಭಕ್ತಿಯ ಪತಿವ್ರತೆ. ಧನ್ಯೆ, ಮಾನ್ಯೆ, ಸದಾ ಕೃಷ್ಣನ ವಕ್ಷಃಸ್ಥಳದಲ್ಲಿ ಮನೆ ಮಾಡಿದವಳು. ಪ್ರಿಯ ಸಖಿಯರಲ್ಲಿಯೂ

ಪ್ರಿಯ ಭಕ್ತರಲ್ಲಿಯೂ ಪ್ರಿಯನುಡಿಗಳನ್ನು ಆಡುವವಳು. ಕೃಷ್ಣನ ಶರೀರದ ಎಡಭಾಗದಿಂದ ಬಂದವಳು. ಗೋಲೋಕವಾಸಿನಿ. ಪುಣ್ಯಕ್ಷೇತ್ರವಾದ ಭಾರತದಲ್ಲಿ ವೃಷಭಾನುವಿನ ಮಗಳಾಗಿ ಅವತರಿಸಿದವಳು. ಗೋಪಿಯರ ಒಡತಿ. ಸಿದ್ಧಿದಾಯಕಳು ಸಿದ್ಧಿರೂಪಳು, ಧ್ಯಾನಕ್ಕೆ ನಿಲುಕದವಳು. ಸದ್ಭಕ್ತರು ಅವಳನ್ನು ವಂದಿಸುತ್ತಾರೆ, ಧ್ಯಾನಿಸುತ್ತಾರೆ, ಧ್ಯಾನ ಮಾಡಿಮಾಡಿ ಇಹದಲ್ಲಿ ಜೀವನ್ಮುಕ್ತರಾಗುತ್ತಾರೆ, ಪರದಲ್ಲಿ ಕೃಷ್ಣನ ಪಾರ್ಷದರಾಗುತ್ತಾರೆ.

ಬ್ರಹ್ಮ ಜಗತ್ತಿನ ಸೃಷ್ಟಿಕರ್ತ. ಅವನಿಗೂ ಜನನಿಯಾದ ರಾಧೆಯನ್ನು ಮೊತ್ತ ಮೊದಲು ಅವನೆ ಹೀಗೆ ಸ್ತುತಿಸಿದ-

ಅರವತ್ತು ಸಾವಿರ ದಿವ್ಯ ವರ್ಷಗಳ ಕಾಲ ಪುಣ್ಯಕ್ಷೇತ್ರವಾದ ಪುಷ್ಕರದಲ್ಲಿ ನಾನು ತಪಸ್ಸು ಮಾಡಿದೆ. ನಿನ್ನ ಪಾದಕಮಲದ ಸವಿಯಾದ ಮಕರಂದವನ್ನು ದುಂಬಿಯಂತೆ ಉಣಬಯಸಿದೆ. ಆದರೂ ಆ ಇಚ್ಛೆ ಪೂರೈಸಲಿಲ್ಲ. ನಿನ್ನ ಪಾದಕಮಲ ಸ್ವಪ್ನದಲ್ಲಿಯೂ ಕಾಣಲು ಸಿಗಲಿಲ್ಲ. ಅಶರೀರವಾಣಿ ನುಡಿಯಿತು - 'ವಾರಾಹಕಲ್ಪದಲ್ಲಿ ಭಾರತವರ್ಷದ ಪುಣ್ಯಕರ ವೃಂದಾವನದಲ್ಲಿರುವ ಸಿದ್ಧಾಶ್ರಮದಲ್ಲಿ ಗಣೇಶನ ಪಾದಕಮಲದರ್ಶನವಾದ ಬಳಿಕ ರಾಧಾಮಾಧವರ ದಾಸ್ಯ ನಿನಗೆ ಲಭಿಸುತ್ತದೆ. ಈಗ ಇಲ್ಲ. ಹೊರಟುಹೋಗು' ಎಂದು. ಆಗ ನಾನು ಹೊರಟುಹೋದೆ. ಈಗ ನನ್ನ ಬಯಕೆ ಈಡೇರಿತು. ತಪಸ್ಸು ಫಲಿಸಿತು.

**ಶ್ರೀ ಮಹಾದೇವ ಸ್ತುತಿಸಿದ:-** ಶ್ರೀಕೃಷ್ಣನ ಪಾದಕಮಲವನ್ನು ಮಹಾಲಕ್ಷ್ಮಿ ಒಬ್ಬಳು ಆರಾಧಿಸುವಳು. ಬ್ರಹ್ಮಾದಿ ದೇವತೆಗಳು ಸದಾ ಧ್ಯಾನನಿಷ್ಠರಾಗಿ ಧ್ಯಾನಿಸಿದರೂ ಆ ಪಾದಕಮಲವನ್ನು ಹೊಂದಲಾರರು. ಮುನಿಗಳು ಮನುಗಳು ಸಿದ್ಧರು ಯೋಗಿಗಳು ಸ್ವಪ್ನದಲ್ಲಿಯೂ ನೋಡಲಾರರು. ಇಂಥ ಶ್ರೀಕೃಷ್ಣನ ಎದೆಯಲ್ಲಿ ನೀನು ಮನೆ ಮಾಡಿರುವಿ.

**ಅನಂತ ಸ್ತುತಿಸಿದ:-** ವೇದಗಳು, ವೇದಮಾತೆ, ಪುರಾಣಗಳು, ನಾನು, ಸರಸ್ವತಿ ಬೇರೆ ಸಜ್ಜನರು ಯಾರೂ ನಿನ್ನನ್ನು ಸ್ತೋತ್ರ ಮಾಡಲು ಶಕ್ತರಲ್ಲ.

ಹೀಗೆ ದೇವದೇವಿಯರೂ ಮುನಿ ಮನು ಮುಂತಾದವರೂ ಸ್ತೋತ್ರ ಮಾಡಿದರು. ತಲೆಬಾಗಿ ನಮಿಸಿದರು. ರುಕ್ಮಿಣಿ ಮುಂತಾದ ಮಹಿಷಿಯರು ನಾಚಿ ನಿಟ್ಟುಸಿರಿನಿಂದ ತಮ್ಮ ಕೈಯಲ್ಲಿದ್ದ ರತ್ನಕನ್ನಡಿಗಳನ್ನು ಮಲಿನಗೊಳಿಸಿದರು. ಸತ್ಯಭಾಮೆ ಮೃತಳಂತಾದಳು. ನಿರಾಹಾರಳಾಗಿ ಕೃಶಳಾದಳು. ಮನಸ್ಸಿನ ಎಲ್ಲ ಅಭಿಮಾನವನ್ನೂ ತೊರೆದಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಸಿದ್ಧಾಶ್ರಮತೀರ್ಥಯಾತ್ರಾಪ್ರಸಂಗದಲ್ಲಿ ಗಣೇಶಪೂಜೆ ಮತ್ತು ಬ್ರಹ್ಮ ಶಿವ ಶೇಷ ಕೃತ ರಾಧಿಕಾ ಸ್ತೋತ್ರವೆಂಬ ನೂರ ಇಪ್ಪತ್ತನಾಲ್ಕನೆ ಅಧ್ಯಾಯ ಮುಗಿಯಿತು.*

—o—

## ವಸುದೇವನ ರಾಜಸೂಯಯಾಗ



**ನಾರದಮುನಿ:-** ಗಣೇಶಪೂಜೆಯಾದ ಬಳಿಕ, ರಾಧಾ ಸ್ತೋತ್ರವೂ ಆದ ಬಳಿಕ ಮುಂದೇನಾಯಿತು? ರಹಸ್ಯವಾದ ಆಖ್ಯಾನವನ್ನು ನನಗೆ ಉಪದೇಶಿಸು.

**ನಾರಾಯಣಮುನಿ:-** ಗಣೇಶ ಪೂಜೆಯ ಸಮಯದಲ್ಲಿ ಬಂದ ದೇವತೆಗಳು ಮುನಿಗಳು ಯೋಗಿಗಳು ಎಲ್ಲರೂ ಆಲದ ಮರದ ಬುಡದಲ್ಲಿದ್ದಾಗ ವಸುದೇವ ದೇವಕಿಯರು ಬ್ರಹ್ಮಶೇಷರನ್ನೂ ಮುನಿಗಳನ್ನೂ ಕೇಳಿದರು - 'ಮಹಾತ್ಮರೆ, ನಮಗೆ ಸಂಸಾರಸಾಗರದಿಂದ ಮುಕ್ತಿ ಉಂಟೆ? ಉತ್ತಮಗತಿ ಲಭಿಸುವುದೆ? ಸಂಸಾರ ಸಾಗರವನ್ನು ದಾಟಿಸುವ ಅಂಬಿಗರು ನೀವು. ಜಲಮಯವಾದ ತೀರ್ಥಗಳು ತೀರ್ಥಗಳಲ್ಲ. ಮಣ್ಣು ಕಲ್ಲಿನ ದೇವರೂ ದೇವರಲ್ಲ. ಯಜ್ಞರೂಪದ ಪುಣ್ಯಕರ್ಮಗಳೂ ಪುಣ್ಯಕರ್ಮಗಳಲ್ಲ, ಉಪವಾಸ ವ್ರತಗಳೂ ವ್ರತಗಳಲ್ಲ. ನಾನಾ ದಾನ ತಪಸ್ಸುಗಳೂ ಬ್ರಾಹ್ಮಣ ದೇವತಾರಾಧನೆಗಳೂ ಪಾಪ ಕಳೆಯುವುದಿಲ್ಲ. ಅವು ಪಾವಿತ್ರ್ಯ ಉಂಟು ಮಾಡಲು ಬಹಳ ಕಾಲ ತೆಗೆದುಕೊಳ್ಳುತ್ತವೆ. ಆದರೆ ವಿಷ್ಣುಭಕ್ತರು ದರ್ಶನ ಮಾತ್ರದಿಂದಲೆ ಪಾಪ ಪರಿಹರಿಸುವರು -

**ನಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।**
**ಯಜ್ಞರೂಪಾಣಿ ಪುಣ್ಯಾನಿ ವ್ರತಾನ್ಯಶನಾನಿ ಚ ।**
**ತಪಾಂಸಿ ನಾನಾ ದಾನಾನಿ ವಿಪ್ರದೇವಾರ್ಚನಾನಿ ಚ ।**
**ಚಿರಂ ಪುನಂತಿ ಸರ್ವಾಣಿ ದರ್ಶನಾದೇವ ವೈಷ್ಣವಾಃ ॥**

ಸಜ್ಜನರಾದ ವಿಷ್ಣುಭಕ್ತರ ಪವಿತ್ರವಾದ ಕಮಲ ದೂಳುಗಳ ಸ್ಪರ್ಶಮಾತ್ರದಿಂದಲೆ ತಕ್ಷಣವೆ ಭೂಮಿ ಪಾವನವಾಗುತ್ತದೆ. ತೀರ್ಥಗಳು, ಸಮುದ್ರಗಳು, ಪರ್ವತಗಳು ಎಲ್ಲವೂ ಪಾವನವಾಗುತ್ತವೆ. ದೇವತೆಗಳೂ ಪಾಪವೆಂಬ ಸೌದೆಗೆ ಬೆಂಕಿಯಂತಿರುವ ವಿಷ್ಣುಭಕ್ತರ ದರ್ಶನವನ್ನು ಬಯಸುತ್ತಾರೆ. ಮೊಸರು ಹಾಲುಗಳ ಸವಿಯಂತಿರುವ ಪರಮ ಸ್ವಾದುರೂಪವಾದ ತತ್ವಜ್ಞಾನವನ್ನು ಜ್ಞಾನಿಗಳೊಡನೆ ಸೇರಿ ಸಂಪಾದಿಸದವನೆ ಅಜ್ಞಾನಿ. ಇದಕ್ಕೆ ನಿದರ್ಶನ ನಾವು. ತಂದೆಯಾದ ನಾನಾಗಲಿ ತಾಯಿಯಾದ ದೇವಕಿಯಾಗಲಿ ಜ್ಞಾನಿಗಳಿಗೆಲ್ಲ ಗುರುವಿಗೂ ಗುರುವಾದ ಕೃಷ್ಣನ ಬಳಿ ಬಹುಕಾಲವಿದ್ದೂ ಜ್ಞಾನ ಸಂಪಾದಿಸಲಿಲ್ಲ.'

ವಸುದೇವನ ಮಾತನ್ನು ಕೇಳಿ ನಕ್ಕು ನಾಲ್ವರು ದೇವತೆಗಳಿಗೂ ತಂದೆಯೂ ಗುರುವೂ ಆದ ಶಂಕರ ನುಡಿದ -

ಜ್ಞಾನಿಗಳ ಜೊತೆಗೇ ಸದಾ ಇದ್ದರೂ ಅದು ಅನಾದರಕ್ಕೆ ಕಾರಣವಾಗುತ್ತದೆ. ಗಂಗಾಜಲದಿಂದ ಪವಿತ್ರರಾದವರೂ ಕೂಡ ಗಂಗೆಯಲ್ಲಿ ಅನಾದರ ಭಾವನೆಯಿಂದ ಪಾವಿತ್ರ್ಯ ಸಿದ್ಧಿಗಾಗಿ ಬೇರೆ ತೀರ್ಥಗಳ ಕಡೆಗೆ ಯಾತ್ರೆ ಮಾಡುವುದುಂಟು. ಈ ವಸುದೇವ ಕೃಷ್ಣನ ತಂದೆ. ಸ್ವತಃ ತಾನೂ ಜ್ಞಾನಿ. ಏಕೆಂದರೆ ಜ್ಞಾನಿಯಾದ ಕಶ್ಯಪನ ಅಂಶಸಂಭೂತ. ಆದರೂ ಕೃಷ್ಣನೇನೆಂದರೂ ತಮ್ಮ ಮಗನೆಂಬ ಅನಾದರದಿಂದ ಕೃಷ್ಣನ ಮಕ್ಕಳಾದ ನಮ್ಮಲ್ಲಿ ಜ್ಞಾನೋಪದೇಶ ಬಯಸುತ್ತಾನೆ.

**ಅಹೋ ದುರ್ಗಾ ಮಹಾಮಾಯಾ ಜ್ಞಾನಿನಾಮಪಿ ಮೋಹಿನೀ ।**
**ವಿಷ್ಣುಮಾಯಾ ದುರಾರಾಧ್ಯಾ ನ ಸಾಧ್ಯಾ ಜಗತಾಮಪಿ ॥**

ಏನಾಶ್ಚರ್ಯ! ವಿಷ್ಣುಮಾಯೆ ಮಹಾಮಾಯೆ ಎನಿಸಿದ ದುರ್ಗೆ ಜ್ಞಾನಿಗಳಿಗೂ ಮೋಹ ಉಂಟುಮಾಡುತ್ತಾಳೆ. ಅವಳನ್ನು ಒಲಿಸಿಕೊಳ್ಳುವುದೂ ಕಷ್ಟ. ವಶ ಮಾಡಿಕೊಳ್ಳುವುದಂತೂ ಅಸಾಧ್ಯ.

ನಾನೂ ವಿಷ್ಣುಮಾಯೆಯಿಂದ ಮೋಹಿತನಾಗುತ್ತೇನೆ. ವೇದಗಳಿಗೆ ಜನಕನಾದ ಬ್ರಹ್ಮನೂ ಅವಳಿಂದ ಮೋಹಿತನಾಗಿ, ಯಾರ ಪಾದಕಮಲವನ್ನೆ ತನ್ನ .ಬಾಳಿನುದ್ದಕ್ಕೂ ತಪಸ್ಸಿನಿಂದ ಧ್ಯಾನಮಾಡುತ್ತಿರುವನೋ ಆ ಕೃಷ್ಣನನ್ನೆ ಪರೀಕ್ಷೆ ಮಾಡಲು ಹೋಗುತ್ತಾನೆ! ಬ್ರಹ್ಮನ ನಾಲ್ಕು ಯಾಮ ಅವನ ಒಂದು ದಿನಕಲ್ಪವೆನಿಸುತ್ತದೆ. ಏಳು ದಿನಕಲ್ಪಕಾಲ ಮಾರ್ಕಂಡೇಯ ಮುನಿ ಜೀವಿಸಿರುತ್ತಾನೆ. ಬಳಿಕ ಹರಿದಾಸ್ಯ ಅವನಿಗೆ ಸಿಗುತ್ತದೆ. ಆಗ ತೊಂಬತ್ತೆಂಟು ಇಂದ್ರರ ಪತನವಾಗಿರುತ್ತದೆ. ಹತ್ತುಲಕ್ಷ ಎಂಟುಸಾವಿರ ಇಂದ್ರರ ಪಾತವಾದಾಗಲೆ ಬ್ರಹ್ಮಪ್ರಳಯ. ಇಷ್ಟು ದೀರ್ಘವಾದ ಬ್ರಹ್ಮನ ಆಯುಷ್ಯವೂ ಕೂಡ ಶ್ರೀಕೃಷ್ಣನಿಗೆ ಒಮ್ಮೆ ಕಣ್ಣು ಮುಚ್ಚಿ ತೆರೆವ ಕಾಲ. ಆದರಿಂದ ಸರ್ವೇಶ್ವರನು ಶ್ರೀಕೃಷ್ಣನೆ. ನೀನು ರಾಜಸೂಯ ಯಾಗದಿಂದ ನಿನ್ನ ಮಗನಾದ ಶ್ರೀಕೃಷ್ಣನನ್ನೆ ಆರಾಧಿಸು. ವಿಧ್ಯುಕ್ತವಾದ ದಕ್ಷಿಣೆ ನೀಡು. ಆದರಿಂದ ನೀನು ಸಂಸಾರ ಸಮುದ್ರವನ್ನು ದಾಟುವೆ. ಆದರೆ ನಿನಗೆ ಈಗಲೆ ನಿರ್ವಾಣ ಮುಕ್ತಿ ಇಲ್ಲ. ನೀನು ಕಶ್ಯಪಮುನಿಯ ಅವತಾರ. ಅವತಾರ ಸಮಾಪ್ತಿಯಾದಾಗ ಸ್ವರ್ಗದಲ್ಲಿ ನಿನ್ನ ಮೂಲ ರೂಪವನ್ನೆ ಸೇರುವಿ.'

ಶಿವನ ಮಾತನ್ನು ಕೇಳಿ ವಸುದೇವ ಒಂದು ಶುಭ ಮುಹೂರ್ತದಲ್ಲಿ ರಾಜಸೂಯಯಾಗವನ್ನಾರಂಭಿಸಿದ. ಅವನು ನೀಡಿದ ಹವಿಸ್ಸನ್ನು ಸ್ವೀಕರಿಸಲು ದೇವತೆಗಳು ಪ್ರತ್ಯಕ್ಷ ಬಂದು ಉಪಸ್ಥಿತರಿದ್ದರು. ಏಕೆಂದರೆ ಯಜ್ಞೇಶ್ವರನಾದ ಕೃಷ್ಣನೆ ಅಲ್ಲಿ ಪ್ರತ್ಯಕ್ಷವಾಗಿ ಕುಳಿತಿದ್ದ. ದಕ್ಷಿಣಾ ಸಮೇತನಾದ ಯಜ್ಞಪುರುಷನೆ ಆತ. ವಸುದೇವ ಪೂರ್ಣಾಹುತಿ ಕೊಡುತ್ತಿದ್ದಾಗ ಕೃಷ್ಣನ ಆಜ್ಞೆಯಿಂದ ಸನತ್ಕುಮಾರ ಮುನಿ ನುಡಿದ -

'ವಸುದೇವ, ಸರ್ವಸ್ವದಕ್ಷಿಣೆ ನೀಡು, ಈ ಯಜ್ಞಕರ್ಮವನ್ನು ಸಾರ್ಥಕಗೊಳಿಸು. ದಕ್ಷಿಣೆಯ ವಿಷಯದಲ್ಲಿ ವೇದದ ಅಭಿಪ್ರಾಯ ಹೀಗಿದೆ-

ಯೋಗ್ಯ ಕಾಲದಲ್ಲಿ ದಕ್ಷಿಣೆ ನೀಡಬೇಕು. ಅದಕ್ಕೆ ತಪ್ಪಿದರೆ ಒಂದು ಮುಹೂರ್ತ ಕಳೆದಾಗ ಕೊಡಬೇಕಾಗುವ ಆ ದಕ್ಷಿಣೆಯ ಮೊತ್ತ ಎರಡರಷ್ಟಾಗುತ್ತದೆ. ಒಂದು ದಿನ ಕಳೆದಾಗ ನಾಲ್ಕರಷ್ಟಾಗುತ್ತದೆ. ಮೂರು ದಿನ ಕಳೆದರೆ ಆರರಷ್ಟು. ಒಂದು ಪಕ್ಷ ಕಳೆದರೆ ನೂರರಷ್ಟು. ಮಾಸ ಕಳೆದರೆ ಅದರ ನಾಲ್ಕರಷ್ಟು. ಆರು ತಿಂಗಳು ಕಳೆದರೆ ಸಾವಿರದಷ್ಟು. ವರ್ಷಾಂತ್ಯದಲ್ಲಿ ಲಕ್ಷದಷ್ಟು. ದಕ್ಷಿಣೆ ನೀಡದ ಯಜಮಾನನೂ ಸ್ವೀಕರಿಸದ ಪುರೋಹಿತನೂ ಇಬ್ಬರೂ ನರಕ ಭಾಗಿಗಳಾಗುತ್ತಾರೆ.'

ವಸುದೇವ ಈ ಮಾತನ್ನು ಕೇಳಿ ತನ್ನ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಟ್ಟ. ಹತ್ತು ಕೋಟಿ ಅಮೂಲ್ಯ ರತ್ನಗಳು, ನೂರು ಕೋಟಿ ಶ್ರೇಷ್ಠ ಮಣಿಗಳು. ಅದರ ನಾಲ್ಕರಷ್ಟು ಚಿನ್ನದ ನಾಣ್ಯಗಳು, ಮಾಣಿಕ್ಯ ಮುತ್ತು ವಜ್ರ ಬೆಳ್ಳಿ ಹವಳ ಚಿನ್ನದ ಪಾತ್ರೆಗಳು, ತನ್ನ ಹೆಂಡಂದಿರ ಅಮೂಲ್ಯ ರತ್ನಾಭರಣಗಳು ಲಕ್ಷ ಬಿಳಿ ಚಾಮರಗಳು ಲಕ್ಷ ರತ್ನಕನ್ನಡಿಗಳು, ಎಲ್ಲ ಗೋವುಗಳು, ನೂರು ಕೋಟಿ ಆನೆಗಳು; ಅವುಗಳ ನಾಲ್ಕರಷ್ಟು ಕುದುರೆಗಳು, ನೂರು ಲಕ್ಷ ಗ್ರಾಮಗಳು, ಲಕ್ಷ ಧಾನ್ಯರಾಶಿಗಳು ಅನ್ನ ಪಾಯಸ ಹೋಳಿಗೆ ಲಡ್ಡುಗಳು ಮೊಸರು ಜೇನು ಹಾಲು ಬೆಲ್ಲ, ಕರ್ಪೂರ ಸಹಿತವಾದ ತಾಂಬೂಲ ತಂಪಾದ ಸುವಾಸನೆಯ ನೀರು, ಪರಿಮಳದ ಗಂಧ, ಪಾರಿಜಾತದ ಹೂಮಾಲೆ, ಆಸನಗಳು, ವಹ್ನಿಶುದ್ಧವಾದ ವಸ್ತ್ರಗಳು ರತ್ನಖಚಿತವಾದ ಶಯ್ಯೆಗಳು ಹೂ ಹಣ್ಣುಗಳು ಎಲ್ಲವನ್ನೂ ವಸುದೇವ ಬ್ರಾಹ್ಮಣರಿಗಿತ್ತ. ಬ್ರಾಹ್ಮಣಮುಖದಿಂದ ದೇವತೆಗಳಿಗೂ ಭೋಜನ ನೀಡಿದ. ದೇವತೆಗಳೂ ಮುನಿಗಳೂ ತಮ್ಮ ಪತ್ನಿಯರೊಂದಿಗೆ ಆ ರಾತ್ರಿ ಆನಂದದಿಂದ ವಿಹರಿಸಿದರು. ಬೆಳಿಗ್ಗೆ ಕೃಷ್ಣನ ಅನುಮತಿಯಿಂದ ಹೊರಟುಹೋದರು. ಯಾದವರೆಲ್ಲರೂ ರುಕ್ಮಿಣಿಯ ದೃಷ್ಟಿಮಾತ್ರದಿಂದಲೆ ಅಮೂಲ್ಯ ರತ್ನಪೂರ್ಣವಾದ ದ್ವಾರಕೆಗೆ ಹೋದರು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ*
*ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ*
*ನೂರ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು*

—o—

# ರಾಧಾ ಮಾಧವರ ಪುನರ್ಮಿಲನ

**ಅಧ್ಯಾಯ - ೧೨೬**

**ನಾರಾಯಣ ಮುನಿ:-** ಶ್ರೀಕೃಷ್ಣ ಯಾದವರಿಂದಲೂ ದೇವತೆಗಳು ಋಷಿಗಳು ಮುಂತಾದವರಿಂದಲೂ ಕೂಡಿಕೊಂಡು ಗಣೇಶಪೂಜೆ ನಡೆಸಿದ ಬಳಿಕ ತಾನು ಒಂದು ಅಂಶದಿಂದ ರುಕ್ಮಿಣಿ ಮುಂತಾದ ದೇವಿಯರೊಡನೆ ದ್ವಾರಕೆಗೆ ತೆರಳಿದ. ಸ್ವತಃ ತಾನು ಸಿದ್ಧಾಶ್ರಮದಲ್ಲಿಯೆ ಉಳಿದ. ಅಲ್ಲಿ ಗೋಲೋಕವಾಸಿಗಳಾದ ಗೋಪರೊಡನೆ ಮತ್ತು ನಂದಯಶೋದೆಯರೊಡನೆ ಸುಖಸಲ್ಲಾಪ ಮಾಡಿದ. ಬಳಿಕ ನಂದ ಯಶೋದೆಯರಿಗೆ ನುಡಿದ -

'ಅಪ್ಪ, ಅಮ್ಮ, ನೀವಿಬ್ಬರೂ ಗೋಕುಲಕ್ಕೇ ಹೋಗಿರಿ. ನಿಮ್ಮ ಮುಂದಿನ ಜೀವನ ಕಾಲವನ್ನು ಸುಖವಾಗಿ ಕಳೆಯಿರಿ. ಬಳಿಕ ಎಲ್ಲ ಗೋಕುಲವಾಸಿಗಳೊಡನೆ ನಿಮಗೆ ಸಾಲೋಕ್ಯ ಮುಕ್ತಿ ನೀಡುತ್ತೇನೆ.'

ಹೀಗೆ ಹೇಳಿ ತಾಯಿ ತಂದೆಗಳ ಅನುಮತಿ ಪಡೆದು ಕೃಷ್ಣ ರಾಧೆಯ ಬಳಿಗೆ ನಡೆದ. ನಂದ ಯಶೋದೆಯರು ಗೋಕುಲಕ್ಕೆ ತೆರಳಿದರು.

ಕೃಷ್ಣ ರಾಧೆಯನ್ನು ಕಂಡ. ಆಹಾರವನ್ನೆ ಬಿಟ್ಟಿದ್ದರೂ ನಗು ಮೊಗದಿಂದ ಮನೋಹರವಾಗಿ ಕಾಣುತ್ತಿದ್ದಳು ರಾಧೆ. ಹನ್ನೆರಡು ವಯಸ್ಸಿನವಳಂತೆ ಕಾಣುತ್ತಿದ್ದಳು. ಮಾಸದ ಯೌವನ ಅವಳದು. ನಗುಮೊಗದ ಮುನ್ನೂರು ಕೋಟಿ ಗೋಪಿಯರು ರತ್ನಸಿಂಹಾಸನದಲ್ಲಿ ಕುಳಿತ ಅವಳನ್ನು ಸೇವಿಸುತ್ತಿದ್ದರು. ಕೈಯಲ್ಲಿ ಬೆತ್ತ ಹಿಡಿದು ಸುತ್ತುವರಿದಿದ್ದರು.

ರಾಧೆ ಕೃಷ್ಣನನ್ನು ಕಂಡಳು. ಕೃಷ್ಣ ಸಣ್ಣ ಮಗುವಿನಾಕಾರದವನಂತೆ ಕಾಣುತ್ತಿದ್ದ. ನವಮೇಘಶ್ಯಾಮ, ಪೀತಾಂಬರಧಾರಿ, ಮೈಯೆಲ್ಲ ಚಂದನ ಬಳಿದು ರತ್ನಾಭರಣ ಧರಿಸಿ ಮುಗುಳು ನಗು ನಗುತ್ತಿದ್ದ. ತಲೆಯ ಮೇಲೆ ನವಿಲುಗರಿ, ಕೊರಳಲ್ಲಿ ಜಾಜಿ ಹೂಮಾಲೆ, ಕೈಯಲ್ಲಿ ಕ್ರೀಡಾಕಮಲ ಧರಿಸಿದ್ದ. ಇನ್ನೊಂದು ಕೈಯಲ್ಲಿ ಕೊಳಲನ್ನು ಹಿಡಿದಿದ್ದ. ರಾಧೆ ಅವನನ್ನು ಕಂಡು ಗೋಪಿಯರೊಡನೆ ಸಂಭ್ರಮದಿಂದ ಎದ್ದು ಇದಿರುಗೊಂಡು ಪರಮಭಕ್ತಿಯಿಂದ ನಮಿಸಿದಳು, ಸ್ತುತಿಸಿದಳು -

'ಇಂದು ನನ್ನ ಜನ್ಮ ಸಫಲವಾಯಿತು. ಬಾಳು ಬಂಗಾರವಾಯಿತು. ನಿನ್ನ ಮುಖ ಚಂದ್ರಮನನ್ನು ಕಂಡು ಕಣ್ಣು ತಂಪಾಯಿತು. ಪ್ರಾಣ ಹಗುರಾಯಿತು. ಜೀವ ಚೈತನ್ಯ ತುಂಬಿತು. ಬಂಧುಗಳ ಅನ್ಯೋನ್ಯ ದರ್ಶನವೆ ಹೀಗೆ. ಇಬ್ಬರಿಗೂ ಹರ್ಷದಾಯಕ. ನಾನು ವಿರಹಾಗ್ನಿಯಲ್ಲಿ ಬೆಂದಿದ್ದೆ. ಶೋಕಸಾಗರದಲ್ಲಿ ಮುಳುಗಿದ್ದೆ. ಈಗ ನಿನ್ನ ದರ್ಶನದ ಅಮೃತ ಸೇಚನೆಯಿಂದ ತಂಪಾಯಿತು. ನಾನು ನಿನ್ನೊಡನೆ ಇದ್ದರೆ ಮಂಗಳಸ್ವರೂಪಳು ಮಂಗಳದಾಯಕಳು ಮಂಗಳಕಾರಣಳು. ನಿನ್ನನ್ನು ಬಿಟ್ಟರೆ ನಿಶ್ಶೇಷಳಾಗುತ್ತೇನೆ. ದೇಹದಲ್ಲಿ ನೀನು ಇದ್ದರೆ ಮಾತ್ರ

ದೇಹಿಕಾಂತಿಯುಕ್ತನಾಗಿರುತ್ತಾನೆ. ಶುಚಿಯಾಗಿರುತ್ತಾನೆ. ನೀನು ಹೊರಟು ಹೋದರೆ ಕಾಂತಿಹೀನ, ಅಶುಚಿ. ಸಾಮಾನ್ಯ ಸ್ತ್ರೀಪುರುಷರ ವಿಯೋಗವೂ ಬಲು ದಾರುಣವಾಗಿರುತ್ತದೆ. ಜೀವನಿಗೆ ಪರಮಾತ್ಮನ ವಿಯೋಗವಾದರೆ ಏನು ಹೇಳಬೇಕು? ಪ್ರಾಣಗಳೆ ಹೊರಟು ಹೋಗುತ್ತವೆ.'

ಹೀಗೆ ಹೇಳಿ ರಾಧೆ ಪರಮಾತ್ಮನ ಪಾದವನ್ನು ಪೂಜಿಸಿ ತನ್ನ ಆಸನದಲ್ಲಿ ಕುಳ್ಳಿರಿಸಿಕೊಂಡಳು. ರತ್ನಸಿಂಹಾಸನದಲ್ಲಿ ರಾಧೆಯೊಂದಿಗೆ ಕುಳಿತ ಕೃಷ್ಣನನ್ನು ಗೋಪಿಯರು ಬಿಳಿಚಾಮರ ಬೀಸಿ ಸೇವಿಸಿದರು. ಚಂದನೆ ಅವನಿಗೆ ಚಂದನ ಬಳಿದಳು. ರತ್ನಮಾಲೆ ರತ್ನಮಾಲೆ ಹಾಕಿದಳು. ಪದ್ಮಾವತಿ ಪಾದಪದ್ಮದಲ್ಲಿ ಜಲಯುಕ್ತವಾದ ದೂರ್ವೆ ಪುಷ್ಪ ಚಂದನಗಳ ಅರ್ಘ್ಯ ನೀಡಿದಳು. ಮಾಲತಿ ಮಾಲತೀಮಾಲೆಯನ್ನು ತಲೆಯಲ್ಲಿಟ್ಟಳು. ಚಂಪಾವತಿ ಸಂಪಿಗೆ ಹೂ ನೀಡಿದಳು. ಪಾರಿಜಾತೆ ಪಾರಿಜಾತದ ಹೂ ನೀಡಿದಳು. ಕದಂಬಮಾಲೆ ಕದಂಬಮಾಲೆ ಇತ್ತಳು. ಕಮಲೆ ಕ್ರೀಡಾಕಮಲವನ್ನೂ ರತ್ನಕನ್ನಡಿಯನ್ನೂ ನೀಡಿದಳು. ಸುಂದರಿ ವರುಣದತ್ತವಾದ, ಗೋರೋಚನ ವರ್ಣದ ಸುಂದರವಾದ ಜೋಡಿವಸ್ತ್ರವಿತ್ತಳು. ಸುಧಾಮುಖಿ ಸುಧಾಪೂರ್ಣ ಪಾತ್ರೆಯನ್ನು ನೀಡಿದಳು. ಮುತ್ತು ಮಾಣಿಕ್ಯ ವಜ್ರ ಮುಂತಾದ ರತ್ನಹಾರಗಳಿಂದ ಅಲಂಕೃತವಾದ ರತ್ನಖಚಿತ ಮಂದಿರದಲ್ಲಿ ಚಂದನಲಿಪ್ತವಾದ ಜಾಜಿಹೂಮಾಲೆಗಳಿಂದ ಅಲಂಕೃತವಾದ ರತಿಶಯ್ಯೆಯನ್ನು ಗೋಪಿಯರು ಸಿದ್ಧಪಡಿಸಿದರು. ಕಸ್ತೂರೀ ಕುಂಕುಮ ಪರಿಮಳದಿಂದ ರತಿಮಂದಿರವನ್ನು ಸುಗಂಧಪೂರ್ಣವನ್ನಾಗಿಸಿದರು. ನಾನಾ ವಿಧದ ಧೂಪ ಹಾಕಿದರು. ನೂರಾರು ರತ್ನದೀಪಗಳಿಂದ ಉಜ್ವಲವಾಗಿ ಬೆಳಗಿಸಿದರು. ಹೀಗೆ ರತಿ ಮಂದಿರವನ್ನು ಸಜ್ಜುಗೊಳಿಸಿ ಗೋಪಿಯರು ಹೊರಟು ಹೋದರು.

ಶ್ರೀಕೃಷ್ಣ ರಾಧೆಯೊಡನೆ ಏಕಾಂತದಲ್ಲಿ ರತಿಮಂದಿರ ಪ್ರವೇಶಿಸಿ ನಾನಾ ಬಗೆಯಿಂದ ಹಾಸ ಪರಿಹಾಸಗಳನ್ನು ನಡೆಸಿದ. ರಾಧೆ ಕೃಷ್ಣನಿಗೆ ಹೂಮಾಲೆ ಹಾಕಿದಳು. ತಾಂಬೂಲ ನೀಡಿದಳು. ಕಸ್ತೂರಿ ಕುಂಕುಮ ಯುಕ್ತವಾದ ಚಂದನವನ್ನು ಎದೆಗೆ ಬಳಿದಳು. ಸಂಪಿಗೆ ಹೂವನ್ನು ತಲೆಗೆ ಮುಡಿಸಿದಳು. ಸಾವಿರ ದಳಗಳುಳ್ಳ ಕ್ರೀಡಾ ಕಮಲವನ್ನು ಕೈಗಿತ್ತಳು. ಕೈಯಲ್ಲಿದ್ದ ಕೊಳಲನ್ನು ಆಚೆಗೆ ಎತ್ತಿ ಇಟ್ಟು ರತ್ನಕನ್ನಡಿ ಇತ್ತಳು. ಪಾರಿಜಾತದ ಹೂವನ್ನೂ ಕೊಟ್ಟು ನಗುನಗುತ್ತ ಸವಿನುಡಿಗಳಿಂದ ಕಾಂತನನ್ನು ಏಕಾಂತದಲ್ಲಿ ಉಪಚರಿಸಿದಳು.

'ಮಂಗಳಸ್ವರೂಪ ಮಂಗಳಾಶ್ರಯ ನೀನು. ಮಂಗಳಕಾರಣ, ಮಂಗಳ ದಾಯಕ ನೀನೆ. ನಿನ್ನಲ್ಲಿ 'ಮಂಗಳವೆ?' ಎಂದು ಕೇಳುವುದೆ ವ್ಯರ್ಥ. ಆದರೂ ಕಾಲೋಚಿತವಾಗಿ ಕುಶಲ ಪ್ರಶ್ನೆ ಮಾಡುತ್ತೇನೆ. ವೇದವಿಧಿಗಿಂತಲೂ ಲೌಕಿಕ ವ್ಯವಹಾರ ಮುಖ್ಯ ತಾನೆ?

ರುಕ್ಮಿಣೀರಮಣ! ಸತ್ಯಭಾಮಾಪತಿ! ನಿನಗೆ ಮಂಗಳವೆ? ಸತ್ಯಭಾಮೆಯ ಅಪೇಕ್ಷೆಯಂತೆ ನೀನು ಅಮರಾವತಿಗೆ ಹೋಗಿ ಇಂದ್ರನೊಡನೆ ಸೆಣಸಿ ಪಾರಿಜಾತ ವೃಕ್ಷವನ್ನು ತಂದಿತ್ತೆಯಂತೆ! ಅವಳು ಆ ಪಾರಿಜಾತದಿಂದ ಪುಣ್ಯಕವ್ರತಮಾಡಿ ನಿನ್ನನ್ನೆ ದಕ್ಷಿಣೆಯಾಗಿ ನೀಡಿದಳಂತೆ! ಬ್ರಹ್ಮ ಶಿವ ಶೇಷ ಮುಂತಾದವರಾರಿಗೂ ಲಭ್ಯನಾಗದ

ನಿನ್ನನ್ನು ಆಕೆ ಎತ್ತಿ ದಕ್ಷಿಣೆಯಾಗಿತ್ತಳು, ಹೇಗೆ? ಬೇರೆ ಎಲ್ಲ ಪತ್ನಿಯರಿಗಿಂತಲೂ ಸತ್ಯಭಾಮೆಯನ್ನೆ ಹೆಚ್ಚು ಆದರಿಸುತ್ತಿರುವೆ. ಇನ್ನು ರುಕ್ಮಿಣಿಯ ಪ್ರೇಮ ಸೌಭಾಗ್ಯ ಗೌರವಗಳೂ ವಿಲಕ್ಷಣವಾದುವು. ಜಾಂಬವತಿಯೂ ನಿನಗೆ ಬಹಳ ಪ್ರಿಯಳು. ನನಗೆ ನಿಶ್ಚಯವಾಗಿ ಹೇಳು. ನಿನಗೆ ನಿನ್ನ ಕಾಂತೆಯರಲ್ಲಿ ಯಾರಲ್ಲಿ ಅಧಿಕಪ್ರೇಮ? ಶೃಂಗಾರದಲ್ಲಿಯೂ ಬೇರೆ ಎಲ್ಲ ವಿಷಯಗಳಲ್ಲಿಯೂ ಯಾರು ಹೆಚ್ಚು ನಿಪುಣೆ? ಯಾರಿಗೆ ನಿನ್ನಲ್ಲಿ ಹೆಚ್ಚು ಪ್ರೀತಿ? ಪತಿಯಲ್ಲಿ ಮನಃಪೂರ್ವಕವಾಗಿ ಅನುರಕ್ತಳಾದವಳೆ ಪತ್ನಿ. ಪತ್ನಿಯನ್ನು ಸಲಹುವವನೆ ಪತಿ. ಪತಿಪತ್ನಿಯರ ಅನ್ಯೋನ್ಯತೆ ವಿಲಕ್ಷಣವಾದುದು. ಮೂಲೋಕದಲ್ಲಿಯೂ ಅತ್ಯಂತ ದುರ್ಲಭವಾದುದು. ರಸಿಕಳೂ ಗುಣವತಿಯೂ ಆದ ಸತಿಯೆ ರಸಿಕನಾದ ರತಿಶೂರನಾದ ಪತಿಯನ್ನು ಅರಿಯಬಲ್ಲಳು.

**ದೂರಾದ್ ಧಾವತಿ ಪದ್ಮಾರ್ಥಂ ಮಧುಲೋಭಾನ್ಮಧುವ್ರತಃ ।**
**ಭೇಕಸ್ತನ್ನಹಿ ಜಾನಾತಿ ತನ್ಮೂರ್ಧ್ನಿ ಪಾದಮುತ್ಸೃಜೇತ್ ॥**

ಮಕರಂದದ ಆಸೆಯಿಂದ ದುಂಬಿ ಬಲು ದೂರದಿಂದ ಕಮಲದ ಕಡೆಗೆ ಹಾರಿ ಬರುತ್ತದೆ. ಆದರೆ ಅಲ್ಲಿಯೆ ಇರುವ ಕಪ್ಪೆ ಆ ಕಮಲವನ್ನು ಕಾಲಿಂದ ತುಳಿಯುತ್ತದೆ.

**ಯಂತ್ರೀ ಜಾನಾತಿ ಸಂಗೀತರಸಂ ಯಂತ್ರಂ ಚ ನೈವ ಚ ।**
**ದುಗ್ಧಾಸ್ವಾದಂ ವಿದಗ್ಧಶ್ಚ ನ ದರ್ವೀ ನೈವ ಭಾಜನಂ ॥**

ವಾದ್ಯಗಾರ ವಾದ್ಯಸಂಗೀತದ ಸವಿಯನ್ನು ಅರಿಯಬಲ್ಲ; ವಾದ್ಯ ಅರಿಯದು. ಹಾಲಿನ ಸವಿಯನ್ನು ಉಂಡವನೆ ಬಲ್ಲ. ಸವುಟು ಅರಿಯದು, ಪಾತ್ರೆಯೂ ಅರಿಯದು.

**ಪರಿಪಕ್ವಫಲಾಸ್ವಾದಂ ಜಾನಂತಿ ಭೋಗಿನಃ ಸುಖಂ ।**
**ಏಕತ್ರಾವಸ್ಥಿತಾಃ ಶಶ್ವನ್ನ ಕಿಂಚಿತ್ ಫಲಿನೋ ಯಥಾ ॥**

ಮಾಗಿದ ಹಣ್ಣಿನ ಸವಿಯನ್ನು ಉಂಡವರೆ ಬಲ್ಲರು. ಉಣದೆ ಸುಮ್ಮನೆ ನಿಂತವರು ಮರದ ಹಾಗೇ ಏನೂ ಅರಿಯಲಾರರು.

**ಸುಶೀತಲಜಲಾಸ್ವಾದಂ ವಿಜಾನಂತಿ ತೃಷಾವಲಾಃ**
**ನ ಚ ವಾಪೀ ನ ಚ ಘಟಶ್ಚೈಕತ್ರಾವಸ್ಥಿತೋ ಯಥಾ ।**

ತಂಪಾದ ನೀರಿನ ಸವಿಯನ್ನು ಬಾಯಾರಿದವರೇ ಅರಿಯಬಲ್ಲರು. ಬಾವಿ ಅರಿಯದು, ಬಿಂದಿಗೆಯೂ ಅರಿಯದು. ನೀರು ಕುಡಿಯದೆ ಒಂದೆಡೆ ನಿಂತವನೂ ಹಾಗೇ.

**ಭೋಗಿನೋ ಹಿ ವಿಜಾನಂತಿ ಶಾಲಿ ಸ್ವಾದುರಸಂ ಪರಂ ।**
**ಏಕತ್ರಾವಸ್ಥಿತಂ ಚೇತ್ತು ನ ಕ್ಷೇತ್ರಂ ಭಾಜನಂ ಯಥಾ ॥**

ಅನ್ನದ ರುಚಿಯನ್ನು ಉಣ್ಣುವವರು ಅರಿಯುತ್ತಾರೆ. ಉಣದೆ ಒಂದೆಡೆ ಇದ್ದರೆ ಗದ್ದೆಯಂತೆ ಪಾತ್ರೆಯಂತೆ ಏನೂ ಅರಿಯರು.

**ಬುಬುಧೇ ಚಂದನಾಘ್ರಾಣಂ ಚಂದನಾರ್ಥೀ ಚ ಭೋಗವಿತ್ ।**
**ನ ಗರ್ದಭೋ ಭಾರವಾಹೀ ನ ತಸ್ಯ ಪಾತ್ರಿಕಾ ಯಥಾ ॥**

ಚಂದನದ ಪರಿಮಳವನ್ನು ಅದನ್ನು ಅಪೇಕ್ಷಿಸಿ ಅನುಭವಿಸುವವನೆ ಅರಿಯಬಲ್ಲ. ಚಂದನದ ಭಾರ ಹೊರುವ ಕತ್ತೆ ಚಂದನರಸದ ಪಾತ್ರೆಯಂತೆ ಏನೂ ಅರಿಯದು.

ವೇದಗಳೂ ಬ್ರಹ್ಮ ಶಿವ ಮುಂತಾದ ದೇವತೆಗಳೂ ಯೋಗಿಗಳಾದ ಮುನಿಗಳೂ ಸಿದ್ಧರೂ ನಿನ್ನನ್ನು ಅರಿಯಲಾರರು. ಸ್ತ್ರೀಯರು ಏನು ಅರಿಯಬಲ್ಲರು? ಸೌಭಾಗ್ಯ ಗೌರವ ಪ್ರೇಮಗಳು ದುರ್ಲಭ, ನಿತ್ಯನೂತನ. ಸ್ತ್ರೀಯರಿಗೆ ಅದಕ್ಕಿಂತ ಹೆಚ್ಚಿನದು ಬೇರೆ ಇಲ್ಲ. ಆದರೆ ನನ್ನಲ್ಲಿ ಅದೆಲ್ಲವೂ ಕ್ಷಣದಲ್ಲಿ ಒಡೆದು ಚೂರಾಯಿತು. ಪ್ರಭು, ಅತಿಯಾಗಿ ಮೇಲೇರಿದವರು ಅವಶ್ಯ ಬೀಳುತ್ತಾರೆ. ವಿಷ್ಣುಭಕ್ತರಿಗೆ ನೋವು ಉಂಟುಮಾಡಿದರೆ ಅದು ಬೇಗನೆ ಆಪತ್ತನ್ನು ತಂದೊಡ್ಡುತ್ತದೆ. ನಿನ್ನ ಭಕ್ತನಾದ ಶ್ರೀದಾಮನಿಗೆ ನಾನು ಶಾಪವಿತ್ತೆ. ಅದರ ಫಲವಾಗಿ ಪುತ್ರನಾದ ಆ ಶ್ರೀದಾಮನ ಶಾಪದಿಂದಲೆ ನಾನು ಇಂಥ ಆಪತ್ತಿಗೊಳಗಾದೆ. ಪರಮಾತ್ಮ ಯಾರಿಗೆ ಬಂಧು? ಯಾರಿಗೆ ಪ್ರಿಯ ಅಥವಾ ಅಪ್ರಿಯ? ಭಕ್ತಿಗೆ ಮಾತ್ರ ಅವನು ಲಭ್ಯ. ಯಾರು ಭಕ್ತನೊ ಅವನು ಭಗವಂತನನ್ನು ವಶದಲ್ಲಿಟ್ಟುಕೊಳ್ಳಬಲ್ಲ. ವೇದಗಳೂ ವೇದವೇತ್ತರೂ ಸಜ್ಜನರೂ ಪುರಾಣಗಳೂ ಮಾಧವ ರಾಧೆಗೆ ವಶನೆಂದು ಹೇಳುವುದೆಲ್ಲ ಸುಳ್ಳು.

ಶಿವನನ್ನೂ ಅವನ ಗಣಗಳನ್ನೂ ಗೆದ್ದು ಬಾಣನ ಬಾಹುಗಳನ್ನೂ ಕತ್ತರಿಸಿ ರುಕ್ಮಿಣಿಯ ಮೊಮ್ಮಗನಾದ ಅನಿರುದ್ಧನನ್ನು ಪತ್ನೀಸಮೇತ ದ್ವಾರಕೆಗೆ ಕರೆತಂದಾಗ ರುಕ್ಮಿಣಿ ಏನು ಹೇಳಿದಳು? ನಿನ್ನ ಪ್ರೇಮ ಆಗ ಸಮಾನವಾಗಿಯೆ ಇದ್ದಿತೆ? ಗೌರವ ಹೆಚ್ಚಿತೆ?

ಕೌರವ ಪಾಂಡವರ ಯುದ್ಧದಲ್ಲಿ ನೀನು ಕೌರವರನ್ನು ಕೊಂದೆ. ಅದು ಪಾಂಡವರಿಗಾಗಿ. ಹಾಗಾದರೆ ಪರಮಾತ್ಮನಾದ ನಿನಗೆ ಸಾಮ್ಯವೆಲ್ಲಿಯದು? ಇಂದ್ರನ ಮಗನಾದ ಅರ್ಜುನನಿಗೆ ಎಲ್ಲ ರಾಜರೂ ನೋಡುತ್ತಿದ್ದಂತೆ ಸಾರಥಿಯಾದೆ. ಶುದ್ಧ ಭಕ್ತನಾದ ಮಹಾತ್ಮ ಭೀಷ್ಮ ನಾಚಿದ. ದೊಡ್ಡಸಭೆಗಳಲ್ಲಿ ಆತನೇನೆಂದ? ದೇವತೆಗಳೂ ಬ್ರಹ್ಮ ರುದ್ರ ಶೇಷ ಮುಂತಾದವರೂ ಹೇಗೆ ನೋಡಿದರು? ಭಕ್ತರಾದ ವೀರರೆಲ್ಲರೂ ಸತ್ತರು. ಯಾರೂ ಏನೂ ಹೇಳಲಿಲ್ಲ. ನಾಲ್ಕು ವೇದಗಳಲ್ಲಿಯೂ ಪುರಾಣ ಇತಿಹಾಸಗಳಲ್ಲಿಯೂ ನೀನು ಇಂಥವನೆಂದು ಹೇಳಲು ಶಕ್ಯವಿಲ್ಲ. ನೀನು ಪ್ರಕೃತಿಯಿಂದ ಆಚೆ ಇರುವವ. ನಿರ್ಗುಣ, ಕರ್ಮಲೇಪವಿಲ್ಲದವ, ಕರ್ಮಸಾಕ್ಷಿ, ಭಕ್ತರಿಗೆ ಅನುಗ್ರಹಿಸಲೆಂದೆ ಅವತರಿಸುವವ. ಪರಬ್ರಹ್ಮ, ಪರಂಜ್ಯೋತಿ ಪರಮೇಶ್ವರ ಪರಾತ್ಪರ, ಪರಮಾತ್ಮ, ಆದರೂ ಒಬ್ಬ ನರನ ರಥದಲ್ಲಿ ಸೂತನಾದೆ. ಕುಬ್ಜೆ ವಯಸ್ಸಾದವಳು, ಕ್ಷತ್ರಿಯನೊಬ್ಬನ ಹೆಂಡತಿ, ಮಕ್ಕಳಿಲ್ಲದವಳು. ಗೂನುಬೆನ್ನಿನವಳು, ಯುವಕರಿಗೆ ಅಸ್ಪೃಶ್ಯಳು. ಅಂಥವಳನ್ನು ನೀನು ಕೂಡಿದೆ. ಸೋದರಮಾವನಾದ ಕಂಸನನ್ನು ಕೊಂದುದೇಕೆ? ಬಿಲ್ಲಹಬ್ಬ ಮುಗಿಸಿ ಮತ್ತೆ ಬರುತ್ತಾನೆ ಗೋಪಿಯರು ಎಂದು ತಿಳಿದಿದ್ದರೆ ಹೊರಟು ಹೋದವ ತಿರುಗಿ ಬರಲೆ ಇಲ್ಲ, ಏಕೆ?'

ಹೀಗೆ ಹೇಳಿ ರಾಧೆ ಗಟ್ಟಿಯಾಗಿ ಅತ್ತಳು. ಮೂರ್ಛೆಹೊಂದಿದಳು. ಶ್ವಾಸೋಚ್ಛ್ವಾಸವನ್ನೂ ನಿಲ್ಲಿಸಿದಳು. ಗೋಪಿಯರು ಗವಾಕ್ಷಿಗಳಲ್ಲಿ ಇಣಿಕಿ ನೋಡಿದರು. ಗಟ್ಟಿಯಾಗಿ ಅಳುತ್ತ ಬಂದು ರಾಧೆಯನ್ನು ತಬ್ಬಿಕೊಂಡರು. 'ಕಾಪಾಡು, ಕಾಪಾಡು, ಹರಿ! ನರಹರಿ! ಪ್ರಭು!' ಎಂದರು.

'ಏನು ಮಾಡಿದಿ, ಏನು ಮಾಡಿದಿ, ಕೃಷ್ಣ? ನಿನ್ನಿಂದಾಗಿ ನಮ್ಮ ರಾಧೆ ಸತ್ತಳು. ಅವಳನ್ನು ಬದುಕಿಸು. ಇಲ್ಲದಿದ್ದರೆ, ನಿನಗೆ ಒಳ್ಳೆಯದಾಗಲಿ, ನಾವೆಲ್ಲ ಕಾಡಿಗೆ ಹೋಗುತ್ತೇವೆ. ಸ್ತ್ರೀವಧೆಯ ದೋಷ ನಿನಗೆ ಬರಲಿ ಎನ್ನುತ್ತೇವೆ' ಎಂದರು. ಶ್ರೀಕೃಷ್ಣ ಒಡನೆ ರಾಧೆಯನ್ನು ಅಮೃತಮಯ ದೃಷ್ಟಿಯಿಂದ ಚೇತನಗೊಳಿಸಿದ. ಅವಳು ಅಳುತ್ತ ಮೇಲೆದ್ದಳು. ಗೋಪಿಯರು ಅವಳನ್ನು ಅಪ್ಪಿಕೊಂಡು ಸಂತೈಸಿದರು. ಕೃಷ್ಣ ರಾಧೆಗೆ ಬೋಧಿಸಿದ -

'ರಾಧೆ, ಅಧ್ಯಾತ್ಮದ ಬಗ್ಗೆ ಹೇಳುತ್ತೇನೆ, ಕೇಳು. ಅದನ್ನು ತಿಳಿದರೆ ಮೂರ್ಖನೂ ಪಂಡಿತನಾಗಬಲ್ಲ. ನಾನು ಜಗತ್ತಿಗಿಂತ ವಿಲಕ್ಷಣ, ಜಗತ್ತಿಗೇ ಸ್ವಾಮಿ. ರುಕ್ಮಿಣಿ ಮುಂತಾದ ಸ್ತ್ರೀಯರಿಗೆ ಮಾತ್ರವೇನು? ಕಾರ್ಯಕಾರಣಗಳಲ್ಲಿ ಕಾರ್ಯಕಾರಣ ರೂಪದಿಂದ ವ್ಯಕ್ತನಾಗಿ ಬೇರೆಬೇರೆಯಾಗಿ ಕಾಣುತ್ತೇನೆ. ಬ್ರಹ್ಮನಿಂದ ತೊಡಗಿ ತೃಣದವರೆಗೂ ಎಲ್ಲ ಪ್ರಾಣಿಗಳಲ್ಲಿಯೂ ಒಬ್ಬನೆ ನಾನು ವ್ಯಕ್ತನಾಗುತ್ತೇನೆ. ಆ ಪ್ರಾಣಿಗಳು ನನಗಿಂತ ಬೇರೆಯೆ. ಏಕೆಂದರೆ ಒಬ್ಬ ಉಂಡರೆ ಇನ್ನೊಬ್ಬನಿಗೆ ತೃಪ್ತಿಯಾಗದು. ಒಬ್ಬನ ಶರೀರದಿಂದ ನಾನು ಹೊರಟರೆ ಅವನು ಸಾಯುತ್ತಾನೆ. ಇನ್ನೊಬ್ಬ ಬದುಕಿರುತ್ತಾನೆ.

ಸ್ವಾಭಾವಿಕವಾಗಿ ನಾನು ಪರಿಪೂರ್ಣ ಕೃಷ್ಣರೂಪನಾಗಿ ಗೋಲೋಕದ ಗೋಕುಲ ವೃಂದಾವನಗಳಲ್ಲಿರುತ್ತೇನೆ. ಎರಡು ತೋಳಿನವನು. ಗೋಪವೇಷದವನು. ಸಣ್ಣ ಮಗುವಾಗಿ ರಾಧಾರಮಣನಾಗಿರುತ್ತೇನೆ. ಗೋಪಗೋಪಿಯರ, ಕಾಮಧೇನುಗಳ ನಡುವೆ ಇರುತ್ತೇನೆ. ವೈಕುಂಠದಲ್ಲಿ ನಾನೆ ಚತುರ್ಭುಜ ರೂಪದಿಂದ ಇರುತ್ತೇನೆ. ಲಕ್ಷ್ಮೀ ಸರಸ್ವತೀ ರಮಣನಾಗಿರುತ್ತೇನೆ. ಕ್ಷೀರಸಮುದ್ರದ ಶ್ವೇತದ್ವೀಪದಲ್ಲಿಯೂ ನಾನೇ ಚತುರ್ಭುಜ ಲಕ್ಷ್ಮೀರಮಣ. ನಾರಾಯಣಋಷಿಯೂ ನಾನೆ. ಲಕ್ಷ್ಮೀಸ್ವರೂಪಳಾದ ಶಾಂತಿಗೆ ಪತಿಯೂ ನಾನೆ. ಸಿದ್ಧೇಶ್ವರಕಪಿಲಮುನಿಯೂ ನಾನೆ. ದ್ವಾರಾವತಿಯಲ್ಲಿಯೂ ನಾನೆ ನಾನಾರೂಪ ಧರಿಸಿ ಇರುತ್ತೇನೆ. ರುಕ್ಮಿಣಿ ಸತ್ಯಭಾಮೆ ಮುಂತಾದವರ ಮನೆಗಳಲ್ಲಿ ನಾನೆ ನಾನಾರೂಪಗಳಿಂದ ಸದಾ ಇರುತ್ತೇನೆ.

ನಾರಾಯಣಋಷಿಯೆ ನಾನು ಅರ್ಜುನನ ಸಾರಥಿಯಾದೆ. ಏಕೆಂದರೆ ಅರ್ಜುನ ನರಾವತಾರ. ನರನು ಧರ್ಮಪುತ್ರ. ಅವನು ಪುಷ್ಕರದಲ್ಲಿ ತಪಸ್ಸು ಮಾಡಿ ನನ್ನಿಂದ ಸಾರಥ್ಯದ ವರ ಪಡೆದಿದ್ದಾನೆ.

ನೀನೂ ಗೋಲೋಕದ ಗೋಕುಲದಲ್ಲಿ ರಾಧೆಯಾಗಿಯೂ ವೈಕುಂಠದಲ್ಲಿ ಮಹಾಲಕ್ಷ್ಮಿ ಸರಸ್ವತಿಯರಾಗಿಯೂ ಶ್ವೇತದ್ವೀಪದಲ್ಲಿ ಮರ್ತ್ಯಲಕ್ಷ್ಮಿಯಾಗಿಯೂ ಇರುವಿ. ಕಪಿಲಮುನಿಯ ಪತ್ನಿಯಾಗಿಯೂ ಭಾರತದಲ್ಲಿರುವಿ. ಮಿಥಿಲೆಯಲ್ಲಿ ಉದ್ಭವಿಸಿದ ಸೀತೆಯೂ ನೀನೆ. ರಾವಣ ಅಪಹರಿಸಿದ್ದು ನಿನ್ನನ್ನೇ. ದ್ವಾರಾವತಿಯಲ್ಲಿ ಮಹಾಲಕ್ಷ್ಮಿ ನೀನು ರುಕ್ಮಿಣಿಯಾಗಿರುವಿ. ಪಂಚಪಾಂಡವರ ಪತ್ನಿಯಾದ ದ್ರೌಪದಿ ನಿನ್ನ ಛಾಯೆ. ಹೀಗೆ ನೀನೂ ನಾನಾರೂಪದವಳು, ನಾನೂ ನಾನಾರೂಪಗಳುಳ್ಳವ. ರಾಧೆ, ಇದು ಅಧ್ಯಾತ್ಮ. ಆದರಿಂದ ನನ್ನನ್ನು ಕ್ಷಮಿಸು, ದೇವಿ!'' ಶ್ರೀಕೃಷ್ಣನ ಮಾತನ್ನು ಕೇಳಿ ರಾಧೆ ಸಂತುಷ್ಟಳಾದಳು. ಗೋಪಿಯರೂ ಸಂತುಷ್ಟರಾಗಿ ನಮಿಸಿದರು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ನೂರ ಇಪ್ಪತ್ತಾರನೆ ಅಧ್ಯಾಯ ಮುಗಿಯಿತು.*

# ವೃಂದಾವನಕ್ಕೆ ಶ್ರೀಕೃಷ್ಣನ ಆಗಮನ

## ಅಧ್ಯಾಯ - ೧೨೭

**ನಾರಾಯಣಮುನಿ ನುಡಿದ:-** ಶ್ರೀಕೃಷ್ಣನ ಮಾತನ್ನು ಕೇಳಿ ಸಂತುಷ್ಟರಾದ ಗೋಪಿಯರು ರಾಧೆಗೂ ಕೃಷ್ಣನಿಗೂ ನಮಿಸಿ ತಮ್ಮ ಮನೆಗಳಿಗೆ ಹೊರಟುಹೋದರು. ರಾಧೆ ಕೃಷ್ಣನನ್ನು ಪ್ರಣಯಕಟಾಕ್ಷದಿಂದ ನೋಡುತ್ತ ಮುಗುಳು ನಗು ನಕ್ಕಳು. ಶೃಂಗಾರದ ಷೋಡಶಕಲೆಗಳನ್ನು ತೋರಿದಳು. ಗಂಧಮಾಲ್ಯಗಳನ್ನಿತ್ತು ಏಕಾಂತದ ನರ್ಮವಚನಗಳನ್ನಾಡಿದಳು. ಕೃಷ್ಣ ಅವಳನ್ನು ಬರಸೆಳೆದು ಅಪ್ಪಿ ತುಟಿಗಳಿಗೂ ಕೆನ್ನೆಗಳಿಗೂ ಗದ್ದಕ್ಕೂ ಚುಂಬಿಸಿದ. ರಾಧೆ ಕೃಷ್ಣನ ಮುಖವನ್ನು ಮುದ್ದಿಸಿ ತೋಳುಗಳಿಂದ ಬಳಸಿ ತಬ್ಬಿಕೊಂಡಳು. ಕೃಷ್ಣ ಕಾಮಶಾಸ್ತ್ರೋಕ್ತವಾದ ಷೋಡಶವಿಧ ಶೃಂಗಾರಕ್ರೀಡೆಯಾಡಿ ರಾಧೆಯ ಮೈಯೆಲ್ಲ ನಖಕ್ಷತ ಉಂಟುಮಾಡಿದ. ತುಟಿಗೆ ದಂತಕ್ಷತ ಉಂಟುಮಾಡಿದ. ಅವಳ ಮೈ ರೋಮಾಂಚಗೊಂಡಿತು. ಸುಖ ಸಂಭೋಗದಲ್ಲಿ ಮೈ ಮರೆತಳು. ಅರೆನಿದ್ದೆಯಿಂದ ಕಣ್ಣುಮುಚ್ಚಿ ಶ್ವಾಸೋಚ್ಛ್ವಾಸವನ್ನು ಮಾತ್ರ ಮಾಡತೊಡಗಿದಳು. ಅವಳು ಶೃಂಗಾರಕಲೆಯಲ್ಲಿ ಪ್ರವೀಣೆ. ಕೋಮಲಾಂಗಿ, ಪ್ರಾಣಕಾಂತನನ್ನು ತಬ್ಬಿಕೊಂಡರೆ ಶೀತಕಾಲದಲ್ಲಿ ಸುಖವಾದ ಬೆಚ್ಚನೆಯ ಸ್ಪರ್ಶನೀಡುವಳು. ಸೆಖೆಗಾಲದಲ್ಲಿ ತಂಪಿನ ಸ್ಪರ್ಶವನ್ನೆ ನೀಡುವಳು. ಕೋಗಿಲೆಯ ಧ್ವನಿ ಕೇಳಿ ರಾಧೆ ಎಚ್ಚೆತ್ತುಕೊಂಡಳು. ಹೆದರಿದಳು. ಅಪ್ಪಿಕೊಂಡು ದೈನ್ಯದಿಂದ ಬೇಡಿಕೊಂಡಳು-

'ನಾಥ, ವೃಂದಾವನದ ರಾಸಮಂಡಲಕ್ಕೆ ಹೋಗೋಣ. ಅಲ್ಲಿ ನೀರಾಟವಾಡೋಣ. ಉದ್ಯಾನಗಳಲ್ಲಿ ವಿಹರಿಸೋಣ. ಬಳಿಕ ಮಲಯಪರ್ವತದಲ್ಲಿಯೂ ಇನ್ನೂ ನಾನು ಕೇಳಿರದ ಏಕಾಂತ ಪ್ರದೇಶಗಳಲ್ಲಿಯೂ ನಿನ್ನೊಡನೆ ವಿಹರಿಸುವಾಸೆ ನನಗೆ.'

ಆ ರಾತ್ರಿ ಇಡೀ ಪ್ರಣಯಾಲಾಪದಲ್ಲಿಯೆ ಕಳೆಯಿತು. ಅರುಣೋದಯವಾದರೂ ರಾಧೆ ಮಾಧವನನ್ನು ಬಿಡಲೊಲ್ಲಳು. ಮಾಧವ ನಿತ್ಯಕರ್ಮದ ಕಾಲವೆಂದು ಪ್ರೀತಿಯ ಮಾತುಗಳಿಂದಲೆ ಎಚ್ಚರಿಸಿದ. ಬಳಿಕ ಪ್ರಾತಃಕಾಲದ ಕರ್ಮಗಳನ್ನು ಪೂರೈಸಿ ರಾಧೆಯೊಡನೆ ಮತ್ತು ಗೋಪಿಯರೊಡನೆ ರಥವೇರಿದ. ಆ ರಥ ಒಂದು ಯೋಜನ ವಿಸ್ತಾರವಾಗಿದ್ದು ಮುನ್ನೂರುಕೋಟಿ ಮನೆಗಳು ಅದರಲ್ಲಿ ಇದ್ದುವು! ಗೋಲೋಕದಿಂದಲೆ ಬಂದ ರಥವದು! ಸಾವಿರ ಚಕ್ರಗಳಿಂದ ಕೂಡಿತ್ತು. ಸಾವಿರ ಕುದುರೆಗಳು ಎಳೆಯುತ್ತಿದ್ದು ಮನೋವೇಗದಿಂದ ಓಡುತ್ತಿತ್ತು. ಮುತ್ತು ರತ್ನಮಯವಾದ ಮೂರುಕೋಟಿ ಕಂಬಗಳಿಂದ ಕೂಡಿತ್ತು. ರತ್ನಹಾರಗಳು ರತ್ನಕನ್ನಡಿಗಳು ಅಗ್ನಿಶುದ್ಧವಾದ ಬಟ್ಟೆಬರೆಗಳು ತುಂಬಿದ್ದುವು. ಒಂದುಲಕ್ಷ ಸುಂದರ ರೂಪವೇಷಗಳ ಗೋಪಿಯರು ಅದರಲ್ಲಿದ್ದರು. ಆ ರಥವನ್ನೇರಿ ಕೃಷ್ಣ ರಾತ್ರಿಯ ಬೆಳದಿಂಗಳಲ್ಲಿ ಸರೋವರ ಉಪವನಗಳಲ್ಲಿ ವಿಹರಿಸಿದ. ರಾಧೆಗೆ ಹೊಸ ಹೊಸ ಶೃಂಗಾರ ವಿಲಾಸಗಳನ್ನು ತೋರಿದ.

ಮುಂದೆ ದೇವಲೋಕದ ನಂದನವನದಲ್ಲಿಯೂ ಮೇರುಮಂದರಗಳ ಶಿಖರ ತಪ್ಪಲುಪ್ರದೇಶ ಗುಹೆಗಳು ಪುಷ್ಪೋದ್ಯಾನ ನದೀತೀರಗಳಲ್ಲಿಯೂ ಸಮುದ್ರ ತೀರ ಗಳಲ್ಲಿಯೂ ಸುಭದ್ರ ಪುಷ್ಪಭದ್ರ ನಾರಾಯಣ ಸರೋವರಗಳಲ್ಲಿಯೂ ವಾಯುವಿನ ವಾಸಸ್ಥಾನವಾದ ಮಲಯಾಚಲದಲ್ಲಿಯೂ ತ್ರಿಕೂಟ, ಭದ್ರಕೂಟ, ಪಂಚಕೂಟ, ಸುಕೂಟ ಮುಂತಾದ ಬೆಟ್ಟಗಳಲ್ಲಿಯೂ ಸಮುದ್ರದ್ವೀಪಗಳಲ್ಲಿಯೂ ವಿಹಾರಮಾಡಿ ಜಂಬೂದ್ವೀಪಕ್ಕೆ ಹಿಂತಿರುಗಿ ಬಂದ. ದ್ವಾರಕೆಯನ್ನೂ ರೈವತ ಪರ್ವತವನ್ನು ತೋರಿದ. ತಿರುಗಿ ಗೋಕುಲಕ್ಕೆ ಬಂದು ಭಾಂಡೀರವನ್ನೂ ವೃಂದಾವನವನ್ನು ಪ್ರವೇಶಿಸಿದ. ಅಲ್ಲಿ ನಂದಯಶೋದೆಯರೂ ಗೋಪಗೋಪಿಯರೂ, ಆನೆ ವೇಶ್ಯೆ ನಟನರ್ತಕರು ಸುಮಂಗಲಿಯರು ಬ್ರಾಹ್ಮಣರು ಎಲ್ಲರನ್ನೂ ಮುಂದೆ ಮಾಡಿಕೊಂಡು ರಾಧಾಮಾಧವರನ್ನು ಇದಿರುಗೊಂಡರು. ಬಾಲಕೃಷ್ಣ ನಗುತ್ತ ತಾಯಿಯ ತೊಡೆಏರಿದ. ಸ್ತನಪಾನ ಮಾಡಿದ. ತಾಯಿತಂದೆಯರಿಬ್ಬರೂ ಕೃಷ್ಣನನ್ನು ಅಪ್ಪಿ ಮುದ್ದಿಕ್ಕಿ ಆನಂದಬಾಷ್ಪದಿಂದ ತೋಯಿಸಿದರು. ಗೋಕುಲದಿಂದ ಮಧುರೆಗೆ ಹೋಗುವಾಗ ಹೇಗೋ ಹಾಗೇ ಈಗಲೂ ಕೃಷ್ಣ ಹನ್ನೊಂದು ವರ್ಷ ವಯಸ್ಸಿನವನಂತೆಯೇ ಕಾಣುತ್ತಿದ್ದ. ಪೀತಾಂಬರ ಉಟ್ಟು ರತ್ನಾಭರಣ ತೊಟ್ಟು ತಲೆಯ ಮೇಲೆ ನವಿಲಗರಿ ಇಟ್ಟುಕೊಂಡಿದ್ದ. ಜಾಜಿಯ ಮಾಲೆಗಳನ್ನು ಧರಿಸಿದ್ದ. ರಾಧೆಯೊಡನೆ ಆತ ಮಂದಿರವನ್ನು ಪ್ರವೇಶಿಸಿದ. ಯಶೋದೆ ಮಂಗಳ ಮಾಡಿಸಿದಳು. ಬ್ರಾಹ್ಮಣರನ್ನೂ ಭೋಜನ ಮಾಡಿಸಿದಳು. ಗೋಪಿಯರಿಗೂ ಮಣಿ ರತ್ನ ಹವಳ ಚಿನ್ನಗಳನ್ನು ಕೊಟ್ಟಳು. ಬ್ರಾಹ್ಮಣರಿಗೂ ಮುತ್ತು ಮಾಣಿಕ್ಯ ವಜ್ರಗಳನ್ನೂ ಆನೆ ಕುದುರೆ ಗೋವುಗಳನ್ನೂ ಆಸನ ಪಾತ್ರೆ ಆಭರಣ ಧಾನ್ಯ ಸಸ್ಯ ವಸ್ತ್ರಗಳನ್ನೂ ನೀಡಿದಳು. ರಾಧಾಮಾಧವರಿಗೆ ಅಪೂರ್ವ ಆದರದ ಸತ್ಕಾರಗಳನ್ನು ನಡೆಸಿದಳು. ಗೋಪಿಯರಿಗೂ ಮಿಷ್ಟಾನ್ನ ಉಣಿಸಿದಳು. ದುಂದುಭಿ ಘೋಷದೊಂದಿಗೆ ದೇವತೆಗಳಿಗೆ ಸಂತರ್ಪಣೆ ಮಾಡಿ ಮಂಗಳ ಕಾರ್ಯ ನಡೆಸಿದಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ನೂರಇಪ್ಪತ್ತೇಳನೆ ಅಧ್ಯಾಯ ಮುಗಿಯಿತು*

—o—

## ರಾಧೆಯ ಗೋಲೋಕಾರೋಹಣ

## ಅಧ್ಯಾಯ - ೧೨೮

**ನಾರಾಯಣ ಮುನಿ:-** ಶ್ರೀಕೃಷ್ಣ ಭಾಂಡೀರ ವಟವೃಕ್ಷದ ಬುಡದಲ್ಲಿ ಕುಳಿತು ಗೋಪಗೋಪಿಯರನ್ನು ಕರೆಸಿಕೊಂಡ. ಹಿಂದೆ ಮುನಿಪತ್ನಿಯರು ಅನ್ನ ನೀಡಿದ ಸ್ಥಳವೆ ಇದು. ಅಲ್ಲಿ ಕೃಷ್ಣನ ಎಡಪಾರ್ಶ್ವದಲ್ಲಿ ರಾಧೆ ಕುಳಿತಳು. ಬಲಪಾರ್ಶ್ವದಲ್ಲಿ ನಂದ ಯಶೋದೆಯರು. ಅವರ ಬಲಭಾಗದಲ್ಲಿ ವೃಷಭಾನು ಕಲಾವತಿಯರು, ಬೇರೆ ಗೋಪಗೋಪಿಯರು ಬಂಧು-ಮಿತ್ರರು ಎಲ್ಲರೂ ಕುಳಿತರು. ಆಗ ಭಗವಂತ ನುಡಿದ-

'ನಂದ, ನಾನು ಹೇಳುವುದನ್ನು ಕೇಳು. ಇದು ಸಮಯೋಚಿತ. ಸತ್ಯ, ಪಾರಮಾರ್ಥಿಕ, ಪರಲೋಕದಲ್ಲಿ ಸುಖದಾಯಕ. ಬ್ರಹ್ಮನಿಂದ ತೊಡಗಿ ಹುಲ್ಲುಕಡ್ಡಿಯವರೆಗೂ ಎಲ್ಲವೂ ಸ್ಥಿರವೆಂಬುದು ಭ್ರಮೆ. ಮಿಂಚಿನ ಬೆಳಕಿನಂತೆ, ನೀರಲ್ಲಿ ಬರೆದ ರೇಖೆಯಂತೆ, ನೀರ ಮೇಲಿನ ಗುಳ್ಳೆಯಂತೆ ಎಲ್ಲವೂ ಕ್ಷಣಿಕ. ಇದರ ಬಗ್ಗೆ ಮಧುರೆಯಲ್ಲಿ ನಿನಗೆ ಎಲ್ಲವನ್ನೂ ಹೇಳಿದ್ದೇನೆ. ಯಶೋದೆಗೂ ಕದಲೀವನದಲ್ಲಿ ರಾಧೆ ಎಲ್ಲವನ್ನೂ ಉಪದೇಶಿಸಿದ್ದಾಳೆ. ಅದೇ ಪರಮಸತ್ಯ. ಭ್ರಾಂತಿ ಎಂಬ ಕತ್ತಲೆಗೆ ದೀಪದಂತೆ ಇರುವಂಥದ್ದು. ಬೇರೆ ಎಲ್ಲ ಸುಳ್ಳು, ಮಾಯೆ. ಅವುಗಳನ್ನು ಬಿಟ್ಟು ಪರಬ್ರಹ್ಮಸ್ವರೂಪವನ್ನು ಧ್ಯಾನಿಸು. ಅದೇ ಜನನ ಮರಣ ಜರೆ ವ್ಯಾಧಿಗಳನ್ನು ಕಳೆಯುವುದು. ಶೋಕಸಂತಾಪಗಳನ್ನು ಕಳೆಯುವುದು. ಕರ್ಮದ ಮೂಲವನ್ನು ಕತ್ತರಿಸುವುದು. ನನ್ನನ್ನೆ ಸನಾತನ ಪರಬ್ರಹ್ಮ ಭಗವಂತನೆಂದು ತಿಳಿದು ಮಗನೆಂಬ ಭಾವನೆಯನ್ನು ತೊರೆದು ಸದಾ ಧ್ಯಾನಿಸು. ಪರಮಪದವನ್ನೇರು. ಬೇಗನೆ ಗೋಕುಲವಾಸಿಗಳೊಡನೆ ಗೋಲೋಕವನ್ನು ಸೇರು.

ಕಲಿಯುಗ ಹತ್ತಿರದಲ್ಲಿಯೆ ಬರುತ್ತಿದೆ. ಈ ಯುಗದಲ್ಲಿ ಸ್ತ್ರೀಪುರುಷ ನಿಯಮವಿಲ್ಲ. ಜಾತಿನಿಯಮವಿಲ್ಲ. ಬ್ರಾಹ್ಮಣನಲ್ಲಿ ಸಂಧ್ಯಾದಿ ಕರ್ಮವಿರುವುದಿಲ್ಲ. ಬ್ರಾಹ್ಮಣನ ಚಿಹ್ನೆಯಾದ ಜನಿವಾರವೂ ಇರುವುದಿಲ್ಲ. ತಿಲಕವಿರುವುದಿಲ್ಲ. ಎಲ್ಲ ಧರ್ಮಕರ್ಮಗಳೂ ಲುಪ್ತವಾಗಿರುತ್ತವೆ. ಹಗಲೂ ಸ್ತ್ರೀಯೊಡನೆ ಕ್ರೀಡಿಸುತ್ತಾರೆ. ಯಜ್ಞವ್ರತ ತಪಸ್ಸುಗಳು ಇಲ್ಲವಾಗುತ್ತವೆ. ಸ್ತ್ರೀಯರುಸ್ವಚ್ಛಂದಗಾಮಿನಿಯರು. ಪತಿ ಅವರಿಗೆ ವಶನಾಗಿರುತ್ತಾನೆ. ಅವನನ್ನು ಅವರು ಹಗಲೂ ರಾತ್ರಿಯೂ ಹೊಡೆಯುತ್ತಾರೆ. ಗದರಿಸುತ್ತಾರೆ. ಮನೆಯಲ್ಲಿ ಸ್ತ್ರೀಯರಿಗೇ ಪ್ರಾಧಾನ್ಯ. ಸ್ತ್ರೀಯರ ಕುಟುಂಬದವರಿಗೇ ಆದ್ಯತೆ. ಪತಿ ಅವರ ಭಕ್ತನಾಗಿದ್ದು ನಿರಂತರವೂ ಪರಾಭವ ಹೊಂದುತ್ತಾನೆ. ಕಲಿಯುಗದಲ್ಲಿ ನೀತಿಗೆಟ್ಟ ಸ್ತ್ರೀಯರು ಹೆಚ್ಚಾಗಿ ಪರಪುರುಷರ ಸೇವೆಯಲ್ಲಿಯೇ ಆಸಕ್ತರಾಗಿರುತ್ತಾರೆ. ಅವರಿಗೆ ಆ ಪರಪುರುಷ ನೂರು ಮಕ್ಕಳಿಗಿಂತ ಹೆಚ್ಚೆನಿಸುತ್ತಾನೆ. ಅವನಿಗೇ ಆದರದಿಂದ ಭಕ್ಷ್ಯ ನೀಡುತ್ತಾಳೆ. ಪತಿಯನ್ನು ಕೆಲಸದ ಆಳು ಎಂಬ ದೃಷ್ಟಿಯಿಂದ ಕೋಪದಿಂದ ಕಾಣುತ್ತಾಳೆ. ಆದರೆ ಪರಪುರುಷನನ್ನು ನಗುಮೊಗದಿಂದ ಅಮೃತಸುರಿಸುವ ಕಡೆಗಣ್ಣ ನೋಟದಿಂದ ಆಸೆಯಿಂದ

ನೋಡುತ್ತಾಳೆ. ಅವಳ ಗೌರವ ಸ್ನೇಹಗಳೆಲ್ಲವೂ ಆ ಪರಪುರುಷನ ಬಂಧುಗಳಿಗೇ ಮೀಸಲು. ಪತಿಗೆ ಸದಾ ಕೈಯಿಂದ ಹೊಡೆಯುತ್ತಾಳೆ. ಅದೇ ಕೈಯಿಂದ ಪರಪುರುಷನಿಗೆ ಶ್ರದ್ಧಾಭಕ್ತಿಗಳಿಂದ ಮಿಷ್ಟಾನ್ನ ನೀಡುತ್ತಾಳೆ. ಒಳ್ಳೆಯ ಸುಂದರ ವೇಷ ತೊಟ್ಟು ಸದಾ ಅವನನ್ನು ಸೇವಿಸುತ್ತಾಳೆ. ಹೀಗೆ ಕಲಿಯುಗದಲ್ಲಿ ನೀತಿಗೆಟ್ಟ ಸ್ತ್ರೀಗೆ ಪ್ರಾಣ, ಬಂಧು, ಗತಿ, ಆತ್ಮ ಎಲ್ಲವೂ ಪರಪುರುಷನೇ ಆಗಿರುತ್ತಾನೆ.

ಕಲಿಯುಗದಲ್ಲಿ ಅತಿಥಿಸೇವೆ, ವಿಷ್ಣುಪೂಜೆ, ಪಿತೃಶ್ರಾದ್ಧ, ದೇವತಾರಾಧನೆ ಎಲ್ಲವೂ ಲುಪ್ತವಾಗುತ್ತವೆ. ಮಾನವ ವಿಷ್ಣುವೈಷ್ಣವರನ್ನು ಸದಾ ದ್ವೇಷಿಸುತ್ತಾನೆ. ವಾಮಾಚಾರದ ಮಂತ್ರಗಳನ್ನೇ ಉಪಾಸನ ಮಾಡುತ್ತಾನೆ. ಮ್ಲೇಚ್ಛಾಚಾರಗಳನ್ನು ನಡೆಸುತ್ತಾನೆ. ಶಾಲಗ್ರಾಮ ತುಲಸಿ ದರ್ಭೆ ಗಂಗಾಜಲಗಳನ್ನು ಸ್ಪರ್ಶಿಸಲಾರ. ಎಲ್ಲ ಕಾರಣಗಳಿಗೂ ಮೂಲಕಾರಣನಾದ, ಸರ್ವಸಂಪತ್ತುಗಳನ್ನು ಮೋಕ್ಷಸುಖವನ್ನು ನೀಡುವ ನನ್ನನ್ನು ಬಿಟ್ಟು ಕ್ಷುದ್ರ ಸಂಪತ್ತನ್ನು ನೀಡುವ, ವೇದವಿರುದ್ಧ ವಾಮಾಚಾರದ ಮಂತ್ರವನ್ನು ಬ್ರಾಹ್ಮಣ ಜಪಿಸುತ್ತಾನೆ. ವಿಷ್ಣುಮಾಯೆ ನನ್ನಾಜ್ಞೆಯಂತೆ ಅವನನ್ನು ವಂಚಿಸುತ್ತಾಳೆ. ಜಗತ್ತಿನಲ್ಲಿ ಅವಳನ್ನು ಮೀರಲು ಯಾರೂ ಸಮರ್ಥರಲ್ಲ. ಕಲಿಯುಗದಲ್ಲಿ ನನ್ನ ಪೂಜೆ ಹತ್ತುಸಾವಿರ ವರ್ಷಗಳವರೆಗೆ ನಡೆಯುತ್ತದೆ. ಗಂಗೆ ಐದುಸಾವಿರ ವರ್ಷಕಾಲ ಇರುತ್ತಾಳೆ. ಗಂಗೆ ಇರುವಷ್ಟು ಕಾಲ ತುಲಸಿ ಇರುತ್ತಾಳೆ. ವಿಷ್ಣುಭಕ್ತರಿರುತ್ತಾರೆ. ಪುರಾಣಗಳೂ ಸ್ವಲ್ಪವೇ ಇರುತ್ತವೆ. ಬಳಿಕ ಕಲಿಯುಗದಲ್ಲಿ ನನ್ನ ನಾಮಸಂಕೀರ್ತನೆ ಇರುವುದಿಲ್ಲ. ನಾಲ್ಕುವರ್ಣಗಳೂ ಒಂದೇ ಆಗಿರುತ್ತವೆ. ದುಷ್ಟರಾದ ಕಿರಾತರೆ ಬಲಿಷ್ಠರಾಗಿರುತ್ತಾರೆ. ಪಿತೃಸೇವೆ ಗುರುಸೇವೆ ದೇವಬ್ರಾಹ್ಮಣಸೇವೆ ಅತಿಥಿ ಸತ್ಕಾರಗಳೆಲ್ಲವನ್ನೂ ನರರು ಬಿಟ್ಟಿರುತ್ತಾರೆ.

ಕಲಿಯುಗದಲ್ಲಿ ನೆಲದ ಮೇಲೆ ಸಸ್ಯಗಳು ಬೆಳೆಯುವುದಿಲ್ಲ. ಮಳೆ ಇಲ್ಲ. ನದಿಗಳಲ್ಲಿ ನೀರಿಲ್ಲ. ಮರಗಳಲ್ಲಿ ಹೂ ಹಣ್ಣುಗಳಿಲ್ಲ. ಬ್ರಾಹ್ಮಣನಲ್ಲಿ ವೇದವಿಲ್ಲ. ರಾಜನಲ್ಲಿ ಬಲವಿಲ್ಲ. ಜನರಲ್ಲಿ ಜಾತಿ ಇಲ್ಲ. ಮ್ಲೇಚ್ಛನೆ ರಾಜನಾಗುತ್ತಾನೆ. ಮಗ ತಂದೆಯನ್ನು ಕೆಲಸದ ಆಳಿನಂತೆ ಕಂಡು ಹೊಡೆಯುತ್ತಾನೆ. ಶಿಷ್ಯ ಗುರುವಿಗೆ ಹೊಡೆಯುತ್ತಾನೆ. ಹೆಂಡತಿ ಗಂಡನನ್ನು ಹೊಡೆಯುತ್ತಾಳೆ. ಗೃಹಸ್ಥ ಕೋಳಿಯಂತೆ ಅಪವಿತ್ರ ಭೋಗವಸ್ತುಗಳನ್ನು ಆಶಿಸುತ್ತಾನೆ. ಕಲಿಯುಗದ ಕೊನೆಯಲ್ಲಿ ದ್ವಾದಶಸೂರ್ಯರ ಬಿಸಿಲಿನಲ್ಲೋ ನೀರಪ್ರವಾಹದಲ್ಲಿಯೋ ಪಾಪಿಗಳೆಲ್ಲರೂ ಸಾಯುತ್ತಾರೆ. ಭೂಮಿ ಹಾಗೇ ಇರುತ್ತದೆ. ಪುನಃ ಸತ್ಯಯುಗ ಬರುತ್ತದೆ. ಪುನಃ ಸೃಷ್ಟಿಯಾಗುತ್ತದೆ.

ಶ್ರೀಕೃಷ್ಣ ಹೀಗೆ ಹೇಳುತ್ತಿರುವಾಗ, ನಾಲ್ಕುಯೋಜನ ಉದ್ದಗಲ ಐದುಯೋಜನ ಎತ್ತರದ, ಶುದ್ಧಸ್ಫಟಿಕದಂತೆ ಬಿಳಿಯಾದ, ರತ್ನಖಚಿತವಾದ ಮನೋಹರವಾದ ಒಂದು ರಥ ಬಂದಿತು. ಬಾಡದ ಪಾರಿಜಾತದ ಮಾಲೆಗಳಿಂದ ಕೌಸ್ತುಭ ಮುಂತಾದ ಮಣಿಗಳಿಂದ ಅಲಂಕೃತವಾಗಿತ್ತು ಆ ರಥ, ಸಾವಿರಕೋಟಿ ಮನೆಗಳು ಅದರಲ್ಲಿ ಇದ್ದುವು. ಅಮೂಲ್ಯರತ್ನ ಕಲಶಗಳೂ ವಜ್ರಹಾರಗಳೂ

ತುಂಬಿದ್ದುವು. ಎರಡುಸಾವಿರ ಚಕ್ರಗಳು, ಎರಡುಸಾವಿರ ಕುದುರೆಗಳು. ತೆಳುವಾದ ಬಟ್ಟೆಯಿಂದ ಆವೃತವಾಗಿದ್ದು ಅನೇಕ ಕೋಟಿ ಗೋಪಿಯರಿಂದ ತುಂಬಿತ್ತು. ಗೋಲೋಕದಿಂದ ಬಂದಿದ್ದ ಆ ರಥವನ್ನು ಎಲ್ಲರೂ ಕಂಡರು. ಕೃಷ್ಣನ ಆಜ್ಞೆಯಂತೆ ಎಲ್ಲರೂ ಆ ರಥವನ್ನೇರಿದರು. ಅಯೋನಿಜೆಯರಾದ ರಾಧೆ, ಕಲಾವತಿ ಮತ್ತು ಗೋಲೋಕದಿಂದ ಬಂದ ಗೋಪಿಯರು ತಮ್ಮ ಶರೀರದಿಂದಲೆ ರಥವನ್ನು ಏರಿದರು. ಉಳಿದವರು ತಮ್ಮ ನಶ್ವರವಾದ ಶರೀರಗಳನ್ನು ತೊರೆದು ದಿವ್ಯಶರೀರದಿಂದ ರಥವೇರಿದರು. ರಾಧೆ ಎಲ್ಲರೊಡನೆ ಗೋಲೋಕಕ್ಕೆ ಹೋಗಿ ವಿರಜಾನದಿಯನ್ನು ದಾಟಿ ಶತಶೃಂಗವನ್ನು ಸೇರಿದಳು. ಅಲ್ಲಿ ನಾನಾಮಣಿಮಯವಾದ ರಾಸಮಂಡಲದಿಂದ ಅಲಂಕೃತವಾದ ವೃಂದಾವನವನ್ನೂ ಅದರಲ್ಲಿ ಮುನ್ನೂರು ಯೋಜನ ಎತ್ತರ ನೂರು ಯೋಜನ ವಿಸ್ತಾರದ ಕೋಟಿ ಶಾಖೆಗಳಿಂದ ಕೂಡಿದ ಕೆಂಪಾದ ದೊಡ್ಡಹಣ್ಣುಗಳಿಂದ ಕೂಡಿದ ಅಕ್ಷಯವಟವನ್ನು ಕಂಡಳು. ಆಗ ಸಾವಿರ ಕೋಟಿ ಗೋಪಿಯರೊಡಗೂಡಿ ವೃಂದೆ ನಗುತ್ತ ಬಂದು ರಥದಿಂದಿಳಿದು ರಾಧೆಯನ್ನು ನಮಿಸಿದಳು. ಅವಳ ಮನೆಗೆ ಕರೆದೊಯ್ದು ರತ್ನಸಿಂಹಾಸನದಲ್ಲಿ ಕುಳ್ಳಿರಿಸಿದಳು. ಚರಣಸೇವೆ ಮಾಡಿದಳು. ಏಳು ಮಂದಿ ಸಖಿಯರು ಬಿಳಿ ಚಾಮರ ಬೀಸಿದರು. ಎಲ್ಲ ಗೋಪಿಯರೂ ಬಂದು ರಾಧೆಯ ದರ್ಶನ ಪಡೆದರು. ನಂದ ಮೊದಲಾದವರಿಗೆ ರಾಧೆ ಬೇರೆ ಬೇರೆ ಮನೆಗಳನ್ನು ಏರ್ಪಡಿಸಿದಳು. ಪರಮಾನಂದ ಸ್ವರೂಪಳು. ಪರಮಾನಂದದಿಂದಲೆ ಬಲು ರಮ್ಯವಾದ ತನ್ನ ಮನೆಯಲ್ಲಿ ಗೋಪಿಯರೊಡನೆ ವಾಸ ಮಾಡಿದಳು.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ನೂರಇಪ್ಪತ್ತೆಂಟನೆ ಅಧ್ಯಾಯ ಮುಗಿಯಿತು.*

—o—

## ಶ್ರೀಕೃಷ್ಣನ ಗೋಲೋಕಾರೋಹಣ

ಅಧ್ಯಾಯ - ೧೨೯

**ನಾರಾಯಣ ಮುನಿ** - ಶ್ರೀಕೃಷ್ಣ ಪರಮಾತ್ಮ ಗೋಕುಲವಾಸಿಗಳಿಗೆ ಸಾಲೋಕ್ಯ ಮೋಕ್ಷನೀಡಿ ಐದು ಮಂದಿ ಗೋಪರೊಡನೆ ಭಾಂಡೀರದ ವಟಮೂಲದಲ್ಲಿ ಕುಳಿತ. ಈಗ ಗೋಕುಲ ಶೂನ್ಯವಾಗಿ ರಕ್ಷಕರಿಲ್ಲದೆ ಅಸ್ತವ್ಯಸ್ತವಾಗಿ ವ್ಯಾಕುಲವಾಗಿರುವುದನ್ನು ಕಂಡ. ಯೋಗಶಕ್ತಿಯಿಂದ ಅಮೃತಮಳೆ ಸುರಿಸಿ ವೃಂದಾವನವನ್ನು ಹಿಂದಿನಂತೆಯೇ ಸಮೃದ್ಧವಾಗಿ ಮಾಡಿದ. ಗೋಪಗೋಪಿಯರಿಂದ ತುಂಬಿರುವಂತೆ ಮಾಡಿದ. ಎಲ್ಲ ಗೋಪಾಲಕರನ್ನೂ ಸಂತೈಸುತ್ತ ಸವಿಮಾತುಗಳನ್ನಾಡಿದ-

'ಗೋಪರೆ, ನನ್ನ ಬಂಧುಗಳೆ, ನೀವು ಸುಖವಾಗಿರಿ. ಪ್ರಿಯೆಯರೊಡನೆ ರಮ್ಯವಾದ ರಾಸಮಂಡಲದಲ್ಲಿ ವಿಹರಿಸಿರಿ. ಚಂದ್ರಸೂರ್ಯರಿರುವಷ್ಟು ಕಾಲವೂ ಈ ವೃಂದಾವನದಲ್ಲಿ ಕೃಷ್ಣನ ಸನ್ನಿಧಾನವಿರುವುದು.'

ಅದೇ ಸಮಯದಲ್ಲಿ ಬ್ರಹ್ಮ ಶೇಷ ಧರ್ಮ ಶಿವ ಪಾರ್ವತಿಯರೂ ಸೂರ್ಯ ಇಂದ್ರ ಚಂದ್ರ ಅಗ್ನಿ ಕುಬೇರ ವರುಣ ವಾಯು ಯಮ ಈಶಾನ ಮುಂತಾದ ದೇವತೆಗಳೂ ಅಷ್ಟವಸುಗಳೂ ಎಲ್ಲ ಗ್ರಹಗಳೂ ರುದ್ರರೂ ಮುನಿಗಳೂ ಮನುಗಳೂ ಬೇಗಬೇಗನೆ ಭಗವಂತನ ಬಳಿಗೆ ಬಂದು ನೆಲದ ಮೇಲೆ ದಂಡಪ್ರಣಾಮಗೈದರು.

**ಬ್ರಹ್ಮ**:- 'ಪರಿಪೂರ್ಣ ಬ್ರಹ್ಮಸ್ವರೂಪ ಜ್ಯೋತಿಸ್ವರೂಪನಾದ ಪರಮಾತ್ಮನೇ! ಪ್ರಕೃತಿಗಿಂತ ಆಚೆ ಇರುವ ನಿರ್ಲಿಪ್ತ ನಿರಾಕಾರ ಸ್ವೇಚ್ಛಾಮಯ ಪರಂಧಾಮನೆ! ಸರ್ವಕಾರ್ಯ ಕಾರಣಗಳಿಗೆ ಒಡೆಯನಾಗಿದ್ದು ಬ್ರಹ್ಮ ಈಶ ಶೇಷ ಮುಂತಾದ ದೇವತೆಗಳಿಗೆ ಪ್ರಭುವಾದ ಸರ್ವೇಶ್ವರನೆ! ಸರಸ್ವತಿ, ಪದ್ಮಾ, ಪಾರ್ವತಿ, ಸಾವಿತ್ರಿ ರಾಧೆಯರಿಗೆ ಪತಿಯಾದ ರಾಸೇಶ್ವರನೆ! ಸರ್ವಕ್ಕೂ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವ ಸರ್ವೇಶ್ವರನೆ! ನಿನಗೆ ನಮೋ ನಮಃ! ನಿನ್ನ ಪಾದಕಮಲದ ಧೂಳಿಯಿಂದ ಭೂಮಿ ಪವಿತ್ರವಾಯಿತು. ನೀನು ಪರಂಧಾಮಕ್ಕೆ ಹೊರಟು ಹೋಗುತ್ತಿರುವುದರಿಂದ ತಿರುಗಿ ಶೂನ್ಯವಾಗುತ್ತಿದೆ. ನೂರ ಇಪ್ಪತ್ತೈದು ವರ್ಷಗಳ ಬಳಿಕ ನೀನೀಗ ನಿನ್ನ ವಿರಹದಿಂದ ಅಳುವ ಭೂಮಿಯನ್ನು ಬಿಟ್ಟು ಹೋಗುವಿಯ?

**ಶ್ರೀ ಮಹಾದೇವ** - 'ಬ್ರಹ್ಮನಿಂದ ಪ್ರಾರ್ಥಿತನಾಗಿ ಭೂಮಿಯಲ್ಲಿ ಅವತರಿಸಿ ಭೂಭಾರವನ್ನು ಕಳೆದು ಈಗ ನಿನ್ನ ಸ್ಥಾನವನ್ನು ಸೇರುತ್ತಿರುವಿ. ನಿನ್ನ ಅವತಾರದಿಂದ ಮೂಲೋಕಗಳಲ್ಲಿ ಭೂಲೋಕವೆ ಧನ್ಯವೆನಿಸಿತು. ನಿನ್ನ ಹೆಜ್ಜೆಯ ಗುರುತನ್ನು ಹೊತ್ತು ನೆಲ ಪಾವನವಾಯಿತು. ನಿನ್ನ ಪಾದಕಮಲವನ್ನು ಕಂಡು ನಾವೂ ಮುನಿಗಳೂ ಧನ್ಯರಾದೆವು. ಮುನಿಗಳ ಧ್ಯಾನಕ್ಕೂ ನಿಲುಕದವ, ಒಲಿಸಿಕೊಳ್ಳಲಾಗದವ, ನಮ್ಮೊಡೆಯ ನೀನು ಇನ್ನು ಮುಂದೆ ಕಣ್ಣಿಗೆ ಕಾಣದದಂತೆ ಮರೆಯಾಗುವಿಯ? **'ವಾಸು'** ಎಂದರೆ ಸರ್ವಪ್ರಪಂಚಕ್ಕೂ ವಾಸಸ್ಥಾನ ನೀನು. ನಿನ್ನ ರೋಮಗಳಲ್ಲಿ ಬ್ರಹ್ಮಾಂಡಗಳಿವೆ. ಎಲ್ಲ

ಪ್ರಪಂಚಕ್ಕೂ ನೀನೆ **ದೇವ.** ಅದರಿಂದ ಮಹಾವಿಷ್ಣು ನೀನು **'ವಾಸುದೇವ'**ನೆನಿಸಿರುವೆ. ಸಿದ್ಧಶ್ರೇಷ್ಠರಿಗೂ ದುರ್ಲಭವಾದ ನಿನ್ನ ಪಾದಪದ್ಮ ನಮ್ಮ ಬಹುಕಾಲದ ತಪಸ್ಸಿನ ಫಲವಾಗಿ ಸರ್ವಜೀವಿಗಳಿಗೂ ಕಣ್ಣಿಗೆ ಕಾಣುವಂತಾಯಿತು!

**ಅನಂತ**:- 'ಅನಂತ' ನೀನೆ ಹೊರತು ನಾನಲ್ಲ. ನಾನು ನಿನ್ನ ಒಂದು ಕಲೆಯ ಅಂಶಕ್ಕೆ ಸಮಾನ. ಮಹಾಕೂರ್ಮದ ಬೆನ್ನ ಮೇಲೆ ಆನೆಯ ಬೆನ್ನಿನಲ್ಲಿ ಸೊಳ್ಳೆ ಕುಳಿತಂತೆ ಕುಳ್ಳಿರುತ್ತೇನೆ. ಶೇಷರೂ ಕೂರ್ಮರೂ ಬ್ರಹ್ಮ ವಿಷ್ಣು ಶಿವರೂ ಅಸಂಖ್ಯರಿದ್ದಾರೆ. ಅವರಿಗೆಲ್ಲ ಪ್ರಭು ನೀನು. ನಮಗೆ ಇಂಥ ಸುದಿನ ಇನ್ನೆಂದು ಲಭಿಸೀತು? ಕನಸಿನಲ್ಲಿಯೂ ಕಾಣದವ ನೀನು ಸರ್ವಜೀವಿಗಳಿಗೂ ಕಣ್ಣಿಗೆ ಕಾಣುತ್ತಿರುವೆ. ಆದರೆ ಈಗ ನಿನ್ನ ಪಾದಸ್ಪರ್ಶದಿಂದ ಪಾವನಳಾದ ಭೂಮಿಯನ್ನು ಅನಾಥಳನ್ನಾಗಿಸಿ, ಶೋಕಸಾಗರದಲ್ಲಿ ಮುಳುಗಿ ಕಣ್ಣೀರಿಡುವಂತೆ ಮಾಡಿ ನೀನು ಗೋಲೋಕಕ್ಕೆ ಹೋಗುತ್ತಿರುವೆಯ?

**ದೇವತೆಗಳು:-** ವೇದಗಳಾಗಲಿ ಬ್ರಹ್ಮ ಶಿವ ಮುಂತಾದವರಾಗಲಿ ನಿನ್ನನ್ನು ಸ್ತುತಿಸಲು ಸಮರ್ಥರಾಗದಿರುವಾಗ ನಾವೇನು ಸ್ತುತಿಸಬಲ್ಲೆವು? ಕೇವಲ ನಮಸ್ಕಾರ ಮಾಡುವೆವು.

ಹೀಗೆ ಹೇಳಿ ಆ ದೇವತೆಗಳು ದ್ವಾರಕೆಯಲ್ಲಿರುವ ಭಗವಂತನನ್ನು ನೋಡಲು ಬೇಗನೆ ದ್ವಾರಕೆಗೆ ಧಾವಿಸಿದರು. ಇತ್ತ ಗೋಪಾಲರೆಲ್ಲರೂ ಗೋಲೋಕವನ್ನು ಸೇರಿದರು. ಭೂಮಿ ಕಂಪಿಸಿತು. ಸಪ್ತಸಾಗರಗಳು ಭಯದಿಂದ ಅಲ್ಲೋಲ ಕಲ್ಲೋಲ ವಾದುವು. ಬ್ರಾಹ್ಮಣ ಶಾಪದಿಂದ ದ್ವಾರಕೆ ಕಳೆಗುಂದಿತು. ಶ್ರೀಕೃಷ್ಣ ಕದಂಬವೃಕ್ಷದ ಕೆಳಗೆ ಒಂದು ಶರೀರವನ್ನು ಪ್ರವೇಶಿಸಿದ. ಯಾದವರೆಲ್ಲರೂ ಜೊಂಡುಹುಲ್ಲಿನಿಂದ ಪರಸ್ಪರ ಹೊಡೆದುಕೊಂಡು ಸತ್ತರು. ಅವರ ಪತ್ನಿಯರೆಲ್ಲರೂ ಪತಿಗಳೊಂದಿಗೆ ಚಿತೆ ಏರಿ ಸಹಗಮನ ಮಾಡಿದರು.

ದ್ವಾರಕೆಯ ದುರ್ಘಟನೆಯ ಬಗ್ಗೆ ಎಲ್ಲ ಸಮಾಚಾರವನ್ನೂ ಅರ್ಜುನ ಯುಧಿಷ್ಠಿರನಿಗೆ ಹೇಳಿದ. ಅವನು ತನ್ನ ಎಲ್ಲ ತಮ್ಮಂದಿರೊಡನೆ, ದ್ರೌಪದಿಯೊಡನೆ ಸ್ವರ್ಗಕ್ಕೆ ತೆರಳಿದ.

ಕದಂಬವೃಕ್ಷದ ಬುಡದಲ್ಲಿ ಕುಳಿತ ಕೃಷ್ಣನನ್ನು ಬ್ರಹ್ಮಾದಿ ದೇವತೆಗಳು ಭಕ್ತಿಯಿಂದ ನಮಿಸಿದರು. ಸ್ತೋತ್ರ ಮಾಡಿದರು. ಶ್ಯಾಮಲ ವರ್ಣ, ಬಾಲ್ಯವಯಸ್ಸು, ರತ್ನಾಭರಣಗಳಿಂದ ಅಲಂಕೃತನಾಗಿದ್ದಾನೆ. ಅಗ್ನಿಶುದ್ಧವಾದ ವಸ್ತ್ರಉಟ್ಟು ವನಮಾಲೆಯಿಂದ ಶೋಭಿಸುತ್ತಿದ್ದಾನೆ. ಅತ್ಯಂತ ಸುಂದರ ಮನೋಹರ. ಇಂಥ ಲಕ್ಷ್ಮೀರಮಣನ ಪಾದಕಮಲಕ್ಕೆ ಬೇಡನ ಬಾಣ ತಗುಲಿದೆ. ಬ್ರಹ್ಮಾದಿದೇವತೆಗಳು ವಂದಿಸುತ್ತಿದ್ದಾರೆ. ಅವರಿಗೆ ಭಗವಂತ ನಗುಮೊಗದಿಂದ ಅಭಯ ನೀಡಿದ. ಭೂದೇವಿ ಪ್ರಣಯ ವಿಹ್ವಲತೆಯಿಂದ ಅಳುವುದನ್ನು ಕಂಡು ಸಂತೈಸಿದ. ಬೇಡನನ್ನೂ ತನ್ನ ಲೋಕಕ್ಕೆ ಕಳಿಸಿದ.

ಬಲರಾಮನ ಅದ್ಭುತವಾದ ತೇಜಸ್ಸು ಶೇಷನಲ್ಲಿ ಸೇರಿ ಲೀನವಾಯಿತು. ಪ್ರದ್ಯುಮ್ನನ ತೇಜಸ್ಸು ಕಾಮನಲ್ಲಿ ಒಂದಾಯಿತು. ಅನಿರುದ್ಧನ ತೇಜಸ್ಸು ಬ್ರಹ್ಮನನ್ನು

ಸೇರಿತು. ಅಯೋನಿಜೆಯಾದ ಮಹಾಲಕ್ಷ್ಮೀ ಸ್ವರೂಪಳಾದ ರುಕ್ಮಿಣಿ ಶರೀರ ಸಹಿತಳಾಗಿಯೆ ವೈಕುಂಠಕ್ಕೆ ಹೋದಳು. ಸತ್ಯಭಾಮೆಯೂ ಸಶರೀರಳಾಗಿ ಭೂದೇವಿಯಲ್ಲಿ ಐಕ್ಯಹೊಂದಿದಳು. ಜಾಂಬವತಿ ಲೋಕಮಾತೆಯಾದ ಪಾರ್ವತಿಯನ್ನು ಸೇರಿದಳು. ಹೀಗೆ ಎಲ್ಲ ದೇವಿಯರೂ ತಾವು ಯಾವ ದೇವಿಯರ ಅಂಶಭೂತರೋ ಆ ದೇವಿಯರಲ್ಲಿಯೇ ಸೇರಿಹೋದರು. ಸಾಂಬನ ತೇಜಸ್ಸು ಸ್ಕಂದನಲ್ಲಿ ಸೇರಿತು. ವಸುದೇವ ಕಶ್ಯಪರೂಪವನ್ನೆ ಹೊಂದಿದ. ದೇವಕಿ ಅದಿತಿಯಲ್ಲಿ ಲೀನಳಾದಳು. ರುಕ್ಮಿಣಿಯ ಅಂತಃಪುರ ಒಂದನ್ನುಳಿದು ಸಮಸ್ತ ದ್ವಾರಕೆಯನ್ನು ಸಮುದ್ರ ನುಂಗಿದ. ಬಳಿಕ ಕೃಷ್ಣನ ಬಳಿಗೆ ಬಂದು ಆನಂದದಿಂದ ಹಸನ್ಮುಖಿಯಾಗಿ ಸ್ತುತಿಸಿದ. ಕೃಷ್ಣನ ವಿಯೋಗವಾಗುವುದೆಂದು ದುಃಖವಿಹ್ವಲನಾಗಿ ಕಣ್ಣೀರನ್ನೂ ಸುರಿಸಿದ. ಗಂಗೆ, ಸರಸ್ವತಿ, ಪದ್ಮಾವತಿ, ಯಮುನೆ, ಗೋದಾವರಿ, ಸ್ವರ್ಣರೇಖೆ, ಕಾವೇರಿ, ನರ್ಮದೆ, ಶರಾವತಿ, ಬಾಹುದೆ, ಕೃತಮಾಲೆ ಮುಂತಾದ ಎಲ್ಲ ನದೀದೇವಿಯರೂ ಬಂದು ನಮಿಸಿದರು. ಗಂಗೆ ವಿರಹಕಾತರಳಾಗಿ ಕಣ್ಣೀರು ಸುರಿಸುತ್ತ ದೈನ್ಯದಿಂದ ಅಳುತ್ತ ಹೇಳಿದಳು - 'ನಾಥ, ನೀನೀಗ ಗೋಲೋಕಕ್ಕೆ ಹೊರಟು ಹೋಗುತ್ತಿರುವೆಯ? ನಮಗಿನ್ನು ಕಲಿಯುಗದಲ್ಲಿ ಯಾರು ಗತಿ?'

**ಶ್ರೀಕೃಷ್ಣ:**- 'ಕಲಿಯುಗದಲ್ಲಿ ಐದು ಸಾವಿರ ವರ್ಷಕಾಲ ನೀನು ಭೂಲೋಕದಲ್ಲಿ ಇರುವೆ. ಪಾಪಿಗಳು ನಿನ್ನಲ್ಲಿ ಸ್ನಾನಮಾಡಿ ಬಿಟ್ಟುಹೋಗುವ ಪಾಪಗಳು ನನ್ನ ಮಂತ್ರವನ್ನು ಉಪಾಸನಮಾಡುವ ಭಕ್ತನ ದರ್ಶನ ಸ್ಪರ್ಶನ ಸ್ನಾನಗಳಿಂದ ತಕ್ಷಣವೆ ಭಸ್ಮವಾಗುವುವು. ಹರಿನಾಮಸಂಕೀರ್ತನೆಗಳು ಪುರಾಣ ಪ್ರವಚನಗಳು ನಡೆವಲ್ಲಿ ನೀನು ಈ ಎಲ್ಲ ನದೀ ದೇವಿಯರೊಂದಿಗೆ ಹೋಗಿ ಕುಳಿತು ಶ್ರವಣಮಾಡು. ಅದರಿಂದ ಬ್ರಹ್ಮಹತ್ಯಾದಿ ಸಕಲಪಾಪಗಳೂ ಭಸ್ಮವಾಗುವುವು. ವಿಷ್ಣುಭಕ್ತರನ್ನು ಆಲಿಂಗಿಸಿದರೂ ಹಾಗೇ ಆಗುವುದು. ಒಣಸೌದೆ ಹುಲ್ಲುಕಡ್ಡಿಗಳು ಬೆಂಕಿಯಲ್ಲಿ ಹೇಗೆ ಉರಿದು ಬೂದಿಯಾಗುವುವೋ ಹಾಗೆ ಬ್ರಹ್ಮಹತ್ಯಾದಿ ಪಾಪಗಳೂ ವೈಷ್ಣವಾಲಿಂಗನದಿಂದ ಬೂದಿಯಾಗುವುವು. ಭೂಮಿಯ ಮೇಲಿರುವ ಎಲ್ಲ ಪವಿತ್ರ ತೀರ್ಥಗಳೂ ನನ್ನ ಭಕ್ತರ ಶರೀರದಲ್ಲಿ ಸದಾ ಇರುತ್ತವೆ. ನನ್ನ ಭಕ್ತರ ಪಾದಧೂಳಿಯಿಂದ ಭೂಮಿ ತಕ್ಷಣವೆ ಪವಿತ್ರವಾಗುವುದು, ತೀರ್ಥಗಳೂ ಪವಿತ್ರವಾಗುವುವು, ಜಗತ್ತೇ ಪವಿತ್ರವಾಗುವುದು. ನನ್ನ ಮಂತ್ರವನ್ನು ಉಪಾಸನ ಮಾಡುವವರು, ನನ್ನ ನೈವೇದ್ಯ ಭಕ್ಷಿಸುವವರು, ನನ್ನನ್ನೇ ನಿತ್ಯಧ್ಯಾನಿಸುವವರು ನನಗೆ ಪ್ರಾಣಕ್ಕಿಂತ ಅಧಿಕರು. ಅವರ ಸ್ಪರ್ಶಮಾತ್ರದಿಂದ ವಾಯುವೂ ಶುದ್ಧವಾಗುವುದು. ಕಲಿಯುಗದಲ್ಲಿ ಹತ್ತುಸಾವಿರ ವರ್ಷಕಾಲ ನನ್ನ ಭಕ್ತರು ಭೂಮಿಯಲ್ಲಿ ಇರುತ್ತಾರೆ. ಅವರು ಹೊರಟು ಹೋದ ಬಳಿಕ ನಾಲ್ಕೂ ಜಾತಿಯವರು ಒಂದೇ ಜಾತಿಯವರಾಗುತ್ತಾರೆ. ನನ್ನ ಭಕ್ತರಿಲ್ಲದ ಭೂಮಿ ಕಲಿಯ ವಶವಾಗುವುದು' ಶ್ರೀಕೃಷ್ಣ ಹೀಗೆ ಹೇಳುತ್ತಿದಂತೆಯೇ ಅವನ ಶರೀರದಿಂದ ಚತುರ್ಭುಜಗಳಲ್ಲಿ ಶಂಖಚಕ್ರಗದಾಪದ್ಮಗಳನ್ನು ಧರಿಸಿದ, ನೂರು ಚಂದ್ರರ ಕಾಂತಿಯಿಂದ ಹೊಳೆವ ಶ್ರೀವತ್ಸಧಾರಿ ಪುರುಷ ಹೊರಟು ಬಂದು ಸುಂದರವಾದ ರಥವನ್ನೇರಿ ಕ್ಷೀರಸಮುದ್ರಕ್ಕೆ

ತೆರಳಿದ. ಜೊತೆಗೆ, ಶ್ರೀಕೃಷ್ಣನ ಮನಸ್ಸಿನಿಂದ ಪ್ರಾದುರ್ಭವಿಸಿದ ಮರ್ತ್ಯಲಕ್ಷ್ಮಿಯೂ ಮೂರ್ತಿಮತಿಯಾಗಿ ಹಿಂಬಾಲಿಸಿದಳು. ಶುದ್ಧ ಸತ್ವಸ್ವರೂಪದಲ್ಲಿರುವ ಹರಿ ಎರಡು ರೂಪ ಧರಿಸಿದ. ಬಲಭಾಗದಿಂದ ಹೊರಟ ರೂಪ ದ್ವಿಭುಜ ಗೋಪಾಲ ಬಾಲರೂಪ. ನವಮೇಘಶ್ಯಾಮ ಈತ. ತಾವರೆಯಂಥ ಕಣ್ಣು ಅವನದು. ಮಂದಹಾಸಯುಕ್ತವಾದ ಮುಖ. ನೂರು ಕೋಟಿ ಚಂದ್ರರ ಕಾಂತಿ. ನೂರು ಕೋಟಿ ಮನ್ಮಥರ ಲಾವಣ್ಯ. ಪೂರ್ಣಾನಂದ ಉಳ್ಳ ಪರಬ್ರಹ್ಮಸ್ವರೂಪನಾಗಿದ್ದಾನೆ. ನಿರ್ಗುಣ ಪರಮಾತ್ಮ. ಭಕ್ತರಿಗೆ ಅನುಗ್ರಹ ಮಾಡಲೆಂದು ಅವತರಿಸುವವ. ಪ್ರಕೃತಿಯಿಂದಾಚೆ ಇರುವವ. ನಿತ್ಯಶರೀರ ಉಳ್ಳವ.

ಯೋಗಿಗಳು ಇವನನ್ನು ಸನಾತನ ಜ್ಯೋತಿರೂಪನೆನ್ನುತ್ತಾರೆ.

ಭಕ್ತರು ಅವನನ್ನು ಅಂತರ್ಯಾಮಿ ಜ್ಯೋತಿರೂಪನೆನ್ನುತ್ತಾರೆ.

ವೇದಗಳು ಅವನನ್ನು ಸತ್ಯ, ನಿತ್ಯ, ಆದಿಕಾರಣನೆನ್ನುತ್ತಾರೆ.

ದೇವತೆಗಳು ಅವನನ್ನು ಸ್ವೇಚ್ಛೆಯಿಂದ ನಡೆವ ಸ್ವತಂತ್ರನೆನ್ನುತ್ತಾರೆ.

ಸಿದ್ಧರಾದ ಮುನಿಗಳು ಅವನನ್ನು ಸರ್ವರೂಪನೆನ್ನುತ್ತಾರೆ.

ಯೋಗೇಶ್ವರನಾದ ಶಂಕರ ಅವನನ್ನು ಅನಿರ್ವಚನೀಯನೆನ್ನುತ್ತಾನೆ.

ಶೇಷ ಆ ಅನಂತನನ್ನು ಒಂಬತ್ತುರೂಪದವನೆನ್ನುತ್ತಾನೆ. ಅದು ಹೇಗೆಂದರೆ ಆರು ದರ್ಶನಗಳ ತರ್ಕಗಳಿಗೆ ಗೋಚರವಾಗುವ ರೂಪಗಳು ಆರು. ವೈಷ್ಣವಾಗಮ ಗೋಚರ ವಾದುದು ಒಂದು ರೂಪ. ವೇದಗೋಚರವಾದುದು ಒಂದು ರೂಪ. ಪುರಾಣಗೋಚರವಾದುದು ಒಂದು ರೂಪ. ಹೀಗೆ ಒಂಬತ್ತುರೂಪಗಳು. ನ್ಯಾಯದರ್ಶನ ಶಂಕರ ಹೇಳುವಂತೆಯೇ ಅನಿರ್ವಚನೀಯವೆನ್ನುತ್ತದೆ. ವೈಶೇಷಿಕ ದರ್ಶನ ನಿತ್ಯ ಎಂದೆನ್ನುತ್ತದೆ. ಸಾಂಖ್ಯದರ್ಶನ ಜ್ಯೋತಿರೂಪನೆನ್ನುತ್ತದೆ. ಮೀಮಾಂಸಾದರ್ಶನ ಸರ್ವರೂಪನೆನ್ನುತ್ತದೆ. ವೇದಾಂತದರ್ಶನ ಸರ್ವಕಾರಣ ಎನ್ನುತ್ತದೆ. ಪಾತಂಜಲ ಯೋಗದರ್ಶನ ಅನಂತ ಎನ್ನುತ್ತದೆ. ವೇದಗಳು ಸತ್ಯಸ್ವರೂಪನೆನ್ನುತ್ತವೆ. ಪುರಾಣಗಳು ಸ್ವತಂತ್ರ ಎನ್ನುತ್ತವೆ. ವೈಷ್ಣವಾಗಮಗಳು ನಿತ್ಯಶರೀರಿ ಎನ್ನುತ್ತವೆ. ಹೀಗೆ ಒಂಬತ್ತುರೂಪಗಳಿಂದ ಕೃಷ್ಣನನ್ನು ಶೇಷ ವರ್ಣಿಸುತ್ತಾನೆ. ಈ ಶ್ರೀಕೃಷ್ಣನೆ ಗೋಲೋಕದಲ್ಲಿ ರಾಧಾರಮಣ ಗೋಕುಲದಲ್ಲಿ ನಂದಕುಮಾರ, ಗೋಪವೇಷದವನು. ವೈಕುಂಠದಲ್ಲಿ ಚತುರ್ಭುಜನಾದ ಮಹಾಲಕ್ಷ್ಮೀಪತಿ, ನಾರಾಯಣ. ಅವನ ನಾಮವೆ ಮುಕ್ತಿಕಾರಣ.

**ಸಕೃನ್ನಾರಾಯಣೇತ್ಯುಕ್ತ್ವಾ ಪುಮಾನ್ ಕಲ್ಪಶತತ್ರಯಂ ।**
**ಗಂಗಾದಿಸರ್ವತೀರ್ಥೇಷು ಸ್ನಾತೋ ಭವತಿ ನಾರದ ॥**

'ಒಮ್ಮೆ 'ನಾರಾಯಣ!' ಎಂದರೆ ಸಾಕು, ಮುನ್ನೂರು ಕಲ್ಪಗಳ ಕಾಲ ಗಂಗಾದಿ ಸರ್ವ ತೀರ್ಥಗಳಲ್ಲಿ ಸ್ನಾನಮಾಡಿದ ಫಲ ಸಿಗುವುದು.'

ನಾರಾಯಣನು ಸುನಂದ ನಂದ ಕುಮುದ ಮುಂತಾದ ಪಾರ್ಷದರಿಂದ

ಪರಿವೃತನಾಗಿದ್ದಾನೆ. ಶಂಖಚಕ್ರಗದಾಪದ್ಮಗಳನ್ನು ಧರಿಸಿದ್ದಾನೆ. ಎದೆಯಲ್ಲಿ ಶ್ರೀವತ್ಸ ಕೌಸ್ತುಭಮಣಿ ವನಮಾಲೆಗಳನ್ನು ಧರಿಸಿದ್ದಾನೆ. ಆತ ವೇದಗಳು ಮಾಡುವ ಸ್ತುತಿಗಳನ್ನು ಕೇಳುತ್ತ ವಿಮಾನವೇರಿ ವೈಕುಂಠಕ್ಕೆ ತೆರಳಿದ. ಆಗ ರಾಧಾರಮಣ ಮೂರೋಕವನ್ನು ಮೈಮರೆಸುವಂತೆ ಕೊಳಲನ್ನು ನುಡಿಸಿದ. ದೇವತೆಗಳೂ ಮುನಿಗಳೂ ಕೇಳಿ ಮಾಯೆಯಿಂದ ಮೈ ಮರೆತು ನಿಶ್ಚೇಷ್ಟರಾದರು. ಪಾರ್ವತಿ ಒಬ್ಬಳೆ ಇದಕ್ಕೆ ಹೊರತಾಗಿದ್ದಳು. ಅವಳು ಸ್ವಯಂ ವಿಷ್ಣುಮಾಯೆ. ಪರಬ್ರಹ್ಮ ಪರಮಾತ್ಮಸ್ವರೂಪಳು. ಸಗುಣಳೂ ನಿರ್ಗುಣಳೂ ಆಗಿರುತ್ತಾಳೆ. ಸ್ವತಂತ್ರಳಾಗಿರುತ್ತಾಳೆ. ಅವಳು ಹೇಳಿದಳು.

'ಪ್ರಭು, ನಾನು ಒಬ್ಬಳೆ ಪಾರ್ವತೀರೂಪಳೂ ಗೋಲೋಕದಲ್ಲಿ ರಾಧಾರೂಪಳೂ ಆಗಿದ್ದೇನೆ. ಈಗ ಗೋಲೋಕದಲ್ಲಿ ರಾಸವಿಲ್ಲದೆ ಅದು ಶೂನ್ಯವಾಗಿದೆ. ಅದನ್ನು ಪರಿಪೂರ್ಣವನ್ನಾಗಿ ಮಾಡು. ರಥವೇರಿ ಅಲ್ಲಿಗೆ ಹೋಗು. ನಿನ್ನ ವಕ್ಷಃಸ್ಥಲದಲ್ಲಿ ನಾನು ಸದಾ ಪರಿಪೂರ್ಣಳಾಗಿಯೆ ಇರುತ್ತೇನೆ. ಆದರೆ ನಿನ್ನಾಜ್ಞೆಯಂತೆ ಮಹಾಲಕ್ಷ್ಮೀ ಸರಸ್ವತೀ ರೂಪಗಳಿಂದ ವೈಕುಂಠದಲ್ಲಿಯೂ ಇರುತ್ತೇನೆ. ಸಮುದ್ರರಾಜನ ಕುಮಾರಿಯಾಗಿಯೂ ನಾನು ನಿನ್ನ ಮನಸ್ಸಿನಿಂದ ಪ್ರಾದುರ್ಭೂತಳಾದೆ. ಬ್ರಹ್ಮನ ಬಳಿ ಇರುವ ವೇದಮಾತೆ ಸಾವಿತ್ರಿಯೂ ನನ್ನ ಒಂದು ಕಲೆ. ಹಿಂದೆ ಸತ್ಯಯುಗದಲ್ಲಿ ನಿನ್ನ ಆಜ್ಞೆಯಂತೆ ಸಕಲದೇವತೆಗಳ ತೇಜಸ್ಸು ಒಂದೆಡೆ ಸೇರಿ ಸ್ತ್ರೀರೂಪ ತಾಳಿದಾಗ ನಾನೆ ಅದರಲ್ಲಿ ನಿಂತೆ. ಶುಂಭಾದಿ ದೈತ್ಯರನ್ನು ಅನಾಯಾಸವಾಗಿ ನಾಶಮಾಡಿದೆ. ದುರ್ಗ ಎಂಬ ರಾಕ್ಷಸನನ್ನು ಕೊಂದು ದುರ್ಗೆ ಎನಿಸಿದೆ. ತ್ರಿಪುರರನ್ನು ಕೊಂದು ತ್ರಿಪುರೆ ಎನಿಸಿದೆ. ರಕ್ತಬೀಜಾಸುರನನ್ನು ಕೊಂದು ರಕ್ತಬೀಜವಿನಾಶಿನಿ ಎನಿಸಿದೆ. ನಿನ್ನಾಜ್ಞೆಯಂತೆಯೇ ಸತ್ಯಸ್ವರೂಪಳಾದ ನಾನು ಸತೀ ಎಂಬ ಹೆಸರಿನಿಂದ ದಕ್ಷನ ಮಗಳಾಗಿಯೂ ಹುಟ್ಟಿದೆ ಯೋಗಬಲದಿಂದ ದೇಹತ್ಯಾಗಮಾಡಿ ಪರ್ವತರಾಜನ ಮಗಳಾಗಿ ಹುಟ್ಟಿದೆ. ಆಗ ನೀನೆ ನನ್ನನ್ನು ಗೋಲೋಕದ ರಾಸಮಂಡಲದಲ್ಲಿ ಶಂಕರನಿಗೆ ನೀಡಿದೆ. ವಿಷ್ಣುಭಕ್ತಿರೂಪಳು ನಾನೆ, ವಿಷ್ಣುಮಾಯೆಯೂ ನಾನೆ. ನಾರಾಯಣನ ಮಾಯೆಯಾದ್ದರಿಂದ ನಾರಾಯಣೀ ಎನಿಸುತ್ತೇನೆ. ಕೃಷ್ಣನಿಗೆ ಪ್ರಾಣಕ್ಕಿಂತ ಅಧಿಕಳು, ಪ್ರಾಣೇಶ್ವರಿ. ಮಹಾವಿಷ್ಣುವಿನ ಜನನಿ. ಸ್ವತಃ ರಾಧೆಯಾಗಿದ್ದೇನೆ. ನಿನ್ನಾಜ್ಞೆಯಂತೆ ಪಂಚಪ್ರಕೃತಿ ರೂಪಳಾಗಿದ್ದೇನೆ. ಕಲೆಯ ಕಲೆರೂಪದಿಂದ ದೇವತೆಗಳ ಮನೆಮನೆಗಳಲ್ಲಿ ದೇವಿಯಾಗಿರುತ್ತೇನೆ. ನೀನು ಬೇಗ ಗೋಲೋಕಕ್ಕೆ ಹೋಗು. ಅಲ್ಲಿ ನಾನು ವಿರಹಾತುರಳಾಗಿ ಗೋಪಿಯರೊಡನೆ ರಾಸಮಂಡಲದಲ್ಲಿ ಸುತ್ತುತ್ತ ನಿನಗಾಗಿ ಕಾದಿದ್ದೇನೆ.'

ಪಾರ್ವತಿಯ ಮಾತನ್ನು ಕೇಳಿ ರಸಿಕಾಗ್ರಣಿಯಾದ ಕೃಷ್ಣ ನಕ್ಕು ರತ್ನಮಯವಾದ ವಿಮಾನವೇರಿ ಗೋಲೋಕಕ್ಕೆ ತೆರಳಿದ. ಪಾರ್ವತಿ ಮೈಮರೆತು ಬಿದ್ದಿದ್ದ ದೇವತೆಗಳನ್ನು ಎಚ್ಚರಿಸಿದಳು. ಅವರು ಎದ್ದು 'ಹರಿ! ಹರಿ!' ಎನ್ನುತ್ತ ವಿಸ್ಮಿತರಾಗಿ ತಮ್ಮ ಲೋಕಗಳಿಗೆ ಹೋದರು. ದುರ್ಗೆ ಶಿವನೊಡನೆ ಕೈಲಾಸಕ್ಕೆ ತೆರಳಿದಳು. ಗೋಲೋಕದಲ್ಲಿ ಕೃಷ್ಣ ಬಂದಾಗ ಸರ್ವಜ್ಞಳಾದ ರಾಧೆ ಗೋಪಿಯರೊಡನೆ ಬಂದು ರಥದಿಂದಿಳಿದು

ಎದುರುಗೊಂಡಳು. ತಲೆಬಾಗಿ ನಮಿಸಿದಳು. ಗೋಪಗೋಪಿಯರೆಲ್ಲರೂ ಪ್ರಫುಲ್ಲವದನರಾದರು. ಪರಮಾತ್ಮ ಬಂದನೆಂದು ಸಂಭ್ರಮದಿಂದ ದುಂದುಭಿ ಮೊಳಗಿಸಿದರು. ಜಗದೀಶ್ವರನೂ ವಿರಜಾನದಿಯನ್ನು ದಾಟಿ ರಾಧೆಯನ್ನು ಕಂಡೊಡನೆ ರಥದಿಂದಿಳಿದು ಅವಳ ಕೈಹಿಡಿದಿದ್ದ. ಶ್ರೀಕೃಷ್ಣ ಗೋಲೋಕದ ಶತಶೃಂಗದಲ್ಲಿರುವ ರಾಸಮಂಡಲದಲ್ಲಿ ಅಕ್ಷಯ ವಟವನ್ನೂ ಪುಣ್ಯಕರ ವೃಂದಾವನವನ್ನೂ ನೋಡುತ್ತ ತುಲಸೀತೋಟ, ಮಾಲತೀವನ, ಕುಂದವನ, ಮಾಧವೀವನ, ಚಂಪಕಾರಣ್ಯ, ಚಂದನವನಗಳ ದಾರಿಯಾಗಿ ರಾಧೆಯ ಮನೆಗೆ ಬಂದ. ಅಲ್ಲಿ ರತ್ನಸಿಂಹಾಸನದಲ್ಲಿ ರಾಧೆಯೊಡನೆ ಕುಳಿತು ಕರ್ಪೂರಯುಕ್ತ ತಾಂಬೂಲವನ್ನು ಮೆದ್ದ. ಸುಗಂಧಯುಕ್ತವಾದ ಚಂದನದಿಂದ ಗಮಗಮಿಸುವ ಹೂವಿನ ಹಾಸಿಗೆಯಲ್ಲಿ ಮಲಗಿ ರಾಧೆಯೊಡನೆ ಶೃಂಗಾರರಸಸಮುದ್ರದಲ್ಲಿ ಮುಳುಗಿ ರಮಿಸಿದ.

ನಾರದ, ಧರ್ಮನ ಮುಖದಿಂದ ಕೇಳಿದುದನ್ನು ಎಲ್ಲವನ್ನೂ ನಿನಗೆ ಹೇಳಿದ್ದೇನೆ. ಶ್ರೀಕೃಷ್ಣ ಗೋಲೋಕಕ್ಕೆ ತೆರಳಿದ ಬಗೆ ಹೀಗೆ. ಇನ್ನೇನು ಕೇಳಬೇಕೆಂದು ಬಯಸುವೆ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣನಾರದಸಂವಾದದಲ್ಲಿ ಗೋಲೋಕಾರೋಹಣವೆಂಬ ನೂರಇಪ್ಪತ್ತೊಂಬತ್ತನೆ ಅಧ್ಯಾಯ ಮುಗಿಯಿತು.*

—o—

## ನಾರದ ವಿವಾಹ

**ಅಧ್ಯಾಯ - ೧೩೦**

**ನಾರದ** - ಜಗದ್ಗುರು, ನಿನ್ನ ಮುಖದಿಂದ ಎಲ್ಲವನ್ನೂ ಕೇಳಿದ್ದಾಯಿತು. ಇನ್ನೇನೂ ಉಳಿದಿಲ್ಲ. ಸಕಲೇಷ್ಟದಾಯಕವಾದ ಈ ಬ್ರಹ್ಮವೈವರ್ತಪುರಾಣ ಎಷ್ಟು ಅಪೂರ್ವ! ನಾನು ಇನ್ನು ಏನು ಮಾಡಬೇಕೆಂದು ಹೇಳು. ಅಪ್ಪಣೆ ನೀಡು. ತಪಸ್ಸು ಮಾಡಲು ಹಿಮಾಲಯಕ್ಕೆ ಹೋಗಲೆ?

**ನಾರಾಯಣಮುನಿ** - 'ನೀನು ಹಿಂದಿನ ಜನ್ಮದಲ್ಲಿ ಉಪಬರ್ಹಣನೆಂಬ ಗಂಧರ್ವನಾಗಿ ಐವತ್ತುಮಂದಿ ಸ್ತ್ರೀಯರಿಗೆ ಪತಿಯಾಗಿದ್ದಿ. ಈ ಜನ್ಮದಲ್ಲಿ ಬ್ರಹ್ಮಪುತ್ರನಾಗಿರುವೆ. ಆ ಐವತ್ತು ಮಂದಿ ಸ್ತ್ರೀಯರಲ್ಲಿ ಒಬ್ಬಳು ಸುಂದರಿಯಾದ ಪತಿವ್ರತೆ ಶಿವನನ್ನು ತಪಸ್ಸಿನಿಂದ ಒಲಿಸಿಕೊಂಡು 'ನಾರದನೆ ನನಗೆ ಪತಿಯಾಗಿ ಲಭಿಸಬೇಕು' ಎಂದು ವರ ಪಡೆದಳು. ಅವಳು ಈಗ ಸೃಂಜಯರಾಜನ ಮಗಳು. ಸ್ವರ್ಣಷ್ಠೀವಿಯ ಸೋದರಿ. ಅವಳನ್ನು ನೀನು ವಿವಾಹವಾಗಬೇಕು. ಶಿವನ ವರ ಹೇಗೆ ವ್ಯರ್ಥವಾದೀತು? ಅವಳು ಸುಂದರಿಯರಲ್ಲಿ ಸುಂದರಿ, ಕೋಮಲಾಂಗಿ, ಲಕ್ಷ್ಮೀಯ ಅಂಶಯುಕ್ತಳು, ಪತಿವ್ರತೆ, ಪ್ರಿಯವನ್ನೆ ನುಡಿವವಳು. ನಿನ್ನನ್ನು ಬಯಸಿದ್ದಾಳೆ. ಸ್ಥಿರವಾದ ಯೌವನ ಅವಳದು. ಬ್ರಹ್ಮ ಬರೆದ ಪ್ರಾಚೀನಕರ್ಮದ ಫಲವನ್ನು ಯಾರು ತಾನೆ ತಡೆಯಬಲ್ಲರು? ಕರ್ಮದ ಫಲ ಉಣದೆ ನೂರುಕೋಟಿ ಕಲ್ಪ ಕಳೆದರೂ ಕರ್ಮವನ್ನು ನಾಶಪಡಿಸಲಾಗದು. ಮಾಡಿದ ಕರ್ಮದ ಫಲ, ಒಳ್ಳೆಯದಿರಲಿ ಕೆಟ್ಟದಿರಲಿ, ಅವಶ್ಯ ಅನುಭವಿಸಲೆಬೇಕು'

**ಸೂತ** - ನಾರಾಯಣಮುನಿಯ ಮಾತನ್ನು ಕೇಳಿ ನಾರದ ನಮಸ್ಕರಿಸಿ ಖಿನ್ನ ಮನಸ್ಕನಾಗಿ ಸೃಂಜಯನ ಅರಮನೆಗೆ ಹೋದ.

**ಶೌನಕ** - ಮಹಾತ್ಮ ಸೂತ! ಎಂಥ ಅದ್ಭುತ ರಹಸ್ಯ! ಅಪೂರ್ವವಾದ ರಸಭರಿತವಾದ ಇತಿಹಾಸವನ್ನು ಕೇಳುತ್ತಿದ್ದೇವೆ. ಈಗ ಹೇಳು, ಇಂದ್ರಿಯಗಳನ್ನು ಗೆದ್ದ ನಾರದ ಮುನಿಯ ವಿವಾಹದ ಕಥೆಯನ್ನು ಕೇಳಲು ಅಪೇಕ್ಷಿಸುತ್ತೇವೆ.

**ಸೂತ**- ನಾರದ ಸೃಂಜಯನ ಮಗಳನ್ನು ಕಂಡು ಮೋಹಿತನಾದ. ತಪಸ್ವಿನಿಯೂ ವಿಷ್ಣುವ್ರತ ಪರಾಯಣೆಯೂ ಆದ ಅವಳನ್ನು ಪಡೆಯಲು ಬ್ರಹ್ಮಸಭೆಗೇ ಹೋಗಿ ತಂದೆಗೆ ನಮಸ್ಕರಿಸಿ ಎಲ್ಲವನ್ನೂ ತಿಳಿಸಿದ. ಬ್ರಹ್ಮ ಈ ಶುಭವಾರ್ತೆ ಕೇಳಿ ಹರ್ಷಿತನಾದ. ಆತ ಒಂದು ಶುಭ ಮುಹೂರ್ತದಲ್ಲಿ ಮಗನನ್ನು ಮುಂದಿಟ್ಟುಕೊಂಡು ರತ್ನವಿಮಾನವೇರಿ ಸೃಂಜಯನ ಅರಮನೆಗೆ ಬಂದ. ಸೃಂಜಯರಾಜ ರತ್ನಾಭರಣ ಭೂಷಿತಳಾದ ಸುಂದರಿಯಾದ ಕನ್ಯೆಯನ್ನು ಸಂತೋಷದಿಂದ ನಾರದನಿಗೆ ದಾನ ಮಾಡಿದ. ಸರ್ವಸ್ವದಕ್ಷಿಣೆಯನ್ನು ನೀಡಿ ಕೈಮುಗಿದು ನಿಂದ. ಕನ್ಯೆಯನ್ನು ಬ್ರಹ್ಮನಿಗೆ ಒಪ್ಪಿಸಿ 'ಮಗಳೆ, ಮಗಳೆ, ಕಮಲದಂಥ ಕಣ್ಣಿನವಳೆ, ನನ್ನ ಮನೆಯನ್ನು ಶೂನ್ಯವನ್ನಾಗಿ

ಮಾಡಿ ಎಲ್ಲಿಗೆ ಹೋಗುವಿ? ನಿನ್ನನ್ನಗಲಿದ ಬಳಿಕ ನಾನು ಬದುಕಿದ್ದರೂ ಸತ್ತಂತೆಯೆ. ಅದರಿಂದ ನಾನು ಘೋರವಾದ ಅರಣ್ಯಕ್ಕೇ ಹೋಗುತ್ತೇನೆ' ಎನ್ನುತ್ತ ಅಳತೊಡಗಿದ. ಕನ್ಯೆ ಅಳುವ ತಂದೆಗೆ ನಮಿಸಿದಳು. ಅಳುವ ತಾಯಿಗೂ ನಮಿಸಿದಳು. ಅಳುತ್ತ ಬ್ರಹ್ಮನ ರಥವೇರಿದಳು. ಬ್ರಹ್ಮ ಕನ್ಯೆಯನ್ನು ಸ್ವೀಕರಿಸಿದ. ಮಗನನ್ನೂ ಸೊಸೆಯನ್ನೂ ಕರೆದುಕೊಂಡು ದೇವತೆಗಳ ಮತ್ತು ಮುನಿಗಳ ಸಮೇತರಾಗಿ ತನ್ನ ಲೋಕಕ್ಕೆ ಪ್ರಯಾಣ ಮಾಡಿದ. ಅಲ್ಲಿ ಮಂಗಳಕಾರ್ಯಗಳೆಲ್ಲವನ್ನೂ ವಿಧ್ಯುಕ್ತವಾಗಿ ಮಾಡಿ ಬ್ರಾಹ್ಮಣರಿಗೂ ದೇವತೆಗಳಿಗೂ ಸಿದ್ಧರಿಗೂ ಭೋಜನಮಾಡಿಸಿದ. ದುಂದುಭಿ ಮೊಳಗಿಸಿದ. ಮುನಿಶ್ರೇಷ್ಠನಾದ ನಾರದ ಪ್ರಾರಬ್ಧಕರ್ಮಬದ್ಧನಾಗಿ ಪರಿಮಳದ ಗಂಧ ಬಳಿದ ಮನೋಹರವಾದ ಹೂವಿನ ಹಾಸಿಗೆಯಲ್ಲಿ ಪತ್ನಿಯ ಜೊತೆಗೆ ರಮಿಸಿದ. ಪ್ರಾರಬ್ಧವನ್ನು ಯಾರಿಗೆ ತಾನೆ ಮೀರಲಾದೀತು?

ಹೀಗೆ ಮದುವೆ ಮಾಡಿಕೊಂಡು ಬ್ರಹ್ಮಲೋಕದಲ್ಲಿ ರಮ್ಯವಾದ ವಟಮೂಲದಲ್ಲಿ ವಾಸಮಾಡಿದ ನಾರದ. ತಪಸ್ಸನ್ನು ಮರೆತ. ಅಲ್ಲಿಗೆ ಪೂಜ್ಯ ಸನತ್ಕುಮಾರ ಆಗಮಿಸಿದ. ಶಿಶುವಿನಂತೆ ಬೆತ್ತಲೆಯಾಗಿ ಬ್ರಹ್ಮತೇಜಸ್ಸಿನಿಂದ ಜ್ವಲಿಸುತ್ತಿದ್ದ ಆತ. ಬ್ರಹ್ಮಸೃಷ್ಟಿಯಲ್ಲಿ ಎಲ್ಲರಿಗೂ ಆದಿಯಲ್ಲಿ ಹುಟ್ಟಿದರೂ ವಯಸ್ಸಿನಲ್ಲಿ ಇನ್ನೂ ಐದು ವರ್ಷದ ಮಗುವಿನಂತೆಯೇ ಕಾಣುತ್ತಿದ್ದ. ಪರಮಹಂಸ ಸನ್ಯಾಸಿಯಾದ್ದರಿಂದ ಶಿಖಾ ಯಜ್ಞೋಪವೀತ ರಹಿತನಾಗಿದ್ದು ಅನುಪನೀತನಂತೆ ಕಂಡರೂ ವೇದಾಧ್ಯಯನ ಸಂಧ್ಯಾವಂದನಾದಿಗಳನ್ನು ಬಿಟ್ಟಿರಲಿಲ್ಲ. ಕೃಷ್ಣಮಂತ್ರವನ್ನು ಸದಾ ಜಪಿಸುತ್ತಿದ್ದ. ಅವನಿಗೆ ಸಾಕ್ಷಾತ್ ನಾರಾಯಣ ಗುರು. ಅಸಂಖ್ಯಕಲ್ಪಗಳ ಕಾಲ ಆತ ಮೂವರು ಸೋದರರೊಂದಿಗೆ ವೈಷ್ಣವಾಗ್ರಣಿಯಾಗಿ, ಜ್ಞಾನಿಗಳಿಗೆ ಗುರುವಿಗೂ ಗುರುವಾಗಿದ್ದ. ನಾರದ ತನ್ನ ಬಳಿಗೆ ಬಂದ ಈ ಹಿರಿಯ ಸೋದರನನ್ನು ಕಂಡು ಒಡನೆ ತಲೆಬಾಗಿ ದಂಡಪ್ರಣಾಮ ಮಾಡಿದ. ಆತ ನಕ್ಕು ನಾರದನಿಗೆ ಹಿತ ನುಡಿದ -

'ತಮ್ಮ, ಏನು ಮಾಡುತ್ತಿರುವೆ? ಮದುವೆ ಮಾಡಿಕೊಂಡು ಸುಖವಾಗಿರುವೆಯ? ಸ್ತ್ರೀಪುರುಷರೊಳಗೆ ಪ್ರೇಮ ನಿತ್ಯ ಬೆಳೆಯುತ್ತದೆ, ನಿತ್ಯನೂತನವೂ ಆಗಿರುತ್ತದೆ. ಆದರೆ ಜ್ಞಾನಮಾರ್ಗಕ್ಕೆ ಅದು ತಡೆಯಾಗುತ್ತದೆ. ಭಕ್ತಿಯ ಬಾಗಿಲನ್ನು ಮುಚ್ಚುತ್ತದೆ. ಮೋಕ್ಷ ಮಾರ್ಗಕ್ಕೆ ದೂರವಾಗಿದ್ದು ಸಂಸಾರ ಬಂಧನಕ್ಕೆ ಕಾರಣವಾಗುತ್ತದೆ.

**ಪೀಯೂಷಬುದ್ಧ್ಯಾ ಗರಲಂ ಭುಂಕ್ತೇ ಪಾಪೀ ನರಾಧಮಃ ।**
**ಪರಂ ನಾರಾಯಣಂ ತ್ಯಕ್ತ್ವಾ ಯಸ್ಯಾಸ್ತೇ ವಿಷಯೇ ಮನಃ ॥**

ಸರ್ವೋತ್ತಮನಾದ ನಾರಾಯಣನನ್ನು ಬಿಟ್ಟು ವಿಷಯಾಸಕ್ತಿ ಹೊಂದುವವನು ಪಾಪಿ ನರಾಧಮನೆ ಸರಿ. ಅವನು ಅಮೃತವೆಂದು ಭ್ರಮಿಸಿ ವಿಷ ಕುಡಿಯುತ್ತಿದ್ದಾನಷ್ಟೆ.

ಭಗವಂತನನ್ನು ಹೊರತು ಕರ್ಮಮಾಡುವ ಎಲ್ಲರಿಗೂ ಕರ್ಮಫಲವಾದ ವಿಷಯ ಭೋಗವನ್ನು ಉಣಲೆ ಬೇಕಾಗುತ್ತದೆ. ನಾವು ಬ್ರಹ್ಮನ ಮಕ್ಕಳೂ ಇದಕ್ಕೆ ಹೊರತಲ್ಲ. ನಿನಗೆ ಕರ್ಮಫಲಭೋಗವಿಲ್ಲದಿರುತ್ತಿದ್ದರೆ ಗಂಧರ್ವಜನ್ಮವೇಕೆ ಬಂದಿತು? ದಾಸೀಪುತ್ರನಾಗಿ ಹೇಗೆ ಜನಿಸಿದೆ? ಭಕ್ತಸಂಗದಿಂದ ಬಿಡುಗಡೆ ಹೇಗಾಯಿತು?

ಆದರಿಂದ ನೀನು ಈ ಮಾಯಾಮಯಿಯಾದ ಪ್ರಿಯೆಯನ್ನು ತ್ಯಜಿಸು. ತಿರುಗಿ ತಪಸ್ಸಿಗೆ ಹೊರಡು. ಪುಣ್ಯಕರವಾದ ಭಾರತವರ್ಷದಲ್ಲಿ ಮಾಧವನನ್ನು ಭಜಿಸು. ಪ್ರಭುವಾದ ನಾರಾಯಣ ಮೋಕ್ಷಪದವಿಯನ್ನು ಕೊಡಲು ಕಾದು ನಿಂತಿರುವಾಗ ವಿಷಯಭೋಗದ ಕತ್ತಲಲ್ಲಿ ಕುರುಡಾಗಿರುವವನು ಮಾಯೆಯಿಂದ ವಂಚಿತನೆ ಸರಿ.

ಕೃಷ್ಣ ಎಂಬ ಎರಡಕ್ಷರದ ಮಂತ್ರವನ್ನು ನಾನು ನಿನಗೆ ಉಪದೇಶಿಸುತ್ತೇನೆ, ಪರಿಗ್ರಹಿಸು. ಮಂತ್ರಗಳಲ್ಲೆಲ್ಲ ಅದು ಅತ್ಯಂತ ಶ್ರೇಷ್ಠ. ಎಲ್ಲ ಪುರಾಣಗಳಲ್ಲಿ ನಾಲ್ಕುವೇದಗಳಲ್ಲಿ ಧರ್ಮಶಾಸ್ತ್ರಗಳಲ್ಲಿ ತಂತ್ರಗಳಲ್ಲಿ ಹುಡುಕಿದರೂ ಇದಕ್ಕಿಂತ ಮಿಗಿಲಾದ ಮಂತ್ರ ಇನ್ನೊಂದು ಸಿಗಲಾರದು. ಪುಷ್ಕರದಲ್ಲಿ ಸೂರ್ಯಗ್ರಹಣಕಾಲದಲ್ಲಿ ನಾರಾಯಣ ನನಗೆ ಈ ಮಂತ್ರವನ್ನು ಉಪದೇಶಿಸಿದ. ಅಸಂಖ್ಯಕಲ್ಪಗಳ ಕಾಲ ಅದನ್ನು ಜಪಿಸಿ ಸರ್ವಪೂಜ್ಯನಾಗಿ ಸರ್ವತ್ರ ಸಂಚರಿಸುತ್ತಿದ್ದೇನೆ'.

ಹೀಗೆ ಹೇಳಿ ಸನತ್ಕುಮಾರ ನಾರದನಿಗೆ ಸ್ನಾನಮಾಡಿಸಿ ಕೃಷ್ಣ ಮಂತ್ರೋಪದೇಶ ನೀಡಿದ. ಅಂದಿನಿಂದ ನಾರದ ಹಗಲು ರಾತ್ರಿ ಎನ್ನದೆ ಸದಾ ಪವಿತ್ರ ಜಪಮಣಿಮಾಲೆಯಿಂದ ಜಪಿಸುತ್ತಿದ್ದಾನೆ. ಸನತ್ಕುಮಾರ ನಾರದನಿಗೆ ಮಂತ್ರವನ್ನು ಉಪದೇಶಿಸಿ ಶುಭಾಶೀರ್ವಾದವನ್ನು ಮಾಡಿ ಭಗವಂತನ ದರ್ಶನಕ್ಕಾಗಿ ಗೋಲೋಕಕ್ಕೆ ತೆರಳಿದ. ಇತ್ತ ನಾರದ ಸರ್ವಸಿದ್ಧಿದಾಯಕವಾದ ಉತ್ತಮಮಂತ್ರವನ್ನು ಹೊಂದಿ, ಶ್ರೀಕೃಷ್ಣನಲ್ಲಿ ನಿಶ್ಚಲವಾದ ಭಕ್ತಿ ಮಾಡುವುದೆ ಪ್ರಾರಬ್ಧನಾಶಕವೆಂದು ತಿಳಿದು, ಮಾಯಾಮಯಿಯಾದ ಪತ್ನಿಯನ್ನು ತ್ಯಜಿಸಿದ. ಭಾರತದಲ್ಲಿ ತಪಸ್ಸು ಮಾಡಲು ಹೊರಟು ಕೃತಮಾಲಾ ನದೀತೀರಕ್ಕೆ ಬಂದಾಗ ಶಂಕರರನನ್ನು ಕಂಡು ತಲೆಬಾಗಿ ನಮಿಸಿದ. ಶಂಕರ ನುಡಿದ -

**ಶಂಕರ:-** 'ನಾರದ, ನಿನ್ನನ್ನು ನೋಡಿ ನನಗೆ ಆನಂದವಾಯಿತು. ದೇಹಿಗಳಿಗೆ ಕೃಷ್ಣಭಕ್ತರ ದರ್ಶನವಾದ ದಿನವೆ ಸುದಿನ. ಭಕ್ತರ ಸಹವಾಸ ದೊರಕುವುದೆ ಮಹಾಭಾಗ್ಯ. ಭಕ್ತರ ದರ್ಶನ ಒಂದೇ ಸಕಲ ತೀರ್ಥಸ್ನಾನದ ಫಲ ಕೊಡುವುದು. ಸರ್ವಶಾಸ್ತ್ರಗಳಲ್ಲಿಯೂ ದುರ್ಲಭವಾದ ಶ್ರೀಕೃಷ್ಣಮಹಾಮಂತ್ರ ನಿನಗೆ ಸಿಕ್ಕಿದೆ ತಾನೆ! ನಾನು ಈ ಮಂತ್ರವನ್ನು ಗಣೇಶ ಸ್ಕಂದರಿಗೆ ಉಪದೇಶಿಸಿದ್ದೇನೆ. ನನಗೆ ಕೃಷ್ಣ ಗೋಲೋಕದ ರಾಸಮಂಡಲದಲ್ಲಿ ಉಪದೇಶಿಸಿದ. ಬ್ರಹ್ಮನಿಗೂ ಧರ್ಮನಿಗೂ ಅವನೆ ಉಪದೇಶಿಸಿದ. ಧರ್ಮ ನಾರಾಯಣನಿಗೂ ಬ್ರಹ್ಮ ಸನತ್ಕುಮಾರನಿಗೂ ಉಪದೇಶಿದ. ಸನತ್ಕುಮಾರ ಈಗ ನಿನಗೆ ಉಪದೇಶಿಸಿದ್ದಾನೆ. ಈಮಂತ್ರವನ್ನು ಉಪದೇಶ ಪಡೆದ ಮಾತ್ರಕ್ಕೆ ನರ ನಾರಾಯಣನಂತಾಗುತ್ತಾನೆ. ಅದಕ್ಕೆ ಕಾಲ ಅಕಾಲ ಶುಭ ಅಶುಭವೆಂದೇನೂ ನೋಡಬೇಕಾಗಿಲ್ಲ. ಐದು ಲಕ್ಷ ಜಪದಿಂದಲೆ ಪುರಶ್ಚರಣ ಮಾಡಬೇಕು. ಧ್ಯಾನವೂ ಸಾಮವೇದೋಕ್ತವಾದುದು ಉಂಟು. ಅದರಿಂದ ಧ್ಯಾನ ಮಾಡಬೇಕು. ಧ್ಯಾನ ಪಾಪಗಳನ್ನು ಸುಡುತ್ತದೆ. ಕರ್ಮದ ಮೂಲವನ್ನು ಕತ್ತರಿಸುತ್ತದೆ.

**ಧ್ಯೇಯಮೂರ್ತಿ:-** ನವಮೇಘಶ್ಯಾಮ, ಪೀತಾಂಬರಧಾರಿ, ಬಾಲಕೃಷ್ಣ. ಅವನದು ನೂರುಕೋಟಿ ಚಂದ್ರರ ಕಾಂತಿ. ರಾಶಿರಾಶಿ ಅಮೂಲ್ಯ ರತ್ನಾಭರಣಗಳ ಅಲಂಕಾರ.

ಮೈಯೆಲ್ಲ ಶ್ರೀಗಂಧದ ಲೇಪ. ಎದೆಯಲ್ಲಿ ಕೌಸ್ತುಭಮಣಿ. ತಲೆಯ ಮೇಲೆ ನವಿಲಗರಿ, ಕೊರಳಲ್ಲಿ ಮಾಲತೀಮಾಲೆ. ಮುಖದಲ್ಲಿ ಮಂದಹಾಸ. ಶಿವಾದಿಗಳು ನಿತ್ಯ ಉಪಾಸನೆ ಮಾಡುವ, ಧ್ಯಾನಕ್ಕೆ ನಿಲುಕದ, ನಿರ್ಗುಣ ಅಪ್ರಾಕೃತ ಸ್ವರೂಪ. ಎಲ್ಲರ ಅಂತರ್ಯಾಮಿಯಾಗಿದ್ದಾನೆ. ಭಕ್ತರನ್ನು ಅನುಗ್ರಹಿಸಲೆಂದೆ ಅವತರಿಸುವವ. ವೇದಗಳಿಂದಲೂ ವರ್ಣಿಸಲಾಗದವ. ಸರ್ವೇಶ್ವರ ಈತ. ಪರಮಾನಂದ ಸ್ವರೂಪ ಸತ್ಯ ನಿತ್ಯ, ಪರಾತ್ಪರ ಸನಾತನನಾದ ಭಗವಂತನನ್ನು ಹೀಗೆ ಧ್ಯಾನಿಸಿ ಮಂತ್ರ ಜಪಿಸಬೇಕು. -

ಹೀಗೆ ಹೇಳಿ ಶಿವ ತನ್ನ ಲೋಕಕ್ಕೆ ತೆರಳಿದ. ನಾರದ ಅವನನ್ನು ವಂದಿಸಿ ತಪಸ್ಸಿಗೆ ತೊಡಗಿದ. ಯೋಗಬಲದಿಂದ ಹರಿಸ್ಮರಣ ಪೂರ್ವಕವಾಗಿ ಶರೀರವನ್ನು ತೊರೆದು ಕಮಲೆ ಕಮಲಗಳಿಂದ ಅರ್ಚಿಸುವ ಕೃಷ್ಣನ ಪಾದಕಮಲದಲ್ಲಿ ಲೀನನಾದ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣ ಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ನಾರಾಯಣ ನಾರದ ಸಂವಾದದಲ್ಲಿ ನಾರದವಿವಾಹಾದಿ ಪ್ರಕರಣವೆಂಬ ನೂರಮೂವತ್ತನೆಯ ಅಧ್ಯಾಯ ಮುಗಿಯಿತು.*



## ವಹ್ನಿಯ ಮತ್ತು ಸುವರ್ಣದ ಉತ್ಪತ್ತಿ | ಅಧ್ಯಾಯ - ೧೩೧

**ಶೌನಕ ನುಡಿದ -** ಸೂತ, ಅತ್ಯಂತ ಅಪೂರ್ವವಾದ ಆಖ್ಯಾನ ಇದು. ಅತ್ಯಂತ ಆಶ್ಚರ್ಯಕರ ರಹಸ್ಯ ಮನೋಹರ, ವಿನೂತನ. ಅದರ ಸೌಂದರ್ಯ ಅನಿರ್ವಚನೀಯ. ಇಂಥ ಕಥೆ ಪುರಾಣಗಳಲ್ಲಿ ಬಹಳ ದುರ್ಲಭ. ಇದನ್ನು ಕೇಳಿದ ಈ ದಿನವೆ ನಮಗೆ ಸುದಿನ. ಇಂಥ ದಿನ ನಮಗೆ ಮುಂದೆ ಎಂದು ಬರುವುದೊ! ವಿಷ್ಣುಭಕ್ತರ ಒಡನಾಟ ಸಿಕ್ಕಿದರೇ ಹೀಗೆ ಜನ್ಮ ಸಫಲವಾಗುವುದು. ಗರ್ಭವಾಸ ತಪ್ಪುವುದು. ಕರ್ಮದ ಮೂಲ ಕತ್ತರಿಸಿ ಹೋಗುವುದು. ಹರಿದಾಸ್ಯ ಲಭಿಸುವುದು. ಹರಿಭಕ್ತಿ ವರ್ಧಿಸುವುದು. ದುರ್ಜನ ಸಂಗದಿಂದ ಬರುವ ದುರ್ಬುದ್ಧಿ ಪಾಪ ಸಮೂಲ ನಾಶ ಹೊಂದುವುದು.

ಪುರಾಣಗಳಲ್ಲಿ ದುರ್ಲಭವಾದ ಗಣೇಶಜನ್ಮದ ಕಥೆಯನ್ನು ನಿನ್ನಿಂದ ಕೇಳಿದೆವು. ತುಲಸೀ ರಾಧೆಯರ ಅಪೂರ್ವ ಕಥೆಯನ್ನು ಕೇಳಿದೆವು. ಎಲ್ಲವೂ ನೂತನ, ರಹಸ್ಯ, ಮನೋಹರ. ಈಗ ವಹ್ನಿಯ ಮತ್ತು ಸುವರ್ಣದ ಉತ್ಪತ್ತಿಯನ್ನು ಕೇಳಲು ಬಯಸುತ್ತೇವೆ, ವಿವರಿಸಿ ಹೇಳು.

**ಸೂತ:-** ನೀರು ಬೆಂಕಿಗಳು ಸೃಷ್ಟಿಗೆ ಸಾಧನಗಳು. ಆದರೆ ದಿಕ್ಕು ಆಕಾಶಗಳಂತೆ ಪ್ರಕೃತಿ ಮಹತ್ತತ್ವಾದಿಗಳು ನಿತ್ಯವೇ ಆದರೂ ಪ್ರಕೃತಿಯಿಂದ ಮಹತ್ತತ್ವ, ಅದರಿಂದ ಅಹಂಕಾರತತ್ವ, ಅದರಿಂದ ಶಬ್ದತನ್ಮಾತ್ರೆ ಹೀಗೆ ಸೃಷ್ಟಿ ಮುಂದುವರಿಯುವಂತೆ ನೀರು ಬೆಂಕಿಗಳಿಗೂ ಸೃಷ್ಟಿ ಇದೆ. ಆದರೂ ಇನ್ನೊಂದು ಬಗೆಯಿಂದ ಸೃಷ್ಟಿಯಾದುದನ್ನು ಹೇಳುತ್ತೇನೆ. ಒಮ್ಮೆ ಸೃಷ್ಟಿಕಾಲದಲ್ಲಿ ಬ್ರಹ್ಮ ಶೇಷ ಶಿವರು ಜಗದೊಡೆಯನಾದ ವಿಷ್ಣುವನ್ನು ಕಾಣಲು ಶ್ವೇತದ್ವೀಪಕ್ಕೆ ಹೋದರು. ಅಲ್ಲಿ ಸಿಂಹಾಸನಗಳಲ್ಲಿ ಕುಳಿತು ಪರಸ್ಪರ ಸಂಭಾಷಣೆ ನಡೆಸಿದರು. ಆಗ ವಿಷ್ಣುವಿನ ಮೈಯಿಂದ ಉದ್ಭವಿಸಿದ

ಕಾಮಿನಿಯರು ಸುಸ್ವರದಿಂದ ಹರಿಕೀರ್ತನೆಗಳನ್ನು ಹಾಡುತ್ತ ಕುಣಿದರು. ಅವರ ಮೈಮಾಟವನ್ನೂ ನಗುಮೊಗದ ಅಂದವನ್ನೂ ಕಂಡು ಬ್ರಹ್ಮ ಮೋಹಪರವಶನಾದ; ಅದರಿಂದ ವೀರ್ಯ ಸ್ಖಲನ ಹೊಂದಿತು. ಅದನ್ನು ಬಟ್ಟೆಯಿಂದ ಮುಚ್ಚಿಕೊಂಡ. ಕಾಮಾಗ್ನಿಯಿಂದ ಆ ಬಟ್ಟೆ ಕಾದುಹೋಯಿತು. ಅದನ್ನು ಕ್ಷೀರಸಮುದ್ರದಲ್ಲಿ ಹಾಕಿದ. ಸಮುದ್ರದ ನೀರಿನಿಂದ ಬ್ರಹ್ಮತೇಜಸ್ಸಿನಿಂದ ಹೊಳೆವ ಬಾಲಕನೊಬ್ಬ ಮೇಲೆ ಎದ್ದುಬಂದ. ಬ್ರಹ್ಮನ ತೊಡೆಯಲ್ಲಿ ಬಂದು ಕುಳಿತ. ಆಗ ನೀರಿನಿಂದ ವರುಣ ಎದ್ದುಬಂದು ಬ್ರಹ್ಮನಿಗೆ ನಮಸ್ಕಾರ ಮಾಡಿ ಬಾಲಕನನ್ನು ಕರೆದೊಯ್ಯಲು ಉದ್ಯುಕ್ತನಾದ. ಬಾಲಕ ಅಳುತ್ತ ಬ್ರಹ್ಮನನ್ನೇ ಬಲವಾಗಿ ಎರಡೂ ತೋಳುಗಳಿಂದ ಹಿಡಿದುಕೊಂಡ. ಬ್ರಹ್ಮ ನಾಚಿ ಏನೂ ಹೇಳದೆ ಸುಮ್ಮನಿದ್ದ. ವರುಣ ಕೋಪದಿಂದ ಬಾಲಕನ ಕೈ ಹಿಡಿದು ಎಳೆದ. ಆಗ ಬ್ರಹ್ಮ ಅವನನ್ನು ನೂಕಿದ. ದುರ್ಬಲನಾದ ವರುಣ ಬಲುದೂರಕ್ಕೆ ಹೋಗಿಬಿದ್ದ. ಬ್ರಹ್ಮನ ಕೋಪದ ನೋಟದಿಂದ ಮೂರ್ಛಿತನಾಗಿ ಶವದಂತೆ ಕಾಣಿಸಿಕೊಂಡ. ಶಂಕರ ತನ್ನ ಅಮೃತದೃಷ್ಟಿಯಿಂದ ಅವನನ್ನು ಚೇತನಗೊಳಿಸಿದ. ಅವನು ಎಚ್ಚೆತ್ತು ಕೇಳಿದ -

'ಈ ಬಾಲಕ ಅಗ್ನಿ. ನೀರಲ್ಲಿ ಹುಟ್ಟಿದವ. ನನ್ನ ಮಗ. ಅವನು ನನಗೆ ಬೇಕು. ಅದಕ್ಕೆ ನಾನು ಅವನನ್ನು ಕರೆದೊಯ್ಯುತ್ತೇನೆ. ಬ್ರಹ್ಮ ನನ್ನನ್ನೇಕೆ ಹೊಡೆಯುತ್ತಿದ್ದಾನೆ?'

**ಬ್ರಹ್ಮ:-** 'ವಿಷ್ಣು! ಶಿವ! ಈ ಬಾಲಕ ನನ್ನನ್ನು ಶರಣಾಗಿದ್ದಾನೆ. ಹೆದರಿ ಶರಣಾಗತನಾಗಿ ಅಳುತ್ತಿರುವವನನ್ನು ನಾನು ಹೇಗೆ ಬಿಟ್ಟು ಕೊಡಲಿ?

**ಶರಣಾಗತದೀನಾರ್ತಂ ಯೋ ನ ರಕ್ಷೇದಪಂಡಿತಃ ।**
**ಪಚ್ಯತೇ ನಿರಯೇ ತಾವದ್ ಯಾವಚ್ಚಂದ್ರದಿವಾಕರಂ ॥**

ಶರಣಾಗತ ದೀನ ಆರ್ತರನ್ನು ಯಾವ ಮೂರ್ಖ ರಕ್ಷಿಸುವುದಿಲ್ಲವೊ ಅವನು ಚಂದ್ರ ಸೂರ್ಯರಿರುವಷ್ಟು ಕಾಲವೂ ನರಕದಲ್ಲಿ ಬೇಯುತ್ತಾನೆ.

ಇಬ್ಬರ ಮಾತನ್ನೂ ಕೇಳಿ ಸರ್ವಜ್ಞ ಸರ್ವೇಶ್ವರನಾದ ವಿಷ್ಣು ನಕ್ಕು ನುಡಿದ :

'ಈ ಬಾಲಕ ಬ್ರಹ್ಮನ ವೀರ್ಯದಿಂದ ಉತ್ಪನ್ನನಾದ್ದರಿಂದ ಧರ್ಮಕ್ಕೆ ಅನುಗುಣವಾಗಿ ಮುಖ್ಯವಾಗಿ ಬ್ರಹ್ಮನ ಪುತ್ರನೆನಿಸುತ್ತಾನೆ. ವರುಣನ ಕ್ಷೇತ್ರವಾದ ನೀರಲ್ಲಿ ಜನಿಸಿದ್ದರಿಂದ ಗೌಣವಾಗಿ ವರುಣನ ಪುತ್ರನೂ ಹೌದು.'

**ಮಹಾದೇವ:-** 'ವಿದ್ಯಾಸಂಬಂಧಿಯಾದ ಶಿಷ್ಯನೂ ರಕ್ತಸಂಬಂಧಿಯಾದ ಮಗನೂ ಸಮಾನರೆಂದು ವೇದಗಳು ಹೇಳುತ್ತಿವೆ. ವರುಣ ಬಾಲಕನಿಗೆ ವಿದ್ಯೆ ನೀಡಲಿ, ಮಂತ್ರೋಪದೇಶ ಮಾಡಲಿ. ಆಗ ಅವನು ವರುಣನಿಗೆ ಶಿಷ್ಯನಾಗುತ್ತಾನೆ, ಬ್ರಹ್ಮನಿಗೆ ಮಗನಾಗುತ್ತಾನೆ. ಅವನಿಗೆ ಉಜ್ವಲವಾದ ದಾಹಶಕ್ತಿಯನ್ನು ವಿಷ್ಣು ನೀಡಲಿ. ಸರ್ವದಾಹಕನಾದ ಈತ ವರುಣನ ಕೋಪದಿಂದ ತಣ್ಣಗಾಗಿದ್ದಾನೆ.'

ಇದನ್ನು ಕೇಳಿ ವಿಷ್ಣು ಬಾಲಕನಿಗೆ ದಾಹಶಕ್ತಿ ನೀಡಿದ. ವರುಣ ಮಂತ್ರೋಪದೇಶ ಮಾಡಿ ವಿದ್ಯೆಯನ್ನುನೀಡಿದ. ರತ್ನಮಾಲೆಯನ್ನು ಹಾಕಿ ತೊಡೆಯಲ್ಲಿ ಕೂಡಿಸಿಕೊಂಡು

ಪ್ರೀತಿಯಿಂದ ಮುದ್ದಿಸಿದ. ಬಳಿಕ ಬ್ರಹ್ಮನಿಗೂ ವಿಷ್ಣು ಶಂಕರರಿಗೂ ಒಪ್ಪಿಸಿದ. ವಿಷ್ಣುವನ್ನು ನಮಿಸಿ ಬ್ರಹ್ಮ ಶಂಕರರು ತಮ್ಮ ಲೋಕಗಳಿಗೆ ತರಳಿದರು.

ಇದು ಅಗ್ನಿಯ ಉತ್ಪತ್ತಿಯ ಕಥೆ. ಇನ್ನು ಸುವರ್ಣೋತ್ಪತ್ತಿಯ ಕಥೆಯನ್ನೂ ಹೇಳುತ್ತೇನೆ ಕೇಳಿ. ಒಮ್ಮೆ ಎಲ್ಲ ದೇವತೆಗಳೂ ಸ್ವರ್ಗದ ಸಭೆಯಲ್ಲಿ ಕುಳಿತಿದ್ದಾಗ ಅಪ್ಸರೆಯರು ಹಾಡುತ್ತ ಕುಣಿದರು. ಆಗ ರಂಭೆಯ ಮೈಮಾಟವನ್ನು ಕಂಡು ಅಗ್ನಿ ಮೋಹಿತನಾದ. ಅವನ ವೀರ್ಯ ಜಾರಿತು. ಅದನ್ನು ಬಟ್ಟೆಯಲ್ಲಿ ಮುಚ್ಚಿಟ್ಟ. ಆಗ ಚಿನ್ನದ ರಾಶಿ ಎದ್ದು ಬಟ್ಟೆಯನ್ನು ದೂರ ಎಸೆದು ಉಜ್ವಲ ಪ್ರಭೆಯಿಂದ ಬೆಳಗಿತು. ಕ್ಷಣದಲ್ಲಿ ಆ ರಾಶಿ ಬೆಳೆದು ಬೆಟ್ಟವಾಯಿತು, ಮೇರು ಪರ್ವತವಾಯಿತು. ಅದರಿಂದ ಅಗ್ನಿಯನ್ನು ಹಿರಣ್ಯರೇತಸ್ಸೆಂದು ಕರೆಯುತ್ತಾರೆ. ಹೀಗೆ ಎಲ್ಲವನ್ನೂ ಹೇಳಿದ್ದೇನೆ, ಶೌನಕರೆ, ಇನ್ನೇನು ಕೇಳಲು ಬಯಸುವಿರಿ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧ ವಹ್ನಿಸುವರ್ಣೋತ್ಪತ್ತಿ ಎಂಬ ನೂರ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.*



## ಅನುಕ್ರಮಣಿಕೆ

**ಅಧ್ಯಾಯ - ೧೩೨**

**ಶೌನಕ:-** ಕೇಳುವುದನ್ನೆಲ್ಲ ಕೇಳಿಯಾಯಿತು. ಇಂಥ ಪುರಾಣವನ್ನು ಜನ್ಮದಲ್ಲಿ ಕೇಳಿಲ್ಲ. ನಿನ್ನಂಥ ಪ್ರವಚನಕಾರನನ್ನೂ ಜನ್ಮದಲ್ಲಿ ನೋಡಿಲ್ಲ, ಕೇಳಿಲ್ಲ. ಈಗ ಇನ್ನೊಮ್ಮೆ ಈಪುರಾಣವನ್ನು ಸಂಕ್ಷೇಪವಾಗಿ ಹೇಳು.

**ಸೂತ:-** ಕೇಳಿ, ಮನಸ್ಸಿಟ್ಟು ಕೇಳಿ. ಈ ಒಂದು ಅಧ್ಯಾಯವನ್ನು ಕೇಳಿದರೆ ಇಡೀ ಪುರಾಣವನ್ನು ಕೇಳಿದ ಫಲ ಸಿಗುತ್ತದೆ.

ಬ್ರಹ್ಮಖಂಡದಲ್ಲಿ ಅನಿರ್ವಚನೀಯ ಪರಬ್ರಹ್ಮನ ನಿರೂಪಣೆ. ಸಾಕಾರ ನಿರಾಕಾರ ಸಗುಣ ನಿರ್ಗುಣ ಧ್ಯಾನದಲ್ಲಿ ಯಾರುಯಾರಿಗೆ ಎಷ್ಟು ಶಕ್ತಿ ಎನ್ನುವುದರ ವಿವರಣೆ, ಗೋಲೋಕಾದಿಗಳ ವರ್ಣನೆ. ಅದಕ್ಕೆ ಉಪಯುಕ್ತವಾದ ಉಪಾಖ್ಯಾನಗಳು ಪ್ರಾಸಂಗಿಕವಾಗಿ ನಿರೂಪಿತವಾಗಿವೆ. ಜಾತಿಗಳು ಸಂಕರಜಾತಿಗಳ ವಿವರಣೆ, ನಡುವೆ ಪ್ರಶ್ನೆಗನುಗುಣವಾಗಿ ಉಪಾಖ್ಯಾನಗಳು.

ರಾಧಾಮಾಧವರ ಕ್ರೀಡೆ, ಮಹಾವಿಷ್ಣುವಿನ ಉದ್ಭವಗಳ ಸಂಕ್ಷೇಪವರ್ಣನೆ. ಬ್ರಹ್ಮನಾರದರ ಸಂವಾದ. ನಾರದನಿಗೆ ವಿವೇಕ ಬಂದುದು. ಬ್ರಹ್ಮನ ಅಪ್ಪಣೆಯಂತೆ ನಾರದ ನರನಾರಾಯಣಾಶ್ರಮಕ್ಕೆ ಹೋದುದು, ಅಲ್ಲಿ ನಾರಾಯಣಮುನಿಯೊಡನೆ ಮಾತುಕಥೆ, ಇವು ವರ್ಣಿತವಾಗಿವೆ.

ಮುಂದೆ ಅಮೃತಖಂಡಕ್ಕೆ ಸಮನಾದ ಪ್ರಕೃತಿಖಂಡ. ಅದರಲ್ಲಿ ಪ್ರಕೃತಿಲಕ್ಷಣ. ಪ್ರಕೃತಿಗಳ ವರ್ಣನೆ. ಅವರ ಉಪಾಖ್ಯಾನಗಳು ಪೂಜೆ ಮುಂತಾದವು. ಲಕ್ಷ್ಮೀ ಸರಸ್ವತಿ ದುರ್ಗೆ ಸಾವಿತ್ರಿ ರಾಧೆಯರ ಚರಿತ್ರೆಗಳು. ಉಪಾಖ್ಯಾನಗಳು. ಮಹಾಲಕ್ಷ್ಮಿ ಸರಸ್ವತಿ ರಾಧೆಯರ ಆಖ್ಯಾನಗಳು. ಸಾವಿತ್ರಿಯ ಕಥೆ, ಯಮ ಸಾವಿತ್ರಿಯರ ಸಂವಾದ,

ಸತ್ಯವಾನನಿಗೆ ಜೀವದಾನ. ನರಕಕುಂಡಗಳ ವರ್ಣನೆ. ಪ್ರಾಣಿಗಳ ಕರ್ಮವಿಪಾಕ. ಯಾವ ದುಷ್ಕರ್ಮಕ್ಕೆ ಯಾವ ಫಲ ಎಂಬ ನಿರ್ಣಯ. ಪುರಾಣಗಳಲ್ಲಿ ಅತ್ಯಂತ ರಹಸ್ಯವಾದ ಅಪೂರ್ವವಾದ ರಾಧೆಯ ಚರಿತ್ರೆ. ಸುಯಜ್ಞರಾಜನ ಉಪಾಖ್ಯಾನ, ತುಲಸಿಯ ಉಪಾಖ್ಯಾನ. ಮಹೇಶ ಶಂಖಚೂಡರ ಸಂವಾದ, ಮಹಾಯುದ್ಧ. ತುಲಸಿ ಕೃಷ್ಣರ ಸಂವಾದಸಂಭೋಗ, ಶಂಖಚೂಡವಧ, ಶ್ರೀದಾಮನ ಶಾಪವಿಮೋಚನೆ. ದೇವತೆಗಳ ಪದವಿ ಪ್ರಾಪ್ತಿ, ಆಪತ್ತುಗಳ ಪರಿಹಾರ. ಮೋಕ್ಷಕಾರಣವಾದ ಗಂಗೋಪಾಖ್ಯಾನ. ಮನಸಾ ಸ್ವಾಹಾ ಸ್ವಧಾ ಮುಂತಾದವರ ಉಪಾಖ್ಯಾನಗಳು.

ಗಣಪತಿಖಂಡ ಅತ್ಯಂತ ಮಧುರ ಮನೋಹರ. ಪುರಾಣಗಳಲ್ಲಿ ಅತ್ಯಂತ ರಹಸ್ಯ. ಇದರಲ್ಲಿ ಪಾರ್ವತೀ ಪರಮೇಶ್ವರರ ಕ್ರೀಡೆ, ಸ್ಕಂದನ ಉತ್ಪತ್ತಿ, ಕ್ರೀಡಾಭಂಗ, ಪಾರ್ವತಿಯನ್ನು ಸಂತೋಷಗೊಳಿಸಿದುದು, ಅಭಿಮಾನವನ್ನು ಕಳೆದುದು. ದೇವಿಯ ಪುಣ್ಯಕವ್ರತ, ಹರಿಯ ವರದಾನ, ಹರಿ ಬ್ರಾಹ್ಮಣರೂಪದಿಂದ ಅತಿಥಿಯಾಗಿ ಕಾಣಿಸಿಕೊಂಡುದು. ಶಿವಮಂದಿರದಲ್ಲಿ ಗಣೇಶನ ಆವಿರ್ಭಾವ, ಶಿವಪಾರ್ವತಿಯರು ಮಗನ ಮುಖವನ್ನು ಕಂಡುದು. ಸಂತೋಷಕರವಾದ ಮಹೋತ್ಸವ ಮಾಡಿದುದು. ಜಗತ್ಪ್ರಭು ಪರಬ್ರಹ್ಮ ಸ್ವರೂಪನಾದ ಬಾಲಗಣೇಶನನ್ನು ದೇವತೆಗಳು ಮುಂತಾದವರು ದರ್ಶನ ಮಾಡಿದುದು. ಸಕಲ ವಿಘ್ನನಿವಾರಕ ಸಕಲ ಸಂಪದ್ದಾಯಕ ಜಪತಪ ವ್ರತ ಅನುಷ್ಠಾನಗಳಿಗೆ ಫಲದಾಯಕ ಗಣೇಶ. ಸುಂದರನಾಗಿದ್ದು ಸ್ತ್ರೀಯರಿಗೆ ಆಕರ್ಷಕನಾದವ, ಪಾರ್ವತೀ ಪರಮೇಶ್ವರರಿಗೆ ಪ್ರಾಣಕ್ಕಿಂತ ಹೆಚ್ಚು ಪ್ರಿಯ. ಷಡ್ಗುಣೈಶ್ವರ್ಯ ಸಂಪನ್ನ, ಸಾಕ್ಷಾತ್ ನಾರಾಯಣ ಸ್ವರೂಪ, ದರ್ಶನ ಸ್ತೋತ್ರ ನಮಸ್ಕಾರ ಪೂಜೆಗಳಿಂದ ಕೋಟಿಜನ್ಮಗಳ ಪಾಪ ಪರಿಹರಿಸುವವ, ಧ್ಯಾನಕ್ಕೆ ನಿಲುಕದವ, ಇಂಥ ಗಣೇಶನನ್ನು ದೇವತೆಗಳು ಮುಂತಾದವರು ದರ್ಶನ ಮಾಡಿದುದು ವರ್ಣಿತವಾಗಿದೆ.

ಕುಮಾರಸ್ವಾಮಿಯನ್ನು ಎತ್ತಿಕೊಂಡು ಪಟ್ಟಾಭಿಷೇಕ ಮಾಡಿದುದು, ಸರ್ವವಿಘ್ನ ನಿವಾರಕವಾದ ಗಣೇಶಪೂಜೆ, ಕಾರ್ತವೀರ್ಯಾರ್ಜುನ ಜಮದಗ್ನಿಯರ ಯುದ್ಧ, ಕಾಮಧೇನುವಿನ ಅಪಹಾರ, ಜಮದಗ್ನಿಯ ಮರಣ, ಪತಿವ್ರತೆಯಾದ ರೇಣುಕೆ ಚಿತೆ ಏರಿದುದು. ಇಪ್ಪತ್ತೊಂದು ಬಾರಿ ಭೂಮಿಯಲ್ಲಿ ತಿರುಗಿ ಕ್ಷತ್ರಿಯರ ಕುಲವನ್ನು ತರಿವ ಪರಶುರಾಮನ ಘೋರ ಪ್ರತಿಜ್ಞೆ. ಗಣೇಶ ಪರಶುರಾಮರ ಸಂವಾದ, ಯುದ್ಧಗಳು, ಗಣೇಶ ಏಕದಂತನಾದುದು, ದುರ್ಗೆ ವಿಲಾಪಮಾಡಿದುದು. ಪರಶುರಾಮನಿಗೆ ಶಾಪವಿತ್ತುದು, ಪರಶುರಾಮ ನೆನೆದೊಡನೆ ಹರಿ ಆವಿರ್ಭವಿಸಿದುದು, ಪಾರ್ವತಿಗೆ ಉಪದೇಶ ಮಾಡಿದುದು, ಆಶ್ಚರ್ಯಕರವಾದ ಶಿವಲೋಕದ ವರ್ಣನೆ, ಶಿವ ಪರಶುರಾಮನಿಗೆ ಮಹಾಸ್ತ್ರವನ್ನೂ ಕೃಷ್ಣಮಂತ್ರಕವಚಗಳನ್ನೂ ಉಪದೇಶಿಸಿ ಅಭಯವರ ನೀಡಿದುದು. ಪರಶುರಾಮ ಇಪ್ಪತ್ತೊಂದು ಬಾರಿ ಕ್ಷತ್ರಿಯರನ್ನು ಸಂಹರಿಸಿದುದು, ಭೂಭಾರ ಪರಿಹಾರ ಮಾಡಿದುದು, ಇವು ಪ್ರಶ್ನೆಗಳಿಗೆ ಅನುಗುಣವಾಗಿ ಕ್ರಮದಿಂದ ವರ್ಣಿತವಾದುವು.

ಶ್ರೀಕೃಷ್ಣ ಜನ್ಮ ಖಂಡ ಜನನ ಮರಣ ಜರೆ ವ್ಯಾಧಿಗಳನ್ನು ಕಳೆದು ಮೋಕ್ಷ ನೀಡುವಂಥದ್ದು, ಹರಿದಾಸ್ಯಪ್ರದ, ಶುದ್ಧ, ಸುಶ್ರಾವ್ಯ, ಅಮೃತದಂತಿದೆ. ಅತ್ಯಂತ ಅಪೂರ್ವವಾದ ರಮ್ಯವಾದ ಹೊಸ ಹೊಸ ಉಪಾಖ್ಯಾನಗಳಿಂದ ಕೂಡಿದೆ. ಜನ್ಮದಲ್ಲಿಯೆ ಕೇಳಿರದ ಹೆಜ್ಜೆಹೆಜ್ಜೆಗೂ ಸ್ವಾರಸ್ಯಕರವಾದ, ಮೋಕ್ಷಮಾರ್ಗಕ್ಕೆ ದೀಪದಂತಿರುವ, ಸಂಸಾರ ಸಾಗರ ದಾಟಿಸುವಲ್ಲಿ ನೌಕೆಯಂತಿರುವ, ಕರ್ಮಫಲಭೋಗದ ರೋಗವನ್ನು ಮರ್ದಿಸಲು ರಸಾಯನದಂತಿರುವ, ಶ್ರೀಕೃಷ್ಣ ಪಾದಕಮಲಪ್ರಾಪ್ತಿಗೆ ಸೋಪಾನವಾಗಿರುವ ಖಂಡ ಈ ಶ್ರೀಕೃಷ್ಣ ಜನ್ಮ ಖಂಡ. ಇದರಲ್ಲಿ ಶ್ರೀದಾಮರಾಧೆಯರ ಕಲಹ, ಅವರ ಶಾಪವೃತ್ತಾಂತ, ಬ್ರಹ್ಮನ ಪ್ರಾರ್ಥನೆಯಂತೆ ಹರಿ ಭೂತಲದಲ್ಲಿ ವಸುದೇವನ ಮಗನಾಗಿ ಅವತರಿಸಿದ್ದು. ಕಂಸಾಸುರನ ಭಯದಿಂದ ಗೋಕುಲಕ್ಕೆ ಹೋದುದು ವರ್ಣಿತವಾಗಿದೆ.

ಶ್ರೀದಾಮನ ಶಾಪದಿಂದ ರಾಧೆ ವೃಷಭಾನುವಿನ ಮಗಳಾಗಿ ಅವತರಿಸಿದುದು. ಗೋಕುಲದಲ್ಲಿ ಕೃಷ್ಣನ ಬಾಲಲೀಲೆ. ದೈತ್ಯಾದಿಗಳ ವಧೆ. ಗರ್ಗನ ಆಗಮನ, ಹರಿಯ ಅನ್ನಪ್ರಾಶನ, ಪೂತನಾ ಶಕಟ ಸಂಹಾರ. ಕೃಷ್ಣನನ್ನು ಕಟ್ಟಿದುದು; ಯಮಳಾರ್ಜುನ ಭಂಜನ. ಬಾಯಿಯಲ್ಲಿ ಮೂಲೋಕವನ್ನು ತೋರಿದುದು, ಕರುಗಳ ಅಪಹರಣ. ಕರುಗಳನ್ನು ನಿರ್ಮಿಸಿ ಬ್ರಹ್ಮ ಸ್ತುತಿಸಿದುದು. ಭಯದಿಂದ ಗೋಕುಲವನ್ನು ಬಿಟ್ಟು ನಂದ ಕೃಷ್ಣನೊಡನೆ ಪುಣ್ಯಕರವಾದ ವೃಂದಾವನಕ್ಕೆ ಹೋದುದು. ಗೋಪಿಯರ ಮತ್ತು ವಿಶೇಷವಾಗಿ ರಾಧೆಯ ಸೌಭಾಗ್ಯ ವರ್ಣನೆ. ಆಕಾಶದಲ್ಲಿ ನಿಂತು ದೇವತೆಗಳು ರಾಧಾ ಮಾಧವರ ದರ್ಶನ ಪಡೆದುದು. ರಾಸಮಂಡಲದಲ್ಲಿ ದೇವಿಯರ ಮನಸ್ಸು ವಿಚಲಿತವಾದುದು, ದೇವಿಯರು ಅಂಶದಿಂದ ಜನ್ಮ ಪಡೆದುದು.

ಅಕ್ರೂರನ ಆಗಮನ, ಗೋಪಿಯರ ವಿಲಾಪ, ಅವರು ಅಕ್ರೂರನನ್ನು ಆಕ್ಷೇಪಿಸಿದುದು, ಕೃಷ್ಣ ಮಥುರೆಗೆ ಹೋದುದು, ಗೋಕುಲವಾಸಿಗಳ ಶೋಕ, ರಾಧೆಯ ವಿರಹಶೋಕ ಜ್ವಾಲೆ, ಅಕ್ರೂರನಿಗೆ ಕೃಷ್ಣ ಯಮುನೆಯ ಹ್ರದದಲ್ಲಿ ತನ್ನ ಮೂರ್ತಿದರ್ಶನ ಮಾಡಿಸಿದುದು. ಮಥುರಾಪ್ರವೇಶ, ಅಗಸರವನನ್ನು ಕೊಂದಿದ್ದು, ಕುಬ್ಜೆಯೊಡನೆ ಕೂಡಿದುದು, ಅವಳಿಗೆ ಮೋಕ್ಷವಿತ್ತುದು. ನೇಯ್ಗೆಯವನಿಗೆ ಅನುಗ್ರಹಿಸಿದ್ದು, ಹೂವಾಡಿಗನಿಗೆ ಮೋಕ್ಷವಿತ್ತದ್ದು. ಶಿವಧನುಸ್ಸನ್ನು ಮುರಿದುದು, ಕುವಲಯಾಪೀಡ ಆನೆಯನ್ನು ಕೊಂದುದು. ಸಭಾಪ್ರವೇಶ, ನಾನಾರೂಪಪ್ರದರ್ಶನ, ಕಂಸವಧೆ, ಅವನ ಬಂಧುಗಳ ವಿಲಾಪ, ಅವನಿಗೆ ವಿಧ್ಯುಕ್ತ ಸಂಸ್ಕಾರ, ಅವನ ತಂದೆಗೆ ರಾಜ್ಯಾಭಿಷೇಕ. ನಂದನ ವಿಲಾಪ, ಸ್ತೋತ್ರ. ಏಕಾಂತದಲ್ಲಿ ನಂದ ಕೃಷ್ಣರ ಸಂವಾದ, ಕೃಷ್ಣ ನಂದನಿಗೆ ಆಧ್ಯಾತ್ಮವನ್ನು ಉಪದೇಶಿಸಿದುದು. ಮುನಿಗಳು ಹೋದ ಬಳಿಕ ಕುಮಾರ ಧನ್ಯೋಪಾಖ್ಯಾನವನ್ನು ಹೇಳಿದ್ದು, ಉದ್ಧವ ಬಂದುದು. ಏಕಾಂತವಾದ ರಾಧೆಯ ಸ್ಥಾನ, ಉದ್ಧವರಾಧೆಯರ ಸಂವಾದದಲ್ಲಿ ಜ್ಞಾನೋಪದೇಶ, ಕೃಷ್ಣನಿಗೆ ಯಜ್ಞೋಪವೀತ ತೊಡಿಸಿ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡಿಸಿದುದು, ಗುರುವಿಗೆ ಮೃತಪುತ್ರನನ್ನು ತಂದುಕೊಟ್ಟಿದ್ದು, ಜರಾಸಂಧನ ದಮನ, ಕಾಲಯವನ ಸಂಹಾರ.

ದ್ವಾರಕಾನಿರ್ಮಾಣ, ಪ್ರಜೆಗಳನ್ನು ದ್ವಾರಕೆಗೆ ತಂದು ಸೇರಿಸಿದುದು, ರುಕ್ಮಿಣೀ ಹರಣ, ರಾಜರ ದಮನ, ಬೇರೆ ಎಲ್ಲ ಸ್ತ್ರೀಯರ ವಿವಾಹ.

ಮಾಯಾವತಿಯ ಮೋಚನ, ಶಂಬರಾಸುರವಧ, ಧರ್ಮರಾಜನ ರಾಜಸೂಯದಲ್ಲಿ ಶಿಶುಪಾಲನಿಗೆ ಮೋಕ್ಷ, ದಂತವಕ್ತ್ರನಿಗೆ ಮೋಕ್ಷ, ಸಾಲ್ವವಧ, ಸ್ಯಮಂತಮಣಿಯನ್ನು ತಂದುದು, ಸ್ವರ್ಗದಿಂದ ಪಾರಿಜಾತವನ್ನು ತಂದುದು, ಕೌರವ ಪಾಂಡವಯುದ್ಧದಿಂದ ಭೂಭಾರಹರಣ, ಉಷೆಯನ್ನು ತಂದುದು, ಬಾಣನ ಬಾಹುಗಳನ್ನು ಕಡಿದುದು, ಬಲಿ ಸ್ತೋತ್ರಮಾಡುವುದು, ಅನಿರುದ್ಧನ ಪರಾಕ್ರಮ, ರಾಧೆಯಶೋದೆಯರ ಸಂವಾದ, ಸೃಗಾಲ ಮೋಚನ, ತೀರ್ಥಯಾತ್ರಾ ಪ್ರಸಂಗ, ಗಣೇಶಪೂಜೆ, ರಾಧಾ ಸಮೇತನಾದ ಕೃಷ್ಣನ ದರ್ಶನ, ರಾಧೆಯ ದರ್ಶನ, ರಾಧೆಯ ತೇಜಸ್ಸು ಬೆಳಗಿದುದು, ರಾಧೆಯೊಂದಿಗೆ ವಿಹಾರ, ತೀರ್ಥ ಸಂಚಾರ. ಬ್ರಾಹ್ಮಣಶಾಪದಿಂದ ಯದುವಂಶ ನಿಧನ, ಪಾಂಡವರು ಮಹಾಪ್ರಸ್ಥಾನ ಮಾಡಿದುದು, ನಾರದವಿವಾಹ, ವಹ್ನಿಸುವರ್ಣಗಳ ಉತ್ಪತ್ತಿ, ಎಲ್ಲ ನಾಲ್ಕು ಖಂಡಗಳಲ್ಲಿ ಬ್ರಹ್ಮವೈವರ್ತಪುರಾಣದ ಸಾರವನ್ನು ಪುನಃ ಸಂಕ್ಷೇಪವಾಗಿ ಹೇಳಿದುದು ಇವೆಲ್ಲವೂ ವರ್ಣಿತವಾಗಿವೆ. ಮುಂದೆ ಏನನ್ನು ಕೇಳಬಯಸುವೆ?

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದಲ್ಲಿ ಅನುಕ್ರಮಣಿಕಾ ಎಂಬ ನೂರಮೂವತ್ತೆರಡನೆ ಅಧ್ಯಾಯ ಮುಗಿಯಿತು*



## ಪುರಾಣಶ್ರವಣದ ಫಲ — ಅಧ್ಯಾಯ - ೧೩೩

**ಶೌನಕ:-** ಇಂದು ನನ್ನ ಜನ್ಮ ಸಫಲವಾಯಿತು, ಬಾಳು ಸಾರ್ಥಕವಾಯಿತು, ಏಕೆಂದರೆ ಮೋಕ್ಷಕಾರಣವಾದ ಬ್ರಹ್ಮವೈವರ್ತವನ್ನು ನಿರ್ವಿಘ್ನವಾಗಿ ಶ್ರವಣ ಮಾಡಿರುತ್ತೇನೆ. ನೀನು ನನಗೆ ಅಭಯ ನೀಡಬೇಕು. ಆಗ ಇನ್ನೂ ಕೇಳಬೇಕಾದುದನ್ನು ಕೇಳುತ್ತೇನೆ.

**ಸೂತ:-** ಮುನಿಯೆ, ಭಯಪಡಬೇಡ. ನೀನು ಕೇಳಬೇಕಾದುದನ್ನು ಕೇಳು. ಅದು ಎಷ್ಟೇ ರಹಸ್ಯವಾಗಿದ್ದರೂ ಹೇಳುತ್ತೇನೆ.

**ಶೌನಕ:-** ಈಗ ಪುರಾಣಗಳ ಲಕ್ಷಣವನ್ನೂ ಸಂಖ್ಯೆಯನ್ನೂ ಫಲವನ್ನೂ ಕೇಳಲು ಬಯಸುತ್ತೇನೆ

**ಸೂತ:-** ಮುನಿಯೆ, ಪುರಾಣ ಇತಿಹಾಸ ಸಂಹಿತಾ ಪಂಚರಾತ್ರಗಳನ್ನೂ ಅವುಗಳ ವಿಸ್ತಾರವನ್ನೂ ಹೇಳುತ್ತೇನೆ ಕೇಳು. ಸರ್ಗ ಪ್ರತಿಸರ್ಗ ವಂಶ ಮನ್ವಂತರ ವಂಶಾನುಚರಿತ ಈಐದು ಲಕ್ಷಣಗಳಿಂದ ಕೂಡಿದುದು ಪುರಾಣವೆನಿಸುತ್ತದೆ. ಉಪಪುರಾಣಗಳಲ್ಲಿ ಈಲಕ್ಷಣಗಳಿವೆ. ಮಹಾಪುರಾಣಗಳಲ್ಲಿ ಸೃಷ್ಟಿ ವಿಸೃಷ್ಟಿ ಸ್ಥಿತಿ ಪಾಲನೆ ಕರ್ಮವಾಸನೆ, ಮನವಾರ್ತೆ, ಪ್ರಳಯ, ಮೋಕ್ಷ, ಹರಿಕೀರ್ತನ, ವೇದಕೀರ್ತನೆ,

ಈ ಹತ್ತು ಲಕ್ಷಣಗಳು ಅಧಿಕ ಇರುತ್ತವೆ. ಪುರಾಣಗಳ ಗ್ರಂಥಸಂಖ್ಯೆಯನ್ನೂ ಹೇಳುತ್ತೇನೆ, ಕೇಳು.

ಬ್ರಹ್ಮಪುರಾಣದ ಗ್ರಂಥಸಂಖ್ಯೆ ಹತ್ತುಸಾವಿರ. ಪದ್ಮಪುರಾಣ ಐವತ್ತೈದುಸಾವಿರ, ವಿಷ್ಣುಪುರಾಣ ಇಪ್ಪತ್ತಮೂರು ಸಾವಿರ. ಶಿವಪುರಾಣ ಇಪ್ಪತ್ತನಾಲ್ಕು ಸಾವಿರ, ಶ್ರೀಮದ್ಭಾಗವತ ಹದಿನೆಂಟು ಸಾವಿರ, ನಾರದೀಯ ಇಪ್ಪತ್ತೈದು ಸಾವಿರ, ಮಾರ್ಕಂಡೇಯ ಒಂಬತ್ತುಸಾವಿರ, ಅಗ್ನಿಪುರಾಣ ಹದಿನೈದು ಸಾವಿರದ ನಾನೂರು, ಭವಿಷ್ಯಪುರಾಣ ಹದಿನಾಲ್ಕು ಸಾವಿರದ ಐನೂರು, ಬ್ರಹ್ಮವೈವರ್ತ ಹದಿನೆಂಟುಸಾವಿರ. ಎಲ್ಲ ಪುರಾಣಗಳಲ್ಲಿ ಶ್ರೇಷ್ಠವಾದುದು ಈ ಪುರಾಣ. ಲಿಂಗಪುರಾಣ ಹನ್ನೊಂದು ಸಾವಿರ. ವಾರಾಹ ಇಪ್ಪತ್ತನಾಲ್ಕುಸಾವಿರ, ಸ್ಕಾಂದ ಎಂಬತ್ತೊಂದು ಸಾವಿರದ ನೂರು. ವಾಮನ ಹತ್ತು ಸಾವಿರ, ಕೌರ್ಮ ಹದಿನೇಳು ಸಾವಿರ, ಮಾತ್ಸ್ಯ ಹದಿನಾಲ್ಕು ಸಾವಿರ, ಗಾರುಡ ಹತ್ತೊಂಬತ್ತುಸಾವಿರ, ಬ್ರಹ್ಮಾಂಡ ಪುರಾಣ ಹನ್ನೆರಡುಸಾವಿರ. ಒಟ್ಟು ನಾಲ್ಕು ಲಕ್ಷ ಗ್ರಂಥಗಳಷ್ಟು ಪುರಾಣಗಳಿವೆ. ಇವು ಹದಿನೆಂಟು ಮಹಾಪುರಾಣಗಳು. ಹದಿನೆಂಟು ಉಪಪುರಾಣಗಳೂ ಇವೆ. ಮಹಾಭಾರತ ವಾಲ್ಮೀಕಿ ರಾಮಾಯಣಗಳು ಇತಿಹಾಸಗಳು.

ಕೃಷ್ಣ ಮಾಹಾತ್ಮ್ಯದಿಂದ ಕೂಡಿದ ಪಂಚರಾತ್ರಗಳು ಐದು. ವಾಸಿಷ್ಠ, ನಾರದೀಯ, ಕಾಪಿಲ, ಗೌತಮೀಯ, ಸನತ್ಕುಮಾರೀಯ - ಇವೇ ಐದು ಪಂಚರಾತ್ರಗಳು.

ಕೃಷ್ಣಭಕ್ತಿಯನ್ನು ಪ್ರಚೋದಿಸುವ ಸಂಹಿತೆಗಳೂ ಐದು ಬ್ರಹ್ಮ, ಶಿವ, ಪ್ರಹ್ಲಾದ, ಗೌತಮ, ಕುಮಾರ ಸಂಹಿತೆಗಳು ಎಂದು. ಹೀಗೆ ಶಾಸ್ತ್ರ ವಿಪುಲವಾಗಿದೆ.

ಈ ಬ್ರಹ್ಮವೈವರ್ತ ಪುರಾಣವನ್ನು ಗೋಲೋಕದ ರಾಸಮಂಡಲದಲ್ಲಿ ಶ್ರೀವಿಷ್ಣು ಸಾಕ್ಷಾತ್ತಾಗಿ ತನ್ನ ಭಕ್ತನಾದ ಬ್ರಹ್ಮನಿಗೆ ಉಪದೇಶಿಸಿದ. ಬ್ರಹ್ಮ ಧರ್ಮನಿಗೂ ಧರ್ಮ ನಾರಾಯಣಮುನಿಗೂ ನಾರಾಯಣಮುನಿ ನಾರದನಿಗೂ ನಾರದ ನನಗೂ ಉಪದೇಶಿಸಿದರು. ನಾನು ನಿನಗೆ ಉಪದೇಶಿಸಿದ್ದೇನೆ. ಈ ಪುರಾಣ ಬಹಳ ದುರ್ಲಭ.

ಕರ್ಮಿಗಳ ಕರ್ಮಗಳಿಗೆ ಸಾಕ್ಷಿರೂಪನಾದ ಬ್ರಹ್ಮನನ್ನೂ ಅವನ ವಿಭೂತಿಗಳನ್ನೂ ಈಪುರಾಣ ವಿವರಿಸುವುದರಿಂದ ಬ್ರಹ್ಮವೈವರ್ತವೆನ್ನುತ್ತಾರೆ. ಇದು ಪುಣ್ಯಪ್ರದ, ಮಂಗಳ, ಮಂಗಳಪ್ರದ ಅತ್ಯಂತ ರಹಸ್ಯ. ಹರಿಭಕ್ತಿ ಹರಿದಾಸ್ಯಗಳನ್ನು ನೀಡುವುದು. ಶೋಕ ಸಂತಾಪಗಳನ್ನು ಕಳೆವುದು. ನದಿಗಳಲ್ಲಿ ಗಂಗೆ ತಕ್ಷಣವೆ ಮುಕ್ತಿಕೊಡುವುದರಿಂದ ಶ್ರೇಷ್ಠವೆನಿಸುತ್ತದೆ. ತೀರ್ಥಗಳಲ್ಲಿ ಪುಷ್ಕರ, ಪಟ್ಟಣಗಳಲ್ಲಿ ಕಾಶಿ. ಎಲ್ಲ ವರ್ಷಗಳಲ್ಲಿ ಭಾರತವರ್ಷ, ಪರ್ವತಗಳಲ್ಲಿ ಮೇರು, ಪುಷ್ಪಗಳಲ್ಲಿ ಪಾರಿಜಾತ, ಪತ್ರಗಳಲ್ಲಿ ತುಲಸಿಪತ್ರ, ವ್ರತಗಳಲ್ಲಿ ಏಕಾದಶಿ ವ್ರತ, ವೃಕ್ಷಗಳಲ್ಲಿ ಕಲ್ಪವೃಕ್ಷ, ದೇವತೆಗಳಲ್ಲಿ ಶ್ರೀಕೃಷ್ಣ, ಜ್ಞಾನಿಗಳಲ್ಲಿ ಮಹಾದೇವ, ಯೋಗಿಗಳಲ್ಲಿ ಗಣೇಶ, ಸಿದ್ಧರಲ್ಲಿ ಕಪಿಲ, ತೇಜಸ್ವಿಗಳಲ್ಲಿ ಸೂರ್ಯ, ವಿಷ್ಣುಭಕ್ತರಲ್ಲಿ ಸನತ್ಕುಮಾರ, ರಾಜರುಗಳಲ್ಲಿ ರಾಮ, ಬಿಲ್ಲುಗಾರರಲ್ಲಿ ಲಕ್ಷ್ಮಣ, ದೇವಿಯರಲ್ಲಿ ದುರ್ಗೆ, ಕೃಷ್ಣ ಪ್ರೇಯಸಿಯರಲ್ಲಿ ರಾಧೆ, ಈಶ್ವರಿಯರಲ್ಲಿ ಲಕ್ಷ್ಮಿ, ಪಂಡಿತರಲ್ಲಿ ಸರಸ್ವತಿ, ಹೇಗೋ ಹಾಗೆ ಪುರಾಣಗಳಲ್ಲಿ ಬ್ರಹ್ಮವೈವರ್ತ ಶ್ರೇಷ್ಠ. ಇದಕ್ಕಿಂತ ಹೆಚ್ಚಿನ ಸುಖಕರ,

ಮಧುರ, ಪುಣ್ಯಪ್ರದ, ಸಕಲಸಂಶಯ ಪರಿಹಾರಕ ಪುರಾಣ ಇನ್ನೊಂದಿಲ್ಲ. ಇಹದಲ್ಲಿ ಸುಖ ಸಂಪತ್ತನ್ನೂ ಪರದಲ್ಲಿ ಹರಿದಾಸ್ಯವನ್ನೂ ಪರಮ ಹರ್ಷವನ್ನೂ ನೀಡುತ್ತದೆ.

ಯಜ್ಞ ತೀರ್ಥಯಾತ್ರೆ ವ್ರತ ತಪಸ್ಸು ಭೂಪ್ರದಕ್ಷಿಣೆಗಳ ಫಲ ಈ ಪುರಾಣ ಫಲಕ್ಕೆ ಸಮನಾಗಲಾರದು. ನಾಲ್ಕು ವೇದ ಪಾರಾಯಣಕ್ಕಿಂತಲೂ ಹೆಚ್ಚು ಫಲ ಈ ಪುರಾಣದಿಂದ ಲಭಿಸುತ್ತದೆ.

ಈ ಪುರಾಣ ಶ್ರವಣದಿಂದ ಗುಣಶಾಲಿ ಜ್ಞಾನಿ ವಿಷ್ಣುಭಕ್ತನಾದ ಪುತ್ರ ಲಭಿಸುತ್ತಾನೆ. ದೌರ್ಭಾಗ್ಯ ಉಳ್ಳವಳು ಶ್ರವಣ ಮಾಡಿದರೆ ಪತಿ ಸೌಭಾಗ್ಯ ಹೊಂದುವಳು. ಹುಟ್ಟಿದ ಮಕ್ಕಳು ಸಾಯುತ್ತಿದ್ದರೆ, ಮಕ್ಕಳೇ ಹುಟ್ಟದಿದ್ದರೆ ಈ ಪುರಾಣಶ್ರವಣದಿಂದ ದೀರ್ಘಾಯುವಾದ ಪುತ್ರ ಜನಿಸುತ್ತಾನೆ. ಪತ್ನಿ ಇಲ್ಲದವನಿಗೆ ಪತ್ನಿ ಲಭಿಸುತ್ತಾಳೆ. ಕೀರ್ತಿ ಇಲ್ಲದವನಿಗೆ ಕೀರ್ತಿ ಬರುತ್ತದೆ. ಮೂರ್ಖ ಪಂಡಿತನಾಗುತ್ತಾನೆ. ರೋಗಿ ಆರೋಗ್ಯ ಪಡೆಯುತ್ತಾನೆ. ಬದ್ಧನಾಗಿರುವವ ಬಿಡುಗಡೆ ಹೊಂದುತ್ತಾನೆ. ಭೀತನಿಗೆ ಭಯ ಪರಿಹಾರ. ಆಪತ್ತಿನಲ್ಲಿ ಸಿಲುಕಿದವನಿಗೆ ಆಪತ್‌ಪರಿಹಾರ. ಅರಣ್ಯದಲ್ಲಿ ಕಾಳ್ಗಿಚ್ಚಿನಲ್ಲಿ ಸಿಲುಕಿದವನಿಗೆ ಅದರಿಂದಲೂ ಬಿಡುಗಡೆ. ಕುಷ್ಠಾದಿ ರೋಗ, ದಾರಿದ್ರ್ಯ ಶೋಕಗಳು ಎಂದೂ ಬರಲಾರವು. ಒಂದು ಶ್ಲೋಕದ ಅರ್ಥವನ್ನಾಗಲಿ ಪಾದವನ್ನಾಗಲಿ ಕೇಳಿದರೂ ಲಕ್ಷ ಗೋದಾನಗಳ ಪುಣ್ಯಲಭಿಸುವುದು. ನಾಲ್ಕು ಖಂಡಗಳಿಂದ ಕೂಡಿದ ಪುರಾಣವನ್ನು ಪವಿತ್ರಕಾಲದಲ್ಲಿ ಜಿತೇಂದ್ರಿಯನಾಗಿ ಸಂಕಲ್ಪಪೂರ್ವಕ ಭಕ್ತಿಯಿಂದ ಶ್ರವಣಮಾಡಿ ಗುರುದಕ್ಷಿಣೆ ನೀಡಿದರೆ ಬಾಲ್ಯ ಕೌಮಾರ ವಾರ್ಧಕ ಯೌವನಗಳಲ್ಲಿ ಕೋಟಿಜನ್ಮಗಳಲ್ಲಿ ಮಾಡಿದ ಪಾಪಗಳಿಂದಲೂ ಮುಕ್ತಿಸಿಗುತ್ತದೆ, ಸಂಶಯವಿಲ್ಲ. ಶ್ರೀಕೃಷ್ಣನ ರೂಪ ಧರಿಸಿ ರತ್ನವಿಮಾನದಲ್ಲಿ ಕುಳಿತು ಶಾಶ್ವತವಾದ ಗೋಲೋಕವನ್ನು ಸೇರಿ ಕೃಷ್ಣನ ದಾಸನಾಗುತ್ತಾನೆ. ಅಸಂಖ್ಯ ಬ್ರಹ್ಮಕಲ್ಪಗಳು ಕಳೆದರೂ ಅವನಿಗೆ ಅಲ್ಲಿಂದ ಪತನವಿಲ್ಲ. ಕೃಷ್ಣನ ಸಮೀಪದಲ್ಲಿಯೇ ಇದ್ದು ಪಾರ್ಷದನಾಗಿ ಚಿರಕಾಲ ಸೇವೆ ಮಾಡುತ್ತಾನೆ.

ಬ್ರಹ್ಮಖಂಡ ಶ್ರವಣಮಾಡಿದ ಬಳಿಕ ಪಾಯಸ ಎರಿಯಪ್ಪ ಮುಂತಾದುವನ್ನು ವಾಚಕನಿಗೆ ಉಣಿಸಿ, ಫಲ ತಾಂಬೂಲ ನೀಡಿ, ಸುವರ್ಣ ಗಂಧ ಬಿಳಿ ಹೂಮಾಲೆ ತೆಳುವಾದ ಬಟ್ಟೆ ಇವುಗಳನ್ನು ವಾಸುದೇವನಿಗೆ ಅರ್ಪಿಸಿ ವಾಚಕನಿಗೆ ನೀಡಬೇಕು.

ಪ್ರಕೃತಿಖಂಡ ಶ್ರವಣ ಮಾಡಿದ ಬಳಿಕ ವಾಚಕನಿಗೆ ಮೊಸರನ್ನ ಉಣಿಸಿ ಸುವರ್ಣ ಗೋದಾನ ಮಾಡಬೇಕು.

ಗಣಪತಿ ಖಂಡ ಶ್ರವಣದ ಬಳಿಕ ಸ್ವರ್ಣಯಜ್ಞೋಪವೀತ ಬಿಳಿ ಕುದುರೆ ಬಿಳಿಕೊಡೆ ಬಿಳಿ ಹೂಮಾಲೆ ಹೋಳಿಗೆ ಎಳ್ಳುಂಡೆಗಳನ್ನು ಪಕ್ವಫಲಗಳನ್ನು ವಾಚಕನಿಗೆ ನೀಡಬೇಕು.

ಶ್ರೀಕೃಷ್ಣಜನ್ಮಖಂಡಶ್ರವಣವಾದ ಬಳಿಕ ವಾಚಕನಿಗೆ ರತ್ನದುಂಗುರ, ತೆಳುವಾದ ಬಟ್ಟೆ, ಸುವರ್ಣಕುಂಡಲ, ಹೂಮಾಲೆ, ಉಯ್ಯಾಲೆಗಳನ್ನೂ ಕಾಯಿಸಿದ ಹಾಲನ್ನೂ ಕೊಡಬೇಕು. ಸರ್ವಸ್ವದಕ್ಷಿಣೆ ನೀಡಿ ಸ್ತೋತ್ರ ಮಾಡಬೇಕು. ನೂರು ಬ್ರಾಹ್ಮಣರಿಗೆ ಅನ್ನದಾನ ಮಾಡಬೇಕು.

ವಿಷ್ಣುಭಕ್ತನಾದ ಶಾಸ್ತ್ರನಿಷ್ಣಾತನಾದ ಶುಚಿಯಾದ ಬ್ರಾಹ್ಮಣನನ್ನೆ ವಾಚಕನನ್ನಾಗಿ ಮಾಡಬೇಕು. ಇಲ್ಲದಿದ್ದರೆ ಫಲವಿಲ್ಲ.

ಶ್ರೀಕೃಷ್ಣಭಕ್ತಿಯುಕ್ತನಾಗಿ ವಾಚಕನಿಂದ ಪುರಾಣ ಕೇಳದಿದ್ದರೆ ಭಕ್ತಿ ಸಿಗಲಾರದು. ಪುಣ್ಯವೂ ಲಭಿಸದು. ಪೂರ್ವಪುಣ್ಯವನ್ನೆ ಕಳೆಯುತ್ತದೆ.

ಶ್ರೀಕೃಷ್ಣಭಕ್ತಿಯುಕ್ತನಾದ ವಾಚಕನಿಂದ ಪುರಾಣ ಕೇಳಿದರೆ ಭಕ್ತಿ ಪುಣ್ಯಗಳು ಲಭಿಸುತ್ತವೆ. ಕೊನೆಯಲ್ಲಿ ವಿಷ್ಣುಲೋಕ ದೊರಕುತ್ತದೆ.

ಶೌನಕಮುನಿಯೆ, ಗುರುಮುಖದಿಂದ ನಾನು ಕೇಳಿದುದನ್ನೆಲ್ಲ ನಾನು ನಿನಗೆ ಹೇಳಿದ್ದೇನೆ. ನನಗೆ ಈಗ ಅನುಜ್ಞೆಕೊಡು. ನಾರಾಯಣಾಶ್ರಮಕ್ಕೆ ಹೋಗುತ್ತೇನೆ. ನೀವೆಲ್ಲರೂ ಬ್ರಾಹ್ಮಣರು ಇಲ್ಲಿ ಇದ್ದುದನ್ನು ಕಂಡು ನಮಸ್ಕರಿಸಲೆಂದು ಬಂದೆ. ನಿಮ್ಮ ಆಜ್ಞೆಯಂತೆ ಬ್ರಹ್ಮವೈವರ್ತವನ್ನು ಹೇಳಿದೆ. ಬ್ರಾಹ್ಮಣರಿಗೆ, ಕೃಷ್ಣಪರಮಾತ್ಮನಿಗೆ, ಶಿವ ಬ್ರಹ್ಮ ಗಣೇಶರಿಗೆ ನಮೋ ನಮಃ ಕಾಯ ವಾಕ್ ಮನಸ್ಸುಗಳಿಂದ ಹಗಲು ರಾತ್ರಿ ಭಕ್ತಿಯಿಂದ ಸತ್ಯ ಪರಬ್ರಹ್ಮಸ್ವರೂಪನಾದ ತ್ರಿಗುಣರಹಿತನಾದ ರಾಧಾರಮಣನನ್ನು ಭಜಿಸು.

ದೇವಿ ಸರಸ್ವತಿಗೂ ಪುರಾಣ ಗುರು ವ್ಯಾಸನಿಗೂ ಸರ್ವವಿಘ್ನನಾಶಿನಿಯಾದ ದುರ್ಗೆಗೂ ನಮೋ ನಮಃ

ಶೌನಕ, ನಿಮ್ಮ ಪವಿತ್ರ ಪಾದಕಮಲಗಳನ್ನು ನೋಡಿ ಇಂದೇ ದೇವ ಗಣೇಶನಿರುವ ಸಿದ್ಧಾಶ್ರಮಕ್ಕೆ ಹೋಗುತ್ತೇನೆ.

*ಇಲ್ಲಿಗೆ ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗವಾದ ಶ್ರೀಕೃಷ್ಣಜನ್ಮಖಂಡದಲ್ಲಿನ ಉತ್ತರಾರ್ಧದ ನಾರಾಯಣನಾರದಸಂವಾದದಲ್ಲಿ ಸೂತಶೌನಕ ಸಂವಾದದಲ್ಲಿನ ನೂರಮುವತ್ತಮೂರನೆ ಅಧ್ಯಾಯ ಮುಗಿಯಿತು*

*ಬ್ರಹ್ಮವೈವರ್ತಮಹಾಪುರಾಣ ದ್ವಿತೀಯ ಭಾಗವಾದ ಶ್ರೀಕೃಷ್ಣಜನ್ಮಖಂಡ ಸಂಪೂರ್ಣಂ*

*ಸರ್ವೇಜನಾಃ ಸುಖಿನೋ ಭವಂತು*

*ಓಂ ಶಾಂತಿಃ ಶಾಂತಿಃ ಶಾಂತಿಃ*



